# ಶ್ರೀವಿಷ್ಣುಪುರಾಣಮ್

(ಚತುರ್ಥ, ಪಂಚಮ, ಷಷ್ಠಾಂಶಗಳು)

**ಸಂಪುಟ – 2**

ಅನುವಾದಕರು

**ವಿದ್ವಾನ್ ಎನ್. ರಂಗನಾಥಶರ್ಮಾ**




**ರಾಮಕೃಷ್ಣ ಮಠ**

ಬೆಂಗಳೂರು

# ಪ್ರಕಾಶಕರ ನುಡಿ

## ಶ್ರೀಮದ್ವಿಷ್ಣುಪುರಾಣದ ರನ್ನಗನ್ನಡಿ

ಪುರಾಣರತ್ನವೆನಿಸಿದ ಶ್ರೀಮದ್ವಿಷ್ಣುಪುರಾಣದ ದ್ವಿತೀಯ ಸಂಪುಟವನ್ನು ಕನ್ನಡ ಜನತೆಯ ಮುಂದಿಡಲು ಹರ್ಷಿಸುತ್ತೇವೆ. ವಿದ್ವಾನ್ ಶ್ರೀ ರಂಗನಾಥ ಶರ್ಮಾ ಅವರು ಸಹಜ ಸುಂದರ ಶೈಲಿಯಲ್ಲಿ ಈ ಗ್ರಂಥವನ್ನು ಮೂಲ ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಿಸಿ ಅದ್ಭುತ ಸೇವೆ ಮಾಡಿದ್ದಾರೆ. ಅವರಿಗೆ ನಮ್ಮ ಹೃತ್ಪೂರ್ವಕ ಅಭಿನಂದನೆಗಳು. ಇಲ್ಲಿಗೆ ಸಂಪೂರ್ಣ ವಿಷ್ಣುಪುರಾಣವು ಸಮಾಪ್ತವಾಗುತ್ತದೆ.

ಜೀವನವೆಂಬುದು ಒಂದು ದೊಡ್ಡ ಸಂಗ್ರಾಮ. ಇದರಲ್ಲಿ ಎಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಹೋರಾಡುತ್ತಿದ್ದಾರೆ. ಬಹಳ ಮಂದಿಗೆ ಹೋರಾಟ ಮಾಡಲು ಬರದು. ಧರ್ಮದ ಹಳಿ ತಪ್ಪಿ ಬಗೆಬಗೆಯ ಪಾಪಾಚರಣೆಗಳಲ್ಲಿ ತೊಡಗಿ ಭಯಂಕರ ಕಷ್ಟನಷ್ಟಗಳಿಗೆ ಗುರಿಯಾಗುತ್ತಾರೆ. ಕೊನೆಗೆ ದುರ್ಬಲರಾಗಿ ದುಃಖದ ಕಡಲಿನಲ್ಲಿ ಮುಳುಗಿಹೋಗುತ್ತಾರೆ. ದುಃಖ, ನಿರಾಶೆ, ಸಂಶಯ ಮತ್ತು ಪ್ರಲೋಭನೆಗಳೆಂಬ ಸುಳಿಗಳಿಂದ ಬಿಗಿಯಲ್ಪಟ್ಟು ಏಳಲಾರದ ಸ್ಥಿತಿಗೆ ಹೋಗುತ್ತಾರೆ. ಇವರು ಉದ್ಧಾರವಾಗುವುದು ಹೇಗೆ? ಇದಕ್ಕೆ ಮಾರ್ಗವೇನು?

## ಸಂಕೀರ್ತನ ಸಾಮರ್ಥ್ಯ

ಮಹಾತ್ಮರು, ಋಷಿ ಮುನಿಗಳು ಅನುಕಂಪೆಯಿಂದ ಉದ್ಧಾರದ ಮಾರ್ಗವನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. ಶ್ರೀಮದ್ವಿಷ್ಣುಪುರಾಣದಲ್ಲಿ ವ್ಯಾಸ ಮಹರ್ಷಿಗಳು ಹೀಗೆ ಹೇಳಿದ್ದಾರೆ:

**ಧ್ಯಾಯನ್ಕೃತೇ ಯಜನ್ಯಜ್ಞೈ ಸ್ತ್ರೇತಾಯಾಂ ದ್ವಾಪರೇಽರ್ಚಯನ್ ।**
**ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್ ॥**

ಅಧರ್ಮಭೂಯಿಷ್ಠವಾದ ಈ ಕಲಿಯುಗದಲ್ಲಿ ಭಗವನ್ನಾಮಸಂಕೀರ್ತನೆ

ಮಾಡುವುದರಿಂದಲೇ ಮನುಷ್ಯನು ಉದ್ಧಾರವಾಗುತ್ತಾನೆಂದು ಸೂಚಿಸಿದ್ದಾರೆ. ಕೃತಯುಗದಲ್ಲಿ ಧ್ಯಾನಕ್ಕೆ ವಿಶೇಷ ಪ್ರಾಧಾನ್ಯವಿರುತ್ತದೆ. ಜನರು ಸ್ವಾಭಾವಿಕವಾಗಿ ಚಿತ್ತಶುದ್ಧಿಯುಳ್ಳವರಾದ ಕಾರಣ ಭಗವದ್ಧ್ಯಾನದಲ್ಲಿ ನಿರತರಾಗಿ ಉದ್ಧಾರ ವಾಗುತ್ತಿದ್ದರು. ತ್ರೇತಾಯುಗದಲ್ಲಿ ಧ್ಯಾನದ ಬಲ ಕಡಿಮೆಯಾಗಿರುತ್ತದೆ. ಇಲ್ಲಿ ಯಜ್ಞಯಾಗಾದಿಗಳಿಗೆ ವಿಶೇಷ ಸ್ಥಾನವಿರುತ್ತದೆ. ಯಾರು ಯಜ್ಞಯಾಗಾದಿ ಗಳನ್ನು ಶ್ರದ್ಧೆಯಿಂದ ಮಾಡುತ್ತಿದ್ದರೋ ಅವರು ಉತ್ತಮ ಫಲವನ್ನು ಅನುಭವಿಸುತ್ತಿದ್ದರು. ದ್ವಾಪರದಲ್ಲಿ ಧ್ಯಾನಬಲವೂ ಯಜ್ಞದ ಬಲವೂ ಕುಂಠಿತವಾಗಿ ಅರ್ಚನೆಗೆ ವಿಶೇಷ ಪ್ರಾಮುಖ್ಯ ಬಂದಿತು. ಆಚಾರಶುದ್ಧಿಯಿಂದ ಯಾವನು ಭಗವದರ್ಚನೆ ಮಾಡುತ್ತಿದ್ದನೋ ಅವನು ಉದ್ಧಾರವಾಗುತ್ತಿದ್ದ. ಕಲಿಯುಗದಲ್ಲಿ ಕಾಲಮಹಿಮೆ ಇನ್ನೂ ವಿಚಿತ್ರ. ಇಲ್ಲಿ ಧ್ಯಾನಬಲವೂ ಇಲ್ಲ. ಯಜ್ಞಬಲವೂ ಇಲ್ಲ. ಅರ್ಚನಾಬಲವೂ ಇಲ್ಲ. ಆದರೆ ಈ ಯುಗದಲ್ಲಿ ಭಗವನ್ನಾಮಸಂಕೀರ್ತನೆ ವಿಶೇಷ ಮಹಿಮೆಯನ್ನುಂಟುಮಾಡುತ್ತದೆ. ಕೇಶವನ ಸಂಕೀರ್ತನೆಯಿಂದ ಮನುಷ್ಯ ಉದ್ಧಾರವಾಗುವುದು ಕಲಿಯುಗದ ವೈಶಿಷ್ಟ್ಯ. ಆದ್ದರಿಂದ ಯಾರೂ ನಿರಾಶರಾಗಬೇಕಾಗಿಲ್ಲ. ಈ ಯುಗದಲ್ಲಿ ಜನ್ಮ ಹೊಂದಿ ದವರು ನಿಜಕ್ಕೂ ಧನ್ಯರೇ. "ಅಲ್ಪಕೋ ಧರ್ಮೋ ದದಾತಿ ಸುಮಹತ್ಫಲಮ್" ಕೀರ್ತನವೆಂಬ ಅಲ್ಪಧರ್ಮಾನುಷ್ಠಾನದಿಂದ ಕಲಿಯು ಮಹತ್ಫಲವನ್ನು ಕೊಡುತ್ತದೆ. "ಭರ್ತೃ ಶುಶ್ರೂಷಯಾ ನಾರೀ ಲಭತೇ ಸ್ವರ್ಗಮುತ್ತಮಮ್" ಸ್ತ್ರೀಯು ಕೈ ಹಿಡಿದ ಪತಿಯನ್ನು ಸೇವಿಸುವುದರಿಂದ ಶುಭವನ್ನು ಪಡೆಯುತ್ತಾಳೆ —ಎಂದು ವಾಲ್ಮೀಕಿ ಮಹರ್ಷಿಗಳೂ ಹೇಳಿರುತ್ತಾರೆ. ಕಲಿಯುಗದಲ್ಲಿ ಅಧರ್ಮದ ಪ್ರಾಬಲ್ಯದಿಂದ ಅನೇಕ ದೋಷಗಳುಂಟಾಗುತ್ತವೆಯಾದರೂ ಭಗವನ್ನಾಮಸಂಕೀರ್ತನೆ ಮಾಡುವುದರಿಂದ ಅವುಗಳೆಲ್ಲವನ್ನೂ ಪರಿಹರಿಸಿ ಕೊಂಡು ಪರಮಪದವನ್ನು ಪಡೆಯಬಹುದೆಂದು ಮಹರ್ಷಿಗಳು ತಿಳಿಸುತ್ತಾರೆ. ಇದೇ ಕಲಿಯಲ್ಲಿರುವ ದೊಡ್ಡಗುಣ.

**ಅತ್ಯಂತ ದುಷ್ಟಸ್ಯ ಕಲೇಃ ಅಯಮೇಕೋ ಮಹಾನ್‌ಗುಣಃ।**
**ಸ್ವಲ್ಪೇನ ಹಿ ಪ್ರಯತ್ನೇನ ಧರ್ಮಸ್ಸಿಧ್ಯತಿ ವೈ ಕಲೌ॥**

ಈ ರೀತಿ ಕಲಿಯ ಮಹಿಮೆಯನ್ನು ಕೊಂಡಾಡಿದ್ದಾರೆ.

## ಪಾಪವಿಷಾಪಹರಣ

ಮಹಾಭಾರತದಲ್ಲಿ ಭೀಷ್ಮಾಚಾರ್ಯರು ಸಂಕೀರ್ತನೆಯ ಮಹಿಮೆಯನ್ನು ಪುಷ್ಟೀಕರಿಸಿದ್ದಾರೆ:

**ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ।**
**ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈರರ್ಚೇನ್ನರಸ್ಸದಾ॥**

ಭಕ್ತಿಯಿಂದ ಪುಂಡರೀಕಾಕ್ಷನನ್ನು ಸದಾಸ್ತೋತ್ರಗಳಿಂದ ಅರ್ಚಿಸುವುದೇ ಎಲ್ಲ ಧರ್ಮಗಳಿಗಿಂತ ಹೆಚ್ಚಿನ ಧರ್ಮವೆಂದು ಭೀಷ್ಮಾಚಾರ್ಯರು ಸ್ಪಷ್ಟಪಡಿಸಿದ್ದಾರೆ.

ಸಂಕೀರ್ತನೆಯ ಮೂಲಕ ಭಗವಂತನನ್ನು ಒಲಿಸಿಕೊಳ್ಳಬೇಕು. ದೃಢ ಸಂಕಲ್ಪದಿಂದ ನಮ್ಮ ಮನಸ್ಸನ್ನು ಸಾಧನೆಯಲ್ಲಿ ತೊಡಗಿಸಬೇಕು. ಭಗವಂತನ ಚಿಂತನೆ ಮಾಡಿದರೆ ಅವನು ನಮ್ಮ ಕ್ಲೇಶಗಳನ್ನೆಲ್ಲಾ ನಾಶಮಾಡುತ್ತಾನೆ. ಮಿಕ್ಕದ್ದೆಲ್ಲವನ್ನೂ ಚಿಂತಿಸುವುದನ್ನು ಬಿಟ್ಟು ಆ ಭಗವಂತನನ್ನೇ ಏಕೆ ಚಿಂತಿಸ ಬಾರದು? ಸಂಸಾರವೆಂಬ ಸರ್ಪದಿಂದ ಕಚ್ಚಲ್ಪಟ್ಟು 'ಪ್ರಾಪಂಚಿಕತೆ'ಯ ವಿಷ ನಮ್ಮನ್ನು ಸುಡುತ್ತಿದೆ. 'ಕೃಷ್ಣ' ಎಂಬ ವೈಷ್ಣವಮಂತ್ರವನ್ನು ಜಪಿಸುವುದರಿಂದ ಈ ವಿಷವನ್ನು ತಡೆಗಟ್ಟಬಹುದು. ಬೆಂಕಿಯು ಹೇಗೆ ಧಾತುಗಳನ್ನು ಕರಗಿಸು ತ್ತದೆಯೋ ಅಂತೆಯೇ ಭಗವಂತನ ನಾಮಸಂಕೀರ್ತನೆ ನಮ್ಮ ಎಲ್ಲಾ ಪಾಪಗಳನ್ನೂ ಪೂರ್ಣವಾಗಿ ಕರಗಿಸುವ ಸಾಧನವಾಗಿರುತ್ತದೆ. ಇಚ್ಛೆಯಿಲ್ಲದೆ ಅಗ್ನಿಯನ್ನು ಸ್ಪರ್ಶಿಸಿದರೂ ಅದು ಸುಟ್ಟೇ ಸುಡುತ್ತದೆ. ಅಂತೆಯೇ ಮನಸ್ಸು ದೋಷದಿಂದ ಮಲಿನವಾಗಿದ್ದರೂ ಒಮ್ಮೆ ಕೇಶವನನ್ನು ಸ್ಮರಿಸಿದರೆ ಮಲಿನತೆ ಕಳೆದು ಹೋಗುತ್ತದೆ.

**ಜ್ಞಾನತೋಽಜ್ಞಾನತೋ ವಾಪಿ ವಾಸುದೇವಸ್ಯ ಕೀರ್ತನಾತ್।**
**ತತ್ಸರ್ವಂ ವಿಲಯಂ ಯಾತಿ ತೋಯಸ್ಥಂ ಲವಣಂ ಯಥಾ॥**

ತಿಳಿದೋ ತಿಳಿಯದೆಯೋ ಶ್ರೀಹರಿಯನ್ನು ಕೀರ್ತನೆ ಮಾಡಿದರೆ ಪಾಪವೆಲ್ಲವೂ ನೀರಿನಲ್ಲಿ ಉಪ್ಪು ಕರಗುವಂತೆ ಕರಗಿಹೋಗುವುದು.

**ಶಮಾಯಾಲಂ ಜಲಂ ವಹ್ನೇಸ್ತಮಸೋ ಭಾಸ್ಕರೋದಯಃ।**
**ಶಾಂತಿಃ ಕಲೌ ಹ್ಯಘೌಘಸ್ಯ ನಾಮ ಸಂಕೀರ್ತನಂ ಹರೇಃ॥**

ಬೆಂಕಿಯನ್ನು ಆರಿಸುವುದಕ್ಕೆ ನೀರು ಸಾಕು. ಕತ್ತಲೆಯನ್ನು ಹೋಗಲಾಡಿಸುವುದಕ್ಕೆ ಸೂರ್ಯೋದಯ ಸಾಕು. ಅದರಂತೆ ಈ ಕಲಿಯುಗದಲ್ಲಿ ಪಾಪ ಸಮೂಹವನ್ನು ನಾಶಗೊಳಿಸಲು ಶ್ರೀಹರಿನಾಮಸಂಕೀರ್ತನೆಯೊಂದೇ ಸಾಕು.

**ಹರೇರ್ನಾಮೈವ ನಾಮೈವ ನಾಮೈವ ಮಮ ಜೀವನಮ್।**
**ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ॥**

ಶ್ರೀಹರಿಯ ನಾಮವೇ, ನಾಮವೇ, ನಾಮವೇ ನನ್ನ ಜೀವನಸಾಧನ. ಕಲಿಯುಗದಲ್ಲಿ ಬೇರೊಂದು ಗತಿಯು ಇಲ್ಲವೇಯಿಲ್ಲ, ಇಲ್ಲವೇಯಿಲ್ಲ, ಇಲ್ಲವೇಯಿಲ್ಲ—ಎಂದು ಬೃಹನ್ನಾರದೀಯ ಪುರಾಣ ಹೇಳುತ್ತದೆ.

**ಗಂಗಾಸ್ನಾನ ಸಹಸ್ರೇಷು ಪುಷ್ಕರಸ್ನಾನ ಕೋಟಿಷು।**
**ಯತ್ಪಾಪಂ ವಿಲಯಂ ಯಾತಿ ಸ್ಮೃತೇ ನಶ್ಯತಿ ತದ್ಧರೌ॥**

ಸಾವಿರಾರು ಗಂಗಾಸ್ನಾನಗಳಿಂದಲೂ, ಕೋಟಿಗಟ್ಟಲೆ ಮಾಡಿದ ಪುಷ್ಕರ ತೀರ್ಥಸ್ನಾನಗಳಿಂದಲೂ ಎಷ್ಟು ಪಾಪವು ನಾಶವಾಗುತ್ತದೆಯೋ ಅಷ್ಟೂ ಶ್ರೀಹರಿಯನ್ನು ಸ್ಮರಿಸುವುದರಿಂದ ಹೊರಟುಹೋಗುವುದು ಎಂಬುದಾಗಿ ಶ್ರೀಗರುಡಪುರಾಣ ಹೇಳುತ್ತದೆ.

## ಮಂಗಳನಾಮ-ಅಖಂಡ ಪ್ರೇಮ

**ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ**
**ನಾಮದ ಬಲವೊಂದಿದ್ದರೆ ಸಾಕೋ॥**

ಎಂದು ಪುರಂದರದಾಸರು ನಾಮದ ಬಲವನ್ನು ಕೊಂಡಾಡಿದ್ದಾರೆ.

**ಕಲಿಯುಗದಲಿ ಹರಿನಾಮವ ನೆನೆದರೆ**
**ಕುಲಕೋಟಿಗಳುದ್ಧರಿಸುವವೋ ರಂಗಾ॥**

ಎಂದು ದಾಸರು ಹಾಡಿ ನಾಮಸಂಕೀರ್ತನೆಯ ಮಹಿಮೆಯನ್ನು ತಿಳಿಸುತ್ತಾರೆ.

ನಾಮಸಂಕೀರ್ತನೆ ಈ ಕಲಿಯುಗಕ್ಕೆ ತೆರೆದಿಟ್ಟ ತಪಸ್ಸು. ವ್ಯಾಕುಲತೆಯಿಂದ ಕರೆಯಬೇಕು. ಪ್ರೇಮದಿಂದ ಕರೆಯಬೇಕು. ಆಗ ನಾಮಸ್ಮರಣೆ ಹೆಚ್ಚು ಪರಿಣಾಮಕಾರಿಯಾಗುತ್ತದೆ.

**ಹರಿ ಉಚ್ಚಾರಣೀ ಅನಂತ ಪಾಪರಾಶೀ**
**ಜಾತೀಲ ಲಯಾಸೀ ಕ್ಷಣಮಾತ್ರೇ।**
**ತೃಣ ಅಗ್ನಿಮೇಳೀ ಸಮರಸ ಝಾಲೀ**
**ತೈಸೇ ನಾಮೇ ಕೇಲೀ ಜಪತಾ ಹರೀ॥**

ಎಂದು ಜ್ಞಾನೇಶ್ವರ ಮಹಾರಾಜರು ಹಾಡಿದ್ದಾರೆ.

ಕೆಲಸಕಾರ್ಯಗಳನ್ನು ನಿರ್ವಹಿಸುವಾಗ ಅನೇಕ ತಪ್ಪುಗಳನ್ನು ಮಾಡಿರಬಹುದು. ಪಾಪರಾಶಿ ಅಪಾರವಾಗಿದ್ದರೂ ಹರಿನಾಮಸಂಕೀರ್ತನೆಯಿಂದ ಕ್ಷಣಮಾತ್ರದಲ್ಲಿ ನಾಶವಾಗುತ್ತದೆ. ಹುಲ್ಲಿನ ರಾಶಿಗೆ ಬೆಂಕಿ ಸ್ಪರ್ಶವಾದ ಕೂಡಲೇ ಅದೂ ಬೆಂಕಿಯೇ ಆಗಿ ಅದರಲ್ಲಿ ಬೆರೆತುಹೋಗುವಂತೆ ಹರಿನಾಮ ಸಂಕೀರ್ತನೆಯಿಂದ ನಮ್ಮ ಪಾಪವು ಲಯವಾಗಿ ನಾವು ಶ್ರೀಹರಿಯಲ್ಲಿ ಬೆರೆತು ಶ್ರೀಹರಿರೂಪವನ್ನೇ ಪಡೆಯುವೆವು.

**ವದನೀ ತುಜಮಂಗಳ ನಾಮ**
**ಹೃದಯೀ ಅಖಂಡಿತ ಪ್ರೇಮ॥**

"ನಾಲಗೆಯಲ್ಲಿ ನಿನ್ನ ನಾಮ ಉಚ್ಚರಿಸುವೆ. ಹೃದಯದಲ್ಲಿ ನಿನ್ನ ಪ್ರೇಮರೂಪವ ಚಿಂತಿಸುವೆ" ಎಂಬುದಾಗಿ ಸಂತ ನಾಮದೇವ ಹಾಡಿದ್ದಾರೆ.

ಕಲಿಯುಗದಲ್ಲಿ ಮನಸ್ಸು ಬಹುಚಂಚಲ. ಅಖಂಡ ನಾಮಕೀರ್ತನೆಯಿಂದ ಅದನ್ನು ನಿಗ್ರಹಿಸಬಹುದಾಗಿದೆ. ನಾಮಕೀರ್ತನೆಯಿಂದ ಮನಸ್ಸಿನ ಪರದಾಟ ನಿಂತು, ದೈವೋನ್ಮಾದದಲ್ಲಿ ನೆಲೆನಿಲ್ಲುತ್ತದೆ. ನಾಮಕೀರ್ತನೆಯಿಂದ ಅಶಾಂತ ಮನಸ್ಸು ಶಾಂತವಾಗುತ್ತದೆ. ದೇಹಭಾವದಿಂದ ಬಿಡಿಸಲ್ಪಟ್ಟು ಸಮಾಧಿಯುಂಟಾಗುತ್ತದೆ. ಇದೇ ನಾಮದ ಆನಂದಸ್ಥಿತಿ. ಪ್ರಾಪಂಚಿಕ ವೃತ್ತಿಗಳೆಂಬ ರಾಕ್ಷಸರನ್ನು ಧ್ವಂಸ ಮಾಡಬೇಕಾದರೆ "ನಾಮಸಂಕೀರ್ತನೆ" ಎಂಬ ರಾಮಬಾಣವನ್ನು ಪ್ರಯೋಗಿಸಬೇಕು. ಮನೋವಿಕಾರಗಳೆಲ್ಲ

ಹೇಳಹೆಸರಿಲ್ಲದಂತೆ ಮಾಯವಾಗಿ ವೈರಾಗ್ಯ ಮತ್ತು ಜ್ಞಾನ ಉದಯಿಸುತ್ತದೆ. ಭಗವನ್ನಾಮ ಸಂಕೀರ್ತನೆಯಿಂದ ಮಾನವನು ಮಾಧವನಾಗಬಲ್ಲ. ಆದುದರಿಂದ ನಮ್ಮ ಹೃದಯದಲ್ಲಿ ಅಖಂಡ ಭಗವನ್ನಾಮದ ಜ್ಯೋತಿಯನ್ನು ಬೆಳಗಬೇಕು. ಆಗ ನಮ್ಮ ಮೇಲೆ ಭಗವತ್‌ಕೃಪೆಯ ಮಳೆಯೇ ಸುರಿಯುತ್ತದೆ. ಪರಮಾತ್ಮನ ದರ್ಶನ ಪಡೆದು ಮೋಕ್ಷಾನಂದವನ್ನು ಅನುಭವಿಸುತ್ತೇವೆ.

## ಪಾವನ ಅಧ್ಯಯನ

ವಿದ್ವಾನ್ ಶ್ರೀರಂಗನಾಥಶರ್ಮಾ ಅವರು ಉತ್ತಮವಾದ ಉಪೋದ್ಘಾತವನ್ನು ಬರೆದು ಗ್ರಂಥದ ಹಿರಿಮೆ ಮಹಿಮೆಯನ್ನು ಸುಂದರವಾಗಿ ವರ್ಣಿಸಿದ್ದಾರೆ. ಅವರ ತಿಳಿಯಾದ ಕನ್ನಡಭಾಷೆ ಎಲ್ಲರ ಮನವನ್ನೂ ಮೆಚ್ಚಿಸುವಂಥದು. ಇಂತಹ ಉತ್ತಮ ಸಾಹಿತಿ ಮತ್ತು ವಿದ್ವಾಂಸರಿರುವುದು ಕರ್ಣಾಟಕದ ಹೆಮ್ಮೆ. ಅವರಿಗೆ ಶ್ರೀರಾಮಕೃಷ್ಣರು ಆಯುರಾರೋಗ್ಯವನ್ನು ಕರುಣಿಸಿ ಅವರ ಮೂಲಕ ಇನ್ನೂ ಹೆಚ್ಚು ಗ್ರಂಥಗಳು ಹೊರಬರುವಂತೆ ಪ್ರಾರ್ಥಿಸುತ್ತೇವೆ.

ಶ್ರೀಮದ್ವಿಷ್ಣುಪುರಾಣವನ್ನು ನಿತ್ಯವೂ ಅರ್ಥಸಹಿತ ಪಠಿಸುವುದರಿಂದ ನಮ್ಮ ಹೃದಯಲ್ಲಿರುವ ಸಕಲ ದೋಷಗಳೂ ದಗ್ಧವಾಗಿ ಭಗವದ್ಭಕ್ತಿ ಪ್ರಚೋದನೆಯಾಗುತ್ತದೆ. ಅಜ್ಞಾನವೆಂಬ ಅಂಧಕಾರವು ತೊಲಗಿ ಪರಂಜ್ಯೋತಿಯ ಬೆಳಕು ರಾರಾಜಿಸುತ್ತದೆ. ಶ್ರೀಮನ್ನಾರಾಯಣನ ಕೃಪೆಗೆ ಪಾತ್ರರಾಗಿ ಜೀವನ ಕೃತಾರ್ಥವಾಗುತ್ತದೆ.

ಭದ್ರಂ ಶುಭಂ ಮಂಗಳಮ್ ॥

ವಿಭವಸಂವತ್ಸರ
ಶ್ರಾವಣ ಶುಕ್ಲ ತೃತೀಯಾ
ಆಗಸ್ಟ್ 15, 1988

**ಸ್ವಾಮಿ ಚಿದಾನಂದ**
ಅಧ್ಯಕ್ಷರು
ಶ್ರೀರಾಮಕೃಷ್ಣಾಶ್ರಮ
ಬೆಂಗಳೂರು

# ಉಪೋದ್ಘಾತ

ಶ್ರೀವಿಷ್ಣುಪುರಾಣದ ಪ್ರಥಮ ಸಂಪುಟದಲ್ಲಿ ಮೂರು ಅಂಶಗಳೂ ಈ ದ್ವಿತೀಯ ಸಂಪುಟದಲ್ಲಿ ಮುಂದಿನ ಮೂರು ಅಂಶಗಳೂ ಇದ್ದು, ಇಲ್ಲಿಗೆ ಗ್ರಂಥವು ಸಮಾಪ್ತವಾಗುತ್ತದೆ. ಪ್ರಥಮ ಸಂಪುಟದ ಉಪೋದ್ಘಾತದಲ್ಲಿ ಈ ಗ್ರಂಥಕ್ಕೆ ಸಂಬಂಧಿಸಿದಂತೆ ಕೆಲವು ವಿಚಾರಗಳನ್ನು ಸಂಕ್ಷೇಪವಾಗಿ ಪ್ರಸ್ತಾಪಿಸ ಲಾಗಿದೆ. ಆ ಪ್ರಸ್ತಾವನೆಗೆ ಪೂರಕವಾಗಿ ಇನ್ನೂ ಕೆಲವು ಅಂಶಗಳನ್ನು ಇಲ್ಲಿ ಪರಿಶೀಲಿಸುವುದು ವಾಚಕರಿಗೆ ಉಪಯುಕ್ತವಾಗಬಹುದು.

## ವಿಷ್ಣುಪುರಾಣೋಕ್ತ ಸೃಷ್ಟಿಕ್ರಮ

ಈ ಸೃಷ್ಟಿಪ್ರಕರಣದಲ್ಲಿ ಕಾಪಿಲಸಾಂಖ್ಯ ಮತ್ತು ವೇದಾಂತಪ್ರಕ್ರಿಯೆಗಳ ಸಂಮಿಶ್ರಣ ಕಂಡುಬರುತ್ತದೆ. ಇವುಗಳ ಸಮನ್ವಯ ಕ್ಲಿಷ್ಟವಾದದ್ದು. ಪೂರ್ವಾಪರಗಳಿಗೆ ಅಲ್ಲಲ್ಲಿ ವಿರೋಧವು ಸ್ಥೂಲದೃಷ್ಟಿಯಿಂದ ನೋಡಿದರೆ ಕಂಡುಬರುತ್ತದೆ. ಶ್ರೀಧರೀಯ ವ್ಯಾಖ್ಯಾನದಲ್ಲಿ ಈ ಗೊಂದಲವನ್ನು ಪರಿಹರಿಸಿ, ಪೂರ್ವಾಪರಗಳಿಗೆ ಏಕವಾಕ್ಯತೆಯನ್ನು ಸಾಧಿಸಿ, ಸುಂದರವಾಗಿ ಸಮನ್ವಯವನ್ನು ತೋರಿಸಲಾಗಿದೆ. ಅವ್ಯಕ್ತ , ಮಹತ್, ಅಹಂಕಾರ, ಸೂಕ್ಷ್ಮಭೂತಗಳು—ಈ ಕ್ರಮದಿಂದ ಸೃಷ್ಟಿಯಾಯಿತೆನ್ನುವುದು ವಿಷ್ಣುಪುರಾಣೋಕ್ತವಾದ ಕ್ರಮ. ಇದು ವೇದಾಂತಿಗಳಿಗೆ ಅಗ್ರಾಹ್ಯವಲ್ಲವಾದರೂ ಜಡವಾದ ಅವ್ಯಕ್ತ (ಪ್ರಧಾನ) ದಿಂದ ಸೃಷ್ಟಿಯಾಗುತ್ತದೆ ಎಂಬುದು ಅವರಿಗೆ ಸಂಮತವಲ್ಲ. ಆದ್ದರಿಂದ ಸಾಂಖ್ಯೋಕ್ತ ವಾದ ಅವ್ಯಕ್ತಾದಿ ಚತುರ್ವಿಂಶತಿ ತತ್ತ್ವಗಳಿಗೆ ಮೂಲವಾಗಿ ಮಹಾಚೈತನ್ಯ ಸ್ವರೂಪವಾದ ಆತ್ಮವನ್ನು ವೇದಾಂತಿಗಳು ಅಂಗೀಕರಿಸುತ್ತಾರೆ. ವಿಷ್ಣುಪುರಾಣವು ಈ ಮಹಾಚೈತನ್ಯವನ್ನು ಒಪ್ಪಿದೆ. ಸಾಂಖ್ಯರ ಅವ್ಯಕ್ತ ಶಬ್ದಕ್ಕೆ ಬದಲಾಗಿ ವೇದಾಂತಿಗಳ 'ಅವಿದ್ಯೆ' ಎಂಬ ಶಬ್ದವನ್ನು ಈ ಪುರಾಣವು ಬಳಸಿರುವುದು ಗಮನಾರ್ಹವಾದುದು. ಜಗನ್ಮೂಲವಾದ ಆ ಮಹಾಚೈತನ್ಯವೇ ಪರಬ್ರಹ್ಮ. ಈ ಬ್ರಹ್ಮವು ಗುಣತ್ರಯಗಳ ಸಂಬಂಧದಿಂದ ಬ್ರಹ್ಮ, ವಿಷ್ಣು , ರುದ್ರ ರೂಪಾದಿ ಗಳನ್ನು ಧರಿಸುವುದೆಂದು ಹಲವಾರು ಸ್ಥಳಗಳಲ್ಲಿ ಮತ್ತೆ ಮತ್ತೆ ವರ್ಣಿಸಲಾಗಿದೆ. ಬ್ರಹ್ಮವು ನಿರ್ಗುಣವಾದರೂ ಅಗ್ನಿಯಲ್ಲಿ ಉಷ್ಣತೆಯಿರುವಂತೆ ಅದರಲ್ಲಿ

ಅಚಿಂತ್ಯವಾದ ಮಹಾಶಕ್ತಿಗಳಿರುತ್ತವೆ. ಶಕ್ತಿ-ಶಕ್ತಿಮತ್ ಇವುಗಳಿಗೆ ಅಭೇದ ವಿರುವುದರಿಂದ ಅದ್ವೈತಕ್ಕೆ ಚ್ಯುತಿಯಿಲ್ಲ. ವಿಷ್ಣುವೇ ಇತರ ಸಗುಣಮೂರ್ತಿ ಗಳಲ್ಲಿ ಶ್ರೇಷ್ಠನಾದ ಮೂರ್ತಿಯೆಂಬುದು ವಿಷ್ಣುಪುರಾಣದ ಮುಖ್ಯವಾದ ನಿಲುವು. ಆದ್ದರಿಂದ ವಿಷ್ಣುವಿಗೆ ಸರ್ವೋತ್ಕರ್ಷವನ್ನು ಪ್ರತಿಪಾದಿಸಿದ್ದಾರೆ. ಬ್ರಹ್ಮ ಮತ್ತು ಶಿವ—ಇವರೂ ಸಹ ಪರಬ್ರಹ್ಮದ ಸಗುಣಮೂರ್ತಿಗಳೇ ಆದ್ದರಿಂದ ಈ ತ್ರಿಮೂರ್ತಿಗಳು ಸಮಾನರೆಂದೂ ಅಭಿನ್ನರೆಂದೂ ತಿಳಿಸಿದ್ದಾರೆ. ಏವಂಚ ಏಕೇಶ್ವರವಾದವು ವಿಷ್ಣುಪುರಾಣಕ್ಕೆ ಸಂಮತವೆಂದು ನಿಸ್ಸಂದೇಹವಾಗಿ ಹೇಳ ಬಹುದಾದ ಸಿದ್ಧಾಂತವಾಗಿದೆ. ನಾರಾಯಣನೇ ಬ್ರಹ್ಮನೆಂದು ಈ ಮಾತುಗಳು ಸ್ಪಷ್ಟಪಡಿಸುತ್ತವೆ–'ಬ್ರಹ್ಮಾನಾರಾಯಣಾಖ್ಯೋಽಸೌ' (1-4-1) 'ಬ್ರಹ್ಮಸ್ವರೂಪೀ ಭಗವಾನ್' (1-4-4) 'ಸ್ವಯಂ ವಿಶ್ವೇಶ್ವರೋ ಹರಿಃ ಬ್ರಹ್ಮಾಭೂತ್ವಾ' (1-2-61) 'ಬ್ರಹ್ಮರೂಪಧರಃ ಶೇತೇ ಭಗವಾನಾದಿ ಕೃತ್ ಹರಿಃ' (6-4-4).

ಇನ್ನೊಂದು ವಿಶೇಷವನ್ನು ಇಲ್ಲಿ ಕಾಣಬಹುದು. ಸೃಷ್ಟಿಮಾಡುವಾಗ ಬ್ರಹ್ಮನೇ ತನ್ನ ದೇಹವನ್ನು ನಾನಾರೂಪಗಳಾಗಿ ಪರಿವರ್ತಿಸಿದನೆಂದು ವರ್ಣಿಸಿದೆ. ಅವನೇ ಸೃಜ್ಯನೆಂದೂ ಸೃಷ್ಟಿಕರ್ತನೆಂದೂ ವರ್ಣಿಸಲಾಗಿದೆ. ಅಲ್ಲದೆ 'ನಿಮಿತ್ತಮಾತ್ರಮೇವಾಸೌ' ಎಂದೂ ವರ್ಣಿಸಿ 'ಜಗಚ್ಚ ಸಃ' ಎಂದು ಹೇಳಿರುವುದರಿಂದ ಪರಬ್ರಹ್ಮವಸ್ತುವೇ ಜಗತ್ತಿಗೆ ನಿಮಿತ್ತ ಕಾರಣವೆಂದೂ ಉಪಾದಾನ ಕಾರಣವೆಂದೂ ಸ್ಪಷ್ಟವಾಗುತ್ತದೆ. ಈ ಪ್ರಮೇಯವು ಬಾದರಾಯಣಾಚಾರ್ಯರ ಬ್ರಹ್ಮಸೂತ್ರದ ಪ್ರಕೃತ್ಯಧಿಕರಣದ (1-4-23) ಸಿದ್ಧಾಂತವೇ ಆಗಿದೆ ಎಂಬುದನ್ನು ಲಕ್ಷ್ಯದಲ್ಲಿಡಬೇಕು.

ಜಗತ್ತನ್ನು ಸೃಜಿಸಬೇಕೆಂದು ಪರಮಾತ್ಮನು ರಜೋಗುಣಯುಕ್ತನಾಗಿ ಬ್ರಹ್ಮರೂಪವನ್ನು ಧರಿಸಿದಾಗ ಅವಿದ್ಯೆ ಹುಟ್ಟುತ್ತದೆ. ಈ ಅವಿದ್ಯೆಯೇ ಸಾಂಖ್ಯರ ಅವ್ಯಕ್ತವೆಂದು ಹೇಳಬಹುದು. ಆದರಿಂದ ಮಹತ್ ತತ್ತ್ವದ ಸೃಷ್ಟಿ. ಮಹತ್ ತತ್ತ್ವಕ್ಕೆ ಬುದ್ಧಿ ಎಂದೂ ಬ್ರಹ್ಮನೆಂದೂ ಹೆಸರಿದೆ. ಕೆಲವು ಪುರಾಣಗಳಲ್ಲಿ ಈ ಮಹತ್ ತತ್ತ್ವವನ್ನೇ ಸೃಷ್ಟಿಕರ್ತನಾದ ಬ್ರಹ್ಮನೆಂದು ವ್ಯವಹರಿಸಲಾಗಿದೆ. ಪ್ರಕೃತ, ವಿಷ್ಣುಪುರಾಣದಲ್ಲಿ ಮಹತ್ತಿನ ಸೃಷ್ಟಿಯನ್ನು ಪ್ರಥಮ ಸೃಷ್ಟಿಯೆಂದೂ ಅದರಿಂದ ಅಹಂಕಾರವೂ ಸೇರಿ ಪಂಚತನ್ಮಾತ್ರೆಗಳ ಸೃಷ್ಟಿಯಾಯಿತೆಂದೂ ನಿರೂಪಿಸ ಲಾಗಿದೆ. ಪಂಚತನ್ಮಾತ್ರೆಗಳೇ ಸೂಕ್ಷ್ಮಭೂತಗಳು. ಇವುಗಳಿಂದ ಇಂದ್ರಿಯ

ಗೋಚರಗಳಾದ ಸ್ಥೂಲಭೂತಗಳೂ ಅಗೋಚರಗಳಾದ ಇಂದ್ರಿಯಗಳೂ ಹುಟ್ಟಿದುವು. ಅನಂತರ ಮರ ಬಳ್ಳಿಗಳೇ ಮೊದಲಾದ ಸ್ಥಾವರಗಳ ಸೃಷ್ಟಿಯಾಯಿತು. ಅನಂತರ ಕ್ರಿಮಿಕೀಟಾದಿಗಳು ಹುಟ್ಟಿದುವು. ಆಮೇಲೆ ದೇವತೆಗಳ ಸೃಷ್ಟಿ. ಕಡೆಯಲ್ಲಿ ಹುಟ್ಟಿದವರು ಮನುಷ್ಯರು (1-5-19 ರಿಂದ 23). ದೇವತೆಗಳ ಸೃಷ್ಟಿಯು ಕಾರ್ಯಸಾಧಕವಲ್ಲವೆಂದು ಬಗೆದು ಬ್ರಹ್ಮನು ಮನುಷ್ಯರನ್ನು ಸೃಷ್ಟಿಸಿದನೆಂದು ಹೇಳಿದೆ. ಈ ಮನುಷ್ಯರಿಗೆ ಸತ್ತ್ವ, ರಜಸ್ಸು, ತಮಸ್ಸು, ಈ ಮೂರು ಗುಣಗಳೂ ಅಧಿಕವಾಗಿವೆ. ಸುಖಕ್ಕಿಂತ ದುಃಖವು ಇವರಿಗೆ ಅಧಿಕ. ಮನುಷ್ಯರು ಅತ್ಯಂತ ಕ್ರಿಯಾಶೀಲರು. ಬಾಹ್ಯ ಮತ್ತು ಆಂತರಿಕವಾದ ಜ್ಞಾನವುಳ್ಳವರಾದ್ದರಿಂದ ಇವರೇ ಕಾರ್ಯಸಾಧಕರೆಂದು ಬ್ರಹ್ಮನಿಗೆ ಹರ್ಷವಾಯಿತಂತೆ. ದೇವತೆಗಳಿಗಿಂತ ಮನುಷ್ಯರೇ ಅಧಿಕ ಭಾಗ್ಯಸಂಪನ್ನರೆಂಬುದು ಇಲ್ಲಿ ಸೂಚಿತವಾಗಿದೆ. ಏಕೆಂದರೆ ಈ ಜನರಿಗೆ ಕರ್ಮಾಧಿಕಾರವಿದ್ದು ಸ್ವರ್ಗ ಮೋಕ್ಷಗಳೆರಡನ್ನೂ ಪಡೆದುಕೊಳ್ಳಲು ಸಾಮರ್ಥ್ಯವುಂಟು. ಆದ್ದರಿಂದಲೇ ದೇವತೆಗಳು ಭರತ ಖಂಡದ ಪ್ರಾಶಸ್ತ್ಯವನ್ನು ಈ ರೀತಿಯಲ್ಲಿ ಹೊಗಳಿದ್ದಾರೆ:

**ಗಾಯಂತಿ ದೇವಾಃ ಕಿಲ ಗೀತಕಾನಿ**
**ಧನ್ಯಾಸ್ತು ತೇ ಭಾರತಭೂಮಿಭಾಗೇ।**
**ಸ್ವರ್ಗಾಪವರ್ಗಾಸ್ಪದ ಮಾರ್ಗಭೂತೇ**
**ಭವಂತಿ ಭೂಯಃ ಪುರುಷಾಃ ಸುರತ್ವಾತ್॥** (2-3-24)

**ಜಾನೀಮ ನೈತತ್ ಕ್ವ ವಯಂ ವಿಲೀನೇ**
**ಸ್ವರ್ಗಪ್ರದೇ ಕರ್ಮಣಿ ದೇಹಬಂಧಮ್।**
**ಪ್ರಾಪ್ಸ್ಯಾಮ ಧನ್ಯಾಃ ಖಲು ತೇ ಮನುಷ್ಯಾಃ**
**ಯೇ ಭಾರತೇ ನೇಂದ್ರಿಯವಿಪ್ರಹೀನಾಃ॥** (2-3-26)

ವಿಷ್ಣುಪುರಾಣದಲ್ಲಿ ಬಂದಿರುವ ರಾಷ್ಟ್ರಪ್ರೇಮಪೂರಿತವಾದ ಈ ಶ್ಲೋಕವು ಗಮನಾರ್ಹವಾದದ್ದು:

**ಅತ್ರ ಜನ್ಮಸಹಸ್ರಾಣಾಂ ಸಹಸ್ರೈರಪಿ ಸತ್ತಮ।**
**ಕದಾಚಿಲ್ಲಭತೇ ಜಂತುರ್ಮಾನುಷ್ಯಂ ಪುಣ್ಯಸಂಚಯಾತ್॥**
(2-4-23)

ಭರತಖಂಡದ ಎಲ್ಲೆಯನ್ನು ವಿಷ್ಣುಪುರಾಣವು ಹೀಗೆ ಹೇಳಿದೆ:

**ಉತ್ತರಂ ಯತ್ ಸಮುದ್ರಸ್ಯ ಹಿಮಾದ್ರೇಶ್ಚೈವ ದಕ್ಷಿಣಮ್।**
**ವರ್ಷಂ ತದ್ ಭಾರತಂ ನಾಮ ಭಾರತೀ ಯತ್ರ ಸಂತತಿಃ॥**

(2-3-1)

ವಿಷ್ಣುಪುರಾಣದ ಪ್ರಕಾರ ಭಾರತವರ್ಷದಲ್ಲಿ ಇಂದ್ರದ್ವೀಪ ಮುಂತಾದ ಒಂಬತ್ತು ಭೇದಗಳಿವೆಯೆಂದು ತಿಳಿದುಬರುತ್ತದೆ. ಇವುಗಳಲ್ಲಿ ಎಂಟರ ಹೆಸರನ್ನು ಹೇಳಿದ್ದು ಒಂಬತ್ತನೆಯ ದ್ವೀಪದ ಹೆಸರನ್ನು ಹೇಳಿಲ್ಲ. 'ಅಯಂ ತು ನವಮಸ್ತೇಷಾಮ್' (2-3-7) ಎಂದು ಮಾತ್ರ ಹೇಳಲಾಗಿದೆ. ಇಲ್ಲಿ 'ಅಯಂ' ಎಂದರೆ ಭಾರತದೇಶ ಎಂದು ವ್ಯಾಖ್ಯಾನಕಾರರು ಬರೆದಿದ್ದಾರೆ. (ನೋಡಿ: ಪ್ರಥಮ ಸಂಪುಟ ಪುಟ 306) ವರಾಹ ಪುರಾಣದಲ್ಲಿ ಇಂದ್ರದ್ವೀಪಾದಿಗಳೊಡನೆ ಭಾರತವನ್ನೂ ಗಣಿಸಿರುವುದರಿಂದ ಈ ವ್ಯಾಖ್ಯಾನ ಪ್ರಾಮಾಣಿಕವಾದದ್ದು. ಈ ಭರತಖಂಡದ ಒಂದು ಭಾಗ 'ಭಾರತವರ್ಷ' ಎಂದು ಹೇಳಬಹುದಾಗಿದೆ. ನಮ್ಮ ಸಂಕಲ್ಪವಿಧಿಯಲ್ಲಿ 'ಭರತಖಂಡೇ ಭಾರತವರ್ಷೇ' ಎನ್ನುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಭರತಖಂಡ ಎಲ್ಲಿಯವರೆಗೆ, ಭಾರತವರ್ಷ ಎಲ್ಲಿಯ ವರೆಗೆ—ಎಂದು ಎಲ್ಲೆಯನ್ನು ಗುರುತಿಸುವುದು ಕ್ಲಿಷ್ಟವಾದದ್ದು. ಈ ಭರತ ಭೂಮಿಯ ಪೂರ್ವದಲ್ಲಿ ಕಿರಾತರೂ ಪಶ್ಚಿಮದಲ್ಲಿ ಯವನರೂ ವಾಸವಾಗಿದ್ದಾರೆಂದು ಹೇಳಲಾಗಿದೆ. ಮಧ್ಯದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುರ್ವರ್ಣ್ಯದವರು ನೆಲೆಸಿದ್ದಾರೆ. ಧರ್ಮಶಾಸ್ತ್ರದ ವಿಧಿನಿಷೇಧಗಳೆಲ್ಲವೂ ಈ ಚತುರ್ವರ್ಣೀಯರಿಗೆ ಸಂಬಂಧಿಸಿದವುಗಳು. ಆದ್ದರಿಂದ ಇದು ಕರ್ಮಭೂಮಿ. ಉಳಿದ ದೇಶಗಳೆಲ್ಲಾ ಭೋಗಭೂಮಿಗಳು (ಅತೋಽನ್ಯಾ ಭೋಗ ಭೂಮಯಃ). ಅವರಿಗೆ ವಿಧಿನಿಷೇಧಗಳಿಲ್ಲ. ಆದರೂ ಅವರೂ ಸಹ ಭಗವಂತನನ್ನು ಇನ್ನೊಂದು ಪ್ರಕಾರದಲ್ಲಿ ಅರ್ಚಿಸುತ್ತಾರೆಂದು ಹೇಳಿದ್ದಾರೆ. ಆದ್ದರಿಂದ ಅವರಿಗೆ ಪ್ರಕಾರಾಂತರದಿಂದ ಸದ್ಗತಿಯುಂಟೆಂದು ಸೂಚಿತವಾಗುತ್ತದೆ.

ಇಲ್ಲಿ ಗಮನಾರ್ಹವಾದ ಇನ್ನೊಂದು ವಿಷಯವೇನೆಂದರೆ, ಇಂದ್ರಿಯಗಳ ಸೃಷ್ಟಿಯಾದ ಮೇಲೆ ವೃಕ್ಷಲತೆಗಳೆಂಬ ಸ್ಥಾವರಗಳ ಸೃಷ್ಟಿಯನ್ನು ವರ್ಣಿಸಿರುವುದರಿಂದ ಅವುಗಳಿಗೂ ಇಂದ್ರಿಯಗಳಿವೆಯೆಂದು ಸೂಚಿತವಾಗುತ್ತದೆ. 'ಅಂತಃ ಸಂಜ್ಞಾ ಭವಂತ್ಯೇತೇ' ಎಂಬ ಭಾರತವಾಚನವು ಈ ಅಭಿಪ್ರಾಯಕ್ಕೆ ಪುಷ್ಟಿಯನ್ನೀಯುತ್ತದೆ.

**ವಿಷ್ಣುಪುರಾಣೋಕ್ತ ವಂಶಾವಳಿ:** ಇದರಲ್ಲಿ ಕ್ಷತ್ರಿಯರಾಜರ ವಂಶಾವಳಿ ಪ್ರಧಾನವಾಗಿ ಬಂದಿದೆ. ಉಳಿದ ಬ್ರಾಹ್ಮಣಾದಿಗಳ ವಂಶಚರಿತೆಯಿಲ್ಲ. ಅದು ಅಸಂಖ್ಯೇಯವೂ ಅನಂತವೂ ಅನುಪಯುಕ್ತವೂ ಆಗಿರುವುದೇ ಕಾರಣ ವಿರಬೇಕು. ಆಧುನಿಕ ಇತಿಹಾಸದಲ್ಲಿಯೂ ಸಹ ರಾಜವಂಶವೇ ಪ್ರಧಾನವಾಗಿ ವರ್ಣನೀಯವಾಗಿರುತ್ತದೆ. ಪ್ರಕೃತ, ಪರಮಾತ್ಮನಿಂದ ಪ್ರಜಾವರ್ಗ ಸೃಷ್ಟಿ ಯಾಯಿತಷ್ಟೆ. ಇದರಲ್ಲಿ ರಾಜ್ಯಾರ್ಹವಾದ ಕ್ಷತ್ರಿಯ ವಂಶವು ಸೂರ್ಯವಂಶ, ಚಂದ್ರವಂಶ ಎಂದು ಎರಡು ವಿಭಾಗವುಳ್ಳದ್ದು. ಇವೆರಡನ್ನು ಪರಿಶೀಲಿಸಿದಾಗ ಕುತೂಹಲಕರವೂ ಪ್ರಾಚ್ಯವಿದ್ಯಾಶೋಧಕರಿಗೆ ಉಪಯುಕ್ತವೂ ಆದ ಸಂಗತಿಯು ಗೋಚರಿಸುತ್ತದೆ. ಗಮನಾರ್ಹವಾದ ವಂಶಪರಂಪರೆಯನ್ನೂ ಕುತೂಹಲಕರವಾದ ಕೆಲವು ಅಂಶಗಳನ್ನೂ ಇಲ್ಲಿ ಬರೆಯಲು ಉದ್ದೇಶಿಸ ಲಾಗಿದೆ.

**ಸೂರ್ಯವಂಶ:** ವಿಷ್ಣು-ಬ್ರಹ್ಮ-ದಕ್ಷ-ವಿವಸ್ವಾನ್ (ಸೂರ್ಯ) ಇದು ಉಪಕ್ರಮ. ವಿವಸ್ವಂತನಿಂದ ಮನು, ಮನುವಿಗೆ ಇಕ್ಷ್ವಾಕು ಮೊದಲಾದ ದಶಪುತ್ರರು ಜನಿಸುತ್ತಾರೆ. ಈ ವಂಶದಲ್ಲಿ ಮರುತ್ತ , ಮಾಂಧಾತಾ, ತ್ರಿಶಂಕು, ಹರಿಶ್ಚಂದ್ರ, ಸಗರ, ಭಗೀರಥ, ಋತುಪರ್ಣ, ದಶರಥ, ಶ್ರೀರಾಮ, ಅಗ್ನಿವರ್ಣ, ಶೀಘ್ರಗ, ಮರು ಇವರು ಸ್ಮರಣೀಯರಾದ ರಾಜರು. ಮರು ರಾಜನು ಯೋಗಧಾರಣೆ ಮಾಡಿ ಇಂದಿಗೂ ಕಲಾಪಗ್ರಾಮದಲ್ಲಿ ವಾಸವಾಗಿದ್ದಾ ನೆಂದೂ ಮುಂದಿನ ಕೃತಯುಗದಲ್ಲಿ ಸೂರ್ಯವಂಶವನ್ನು ಸ್ಥಾಪಿಸುವನೆಂದೂ ಹೇಳಲಾಗಿದೆ. ಇಕ್ಷ್ವಾಕು ವಂಶವು ಸುಮಿತ್ರನೆಂಬ ರಾಜನವರೆಗೆ ನಡೆಯುವ ದೆಂದು ತಿಳಿಸಲಾಗಿದೆ. 'ಇಕ್ಷ್ವಾಕೂಣಾಮಯಂ ವಂಶಃ ಸುಮಿತ್ರಾಂತೋ ಭವಿಷ್ಯತಿ' (4-22-13).

ಈ ಸೂರ್ಯವಂಶದಲ್ಲಿ ಇಕ್ಷ್ವಾಕುವಿನ ಮಗ 'ನಿಮಿ'ಯಿಂದ ಇನ್ನೊಂದು ಕವಲು ಒಡೆಯುತ್ತದೆ. ಇದರಲ್ಲಿ ಜನಕವೈದೇಹ, ಸೀತೆಯ ತಂದೆಯಾದ ಸೀರಧ್ವಜ ಜನಕ ಮುಂತಾದ ರಾಜರು ಜನಿಸಿದ್ದಾರೆ. 'ಕೃತಿ' ಎಂಬ ರಾಜನ ವರೆಗೆ ನಿಮಿವಂಶ ನಡೆಯುತ್ತದೆ. ಶ್ರೀರಾಮ ಮತ್ತು ಜನಕರಾಜ ಇವರಿಬ್ಬರಿಗೂ ಇಕ್ಷ್ವಾಕುವೇ ಮೂಲಪುರುಷ. ಜನಕವಂಶದವರೆಲ್ಲ ಆತ್ಮವಿದ್ಯಾಪರಿಣತರು.

**ಚಂದ್ರವಂಶ:** ವಿಷ್ಣು-ಬ್ರಹ್ಮ-ಅತ್ರಿ-ಚಂದ್ರ-ಬುಧ-ಪುರೂರವ ಇದು

ಚಂದ್ರವಂಶದ ಉಪಕ್ರಮ. ಸೂರ್ಯವಂಶಕ್ಕಿಂತ ಈ ವಂಶವು ತುಂಬ ವಿಸ್ತೃತವಾಗಿ ಕಂಡುಬರುತ್ತದೆ ಪುರೂರವನಿಂದ ಜಹ್ನು-(ವಿಶ್ವಾಮಿತ್ರರ ತಂದೆಯಾದ) ಗಾಧಿ, ಇವರ ಪರಂಪರೆ ಒಂದು ಶಾಖೆ. ಪುರೂರವನ ಮಗ ಆಯುವಿನಿಂದ ನಹುಷ - ಧನ್ವಂತರಿ - ಯಯಾತಿ - ಯದು - ಕಾರ್ತವೀರ್ಯ ಮೊದಲಾದವರ ಪರಂಪರೆ ಇನ್ನೊಂದು ಶಾಖೆ. ಮೇಲೆ ಹೇಳಿದ ಧನ್ವಂತರಿ ಆಯುರ್ವೇದ ಶಾಸ್ತ್ರದ ಪ್ರತಿಷ್ಠಾಪಕನೆಂದು ಹೇಳಿದ್ದಾರೆ. ಸಮುದ್ರಮಥನ ಕಾಲದಲ್ಲಿ ಧನ್ವಂತರಿ ಉದಿಸಿದನೆಂಬ ಪುರಾಣಾಂತರದ ಕಥೆಯೊಡನೆ ಇದರ ಸಾಮಂಜಸ್ಯ ಕ್ಲಿಷ್ಟವಾದದ್ದು. ಇಲ್ಲಿ ಹೇಳಿದ ಯದು ಶ್ರೀಕೃಷ್ಣನ ಯಾದವ ವಂಶದ ಮೂಲಪುರುಷನೇ ಆಗಿದ್ದಾನೆ. ಈತನು ಕಾರ್ತವೀರ್ಯನಿಗಿಂತ ಹಿಂದಿನವನಾದ್ದರಿಂದ ತ್ರೇತಾಯುಗದವನೆಂದಾದರೂ ಒಪ್ಪಬೇಕಾಗುತ್ತದೆ. ಅಲ್ಲಿಗೆ ಯದುವಿಗೂ ಶ್ರೀಕೃಷ್ಣನಿಗೂ ನಡುವೆ ಅತಿದೀರ್ಘವಾದ ಕಾಲ ಸಂದು ಹೋಗಿದೆಯೆಂದು ತಿಳಿಯಬೇಕು. ಯದುವಂಶದಲ್ಲಿ ಮಧು-ವೃಷ್ಣಿ-ಸತ್ವತ ಎಂಬವರು ಜನಿಸಿದ್ದರಿಂದ ಶ್ರೀಕೃಷ್ಣನು ಮಾಧವ, ವಾರ್ಷ್ಣೇಯ, ಸಾತ್ವತ ಎಂದು ಅಲ್ಲಲ್ಲಿ ಉಕ್ತನಾಗಿದ್ದಾನೆ. ಈ ಪ್ರಸಂಗದಲ್ಲಿ ಕುತೂಹಲಕಾರಿಯಾದ ಒಂದು ಸಂಗತಿ ಬಂದಿದೆ. ಜ್ಯಾಮಘ ಎಂಬ ರಾಜನು ಯದುವಂಶದಲ್ಲಿ ಜನಿಸಿರುತ್ತಾನೆ. ಇವನು ಭಾರ್ಯಾವಶ್ಯ–ಹೆಂಡತಿಗೆ ಹೆದರುವವನು–ಎಂದು ವಿಸ್ತೃತವಾಗಿ ವರ್ಣಿಸಲಾಗಿದೆ. ಇವನಿಗೆ ಸಮಾನರಾದ ಭಾರ್ಯಾವಶ್ಯರೇ ಇಲ್ಲ!

**ಭಾರ್ಯಾವಶ್ಯಾಸ್ತು ಯೇ ಕೇಚಿತ್ ಭವಿಷ್ಯಂತ್ಯಥವಾ ಮೃತಾಃ।**
**ತೇಷಾಂ ತು ಜ್ಯಾಮಘಃ ಶ್ರೇಷ್ಠಃ ಶೈಬ್ಯಾಪತಿರಭೂನ್ನೃಪಃ॥**
(4-12-13)

ಈ ಯದುವಂಶದಲ್ಲಿ ಹುಟ್ಟಿದ ಶೂರನ ಮಗ ವಸುದೇವ. ವಸುದೇವನ ತಾಯಿ ಮಾರಿಷಾ. ಪೃಥಾ (ಕುಂತಿ), ಶ್ರುತದೇವಾ, ಶ್ರುತಶ್ರವಸ್ ಎಂಬುವರು ವಸುದೇವನ ಸೋದರಿಯರು. ಪೃಥೆಯನ್ನು ಕುಂತೀಭೋಜನಿಗೆ ದತ್ತಪುತ್ರಿಯಾಗಿ ಕೊಟ್ಟದ್ದರಿಂದ ಅವಳಿಗೆ ಕುಂತಿ ಎಂದು ಹೆಸರು ಪ್ರಸಿದ್ಧಿಗೆ ಬಂದಿತು. ಕುಂತಿಯ ಮಕ್ಕಳು ಪಾಂಡವರೆಂಬುದು ಪ್ರಸಿದ್ಧ. ಇವಳ ಸೋದರಿಯಾದ ಶ್ರುತದೇವಾ ಎಂಬವಳ ಮಗ ದಂತವಕ್ರ. ಶ್ರುತಶ್ರವಸ್ಸಿನ ಮಗ ಶಿಶುಪಾಲ. ಪಾಂಡವರೂ ಶಿಶುಪಾಲನೂ ಅಕ್ಕತಂಗಿಯರ ಮಕ್ಕಳಾಗುತ್ತಾರೆ. ಶ್ರೀಕೃಷ್ಣನಿಗೆ

ಪಾಂಡವರೂ ಶಿಶುಪಾಲನೂ ಸೋದರತ್ತೆಯ ಮಕ್ಕಳಾಗುತ್ತಾರೆ. ಮುಂದೆ ಶ್ರೀಕೃಷ್ಣನ ವಂಶವು ಪ್ರದ್ಯುಮ್ನ-ಅನಿರುದ್ಧ-ವಜ್ರ-ಪ್ರತಿಬಾಹು-ಸುಚಾರು ಎಂಬವರವರೆಗೆ ನಡೆಯುತ್ತದೆ. ಯಯಾತಿಯ ಇನ್ನೊಬ್ಬ ಮಗನಾದ ಪುರುವಿನ ವಂಶದಲ್ಲಿ ದುಷ್ಯಂತನು ಜನಿಸುತ್ತಾನೆ. ಈ ವಂಶದ 'ಹಸ್ತಿನ' ಎಂಬವನಿಂದ ಸ್ಥಾಪಿತವಾದದ್ದು ಹಸ್ತಿನಾವತೀ ನಗರ. ಹಸ್ತಿನನ ಮಗ ಅಜಮೀಢ. ಆತನ ಮಗ ದಿವೋದಾಸ. ದಿವೋದಾಸನ ಸೋದರಿ ರಾಮಾಯಣದಲ್ಲಿ ಬರುವ ಅಹಲ್ಯೆ ಎಂಬುದು ಸೋಜಿಗದ ಸಂಗತಿ. ಅಹಲ್ಯೆಯ ಮಗನಾದ ಶತಾನಂದನ ಪುತ್ರ ಸತ್ಯಧೃತಿ ಎಂಬ ಬ್ರಾಹ್ಮಣನು ಧನುರ್ವೇದಜ್ಞನಾಗಿದ್ದನು. ಈತನ ಮಗನೇ ಮಹಾಭಾರತದಲ್ಲಿ ಬರುವ ಕೃಪಾಚಾರ್ಯ. ಈ ದಿವೋದಾಸನ ವಂಶದಲ್ಲಿಯೇ ಕುರುರಾಜನು ಹುಟ್ಟುತ್ತಾನೆ. ಅವನಿಂದ ಬೃಹದ್ರಥ, ಜರಾಸಂಧ, ಮೊದಲಾದವರ ಒಂದು ವಂಶ ಶಾಖೆಯು ಬೆಳೆಯುತ್ತದೆ. ಇನ್ನೊಂದು ಶಾಖೆಯಲ್ಲಿ ಜಹ್ನು-ಶಂತನು-ಕೌರವ ಪಾಂಡವರು ಮುಂತಾದವರ ಶಾಖೆ ಬೆಳೆಯುತ್ತದೆ. ಏವಂಚ ಪಾಂಡವರಿಗೆ ಜರಾಸಂಧನು ದಾಯಾದ ಬಂಧುವಾಗುತ್ತಾನೆ. ಈ ಪಾಂಡವರ ವಂಶವು ಕ್ಷೇಮಕ–ಎಂಬ ರಾಜನವರೆಗೆ ನಡೆದು ಸಮಾಪ್ತವಾಗುತ್ತದೆ. ಇತ್ತ ಜರಾಸಂಧನ ವಂಶವು ರಿಪುಂಜಯನೆಂಬ ರಾಜನವರೆಗೆ ನಡೆದು ಕೊನೆಗೊಳ್ಳುತ್ತದೆ. ಅವನ ಅಮಾತ್ಯನಾದ ಸುನಿಕನು ರಿಪುಂಜಯನನ್ನು ಕೊಂದು, ಪ್ರದ್ಯೋತನೆಂಬ ತನ್ನ ಪುತ್ರನಿಗೆ ಪಟ್ಟಕಟ್ಟುತ್ತಾನೆ. ಅನಂತರ ಮಗಧರ ರಾಜ್ಯವು ಬೇರೆ ಬೇರೆ ಆಡಳಿತಗಾರರಿಗೆ ಹಸ್ತಾಂತರಿತವಾಗಿ ಮಹಾಪದ್ಮ ಎಂಬ ರಾಜನವರೆಗೆ ಬರುತ್ತದೆ. ಇವನಿಗೆ 'ನಂದ' ಎಂಬ ಇನ್ನೊಂದು ಹೆಸರಿತ್ತು. ಈತನು ಮಹಾಶೂರನಾಗಿದ್ದು ಸಮಸ್ತರಾಜರನ್ನೂ ಸ್ವಾಧೀನಪಡಿಸಿ ಕೊಂಡಿದ್ದನು. ಈ ಮಹಾಪದ್ಮನ ತಂದೆ ಮಹಾನಂದಿ. ತಾಯಿ ಶೂದ್ರಜಾತಿಯವಳು. ಈತನೂ ಈತನ ಎಂಟುಮಂದಿ ಮಕ್ಕಳೂ ಸೇರಿ ನವನಂದರೆಂದು ವಿಖ್ಯಾತರಾಗಿದ್ದಾರೆ. ಈ ನಂದರನ್ನು ಸಂಹರಿಸಿ, ಕೌಟಿಲ್ಯನು ಚಂದ್ರಗುಪ್ತನಿಗೆ ಪಟ್ಟಾಭಿಷೇಕ ಮಾಡಿದನೆಂಬುದು ಇತಿಹಾಸ ಪ್ರಸಿದ್ಧವಾದ ಸಂಗತಿ. ಯಾದವರೂ ಜರಾಸಂಧಾದಿಗಳೂ ಚಂದ್ರವಂಶೀಯರೆಂಬುದು ನೆನಪಿನಲ್ಲಿಡಬೇಕಾದದ್ದು. ಚಂದ್ರವಂಶದಲ್ಲಿ ದೇವಾಪಿ ಎಂಬ ರಾಜನು ಯೋಗಾರೂಢನಾಗಿ, ಸೂರ್ಯವಂಶದ ಮರುವಿನಂತೆ ಕಲಾಪಗ್ರಾಮದಲ್ಲಿ ನೆಲೆಸಿದ್ದು ಮುಂದೆ ಚಂದ್ರವಂಶದ ಕ್ಷತ್ರಿಯ ಕುಲವನ್ನು ಬೆಳೆಸುತ್ತಾನೆಂದು ತಿಳಿಸಲಾಗಿದೆ.

ಚಮತ್ಕಾರಿಯಾದ ಮತ್ತೊಂದು ಸಂಗತಿ ಏನೆಂದರೆ, ಯಯಾತಿ ಪುತ್ರನಾದ 'ಅನು'ವಿನ ವಂಶದಲ್ಲಿ ದಿವಿರಥ, ಧರ್ಮರಥ, ಚಿತ್ರರಥ ಎಂಬುವರು ಕ್ರಮವಾಗಿ ಜನಿಸುತ್ತಾರೆ. ಚಿತ್ರರಥನಿಗೆ 'ರೋಮಪಾದ' ಎಂಬ ಇನ್ನೊಂದು ಹೆಸರಿತ್ತು. ಇವನಿಗೆ ಸಂತತಿ ಇರಲಿಲ್ಲ. ಆದ್ದರಿಂದ ಇವನ ಮಿತ್ರ ನಾದ ದಶರಥನು (ಶ್ರೀರಾಮನ ತಂದೆ) ತನ್ನ ಮಗಳಾದ ಶಾಂತಾ ಎಂಬುವಳನ್ನು ರೋಮಪಾದನಿಗೆ ದತ್ತುಕೊಟ್ಟಿದ್ದನು (4-18-15 ರಿಂದ 18). ಈ ಹೇಳಿಕೆಗೆ ವಿರುದ್ಧವಾದ ಹೇಳಿಕೆ 'ಹರಿವಂಶ'ದಲ್ಲಿ ಕಂಡು ಬರುತ್ತದೆ:

"ಧರ್ಮರಥನ ಮಗ ಚಿತ್ರರಥ. ಚಿತ್ರರಥನ ಮಗ ದಶರಥ. ಇವನಿಗೆ ರೋಮಪಾದ ಎಂಬ ಮತ್ತೊಂದು ಹೆಸರಿತ್ತು. ಈತನಿಗೆ ಶಾಂತಾ ಎಂಬ ಮಗಳಿದ್ದಳು" (ಹರಿವಂಶ-31-44 ರಿಂದ 46). ವಿಷ್ಣುಪುರಾಣದ ಪ್ರಕಾರ ಚಿತ್ರರಥನೆಂಬ ರೋಮಪಾದನಿಗೆ ದಶರಥಪುತ್ರಿಯಾದ ಶಾಂತಾ ದತ್ತಪುತ್ರಿ ಯಾಗುತ್ತಾಳೆ. ಹರಿವಂಶದ ಪ್ರಕಾರ ದಶರಥನೆಂಬ ರೋಮಪಾದನಿಗೆ ಶಾಂತಾ ಎಂಬ ಮಗಳಿರುತ್ತಾಳೆ. ಇಲ್ಲಿ ರೋಮಪಾದನ ನಿಜವಾದ ಹೆಸರೇನೆಂಬುದು ಈ ಗ್ರಂಥಗಳಲ್ಲಿ ಪರಸ್ಪರ ವಿರುದ್ಧವಾಗಿದೆ. ಶಾಂತಾ ಎಂಬವಳು ರೋಮಪಾದನ ಔರಸಪುತ್ರಿಯೋ ಅಥವಾ ದತ್ತಕಪುತ್ರಿಯೋ ಎಂಬುದು ಹರಿವಂಶದಲ್ಲಿ ಸ್ಪಷ್ಟವಾಗಿಲ್ಲ.

## ಶ್ರೀಕೃಷ್ಣ ಚರಿತೆ

ವಿಷ್ಣುಪುರಾಣದ ಪಂಚಮಾಂಶವು ಶ್ರೀಕೃಷ್ಣಚರಿತೆಗೆ ಮೀಸಲಾಗಿದೆ. ವಿಷ್ಣುವಿನ ಅವತಾರಗಳಲ್ಲಿ ಶ್ರೀರಾಮ ಮತ್ತು ಶ್ರೀಕೃಷ್ಣ ಇವರಿಬ್ಬರ ಕಥಾನಕ ಸುಪ್ರಸಿದ್ಧವಾದದ್ದು. ಶ್ರೀರಾಮಚರಿತೆಗೆ ವಾಲ್ಮೀಕಿ ಮುನಿಗಳ ಶ್ರೀಮದ್ ರಾಮಾಯಣವು ಮೀಸಲಾಗಿರುವುದರಿಂದ ಶ್ರೀಕೃಷ್ಣಚರಿತೆಯನ್ನು ಇಲ್ಲಿ ವಿಸ್ತರಿಸ ಬೇಕೆಂದು ಪುರಾಣಕಾರರ ಆಶಯವಾಗಿರಬಹುದು. ಶ್ರೀಕೃಷ್ಣನು ವಿಷ್ಣುವಿನ ಪೂರ್ಣಾವತಾರವೆಂಬ ಹೇಳಿಕೆ ಉಂಟು. ವಿಷ್ಣುಪುರಾಣದಲ್ಲಿಯಾದರೋ ಈತನು ಪರಮಾತ್ಮನ ಅಂಶವೆಂದು ಹಲವಾರು ಕಡೆಗಳಲ್ಲಿ ಸ್ಪಷ್ಟವಾಗಿ ನಿರೂಪಿಸಲಾಗಿದೆ.

**ಅಂಶಾವತಾರೋ ಬ್ರಹ್ಮರ್ಷೇ ಯೋಽಯಂ ಯದುಕುಲೋದ್ಭವಃ।**
(5-1-2)

**ವಿಷ್ಣೋರಂಶೇ ಭುವಂ ಯಾತೇ ಋತವಶ್ಯಾಬಭುಃ ಶುಭಾಃ।** (5-2-4)

**ಯೋಽಹಮಂಶಾವತೀರ್ಣಸ್ಯ ಮುಖಂ ದ್ರಕ್ಷ್ಯಾಮಿ ಚಕ್ರಿಣಃ।**
(5-17-2)

**ಭಗವದ್ ವಸುದೇವಾಂಶೋ ದ್ವಿಧಾ ಯೋಽಯಂ ವ್ಯವಸ್ಥಿತಃ।**
(5-18-26)

**ಅಂಶೇನ ಲೋಕಮಾಯಾತಃ ಪ್ರಸಾದಸುಮುಖಃ ಪ್ರಭೋ।**
(5-29-25)

ಬಹುಶಃ ಶ್ರೀಕೃಷ್ಣಾವತಾರದಲ್ಲಿ ಶಂಖಚಕ್ರಾದಿಗಳ ಧಾರಣೆಯೂ ಗರುಡಾರೋಹಣವೂ ಹಲವಾರು ಅಮಾನುಷ ಲೀಲೆಗಳೂ, ವರ್ಣಿತವಾಗಿರುವುದರಿಂದ ಉಳಿದ ಅವತಾರಗಳ ಅಪೇಕ್ಷೆಯಿಂದ ನೋಡಿದಾಗ ಇದು ಪೂರ್ಣಾವತಾರ ಎಂಬ ಹೇಳಿಕೆ ಬಂದಿರಬಹುದು.

ಈ ಪಂಚಮಾಂಶವು ಶ್ರೀಕೃಷ್ಣಚರಿತೆಯನ್ನು ವರ್ಣಿಸುವ ಒಂದು ಸುಂದರ ಕಾವ್ಯವಾಗಿದೆ. ಇದರಲ್ಲಿ ಪೌರಾಣಿಕ ಅಂಶಗಳಿಗಿಂತ ಕಾವ್ಯಾಂಶಗಳೇ ಅಧಿಕವಾಗಿವೆ. ಶರದ್ ವರ್ಣನೆ, ರಾಸಕ್ರೀಡೆ, ಗೋಪೀವಿರಹ, ಕುಬ್ಜಾ ಪ್ರಸಂಗ, ಪಾರಿಜಾತ ಹರಣ, ಉಷಾ ಚರಿತೆ—ಮೊದಲಾದುವು ಬಹು ಮನೋಜ್ಞವಾಗಿ ಚಿತ್ರಿತವಾಗಿವೆ. ಕಡೆಯಲ್ಲಿ ಶ್ರೀಕೃಷ್ಣಾವತಾರವು ಸಮಾಪ್ತವಾದಮೇಲೆ ದಸ್ಯುಗಳಿಂದ ಅರ್ಜುನನ ಪರಾಭವ, ಆತನ ಶೋಕಾಲಾಪಗಳು, ವ್ಯಾಸರ ಸಮಾಧಾನೋಕ್ತಿ–ಇವು ಅವಶ್ಯವಾಗಿ ಸಹೃದಯರ ಗಮನವನ್ನು ಸೆಳೆಯುತ್ತವೆ. ಅರ್ಜುನನ ವಿಷಾದಪ್ರಸಂಗವು ಮಹಾಭಾರತದಲ್ಲಿರುವುದಕ್ಕಿಂತ ಮನೋಹರವಾಗಿ ಇಲ್ಲಿ ನಿರೂಪಿತವಾಗಿದೆ. ಶ್ರೀಕೃಷ್ಣನು ಇದರಲ್ಲಿ ಧೀರೋದಾತ್ತನಾಗಿದ್ದು ಮಹಾಪುರುಷನಾಗಿ ವರ್ಣಿತನಾಗಿದ್ದಾನೆ. ಅನಂತರದ ಗ್ರಂಥಗಳಲ್ಲಿ ವರ್ಣಿತವಾಗಿರುವಂತೆ ಆತನಿಗೆ ಯಾವ ಕಳಂಕ ಹಚ್ಚುವ ಪ್ರಸಂಗವೂ ಇದರಲ್ಲಿ ಬರುವುದಿಲ್ಲ. ಗೋಪೀವಸ್ತ್ರಾಪಹರಣದ ಕಥೆಯ ಪ್ರಸ್ತಾಪವೇ ವಿಷ್ಣು ಪುರಾಣದಲ್ಲಿ ಬಂದಿಲ್ಲವೆಂಬುದು ಗಮನಾರ್ಹವಾದ ಸಂಗತಿ.

## ಎರಡು ವಿರೋಧಾಭಾಸಗಳು

ಅಕ್ರೂರನು ಶ್ರೀಕೃಷ್ಣನ ಮಹಿಮೆಯನ್ನರಿತವನೂ ಭಗವದ್ ಭಕ್ತನೂ ಆಗಿದ್ದನು. ಅಂಥವನು ಸ್ಯಮಂತಕಮಣಿ ಪ್ರಸಂಗದಲ್ಲಿ ವರ್ತಿಸಿದ ರೀತಿ ವಿಚಿತ್ರವಾಗಿ ತೋರುತ್ತದೆ. ಸತ್ರಾಜಿತನನ್ನು ವಧಿಸುವ ಸಂಚಿನಲ್ಲಿ ಭಾಗಿಯಾಗಿದ್ದುದಲ್ಲದೆ ಸ್ಯಮಂತಕಮಣಿಯನ್ನು ಶ್ರೀಕೃಷ್ಣನಿಗೆ ಗೊತ್ತಾಗದಂತೆ ಗುಪ್ತವಾಗಿ ತನ್ನಲ್ಲಿ ಇಟ್ಟುಕೊಂಡಿರುತ್ತಾನೆ. ತನಗೆ ಪೂಜ್ಯನಾದ ಶ್ರೀಕೃಷ್ಣನಿಗೆ ತನ್ನಿಂದಲೇ ದ್ರೋಹ ಚಿಂತನೆಯಾದದ್ದು ವಿರೋಧಾಭಾಸವಾಗಿ ಕಾಣುತ್ತದೆ. ಅಂತೆಯೇ ಭಾಗವತ ಶಿರೋಮಣಿಯೂ ಅತ್ಯಂತ ಸಜ್ಜನನೂ ಆದ ಉದ್ಧವನು ದುರುಳನಾದ ಕಂಸನ ಸೇವೆಯಲ್ಲಿದ್ದು ಆತನ ವಿಶ್ವಾಸಕ್ಕೆ ಪಾತ್ರನಾಗಿದ್ದುದು ಸೋಜಿಗದ ಸಂಗತಿ.

## ಕಲಿಯುಗದ ಪ್ರಸ್ತಾವ

ಸಾಮಾನ್ಯವಾಗಿ ಎಲ್ಲ ಪುರಾಣಗಳಲ್ಲಿಯೂ ಒಂದಲ್ಲ ಒಂದು ಕಡೆ ಕಲಿಯುಗದ ಪ್ರಸ್ತಾವ ಬಂದಿರುತ್ತದೆ. ಆ ಕಾಲದಲ್ಲಿ ಅಧರ್ಮ ತಾಂಡವವಾಡುವುದೆಂದು ಬರುವ ವರ್ಣನೆ ಸಹಜವಾಗಿರುತ್ತದೆ. ವಿಷ್ಣುಪುರಾಣದಲ್ಲಿ ಕಲಿಯುಗದ ವಿಚಾರ ಸಂದರ್ಭೋಚಿವಾಗಿ ಬಂದಿದ್ದು ಅತ್ಯಂತ ರಸವತ್ತಾಗಿದೆ. ವಂಶಪರಂಪರೆಯನ್ನು ಹೇಳುತ್ತ ಮಹಾಪದ್ಮನಂದನನವರೆಗೆ ಅನುಕ್ರಮಿಸಿ "ತತಃ ಪ್ರಭೃತಿ ಶೂದ್ರಾ ಭೂಪಾಲಾ ಭವಿಷ್ಯಂತಿ" ಎಂಬುದು ಅರ್ಥವತ್ತಾಗಿದೆ. ಕಿ. ಪೂ. 410 ರಲ್ಲಿ ಮಹಾಪದ್ಮನಂದನ ಪಟ್ಟಾಭಿಷೇಕವಾದಂತೆ ತಿಳಿದು ಬರುತ್ತದೆ. ಅದಕ್ಕೆ 1500 ವರ್ಷಗಳ ಹಿಂದೆ ಪರೀಕ್ಷಿತನ ಜನ್ಮಕಾಲವೆಂದು ವಿಷ್ಣುಪುರಾಣದ ವಚನಗಳಿಂದ ಗೊತ್ತಾಗುತ್ತದೆ. ಆಗಲೇ ಕಲಿಯ ಪ್ರವೇಶವಾಗಿತ್ತು. ಶ್ರೀಕೃಷ್ಣನು ತನ್ನ ಅವತಾರವನ್ನು ಸಮಾಪ್ತಿಗೊಳಿಸಿದ ಮೇಲೆ ಕಲಿಯು ದೃಢಮೂಲವಾಯಿತು. ಅನಂತರ ಅಧರ್ಮವು ವರ್ಧಿಸುತ್ತ ಹೋಗುವುದು. ಅದು ವರ್ಧಿಸಿದಂತೆ ಕಲಿಯ ಪ್ರಾಬಲ್ಯವು ಅಧಿಕವಾಗುತ್ತ ಹೋಗುವುದು. ಆಗ ರಾಜ್ಯಾಧಿಕಾರವನ್ನು ನಿರ್ವಹಿಸತಕ್ಕವರ ವರ್ತನೆ ಹೇಗಿರುವುದೆಂಬುದನ್ನು ಬಹು ಸುಂದರವಾಗಿ ವರ್ಣಿಸಲಾಗಿದೆ. ವಾಚಕರು ಈ ಪ್ರಕರಣವನ್ನು ಅವಶ್ಯವಾಗಿ ಓದಿ ನೋಡಬೇಕು (4-24-123 ರಿಂದ 151).

ಕಲಿಯುಗದಲ್ಲಿ ಮೂರು ಅಂಶಗಳು ಸುಲಭವಾಗಿದ್ದು ಪ್ರಜೆಗಳ ಶ್ರೇಯಸ್ಸಿಗೆ ಕಾರಣವಾಗುತ್ತವೆ—ಎಂದು ವಿಷ್ಣುಪುರಾಣ ಹೇಳುತ್ತದೆ. ಏನೆಂದರೆ, ಕೃತಯುಗದಲ್ಲಿ ದೀರ್ಘವಾದ ತಪಸ್ಸಿನಿಂದ, ತ್ರೇತಾಯುಗದಲ್ಲಿ ಯಜ್ಞಗಳಿಂದ, ದ್ವಾಪರಯುಗದಲ್ಲಿ ಭಗವಂತನನ್ನು ವಿಧಿಪೂರ್ವಕವಾಗಿ ಅರ್ಚಿಸುವುದರಿಂದ ಯಾವ ಫಲವು ಲಭಿಸುತ್ತಿತ್ತೋ ಅದು ಕಲಿಯುಗದಲ್ಲಿ ಹರಿನಾಮಕೀರ್ತನದಿಂದ ಸರ್ವರಿಗೂ ದೊರಕುತ್ತದೆ. ಅಲ್ಪಾಯಾಸದಿಂದಲೇ ಮಹತ್ತರವಾದ ಧರ್ಮಪ್ರಾಪ್ತಿಯಾಗುತ್ತದೆ. ಸ್ತ್ರೀಯರು ತ್ರಿಕರಣಪೂರ್ವಕವಾಗಿ ಪತಿಸೇವೆ ಮಾಡುವುದರಿಂದಲೇ ಆತನ ಎಲ್ಲ ಪುಣ್ಯಗಳಿಗೂ ಪಾಲುದಾರಳಾಗುತ್ತಾಳೆ. ಶೂದ್ರನಿಗೆ ಭಕ್ಷ್ಯಾಭಕ್ಷ್ಯ ನಿಯಮವಾವುದೂ ಕಲಿಯುಗದಲ್ಲಿಲ್ಲ. ನಿಷ್ಠೆಯಿಂದ ತನ್ನ ಕರ್ತವ್ಯವನ್ನು ಪಾಲಿಸುವುದರಿಂದಲೇ ಸದ್ಗತಿಯನ್ನು ಪಡೆಯುತ್ತಾನೆ. ಹೀಗೆ ಹಲವು ವಿಧಗಳಲ್ಲಿ ಕಲಿಯುಗವು ಶ್ರೇಯಸ್ಸಾಧನೆಗೆ ಲಘು ಉಪಾಯದಿಂದಲೇ ಸಿದ್ಧಿಯನ್ನುಂಟುಮಾಡುತ್ತದೆ. ಮಾನವಜಾತಿಯ ಮನೋದೌರ್ಬಲ್ಯವನ್ನೂ ಧರ್ಮನಿಷ್ಠೆಯಲ್ಲಿ ಶ್ರದ್ಧೆಯ ಶೈಥಿಲ್ಯವನ್ನೂ ಅನುಲಕ್ಷಿಸಿ ಶ್ರೇಯಸ್ಸಿಗೆ ಸುಲಭೋಪಾಯವನ್ನು ತೋರಿಸಿಕೊಟ್ಟ ಪುರಾಣಕರ್ತೃಗಳಿಗೆ ನಾವು ಕೃತಜ್ಞರಾಗಿರಬೇಕು.

## ಅಧ್ಯಾತ್ಮ

ಪ್ರಥಮ ಸಂಪುಟದ ಉಪೋದ್ಘಾತದಲ್ಲಿ ವಿಷ್ಣುಪುರಾಣ ಪ್ರತಿಪಾದ್ಯವಾದ ಅಧ್ಯಾತ್ಮತತ್ತ್ವವನ್ನು ಸಂಕ್ಷೇಪವಾಗಿ ತಿಳಿಸಲಾಗಿದೆ. ಇದು ಔಪನಿಷದ ದರ್ಶನವೇ ಆಗಿದ್ದರೂ ಭಾಗವತ ಸಂಪ್ರದಾಯದ ಛಾಯೆ ಅಲ್ಲಲ್ಲಿ ಕಂಡು ಬರುತ್ತದೆ. ಉದಾಹರಣೆಗೆ,

**ಓಂ ನಮೋ ವಾಸುದೇವಾಯ ನಮಃ ಸಂಕರ್ಷಣಾಯ ಚ।**
**ಪ್ರದ್ಯುಮ್ನಾಯ ನಮಸ್ತುಭ್ಯಮನಿರುದ್ಧಾಯ ತೇ ನಮಃ॥**

(5-18-58)

ಈ ಶ್ಲೋಕದಲ್ಲಿ ಚತುರ್ವ್ಯೂಹದ ಕಲ್ಪನೆ ಸ್ಪಷ್ಟವಾಗಿದೆ. ಆದರೆ ಈ ವಾಸುದೇವಾದಿ ಮೂರ್ತಿಗಳು ಒಂದೇ ಪರತತ್ತ್ವದ ವಿಭಿನ್ನ ರೂಪಗಳೆಂದು ವಿಷ್ಣುಪುರಾಣವು ಪ್ರತಿಪಾದಿಸುತ್ತದೆ. ಈ ಶ್ಲೋಕವನ್ನು ನೋಡಿ—

**ಭೂತಾತ್ಮಾ ಚೇಂದ್ರಿಯಾತ್ಮಾ ಚ ಪ್ರಧಾನಾತ್ಮಾ ತಥಾ ಭವಾನ್।**
**ಆತ್ಮಾ ಚ ಪರಮಾತ್ಮಾ ಚ ತ್ವಮೇಕಃ ಪಂಚಧಾ ಸ್ಥಿತಃ॥**

(5-18-50)

ಸರ್ವಜ್ಞನೂ ಸರ್ವಶ್ರೇಷ್ಠನೂ ಆದ ಪರಮೇಶ್ವರನು ಪರಂಜ್ಯೋತಿಯ ಒಂದು ಅಂಶ—

**ಪರಂಜೋತಿರಚಿಂತ್ಯಂ ಯತ್ತದಂಶಃ ಪರಮೇಶ್ವರಃ॥**

(5-7-48)

**ಸೋಽಪ್ಯಂಶಃ ಸರ್ವಭೂತಸ್ಯ ಪರಮಾತ್ಮನಃ॥**

(6-4-36)

ಬಲರಾಮನೂ ಸಹ ವಸ್ತುತಃ ಭಗವಂತನೇ ಆಗಿದ್ದಾನೆ. ಜಗದ್ ವ್ಯವಹಾರಪಾಲನೆಗಾಗಿ ಬಲರಾಮನೆಂದೂ ಶ್ರೀಕೃಷ್ಣನೆಂದೂ ಎರಡು ವ್ಯಕ್ತಿಗಳಾಗಿ ಭಗವಂತನು ಅವತರಿಸಿದ್ದಾನೆ—ಎಂದು ವಿಷ್ಣುಪುರಾಣವು ಹೇಳುತ್ತದೆ—

**ಭವಾನಹಂ ಚ ವಿಶ್ವಾತ್ಮನ್ನೇಕಮೇವ ಚ ಕಾರಣಮ್।**
**ಜಗತೋಽಸ್ಯ ಜಗತ್ಯರ್ಥೇ ಭೇದೇನಾವಾಂ ವ್ಯವಸ್ಥಿತೌ॥**

(5-9-32)

ದೇವತೆಗಳೂ ಸಹ ಅರ್ಚಿಸುವುದು ಪರಬ್ರಹ್ಮದ ಸಗುಣರೂಪವನ್ನು; ಅವನ ಪರತತ್ತ್ವವನ್ನು ಯಾವನೂ ಅರಿಯನು—

**ಭವತೋ ಯತ್ಪರಂ ರೂಪಂ ತನ್ನ ಜಾನಾತಿ ಕಶ್ಚನ।**
**ಅವತಾರೇಷು ಯದ್ರೂಪಂ ತದರ್ಚಂತಿ ದಿವೌಕಸಃ॥**

(4-4-17)

**ಬ್ರಹ್ಮವಿಷ್ಣುಶಿವಾ ಬ್ರಹ್ಮನ್ ಪ್ರಧಾನಾ ಬ್ರಹ್ಮಶಕ್ತಯಃ॥**

(1-22-58)

ಇತ್ಯಾದಿ ವಾಕ್ಯಗಳಿಂದ ವಿಷ್ಣುವು ಪರಬ್ರಹ್ಮದ ಸಗುಣರೂಪವೆಂದೂ ಸ್ಫುಟವಾಗಿ ತಿಳಿದುಬರುತ್ತದೆ. ವಾಚಾಮಗೋಚರವಾದ ನಿರ್ಗುಣವೂ

ನಿರ್ವಿಶೇಷವೂ ಆದ ಪರಬ್ರಹ್ಮವನ್ನು 'ಭಗವಾನ್' ಎಂದು ಕರೆಯುವುದೂ ಸಹ ಔಪಚಾರಿಕವಾಗಿ—ಎಂದು ತಿಳಿಸುವ ಈ ಶ್ಲೋಕ ಗಮನಾರ್ಹವಾದದ್ದು:

**ಅಶಬ್ದಗೋಚರಸ್ಯಾಪಿ ತಸ್ಯ ವೈ ಬ್ರಹ್ಮಣೋ ದ್ವಿಜ।**
**ಪೂಜಾಯಾಂ ಭಗವಚ್ಛಬ್ದಃ ಕ್ರಿಯತೇ ಹ್ಯುಪಚಾರತಃ॥**

(6-5-71)

ಜ್ಞೇಯವಾದ ಪರಬ್ರಹ್ಮವು ನಾಮಜಾತ್ಯಾದಿರಹಿತವೂ ಸತ್ತಾ ಮಾತ್ರಾತ್ಮಕವೂ ಜ್ಞಾನಸ್ವರೂಪವೂ ಆದದ್ದು—

**ನ ಸಂತಿ ಯತ್ರ ಸರ್ವೇಶೇ ನಾಮಜಾತ್ಯಾದಿಕಲ್ಪನಾಃ।**
**ಸತ್ತಾಮಾತ್ರಾತ್ಮಕೇ ಜ್ಞೇಯೇ ಜ್ಞಾನಾತ್ಮನ್ಯಾತ್ಮನಃ ಪರೇ॥**

(6-4-37)

## ಮೋಕ್ಷಸ್ವರೂಪ

ಆತ್ಯಂತಿಕ ಪ್ರಳಯವನ್ನು ಮೋಕ್ಷವೆಂದು ವಿಷ್ಣುಪುರಾಣವು ಹೇಳಿದೆ. ಆತ್ಯಂತಿಕ ಎಂದರೆ ಕಡೆಯದಾಗಿ—ಪುನರ್ಜನ್ಮವೇ ಇಲ್ಲದಂತೆ—ಪರಬ್ರಹ್ಮದಲ್ಲಿ ಪೂರ್ಣವಾಗಿ ಲಯಿಸುವುದು ಎಂದರ್ಥ. ನೀರಲ್ಲಿ ನೀರು ಸೇರಿದಂತೆ ಸೇರಿ ಹೋಗುವುದು. ಇನ್ನೊಂದು ವಸ್ತುವಿನಲ್ಲಿ ಭಿನ್ನವಾದ ಮತ್ತೊಂದು ವಸ್ತು ಸಂಪೂರ್ಣವಾಗಿ ಲಯಿಸುವುದು ಶಕ್ಯವಾದ್ದಲ್ಲ. ನೀರಿನೊಡನೆ ಇನ್ನೊಂದು ನೀರು ಸೇರಿದಾಗ ಮೊದಲಿದ್ದ ನೀರು ಪ್ರಮಾಣದಲ್ಲಿ ಹಿಗ್ಗುತ್ತದೆ. ಹಾಗೆ ಬ್ರಹ್ಮವಸ್ತು ಹಿಗ್ಗುವಂತಹುದಲ್ಲ. ಆದ್ದರಿಂದ 'ಅಹಂ ಬ್ರಹ್ಮಾಸ್ಮಿ' ಎಂಬ ಸಮ್ಯಗ್ದರ್ಶನವೇ ಮೋಕ್ಷವೆಂದು ಸಿದ್ಧವಾಗುತ್ತದೆ.

## ಸಾಧನಮಾರ್ಗ

ಮಾನವನ ಜನನ ಮರಣಗಳಿಗೆ ಆತನ ಪಾಪಪುಣ್ಯಗಳೇ ನಿಮಿತ್ತ. ಜನನವೆಂದರೆ ಶರೀರಗ್ರಹಣವಷ್ಟೆ. ಶರೀರವು ಭೋಗಾಯತನ. ಪಾಪ ಪುಣ್ಯಗಳ ಫಲಾನುಭವವೇ ಭೋಗ. ಇವೆರಡರ ಸಂಬಂಧ ಕಳಚಿದಾಗ ಮೋಕ್ಷವು ಸ್ವತಃಸಿದ್ಧ—

**ಕ್ಷೀಣಾಧಿಕಾರಃ ಸ ಯದಾ ಪುಣ್ಯಪಾಪವಿವರ್ಜಿತಃ।**
**ತದಾ ಸ ಭಗವದ್ ಧ್ಯಾನಾತ್ ಪರಂ ನಿರ್ವಾಣಮಾಪ್ತವಾನ್॥**

(1-21-34)

ಎಂಬುದಾಗಿ ಪ್ರಹ್ಲಾದನು ಮೋಕ್ಷ ಹೊಂದಿದ ಪ್ರಕಾರವನ್ನು ವರ್ಣಿಸಲಾಗಿದೆ. ಅಂತೆಯೇ ಕೇಶಿಧ್ವಜನು ಜ್ಞಾನಿಯಾಗಿದ್ದರೂ ಸ್ವಕರ್ಮಕ್ಷಪಣೋನ್ಮುಖನಾಗಿ ಫಲಾಭಿಸಂಧಿಯಿಲ್ಲದೆ ಕರ್ಮವನ್ನಾಚರಿಸುತ್ತ ಆತ್ಯಂತಿಕಸಿದ್ಧಿಯನ್ನು ಪಡೆದಿದ್ದಾನೆ. 'ಭಗವದ್ ಧ್ಯಾನಾತ್' ಎಂದು ಮೇಲೆ ಹೇಳಿದೆಯಷ್ಟೆ. ಈ ಧ್ಯಾನಪ್ರಕಾರ ಹೇಗೆಂಬುದನ್ನು ಖಾಂಡಿಕ್ಯಜನಕ–ಕೇಶಿಧ್ವಜರ ಸಂವಾದದಲ್ಲಿ ಬಹುಸುಂದರವಾಗಿ ನಿರೂಪಿಸಲಾಗಿದೆ. ಆರನೆಯ ಅಂಶದ ಏಳನೆಯ ಅಧ್ಯಾಯದಲ್ಲಿ ಬರುವ ಕೇಶಿಧ್ವಜನ ಉಪದೇಶಸಾರ ಹೀಗಿದೆ:

"ವಿಷ್ಣುವಿನ ಪರಮಾರ್ಥಸ್ವರೂಪವು ಬ್ರಹ್ಮಸಂಜ್ಞಿತಜ್ಞಾನವಾಗಿದ್ದು, ಧ್ಯಾನಕ್ಕೆ ಸುಲಭವಾದ್ದಲ್ಲ. ಅದು—

**ಪ್ರತ್ಯಸ್ತಮಿತಭೇದಂ ಯತ್ ಸತ್ತಾಮಾತ್ರಮಗೋಚರಮ್।**
**ವಚಸಾಮಾತ್ಮಸಂವೇದ್ಯಂ ತಜ್ಜ್ಞಾನಂ ಬ್ರಹ್ಮಸಂಜ್ಞಿತಮ್॥**

(6-7-53)

ಇದು ಶ್ರೇಷ್ಠವಾದ ವಿಷ್ಣುಶಕ್ತಿ. ಇದರ ಇನ್ನೊಂದು ಶಕ್ತಿ ಕ್ಷೇತ್ರಜ್ಞ (ಜೀವಾತ್ಮ) ಎನಿಸುತ್ತದೆ. ಮೂರನೆಯದು 'ಅವಿದ್ಯಾಶಕ್ತಿ'. ಈ ಅವಿದ್ಯಾಶಕ್ತಿಯಿಂದ ಕ್ಷೇತ್ರಜ್ಞಶಕ್ತಿಯು ಆವೃತವಾಗಿರುತ್ತದೆ. ಈ ಕ್ಷೇತ್ರಜ್ಞನು ಸರ್ವಭೂತಗಳಲ್ಲಿಯೂ ತಾರತಮ್ಯದಿಂದ ವ್ಯವಸ್ಥಿತನಾಗಿದ್ದಾನೆ. ಅಮೂರ್ತವೂ ಸತ್ಪದವಾಚ್ಯವೂ ಆದ ಸ್ವರೂಪವು ಸಿದ್ಧರಾದ ಯೋಗಿಗಳಿಗೆ ಮಾತ್ರ ಧ್ಯೇಯವಾಗಿದೆ. ಸಾಧಕನಾದವನು ಭಗವಂತನ ಮೂರ್ತರೂಪವನ್ನು ಮೊದಲು ಧ್ಯಾನಿಸುತ್ತಿರಬೇಕು. ಅದು ಅಷ್ಟಭುಜವುಳ್ಳ ಅಥವಾ ಚತುರ್ಭುಜವುಳ್ಳ ವಿಷ್ಣುವಿನ ಸುಂದರಮೂರ್ತಿಯಾಗಿರಬೇಕು. ಆ ಮೂರ್ತಿಯು ಶಂಖ ಚಕ್ರ ಗದಾದಿಗಳಿಂದ ಭೂಷಿತವಾಗಿರತಕ್ಕದ್ದು. ಇಂತಹ ಮೂರ್ತಿಯಲ್ಲಿ ಚಿತ್ತ ಧಾರಣೆಯು ದೃಢವಾದ ಮೇಲೆ ಶಂಖ ಚಕ್ರ ಗದಾದ್ಯಾಯುಧ ರಹಿತವೂ ಅಕ್ಷಸೂತ್ರ ಸಹಿತವೂ ಆದ ಮೂರ್ತಿಯನ್ನು ಧ್ಯಾನಿಸತಕ್ಕದ್ದು. ಅದರಲ್ಲಿ

ಧಾರಣೆಯು ಮತ್ತೂ ದೃಢವಾದಮೇಲೆ ಸರ್ವಭೂಷಣರಹಿತವಾದ ಏಕಾವಯವನಾದ ಅಖಂಡಮೂರ್ತಿಯ ಧ್ಯಾನದಲ್ಲಿ ತೊಡಗಬೇಕು. ಅನಂತರ ಅವಯವರಹಿತವಾದ ಆತ್ಮಸ್ವರೂಪದಲ್ಲಿ ಮನಸ್ಸನ್ನು ದೃಢಗೊಳಿಸಬೇಕು. ಕಲ್ಪನಾಹೀನವಾದ ಸ್ವರೂಪದಲ್ಲಿ ಮನಸ್ಸನ್ನು ಲಯಗೊಳಿಸುವುದು ಸಮಾಧಿ ಎನಿಸುತ್ತದೆ. ಈ ಸಮಾಧಿಸ್ಥಿತಿಯಲ್ಲಿ ಭಗವತ್ ಸ್ವರೂಪದ ಸಾಕ್ಷಾತ್ಕಾರವಾಗುತ್ತದೆ. ಆಗ ಈತನು ಕೃತಕೃತ್ಯನಾಗುತ್ತಾನೆ. ತದ್ಭಾವಭಾವವನ್ನು ಹೊಂದಿ ಪರಮಾತ್ಮನೊಡನೆ ಅಭಿನ್ನನಾಗಿ ನೆಲೆಸುವುದೇ ಮುಕ್ತಿ. ಪರಮಾತ್ಮನಿಗೂ ತನಗೂ ಭೇದವನ್ನು ತಿಳಿದುಕೊಂಡಿರುವುದು ಅಜ್ಞಾನಕೃತ. ಈ ಅಜ್ಞಾನ ನಷ್ಟವಾದಮೇಲೆ ಭೇದಜ್ಞಾನ ಉಳಿಯುವುದೇ ಇಲ್ಲ—

**ವಿಭೇದಜನಕೇಽಜ್ಞಾನೇ ನಾಶಮಾತ್ಯಂತಿಕಂ ಗತೇ।**
**ಆತ್ಮನೋ ಬ್ರಹ್ಮಣೋ ಭೇದಮಸಂತಂ ಕಃ ಕರಿಷ್ಯತಿ॥**
(6-7-96)

ಲೋಕವ್ಯವಹಾರವು ಮಾತ್ರ 'ನಾನು, ನನ್ನದು' ಎಂಬ ಅವಿದ್ಯಾ ಮೂಲಕವಾದ ಭೇದಜ್ಞಾನದಿಂದ ನಡೆಯುತ್ತದೆ—

**ಅಹಂ ಮಮೇತ್ಯವಿದ್ಯೇಯಂ ವ್ಯವಹಾರಸ್ತಥಾನಯೋಃ।**
**ಪರಮಾರ್ಥಸ್ತ್ವಸಂಲೋಪ್ಯೋ ಗೋಚರೇ ವಚಸಾಂ ನ ಯಃ॥**
(6-7-100)

ಭಗವದ್ಭಕ್ತಿ , ನಿಷ್ಕಾಮಕರ್ಮ—ಇವೆರಡು ಜ್ಞಾನಕ್ಕೆ ಸಾಧನಗಳೆಂದು ವಿಷ್ಣುಪುರಾಣವು ಪ್ರತಿಪಾದಿಸುತ್ತದೆ.

## ಕೃತಜ್ಞತಾ ಸಮರ್ಪಣೆ

ಈ ದ್ವಿತೀಯ ಸಂಪುಟದೊಡನೆ ಸಮಗ್ರ ಶ್ರೀವಿಷ್ಣುಪುರಾಣದ ಅನುವಾದವು ಸಂಪೂರ್ಣವಾಗುತ್ತದೆ. ಈ ಕಾರ್ಯವು ನನ್ನಿಂದ ಸಾಧ್ಯವಾಗುತ್ತದೆಯೆಂದು ನಾನು ಎಣಿಸಿರಲಿಲ್ಲ. ಇದು ಸಾಧ್ಯವಾದದ್ದು ಶ್ರೀರಾಮಕೃಷ್ಣ ಪರಮಹಂಸರ ಕೃಪಾದೃಷ್ಟಿಯಿಂದಲೇ ಸರಿ. ಈ ಪ್ರಕಾರದಲ್ಲಿ ಭಗವತ್ ಸೇವೆಯ ಒಂದು ಅವಕಾಶವನ್ನು ಅವರು ನನಗೆ ಅನುಗ್ರಹಿಸಿದ್ದಾರೆ.

ಬೆಂಗಳೂರು ಶ್ರೀರಾಮಕೃಷ್ಣಾಶ್ರಮದ ಅಧ್ಯಕ್ಷರಾದ ಪೂಜ್ಯ ಶ್ರೀ ಚಿದಾನಂದ ಸ್ವಾಮೀಜಿಯವರು ಈ ಅನುವಾದವನ್ನು ಮಾಡಿಕೊಂಡುವಂತೆ ಪ್ರೋತ್ಸಾಹಿಸಿ ಎಲ್ಲ ವಿಧದಲ್ಲೂ ಸಹಕಾರ ಹಸ್ತವನ್ನು ನೀಡಿದ್ದಾರೆ. ಅವರ ಬೆಂಬಲವೇ ಕಷ್ಟದ ಈ ದಾರಿಯನ್ನು ನಡೆಯಲು ಊರುಗೋಲಾಯಿತು. ಬೋಧಪ್ರದವಾದ ಪುಣ್ಯಗ್ರಂಥಗಳನ್ನು ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರಿಸಿ ಪ್ರಕಟಿಸಬೇಕೆಂಬ ಅವರ ತ್ರೀವ್ರವಾದ ಆಸಕ್ತಿ ಪ್ರಶಂಸನೀಯವಾದದ್ದು. ಸಮಸ್ತ ಕನ್ನಡಿಗರೂ ಈ ಮಹನೀಯರಿಗೆ ಕೃತಜ್ಞರಾಗಿರಬೇಕು.

ಮಾನ್ಯ ಮಿತ್ರರಾದ ವಿದ್ವಾನ್ ಎಸ್. ಎ. ರಾಮಚಂದ್ರಭಟ್ಟರಿಂದಾದ ಉಪಕಾರವು ನನಗೆ ಸದಾ ಸ್ಮರಣೀಯವಾಗಿದೆ. ಬರವಣಿಗೆ, ಕರಡುಗಳ ಶೋಧನೆ ಮುಂತಾದ ಕಾರ್ಯಗಳಲ್ಲಿ ಅವರು ನನಗೆ ತುಂಬ ಸಹಾಯವನ್ನು ನೀಡಿದ್ದಾರೆ. ಈ ಅವ್ಯಾಜ ಬಂಧುಗಳ ನೆರವನ್ನು ನೆನೆಸಿಕೊಳ್ಳುತ್ತಿದ್ದೇನೆ.

ಪ್ರಥಮ ಸಂಪುಟದಲ್ಲಿ ನನ್ನ ನೇತ್ರದೋಷದಿಂದ ಮುದ್ರಣದೋಷಗಳು ಅಲ್ಲಲ್ಲಿ ಉಳಿದುಕೊಂಡಿದ್ದವು. ಈ ಸಂಪುಟದಲ್ಲಿ ಅಂತಹ ದೋಷ ಬಹಳ ಮಟ್ಟಿಗೆ ಸಂಭವಿಸಿಲ್ಲವೆಂದು ನನ್ನ ವಿಶ್ವಾಸ. ಈ ಗ್ರಂಥವನ್ನು ಅಚ್ಚುಕಟ್ಟಾಗಿ ಶ್ರದ್ಧೆಯಿಂದ ಮುದ್ರಿಸಿಕೊಟ್ಟ ಶ್ರೀ ನಿತ್ಯಾನಂದ ಪ್ರಿಂಟರ್ಸ್, ಬೆಂಗಳೂರು ಇವರಿಗೆ ನನ್ನ ವಂದನೆಗಳು ಸಲ್ಲುತ್ತವೆ.

**ಕರ್ಣಾಟಭಾಷಯಾ ವಿಷ್ಣೋಃ ಪುರಾಣಂ ಯದನೂದಿತಮ್ ।**
**ಪ್ರೀಯತಾಂ ತೇನ ಸರ್ವಾತ್ಮಾ ವಿಶ್ವರೂಪಧರೋ ಹರಿಃ ॥**

ಬೆಂಗಳೂರು
ವಿಭವ ಸಂವತ್ಸರದ ಜನಿ ಜ್ಯೇಷ್ಠ ಶುದ್ಧ ದಶಮೀ — **ಎನ್. ರಂಗನಾಥಶರ್ಮಾ**
ತಾ. 24-6-1988 — ಅನುವಾದಕ

# ವಿಷಯಾನುಕ್ರಮಣಿಕೆ

## ಪಂಚಮಾಂಶ

## ಷಷ್ಠಾಂಶ

ಓಂ

ಶ್ರೀಮನ್ನಾರಾಯಣಾಯ ನಮಃ

# ಶ್ರೀವಿಷ್ಣುಪುರಾಣಮ್

## ಚತುರ್ಥಾಂಶಃ

### ಪ್ರಥಮೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಭಗವನ್ ಯನ್ನರೈಃ ಕಾರ್ಯಂ ಸಾಧುಕರ್ಮಣ್ಯವಸ್ಥಿತೈಃ।**
**ತನ್ಮಹ್ಯಂ ಗುರುಣಾಽಽಖ್ಯಾತಂ ನಿತ್ಯನೈಮಿತ್ತಿಕಾತ್ಮಕಮ್॥** 1
**ವರ್ಣಧರ್ಮಾಸ್ತಥಾಽಽಖ್ಯಾತಾ ಧರ್ಮಾ ಯೇ ಚಾಶ್ರಮೇಷು ಚ।**
**ಶ್ರೋತುಮಿಚ್ಛಾಮ್ಯಹಂ ವಂಶಂ**
**ರಾಜ್ಞಾಂ ತದ್ ಬ್ರೂಹಿ ಮೇ ಗುರೋ॥** 2

---

## ಚತುರ್ಥಾಂಶ

### ಅಧ್ಯಾಯ 1

ವೈವಸ್ವತಮನುವಿನ ವಂಶ. ರೈವತನು ತನ್ನ ಮಗಳಾದ ರೇವತಿಯೊಡನೆ ವರಾನ್ವೇಷಣೆಗಾಗಿ ಬ್ರಹ್ಮಲೋಕಕ್ಕೆ ಹೋಗುವುದು. ಬಲರಾಮನು ರೇವತಿಯನ್ನು ಮದುವೆಯಾಗುವುದು.

ಮೈತ್ರೇಯರು ಪರಾಶರಮುನಿಗಳನ್ನು ಕುರಿತು "ಭಗವನ್, ಸನ್ಮಾರ್ಗದಲ್ಲಿ ಪ್ರವೃತ್ತರಾದ ಜನರು ಆಚರಿಸಬೇಕಾದ ನಿತ್ಯನೈಮಿತ್ತಿಕಕರ್ಮಗಳನ್ನು ನನಗೆ ಹೇಳಿದ್ದೀರಿ. ಹಾಗೆಯೇ ವರ್ಣಾಶ್ರಮಧರ್ಮಗಳನ್ನೂ ತಿಳಿಸಿಕೊಟ್ಟಿದ್ದೀರಿ. ಗುರುಗಳೆ, ಈಗ (ಮನುವಂಶದಲ್ಲಿ ಜನಿಸಿದ) ರಾಜರ ವಂಶಾವಳಿಯನ್ನು ಕೇಳಲು ಅಪೇಕ್ಷಿಸುತ್ತೇನೆ. ಅದನ್ನು ಹೇಳೋಣವಾಗಬೇಕು" ಎಂದರು (1-2).

*ಶ್ರೀಪರಾಶರ ಉವಾಚ:*

**ಮೈತ್ರೇಯ, ಶ್ರೂಯತಾಮಯಮನೇಕಯಜ್ವಶೂರವೀರಧೀರ ಭೂಪಾಲಾಲಂಕೃತೋ ಬ್ರಹ್ಮಾದಿರ್ಮಾನವೋ ವಂಶಃ ॥ 3 ॥ ತದಸ್ಯ ವಂಶಸ್ಯಾನುಪೂರ್ವೀಮಶೇಷವಂಶಪಾಪಪ್ರಣಾಶನಾಯ ಮೈತ್ರೇಯೈತಾಂ ಕಥಾಂ ಶೃಣು ॥ 4 ॥ ತದ್ಯಥಾ ಸಕಲಜಗತಾಮಾದಿರನಾದಿಭೂತಸ್ಯ ಋಗ್ಯಜುಸ್ಸಾಮಾದಿಮಯೋ ಭಗವಾನ್ ವಿಷ್ಣುಸ್ತಸ್ಯ ಬ್ರಹ್ಮಣೋ ಮೂರ್ತಂ ರೂಪಂ ಹಿರಣ್ಯಗರ್ಭೋ ಬ್ರಹ್ಮಾಂಡಭೂತೋ ಬ್ರಹ್ಮಾ ಭಗವಾನ್ ಪ್ರಾಗ್ಬಭೂವ ॥ 5 ॥ ಬ್ರಹ್ಮಣಶ್ಚ ದಕ್ಷಿಣಾಂಗುಷ್ಠಜನ್ಮಾ ದಕ್ಷ-ಪ್ರಜಾಪತಿಃ ದಕ್ಷಸ್ಯಾಪ್ಯದಿತಿರದಿತೇರ್ವಿವಸ್ವಾನ್ ವಿವಸ್ವತೋ ಮನುಃ ॥ 6 ॥ ಮನೋರಿಕ್ಷ್ವಾಕುನೃಗಧೃಷ್ಟಶರ್ಯಾತಿನರಿಷ್ಯಂತಪ್ರಾಂಶುನಾಭಾಗದಿಷ್ಟ - ಕರೂಷಪೃಷಧ್ರಾಖ್ಯಾ ದಶ ಪುತ್ರಾ ಬಭೂವುಃ ॥ 7 ॥ ಇಷ್ಟಿಂ ಚ ಮಿತ್ರಾವರುಣಯೋಃ ಮನುಃ ಪುತ್ರಕಾಮಶ್ಚಕಾರ ॥ 8 ॥ ತತ್ರ ತಾವ-**

---

ಆಗ ಪರಾಶರಮುನಿಗಳು ಹೇಳತೊಡಗಿದರು: ಮೈತ್ರೇಯ, ಯಜ್ಞಕರ್ತರೂ ಶೂರವೀರಧೀರರೂ ಆದ ಅನೇಕ ಭೂಪಾಲರು ಅಲಂಕರಿಸಿದ ಮನುವಂಶದ ವೃತ್ತಾಂತವನ್ನಾಲಿಸು. ಈ ವಂಶಕ್ಕೆ ಬ್ರಹ್ಮದೇವನೇ ಆದಿ (3). ಈ ಮನುವಂಶ ಪರಂಪರೆಯ ಕಥೆಯು, ಅದನ್ನು ಕೇಳತಕ್ಕವನ ವಂಶದವರ ಸಮಸ್ತ ಪಾಪ ಗಳನ್ನೂ ಪರಿಹರಿಸುತ್ತದೆ (4). ಸಮಸ್ತ ಜಗತ್ತುಗಳಿಗೂ ಆದಿಕಾರಣನಾದವನು ಭಗವಾನ್ ವಿಷ್ಣು. ಆತನು ಅನಾದಿಯೂ ಋಗ್ಯಜುಃಸಾಮಾದಿವೇದ ಸ್ವರೂಪನೂ ಆಗಿದ್ದಾನೆ. ಆ ಬ್ರಹ್ಮವಸ್ತುವಿನ ಮೂರ್ತಸ್ವರೂಪನಾಗಿ ಭಗವಾನ್ ಬ್ರಹ್ಮದೇವನು ಮೊದಲು ಆವಿರ್ಭವಿಸಿದನು. ಆತನೇ ಬ್ರಹ್ಮಾಂಡಸ್ವರೂಪನಾದ ಹಿರಣ್ಯಗರ್ಭ (5). ಆ ಬ್ರಹ್ಮದೇವನ ಬಲಗೈಹೆಬ್ಬೆಟ್ಟಿನಿಂದ ದಕ್ಷಪ್ರಜಾಪತಿಯೂ ದಕ್ಷನಿಂದ ಅದಿತಿಯೂ ಅದಿತಿಯಲ್ಲಿ ವಿವಸ್ವಂತನೂ (ಸೂರ್ಯ) ಆತನಿಂದ ಮನುವೂ ಜನಿಸಿದರು (6). ಮನುವಿಗೆ ಇಕ್ಷ್ವಾಕು, ನೃಗ, ಧೃಷ್ಟ, ಶರ್ಯಾತಿ, ನರಿಷ್ಯಂತ, ಪ್ರಾಂಶು, ನಾಭಾಗ, ದಿಷ್ಟ, ಕರೂಷ ಮತ್ತು ಪೃಷಧ್ರ—ಎಂಬ ಹತ್ತುಮಂದಿ ಪುತ್ರರು ಜನಿಸಿದರು (7). (ಅವರು ಜನಿಸುವುದಕ್ಕೆ ಮೊದಲು) ಮನುವು ಪುತ್ರಕಾಮನೆಯಿಂದ ಮಿತ್ರಾವರುಣರೆಂಬ ದೇವತೆಗಳನ್ನುದ್ದೇಶಿಸಿ

**ದಪಹ್ನುತೇ ಹೋತುರಪಚಾರಾದಿಲಾ ನಾಮ ಕನ್ಯಾ ಬಭೂವ ॥ 9 ॥ ಸೈವ ಚ ಮಿತ್ರಾವರುಣಯೋಃ ಪ್ರಸಾದಾತ್ಸುದ್ಯುಮ್ನೋ ನಾಮ ಮನೋಃ ಪುತ್ರೋ ಮೈತ್ರೇಯ ಆಸೀತ್ ॥ 10 ॥ ಪುನಶ್ಚೇಶ್ವರಕೋಪಾತ್ ಸ್ತ್ರೀ ಸತೀ ಸಾ ತು ಸೋಮಸೂನೋರ್ಬುಧಸ್ಯಾಶ್ರಮಸಮೀಪೇ ಬಭ್ರಾಮ ॥ 11 ॥ ಸಾನುರಾಗಶ್ಚ ತಸ್ಯಾಂ ಬುಧಃ ಪುರೂರವಸಮಾತ್ಮಜಮುತ್ಪಾದಯಾ-ಮಾಸ ॥ 12 ॥ ಜಾತೋಽಪಿ ತಸ್ಮಿನ್ನಮಿತತೇಜೋಭಿಃ ಪರಮರ್ಷಿಭಿ-ರಿಷ್ಟಿಮಯ ಋಙ್ಮಯೋ ಯಜುರ್ಮಯಸ್ಸಾಮಮಯೋಽಥ-ರ್ವಣಮಯಸ್ಸರ್ವವೇದಮಯೋ ಮನೋಮಯೋ ಜ್ಞಾನಮಯೋ**

---

ಒಂದು ಇಷ್ಟಿಯನ್ನು ಮಾಡಿದ್ದನು (8). ಅದರಲ್ಲಿ ಹೋತೃವಾದ ಋತ್ವಿಜನು ಸಂಕಲ್ಪಮಾಡುವಾಗ ಒಂದು ತಪ್ಪನ್ನು* ಎಸಗಿದ್ದರಿಂದ ಮನುವಿಗೆ ಇಳಾ ಎಂಬ ಕನ್ಯೆ ಹುಟ್ಟಿದಳು. ಅವಳೇ ಪುನಃ ಮಿತ್ರಾವರುಣರ ಅನುಗ್ರಹದಿಂದ ಗಂಡಾಗಿ ಸುದ್ಯುಮ್ನ ಎಂಬ ಹೆಸರಿನಿಂದ ಮನುವಿನ ಮಗನಾದಳು! (9-10). ಮತ್ತೆ ಈಶ್ವರನ ಕೋಪಕ್ಕೆ ಈಡಾಗಿ ಅವನ ಶಾಪದಿಂದ§ ಹೆಂಗಸಾದಳು! ಹೆಂಗಸಾದ ಇಳೆಯು ಚಂದ್ರಪುತ್ರನಾದ ಬುಧನ ಆಶ್ರಮಸಮೀಪದಲ್ಲಿ ಒಮ್ಮೆ ತಿರುಗಾಡು ತ್ತಿದ್ದಳು. ಬುಧನು ಅವಳಲ್ಲಿ ಅನುರಕ್ತನಾಗಿ ಪುರೂರವಸ್ಸೆಂಬ ಪುತ್ರನನ್ನು ಪಡೆದನು (11-12). ಪುರೂರವನು ಹುಟ್ಟಿದಮೇಲೆ (ಇಳೆಯು ಪುರುಷನಾಗ ಲೆಂದು ಹಾರೈಸುತ್ತಿದ್ದ) ತೇಜಸ್ವಿಗಳಾದ ಮಹರ್ಷಿಗಳು ಆ ಉದ್ದೇಶದಿಂದ ಒಂದು ಯಾಗವನ್ನು ನಡೆಸಿದರು. ಯಾಗದಿಂದ ಸಂಪ್ರೀತನಾದ ಋಙ್ಮಯನೂ ಯಜುರ್ಮಯನೂ ಸಾಮಮಯನೂ ಅಥರ್ವಮಯನೂ ಸರ್ವವೇದ

---

* ಮನುವಿನ ಪತ್ನಿಯು ತನಗೆ ಹೆಣ್ಣುಮಗಳು ಬೇಕೆಂದು ಹೋತೃವಿಗೆ ತಿಳಿಸಿದಳು. ಅದರಂತೆ ಹೋತೃವು ಸಂಕಲ್ಪ ಮಾಡಿದನು. ಅದೇ ತಪ್ಪಾಯಿತು—ಎಂದು ಭಾಗವತ ದಲ್ಲಿದೆ.

§ ಇಳಾವೃತದ ಉದ್ಯಾನದಲ್ಲಿ ಶಿವನು ಪಾರ್ವತಿಯೊಂದಿಗೆ ವಿಹರಿಸುತ್ತಿದ್ದಾಗ ಅಕಸ್ಮಾತ್ ಕೆಲವು ಋಷಿಗಳು ಬಂದರು. ಪಾರ್ವತಿಯು ನಾಚಿಕೆಯಿಂದ ಮರೆಯಾದಳು. ಅನಂತರ ಕುಪಿತಳಾಗಿದ್ದ ಪಾರ್ವತಿಯನ್ನು ಸಂತೈಸಲು ಶಿವನು 'ಈ ಉದ್ಯಾನಕ್ಕೆ ಗಂಡಸರು ಪ್ರವೇಶಿಸಿದರೆ ಅವರು ಸ್ತ್ರೀಯರಾಗಲಿ' ಎಂದು ಶಪಿಸಿದನು. ಸುದ್ಯುಮ್ನನು ತಿಳಿಯದೆ ಅಲ್ಲಿಗೆ ಹೋದದ್ದರಿಂದ ಸ್ತ್ರೀಯಾದನು.

**ನ ಕಿಂಚಿನ್ಮಯೋಽನ್ನಮಯೋ ಭಗವಾನ್ ಯಜ್ಞಪುರುಷಸ್ವರೂಪೀ ಸುದ್ಯುಮ್ನಸ್ಯ ಪುಂಸ್ತ್ವಮಖಿಲಷದ್ಭಿರ್ಯಥಾವದಿಷ್ಟಸ್ತತ್ಪ್ರಸಾದಾದಿಲಾ ಪುನ-ರಪಿ ಸುದ್ಯುಮ್ನೋಽಭವತ್ ॥ 13 ॥ ತಸ್ಯಾಪ್ಯುತ್ಕಲಗಯವಿನತಾಸ್ತ್ರಯಃ ಪುತ್ರಾ ಬಭೂವುಃ ॥ 14 ॥ ಸುದ್ಯುಮ್ನಸ್ತು ಸ್ತ್ರೀಪೂರ್ವಕತ್ವಾದ್ರಾಜ್ಯಭಾಗಂ ನ ಲೇಭೇ ॥ 15 ॥ ತತ್ಪಿತ್ರಾ ತು ವಸಿಷ್ಠವಚನಾತ್ಪ್ರತಿಷ್ಠಾನಂ ನಾಮ ನಗರಂ ಸುದ್ಯುಮ್ನಾಯ ದತ್ತಂ ತಚ್ಚಾಸೌ ಪುರೂರವಸೇ ಪ್ರಾದಾತ್ ॥ 16 ॥ ತದ-ನ್ವಯಾಶ್ಚ ಕ್ಷತ್ರಿಯಾಸ್ಸರ್ವೇ ದಿಕ್ಷ್ವಭವನ್। ಪೃಷಧ್ರುಸ್ತು ಮನುಪುತ್ರೋ ಗುರುಗೋವಧಾಚ್ಛೂದ್ರತ್ವಮಗಮತ್ ॥ 17 ॥ ಮನೋಃ ಪುತ್ರಃ ಕರೂಷಃ ಕರೂಷಾತ್ಕಾರೂಷಾಃ ಕ್ಷತ್ರಿಯಾ ಮಹಾಬಲಪರಾಕ್ರಮಾ ಬಭೂವುಃ ॥ 18 ॥ ದಿಷ್ಟಪುತ್ರಸ್ತು ನಾಭಾಗೋ ವೈಶ್ಯತಾಮಗಮತ್ ತಸ್ಮಾದ್ಬಲಂಧನಃ**

---

ಮಯನೂ ಅನ್ನಮಯನೂ ಮನೋಮಯನೂ ಜ್ಞಾನಮಯನೂ ಪರಮಾರ್ಥದಲ್ಲಿ ಅಕಿಂಚಿನ್ಮಯನೂ ಯಜ್ಞಪುರುಷಸ್ವರೂಪನೂ ಆದ ಭಗವಂತನ ಕೃಪೆಯಿಂದ ಮತ್ತೆ ಆ ವ್ಯಕ್ತಿ ಸುದ್ಯುಮ್ನನಾದನು! (13). ಸುದ್ಯುಮ್ನನಿಗೆ ಉತ್ಕಲ, ಗಯ, ವಿನತರೆಂಬ ಮೂವರು ಪುತ್ರರು ಹುಟ್ಟಿದರು. ಸುದ್ಯುಮ್ನನು ಮೊದಲು ಸ್ತ್ರೀಯಾಗಿದ್ದುದರಿಂದ ತಂದೆಯ ರಾಜ್ಯಭಾಗವನ್ನು ಪಡೆಯಲಿಲ್ಲ. ವಸಿಷ್ಠರ ಮಾತಿನಂತೆ ತಂದೆಯು ಸುದ್ಯುಮ್ನನಿಗೆ ಪ್ರತಿಷ್ಠಾನವೆಂಬ ನಗರವನ್ನು ಕೊಟ್ಟರೂ ಆತನು ಅದನ್ನು ಪುರೂರವನಿಗೆ ಕೊಟ್ಟುಬಿಟ್ಟನು (14-16). ಪುರೂರವನ ವಂಶದಲ್ಲಿ ಹುಟ್ಟಿದ ಕ್ಷತ್ರಿಯರು ಎಲ್ಲ ದಿಕ್ಕುಗಳಲ್ಲಿಯೂ ಹರಡಿದರು. ಮನುಪುತ್ರನಾದ ಇನ್ನೊಬ್ಬ ಪೃಷಧ್ರನು ಗುರುವಿನ ಗೋವನ್ನು ವಧಿಸಿದ್ದರಿಂದ* ಶೂದ್ರನಾದನು. ಮನುವಿಗೆ ಕರೂಷನೆಂಬ ಮಗನಿದ್ದನಷ್ಟೇ. ಆತನಿಂದ ಜನಿಸಿದವರು ಕಾರೂಷರೆಂಬ ಕ್ಷತ್ರಿಯರೆನಿಸಿ ಮಹಾಬಲಪರಾಕ್ರಮಯುಕ್ತರಾದರು (17-18). ದಿಷ್ಟಪುತ್ರನಾದ ನಾಭಾಗನಿಗೆ ಬಲಂಧನ ಎಂಬ ಪುತ್ರನು ಜನಿಸಿದನು. ಅನಂತರ ನಾಭಾಗನು (ವೃತ್ತಿಯಿಂದ) ವೈಶ್ಯನಾದನು.

* ಪೃಷಧ್ರನು ಗುರುವಿನ ಆಜ್ಞೆಯಂತೆ ಗೋಪಾಲನೆಯಲ್ಲಿ ನಿರತನಾಗಿದ್ದನು. ಒಂದು ದಿನ ಕೊಟ್ಟಿಗೆಯಲ್ಲಿ ಹುಲಿಯು ಪ್ರವೇಶಿಸಿತು. ಅದನ್ನು ಕೊಲ್ಲುವುದಕ್ಕಾಗಿ ಪೃಷಧ್ರನು ಬಾಣವನ್ನು ಪ್ರಯೋಗಿಸಿ ಪ್ರಮಾದದಿಂದ ಗೋವನ್ನು ಕೊಂದುಬಿಟ್ಟನು.

**ಪುತ್ರೋಽಭವತ್ ॥ 19 ॥ ಬಲಂಧನಾದ್ವತ್ಸಪ್ರೀತಿರುದಾರಕೀರ್ತಿಃ ॥ 20 ॥ ವತ್ಸಪ್ರೀತೇಃ ಪ್ರಾಂಶುರಭವತ್ ॥ 21 ॥ ಪ್ರಜಾಪತಿಶ್ಚ ಪ್ರಾಂಶೋರೇಕೋಽಭವತ್ ॥ 22 ॥ ತತಶ್ಚ ಖನಿತ್ರಃ ॥ 23 ॥ ತಸ್ಮಾತ್ ಚಾಕ್ಷುಷಃ ॥ 24 ॥ ಚಾಕ್ಷುಷಾಚ್ಚಾತಿಬಲಪರಾಕ್ರಮೋ ವಿಂಶೋಽಭವತ್ ॥ 25 ॥ ತತೋ ವಿವಿಂಶಕಃ ॥ 26 ॥ ತಸ್ಮಾಚ್ಚ ಖನಿನೇತ್ರಃ ॥ 27 ॥ ತತಶ್ಚಾತಿವಿಭೂತಿಃ ॥ 28 ॥ ಅತಿವಿಭೂತೇರತಿಬಲಪರಾಕ್ರಮಃ ಕರಂಧಮಃ ಪುತ್ರೋಽಭವತ್ ॥ 29 ॥ ತಸ್ಮಾದಪ್ಯವಿಕ್ಷಿತ್ ॥ 30 ॥ ಅವಿಕ್ಷಿತೋಽಪ್ಯತಿಬಲಪರಾಕ್ರಮಃ ಪುತ್ರೋ ಮರುತ್ತೋ ನಾಮಾಭವತ್; ಯಸ್ಯೇಮಾವದ್ಯಾಪಿ ಶ್ಲೋಕೌ ಗೀಯೇತೇ ॥ 31 ॥**

**ಮರುತ್ತಸ್ಯ ಯಥಾ ಯಜ್ಞಸ್ತಥಾ ಕಸ್ಯಾಭವದ್ಭುವಿ ।**
**ಸರ್ವಂ ಹಿರಣ್ಮಯಂ ಯಸ್ಯ ಯಜ್ಞವಸ್ತ್ವತಿಶೋಭನಮ್ ॥ 32**

**ಅಮಾದ್ಯದಿಂದ್ರಸ್ಸೋಮೇನ ದಕ್ಷಿಣಾಭಿರ್ದ್ವಿಜಾತಯಃ ।**
**ಮರುತಃ ಪರಿವೇಷ್ಟಾರಸ್ಸದಸ್ಯಾಶ್ಚ ದಿವೌಕಸಃ ॥ 33**

---

ಬಲಂಧನನಿಂದ ಕೀರ್ತಿಶಾಲಿಯಾದ ವತ್ಸಪ್ರೀತಿ, ಆತನಿಂದ ಪ್ರಾಂಶು, ಪ್ರಾಂಶುವಿನಿಂದ ಪ್ರಜಾಪತಿ, ಅವನಿಂದ ಖನಿತ್ರ, ಅವನಿಂದ ಚಾಕ್ಷುಷ, ಚಾಕ್ಷುಷನಿಂದ ಅತಿಪರಾಕ್ರಮಿಯಾದ ವಿಂಶ ಇವರು ಕ್ರಮವಾಗಿ ಜನಿಸಿದರು (19-25). ವಿಂಶನಿಂದ ವಿವಿಂಶಕ, ಅವನಿಂದ ಖನಿನೇತ್ರ, ಆತನಿಂದ ಅತಿವಿಭೂತಿ, ಅತಿವಿಭೂತಿಯಿಂದ ಪರಾಕ್ರಮಿಯಾದ ಕರಂಧಮ—ಇವರು ಕ್ರಮವಾಗಿ ಹುಟ್ಟಿದರು. ಕರಂಧಮನಿಗೆ ಅವಿಕ್ಷಿತ್ ಎಂಬವನು ಮಗನಾದನು. ಆತನಿಗೆ ಮಹಾಶೂರನಾದ ಮರುತ್ತನು ಮಗನಾಗಿ ಹುಟ್ಟಿದನು. ಮರುತ್ತನ ವಿಷಯದಲ್ಲಿ ಮುಂದಿನ ಎರಡು ಶ್ಲೋಕಗಳು ಇಂದಿಗೂ ಹಾಡಲ್ಪಡುತ್ತಿವೆ (26-31). "ಮರುತ್ತನ ಯಜ್ಞದಂತೆ ಯಾರ ಯಜ್ಞವು ಈ ಜಗತ್ತಿನಲ್ಲಿ ನಡೆದಿದೆ? ಆತನ ಯಜ್ಞದಲ್ಲಿ ಸಕಲಸಂಭಾರಗಳೂ ಸುವರ್ಣಮಯವಾಗಿದ್ದವು. ಬಹು ಸುಂದರವಾಗಿದ್ದವು. ಆ ಯಜ್ಞದಲ್ಲಿ ಸೋಮಪಾನದಿಂದ ದೇವೇಂದ್ರನೂ ದಕ್ಷಿಣೆಗಳಿಂದ ಬ್ರಾಹ್ಮಣರೂ ಸಂತುಷ್ಟರಾಗಿ ಹಿಗ್ಗಿದರು. ಅಲ್ಲಿ ದೇವತೆಗಳು ಸಭಾಸದರಾಗಿ ಕುಳಿತಿದ್ದರು. ಮರುತ್ತುಗಳು ಸ್ವತಃ ಊಟಕ್ಕೆ ಬಡಿಸುತ್ತಿದ್ದರು!"

**ಸ ಮರುತಶ್ಚಕ್ರವರ್ತೀ ನರಿಷ್ಯಂತನಾಮಾನಂ ಪುತ್ರಮವಾಪ ॥ 34 ॥ ತಸ್ಮಾಚ್ಚ ದಮಃ ॥ 35 ॥ ದಮಸ್ಯ ಪುತ್ರೋ ರಾಜವರ್ಧನೋ ಜಜ್ಞೇ ॥36 ॥ ರಾಜವರ್ಧನಾತ್ಸುವೃದ್ಧಿಃ ॥ 37 ॥ ಸುವೃದ್ಧೇಃ ಕೇವಲಃ ॥ 38 ॥ ಕೇವಲಾತ್ಸು ಧೃತಿರಭೂತ್ ॥ 39 ॥ ತತಶ್ಚ ನರಃ ॥ 40 ॥ ತಸ್ಮಾಚ್ಚಂದ್ರಃ ॥ 41 ॥ ತತಃ ಕೇವಲೋಽಭೂತ್ ॥ 42 ॥ ಕೇವಲಾದ್ಬಂಧುಮಾನ್ ॥ 43 ॥ ಬಂಧು ಮತೋ ವೇಗವಾನ್ ॥ 44 ॥ ವೇಗವತೋ ಬುಧಃ ॥ 45 ॥ ತತಶ್ಚ ತೃಣ-ಬಿಂದುಃ ॥ 46 ॥ ತಸ್ಯಾಪ್ಯೇಕಾ ಕನ್ಯಾ ಇಲವಿಲಾ ನಾಮ ॥ 47 ॥ ತತಶ್ಚಾಲಂ-ಬುಸಾ ನಾಮ ವರಾಪ್ಸರಾಸ್ತೃಣಬಿಂದುಂ ಭೇಜೇ ॥ 48 ॥ ತಸ್ಯಾಮಪ್ಯಸ್ಯ ವಿಶಾಲೋ ಜಜ್ಞೇ ಯಃ ಪುರೀಂ ವಿಶಾಲಾಂ ನಿರ್ಮಮೇ ॥ 49 ॥ ಹೇಮಚಂದ್ರಶ್ಚ ವಿಶಾಲಸ್ಯ ಪುತ್ರೋಽಭವತ್ ॥ 50 ॥ ತತಶ್ಚಂದ್ರಃ ॥ 51 ॥ ತತ್ತನಯೋ ಧೂಮ್ರಾಕ್ಷಃ ॥ 52 ॥ ತಸ್ಯಾಪಿ ಸೃಂಜಯೋಽಭೂತ್ ॥ 53 ॥ ಸೃಂಜಯಾತ್ಸಹದೇವಃ ॥ 54 ॥ ತತಶ್ಚ ಕೃಶಾಶ್ವೋ ನಾಮ ಪುತ್ರೋಽ-ಭವತ್ ॥ 55 ॥ ಸೋಮದತ್ತಃ ಕೃಶಾಶ್ವಾಜ್ಜಜ್ಞೇ ಯೋಽಶ್ವಮೇಧಾನಾಂ**

---

(32-33). ಚಕ್ರವರ್ತಿಯಾದ ಆ ಮರುತ್ತನು ನರಿಷ್ಯಂತನೆಂಬ ಮಗನನ್ನು ಪಡೆದನು. ಆತನಿಂದ ದಮನೂ ದಮನಿಂದ ರಾಜವರ್ಧನನೂ ಪುತ್ರರಾಗಿ ಜನಿಸಿದರು. ರಾಜವರ್ಧನನಿಗೆ ಸುವೃದ್ಧಿಯೂ ಅವನಿಗೆ ಕೇವಲ ಎಂಬವನೂ ಕೇವಲನಿಗೆ ಸುಧೃತಿಯೂ ಅವನಿಗೆ ನರನೂ ನರನಿಗೆ ಚಂದ್ರ ಎಂಬವನೂ ಆತನಿಗೆ ಮತ್ತೆ ಕೇವಲ ಎಂಬವನೂ ಆತನಿಗೆ ಬಂಧುಮಂತನೂ ಆತನಿಗೆ ವೇಗವಂತನೂ ವೇಗವಂತನಿಗೆ ಬುಧ ಎಂಬವನೂ ಬುಧನಿಗೆ ತೃಣಬಿಂದುವೂ ಮಕ್ಕಳಾದರು (34-46). ತೃಣಬಿಂದುವಿಗೆ ಇಲವಿಲಾ ಎಂಬ ಹೆಣ್ಣುಮಗಳು ಹುಟ್ಟಿದಳು. ಆ ಸಮಯದಲ್ಲಿ ಅಲಂಬುಸೆ ಎಂಬ ಒಬ್ಬ ಅಪ್ಸರೆಯು ತೃಣಬಿಂದು ವನ್ನು ವರಿಸಿದಳು. ಆತನಿಗೆ ಅವಳಲ್ಲಿ ವಿಶಾಲನೆಂಬ ಪುತ್ರನು ಜನಿಸಿದನು. ಆತನೇ ವಿಶಾಲ ಎಂಬ ನಗರಿಯನ್ನು ನಿರ್ಮಿಸಿದನು (47-49). ಹೇಮಚಂದ್ರನು ವಿಶಾಲನ ಮಗ. ಆತನ ಮಗ ಚಂದ್ರ. ಚಂದ್ರನ ಮಗ ಧೂಮ್ರಾಕ್ಷ. ಆತನಿಗೆ ಸೃಂಜಯನೆಂಬ ಪುತ್ರನು ಹುಟ್ಟಿದನು. ಸೃಂಜಯನಿಂದ ಸಹದೇವನೂ ಅವನಿಂದ ಕೃಶಾಶ್ವನೂ ಜನಿಸಿದರು (50-55). ಕೃಶಾಶ್ವನ ಮಗ ಸೋಮದತ್ತ.

**ಶತಮಾಜಹಾರ ॥ 56 ॥ ತತ್ಪುತ್ರೋ ಜನಮೇಜಯಃ ॥ 57 ॥ ಜನಮೇ-ಜಯಾತ್ಸುಮತಿಃ ॥ 58 ॥ ಏತೇ ವೈಶಾಲಿಕಾ ಭೂಭೃತಃ ॥ 59 ॥ ಶ್ಲೋಕೋಽಪ್ಯತ್ರ ಗೀಯತೇ ॥ 60 ॥ ತೃಣಬಿಂದೋಃ ಪ್ರಸಾದೇನ ಸರ್ವೇ ವೈಶಾಲಿಕಾ ನೃಪಾಃ । ದೀರ್ಘಾಯುಷೋ ಮಹಾತ್ಮನೋ ವೀರ್ಯ-ವಂತೋಽತಿಧಾರ್ಮಿಕಾಃ ॥ 61 ॥ ಶರ್ಯಾತೇಃ ಕನ್ಯಾ ಸುಕನ್ಯಾ ನಾಮಾ-ಭವತ್ ಯಾಮುಪಯೇಮೇ ಚ್ಯವನಃ ॥ 62 ॥ ಆನರ್ತ್ತನಾಮಾ ಪರಮ-ಧಾರ್ಮಿಕಶ್ಶರ್ಯಾತಿಪುತ್ರೋಽಭವತ್ ॥ 63 ॥ ಆನರ್ತ್ತಸ್ಯಾಪಿ ರೇವತ-ನಾಮಾ ಪುತ್ರೋ ಜಜ್ಞೇ ಯೋಽಸಾವಾನರ್ತ್ತವಿಷಯಂ ಬುಭುಜೇ ಪುರೀಂ ಚ ಕುಶಸ್ಥಲೀಮಧ್ಯುವಾಸ ॥ 64 ॥ ರೇವತಸ್ಯಾಪಿ ರೈವತಃ ಪುತ್ರಃ ಕಕುದ್ಮಿನಾಮಾ ಧರ್ಮಾತ್ಮಾ ಭ್ರಾತೃಶತಸ್ಯ ಜ್ಯೇಷ್ಠೋಽಭವತ್ ॥ 65 ॥ ತಸ್ಯ ರೇವತೀ ನಾಮ ಕನ್ಯಾಽಭವತ್ ॥66 ॥ ಸ ತಾಮಾದಾಯ ಕಸ್ಯೇಯ-ಮರ್ಹತೀತಿ ಭಗವಂತಮಬ್ಜಯೋನಿಂ ಪ್ರಷ್ಟುಂ ಬ್ರಹ್ಮಲೋಕಂ**

---

ಆತನು ನೂರು ಅಶ್ವಮೇಧಯಾಗಗಳನ್ನು ನಡೆಸಿದನು. ಅವನ ಮಗ ಜನಮೇಜಯ. ಜನಮೇಜಯನಿಂದ ಸುಮತಿ ಎಂಬವನು ಜನಿಸಿದನು. ಇವರೆಲ್ಲರೂ ವಿಶಾಲಾನಗರವನ್ನಾಳಿದ ವಿಶಾಲನ ವಂಶೀಯರಾದ ರಾಜರು. ಈ ವಿಷಯದಲ್ಲಿ ಒಂದು ಶ್ಲೋಕವು ಪಠಿತವಾಗಿದೆ (56-60). "ತೃಣಬಿಂದುವಿನ ಪ್ರಸಾದದಿಂದ ವಿಶಾಲವಂಶೀಯರಾದ ಎಲ್ಲ ರಾಜರೂ ದೀರ್ಘಾಯುಗಳೂ ಮಹಾತ್ಮರೂ ವೀರ್ಯವಂತರೂ ಅತ್ಯಂತ ಧಾರ್ಮಿಕರೂ ಆದರು" (61). ಮನುಪುತ್ರನಾದ ಶರ್ಯಾತಿಗೆ ಸುಕನ್ಯೆಯೆಂಬ ಮಗಳಿದ್ದಳು. ಅವಳನ್ನು ಚ್ಯವನಋಷಿಯು ಮದುವೆಯಾದನು. ಶರ್ಯಾತಿಗೆ ಆನರ್ತನೆಂಬ ಪರಮಧಾರ್ಮಿಕನಾದ ಪುತ್ರನಿದ್ದನು. ಆತನಿಗೆ ರೇವತನೆಂಬ ಮಗನು ಹುಟ್ಟಿದನು. ರೇವತನು ಕುಶಸ್ಥಲಿಯೆಂಬ ನಗರದಲ್ಲಿ ವಾಸವಾಗಿದ್ದುಕೊಂಡು ಆನರ್ತದೇಶವನ್ನು ಆಳುತ್ತಿದ್ದನು (62-64). ರೇವತನಿಗೆ ರೈವತನೆಂದೂ ಕಕುದ್ಮಿಯೆಂದೂ ಹೆಸರಿದ್ದ ಧರ್ಮಾತ್ಮನಾದ ಪುತ್ರನಿದ್ದನು. ಅವನು ತನ್ನ ನೂರು ಮಂದಿ ಸಹೋದರರಿಗೆ ಜ್ಯೇಷ್ಠನಾದವನು. ಕಕುದ್ಮಿಗೆ ರೇವತಿಯೆಂಬ ಕನ್ಯೆ ಜನಿಸಿದಳು (65-66). ಇವಳಿಗೆ ಯೋಗ್ಯನಾದ ವರನು ಯಾರು? ಎಂಬುದನ್ನು ಬ್ರಹ್ಮನಲ್ಲಿ ವಿಚಾರಿಸುವುದಕ್ಕಾಗಿ

**ಜಗಾಮ ॥ 67 ॥ ತಾವಚ್ಚ ಬ್ರಹ್ಮಣೋಽಂತಿಕೇ ಹಾಹಾಹೂಹೂ ಸಂಜ್ಞಾಭ್ಯಾಂ ಗಂಧರ್ವಾಭ್ಯಾಮತಿತಾನಂ ನಾಮ ದಿವ್ಯಂ ಗಾಂಧರ್ವಮಗೀಯತ ॥ 68 ॥ ತಚ್ಚ ತ್ರಿಮಾರ್ಗಪರಿವೃತ್ತೈರನೇಕಯುಗಪರಿವೃತ್ತಿಂ ತಿಷ್ಠನ್ನಪಿ ರೈವತಶ್ಶೃಣ್ವನ್ಮುಹೂರ್ತಮಿವ ಮೇನೇ ॥ 69 ॥ ಗೀತಾವಸಾನೇ ಚ ಭಗವಂತಮಬ್ಜಯೋನಿಂ ಪ್ರಣಮ್ಯ ರೈವತಃ ಕನ್ಯಾಯೋಗ್ಯಂ ವರಮಪೃಚ್ಛತ್ ॥ 70 ॥ ತತಶ್ಚಾಸೌ ಭಗವಾನಕಥಯತ್ ಕಥಯ ಯೋಽಭಿಮತಸ್ತೇ ವರ ಇತಿ ॥ 71 ॥ ಪುನಶ್ಚ ಪ್ರಣಮ್ಯ ಭಗವತೇ ತಸ್ಮೈ ಯಥಾಭಿಮತಾನಾತ್ಮನಸ್ಸ ವರಾನ್ ಕಥಯಾಮಾಸ। ಕ ಏಷಾಂ ಭಗವತೋಽಭಿಮತ ಇತಿ ಯಸ್ಮೈ ಕನ್ಯಾಮಿಮಾಂ ಪ್ರಯಚ್ಛಾಮೀತಿ ॥ 72 ॥ ತತಃ ಕಿಂಚಿದವನತ ಶಿರಾಸ್ಸಸ್ಮಿತಂ ಭಗವಾನಬ್ಜಯೋನಿರಾಹ ॥ 73 ॥ ಯ ಏತೇ ಭವತೋಽಭಿಮತಾ ನೈತೇಷಾಂ ಸಾಂಪ್ರತಂ ಪುತ್ರಪೌತ್ರಾಪತ್ಯಾಪತ್ಯ-**

---

ಕಕುದ್ಮಿಯು ರೇವತಿಯನ್ನು ಕರೆದುಕೊಂಡು ಬ್ರಹ್ಮಲೋಕಕ್ಕೆ ಹೋದನು. ಆಗ ಬ್ರಹ್ಮನ ಸಮೀಪದಲ್ಲಿ ಹಾಹಾ ಹೂಹೂ ಎಂಬ ಇಬ್ಬರು ಗಂಧರ್ವರು ಅತಿತಾನವೆಂಬ ದಿವ್ಯವಾದ ಗಂಧರ್ವಗಾನವನ್ನು ಹಾಡುತ್ತಿದ್ದರು (67-68). ಗಾನಸಂಬಂಧಿಯಾದ ಚಿತ್ರಾ, ದಕ್ಷಿಣಾ, ಧಾತ್ರೀ—ಎಂಬ ತ್ರಿಮಾರ್ಗಗಳ ಆವರ್ತನೆಗಳೊಡನೆ ಹಾಡುತ್ತಿದ್ದ ದಿವ್ಯಗಾನವನ್ನು ರೈವತನು ಕೇಳುತ್ತಿರುವಾಗ ಅನೇಕ ಯುಗಗಳೇ ಕಳೆದುಹೋದವು! ಒಂದು ಮಹೂರ್ತ ಕಳೆದಿರಬಹುದೆಂದು ಆತನು ಭಾವಿಸಿದನು! (69). ಗಂಧರ್ವಗಾನವು ಸಮಾಪ್ತವಾದಮೇಲೆ ರೈವತನು ಬ್ರಹ್ಮದೇವನಿಗೆ ನಮಸ್ಕರಿಸಿ ತನ್ನ ಕನ್ಯೆಗೆ ಯೋಗ್ಯನಾದ ವರನು ಯಾರೆಂದು ಕೇಳಿದನು. ಆಗ ಭಗವಾನ್ ಬ್ರಹ್ಮದೇವನು "ರೈವತ, ನಿನಗೆ ಅಭಿಮತನಾದ ವರನು ಯಾರು? ಹೇಳು" ಎಂದನು (70-71). ರೈವತನು ಮತ್ತೆ ಬ್ರಹ್ಮದೇವನಿಗೆ ನಮಸ್ಕರಿಸಿ ತನ್ನ ಮನಸ್ಸಿನಲ್ಲಿದ್ದ ಕೆಲವು ಮಂದಿ ವರರ ಹೆಸರನ್ನು ಹೇಳಿ, 'ಭಗವನ್, ಈ ವರರಲ್ಲಿ ನಿನಗೆ ಸಂಮತನಾದ ವರನು ಯಾರು? ಇವರಲ್ಲಿ ಯಾರಿಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡಲಿ?' ಎಂದು ಕೇಳಿದನು (72). ಆಗ ಭಗವಾನ್ ಬ್ರಹ್ಮದೇವನು ಕೊಂಚ ತಲೆಯನ್ನು ಬಗ್ಗಿಸಿ ಮುಗುಳ್ನಗೆ ಬೀರುತ್ತ "ರೈವತ, ನಿನಗೆ ಸಂಮತರೆಂದು ಕೆಲವರ ಹೆಸರನ್ನು

**ಸಂತತಿರಸ್ತ್ಯವನೀತಲೇ ॥ 74 ॥ ಬಹೂನಿ ತವಾತ್ರೈವ ಗಾಂಧರ್ವಂ ಶೃಣ್ವ-ತಶ್ಚತುರ್ಯುಗಾನ್ಯತೀತಾನಿ ॥ 75 ॥ ಸಾಂಪ್ರತಂ ಮಹೀತಲೇಽಷ್ಟಾವಿಂಶತಿ-ತಮಮನೋಶ್ಚತುರ್ಯುಗಮತೀತಪ್ರಾಯಂ ವರ್ತತೇ ॥ 76 ॥ ಆಸನ್ನೋ ಹಿ ಕಲಿಃ ॥ 77 ॥ ಅನ್ಯಸ್ಮೈ ಕನ್ಯಾರತ್ನಮಿದಂ ಭವತೈಕಾಕಿನಾಭಿಮತಾಯ ದೇಯಮ್ ॥ 78 ॥ ಭವತೋಽಪಿ ಪುತ್ರ-ಮಿತ್ರ-ಕಲತ್ರ-ಮಂತ್ರಿ-ಭೃತ್ಯ-ಬಂಧುಬಲಕೋಶಾದಯಸ್ಸಮಸ್ತಾಃ ಕಾಲೇನೈತೇನಾತ್ಯಂತಮತೀತಾಃ ॥ 79 ॥ ತತಃ ಪುನರಪ್ಯುತ್ಪನ್ನಸಾಧ್ವಸೋ ರಾಜಾ ಭಗವಂತಂ ಪ್ರಣಮ್ಯ ಪಪ್ರಚ್ಛ ॥ 80 ॥ ಭಗವನ್ನೇವಮವಸ್ಥಿತೇ ಮಯೇಯಂ ಕಸ್ಮೈ ದೇಯೇತಿ ॥ 81 ॥ ತತಸ್ಸ ಭಗವಾನ್ ಕಿಂಚಿದವನಮ್ರಕಂಧರಃ ಕೃತಾಂಜಲಿರ್ಭೂತ್ವಾ ಸರ್ವಲೋಕಗುರುರಂಭೋಜಯೋನಿರಾಹ ॥ 82 ॥**

---

ಹೇಳಿದೆಯಲ್ಲ, ಈಗ ಅವರ ಮಕ್ಕಳು ಮೊಮ್ಮಕ್ಕಳು ಮೊದಲಾದ ಅವರ ಸಂತತಿಯೂ ಸಹ ಭೂಲೋಕದಲ್ಲಿಲ್ಲ; ನೀನು ಇಲ್ಲಿ ಸಂಗೀತವನ್ನು ಕೇಳುತ್ತಿರುವಾಗಲೇ ಎಷ್ಟೋ ಚತುರ್ಯುಗಗಳು ಕಳೆದುಹೋದವು! (73-75). ಈಗ ಭೂಲೋಕದಲ್ಲಿ ಇಪ್ಪತ್ತೆಂಟನೆಯ* ಮನುವಿನ ಚತುರ್ಯುಗವು ಮುಗಿಯುತ್ತ ಬಂದಿದೆ! ಕಲಿಯುಗ ಸಮೀಪಿಸಿದೆ! ಆದ್ದರಿಂದ ಈಗ (ಬಂಧುಗಳಿಲ್ಲದೆ) ಒಂಟಿಯಾಗಿರುವ ನೀನು ಈ ಕನ್ಯಾರತ್ನವನ್ನು ಇಷ್ಟನಾದ ಇನ್ನೊಬ್ಬನಿಗೆ ಕೊಟ್ಟು ಮದುವೆ ಮಾಡುವುದು ಲೇಸು. ರೈವತರಾಜ, ಈ ಸಮಯದಲ್ಲಿ ನಿನ್ನ ಪುತ್ರ, ಮಿತ್ರ, ಪತ್ನಿ, ಮಂತ್ರಿ, ಸೇವಕ, ಬಂಧು, ಸೈನ್ಯ, ಭಂಡಾರ—ಮೊದಲಾದವುಗಳೆಲ್ಲ ಗತಿಸಿಹೋಗಿವೆ. ನಿನಗೆ ಯಾವುದೂ ಉಳಿದಿಲ್ಲ!" ಎಂದನು (76-79). ಆಗ ರೈವತರಾಜನಿಗೆ ಹೆದರಿಕೆ ಹುಟ್ಟಿತು. ಅವನು ಬ್ರಹ್ಮದೇವನಿಗೆ ಪುನಃ ನಮಸ್ಕರಿಸಿ "ಸ್ವಾಮಿ ಪರಿಸ್ಥಿತಿ ಹೀಗಾದಮೇಲೆ ಇವಳನ್ನು ನಾನು ಯಾರಿಗೆ ಒಪ್ಪಿಸಲಿ?" ಎಂದನು (80-81). ಆಗ ಸರ್ವಲೋಕ ಪಿತಾಮಹನಾದ ಬ್ರಹ್ಮನು ತನ್ನ ಶಿರಸ್ಸನ್ನು ಬಾಗಿಸಿ ಕೈಮುಗಿದುಕೊಂಡು ಈ ರೀತಿಯಲ್ಲಿ ವಿಷ್ಣುವನ್ನು ಸ್ತುತಿಸುತ್ತ ಹೇಳಿದನು: (82) "ಅಜನೂ ಸರ್ವಮಯನೂ ವಿಧಾತೃವೂ ಆದ

* ಹದಿನಾಲ್ಕು ಮನುಗಳ ಎರಡನೆಯ ಆವೃತ್ತಿಯಲ್ಲಿ ಇಪ್ಪತ್ತೆಂಟನೆಯ ಮನುವಿನ ಯುಗ.

ಶ್ರೀಬ್ರಹ್ಮೋವಾಚ:

ನ ಹ್ಯಾದಿಮಧ್ಯಾಂತಮಜಸ್ಯ ಯಸ್ಯ
ವಿದ್ಮೋ ವಯಂ ಸರ್ವಮಯಸ್ಯ ಧಾತುಃ।
ನ ಚ ಸ್ವರೂಪಂ ನ ಪರಂ ಸ್ವಭಾವಂ
ನ ಚೈವ ಸಾರಂ ಪರಮೇಶ್ವರಸ್ಯ॥ 83
ಕಲಾಮುಹೂರ್ತಾದಿಮಯಶ್ಚ ಕಾಲೋ
ನ ಯದ್ವಿಭೂತೇಃ ಪರಿಣಾಮಹೇತುಃ।
ಅಜನ್ಮನಾಶಸ್ಯ ಸದೈಕಮೂರ್ತೇ–
ರನಾಮರೂಪಸ್ಯ ಸನಾತನಸ್ಯ॥ 84
ಯಸ್ಯ ಪ್ರಸಾದಾದಹಮಚ್ಯುತಸ್ಯ
ಭೂತಃ ಪ್ರಜಾಸೃಷ್ಟಿಕರೋಽಂತಕಾರೀ।
ಕ್ರೋಧಾಚ್ಚ ರುದ್ರಃ ಸ್ಥಿತಿಹೇತುಭೂತೋ
ಯಸ್ಮಾಚ್ಚ ಮಧ್ಯೇ ಪುರುಷಃ ಪರಸ್ಮಾತ್॥ 85

---

ಆತನ ಆದಿಮಧ್ಯಾಂತಗಳನ್ನು ನಾವು ಅರಿಯೆವು. ಆ ಪರಮೇಶ್ವರನ ಸ್ವರೂಪವನ್ನಾಗಲಿ ಉತ್ಕೃಷ್ಟಸ್ವಭಾವವನ್ನಾಗಲಿ ಬಲವನ್ನಾಗಲಿ ನಾವು ತಿಳಿಯೆವು (83). ಜನನ ಮರಣಗಳಿಲ್ಲದೆ ಸದಾ ಏಕಸ್ವರೂಪನೂ ನಾಮರೂಪರಹಿತನೂ ಆದ ಆ ಸನಾತನಪುರುಷನ ಅವತಾರಾದಿ ವಿಭೂತಿಯನ್ನು ಪರಿಣಾಮಗೊಳಿಸಲು ಕಲಾ, ಮುಹೂರ್ತಾದಿರೂಪವಾದ ಕಾಲವು ಸಮರ್ಥವಲ್ಲ* (84). ಆ ಅಚ್ಯುತನ ಪ್ರಸಾದದಿಂದ ಪ್ರಜೆಗಳ ಉತ್ಪತ್ತಿಕರ್ತನಾದ ನಾನು ಉದ್ಭವಿಸಿದೆನು. ಆತನ ಕ್ರೋಧದಿಂದ ಜಗತ್ತಿನ ಲಯಕರ್ತನಾದ ರುದ್ರನೂ ಆ ಪರಮಾತ್ಮನಿಂದ ಸೃಷ್ಟಿ ಲಯಗಳ ಮಧ್ಯದಲ್ಲಿ ಸ್ಥಿತಿಕರ್ತನಾದ ವಿಷ್ಣುರೂಪ ಪುರುಷನೂ ಆವಿರ್ಭವಿಸಿದ್ದಾರೆ (85). ಅಜನಾದ ಆ ಪರಮಾತ್ಮನು ನನ್ನ ರೂಪವನ್ನು ಧರಿಸಿ ಜಗತ್ತನ್ನು ಸೃಜಿಸುತ್ತಾನೆ. ಸ್ಥಿತಿಕಾರ್ಯದಲ್ಲಿ ವಿಷ್ಣುರೂಪನಾದ ಪುರುಷನಾಗು

* ಕಾಲವು ಸರ್ವ ಪರಿಣಾಮ ಹೇತುವಾಗಿದೆ. ಸಕಲ ಸ್ಥಾವರ ಜಂಗಮಗಳೂ ಕಾಲವಶದಿಂದ ಸ್ವರೂಪದಲ್ಲಿ ಬದಲಾವಣೆ ಹೊಂದುತ್ತಲೇ ಇರುತ್ತವೆ. ಅಂತಹ ಕಾಲವು ಪರಮಾತ್ಮನಲ್ಲಿ ಯಾವ ಬದಲಾವಣೆಯನ್ನೂ ಉಂಟುಮಾಡಲಾರದು.

ಮದ್ರೂಪಮಾಸ್ಥಾಯ ಸೃಜತ್ಯಜೋ ಯಃ
ಸ್ಥಿತೌ ಚ ಯೋಽಸೌ ಪುರುಷಸ್ವರೂಪೀ।
ರುದ್ರಸ್ವರೂಪೇಣ ಚ ಯೋಽತ್ತಿ ವಿಶ್ವಂ
ಧತ್ತೇ ತಥಾನಂತವಪುಸ್ಸಮಸ್ತಮ್॥ 86
ಪಾಕಾಯ ಯೋಽಗ್ನಿತ್ವಮುಪೈತಿ ಲೋಕಾನ್
ಬಿಭರ್ತಿ ಪೃಥ್ವೀವಪುರವ್ಯಯಾತ್ಮಾ।
ಶಕ್ರಾದಿರೂಪೀ ಪರಿಪಾತಿ ವಿಶ್ವ-
ಮರ್ಕೇಂದು ರೂಪಶ್ಚ ತಮೋ ಹಿನಸ್ತಿ॥ 87
ಕರೋತಿ ಚೇಷ್ಟಾಶ್ಶ್ವಸನಸ್ವರೂಪೀ
ಲೋಕಸ್ಯ ತೃಪ್ತಿಂ ಚ ಜಲಾನ್ನರೂಪೀ।
ದದಾತಿ ವಿಶ್ವಸ್ಥಿತಿಸಂಸ್ಥಿತಸ್ತು
ಸರ್ವಾವಕಾಶಂ ಚ ನಭಸ್ವರೂಪೀ॥ 88
ಯಸ್ಸೃಜ್ಯತೇ ಸರ್ಗಕೃದಾತ್ಮನೈವ
ಯಃ ಪಾಲ್ಯತೇ ಪಾಲಯಿತಾ ಚ ದೇವಃ।
ವಿಶ್ವಾತ್ಮಕಸ್ಸಂಹ್ರಿಯತೇಽಂತಕಾರೀ
ಪೃಥಕ್ ತ್ರಯಸ್ಯಾಸ್ಯ ಚ ಯೋಽವ್ಯಯಾತ್ಮಾ॥ 89

---

ತ್ತಾನೆ. ರುದ್ರರೂಪದಿಂದ ಆತನು ವಿಶ್ವವನ್ನು ನುಂಗುತ್ತಾನೆ. ಅನಂತ ಶರೀರನಾಗಿ (ಆದಿಶೇಷನಾಗಿ) ಸಮಸ್ತ ವಿಶ್ವವನ್ನೂ ಧರಿಸಿದ್ದಾನೆ (86). ಆ ಅವ್ಯಯಾತ್ಮನು ಪಕ್ವ ಮಾಡುವುದಕ್ಕಾಗಿ ಅಗ್ನಿಯಾಗುತ್ತಾನೆ. ಪೃಥ್ವೀರೂಪನಾಗಿ ಪ್ರಾಣಿಗಳನ್ನು ಧರಿಸುತ್ತಾನೆ. ಇಂದ್ರಾದಿರೂಪವನ್ನು ಧರಿಸಿ ಜಗತ್ತನ್ನು ಪಾಲಿಸುತ್ತಾನೆ. ಸೂರ್ಯ ಚಂದ್ರ ಸ್ವರೂಪನಾಗಿ ಕತ್ತಲೆಯನ್ನು ಹೋಗಲಾಡಿಸುತ್ತಾನೆ (87). ಆತನು ಪ್ರಾಣಾದಿ ವಾಯುಸ್ವರೂಪನಾಗಿ (ಪ್ರಾಣಿಗಳಲ್ಲಿ) ಕ್ರಿಯೆಗಳನ್ನು ನಡೆಸುತ್ತಾನೆ. ಜಲ, ಅನ್ನಸ್ವರೂಪನಾಗಿ ಪ್ರಾಣಿಗಳಿಗೆ ತೃಪ್ತಿಯನ್ನೀಯುತ್ತಾನೆ. ವಿಶ್ವದ ಅವಸ್ಥಾನ ಕ್ಕೋಸ್ಕರ ಉದ್ಯುಕ್ತನಾಗಿ ಆಕಾಶಸ್ವರೂಪವನ್ನು ಧರಿಸಿ ಸಮಸ್ತವಸ್ತುಗಳಿಗೂ ಅವಕಾಶವನ್ನೀಯುತ್ತಾನೆ (88). ಅವ್ಯಯಾತ್ಮನಾದ ಆ ದೇವನು ಸ್ವಯಂ ವಿಶ್ವಾತ್ಮಕನಾಗಿ, ತಾನೇ ಸೃಷ್ಟಿಕರ್ತನಾದರೂ ತನ್ನನ್ನು ತಾನೇ ಸೃಜಿಸಿಕೊಳ್ಳುತ್ತಾನೆ.

ಯಸ್ಮಿಂಜಗದ್ಯೋ ಜಗದೇತದಾದ್ಯೋ
ಯಶ್ಚಾಶ್ರಿತೋಽಸ್ಮಿಂ ಜಗತಿ ಸ್ವಯಂಭೂಃ।
ಸ ಸರ್ವಭೂತಪ್ರಭವೋ ಧರಿತ್ರ್ಯಾಂ
ಸ್ವಾಂಶೇನ ವಿಷ್ಣುರ್ನೃಪತೇಽವತೀರ್ಣಃ॥ 90

ಕುಶಸ್ಥಲೀ ಯಾ ತವ ಭೂಪ ರಮ್ಯಾ
ಪುರೀ ಪುರಾಭೂದಮರಾವತೀವ।
ಸಾ ದ್ವಾರಕಾ ಸಂಪ್ರತಿ ತತ್ರ ಚಾಸ್ತೇ
ಸ ಕೇಶವಾಂಶೋ ಬಲದೇವನಾಮಾ॥ 91

ತಸ್ಮೈ ತ್ವಮೇನಾಂ ತನಯಾಂ ನರೇಂದ್ರ
ಪ್ರಯಚ್ಛ ಮಾಯಾಮನುಜಾಯ ಜಾಯಾಮ್।
ಶ್ಲಾಘ್ಯೋ ವರೋಽಸೌ ತನಯಾ ತವೇಯಂ
ಸ್ತ್ರೀರತ್ನಭೂತಾ ಸದೃಶೋ ಹಿ ಯೋಗಃ॥ 92

---

ಜಗತ್ಪಾಲಕನಾಗಿ ತನ್ನನ್ನೇ ಪಾಲಿಸಿಕೊಳ್ಳುತ್ತಾನೆ. ಸಂಹಾರಕರ್ತನಾಗಿ ತನ್ನನ್ನೇ ತಾನು ಸಂಹರಿಸಿಕೊಳ್ಳುತ್ತಾನೆ. ಆದರೂ ಸೃಷ್ಟಿ, ಸ್ಥಿತಿ, ಲಯ ಈ ಮೂರರ ಸಂಬಂಧವಿಲ್ಲದೆ ದೂರವಾಗಿದ್ದಾನೆ! (89). ಆದಿಪುರುಷನೂ ಸ್ವಯಂಭುವೂ ಆದ ಆ ಪರಮಾತ್ಮನಲ್ಲಿ ಈ ಜಗತ್ತು ಇದೆ. ಆತನೇ ಈ ಜಗತ್ತು ಆಗಿದ್ದಾನೆ. ಆತನು ಈ ಜಗತ್ತನ್ನು ಆಶ್ರಯಿಸಿಕೊಂಡೂ ಇದ್ದಾನೆ! ಸರ್ವಭೂತಗಳಿಗೆ ಕಾರಣ ನಾದ ಆ ವಿಷ್ಣುವು, ಹೇ ರಾಜ–ರೈವತ, ಈಗ ಭೂಲೋಕದಲ್ಲಿ ತನ್ನ ಒಂದು ಅಂಶದಿಂದ ಅವತರಿಸಿದ್ದಾನೆ (90). ರಾಜ, ಹಿಂದೆ ಕುಶಸ್ಥಲಿಯೆಂಬ ಯಾವ ನಿನ್ನ ನಗರವು ಅಮರಾವತಿಯಂತೆ ರಮ್ಯವಾಗಿ ವಿರಾಜಿಸುತ್ತಿತ್ತೋ ಅದು ಈಗ ದ್ವಾರಕಾಪುರಿಯಾಗಿದೆ! ಕೇಶವನ ಅಂಶದಿಂದ ಅವತರಿಸಿದ ಆತನು ಬಲದೇವ ಎಂಬ ಹೆಸರನ್ನು ಪಡೆದಿದ್ದಾನೆ (91). ಮಾಯಾಮನುಷ್ಯನಾಗಿ ಅವತರಿಸಿರುವ ಆ ಬಲದೇವನಿಗೆ, ನರೇಂದ್ರ, ನಿನ್ನ ಮಗಳನ್ನು ಪತ್ನಿಯಾಗಿ ಅರ್ಪಿಸು. ಬಲ ದೇವನು ಪ್ರಶಂಸನೀಯ ವರನಾಗಿದ್ದಾನೆ. ನಿನ್ನ ಈ ಮಗಳು ಸ್ತ್ರೀಯರಲ್ಲಿ ರತ್ನವಾಗಿದ್ದಾಳೆ. ಇವರಿಬ್ಬರ ಸಂಬಂಧವು ಅನುರೂಪವಾಗಿದೆ (92). ಈ

*ಶ್ರೀಪರಾಶರ ಉವಾಚ:*

**ಇತೀರಿತೋಽಸೌ ಕಮಲೋದ್ಭವೇನ**
**ಭುವಂ ಸಮಾಸಾದ್ಯ ಪತಿಃ ಪ್ರಜಾನಾಮ್।**
**ದದರ್ಶ ಹ್ರಸ್ವಾನ್ ಪುರುಷಾನ್ ವಿರೂಪಾನ್**
**ಅಲ್ಪೌಜಸಸ್ಸ್ವಲ್ಪವಿವೇಕವೀರ್ಯಾನ್॥** 93

**ಕುಶಸ್ಥಲೀಂ ತಾಂ ಚ ಪುರೀಮುಪೇತ್ಯ**
**ದೃಷ್ಟ್ವಾನ್ಯರೂಪಾಂ ಪ್ರದದೌ ಸ ಕನ್ಯಾಮ್।**
**ಸೀರಾಯುಧಾಯ ಸ್ಫಟಿಕಾಚಲಾಭ-**
**ವಕ್ಷಃಸ್ಥಲಾಯಾತುಲಧೀರ್ನರೇಂದ್ರಃ॥** 94

**ಉಚ್ಚಪ್ರಮಾಣಾಮಿತಿ ತಾಮವೇಕ್ಷ್ಯ**
**ಸ್ವಲಾಂಗಲಾಗ್ರೇಣ ಚ ತಾಲಕೇತುಃ।**
**ವಿನಮ್ರಯಾಮಾಸ ತತಶ್ಚ ಸಾಪಿ**
**ಬಭೂವ ಸದ್ಯೋ ವನಿತಾ ಯಥಾನ್ಯಾ॥** 95

---

ರೀತಿಯಲ್ಲಿ ಬ್ರಹ್ಮದೇವನು ಹೇಳಲಾಗಿ ಕಕುದ್ಮಿರಾಜನು ಭೂಲೋಕಕ್ಕೆ ಹಿಂದಿರುಗಿದನು. ಭೂಲೋಕದಲ್ಲಿದ್ದ ಜನರು ಆತನಿಗೆ ಕುಳ್ಳರೂ, ಕುರೂಪಿಗಳೂ, ನಿಃಸತ್ತ್ವರೂ, ನಿರ್ವೀರ್ಯರೂ, ವಿವೇಕಹೀನರೂ ಆಗಿ ಗೋಚರಿಸಿದರು (93). ಅಸಾಧಾರಣ ಬುದ್ಧಿಶಾಲಿಯಾದ ರೈವತ ನರೇಂದ್ರನು ತನ್ನದಾಗಿದ್ದ ಕುಶಸ್ಥಲೀ ನಗರಿಗೆ ಬಂದು, ಅದು ರೂಪಾಂತರವೈದಿರುವುದನ್ನು ಕಂಡನು. ಅನಂತರ ಸ್ಫಟಿಕಪರ್ವತದಂತೆ ವಿಶಾಲವಕ್ಷಸ್ಥಳದಿಂದ ಶೋಭಿತನಾದ ಹಲಾಯುಧನಿಗೆ ತನ್ನ ಮಗಳನ್ನು ಕೊಟ್ಟನು (94). ಕನ್ಯೆಯಾದ ಆ ರೇವತಿಯು ಬಹಳ ಎತ್ತರವಾಗಿರುವುದನ್ನು ಕಂಡು ಹಲಾಯುಧನಾದ ಬಲರಾಮನು ತನ್ನ ಹಲಾಯುಧದ ಅಗ್ರಭಾಗದಿಂದ ಕೆಳಗೆ ಜಗ್ಗಲಾಗಿ, ಅವಳು (ಆ ಕಾಲದ) ಅನ್ಯಸ್ತ್ರೀಯಂತೆ ಸರಿಯಾದ ಎತ್ತರವುಳ್ಳವಳಾದಳು! (95). ಬಲರಾಮನು ರೈವತರಾಜನ

**ತಾಂ ರೇವತೀಂ ರೈವತಭೂಪಕನ್ಯಾಂ**
**ಸೀರಾಯುಧೋಽಸೌ ವಿಧಿನೋಪಯೇಮೇ।**
**ದತ್ವಾಽಥ ಕನ್ಯಾಂ ಸ ನೃಪೋ ಜಗಾಮ**
**ಹಿಮಾಲಯಂ ವೈ ತಪಸೇ ಧೃತಾತ್ಮಾ॥** 96

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಪ್ರಥಮೋಽಧ್ಯಾಯಃ

---

ಮಗಳಾದ ಆ ರೇವತಿಯನ್ನು ವಿಧಿವತ್ತಾಗಿ ಮದುವೆಯಾದನು. ರೈವತರಾಜನು ಹೀಗೆ ತನ್ನ ಮಗಳನ್ನು ಮದುವೆಮಾಡಿಕೊಟ್ಟು ತಪಸ್ಸು ಮಾಡುವುದಕ್ಕೋಸ್ಕರ ಏಕಾಗ್ರಚಿತ್ತನಾಗಿ ಹಿಮಾಲಯಕ್ಕೆ ಹೋದನು (96).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಒಂದನೆಯ ಅಧ್ಯಾಯ ಮುಗಿಯಿತು.



## ದ್ವಿತೀಯೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಯಾವಚ್ಚ ಬ್ರಹ್ಮಲೋಕಾತ್ ಸ ಕಕುದ್ಮೀ ರೈವತೋ ನಾಭ್ಯೇತಿ ತಾವತ್ಪುಣ್ಯಜನಸಂಜ್ಞಾ ರಾಕ್ಷಸಾಸ್ತಾಮಸ್ಯ ಪುರೀಂ ಕುಶಸ್ಥಲೀಂ ನಿಜಘ್ನುಃ ॥ 1 ॥ ತಚ್ಚಾಸ್ಯ ಭ್ರಾತೃಶತಂ ಪುಣ್ಯಜನತ್ರಾಸಾದ್ದಿಶೋ ಭೇಜೇ ॥ 2 ॥ ತದನ್ವಯಾಶ್ಚ ಕ್ಷತ್ರಿಯಾಸ್ಸರ್ವದಿಕ್ಷ್ವಭವನ್ ॥ 3 ॥ ಧೃಷ್ಟಸ್ಯಾಪಿ ಧಾರ್ಷ್ಟಕಂ ಕ್ಷತ್ರಮಭವತ್ ॥ 4 ॥ ನಾಭಾಗಸ್ಯಾತ್ಮಜೋ ನಾಭಾಗಸಂಜ್ಞೋಽಭವತ್ ॥ 5 ॥ ತಸ್ಯಾಪ್ಯಂಬರೀಷಃ ॥ 6 ॥ ಅಂಬರೀಷಸ್ಯಾಪಿ ವಿರೂಪೋಽಭವತ್**

---

## ಅಧ್ಯಾಯ 2

ಇಕ್ಷ್ವಾಕುವಂಶದ ರಾಜರು. ಸೌಭರಿಮುನಿಯು ಮಾಂಧಾತೃರಾಜನ ಪುತ್ರಿಯರನ್ನು ಮದುವೆಯಾಗುವುದು. ಪತ್ನಿಯರೊಡನೆ ಸೌಭರಿಯ ಸುಖಭೋಗ. ಅನಂತರ ವೈರಾಗ್ಯದಿಂದ ವನಗಮನ.

ಪರಾಶರಮುನಿಗಳು ಹೇಳಿದರು: ಕಕುದ್ಮಿ ಎಂಬ ಹೆಸರಿನ ಆ ರೈವತ ರಾಜನು ಬ್ರಹ್ಮಲೋಕದಿಂದ ಯಾವಾಗ ಹಿಂದಿರುಗಿ ಬರಲಿಲ್ಲವೋ ಆ ಸಮಯದಲ್ಲಿ ಆತನ ರಾಜಧಾನಿಯಾದ ಕುಶಸ್ಥಲಿಯನ್ನು ಪುಣ್ಯಜನ*ರೆಂಬ ರಾಕ್ಷಸರು ಧ್ವಂಸ ಮಾಡಿದರು (1). ಆತನ ನೂರುಮಂದಿ ಸಹೋದರರು ಪುಣ್ಯಜನರ ಭಯದಿಂದ ದಿಕ್ಕುದಿಕ್ಕುಗಳಿಗೆ ಚದರಿ ಹೋದರು. ಅವರ ವಂಶದ ಕ್ಷತ್ರಿಯರು ಎಲ್ಲ ದಿಕ್ಕುಗಳಲ್ಲಿಯೂ ಹರಡಿದರು. (ಮನುಪುತ್ರನಾದ) ಧೃಷ್ಟನಿಗೂ ಧಾರ್ಷ್ಟಕ ಎಂಬ ಕ್ಷತ್ರಿಯ ಸಂತತಿಯುಂಟಾಯಿತು (2-4). ನಾಭಾಗನಿಗೆ ನಾಭಾಗನೆಂದೇ ಹೆಸರಿದ್ದ ಮಗನು ಜನಿಸಿದನು. ಅವನ ಮಗ ಅಂಬರೀಷ. ಅಂಬರೀಷನಿಗೆ ವಿರೂಪನೆಂಬ ಮಗನು ಹುಟ್ಟಿದನು. ವಿರೂಪನಿಂದ ಪೃಷದಶ್ವನೂ ಅವನಿಂದ

---

* ಪುಣ್ಯಜನ ಶಬ್ದಕ್ಕೆ ವಿಪರೀತಲಕ್ಷಣೆಯಿಂದ ಅಪುಣ್ಯಜನರೆಂದು–ಪಾಪಿಗಳೆಂದು ಅರ್ಥ.

**॥ 7 ॥ ವಿರೂಪಾತ್ ಪೃಷದಶ್ವೋ ಜಜ್ಞೇ ॥ 8 ॥ ತತಶ್ಚ ರಥೀತರಃ ॥ 9 ॥**

*ಅತ್ರಾಯಂ ಶ್ಲೋಕಃ—*

**ಏತೇ ಕ್ಷತ್ರಪ್ರಸೂತಾ ವೈ ಪುನಶ್ಚಾಂಗಿರಸಾಃ ಸ್ಮೃತಾಃ ।**
**ರಥೀತರಾಣಾಂ ಪ್ರವರಾಃ ಕ್ಷತ್ರೋಪೇತಾ ದ್ವಿಜಾತಯಃ ॥ 10**

**ಇತಿ, ಕ್ಷುತವತಶ್ಚ ಮನೋರಿಕ್ಷ್ವಾಕುಃ ಪುತ್ರೋ ಜಜ್ಞೇ ಘ್ರಾಣತಃ ॥ 11 ॥ ತಸ್ಯ ಪುತ್ರಶತಪ್ರಧಾನಾ ವಿಕುಕ್ಷಿನಿಮಿದಂಡಾಖ್ಯಾಸ್ತ್ರಯಃ ಪುತ್ರಾ ಬಭೂವುಃ ॥ 12 ॥ ಶಕುನಿಪ್ರಮುಖಾಃ ಪಂಚಾಶತ್ಪುತ್ರಾ ಉತ್ತರಾಪಥ-ರಕ್ಷಿತಾರೋ ಬಭೂವುಃ ॥ 13 ॥ ಚತ್ವಾರಿಂಶದಷ್ಟೌ ಚ ದಕ್ಷಿಣಾಪಥ-ಭೂಪಾಲಾಃ ॥ 14 ॥ ಸ ಚೇಕ್ಷ್ವಾಕುರಷ್ಟಕಾಯಾಃ ಶ್ರಾದ್ಧಮುತ್ಪಾದ್ಯ ಶ್ರಾದ್ಧಾರ್ಹಂ ಮಾಂಸಮಾನಯೇತಿ ವಿಕುಕ್ಷಿಮಾಜ್ಞಾಪಯಾಮಾಸ ॥ 15 ॥ ಸ ತಥೇತಿ ಗೃಹೀತಾಜ್ಞೋ ವಿಧೃತಶರಾಸನೋ ವನಮಭ್ಯೇತ್ಯಾನೇಕಶೋ**

---

ರಥೀತರನೂ ಉತ್ಪನ್ನರಾದರು (5-9). ಈ ಸಂಬಂಧದಲ್ಲಿ ಒಂದು ಶ್ಲೋಕ ಪ್ರಸಿದ್ಧವಾಗಿದೆ. "ರಥೀತರನ ವಂಶಜರು ಕ್ಷತ್ರಿಯ ಸಂತಾನದವರಾಗಿದ್ದು ಮತ್ತೆ ಆಂಗಿರಸರೆನಿಸಿದರು. ಇವರು ಕ್ಷತ್ರಿಯತ್ವ ಸಹಿತರಾದ ಬ್ರಾಹ್ಮಣ*ರು" (10). ಮನುವು ಶೀನುತ್ತಿರುವಾಗ ನಾಸಿಕದಿಂದ ಇಕ್ಷ್ವಾಕುವೆಂಬ ಪುತ್ರನು ಹುಟ್ಟಿದನು. ಆತನ ನೂರುಮಂದಿ ಮಕ್ಕಳಲ್ಲಿ ವಿಕುಕ್ಷಿ, ನಿಮಿ, ದಂಡ ಎಂಬವರು ಪ್ರಧಾನರು. ಶಕುನಿ ಮೊದಲಾದ ಐವತ್ತು ಮಂದಿ ಇಕ್ಷ್ವಾಕು ಪುತ್ರರು ಉತ್ತರ ಪ್ರದೇಶಗಳಲ್ಲಿ ರಾಜ್ಯಭಾರ ಮಾಡಿದರು. ನಲವತ್ತೆಂಟು ಜನರು ದಕ್ಷಿಣ ಪ್ರದೇಶ ಗಳಲ್ಲಿ ರಾಜರಾದರು (11-14). ಇಕ್ಷ್ವಾಕುವು ಅಷ್ಟಕಾಶ್ರಾದ್ಧವನ್ನು ಮಾಡಲು ಉದ್ದೇಶಿಸಿ ಶ್ರಾದ್ಧಾರ್ಹವಾದ ಮಾಂಸವನ್ನು ತರುವಂತೆ ವಿಕುಕ್ಷಿಗೆ ಆಜ್ಞೆ ಮಾಡಿದನು. ಅವನು ಹಾಗೆಯೇ ಆಗಲೆಂದು ಆಜ್ಞೆಯನ್ನೊಪ್ಪಿ ಧನುಸ್ಸನ್ನು ಹಿಡಿದು ಅರಣ್ಯಕ್ಕೆ ಹೋದನು. ಅಲ್ಲಿ ಅನೇಕ ಮೃಗಗಳನ್ನು ಕೊಂದು ಬಹಳ ಆಯಾಸಗೊಂಡನು. ಆಗ ವಿಕುಕ್ಷಿಗೆ ಬಹಳ ಹಸಿವಾಗಿತ್ತು. ಆದ್ದರಿಂದ ಆತನು

* ರಥೀತರನ ಭಾರ್ಯೆಯಲ್ಲಿ ಅಂಗಿರಸ ಋಷಿಯಿಂದ ನಿಯೋಗವಿಧಿಯಿಂದ ಸಂತತಿಯಾಯಿತೆಂದು ಶ್ರೀಧರೀಯವ್ಯಾಖ್ಯಾದಲ್ಲಿದೆ.

**ಮೃಗಾನ್ ಹತ್ವಾ ಶ್ರಾಂತೋಽತಿಕ್ಷುತ್ಪರೀತೋ ವಿಕುಕ್ಷಿರೇಕಂ ಶಶಮ-ಭಕ್ಷಯತ್ ಶೇಷಂ ಚ ಮಾಂಸಮಾನೀಯ ಪಿತ್ರೇ ನಿವೇದಯಾಮಾಸ ॥ 16 ॥ ಇಕ್ಷ್ವಾಕುಕುಲಾಚಾರ್ಯೋ ವಸಿಷ್ಠಸ್ತತ್ ಪ್ರೋಕ್ಷಣಾಯ ಚೋದಿತಃ ಪ್ರಾಹ। ಅಲಮನೇನಾಮೇಧ್ಯೇನಾಮಿಷೇಣ ದುರಾತ್ಮನಾ ತವ ಪುತ್ರೇಣೈತನ್ಮಾಂಸಮುಪಹತಂ ಯತೋಽನೇನ ಶಶೋ ಭಕ್ಷಿತಃ ॥ 17 ॥ ತತಶ್ಚಾಸೌ ವಿಕುಕ್ಷಿರ್ಗುರುಣೈವಮುಕ್ತಶ್ಶಶಾದಸಂಜ್ಞಾಮವಾಪ ಪಿತ್ರಾ ಚ ಪರಿತ್ಯಕ್ತಃ ॥ 18 ॥ ಪಿತರ್ಯುಪರತೇ ಚಾಸಾವಖಿಲಾಮೇತಾಂ ಪೃಥ್ವೀಂ ಧರ್ಮತಶ್ಶಶಾಸ ॥ 19 ॥ ಶಶಾದಸ್ಯ ತಸ್ಯ ಪುರಂಜಯೋ ನಾಮ ಪುತ್ರೋಽಭವತ್ ॥ 20 ॥ ತಸ್ಯೇದಂ ಚಾನ್ಯತ್ ॥ 21 ॥ ಪುರಾ ಹಿ ತ್ರೇತಾ-ಯಾಂ ದೇವಾಸುರಯುದ್ಧಮತಿಭೀಷಣಮಭವತ್ ॥ 22 ॥ ತತ್ರ ಚಾತಿ-ಬಲಿಭಿರಸುರೈರಮರಾಃ ಪರಾಜಿತಾಸ್ತೇ ಭಗವಂತಂ ವಿಷ್ಣುಮಾರಾಧ-ಯಾಂಚಕ್ರುಃ ॥ 23 ॥ ಪ್ರಸನ್ನಶ್ಚ ದೇವಾನಾಮನಾದಿನಿಧನೋಽಖಿಲಜಗ-**

---

ಒಂದು ಮೊಲವನ್ನು ತಿಂದು, ಉಳಿದ ಮಾಂಸವನ್ನು ತಂದು ತಂದೆಗೆ ಒಪ್ಪಿಸಿದನು (15-16). (ಶ್ರಾದ್ಧಸಮಯದಲ್ಲಿ) ಅದನ್ನು ಪ್ರೋಕ್ಷಿಸುವಂತೆ ಇಕ್ಷ್ವಾಕು ತನ್ನ ಕುಲಪುರೋಹಿತರಾದ ವಸಿಷ್ಠರಿಗೆ ಹೇಳಿದನು. ಆಗ ವಸಿಷ್ಠರು "ಅಪವಿತ್ರವಾದ ಈ ಮಾಂಸ ಬೇಕಾಗಿಲ್ಲ. ದುರಾತ್ಮನಾದ ನಿನ್ನ ಮಗನು ಇದನ್ನು ಕೆಡಿಸಿದ್ದಾನೆ. ಆತನು ಮೊಲವನ್ನು ತಿಂದು ಹಾಕಿದ್ದಾನೆ" ಎಂದರು (17). ಗುರುವು ಹೀಗೆ ಹೇಳಿದ್ದರಿಂದ ವಿಕುಕ್ಷಿಗೆ ಶಶಾದ ಎಂಬ ಹೆಸರು ಬಳಕೆಗೆ ಬಂದಿತು (ಶಶಾದ = ಮೊಲವನ್ನು ತಿಂದವನು). ತಂದೆಯು ಆತನನ್ನು ಪರಿತ್ಯಜಿಸಿದನು (18). ತಂದೆಯಾದ ಇಕ್ಷ್ವಾಕುವಿನ ಮರಣಾನಂತರ ಶಶಾದನು ಈ ಸಮಸ್ತ ಪೃಥ್ವಿಯನ್ನೂ ಧರ್ಮದಿಂದ ಪರಿಪಾಲಿಸಿದನು. ಶಶಾದನಿಗೆ ಪುರಂಜಯನೆಂಬ ಪುತ್ರನು ಉದಯಿಸಿದನು (19-20). ಪುರಂಜಯನಿಗೆ ಇನ್ನೂ ಒಂದು ಹೆಸರು ಬಂದಿತು. ಏನೆಂದರೆ, ಹಿಂದೆ ತ್ರೇತಾಯುಗದಲ್ಲಿ ದೇವಾಸುರರ ನಡುವೆ ಅತಿ ಭೀಕರವಾದ ಯುದ್ಧ ನಡೆದಿತ್ತು. ಆಗ ಅತ್ಯಂತ ಬಲಿಷ್ಠರಾದ ಅಸುರರಿಂದ ಪರಾಜಿತರಾದ ದೇವತೆಗಳು ಭಗವಾನ್ ವಿಷ್ಣುವನ್ನು ಆರಾಧಿಸಿದರು (21-23). ಆಗ ಆದ್ಯಂತರಹಿತನೂ ಅಖಿಲವಿಶ್ವಕ್ಕೆ ಗತಿಯೂ ಆದ ಶ್ರೀಮನ್ನಾರಾಯಣನು

ತ್ವರಾಯಣೋ ನಾರಾಯಣಃ ಪ್ರಾಹ ॥24॥ ಜ್ಞಾತಮೇತನ್ಮಯಾ ಯುಷ್ಮಾಭಿರ್ಯದಭಿಲಷಿತಂ ತದರ್ಥಮಿದಂ ಶ್ರೂಯತಾಮ್ ॥25॥ ಪುರಂಜಯೋ ನಾಮ ರಾಜರ್ಷೇಶ್ಶಶಾದಸ್ಯ ತನಯಃ ಕ್ಷತ್ರಿಯವರೋ ಯಸ್ತಸ್ಯ ಶರೀರೇಽಹಮಂಶೇನ ಸ್ವಯಮೇವಾವತೀರ್ಯ ತಾನಶೇಷಾನ್ ಅಸುರಾನ್ನಿಹನಿಷ್ಯಾಮಿ ತದ್ಭವದ್ಭಿಃ ಪುರಂಜಯೋಽಸುರವಧಾರ್ಥ-ಮುದ್ಯೋಗಂ ಕಾರ್ಯತಾಮಿತಿ ॥26॥ ಏತಚ್ಚ ಶ್ರುತ್ವಾ ಪ್ರಣಮ್ಯ ಭಗವಂತಂ ವಿಷ್ಣುಮಮರಾಃ ಪುರಂಜಯಸಕಾಶಮಾಜಗ್ಮುರೂಚು-ಶ್ಚೈನಮ್ ॥27॥ ಭೋ ಭೋ ಕ್ಷತ್ರಿಯವರ್ಯಾಽಸ್ಮಾಭಿರಭ್ಯರ್ಥಿತೇನ ಭವತಾಸ್ಮಾಕಮರಾತಿವಧೋದ್ಯತಾನಾಂ ಕರ್ತವ್ಯಂ ಸಾಹಾಯ್ಯಮಿಚ್ಛಾಮಃ ತದ್ಭವತಾಽಸ್ಮಾಕಮಭ್ಯಾಗತಾನಾಂ ಪ್ರಣಯಭಂಗೋ ನ ಕಾರ್ಯ ಇತ್ಯುಕ್ತಃ ಪುರಂಜಯಃ ಪ್ರಾಹ ॥28॥ ತ್ರೈಲೋಕ್ಯನಾಥೋ ಯೋಽಯಂ ಯುಷ್ಮಾಕಮಿಂದ್ರಃ ಶತಕ್ರತುರಸ್ಯ ಯದ್ಯಯಂ ಸ್ಕಂಧಾಧಿರೂಢೋ ಯುಷ್ಮಾಕಮರಾತಿಭಿಸ್ಸಹ ಯೋತ್ಸ್ಯೇ ತದಹಂ ಭವತಾಂ ಸಹಾಯಃ

---

ದೇವತೆಗಳಿಗೆ ಪ್ರಸನ್ನನಾಗಿ "ನಿಮಗೆ ಅಭೀಷ್ಟವಾದುದು ಏನೆಂಬುದು ನನಗೆ ತಿಳಿದಿದೆ, ಕೇಳಿರಿ. ರಾಜರ್ಷಿಯಾದ ಶಶಾದನಿಗೆ ಕ್ಷತ್ರಿಯೋತ್ತಮನಾದ ಪುರಂಜಯನೆಂಬ ಪುತ್ರನಿರುವನಷ್ಟೆ. ಆತನ ಶರೀರದಲ್ಲಿ ಅಂಶಮಾತ್ರದಿಂದ ನಾನೇ ಅವತರಿಸಿ ಸಮಸ್ತ ಅಸುರರನ್ನೂ ಸಂಹರಿಸುವೆನು. ಆದ್ದರಿಂದ ಪುರಂಜಯನು ಅಸುರವಧೆಗೆ ಉದ್ಯುಕ್ತನಾಗುವಂತೆ ಮಾಡಿರಿ" ಎಂದು ಹೇಳಿದನು (24-26). ಈ ನುಡಿಯನ್ನು ಕೇಳಿ ದೇವತೆಗಳು ವಿಷ್ಣುವಿಗೆ ನಮಸ್ಕರಿಸಿ ಪುರಂಜಯನ ಬಳಿಗೆ ಹೋಗಿ "ಹೇ ಕ್ಷತ್ರಿಯೋತ್ತಮ, ನಮ್ಮ ವೈರಿಗಳನ್ನು ಸಂಹರಿಸುವುದಕ್ಕಾಗಿ ನಾವು ಪ್ರಯತ್ನಿಸಿದ್ದೇವೆ. ನಮಗೆ ಸಹಾಯ ಮಾಡಬೇಕೆಂದು ನಿನ್ನನ್ನು ಪ್ರಾರ್ಥಿಸಿಕೊಳ್ಳುತ್ತೇವೆ. ಸ್ನೇಹಪೂರ್ವಕವಾದ ಈ ಪ್ರಾರ್ಥನೆಯನ್ನು ನಿರಾಕರಿಸಬಾರದು ಎಂದರು. ಅದಕ್ಕೆ ಪುರಂಜಯನು ಹೀಗೆಂದನು (27-28). "ಶತಕ್ರತುವಾಗಿ ತ್ರಿಲೋಕೇಶ್ವರನೆನಿಸಿದ ಯಾವ ನಿಮ್ಮ ಇಂದ್ರನಿದ್ದಾನೋ ಆತನ ಹೆಗಲ ಮೇಲೆ ಕುಳಿತು ನಿಮ್ಮ ವೈರಿಗಳೊಡನೆ ಯುದ್ಧ ಮಾಡಲು ಅವಕಾಶವಾಗುವುದಾದರೆ, ಆಗ ನಿಮಗೆ ಸಹಾಯ ಮಾಡಿಯೇನು!"

ಸ್ಯಾಮ್ ॥ 29 ॥ ಇತ್ಯಾಕರ್ಣ್ಯ ಸಮಸ್ತದೇವೈರಿಂದ್ರೇಣ ಚ ಬಾಢಮಿತ್ಯೇವಂ ಸಮನ್ವೀಪ್ಸಿತಮ್ ॥ 30 ॥ ತತಶ್ಚ ಶತಕ್ರತೋರ್ವೃಷರೂಪಧಾರಿಣಃ ಕಕುದಿ ಸ್ಥಿತೋಽತಿರೋಷಸಮನ್ವಿತೋ ಭಗವತಶ್ಚರಾಚರಗುರೋರಚ್ಯುತಸ್ಯ ತೇಜಸಾಽಽಪ್ಯಾಯಿತೋ ದೇವಾಸುರಸಂಗ್ರಾಮೇ ಸಮಸ್ತಾನೇವಾ- ಸುರಾನ್ನಿಜಘಾನ ॥ 31 ॥ ಯತಶ್ಚ ವೃಷಭಕಕುದಿ ಸ್ಥಿತೇನ ರಾಜ್ಞಾ ದೈತೇಯಬಲಂ ನಿಷೂದಿತಮತಶ್ಚಾಸೌ ಕಕುತ್ಸ್ಥಸಂಜ್ಞಾಮವಾಪ ॥ 32 ॥ ಕಕುತ್ಸ್ಥಸ್ಯಾಪ್ಯನೇನಾಃ ಪುತ್ರೋಽಭವತ್ ॥ 33 ॥ ಪೃಥುರನೇನಸಃ ॥ 34 ॥ ಪೃಥೋರ್ವಿಷ್ಟರಾಶ್ವಃ ॥ 35 ॥ ತಸ್ಯಾಪಿ ಚಾಂದ್ರೋಯುವನಾಶ್ವಃ ॥ 36 ॥ ಚಾಂದ್ರಸ್ಯ ತಸ್ಯ ಯುವನಾಶ್ವಸ್ಯ ಶಾವಸ್ತಃ ಯಃ ಪುರೀಂ ಶಾವಸ್ತೀಂ ನಿವೇಶಯಾಮಾಸ ॥ 37 ॥ ಶಾವಸ್ತಸ್ಯ ಬೃಹದಶ್ವಃ ॥ 38 ॥ ತಸ್ಯಾಪಿ ಕುವಲ- ಯಾಶ್ವಃ ॥ 39 ॥ ಯೋಽಸಾವುದಕಸ್ಯ ಮಹರ್ಷೇರಪಕಾರಿಣಂ ಧುಂಧು- ನಾಮಾನಮಸುರಂ ವೈಷ್ಣವೇನ ತೇಜಸಾಪ್ಯಾಯಿತಃ ಪುತ್ರಸಹಸ್ರೈರೇಕ-

---

(29). ಈ ಮಾತನ್ನು ಎಲ್ಲದೇವತೆಗಳೂ ದೇವೇಂದ್ರನೂ ಆಲಿಸಿ, ಆಗಲಿ– ಎಂದು ಒಪ್ಪಿಕೊಂಡರು. ಅನಂತರ ದೇವೇಂದ್ರನು ವೃಷಭರೂಪವನ್ನು ತಾಳಿ ದನು. ಪುರಂಜಯನು ಅದರ ಹಿಣಲಮೇಲೆ ಕುಳಿತನು. ಚರಾಚರಗುರುವಾದ ಭಗವಾನ್ ಅಚ್ಯುತನು ಪುರಂಜಯನಲ್ಲಿ ಆವಿಷ್ಟನಾದನು. ಆಮೇಲೆ ನಡೆದ ದೇವಾಸುರರಸಂಗ್ರಾಮದಲ್ಲಿ ರೋಷಾನ್ವಿತನಾಗಿ ಸಮಸ್ತ ಅಸುರರನ್ನೂ ಸಂಹರಿ ಸಿದನು (30-31). ಹೀಗೆ ಪುರಂಜಯನು ವೃಷಭದ ಕಕುತ್ತಿನ (ಹಿಣಲಿನ) ಮೇಲೆ ಕುಳಿತು ದೈತ್ಯಬಲವನ್ನು ಸಂಹರಿಸಿದ್ದರಿಂದ ಅವನಿಗೆ ಕಕುತ್ಸ್ಥ ಎಂಬ ಹೆಸರು ಬಂದಿತು. ಕಕುತ್ಸ್ಥನಿಗೆ ಅನೇನ ಎಂಬ ತನಯನು ಹುಟ್ಟಿದನು. ಅವನ ಮಗ ಪೃಥು. ಪೃಥುವಿನ ಮಗ ವಿಷ್ಟರಾಶ್ವ (32-35). ಚಾಂದ್ರಯುವನಾಶ್ವನು ಆತನ ಪುತ್ರ. ಅವನ ಮಗ ಶಾವಸ್ತ. ಈತನು ಶಾವಸ್ತೀಪುರಿಯನ್ನು ಕಟ್ಟಿಸಿ ಅದರಲ್ಲಿ ವಾಸವಾಗಿದ್ದನು. ಶಾವಸ್ತನ ತನಯ ಬೃಹದಶ್ವ. ಆತನ ತನಯ ಕುವಲಯಾಶ್ವ (36-39). ಇವನು ವೈಷ್ಣವ ತೇಜಸ್ಸಿನಿಂದ ಪೂರಿತನಾಗಿ ತನ್ನ ಇಪ್ಪತ್ತೊಂದು ಸಾವಿರ ಪುತ್ರರೊಡನೆ ಕೂಡಿಕೊಂಡು, ಉದಕನೆಂಬ ಮಹರ್ಷಿಗೆ ಅಪಕಾರ ಮಾಡಿದ ಧುಂಧು ಎಂಬ ದೈತ್ಯನನ್ನು ವಧಿಸಿದನು. ಈ ಕಾರಣದಿಂದ ಕುವಲ

**ವಿಂಶದ್ಭಿಃ ಪರಿವೃತೋ ಜಘಾನ ಧುಂಧುಮಾರಸಂಜ್ಞಾಮವಾಪ ॥ 40 ॥ ತಸ್ಯ ಚ ತನಯಾಸ್ಸಮಸ್ತಾ ಏವ ಧುಂಧುಮುಖನಿಃಶ್ವಾಸಾಗ್ನಿನಾ ವಿಪ್ಲುಷ್ಟಾ ವಿನೇಶುಃ ॥ 41 ॥ ದೃಢಾಶ್ವಚಂದ್ರಾಶ್ವಕಪಿಲಾಶ್ವಾಶ್ಚ ತ್ರಯಃ ಕೇವಲಮವಶೇಷಿತಾಃ ॥ 42 ॥ ದೃಢಾಶ್ವಾದ್ಧರ್ಯಶ್ವಃ ॥ 43 ॥ ತಸ್ಮಾಚ್ಚ ನಿಕುಂಭಃ ॥ 44 ॥ ನಿಕುಂಭಸ್ಯಾಮಿತಾಶ್ವಃ ॥ 45 ॥ ತತಶ್ಚ ಕೃಶಾಶ್ವಃ ॥ 46 ॥ ತಸ್ಮಾಚ್ಚ ಪ್ರಸೇನಜಿತ್ ॥ 47 ॥ ಪ್ರಸೇನಜಿತೋ ಯುವನಾಶ್ವೋಽಭವತ್ ॥ 48 ॥ ತಸ್ಯ ಚಾಪುತ್ರಸ್ಯಾತಿನಿರ್ವೇದಾನ್ಮುನೀನಾಮಾಶ್ರಮಮಂಡಲೇ ನಿವಸತೋ ದಯಾಲುಭಿರ್ಮುನಿಭಿರಪತ್ಯೋತ್ಪಾದನಾಯೇಷ್ಟಿಃ ಕೃತಾ ॥ 49 ॥ ತಸ್ಯಾಂ ಚ ಮಧ್ಯರಾತ್ರೌ ನಿವೃತ್ತಾಯಾಂ ಮಂತ್ರಪೂತಜಲಪೂರ್ಣಂ ಕಲಶಂ ವೇದಿಮಧ್ಯೇ ನಿವೇಶ್ಯ ತೇ ಮುನಯಃ ಸುಷುಪುಃ ॥ 50 ॥ ಸುಪ್ತೇಷು ತೇಷು ಅತೀವ ತೃಟ್‌ಪರೀತಸ್ಸ ಭೂಪಾಲಸ್ತಮಾಶ್ರಮಂ ವಿವೇಶ ॥ 51 ॥ ಸುಪ್ತಾಂಶ್ಚ ತಾನೃಷೀನ್ನೈವೋತ್ಥಾಪಯಾಮಾಸ ॥ 52 ॥ ತಚ್ಚ ಕಲಶ-**

---

ಯಾಶ್ವನಿಗೆ ಧುಂಧುಮಾರನೆಂಬ ಹೆಸರು ಬಂದಿತು (40). ಆದರೆ ಈತನ ಎಲ್ಲ ಮಕ್ಕಳೂ ಧುಂಧುವಿನ ಮುಖದಿಂದ ಹೊರಟ ನಿಃಶ್ವಾಸಾಗ್ನಿಯಿಂದ ದಗ್ಧರಾಗಿ ಸತ್ತುಹೋದರು. ದೃಢಾಶ್ವ, ಚಂದ್ರಾಶ್ವ, ಕಪಿಲಾಶ್ವ—ಎಂಬ ಮೂವರು ಮಾತ್ರ ಉಳಿದುಕೊಂಡರು (41-42). ದೃಢಾಶ್ವನಿಂದ ಹರ್ಯಶ್ವನೂ ಅವನಿಂದ ನಿಕುಂಭನೂ ಅವನಿಂದ ಅಮಿತಾಶ್ವನೂ ಆತನಿಂದ ಕೃಶಾಶ್ವನೂ ಜನಿಸಿದರು. ಕೃಶಾಶ್ವನಿಂದ ಪ್ರಸೇನಜಿತ್; ಆತನಿಂದ ಯುವನಾಶ್ವನೂ ಜನಿಸಿದನು (43-48). ಯುವನಾಶ್ವನಿಗೆ ಸಂತತಿ ಇರಲಿಲ್ಲ. ಆದರಿಂದ ಆತನು ಬಹಳ ಬೇಸರಗೊಂಡು ಮುನಿಗಳ ಆಶ್ರಮದಲ್ಲಿ ಇರತೊಡಗಿದನು. ಆಗ ದಯಾಳುಗಳಾದ ಮುನಿಗಳು ಕೃಶಾಶ್ವನಿಗೆ ಸಂತತಿಯಾಗಲೆಂದು ಒಂದು ಯಾಗವನ್ನು ಮಾಡಿದರು (49). ಮಧ್ಯರಾತ್ರದ ಸಮಯದಲ್ಲಿ ಆ ಯಾಗವು ಸಮಾಪ್ತವಾಗಲಾಗಿ ಮಂತ್ರಪೂತ ವಾದ ಜಲವನ್ನು ತುಂಬಿದ ಕಲಶವನ್ನು ವೇದಿಕೆಯಲ್ಲಿಟ್ಟು ಆ ಮುನಿಗಳು ನಿದ್ರಿಸಿದರು (50). ಅವರು ನಿದ್ರಿಸುತ್ತಿರುವಾಗ ಬಹಳ ಬಾಯಾರಿಕೆಯಿಂದ ಬಳಲುತ್ತ ರಾಜನು ಆಶ್ರಮದೊಳಗೆ ಬಂದನು. ಋಷಿಗಳು ನಿದ್ರಿಸುತ್ತಿದ್ದುದ ರಿಂದ ಅವರನ್ನು ಎಬ್ಬಿಸಲಿಲ್ಲ. ಅಪರಿಮಿತ ಮಹಿಮೆಯಿಂದ ಕೂಡಿದ್ದ ಕಲಶದ

**ಮಪರಿಮೇಯಮಾಹಾತ್ಮ್ಯಮಂತ್ರಪೂತಂ ಪಪೌ ॥ 53 ॥ ಪ್ರಬುದ್ಧಾಶ್ಚ ಋಷಯಃ ಪಪ್ರಚ್ಛುಃ ಕೇನೈತನ್ಮಂತ್ರಪೂತಂ ವಾರಿ ಪೀತಮ್ ॥ 54 ॥ ಅತ್ರ ಹಿ ರಾಜ್ಞೋ ಯುವನಾಶ್ವಸ್ಯ ಪತ್ನೀ ಮಹಾಬಲಪರಾಕ್ರಮಂ ಪುತ್ರಂ ಜನಯಿಷ್ಯತಿ। ಇತ್ಯಾಕರ್ಣ್ಯ ಸ ರಾಜಾ ಅಜಾನತಾ ಮಯಾ ಪೀತ-ಮಿತ್ಯಾಹ ॥ 55 ॥ ಗರ್ಭಶ್ಚ ಯುವನಾಶ್ವಸ್ಯೋದರೇ ಅಭವತ್ ಕ್ರಮೇಣ ಚ ವವೃಧೇ ॥ 56 ॥ ಪ್ರಾಪ್ತಸಮಯಶ್ಚ ದಕ್ಷಿಣಂ ಕುಕ್ಷಿಮವನಿಪತೇ-ರ್ನಿರ್ಭಿದ್ಯ ನಿಶ್ಚಕ್ರಾಮ ॥ 57 ॥ ನ ಚಾಸೌ ರಾಜಾ ಮಮಾರ ॥ 58 ॥ ಜಾತೋ ನಾಮ್ನೈಷ ಕಂ ಧಾಸ್ಯತೀತಿ ತೇ ಮುನಯಃ ಪ್ರೋಚುಃ ॥ 59 ॥ ಅಥಾಗತ್ಯ ದೇವರಾಜೋಽಬ್ರವೀತ್ ಮಾಮಯಂ ಧಾಸ್ಯತೀತಿ ॥ 60 ॥ ತತೋ ಮಾಂಧಾತೃನಾಮಾ ಸೋಽಭವತ್। ವಕ್ತ್ರೇ ಚಾಸ್ಯ ಪ್ರದೇಶಿನೀ ದೇವೇಂದ್ರೇಣ ನ್ಯಸ್ತಾ ತಾಂ ಪಪೌ ॥ 61 ॥ ತಾಂ ಚಾಮೃತಸ್ರಾವಿಣೀ-**

---

ಜಲವನ್ನು ಆ ರಾಜನು ಕುಡಿದುಬಿಟ್ಟನು! (51-53). ಆಮೇಲೆ ಋಷಿಗಳು ಎಚ್ಚೆತ್ತು ಮಂತ್ರಪೂತವಾದ ಆ ಜಲವನ್ನು ಯಾರು ಕುಡಿದರೆಂದು ವಿಚಾರಿಸಿದರು. 'ಈ ಜಲವನ್ನು ಕುಡಿದರೆ ಯುವನಾಶ್ವರಾಜನ ಪತ್ನಿಯು ಮಹಾಬಲ ಪರಾಕ್ರಮ ಸಂಪನ್ನನಾದ ಪುತ್ರನನ್ನು ಪಡೆಯುತ್ತಿದ್ದಳು' ಎಂದರು. ಈ ಮಾತನ್ನು ಕೇಳಿ ಆ ರಾಜನು 'ಗೊತ್ತಿಲ್ಲದೆ ನಾನೇ ಆ ಜಲವನ್ನು ಕುಡಿದುಬಿಟ್ಟೆನು' ಎಂದು ತಿಳಿಸಿದನು (54-55). ಅನಂತರ ಯುವನಾಶ್ವನ ಹೊಟ್ಟೆಯಲ್ಲಿ ಗರ್ಭವು ಅಂಕುರಿಸಿ ಕ್ರಮವಾಗಿ ಬೆಳೆಯಿತು! ಯಥಾ ಸಮಯದಲ್ಲಿ ಶಿಶು ಆ ರಾಜನ ಹೊಟ್ಟೆಯ ಬಲಭಾಗವನ್ನು ಸೀಳಿಕೊಂಡು ಹೊರಬಂದಿತು! ರಾಜನೇನೂ ಸಾಯಲಿಲ್ಲ (56-58). ಶಿಶು ಹುಟ್ಟಿದಾಗ ಋಷಿಗಳು 'ಈ ಬಾಲಕನು ಯಾರನ್ನು (ಯಾರ ಮೊಲೆಹಾಲನ್ನು) ಕುಡಿದು ಬದುಕುವನು?' ಎಂದರು. ಆಗ ದೇವೇಂದ್ರನು ಬಂದು 'ಮಾಂಧಾಸ್ಯತಿ = ನನ್ನನ್ನು ಕುಡಿದು ಬದುಕುವನು' ಎಂದು ಹೇಳಿದನು. ದೇವೇಂದ್ರನು 'ಮಾಂ ಧಾಸ್ಯತಿ' ಎಂದು ಹೇಳಿದ್ದರಿಂದ ಆ ಬಾಲಕನಿಗೆ 'ಮಾಂಧಾತೃ' ಎಂದು ಹೆಸರಾಯಿತು. ಮಗುವಿನ ಬಾಯಲ್ಲಿ ಇಂದ್ರನು ತನ್ನ ತರ್ಜನೀ ಬೆರಳನ್ನು ಇಡಲಾಗಿ, ಮಗು ಅದನ್ನು ಚೀಪತೊಡಗಿತು (59-61). ಆ ಬೆರಳು ಅಮೃತಸ್ರಾವಿಯಾಗಿದ್ದುದರಿಂದ ಮಗು ಅಮೃತವನ್ನು

**ಮಾಸ್ವಾದ್ಯಾಹ್ನೈವ ಸ ವ್ಯವರ್ಧತ ॥ 62 ॥ ತತಸ್ತು ಮಾಂಧಾತಾ ಚಕ್ರವರ್ತೀ ಸಪ್ತದ್ವೀಪಾಂ ಮಹೀಂ ಬುಭುಜೇ ॥ 63 ॥ ತತ್ರಾಯಂ ಶ್ಲೋಕಃ ॥ 64 ॥**

**ಯಾವತ್ಸೂರ್ಯ ಉದೇತ್ಯಸ್ತಂ ಯಾವಚ್ಚ ಪ್ರತಿತಿಷ್ಠತಿ ।**
**ಸರ್ವಂ ತದ್ಯೌವನಾಶ್ವಸ್ಯ ಮಾಂಧಾತುಃ ಕ್ಷೇತ್ರಮುಚ್ಯತೇ ॥ 65**

**ಮಾಂಧಾತಾ ಶತಬಿಂದೋರ್ದುಹಿತರಂ ಬಿಂದುಮತೀಮುಪಯೇಮೇ ॥ 66 ॥ ಪುರುಕುತ್ಸಮಂಬರೀಷಂ ಮುಚುಕುಂದಂ ಚ ತಸ್ಯಾಂ ಪುತ್ರ-ತ್ರಯಮುತ್ಪಾದಯಾಮಾಸ ॥ 67 ॥ ಪಂಚಾಶದ್ದುಹಿತರಸ್ತಸ್ಯಾಮೇವ ತಸ್ಯ ನೃಪತೇರ್ಬಭೂವುಃ ॥ 68 ॥ ತಸ್ಮಿನ್ನಂತರೇ ಬಹ್ವೃಚಶ್ಚ ಸೌಭರಿರ್ನಾಮ ಮಹರ್ಷಿರಂತರ್ಜಲೇ ದ್ವಾದಶಾಬ್ದಂ ಕಾಲಮುವಾಸ ॥69 ॥ ತತ್ರ ಚಾಂತ-ರ್ಜಲೇ ಸಮ್ಮದೋ ನಾಮಾತಿಬಹುಪ್ರಜೋಽತಿಮಾತ್ರಪ್ರಮಾಣೋ ಮೀನಾಧಿಪತಿರಾಸೀತ್ ॥ 70 ॥ ತಸ್ಯ ಚ ಪುತ್ರಪೌತ್ರದೌಹಿತ್ರಾಃ ಪೃಷ್ಠತೋಽಗ್ರತಃ ಪಾರ್ಶ್ವಯೋಃ ಪಕ್ಷಪುಚ್ಛಶಿರಸಾಂ ಚೋಪರಿ ಭ್ರಮಂ-**

---

ಹೀರಿ ಒಂದು ಹಗಲಿನಲ್ಲಿಯೇ ಬೆಳೆಯಿತು. ಮುಂದೆ ಆ ಮಾಂಧಾತನು ಚಕ್ರವರ್ತಿಯಾಗಿ ಸಪ್ತದ್ವೀಪಸಮೇತವಾದ ಪೃಥ್ವಿಯನ್ನು ಆಳಿದನು. ಆ ವಿಷಯ ದಲ್ಲಿ ಒಂದು ಶ್ಲೋಕ ಉಂಟು (62-64). "ಎಲ್ಲೆಲ್ಲಿ ಸೂರ್ಯನು ಹುಟ್ಟುವನೋ ಎಲ್ಲೆಲ್ಲಿ ಮುಳುಗುವನೋ ಆ ಪ್ರದೇಶವೆಲ್ಲವೂ ಯುವನಾಶ್ವಪುತ್ರನಾದ ಮಾಂಧಾತೃವಿನ ಆಡಳಿತಕ್ಕೆ ಸೇರಿದ ಸ್ಥಳ" (65). ಮಾಂಧಾತನು ಶತಬಿಂದು ವಿನ ಮಗಳಾದ ಬಿಂದುಮತಿಯೆಂಬ ಕನ್ಯೆಯನ್ನು ಮದುವೆಯಾದನು. ಅವಳಲ್ಲಿ ಪುರುಕುತ್ಸ, ಅಂಬರೀಷ, ಮುಚುಕುಂದ ಎಂಬ ಮೂವರು ಪುತ್ರರನ್ನು ಪಡೆ ದನು. ಆ ರಾಜನಿಗೆ ಇವರಲ್ಲದೆ ಬಿಂದುಮತಿಯಲ್ಲಿಯೇ ಐವತ್ತು ಮಂದಿ ಹೆಣ್ಣು ಮಕ್ಕಳು ಹುಟ್ಟಿದರು (66-68). ಹೀಗಿರಲಾಗಿ ಋಗ್ವೇದಿಯಾದ ಸೌಭರಿ ಎಂಬ ಮಹರ್ಷಿಯು ನೀರಿನೊಳಗೆ (ತಪಸ್ಸು ಮಾಡುತ್ತ) ಹನ್ನೆರಡು ವರ್ಷಗಳ ಕಾಲ ಇದ್ದನು. ಆ ನೀರಿನೊಳಗೆ ಸಂಮದನೆಂಬ ಬೃಹತ್ಕಾಯನಾದ ಮತ್ಸ್ಯರಾಜನು ಬಹುಮಂದಿ ಸಂತತಿಯೊಡನೆ ವಾಸಿಸುತ್ತಿದ್ದನು. ಆ ಮೀನಿನ ಪುತ್ರಪೌತ್ರ ದೌಹಿತ್ರರು ಅದರ ಹಿಂದೆ ಮುಂದೆ ಪಾರ್ಶ್ವಗಳಲ್ಲಿ , ರೆಕ್ಕೆ ಪುಚ್ಛ ತಲೆಗಳ ಮೇಲೆ

**ತಸ್ತೇನೈವ ಸದಾಹರ್ನಿಶಮತಿನಿರ್ವೃತಾ ರೇಮಿರೇ ॥ 71 ॥ ಸ ಚಾಪತ್ಯ-ಸ್ಪರ್ಶೋಽಪಚೀಯಮಾನಪ್ರಹರ್ಷಪ್ರಕರ್ಷೋಽ ಬಹುಪ್ರಕಾರಂ ತಸ್ಯ ಋಷೇಃ ಪಶ್ಯತಸ್ತೈರಾತ್ಮಜಪುತ್ರಪೌತ್ರದೌಹಿತ್ರಾದಿಭಿಃ ಸಹಾನುದಿನಂ ಸುತರಾಂ ರೇಮೇ ॥ 72 ॥ ಅಥಾಂತರ್ಜಲಾವಸ್ಥಿತಸ್ಸೌಭರಿರೇಕಾಗ್ರತ-ಸ್ಸಮಾಧಿಮಪಹಾಯಾನುದಿನಂ ತಸ್ಯ ಮತ್ಸ್ಯಸ್ಯಾತ್ಮಜಪುತ್ರಪೌತ್ರದೌಹಿ-ತ್ರಾದಿಭಿಸ್ಸಹಾತಿರಮಣೀಯತಾಮವೇಕ್ಷ್ಯಾಚಿಂತಯತ್ ॥ 73 ॥ ಅಹೋ, ಧನ್ಯೋಽಯಮೀದೃಶಮನಭಿಮತಂ ಯೋನ್ಯಂತರಮವಾಪ್ಯೈಭಿರಾತ್ಮಜ-ಪುತ್ರಪೌತ್ರದೌಹಿತ್ರಾದಿಭಿಸ್ಸಹ ರಮಮಾಣೋಽತೀವಾಸ್ಮಾಕಂ ಸ್ಪೃಹಾ-ಮುತ್ಪಾದಯತಿ ॥ 74 ॥ ವಯಮಪ್ಯೇವಂ ಪುತ್ರಾದಿಭಿಸ್ಸಹ ಲಲಿತಂ ರಂಸ್ಯಾಮಹೇ ಇತ್ಯೇವಮಭಿಕಾಂಕ್ಷನ್ ಸ ತಸ್ಮಾದಂತರರ್ಜಲಾನ್ನಿಷ್ಕ್ರಮ್ಯ ಸಂತಾನಾಯ ನಿವೇಷ್ಟುಕಾಮಃ ಕನ್ಯಾರ್ಥಂ ಮಾಂಧಾತಾರಂ ರಾಜಾನಮ್ ಆಗಚ್ಛತ್ ॥ 75 ॥ ಆಗಮನಶ್ರವಣಸಮನಂತರಂ ಚೋತ್ಥಾಯ ತೇನ**

---

ಈಜುತ್ತಾ ಹೊರಳುತ್ತಾ ಪರಮಾನಂದದಿಂದ ವಿಹರಿಸುತ್ತಿದ್ದವು (69-71). ಸೌಭರಿ ಮಹರ್ಷಿಯು ನೋಡುತ್ತಿರುವಾಗ ಆತನೆದುರಿಗೆ ಆ ಮೀನರಾಜನು ತನ್ನ ಮಕ್ಕಳ ಮೊಮ್ಮಕ್ಕಳ ಸ್ಪರ್ಶದಿಂದ ಮತ್ತೆ ಮತ್ತೆ ಹಿಗ್ಗುತ್ತ , ತನ್ನ ಸಂತತಿಯಾದ ಪುತ್ರಪೌತ್ರದೌಹಿತ್ರರೊಡನೆ ಪ್ರತಿದಿನವೂ ಬಹುಪ್ರಕಾರವಾಗಿ ಕ್ರೀಡಿಸುತ್ತಾ ಆನಂದಿಸುತ್ತಿದ್ದನು (72). ಹೀಗೆ ಪ್ರತಿದಿನವೂ ಆ ದೊಡ್ಡ ಮೀನು ತನ್ನ ಮಕ್ಕಳು ಮೊಮ್ಮಕ್ಕಳೊಡನೆ ಕ್ರೀಡಿಸುತ್ತಿರುವುದನ್ನು ಜಲಮಧ್ಯದಲ್ಲಿದ್ದು ನೋಡುತ್ತಿದ್ದ ಸೌಭರಿಮುನಿಯು ತಪಸ್ಸನ್ನು ಬದಿಗೆ ತಳ್ಳಿ ಹೀಗೆ ಚಿಂತಿಸಿದನು (73): "ಆಹಾ! ಈ ರೀತಿಯಾಗಿ ಅನಿಷ್ಟವಾದ ಕೀಳು ಜನ್ಮವನ್ನು ಪಡೆದಿದ್ದರೂ ಈ ಮೀನು ಧನ್ಯ! ತನ್ನ ಮಕ್ಕಳು ಮೊಮ್ಮಕ್ಕಳು ಮೊದಲಾದವರೊಡನೆ ಕ್ರೀಡಿಸಿ ಆನಂದಿಸು ತ್ತಿರುವ ಇದು ನಮಗೂ ಆಸೆಯನ್ನು ಹುಟ್ಟಿಸುತ್ತದೆ (74). ಹೀಗೆಯೇ ನಾವು ಪುತ್ರಾದಿಗಳೊಡನೆ ಚಿನ್ನಾಟವನ್ನಾಡುತ್ತ ಆನಂದಿಸೋಣ!" ಈ ರೀತಿ ಆಸೆ ಹುಟ್ಟಲಾಗಿ ಸೌಭರಿ ಮುನಿಯು ಜಲಮಧ್ಯದಿಂದ ಹೊರಬಂದನು. ಸಂತಾನ ಕ್ಕಾಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಲಪೇಕ್ಷಿಸಿ ಕನ್ಯಾರ್ಥಿಯಾಗಿ ಮಾಂಧಾತೃ ರಾಜನ ಬಳಿಗೆ ಬಂದನು (75). ಮುನಿಯು ಬಂದುದನ್ನು ಕೇಳಿದೊಡನೆ ರಾಜನು

**ರಾಜ್ಞಾ ಸಮ್ಯಗರ್ಘ್ಯಾದಿನಾ ಸಂಪೂಜಿತಃ ಕೃತಾಸನಪರಿಗ್ರಹಃ ಸೌಭರಿಃ ಉವಾಚ ರಾಜಾನಮ್ ॥ 76 ॥**

*ಸೌಭರಿರುವಾಚ:*

**ನಿವೇಷ್ಟುಕಾಮೋಽಸ್ಮಿ ನರೇಂದ್ರ ಕನ್ಯಾಂ**
**ಪ್ರಯಚ್ಛ ಮೇ ಮಾ ಪ್ರಣಯಂ ವಿಭಾಂಕ್ಷೀಃ ।**
**ನ ಹ್ಯರ್ಥಿನಃ ಕಾರ್ಯವಶಾದುಪೇತಾಃ**
**ಕಕುತ್ಸ್ಥವಂಶೇ ವಿಮುಖಾಃ ಪ್ರಯಾಂತಿ ॥ 77**

**ಅನ್ಯೇಪಿ ಸಂತ್ಯೇವ ನೃಪಾಃ ಪೃಥಿವ್ಯಾಂ**
**ಮಾಂಧಾತರೇಷಾಂ ತನಯಾಃ ಪ್ರಸೂತಾಃ ।**
**ಕಿಂ ತ್ವರ್ಥಿನಾಮರ್ಥಿತದಾನದೀಕ್ಷಾ-**
**ಕೃತವ್ರತಂ ಶ್ಲಾಘ್ಯಮಿದಂ ಕುಲಂ ತೇ ॥ 78**

**ಶತಾರ್ಧಸಂಖ್ಯಾಸ್ತವ ಸಂತಿ ಕನ್ಯಾ-**
**ಸ್ತಾಸಾಂ ಮಮೈಕಾಂ ನೃಪತೇ ಪ್ರಯಚ್ಛ ।**
**ಯತ್ಪ್ರಾರ್ಥನಾಭಂಗಭಯಾದ್ಬಿಭೇಮಿ**
**ತಸ್ಮಾದಹಂ ರಾಜವರಾತಿದುಃಖಾತ್ ॥ 79**

---

ಎದ್ದು ಬಂದು ಅರ್ಘ್ಯಾದಿಗಳನ್ನಿತ್ತು ಪೂಜಿಸಿದನು. ಅನಂತರ ಸೌಭರಿಯು ಪೀಠದಲ್ಲಿ ಕುಳಿತು ರಾಜನನ್ನು ಕುರಿತು ಇಂತೆಂದನು (76). "ನರೇಂದ್ರ, ನಾನು ವಿವಾಹಮಾಡಿಕೊಳ್ಳಲು ಬಯಸಿದ್ದೇನೆ. ನಿನ್ನ ಕನ್ಯೆಯೊಬ್ಬಳನ್ನು ವಿವಾಹವಿಧಿ ಯಿಂದ ನನಗೆ ಕೊಡು. ನನ್ನ ವಿಶ್ವಾಸಕ್ಕೆ ಭಂಗವನ್ನು ತರಬೇಡ. ಕಕುತ್ಸ್ಥವಂಶ ದಲ್ಲಿ ಕಾರ್ಯವಶದಿಂದ ಅತಿಥಿಗಳಾಗಿ ಬಂದವರು ಎಂದಿಗೂ ವ್ಯರ್ಥವಾಗಿ ಹೋದದ್ದಿಲ್ಲ (77). ಮಾಂಧಾತ, ಕನ್ಯಾಪಿತೃಗಳಾದ ಇನ್ನೂ ಅನೇಕ ರಾಜರು ಭೂಮಿಯಲ್ಲಿ ಇದ್ದಾರೆ. ಆದರೆ ಯಾಚಕರು ಯಾವ ವಸ್ತುವನ್ನು ಕೇಳುತ್ತಾರೋ ಅದನ್ನು ದಾನಮಾಡಬೇಕೆಂಬ ವ್ರತದಲ್ಲಿ ನಿನ್ನ ಕುಲವು ದೀಕ್ಷಾಬದ್ಧವಾಗಿ ಪ್ರಶಂಸೆ ಯನ್ನು ಗಳಿಸಿದೆ (78). ನಿನಗೆ ಐವತ್ತು ಮಂದಿ ಹೆಣ್ಣು ಮಕ್ಕಳಿದ್ದಾರೆ. ಅವರಲ್ಲಿ ಒಬ್ಬಳನ್ನು, ರಾಜ, ನನಗೆ ಮದುವೆಮಾಡಿಕೊಡು. ನನ್ನ ಪ್ರಾರ್ಥನೆಗೆ ಭಂಗ

*ಶ್ರೀಪರಾಶರ ಉವಾಚ:*

**ಇತಿ ಋಷಿವಚನಮಾಕರ್ಣ್ಯ ಸ ರಾಜಾ ಜರಾಜರ್ಜರಿತದೇಹಮ್ ಋಷಿಮಾಲೋಕ್ಯ ಪ್ರತ್ಯಾಖ್ಯಾನಕಾತರಸ್ತಸ್ಮಾಚ್ಚ ಶಾಪಭೀತೋ ಬಿಭ್ಯತ್ಕಿಂಚಿದಧೋಮುಖಶ್ಚಿರಂ ದಧ್ಯೌ ಚ ॥ 80 ॥**

*ಸೌಭರಿರುವಾಚ:*

**ನರೇಂದ್ರ ಕಸ್ಮಾತ್ಸಮುಪೈಷಿ ಚಿಂತಾ-**
**ಮಸಹ್ಯಮುಕ್ತಂ ನ ಮಯಾತ್ರ ಕಿಂಚಿತ್ ।**
**ಯಾವಶ್ಯದೇಯಾ ತನಯಾ ತಯೈವ**
**ಕೃತಾರ್ಥತಾ ನೋ ಯದಿ ಕಿಂ ನ ಲಭ್ಯಾ॥ 81**

*ಶ್ರೀಪರಾಶರ ಉವಾಚ:*

**ಅಥ ತಸ್ಯ ಭಗವತಶ್ಶಾಪಭೀತಸ್ಸ ಪ್ರಶ್ರಯಸ್ತಮುವಾಚಾಸೌ ರಾಜಾ ॥ 82 ॥**

---

ವಾದೀತೆಂದು ಹೆದರುತ್ತ, ರಾಜಶ್ರೇಷ್ಠ, ಅತಿ ದುಃಖದಿಂದಲೇ ಕೇಳಿಕೊಳ್ಳುತ್ತಿದ್ದೇನೆ (79). ಈ ಪ್ರಕಾರದಲ್ಲಾಡಿದ ಋಷಿಯ ಮಾತನ್ನು ಕೇಳಿದ ರಾಜನಿಗೆ ಮುಪ್ಪಿನಿಂದ ಜರ್ಜರಿತವಾದ ಆತನ ದೇಹವನ್ನು ನೋಡಿ ಪ್ರಾರ್ಥನೆಯನ್ನು ನಿರಾಕರಿಸಬೇಕೆಂಬ ತವಕ ಒಂದು ಕಡೆ, ಋಷಿಯು ಶಾಪವನ್ನು ಕೊಟ್ಟಾನೆಂಬ ಭಯ ಇನ್ನೊಂದು ಕಡೆ. ಹೀಗಾಗಿ ರಾಜನು ತಲೆ ತಗ್ಗಿಸಿ ಚಿಂತಾಗ್ರಸ್ತನಾದನು (80). ಆಗ ಸೌಭರಿಯು "ನರೇಂದ್ರ, ಏಕೆ ಚಿಂತಾಕುಲನಾಗಿದ್ದೀಯೇ? ಸಹಿಸಲು ಅಶಕ್ಯವಾದ ಯಾವ ಮಾತನ್ನೂ ನಾನು ಆಡಲಿಲ್ಲ. ಮಗಳನ್ನು ನೀನು ಅವಶ್ಯವಾಗಿ ಯಾರಿಗಾದರೂ ಕೊಡಲೇಬೇಕಾಗಿದೆಯಲ್ಲವೇ? ಅವಳಿಂದಲೇ ನನ್ನ ಪ್ರಾರ್ಥನೆಯೂ ನಡೆದುಹೋಗುವುದಾದರೆ, ನಿನಗೆ ಯಾವುದು ಅಲಭ್ಯವಾದೀತು? (ಸಕಲ ಇಷ್ಟಾರ್ಥವೂ ದೊರಕುತ್ತದೆ)" ಎಂದನು (81). ಆಗ ಮಹರ್ಷಿಯ ಶಾಪಕ್ಕೆ ಭೀತನಾಗಿದ್ದ ಮಾಂಧಾತ ರಾಜನು ವಿನಯದಿಂದ "ಭಗವನ್, ನಮ್ಮ ಕುಲಪದ್ಧತಿ ಹೀಗಿದೆ—ಸತ್ಕುಲ ಪ್ರಸೂತನಾದ ಯಾವ ವರನನ್ನು ಕನ್ಯೆ ಬಯಸುವಳೋ ಆತನಿಗೆ ಕೊಡುವುದು ನಮ್ಮ ಸಂಪ್ರದಾಯ.

*ರಾಜೋವಾಚ:*

**ಭಗವನ್, ಅಸ್ಮತ್ಕುಲಸ್ಥಿತಿರಿಯಂ ಯ ಏವ ಕನ್ಯಾಭಿರುಚಿತೋಽಭಿಜನವಾನ್ವರಸ್ತಸ್ಮೈ ಕನ್ಯಾ ಪ್ರದೀಯತೇ ಭಗವದ್ಯಾಚ್ಞಾ ಚಾಸ್ಮನ್ಮನೋರಥಾನಾಮಪ್ಯತಿಗೋಚರವರ್ತಿನೀ ಕಥಮಪ್ಯೇಷಾ ಸಂಜಾತಾ ತದೇವಮುಪಸ್ಥಿತೇ ನ ವಿದ್ಮಃ ಕಿಂ ಕುರ್ಮ ಇತ್ಯೇತನ್ಮಯಾ ಚಿಂತ್ಯತ ಇತ್ಯಭಿಹಿತೇ ಚ ತೇನ ಭೂಭುಜಾ ಮುನಿರಚಿಂತಯತ್ ॥ 83 ॥ ಅಯಮನ್ಯೋಽಸ್ಮತ್ಪ್ರತ್ಯಾಖ್ಯಾನೋಪಾಯೋ ವೃದ್ಧೋಽಯಮನಭಿಮತಃ ಸ್ತ್ರೀಣಾಂ ಕಿಮುತ ಕನ್ಯಕಾನಾಮಿತ್ಯಮುನಾ ಸಂಚಿಂತ್ಯೈತದಭಿಹಿತಮ್ ಏವಮಸ್ತು ತಥಾ ಕರಿಷ್ಯಾಮೀತಿ ಸಂಚಿಂತ್ಯ ಮಾಂಧಾತಾರಮುವಾಚ ॥ 84 ॥ ಯದ್ಯೇವಂ ತದಾದಿಶ್ಯತಾಮಸ್ಮಾಕಂ ಪ್ರವೇಶಾಯ ಕನ್ಯಾಂತಃಪುರವರ್ಷವರೋ ಯದಿ ಕನ್ಯೈವ ಕಾಚಿನ್ಮಾಮಭಿಲಷತಿ ತದಾಹಂ ದಾರಸಂಗ್ರಹಂ ಕರಿಷ್ಯಾಮಿ ಅನ್ಯಥಾ ಚೇತ್ತದಲಮಸ್ಮಾಕಮೇತೇನಾತೀತಕಾಲಾರಂಭಣೇನೇತ್ಯುಕ್ತ್ವಾ ವಿರರಾಮ ॥ 85 ॥ ತತಶ್ಚ ಮಾಂಧಾತ್ರಾ**

---

ಮಹರ್ಷಿಗಳಾದ ತಾವು ಯಾಚಿಸಿರುವುದು ನಮ್ಮ ಮನೋರಥವನ್ನು ಮೀರಿದ್ದು. ಈ ಅಭಿಲಾಷೆ ಹೇಗೆ ಹುಟ್ಟಿತೋ ತಿಳಿಯದಾಗಿದೆ. ಅಂತೂ ಹೇಗೋ ನಿಮಗೆ ಅಭಿಲಾಷೆ ಹುಟ್ಟಿತು. ಈ ಪರಿಸ್ಥಿತಿಯಲ್ಲಿ ಏನೂ ನಮಗೆ ತಿಳಿಯದಾಗಿದೆ. ಏನು ಮಾಡಬೇಕೆಂದು ಚಿಂತಿಸುತ್ತಿದ್ದೇನೆ" ಎಂದು ನುಡಿದನು. ಆಗ ಸೌಭರಿ ಮುನಿಯು ತನ್ನಲ್ಲಿಯೇ ಹೀಗೆ ಆಲೋಚಿಸಿದನು (82-83): "ನಮ್ಮ ಪ್ರಾರ್ಥನೆಯನ್ನು ತಿರಸ್ಕರಿಸುವುದಕ್ಕೆ ಇದೊಂದು ಉಪಾಯ! 'ಇವನು ಮುದುಕ, ಸಾಮಾನ್ಯ ಹೆಂಗಸರೇ ದೂರ ಮಾಡತಕ್ಕ ಇವನನ್ನು ನನ್ನ ಕನ್ಯಕೆಯರು ಬಯಸುವುದುಂಟೇ?' ಎಂದು ಆಲೋಚಿಸಿ ರಾಜನು ಹೀಗೆ ಹೇಳಿದ್ದಾನೆ. ಆಗಲಿ, ನಾನೂ ಹಾಗೆಯೇ ಉಪಾಯ ಮಾಡುವೆನು!" (84). ಹೀಗೆ ಆಲೋಚಿಸಿ ರಾಜನನ್ನು ಕುರಿತು "ಹಾಗಾದರೆ ಕನ್ಯಾಂತಃಪುರದ ಕಾವಲುಗಾರನಾದ ಷಂಡನಿಗೆ ನಮ್ಮನ್ನು ಒಳಗೆ ಬಿಡುವಂತೆ ಆಜ್ಞೆಮಾಡು. ಅವರಲ್ಲಿ ಯಾರಾದರೊಬ್ಬ ಕನ್ಯೆಯೇ ನನ್ನನ್ನು ಬಯಸುವುದಾದರೆ ಮಾತ್ರ ನಾನು ಮದುವೆಯಾಗುವೆನು! ಇಲ್ಲದಿದ್ದರೆ ಈ ವಯಸ್ಸಿನಲ್ಲಿ ಕಾಲಮೀರಿದ ಈ ಉದ್ಯೋಗವೇ

**ಮುನಿಶಾಪಶಂಕಿತೇನ ಕನ್ಯಾಂತಃ ಪುರವರ್ಷವರಸ್ಸಮಾಜ್ಞಪ್ತಃ ॥ 86 ॥ ತೇನ ಸಹ ಕನ್ಯಾಂತಃಪುರಂ ಪ್ರವಿಶನ್ನೇವ ಭಗವಾನಖಿಲಸಿದ್ಧಗಂಧರ್ವೇಭ್ಯೋಽತಿಶಯೇನ ಕಮನೀಯಂ ರೂಪಮಕರೋತ್ ॥ 87 ॥ ಪ್ರವೇಶ್ಯ ಚ ತಮೃಷಿಮಂತಃಪುರೇ ವರ್ಷವರಸ್ತಾಃ ಕನ್ಯಾಃ ಪ್ರಾಹ ॥ 88 ॥ ಭವತೀನಾಂ ಜನಯಿತಾ ಮಹಾರಾಜಸ್ಸಮಾಜ್ಞಾಪಯತಿ ॥ 89 ॥ ಅಯಮಸ್ಮಾನ್ ಬ್ರಹ್ಮರ್ಷಿಃ ಕನ್ಯಾರ್ಥಂ ಸಮಭ್ಯಾಗತಃ ॥ 90 ॥ ಮಯಾ ಚಾಸ್ಯ ಪ್ರತಿಜ್ಞಾತಂ ಯದ್ಯಸ್ಮತ್ಕನ್ಯಾ ಯಾ ಕಾಚಿದ್ಭಗವಂತಂ ವರಯತಿ ತತ್ಕನ್ಯಾಯಾಶ್ಛಂದೇ ನಾಹಂ ಪರಿಪಂಥಾನಂ ಕರಿಷ್ಯಾಮೀತ್ಯಾಕರ್ಣ್ಯ ಸರ್ವಾ ಏವ ತಾಃ ಕನ್ಯಾಃ ಸಾನುರಾಗಾಃ ಸಪ್ರಮದಾಃ ಕರೇಣವ ಇವೇಭಯೂಥಪತಿಂ ತಮೃಷಿಮಹಮಹಮಿಕಯಾ ವರಯಾಂಬಭೂವುರೂಚುಶ್ಚ ॥ 91 ॥**

---

ನನಗೆ ಬೇಕಾಗಿಲ್ಲ—ಎಂದು ಹೇಳಿ ಸುಮ್ಮನಾದನು (85). ಆಮೇಲೆ ಮಾಂಧಾತನು ಮುನಿಶಾಪಕ್ಕೆ ಹೆದರಿ ಅಂತೆಯೇ ಕನ್ಯಾಂತಃಪುರದ ಷಂಡನಿಗೆ ಆಜ್ಞೆ ಮಾಡಿದನು. ಅನಂತರ ಭಗವಾನ್ ಸೌಭರಿಮುನಿಯು ಕಾವಲುಗಾರರೊಡನೆ ಕನ್ಯಾಂತಃಪುರವನ್ನು ಪ್ರವೇಶಿಸುತ್ತಿರುವಾಗ ಸಮಸ್ತ ಸಿದ್ಧಗಂಧರ್ವರಿಗಿಂತಲೂ ಅಧಿಕರಮಣೀಯವಾದ ದಿವ್ಯ ರೂಪವನ್ನು ಧರಿಸಿದನು (86-87). ಕಾವಲುಗಾರನಾದ ಷಂಡನು ಮುನಿಯನ್ನು ಒಳಗೆ ಕರೆದೊಯ್ದು ಆ ರಾಜಪುತ್ರಿಯರನ್ನು ಕುರಿತು "ನಿಮ್ಮ ತಂದೆಯವರಾದ ಮಹಾರಾಜರು ಹೀಗೆ ಆಜ್ಞಾಪಿಸಿದ್ದಾರೆ: 'ಈ ಬ್ರಹ್ಮರ್ಷಿಯು ಕನ್ಯಾರ್ಥಿಯಾಗಿ ನಮ್ಮ ಬಳಿಗೆ ಬಂದಿದ್ದಾನೆ (88-90). ನನ್ನ ಹೆಣ್ಣು ಮಕ್ಕಳಲ್ಲಿ ಯಾವ ಕನ್ಯೆಯಾದರೂ ಈ ಬ್ರಹ್ಮರ್ಷಿಯನ್ನು ವರಿಸುವುದಾದರೆ ಆ ಕನ್ಯೆಯ ಇಷ್ಟಕ್ಕೆ ನಾನು ಅಡ್ಡಬರುವುದಿಲ್ಲವೆಂದು ಪ್ರತಿಜ್ಞೆ ಮಾಡಿ ಮಾತುಕೊಟ್ಟಿದ್ದೇನೆ' ಎಂದು ಹೇಳಿದನು." ಆಗ ಆ ಮುನಿಯನ್ನು ನೋಡಿದ ಎಲ್ಲ ಕನ್ಯೆಯರೂ ಅವನಲ್ಲಿ ಅನುರಕ್ತರಾದರು! ಸಂಭ್ರಮಗೊಂಡರು! ಹೆಣ್ಣಾನೆಗಳು ಸಲಗವನ್ನು ಬಯಸುವಂತೆ ಆ ಕನ್ಯೆಯರು 'ನನಗೆ ಬೇಕು, ನನಗೆ ಬೇಕು' ಎಂದು ಮುನಿಯನ್ನು ವರಿಸಿಬಿಟ್ಟರು! ತಮ್ಮಲ್ಲಿಯೇ ಅನ್ಯೋನ್ಯರಾಗಿ ಹೀಗೆ ಹೇಳತೊಡಗಿದರು. (90-91). "ಸೋದರಿಯರೇ, ನೀವು ಸುಮ್ಮನಿರಿ.

**ಅಲಂ ಭಗಿನ್ಯೋಽಹಮಿಮಂ ವೃಣೋಮಿ**
**ವೃಣೋಮ್ಯಹಂ ನೈಷ ತವಾನುರೂಪಃ।**
**ಮಮೈಷ ಭರ್ತಾ ವಿಧಿನೈವ ಸೃಷ್ಟ-**
**ಸ್ಸೃಷ್ಟಾಹಮಸ್ಯೋಪಶಮಂ ಪ್ರಯಾಹಿ॥** 92

**ವೃತೋ ಮಯಾಽಯಂ ಪ್ರಥಮಂ ಮಯಾಽಯಂ**
**ಗೃಹಂ ವಿಶನ್ನೇವ ವಿಹನ್ಯಸೇ ಕಿಮ್।**
**ಮಯಾ ಮಯೇತಿ ಕ್ಷಿತಿಪಾತ್ಮಜಾನಾಂ**
**ತದರ್ಥಮತ್ಯರ್ಥಕಲಿರ್ಬಭೂವ॥** 93

**ಯದಾ ಮುನಿಸ್ತಾಭಿರತೀವಹಾರ್ದಾದ್-**
**ವೃತಸ್ಸ ಕನ್ಯಾಭಿರನಿಂದ್ಯಕೀರ್ತಿಃ।**
**ತದಾ ಸ ಕನ್ಯಾಧಿಕೃತೋ ನೃಪಾಯ**
**ಯಥಾವದಾಚಷ್ಟ ವಿನಮ್ರಮೂರ್ತಿಃ॥** 94

*ಶ್ರೀಪರಾಶರ ಉವಾಚ:*

**ತದವಗಮಾತ್ ಕಿಂ ಕಿಮೇತತ್ ಕಥಮೇತತ್ ಕಿಂ ಕಿಂ ಕರೋಮಿ**

---

ನಾನು ಇವನನ್ನು ವರಿಸುತ್ತೇನೆ; ಇಲ್ಲ, ನಾನು ವರಿಸುತ್ತೇನೆ, ಇವನು ನಿನಗೆ ಅನುರೂಪನಲ್ಲ! ನನಗೆ ಗಂಡನಾಗಬೇಕೆಂದು ಬ್ರಹ್ಮನೇ ಈತನನ್ನು ಸೃಜಿಸಿದ್ದಾನೆ! ಇಲ್ಲ, ಇವನಿಗಾಗಿ ನನ್ನನ್ನೇ ಬ್ರಹ್ಮನು ಸೃಜಿಸಿದ್ದಾನೆ! ನೀನು ಸುಮ್ಮನಿರು, ಹೊರಟು ಹೋಗು! (92). ಈತನು ಒಳಗೆ ಬಂದೊಡನೆ ಮೊದಲು ನಾನು ಆರಿಸಿಕೊಂಡು ಬಿಟ್ಟಿದ್ದೇನೆ! ಇಲ್ಲ, ನಾನು ಮೊದಲು ಆರಿಸಿಕೊಂಡವಳು, ಯಾಕೆ ನೀನು ಹೀಗೆ ಸಾಯುತ್ತೀಯೇ? ಅದೆಲ್ಲ ಸುಳ್ಳು. ಆರಿಸಿಕೊಂಡವಳು ನಾನು! ನಾನು!" ಈ ಪ್ರಕಾರವಾಗಿ ರಾಜಪುತ್ರಿಯರಲ್ಲಿ ಜಗಳವೇ ಆರಂಭವಾಯಿತು (93). ಹೀಗೆ ಆ ರಾಜಕನ್ಯೆಯರು ಕೀರ್ತಿಶಾಲಿಯಾದ ಮುನಿಯನ್ನು ಹೃದಯಪೂರ್ವಕವಾಗಿ ವರಿಸಲಾಗಿ, ಅಂತಃಪುರದ ಅಧಿಕಾರಿಯು ಮಹಾರಾಜನಿಗೆ ಈ ವಿಷಯವನ್ನು ವಿನಯಪೂರ್ವಕವಾಗಿ ಅರಿಕೆಮಾಡಿದನು (94). ಅದನ್ನರಿತು ರಾಜನು ಕಂಗಾಲಾದನು. 'ಏನು? ಏನಿದು? ಇದು ಹೇಗೆ

**ಕಿಂ ಮಯಾಭಿಹಿತಮಿತ್ಯಾಕುಲಮತಿರನಿಚ್ಛನ್ನಪಿ ಕಥಮಪಿ ರಾಜಾ ಅನುಮೇನೇ ॥ 95 ॥ ಕೃತಾನುರೂಪವಿವಾಹಶ್ಚ ಮಹರ್ಷಿಸ್ಸಕಲಾ ಏವ ತಾಃ ಕನ್ಯಾಸ್ಸ್ವಮಾಶ್ರಮಮನಯತ್ ॥ 96 ॥ ತತ್ರ ಚಾಶೇಷಶಿಲ್ಪಕಲ್ಪಪ್ರಣೇತಾರಂ ದಾತಾರಮಿವಾನ್ಯಂ ವಿಶ್ವಕರ್ಮಾಣಮಾಹೂಯ ಸಕಲ ಕನ್ಯಾನಾಮೇಕೈಕಸ್ಯಾಃ ಪ್ರೋತ್ಫುಲ್ಲಪಂಕಜಾಃ ಕೂಜತ್ಕಲಹಂಸಕಾರಂಡವಾದಿವಿಹಂಗಮಾಭಿರಾಮಜಲಾಶಯಾಸ್ಸೋಪಧಾನಾಃ ಸಾವಕಾಶಾಸ್ಸಾಧುಶಯ್ಯಾಪರಿಚ್ಛದಾಃ ಪ್ರಾಸಾದಾಃ ಕ್ರಿಯಂತಾಮಿತ್ಯಾದಿದೇಶ ॥ 97 ॥ ತಚ್ಚ ತಥೈವಾನುಷ್ಠಿತಮಶೇಷಶಿಲ್ಪವಿಶೇಷಾಚಾರ್ಯಸ್ತ್ವಷ್ಟಾ ದರ್ಶಿತವಾನ್ ॥ 98 ॥ ತತಃ ಪರಮರ್ಷಿಣಾ ಸೌಭರಿಣಾಜ್ಞಪ್ತಸ್ತೇಷು ಗೃಹೇಷ್ವನಪಾಯೀ ನಂದನಾಮಾ ಮಹಾನಿಧಿರಾಸಾಂಚಕ್ರೇ ॥ 99 ॥ ತತೋಽನವರತ-**

---

ಆದೀತು? ಈಗ ಏನು ಮಾಡಲಿ? ಮುನಿಗೆ ನಾನು ಏನು ಹೇಳಿಬಿಟ್ಟೆ?' ಎಂದು ದಿಙ್ಮೂಢನಾಗಿ ಇಚ್ಛೆಯಿಲ್ಲದಿದ್ದರೂ ಹೇಗೋ ಮದುವೆಗೆ ಒಪ್ಪಿಗೆಯನ್ನಿತ್ತನು (95). ಸೌಭರಿ ಮಹರ್ಷಿಯು ವಿಧಿಪೂರ್ವಕವಾಗಿ ರಾಜಕುಮಾರಿಯರನ್ನು ಮದುವೆಯಾಗಿ ಅವರೆಲ್ಲರನ್ನೂ ತನ್ನ ಆಶ್ರಮಕ್ಕೆ ಕರೆದುಕೊಂಡು ಹೋದನು (96). ಅಲ್ಲಿ ನಿಖಿಲ ಶಿಲ್ಪಶಾಸ್ತ್ರ ಪ್ರಣೇತೃವೂ ಮತ್ತೊಬ್ಬ ಸೃಷ್ಟಿಕರ್ತನೋ ಎಂಬಂತೆ ಇರತಕ್ಕವನೂ ಆದ ವಿಶ್ವಕರ್ಮನನ್ನು ಕರೆದು ಎಲ್ಲ ರಾಜಪುತ್ರಿಯರಿಗೂ ಪ್ರತ್ಯೇಕವಾಗಿ ಪ್ರಾಸಾದಗಳನ್ನು ನಿರ್ಮಿಸುವಂತೆ ಆಜ್ಞೆಮಾಡಿದನು. ಆ ಪ್ರಾಸಾದಗಳಲ್ಲಿ ಅರಳಿದ ತಾವರೆಗಳಿಂದಲೂ ಕಲಕಲನೆ ಕೂಗುವ ಹಂಸಕಾರಂಡವಾದಿ ಜಲಚರ ಪಕ್ಷಿಗಳಿಂದಲೂ ಕೂಡಿದ ಮನೋಹರವಾದ ಜಲಾಶಯಗಳಿರಬೇಕೆಂದೂ ತಿಳಿಸಿದನು. ಪ್ರಾಸಾದಗಳು ವಿಶಾಲವಾಗಿದ್ದು ದಿಂಬುಗಳಿಂದಲೂ ಉತ್ತಮವಾದ ಹಾಸಿಗೆಗಳಿಂದಲೂ ಹೊದಿಕೆಗಳಿಂದಲೂ ಸಜ್ಜಾಗಿರಬೇಕೆಂದು ಆದೇಶವಿತ್ತನು (97). ನಿಖಿಲ ಶಿಲ್ಪಶಾಸ್ತ್ರಗಳಿಗೂ ಆಚಾರ್ಯನಾದ ವಿಶ್ವಕರ್ಮನು ಅಂತೆಯೇ ಪ್ರಾಸಾದಗಳನ್ನು ನಿರ್ಮಿಸಿ ಸೌಭರಿಮಹರ್ಷಿಗೆ ತೋರಿಸಿದನು. ಅನಂತರ ಆ ಮಹರ್ಷಿಯ ಆದೇಶದಂತೆ ಆ ಮಂದಿರಗಳಲ್ಲಿ ನಂದ* ಎಂಬ

---

* ಇದು ನವನಿಧಿಗಳಲ್ಲೊಂದು. 'ಮಹಾಪದ್ಮಶ್ಚ ಪದ್ಮಶ್ಚ ಶಂಖೋ ಮಕರಕಚ್ಛಪೌ । ಮುಕುಂದಕುಂದ ನೀಲಾಶ್ಚಖರ್ವಶ್ಚ ನಿಧಯೋ ನವ'—ಶಬ್ದಾರ್ಣವ.

**ಭಕ್ಷ್ಯಭೋಜ್ಯಲೇಹ್ಯಾದ್ಯುಪಭೋಗ್ಯೈರಾಗತಾನುಗತಭೃತ್ಯಾದೀನಹರ್ನಿಶ-ಮಶೇಷಗೃಹೇಷು ತಾಃ ಕ್ಷಿತೀಶದುಹಿತರೋ ಭೋಜಯಾಮಾಸುಃ ॥ 100 ॥ ಏಕದಾ ತು ದುಹಿತೃಸ್ನೇಹಾಕೃಷ್ಟಹೃದಯಸ್ಯ ಮಹೀಪತಿರತಿ-ದುಃಖಿತಾಸ್ತಾ ಉತ ಸುಖಿತಾ ವಾ ಇತಿ ವಿಚಿಂತ್ಯ ತಸ್ಯ ಮಹರ್ಷೇ-ರಾಶ್ರಮಸಮೀಪಮುಪೇತ್ಯ ಸ್ಫುರದಂಶುಮಾಲಾಲಲಾಮಾಂ ಸ್ಫಟಿಕ-ಮಯಪ್ರಾಸಾದಮಾಲಾಮತಿರಮ್ಯೋಪವನಜಲಾಶಯಾಂ ದದರ್ಶ ॥ 101 ॥ ಪ್ರವಿಶ್ಯ ಚೈಕಂ ಪ್ರಾಸಾದಮಾತ್ಮಜಾಂ ಪರಿಷ್ವಜ್ಯ ಕೃತಾಸನಪರಿ-ಗ್ರಹಃ ಪ್ರವೃದ್ಧಸ್ನೇಹನಯನಾಂಬುಗರ್ಭನಯನೋಽಬ್ರವೀತ್ ॥ 102 ॥ ಅಪ್ಯತ್ರ ವತ್ಸೇ ಭವತ್ಯಾಃ ಸುಖಮುತ ಕಿಂಚಿದಸುಖಮಪಿ ತೇ ಮಹರ್ಷಿಸ್ನೇಹವಾನುತ ನ, ಸ್ಮರ್ಯತೇಽಸ್ಮದ್‌ಗೃಹವಾಸ ಇತ್ಯುಕ್ತಾ ತಂ ತನಯಾ ಪಿತರಮಾಹ ॥ 103 ॥ ತಾತಾತಿರಮಣೀಯಃ ಪ್ರಾಸಾ-**

---

ಮಹಾನಿಧಿಯು ಸ್ಥಿರವಾಗಿ ನೆಲೆಸಿತು (98-99). ಆ ಪ್ರಾಸಾದಗಳಲ್ಲಿ ಭಕ್ಷ್ಯ ಭೋಜ್ಯಲೇಹ್ಯಾದಿ ಉಪಭೋಗ ಸಾಮಗ್ರಿಗಳು ತೆರಪಿಲ್ಲದೆ ದೊರೆಯುತ್ತಿದ್ದವು. ರಾಜಪುತ್ರಿಯರು ಅಲ್ಲಿಗೆ ಬಂದ ಅತಿಥಿಗಳನ್ನೂ ಜೊತೆಯಲ್ಲಿದ್ದ ಭೃತ್ಯಾದಿ ಗಳನ್ನೂ ಆ ಸಾಮಗ್ರಿಗಳಿಂದ ತೃಪ್ತಿಪಡಿಸುತ್ತಿದ್ದರು (100). ಹೀಗಿರಲು ಮಾಂಧಾತನು ಪುತ್ರಿಯರಲ್ಲಿದ್ದ ಮಮತೆಯಿಂದ ಆಕೃಷ್ಟಹೃದಯನಾಗಿ ತನ್ನ ಪುತ್ರಿಯರು ಕಷ್ಟದಲ್ಲಿದ್ದಾರೋ ಸುಖದಲ್ಲಿದ್ದಾರೋ ಎಂದು ಚಿಂತಿಸುತ್ತ ಒಂದು ಸಲ ಆ ಮಹರ್ಷಿಯ ಆಶ್ರಮದ ಬಳಿಗೆ ಹೋದನು. ಅಲ್ಲಿಗೆ ಹೋಗಿ ಫಳಫಳನೆ ಹೊಳೆಯುವ ಕಿರಣಮಾಲೆಗಳಿಂದ ವಿರಾಜಿಸುತ್ತ, ಸ್ಫಟಿಕಶಿಲೆಗಳಿಂದ ನಿರ್ಮಿಸಲ್ಪಟ್ಟ ಪ್ರಾಸಾದಗಳ ಸಾಲನ್ನು ಕಂಡನು! (101). ಅನಂತರ ಅವುಗಳ ಲ್ಲೊಂದು ಪ್ರಾಸಾದದೊಳಗೆ ಹೋಗಿ ತನ್ನ ಮಗಳನ್ನು ಕಂಡು ಆಲಂಗಿಸಿ ಒಂದು ಪೀಠದ ಮೇಲೆ ಕುಳಿತುಕೊಂಡನು. ಮಗಳ ಮೇಲಿನ ಪ್ರೀತಿಯು ಒತ್ತಿ ಬಂದು ಅವನ ಕಣ್ಣುಗಳಲ್ಲಿ ಕಂಬನಿ ತುಳುಕಿತು (102). ಮಗಳನ್ನು ಕುರಿತು "ವತ್ಸೆ, ಇಲ್ಲಿ ನೀನು ಸುಖವಾಗಿರುವೆಯಷ್ಟೆ? ಅಥವಾ ಏನಾದರೂ ಕೊರತೆ ಯುಂಟೋ? ಮಹರ್ಷಿಯು ನಿನ್ನನ್ನು ಪ್ರೀತಿಸುವನೋ ಇಲ್ಲವೋ? ನಮ್ಮ ಮನೆಯ ನೆನಪು ಬರುತ್ತದೆಯೇ?" ಎಂದು ಕೇಳಿದನು (103). ಅದಕ್ಕೆ ರಾಜ

**ದೋಽತ್ರಾತಿಮನೋಜ್ಞಮುಪವನಮೇತೇ ಕಲವಾಕ್ಯವಿಹಂಗಮಾಭಿರುತಾಃ ಪ್ರೋತ್ಫುಲ್ಲಪದ್ಮಾಕರಜಲಾಶಯಾಃ ಮನೋಽನುಕೂಲ ಭಕ್ಷ್ಯಭೋಜ್ಯಾನುಲೇಪನವಸ್ತ್ರಭೂಷಣಾದಿಭೋಗೋ ಮೃದೂನಿ ಶಯನಾಸ ನಾನಿ ಸರ್ವಸಂಪತ್ಸಮೇತಂ ಮೇ ಗಾರ್ಹಸ್ಥ್ಯಮ್ ॥ 104 ॥ ತಥಾಪಿ ಕೇನ ವಾ ಜನ್ಮಭೂಮಿರ್ನ ಸ್ಮರ್ಯತೇ ॥ 105 ॥ ತ್ವತ್ಪ್ರಸಾದಾದಿದಮಶೇಷಮತಿಶೋಭನಮ್ ॥ 106 ॥ ಕಿಂ ತ್ವೇಕಂ ಮಮೈತದ್‌ದುಃಖಕಾರಣಂ ಯದಸ್ಮದ್‌ಗೃಹಾನ್ಮಹರ್ಷಿರಯಮ್ಮದ್ಭರ್ತ್ತಾ ನ ನಿಷ್ಕ್ರಾಮತಿ ಮಮೈವ ಕೇವಲಮತಿಪ್ರೀತ್ಯಾ ಸಮೀಪಪರಿವರ್ತೀ ನಾನ್ಯಾಸಾಮಸ್ಮದ್ಭಗಿನೀನಾಮ್ ॥ 107 ॥ ಏವಂ ಚ ಮಮ ಸೋದರ್ಯೋಽತಿದುಃಖಿತಾ ಇತ್ಯೇವಮತಿದುಃಖಕಾರಣಮಿತ್ಯುಕ್ತಸ್ತಯಾ ದ್ವಿತೀಯಂ ಪ್ರಾಸಾದಮುಪೇತ್ಯ ಸ್ವತನಯಾಂ ಪರಿಷ್ವಜ್ಯೋಪವಿಷ್ಟಸ್ತಥೈವ ಪೃಷ್ಟವಾನ್ ॥ 108 ॥**

---

ಪುತ್ರಿಯು ತಂದೆಯನ್ನು ಕುರಿತು "ಅಪ್ಪಾ, ಈ ಭವನವು ಅತ್ಯಂತ ರಮಣೀಯವಾಗಿದೆ. ಉಪವನವು ಬಹುಸುಂದರವಾಗಿದೆ. ಈ ಕೊಳಗಳಲ್ಲಿ ಹಕ್ಕಿಗಳು ಇಂಪಾಗಿ ಧ್ವನಿಗೈಯುತ್ತಿರುವುವು. ತಾವರೆಗಳು ಸದಾ ಅರಳಿರುತ್ತವೆ. ಮನಸ್ಸಿಗೆ ಬೇಕಾದ ಭಕ್ಷ್ಯಭೋಜ್ಯಗಳಿವೆ. ಬೇಕುಬೇಕಾದ ಅನುಲೇಪನವಸ್ತ್ರಭೂಷಣಗಳಿವೆ. ಹಾಸಿಗೆಗಳೂ ಪೀಠಗಳೂ ತುಂಬ ಮೃದುವಾದವು. ನನ್ನ ವಿವಾಹ ಜೀವನವು ಸರ್ವಸಂಪತ್ತುಗಳಿಂದ ಕೂಡಿದೆ (104). ಆದರೂ ತವರುಮನೆಯ ನೆನಪು ಯಾರಿಗೆ ಬರುವುದಿಲ್ಲ? ನಿನ್ನ ಆಶೀರ್ವಾದದಿಂದ ಇದೆಲ್ಲವೂ ಬಹಳ ಚೆನ್ನಾಗಿದೆ. ಆದರೂ ನನ್ನ ವ್ಯಥೆಗೆ ಒಂದು ನಿಮಿತ್ತ ಉಂಟು. ಏನೆಂದರೆ, ನಮ್ಮ ಪತಿಯಾದ ಈ ಮಹರ್ಷಿಯು ಒಮ್ಮೆಯೂ ಮನೆಯಿಂದ ಹೊರಗೆ ಹೋಗುವುದಿಲ್ಲ! ನನ್ನ ಮೇಲಿನ ಅತಿ ಪ್ರೇಮದಿಂದ ಯಾವಾಗಲೂ ನನ್ನ ಬಳಿಯಲ್ಲಿಯೇ ಇರುತ್ತಾನೆ! ನನ್ನ ಸೋದರಿಯರ ಮನೆಗೆ ಹೋಗುವುದೇ ಇಲ್ಲ! (105-107). ಹೀಗಾಗಿ ನನ್ನ ಸೋದರಿಯರು ಅತ್ಯಂತ ದುಃಖಿತರಾಗಿದ್ದಾರೆಂಬುದೇ ನನ್ನ ವ್ಯಥೆಗೆ ನಿಮಿತ್ತ!" ಎಂದು ಹೇಳಿದಳು. ಅನಂತರ ರಾಜನು ಇನ್ನೊಂದು ಭವನಕ್ಕೆ ಹೋಗಿ ಅಲ್ಲಿದ್ದ ಇನ್ನೊಬ್ಬ ಮಗಳನ್ನು ಆಲಂಗಿಸಿಕೊಂಡು ಪೀಠದಲ್ಲಿ ಕುಳಿತು ಹಿಂದಿನಂತೆಯೇ ಪ್ರಶ್ನೆ ಮಾಡಿದನು (108). ಅವಳೂ ಸಹ ದಿವ್ಯಭವನದಲ್ಲಿ

**ತಯಾಪಿ ಚ ಸರ್ವಮೇತತ್ತತ್ಪ್ರಾಸಾದಾದ್ಯುಪಭೋಗಸುಖಂ ಭೃಶಮಾಖ್ಯಾತಂ ಮಮೈವ ಕೇವಲಮತಿಪ್ರೀತ್ಯಾ ಪಾರ್ಶ್ವಪರಿವರ್ತ್ತೀ, ನಾನ್ಯಾಸಾಮಸ್ಮದ್ಭಗಿನೀನಾಮಿತ್ಯೇವಮಾದಿ-ಶ್ರುತ್ವಾ ಸಮಸ್ತಪ್ರಾಸಾದೇಷು ರಾಜಾ ಪ್ರವಿವೇಶ ತನಯಾಂ ತನಯಾಂ ತಥೈವಾಪೃಚ್ಛತ್ ॥ 109 ॥ ಸರ್ವಾಭಿಶ್ಚ ತಾಭಿಸ್ತಥೈವಾಭಿಹಿತಃ ಪರಿತೋಷವಿಸ್ಮಯನಿರ್ಭರವಿವಶಹೃದಯೋ ಭಗವಂತಂ ಸೌಭರಿಮೇಕಾಂತಾವಸ್ಥಿತಮುಪೇತ್ಯ ಕೃತಪೂಜೋಽಬ್ರವೀತ್ ॥ 110 ॥ ದೃಷ್ಟಸ್ತೇ ಭಗವನ್ ಸುಮಹಾನೇಷ ಸಿದ್ಧಿಪ್ರಭಾವೋ ನೈವಂವಿಧಮನ್ಯಸ್ಯ ಕಸ್ಯಚಿದಸ್ಮಾಭಿರ್ವಿಭೂತಿಭಿರ್ವಿಲಸಿತಮುಪಲಕ್ಷಿತಂ ಯದೇತದ್ಭಗವತಸ್ತಪಸಃ ಫಲಮಿತ್ಯಭಿಪೂಜ್ಯ ತಮೃಷಿಂ ತತ್ರೈವ ತೇನ ಋಷಿವರ್ಯೇಣ ಸಹ ಕಿಂಚಿತ್ಕಾಲಮಭಿಮತೋಪಭೋಗಾನ್ ಬುಭುಜೇ ಸ್ವಪುರಂ ಚ ಜಗಾಮ ॥ 111 ॥ ಕಾಲೇನ ಗಚ್ಛತಾ ತಸ್ಯ ತಾಸು ರಾಜತನಯಾಸು ಪುತ್ರಶತಂ ಸಾರ್ಧಮಭವತ್ ॥ 112 ॥ ಅನು**

---

ತಾನು ಅನುಭವಿಸುತ್ತಿದ್ದ ಉಪಭೋಗಸುಖವನ್ನು ವಿಶೇಷವಾಗಿ ವರ್ಣಿಸಿ ಹೇಳಿದಳಲ್ಲದೆ, ಪತಿಯು ಪರಮಪ್ರೇಮದಿಂದ ತನ್ನ ಬಳಿಯಲ್ಲಿಯೇ ಸುಳಿದಾಡುತ್ತಿರುವನೆಂದೂ ತನ್ನ ಸೋದರಿಯರೊಬ್ಬರ ಬಳಿಗೂ ಹೋಗುವುದಿಲ್ಲವೆಂದೂ ತಿಳಿಸಿದಳು. ಆನಂತರ ರಾಜನು ಪ್ರತಿಯೊಂದು ಪ್ರಾಸಾದಕ್ಕೂ ಹೋಗಿ ಪ್ರತಿಯೊಬ್ಬ ಮಗಳನ್ನೂ ಇದೇ ರೀತಿ ವಿಚಾರಿಸಿದನು (109). ಎಲ್ಲರೂ ಅದೇ ಬಗೆಯಲ್ಲಿ ಹೇಳಿದರು. ಮಾಂಧಾತನು ಆನಂದಪರವಶನಾಗಿ ಆಶ್ಚರ್ಯದಿಂದ ವಿಹ್ವಲನಾದನು. ಆಮೇಲೆ ಏಕಾಂತದಲ್ಲಿ ಕುಳಿತಿದ್ದ ಸೌಭರಿ ಮಹರ್ಷಿಯ ಬಳಿಗೆ ಹೋಗಿ ಆತನನ್ನು ಪೂಜಿಸಿ ಇಂತೆಂದನು (110). "ಭಗವನ್, ಅದ್ಭುತವಾದ ನಿಮ್ಮ ಸಿದ್ಧಿಪ್ರಭಾವವನ್ನು ಕಣ್ಣಾರೆ ಕಂಡೆನು. ಇಂತಹ ತಪಃಸಿದ್ಧಿ ಇನ್ನಾರಿಗೂ ಇಲ್ಲ. ನಾವು ನೋಡಿದ ಈ ವೈಭವಗಳ ವಿಲಾಸವು ಮಹರ್ಷಿಗಳಾದ ನಿಮ್ಮ ತಪಸ್ಸಿನ ಫಲ" ಎಂದು ಹೇಳಿ ಆ ಋಷಿಯನ್ನು ಪೂಜಿಸಿದನು. ಆ ಋಷಿಶ್ರೇಷ್ಠನೊಡನೆ ಸ್ವಲ್ಪ ಹೊತ್ತು ಅಭಿಮತವಾದ ಭೋಗವನ್ನು ಅನುಭವಿಸಿ ರಾಜನು ತನ್ನ ರಾಜಧಾನಿಗೆ ಹಿಂದಿರುಗಿದನು (111). ಕಾಲಕ್ರಮದಲ್ಲಿ ಸೌಭರಿ ಮುನಿಗೆ ಆ ರಾಜಕುಮಾರಿಯರಲ್ಲಿ ನೂರೈವತ್ತು ಮಂದಿ ಪುತ್ರರು ಜನಿಸಿದರು.

**ದಿನಾನುರೂಢಸ್ನೇಹಪ್ರಸರಶ್ಚ ಸ ತತ್ರಾತೀವ ಮಮತಾಕೃಷ್ಟಹೃದಯೋಽಭವತ್ ॥ 113 ॥ ಅಪ್ಯೇತೇಽಸ್ಮತ್ಪುತ್ರಾಃ ಕಲಭಾಷಿಣಃ ಪದ್ಭ್ಯಾಂ ಗಚ್ಛೇಯುಃ ಅಪ್ಯೇತೇ ಯೌವನಿನೋ ಭವೇಯುಃ ಅಪಿ ಕೃತದಾರಾನ್ ಏತಾನ್ ಪಶ್ಯೇಯಮಪ್ಯೇಷಾಂ ಪುತ್ರಾ ಭವೇಯುಃ ಅಪ್ಯೇತತ್ಪುತ್ರಾನ್ಪುತ್ರಸಮನ್ವಿತಾನ್ಪಶ್ಯಾಮೀತ್ಯಾದಿಮನೋರಥಾನನುದಿನಂ ಕಾಲಸಂಪತ್ತಿಪ್ರವೃದ್ಧಾನವೇಕ್ಷ್ಯೈತಚ್ಚಿಂತಯಾಮಾಸ ॥ 114 ॥ ಅಹೋ ಮೇ ಮೋಹಸ್ಯಾತಿವಿಸ್ತಾರಃ ॥ 115 ॥**

**ಮನೋರಥಾನಾಂ ನ ಸಮಾಪ್ತಿರಸ್ತಿ**
**ವರ್ಷಾಯುತೇನಾಪಿ ತಥಾಬ್ದಲಕ್ಷೈಃ ।**
**ಪೂರ್ಣೇಷು ಪೂರ್ಣೇಷು ಮನೋರಥಾನಾಮ್**
**ಉತ್ಪತ್ತಯಸ್ಸಂತಿ ಪುನರ್ನವಾನಾಮ್ ॥ 116**

---

ದಿನಗಳೆದಂತೆ ಅವರಲ್ಲಿ ಪ್ರೀತಿಯು ಬೆಳೆಯುತ್ತ ಹೋಯಿತು. ಅತ್ಯಂತ ಮಮತೆಯಿಂದ ಮುನಿಯ ಹೃದಯವು ಮಕ್ಕಳಲ್ಲಿ ನೆಟ್ಟುಹೋಯಿತು (112-113). "ನನ್ನ ಈ ಪುತ್ರರು ತೊದಲುತ್ತ ಮಾತಾಡುವರಲ್ಲವೆ? ಪುಟ್ಟ ಪುಟ್ಟ ಹೆಜ್ಜೆಗಳಿಡುತ್ತ ನಡೆದಾಡುವರಲ್ಲವೆ? ಇವರು ಮುಂದೆ ಯುವಕರಾಗಿ ಮದುವೆಯಾಗುವುದನ್ನು ಯಾವಾಗ ನೋಡಿಯೇನು! ಇವರಿಗೆ ಮಕ್ಕಳು ಜನಿಸುವರಲ್ಲವೆ! ಆ ಪುತ್ರರಿಗೂ ಪುತ್ರರು ಜನಿಸಿದಾಗ ಮಕ್ಕಳು ಮೊಮ್ಮಕ್ಕಳಿಂದ ಸಹಿತರಾದ ಇವರನ್ನು ನೋಡುವೆನಲ್ಲವೆ?" ಎಂಬ ಮನೋರಥಗಳು ಒಂದರಮೇಲೊಂದರಂತೆ ಬೆಳೆಯುತ್ತ ಹೋದವು. ಕಾಲ ಕಳೆಯುತ್ತ ಈ ಮನೋರಥಗಳು ಹೆಚ್ಚುತ್ತಿರುವುದನ್ನು ಅನ್ವೀಕ್ಷಿಸಿ ಒಂದು ದಿನ ಸೌಭರಿ ಮುನಿಯು ಹೀಗೆ ಆಲೋಚಿಸಿದನು (114). "ಥೂ! ನನ್ನ ಮೋಹದ ವಿಸ್ತಾರವೆಷ್ಟು! ಮನೋರಥಗಳಿಗೆ ಸಮಾಪ್ತಿಯೆಂಬುದೇ ಇಲ್ಲ. ಹತ್ತುಸಾವಿರ ವರ್ಷಗಳಾಗಲಿ ಲಕ್ಷವರ್ಷಗಳಾಗಲಿ ಇವು ಮುಗಿಯುವುದೇ ಇಲ್ಲ! ಇವು ನೆರವೇರುತ್ತ ಹೋದಂತೆ ಹೊಸ ಹೊಸ ಆಸೆಗಳು ಚಿಗುರುತ್ತಲೇ ಇರುತ್ತವೆ! (115-116). ನನ್ನ ಪುತ್ರರು ಹೆಜ್ಜೆ ಇಟ್ಟು ನಡೆದಾಡಿದರು. ತರುಣರಾದರು. ಪತ್ನೀಸಮೇತರಾದರು. ಅವರಿಗೆ ಮಕ್ಕಳೂ ಜನಿಸಿದರು. ಈಗ ಅವರಿಗೆ ಯಾವಾಗ ಸಂತಾನವಾದೀತೆಂದು ಕಾಯುತ್ತ ಆ

ಷಡ್ಭ್ಯಾಂ ಗತಾ ಯೌವನಿನಶ್ಚ ಜಾತಾ
ದಾರೈಶ್ಚ ಸಂಯೋಗಮಿತಾಃ ಪ್ರಸೂತಾಃ।
ದೃಷ್ಟಾಃ ಸುತಾಸ್ತತ್ತನಯಪ್ರಸೂತಿಂ
ದ್ರಷ್ಟುಂ ಪುನರ್ವಾಂಛತಿ ಮೇಽಂತರಾತ್ಮಾ॥ 117

ದ್ರಕ್ಷ್ಯಾಮಿ ತೇಷಾಮಿತಿ ಚೇತ್ಪ್ರಸೂತಿಂ
ಮನೋರಥೋ ಮೇ ಭವಿತಾ ತತೋಽನ್ಯಃ
ಪೂರ್ಣೇಽಪಿ ತತ್ರಾಪ್ಯಪರಸ್ಯ ಜನ್ಮ
ನಿವಾರ್ಯತೇ ಕೇನ ಮನೋರಥಸ್ಯ॥ 118

ಆಮೃತ್ಯುತೋ ನೈವ ಮನೋರಥಾನಾಮ್
ಅಂತೋಽಸ್ತಿ ವಿಜ್ಞಾತಮಿದಂ ಮಯಾದ್ಯ।
ಮನೋರಥಾಸಕ್ತಿಪರಸ್ಯ ಚಿತ್ತಂ
ನ ಜಾಯತೇ ವೈ ಪರಮಾರ್ಥಸಂಗಿ॥ 119

ಸ ಮೇ ಸಮಾಧಿರ್ಜಲವಾಸಮಿತ್ರ-
ಮತ್ಸ್ಯಸ್ಯ ಸಂಗಾತ್ಸಹಸೈವ ನಷ್ಟಃ।
ಪರಿಗ್ರಹಸ್ಸಂಗಕೃತೋ ಮಯಾಽಯಂ
ಪರಿಗ್ರಹೋತ್ಥಾ ಚ ಮಮಾತಿಲಿಪ್ಸಾ॥ 120

---

ಸಂತಾನವನ್ನು ನೋಡಲು ನನ್ನ ಮನಸ್ಸು ಹಾತೊರೆಯುವುದಲ್ಲ! (117). ಅವರ ಪುತ್ರರನ್ನು ಒಮ್ಮೆ ನೋಡಿಬಿಡೋಣವೆಂದು ಕಾದರೆ ಇನ್ನೊಂದು ಆಸೆ ಮತ್ತೆ ಕವಲೊಡೆಯುವುದು! ಅದು ನೆರವೇರಿದರೆ ಮತ್ತೊಂದು ಮನೋರಥವು ಹುಟ್ಟುವುದು. ಅದನ್ನು ಯಾರು ತಡೆದಾರು! (118). ಸಾಯುವವರೆಗೂ ಆಸೆಗಳಿಗೆ ಕೊನೆಯೇ ಇರುವುದಿಲ್ಲ. ಈಗ ಇದು ನನಗೆ ಸ್ಪಷ್ಟವಾಗಿ ತಿಳಿಯಿತು. ಆಸೆಯನ್ನು ಪೂರ್ಣಗೊಳಿಸಿಕೊಳ್ಳಲು ಯಾವನು ಬಯಸುತ್ತಾನೋ ಅವನ ಚಿತ್ತವು ಎಂದಿಗೂ ಪರಮಾರ್ಥದಲ್ಲಿ ಆಸಕ್ತವಾಗುವುದಿಲ್ಲ (119). ನನ್ನ ಆ ತಪಃಸಮಾಧಿಯು ಜಲವಾಸದಲ್ಲಿ ಮಿತ್ರನಾದ ಮೀನಿನ ಸಹವಾಸದಿಂದ ಇದ್ದಕ್ಕಿದ್ದಂತೆ ನಷ್ಟವಾಗಿ ಹೋಯಿತು! ಸಹವಾಸ ದೋಷದಿಂದ ಈ ಸಂಸಾರ ಪರಿಗ್ರಹ ಬಂದಿತು. ಪರಿಗ್ರಹದಿಂದ ಬಲವಾದ ಆಸೆ ಹುಟ್ಟಿತು! (120). ಒಂದು

**ದುಃಖಂ ಯದೈವೈಕಶರೀರಜನ್ಮ**
**ಶತಾರ್ಧಸಂಖ್ಯಾಕಮಿದಂ ಪ್ರಸೂತಮ್।**
**ಪರಿಗ್ರಹೇಣ ಕ್ಷಿತಿಪಾತ್ಮಜಾನಾಂ**
**ಸುತೈರನೇಕೈರ್ಬಹುಲೀಕೃತಂ ತತ್॥** 121
**ಸುತಾತ್ಮಜೈಸ್ತತ್ತನಯೈಶ್ಚ ಭೂಯೋ**
**ಭೂಯಶ್ಚ ತೇಷಾಂ ಚ ಪರಿಗ್ರಹೇಣ।**
**ವಿಸ್ತಾರಮೇಷ್ಯತ್ಯತಿದುಃಖಹೇತುಃ**
**ಪರಿಗ್ರಹೋ ವೈ ಮಮತಾಭಿಧಾನಃ॥** 122
**ಚೀರ್ಣಂ ತಪೋ ಯತ್ತು ಜಲಾಶ್ರಯೇಣ**
**ತಸ್ಯರ್ದ್ಧಿರೇಷಾ ತಪಸೋಽಂತರಾಯಃ।**
**ಮತ್ಸ್ಯಸ್ಯ ಸಂಗಾದಭವಚ್ಚ ಯೋ ಮೇ**
**ಸುತಾದಿರಾಗೋ ಮುಷಿತೋಽಸ್ಮಿ ತೇನ॥** 123
**ನಿಸ್ಸಂಗತಾ ಮುಕ್ತಿಪದಂ ಯತೀನಾಂ**
**ಸಂಗಾದಶೇಷಾಃ ಪ್ರಭವಂತಿ ದೋಷಾಃ।**
**ಆರೂಢಯೋಗೋ ವಿನಿಪಾತ್ಯತೇಽಧ-**
**ಸ್ಸಂಗೇನ ಯೋಗೀ ಕಿಮುತಾಲ್ಪಸಿದ್ಧಿಃ॥** 124

---

ಶರೀರದ ಪ್ರಾಪ್ತಿಯೇ ದುಃಖಕರವಾದದ್ದು. ಈ ರಾಜಕುಮಾರಿಯರನ್ನು ಮದುವೆಯಾದ್ದರಿಂದ ದುಃಖವು ಐವತ್ತಾಯಿತು! ಅನೇಕ ಪುತ್ರರು ಜನಿಸಿದ್ದ ರಿಂದ ಅದು ಇನ್ನೂ ವಿಸ್ತಾರವಾಗಿ ಹಬ್ಬಿತು! (121). ಮಕ್ಕಳಿಗೆ ಮಕ್ಕಳು, ಅವರಿಗೆ ಮಕ್ಕಳು—ಇವರಿಂದ ವಿವಾಹಸಂಬಂಧವು ದುಃಖವನ್ನು ವಿಸ್ತರಿ ಸುತ್ತಲೇ ಹೋಗುವುದು. ಒಟ್ಟಿನಲ್ಲಿ ಈ ಮಮತಾಬಂಧನವು ಅತ್ಯಂತ ಶೋಕಕ್ಕೆ ಕಾರಣವೇ ಸರಿ (122). ನೀರಲ್ಲಿ ನೆಲೆಸಿ ಯಾವ ತಪಸ್ಸನ್ನಾಚರಿಸಿದೆನೋ ಆ ತಪಸ್ಸಿನ ಫಲವಾದ ಈ ವೈಭವವೇ ತಪಸ್ಸಿಗೆ ವಿಘ್ನವಾಗಿ ಪರಿಣಮಿಸಿತು. ಮೀನಿನ ಸಹವಾಸದಿಂದ ನನಗೆ ಪುತ್ರಾದಿವ್ಯಾಮೋಹವುಂಟಾಗಿ ಅದರಿಂದ ಮೋಸಹೋದೆನು! (123). ಯತಿಗಳಿಗೆ ಮುಕ್ತಿಯನ್ನು ಕೊಡತಕ್ಕದ್ದು ಸಂಗ ರಾಹಿತ್ಯ. ಸಂಗದಿಂದ ಸಮಸ್ತ ದೋಷಗಳೂ ಉದ್ಭವಿಸುತ್ತವೆ. ಯೋಗಾರೂಢ

**ಸೋಽಹಂ ಚರಿಷ್ಯಾಮಿ ತಥಾತ್ಮನೋಽರ್ಥೇ**
**ಪರಿಗ್ರಹಗ್ರಾಹಗೃಹೀತಬುದ್ಧಿಃ।**
**ಯಥಾ ಹಿ ಭೂಯಃ ಪರಿಹೀನದೋಷೋ**
**ಜನಸ್ಯ ದುಃಖೈರ್ಭವಿತಾ ನ ದುಃಖೀ॥** 125

**ಸರ್ವಸ್ಯ ಧಾತಾರಮಚಿಂತ್ಯರೂಪ-**
**ಮಣೋರಣೀಯಾಂಸಮತಿಪ್ರಮಾಣಮ್।**
**ಸಿತಾಸಿತಂ ಚೇಶ್ವರಮೀಶ್ವರಾಣಾ-**
**ಮಾರಾಧಯಿಷ್ಯೇ ತಪಸೈವ ವಿಷ್ಣುಮ್॥** 126

**ತಸ್ಮಿನ್ನಶೇಷೌಜಸಿ ಸರ್ವರೂಪಿ-**
**ಣ್ಯವ್ಯಕ್ತವಿಸ್ಪಷ್ಟತನಾವನಂತೇ।**
**ಮಮಾಚಲಂ ಚಿತ್ತಮಪೇತದೋಷಂ**
**ಸದಾಽಸ್ತು ವಿಷ್ಣಾವಭವಾಯ ಭೂಯಃ॥** 127

---

ನಾದವನು ಸಹ ವಿಷಯಸಂಗದಿಂದ ಕೆಳಗೆ ಉರುಳುತ್ತಾನೆ. ಇನ್ನು ಅಲ್ಪಸಿದ್ಧಿಯನ್ನು ಸಾಧಿಸಿದ ಯೋಗಿಯ ವಿಷಯವನ್ನು ಹೇಳತಕ್ಕದ್ದೇನು? (124). ವಿಷಯಸಂಗವೆಂಬ ಮೊಸಳೆ ನನ್ನನ್ನು ಹಿಡಿದು ಬಿಟ್ಟಿತ್ತು. ಈಗ ನಾನು ಆತ್ಮಾರ್ಥವಾಗಿ ತಪಸ್ಸಿನಲ್ಲಿ ತೊಡಗುವೆನು. ಮಾಡಿದ ತಪ್ಪಿನಿಂದ ಕಳಚಿಕೊಳ್ಳುವೆನು. ಭಾರ್ಯಾದಿಜನರ ದುಃಖಗಳಿಂದ ಮತ್ತೆ ನಾನು ದುಃಖಿಯಾಗಬಾರದು (125). ಸರ್ವಕಾರ್ಯಗಳಿಗೆ ವಿಧಾತೃವೂ ಅಚಿಂತ್ಯ ಸ್ವರೂಪನೂ ಅಣುವಿಗಿಂತ ಅಣೀಯನೂ ಸಮಸ್ತವಸ್ತುಗಳಿಗಿಂತ ಮಹಾಂತನೂ ಶುದ್ಧನೂ ಶಬಲನೂ* ಈಶ್ವರರಿಗೆ ಈಶ್ವರನೂ ಆದ ಮಹಾವಿಷ್ಣುವನ್ನು ತಪಸ್ಸಿನಿಂದ ನಿಶ್ಚಯವಾಗಿ ಆರಾಧಿಸುವೆನು (126). ಸಂಪೂರ್ಣ ತೇಜೋಮಯನೂ ಸರ್ವರೂಪನೂ ಅವ್ಯಕ್ತನೂ ವ್ಯಕ್ತನೂ ಅನಂತನೂ ಆದ ಆ ಮಹಾವಿಷ್ಣುವಿನಲ್ಲಿ ನನ್ನ ಚಿತ್ತವು ಅಚಲವಾಗಿ ಮತ್ತೆ ನೆಲಸಲಿ. ದೋಷರಹಿತವಾಗಿದ್ದು ಮುಕ್ತಿಗೆ ಕಾರಣವಾಗಲಿ (127). ಸರ್ವಸ್ವರೂಪನೂ ನಿರ್ಮಲನೂ ಅನಂತನೂ ಸರ್ವೇಶ್ವರನೂ

---

* ಶಬಲ = ಮಾಯಾ ಸಹಿತ.

**ಸಮಸ್ತಭೂತಾದಮಲಾದನಂತಾ-**
**ತ್ಸರ್ವೇಶ್ವರಾದನ್ಯದನಾದಿಮಧ್ಯಾತ್।**
**ಯಸ್ಮಾನ್ನ ಕಿಂಚಿತ್ತಮಹಂ ಗುರೂಣಾಂ**
**ಪರಂ ಗುರುಂ ಸಂಶ್ರಯಮೇಮಿ ವಿಷ್ಣುಮ್॥** 128

*ಶ್ರೀಪರಾಶರ ಉವಾಚ:*

**ಇತ್ಯಾತ್ಮಾನಮಾತ್ಮನ್ಯೈವಾಭಿಧಾಯಾಸೌ ಸೌಭರಿರಪಹಾಯ ಪುತ್ರ-ಗೃಹಾಸನಪರಿಚ್ಛದಾದಿಕಮಶೇಷಮರ್ಥಜಾತಂ ಸಕಲಭಾರ್ಯಾಸಮನ್ವಿತೋ ವನಂ ಪ್ರವಿವೇಶ॥ 129॥ ತತ್ರಾಪ್ಯನುದಿನಂ ವೈಖಾನಸನಿಷ್ಪಾದ್ಯಮಶೇಷಕ್ರಿಯಾಕಲಾಪಂ ನಿಷ್ಪಾದ್ಯ ಕ್ಷಪಿತಸಕಲಪಾಪಃ ಪರಿಪಕ್ವಮನೋವೃತ್ತಿರಾತ್ಮನ್ಯಗ್ನೀನ್ಸಮಾರೋಪ್ಯ ಭಿಕ್ಷುರಭವತ್॥ 130॥ ಭಗವತ್ಯಾಸಜ್ಯಾಖಿಲಂ ಕರ್ಮಕಲಾಪಂ ಅನಂತಮಜಮನಾದಿನಿಧನಮವಿಕಾರಮಮರಣಾದಿಧರ್ಮಮವಾಪ ಪರಮನಂತಂ ಪರವತಾಮಚ್ಯುತಂ ಪದಮ್॥ 131॥ ಇತ್ಯೇತನ್ಮಾಂಧಾತೃದುಹಿತೃಸಂಬಂಧಾದಾಖ್ಯಾತಮ್**

---

ಆದಿಮಧ್ಯರಹಿತನೂ ಆದ ವಿಷ್ಣುವಿಗಿಂತ ಬೇರೆಯಾಗಿ ಯಾವ ವಸ್ತುವೂ ಇಲ್ಲ. ಗುರುಗಳಿಗೆ ಪರಮಗುರುವಾದ ಆತನಿಗೆ ಶರಣಾಗುವೆನು" (128). ಹೀಗೆ ಸೌಭರಿಮುನಿಯು ತನ್ನಲ್ಲಿಯೇ ತಾನು ಹೇಳಿಕೊಂಡು, ಪುತ್ರ ಗೃಹ ಆಸನ ವಸ್ತ್ರ —ಮುಂತಾದ ಸಕಲ ಪದಾರ್ಥಗಳನ್ನೂ ಪರಿತ್ಯಜಿಸಿ ಪತ್ನಿಯರೊಡಗೂಡಿ ಅರಣ್ಯವನ್ನು ಪ್ರವೇಶಿಸಿದನು (129). ಅಲ್ಲಿ ಪ್ರತಿದಿನವೂ ವಾನಪ್ರಸ್ಥನು ನಡೆಸಬೇಕಾದ ಸಕಲ ಕ್ರಿಯಾಕಲಾಪಗಳನ್ನೂ ನೆರವೇರಿಸುತ್ತಾ ಸಕಲ ಪಾಪಗಳನ್ನೂ ನೀಗಿಕೊಂಡನು. ಮನೋವೃತ್ತಿಯು ರಾಗದ್ವೇಷಶೂನ್ಯವಾಗಿ ಪರಿಶುದ್ಧವಾದ ಮೇಲೆ ಆಹವನೀಯಾದಿ ಅಗ್ನಿಗಳನ್ನು ತನ್ನಲ್ಲಿ ಸಮಾರೋಪಿಸಿಕೊಂಡು ಸಂನ್ಯಾಸಿಯಾದನು (130). ಸಕಲಕರ್ಮಕಲಾಪಗಳನ್ನೂ ಭಗವಂತನಿಗೆ ಸಮರ್ಪಿಸಿ, ಅಜವೂ ಅನಾದಿನಿಧನವೂ ವಿಕಾರಮರಣಾದಿಧರ್ಮರಹಿತವೂ ಪರಗಳಾದ ಇಂದ್ರಿಯಗಳಿಗೆ ಪರವೂ ಅನಂತವೂ ಆದ ಶಾಶ್ವತಪದವನ್ನು ಐದಿದನು (131). ಮಾಂಧಾತೃರಾಜನ ಹೆಣ್ಣುಮಕ್ಕಳ ಸಂಬಂಧವಾಗಿ ಈ ಕಥೆಯನ್ನು

**॥ 132 ॥ ಯಶ್ಚೈತತ್ಸೌಭರಿಚರಿತಮನುಸ್ಮರತಿ ಪಠತಿ ಪಾಠಯತಿ ಶೃಣೋತಿ ಶ್ರಾವಯತಿ ಧರತ್ಯವಧಾರಯತಿ ಲಿಖತಿ ಲೇಖಯತಿ ಶಿಕ್ಷಯತ್ಯಧ್ಯಾಪಯತ್ಯುಪದಿಶತಿ ವಾ ತಸ್ಯ ಷಡ್ ಜನ್ಮಾನಿ ದುಸ್ಸಂತತಿರಸದ್ಧರ್ಮೋ ವಾಙ್ಮನಸಯೋರಸನ್ಮಾರ್ಗಾಚರಣಮಶೇಷಹೇತುಷು ವಾ ಮಮತ್ವಂ ನ ಭವತಿ ॥ 133 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ದ್ವಿತೀಯೋಽಧ್ಯಾಯಃ

---

ಹೇಳಿದ್ದಾಯಿತು. ಈ ಸೌಭರಿಚರಿತವನ್ನು ಯಾವಾತನು ಸ್ಮರಿಸುವನೋ ಪಠಿಸುವನೋ ಓದಿಸುವನೋ ಕೇಳುವನೋ ಅಥವಾ ಅನ್ಯರಿಗೆ ಶ್ರವಣ ಮಾಡಿಸುವನೋ ನೆನಪಿನಲ್ಲಿಡುವನೋ ಅಥವಾ ಅನ್ಯರು ನೆನಪಿನಲ್ಲಿಡುವಂತೆ ಮಾಡುವನೋ ಬರೆಯುವನೋ ಬರೆಸುವನೋ ಕಲಿಯುವನೋ ಕಲಿಸುವನೋ ಅಥವಾ ಉಪದೇಶಿಸುವನೋ ಆತನಿಗೆ ಆರು ಜನ್ಮಗಳವರೆಗೆ ದುಷ್ಟ ಸಂತಾನವಾಗುವುದಿಲ್ಲ ; ಅವನು ಅಧರ್ಮಿಯಾಗಲಿ ವಾಕ್-ಮನಸ್ಸುಗಳಲ್ಲಿ ದುರಾಚಾರನಾಗಲಿ ಆಗುವುದಿಲ್ಲ. ಆತನಿಗೆ ಸಮಸ್ತವಸ್ತುಗಳಲ್ಲಿಯೂ ಮಮತ್ವದ ವ್ಯಾಮೋಹ ಹುಟ್ಟುವುದಿಲ್ಲ (132-133).

ಇಲ್ಲಿಗೆ ಶ್ರೀವಿಷ್ಣು ಪುರಾಣದ ಚತುರ್ಥಾಂಶದಲ್ಲಿ
ಎರಡನೆಯ ಅಧ್ಯಾಯ ಮುಗಿಯಿತು.



## ತೃತೀಯೋऽಧ್ಯಾಯಃ

*ಶ್ರೀಪರಾಶರ ಉವಾಚ:*

**ಅತಶ್ಚ ಮಾಂಧಾತುಃ ಪುತ್ರಸಂತತಿರಭಿಧೀಯತೇ ॥ 1 ॥ ಅಂಬರೀಷಸ್ಯ ಮಾಂಧಾತೃತನಯಸ್ಯ ಯುವನಾಶ್ವಃ ಪುತ್ರೋऽಭೂತ್ ॥ 2 ॥ ತಸ್ಮಾದ್ಧಾರೀತಃ ಯತೋऽಂಗಿರಸೋ ಹಾರೀತಾಃ ॥ 3 ॥ ರಸಾತಲೇ ಮೌನೇಯಾ ನಾಮ ಗಂಧರ್ವಾ ಬಭೂವುಷ್ಷಟ್‌ಕೋಟಿಸಂಖ್ಯಾತಾಸ್ತೈಃ ಅಶೇಷಾಣಿ ನಾಗಕುಲಾನ್ಯಪಹೃತಪ್ರಧಾನರತ್ನಾಧಿಪತ್ಯಾನ್ಯಕ್ರಿಯಂತ ॥ 4 ॥ ತೈಶ್ಚ ಗಂಧರ್ವವೀರ್ಯಾವಧೂತೈರುರಗೇಶ್ವರೈಃ ಸ್ತೂಯಮಾನೋ ಭಗವಾನಶೇಷದೇವೇಶಃ ಸ್ತವಚ್ಛ್ರವಣೋನ್ಮೀಲಿತೋನ್ನಿದ್ರಪುಂಡರೀಕ-**

---

### ಅಧ್ಯಾಯ 3

ಮಾಂಧಾತೃರಾಜನ ಸಂತತಿ. ತ್ರಿಶಂಕು ಚರಿತೆ.
ಸಗರನ ಉತ್ಪತ್ತಿ ಮತ್ತು ಅವನ ದಿಗ್ವಿಜಯ.

ಪರಾಶರ ಮುನಿಗಳು ಹೇಳಿದರು: ಮೈತ್ರೇಯ, ಈಗ ಮಾಂಧಾತೃವಿನ ಪುತ್ರಸಂತತಿಯನ್ನು ಹೇಳುತ್ತೇನೆ. ಮಾಂಧಾತೃವಿನ ಮಗನಾದ ಅಂಬರೀಷನಿಗೆ ಯುವನಾಶ್ವನೆಂಬ ಮಗನು ಹುಟ್ಟಿದನು. ಆತನ ಮಗ ಹಾರೀತ. ಈತನಿಂದ ಹಾರೀತ* ಆಂಗೀರಸರೆಂಬ ದ್ವಿಜಸಂತತಿ ಬೆಳೆಯಿತು (1-3). ರಸಾತಳದಲ್ಲಿ ಮೌನೇಯರೆಂಬ ಗಂಧರ್ವರಿದ್ದರು. ಅವರ ಸಂಖ್ಯೆ ಆರುಕೋಟಿ. ಆ ಗಂಧರ್ವರು ನಾಗಕುಲದವರ ಪ್ರಧಾನರತ್ನಗಳನ್ನೂ ಅಧಿಕಾರವನ್ನೂ ಕಿತ್ತುಕೊಂಡರು. ಹೀಗೆ ಗಂಧರ್ವರಿಂದ ಪರಾಜಿತರಾದ ಸರ್ಪಾಧಿಪತಿಗಳು ಶ್ರೀಮನ್ನಾರಾಯಣನ ಬಳಿಗೆ ಹೋಗಿ ಸ್ತುತಿಸಲಾಗಿ, ಜಲಶಯನದಲ್ಲಿ ನಿದ್ರಿಸುತ್ತಿದ್ದ ದೇವೇಶ್ವರನಾದ

---

* 'ಅಥ ಹಾರೀತಾನಾಂ ತ್ರ್ಯಾರ್ಷೇಯಾ ಆಂಗಿರಸಾಂಬರೀಷ ಯೌವನಾಶ್ವ' ಎಂದು ಪ್ರವರ ಪಾಠವಿದೆ. ಹಾರೀತನ ಪತ್ನಿಯಲ್ಲಿ ಆಂಗಿರಸನಿಂದ ನಿಯೋಗವಿಧಿಯ ಮೂಲಕ ಈ ಸಂತತಿ ಬೆಳದಿರಬೇಕು. ವಿವರ ದೊರೆಯುವುದಿಲ್ಲ.

**ನಯನೋ ಜಲಶಯನೋ ನಿದ್ರಾವಸಾನಾತ್ ಪ್ರಬುದ್ಧಃ ಪ್ರಣಿಪತ್ಯಾಭಿಹಿತಃ ಭಗವನ್, ಅಸ್ಮಾಕಮೇತೇಭ್ಯೋ ಗಂಧರ್ವೇಭ್ಯೋ ಭಯಮುತ್ಪನ್ನಂ ಕಥಮುಪಶಮಮೇಷ್ಯತೀತಿ ॥ 5 ॥ ಆಹ ಚ ಭಗವಾನ್ ಅನಾದಿನಿಧನಪುರುಷೋತ್ತಮೋ ಯೋಽಸೌ ಯುವನಾಶ್ವಸ್ಯ ಮಾಂಧಾತುಃ ಪುರುಕುತ್ಸನಾಮಾ ಪುತ್ರಸ್ತಮಹಮನುಪ್ರವಿಶ್ಯ ತಾನಶೇಷಾನ್ ದುಷ್ಟಗಂಧರ್ವಾನುಪಶಮಂ ನಯಿಷ್ಯಾಮೀತಿ ॥ 6 ॥ ತದಾಕರ್ಣ್ಯ ಭಗವತೇ ಜಲಶಾಯಿನೇ ಕೃತಪ್ರಣಾಮಾಃ ಪುನರ್ನಾಗಲೋಕಮಾಗತಾಃ ಪನ್ನಗಾಧಿಪತಯೋ ನರ್ಮದಾಂ ಚ ಪುರುಕುತ್ಸಾನಯನಾಯ ಚೋದಯಾಮಾಸುಃ ॥ 7 ॥ ಸಾ ಚೈನಂ ರಸಾತಲಂ ನೀತವತೀ ॥ 8 ॥ ರಸಾತಲಗತಶ್ಚಾಸೌ ಭಗವತ್ತೇಜಸಾಪ್ಯಾಯಿತಾತ್ಮವೀರ್ಯಸ್ಸಕಲಗಂಧರ್ವಾನ್ನಿಜಘಾನ ॥ 9 ॥ ಪುನಶ್ಚ ಸ್ವಪುರಮಾಜಗಾಮ ॥ 10 ॥ ಸಕಲಪನ್ನಗಾಧಿಪತಯಶ್ಚ ನರ್ಮದಾಯೈ ವರಂ ದದುಃ । ಯಸ್ತೇಽನುಸ್ಮರಣ-**

---

ಭಗವಂತನು ಸ್ತುತಿಯನ್ನು ಕೇಳಿ ಎಚ್ಚೆತ್ತು ತನ್ನ ಕಮಲನೇತ್ರಗಳನ್ನು ತೆರೆದನು. ಆಗ ಸರ್ಪರಾಜರು ಪ್ರಣಾಮಗಳನ್ನರ್ಪಿಸಿ 'ಸ್ವಾಮಿ, ಈ ಗಂಧರ್ವರಿಂದ ನಮಗೆ ಭಯ ಹುಟ್ಟಿದೆ. ಇದು ಶಾಂತವಾಗುವುದು ಹೇಗೆ?' ಎಂದು ವಿಜ್ಞಾಪಿಸಿದರು (4-5). ಆಗ ಅನಾದಿನಿಧನನಾದ ಪುರುಷೋತ್ತಮನು "ಯುವನಾಶ್ವನ ಪುತ್ರನಾದ ಮಾಂಧಾತೃವಿಗೆ ಪುರುಕುತ್ಸನೆಂಬ ಪುತ್ರನಿರುವನಷ್ಟೆ, ಆತನಲ್ಲಿ ನಾನು ಅನುಪ್ರವೇಶಮಾಡಿ ಆ ದುಷ್ಟ ಗಂಧರ್ವರನ್ನು ಮುಗಿಸುವೆನು" ಎಂದನು (6). ಆ ನುಡಿಯನ್ನು ಕೇಳಿ ನಾಗಾಧಿಪತಿಗಳು ಜಲಶಾಯಿಯಾದ ಭಗವಂತನಿಗೆ ನಮಸ್ಕರಿಸಿ ನಾಗಲೋಕಕ್ಕೆ ಹಿಂದಿರುಗಿ, ಪುರುಕುತ್ಸನನ್ನು ಕರೆತರುವಂತೆ ನರ್ಮದೆಯನ್ನು* ಪ್ರೇರಿಸಿದರು. ಅವಳು ಪುರುಕುತ್ಸನನ್ನು ರಸಾತಳಕ್ಕೆ ಕರೆದುಕೊಂಡು ಬಂದಳು (7-8). ಪುರುಕುತ್ಸನು ರಸಾತಳದಲ್ಲಿ ಭಗವಂತನ ತೇಜಸ್ಸಿನಿಂದ ಆವಿಷ್ಟವಾದ ಸ್ವಪರಾಕ್ರಮವುಳ್ಳವನಾಗಿ ಸಕಲ ಗಂಧರ್ವರನ್ನೂ ಸಂಹರಿಸಿದನು. ಆಗ ಎಲ್ಲ ನಾಗಾಧಿಪತಿಗಳೂ ನರ್ಮದೆಗೆ "ಯಾರು ನಿನ್ನನ್ನು ಸ್ಮರಿಸುತ್ತಾ ನಿನ್ನ ನಾಮೋಚ್ಚಾರಣೆ ಮಾಡುತ್ತಾರೋ ಅವರಿಗೆ ಸರ್ಪವಿಷದಿಂದ

* ಇವಳು ನಾಗಾಧಿಪತಿಗಳ ಸಹೋದರಿ, ಪುರುಕುತ್ಸನ ಪತ್ನಿ.

**ಸಮವೇತಂ ನಾಮಗ್ರಹಣಂ ಕರಿಷ್ಯತಿ ನ ತಸ್ಯ ಸರ್ಪವಿಷಭಯಂ ಭವಿಷ್ಯತೀತಿ ॥ 11 ॥ ಅತ್ರ ಚ ಶ್ಲೋಕಃ ॥ 12 ॥**

**ನರ್ಮದಾಯ್ಯೆ ನಮಃ ಪ್ರಾತರ್ನರ್ಮದಾಯ್ಯೆ ನಮೋ ನಿಶಿ ।**
**ನಮೋಽಸ್ತು ನರ್ಮದೇ ತುಭ್ಯಂ ತ್ರಾಹಿ ಮಾಂ ವಿಷಸರ್ಪತಃ ॥ 13**

**ಇತ್ಯುಚ್ಚಾರ್ಯಾಹರ್ನಿಶಮಂಧಕಾರಪ್ರವೇಶೇ ವಾ ಸರ್ಪೈರ್ನ-ನಶ್ಯತೇ ನ ಚಾಪಿ ಕೃತಾನುಸ್ಮರಣಭುಜೋ ವಿಷಮಪಿ ಭುಕ್ತಮುಪ-ಘಾತಾಯ ಭವತಿ ॥ 14 ॥ ಪುರುಕುತ್ಸಾಯ ಸಂತತಿವಿಚ್ಛೇದೋ ನ ಭವಿಷ್ಯತೀತ್ಯುರಗಪತಯೋ ವರಂ ದದುಃ ॥ 15 ॥ ಪುರುಕುತ್ಸೋ ನರ್ಮದಾಯಾಂ ತ್ರಸದ್ದಸ್ಯುಮಜೀಜನತ್ ॥ 16 ॥ ತ್ರಸದ್ದಸ್ಯುತಸ್ಸಂಭೂ-ತೋಽನರಣ್ಯಃ ಯಂ ರಾವಣೋ ದಿಗ್ವಿಜಯೇ ಜಘಾನ ॥ 17 ॥ ಅನ-ರಣ್ಯಸ್ಯ ಪೃಷದಶ್ವಃ ಪೃಷದಶ್ವಸ್ಯ ಹರ್ಯಶ್ವಃ ಪುತ್ರೋಽಭವತ್ ॥ 18 ॥ ತಸ್ಯ ಚ ಹಸ್ತಃ ಪುತ್ರೋಽಭವತ್ ॥ 19 ॥ ತತಶ್ಚ ಸುಮನಾಸ್ತಸ್ಯಾಪಿ ತ್ರಿಧನ್ವಾ**

---

ಯಾವ ಭಯವೂ ಒದಗುವುದಿಲ್ಲ" ಎಂದು ವರವನ್ನಿತ್ತರು (9-11). ಈ ಸಂಬಂಧದಲ್ಲಿ ಒಂದು ಶ್ಲೋಕ ಉಂಟು. ಏನೆಂದರೆ, "ನರ್ಮದೆಗೆ ಪ್ರಾತಃ ಕಾಲದಲ್ಲಿ ನಮಸ್ಕಾರ, ರಾತ್ರಿಯಲ್ಲಿಯೂ ನರ್ಮದೆಗೆ ನಮಸ್ಕಾರ. ಹೇ ನರ್ಮದೆ, ನಿನಗೆ ನಮಸ್ಕಾರವಿರಲಿ. ವಿಷಸರ್ಪದಿಂದ ನನ್ನನ್ನು ರಕ್ಷಿಸು" (12-13). ಈ ಶ್ಲೋಕವನ್ನು ಪಠಿಸುತ್ತ ಹಗಲಲ್ಲಾಗಲಿ ರಾತ್ರಿಯಲ್ಲಾಗಲಿ ಕತ್ತಲು ಪ್ರದೇಶದಲ್ಲಿ ಹೋಗುತ್ತಿದ್ದರೂ ಸರ್ಪವು ಕಡಿಯುವುದಿಲ್ಲ. ನರ್ಮದೆಯನ್ನು ಸ್ಮರಿಸುತ್ತ ಊಟ ಮಾಡಿದರೆ, ತಿಂದ ವಿಷವೂ ಘಾತಕವಾಗುವುದಿಲ್ಲ (14). ಮತ್ತು ಪುರುಕುತ್ಸನಿಗೆ ಸಂತತಿಯು ಅನುಸ್ಯೂತವಾಗಿ ನಡೆಯಲೆಂದೂ ಸಂತತಿ ವಿಚ್ಛೇದವಾಗದಿರಲೆಂದೂ ನಾಗಾಧಿಪತಿಗಳು ವರವನ್ನಿತ್ತರು (15). ಪುರುಕುತ್ಸನು ನರ್ಮದೆಯಲ್ಲಿ ತ್ರಸದ್ದಸ್ಯು ಎಂಬ ಪುತ್ರನನ್ನು ಪಡೆದನು. ತ್ರಸದ್ದಸ್ಯುವಿನಿಂದ ಅನರಣ್ಯನು ಹುಟ್ಟಿದನು. ಅನರಣ್ಯನನ್ನು ರಾವಣನು ಕೊಂದನು. ಅನರಣ್ಯನಿಗೆ ಪೃಷದಶ್ವನೂ ಆತನಿಗೆ ಹರ್ಯಶ್ವನೂ ಮಕ್ಕಳಾದರು. ಹರ್ಯಶ್ವನ ಮಗ ಹಸ್ತ. ಆತನಿಂದ ಸುಮನ ಎಂಬುವನೂ ಅವನಿಗೆ ತ್ರಿಧನ್ವನೂ ಆತನಿಗೆ

**ತ್ರಿಧನ್ವನಸ್ತ್ರಯ್ಯಾರುಣಿಃ ॥ 20 ॥ ತ್ರಯ್ಯಾರುಣೇಸ್ಸತ್ಯವ್ರತಃ ಯೋಽಸೌ ತ್ರಿಶಂಕುಸಂಜ್ಞಾಮವಾಪ ॥ 21 ॥ ಸ ಚಾಂಡಾಲತಾಮುಪಗತಶ್ಚ ॥ 22 ॥ ದ್ವಾದಶವಾರ್ಷಿಕ್ಯಾಮನಾವೃಷ್ಟ್ಯಾಂ ವಿಶ್ವಾಮಿತ್ರಕಲತ್ರಾಪತ್ಯಪೋಷಣಾರ್ಥಂ ಚಾಂಡಾಲಪ್ರತಿಗ್ರಹಪರಿಹರಣಾಯ ಚ ಜಾಹ್ನವೀತೀರನ್ಯಗ್ರೋಧೇ ಮೃಗಮಾಂಸಮನುದಿನಂ ಬಬಂಧ ॥ 23 ॥ ಸ ತು ಪರಿತುಷ್ಟೇನ ವಿಶ್ವಾಮಿತ್ರೇಣ ಸಶರೀರಸ್ಸ್ವರ್ಗಮಾರೋಪಿತಃ ॥ 24 ॥ ತ್ರಿಶಂಕೋರ್ಹರಿಶ್ಚಂದ್ರಸ್ತಸ್ಮಾಚ್ಚ ರೋಹಿತಾಶ್ವಸ್ತತಶ್ಚ ಹರಿತೋ ಹರಿತಸ್ಯ ಚಂಚುಶ್ಚಂಚೋರ್ವಿಜಯವಸುದೇವೌ ರುರುಕೋ ವಿಜಯಾದ್ರುರುಕಸ್ಯ**

---

ತ್ರಯ್ಯಾರುಣಿಯೂ ಜನಿಸಿದರು. ತ್ರಯ್ಯಾರುಣಿಗೆ ಸತ್ಯವ್ರತನು ಪುತ್ರನಾಗಿ ಹುಟ್ಟಿದನು. ಈ ಸತ್ಯವ್ರತನಿಗೆ ತ್ರಿಶಂಕು ಎಂಬ ಹೆಸರು ಬಂದಿತು (16-21). ಈತನು ಚಂಡಾಲನಾದನು.* ಒಮ್ಮೆ ಹನ್ನೆರಡು ವರ್ಷಗಳ ಬರಗಾಲವು ಬಂದಾಗ ಈ ತ್ರಿಶಂಕುವು ತಪಸ್ಸಿನಲ್ಲಿದ್ದ ವಿಶ್ವಾಮಿತ್ರರ ಹೆಂಡತಿ ಮಕ್ಕಳನ್ನು ಪೋಷಿಸಿದನು. ತಾನು ಚಂಡಾಲನಾದ್ದರಿಂದ ಅವರು ಆಹಾರವನ್ನು ತನ್ನ ಕೈಯಿಂದ ಸ್ವೀಕರಿಸಲಾರರೆಂದು ತಿಳಿದು, ಪ್ರತಿದಿನವೂ ಗಂಗಾತೀರದಲ್ಲಿದ್ದ ಒಂದು ಆಲದಮರಕ್ಕೆ ಜಿಂಕೆಯ ಮಾಂಸವನ್ನು ತಂದು ತೂಗುಹಾಕುತ್ತಿದ್ದನು. (ಮುಂದೆ ತಪಸ್ಸಿನಿಂದ ಹಿಂದಿರುಗಿ ಬಂದ) ವಿಶ್ವಾಮಿತ್ರರಿಗೆ ಈ ಸಂಗತಿ ತಿಳಿಯಿತು. ಅವರು ಸಂತುಷ್ಟರಾಗಿ ತ್ರಿಶಂಕುವನ್ನು ಸಶರೀರವಾಗಿ ಸ್ವರ್ಗಕ್ಕೆ ಏರಿಸಿದರು! (22-24). ತ್ರಿಶಂಕುವಿನಿಂದ ಹರಿಶ್ಚಂದ್ರ, ಅವನಿಂದ ರೋಹಿತಾಶ್ವ, ಅವನಿಂದ ಹರಿತ, ಹರಿತನಿಂದ ಚಂಚು, ಚಂಚುವಿನಿಂದ ವಿಜಯ ಮತ್ತು ವಸುದೇವ ಎಂಬುವರ ಜನ್ಮವಾಯಿತು. ವಿಜಯನಿಗೆ ಗುರುಕನೂ ಅವನಿಗೆ ವೃಕನೂ ಹುಟ್ಟಿದರು

---

* ಈತನು ಇನ್ನೊಬ್ಬನಿಗೆ ವಾಗ್ದತ್ತಳಾದ ಕನ್ಯೆಯನ್ನು ಅಪಹರಿಸಿದ್ದರಿಂದ ತಂದೆ ಇವನನ್ನು ಪರಿತ್ಯಜಿಸಿದನು. ಅನಂತರ ಶ್ವಪಚರೊಡನೆ ವಾಸವಾಗಿದ್ದು ಚಂಡಾಲನಾದನೆಂದು ವಾಯು, ಬ್ರಹ್ಮ, ಲಿಂಗಪುರಾಣಗಳಲ್ಲಿವೆ. ವಸಿಷ್ಠಪುತ್ರರ ಶಾಪದಿಂದ ಚಂಡಾಲನಾದನೆಂದು ರಾಮಾಯಣದಲ್ಲಿದೆ. ಈ ಪ್ರಕರಣದಲ್ಲಿರುವ ರಾಜರ ವಂಶಾವಳಿ, ಅವರ ಹೆಸರು, ಅನುಕ್ರಮ—ಮೊದಲಾದವುಗಳಿಗೆ ಪುರಾಣಗಳಲ್ಲಿ ಏಕರೂಪತೆ ಇಲ್ಲ.

**ವೃಕಃ ॥ 25 ॥ ತತೋ ವೃಕಸ್ಯ ಬಾಹುರ್ಯೋಽಸೌ ಹೈಹಯತಾಲ-ಜಂಘಾದಿಭಿಃ ಪರಾಜಿತೋಽಂತರ್ವತ್ನ್ಯಾ ಮಹಿಷ್ಯಾ ಸಹ ವನಂ ಪ್ರವಿವೇಶ ॥ 26 ॥ ತಸ್ಯಾಶ್ಚ ಸಪತ್ನ್ಯಾ ಗರ್ಭಸ್ತಂಭನಾಯ ಗರೋ ದತ್ತಃ ॥ 27 ॥ ತೇನಾಸ್ಯಾ ಗರ್ಭಸ್ಸಪ್ತವರ್ಷಾಣಿ ಜಠರ ಏವ ತಸ್ಥೌ ॥ 28 ॥ ಸ ಚ ಬಾಹುರ್ವೃದ್ಧಭಾವಾದೌರ್ವಾಶ್ರಮಸಮೀಪೇ ಮಮಾರ ॥ 29 ॥ ಸಾ ತಸ್ಯ ಭಾರ್ಯಾ ಚಿತಾಂ ಕೃತ್ವಾ ತಮಾರೋಪ್ಯಾನುಮರಣಕೃತನಿಶ್ಚಯಾ-ಭೂತ್ ॥ 30 ॥ ಅಥೈತಾಮತೀತಾನಾಗತವರ್ತಮಾನಕಾಲತ್ರಯವೇದೀ ಭಗವಾನೌರ್ವಸ್ಸ್ವಾಶ್ರಮಾನ್ನಿರ್ಗತ್ಯಾಬ್ರವೀತ್ ॥ 31 ॥ ಅಲಮಲಮನೇನ ಅಸದ್ಗ್ರಾಹೇಣಾಖಿಲಭೂಮಂಡಲಪತಿರತಿವೀರ್ಯಪರಾಕ್ರಮೋ ನೈಕ-ಯಜ್ಞಕೃದರಾತಿಪಕ್ಷಕ್ಷಯಕರ್ತಾ ತವೋದರೇ ಚಕ್ರವರ್ತೀ ತಿಷ್ಠತಿ ॥ 32 ॥ ನೈವಮತಿಸಾಹಸಾಧ್ಯವಸಾಯಿನೀ ಭವತೀ ಭವತ್ವಿತ್ಯುಕ್ತಾ ಸಾ ತಸ್ಮಾ-**

---

(25). ವೃಕನಿಗೆ ಬಾಹು ಎಂಬುವನು ಪುತ್ರನಾದನು. ಈತನು ಯುದ್ಧದಲ್ಲಿ ಹೈಹಯ ತಾಲಜಂಘ—ಮೊದಲಾದವರಿಂದ ಸೋತು, ಗರ್ಭಿಣಿಯಾಗಿದ್ದ ತನ್ನ ರಾಣಿಯ ಜೊತೆಗೆ ಕಾಡಿಗೆ ಹೋದನು (26). ರಾಣಿಯ ಸವತಿಯೊಬ್ಬಳು ಅವಳ ಗರ್ಭವನ್ನು ತಡೆಯುವುದಕ್ಕಾಗಿ ಅವಳಿಗೆ ವಿಷವನ್ನಿತ್ತಳು. ವಿಷದೋಷ ದಿಂದ ರಾಣಿಯ ಗರ್ಭವು ಏಳು ವರ್ಷಗಳವರೆಗೆ ಉದರದಲ್ಲಿಯೇ ನಿಂತಿತು. ಇತ್ತ ಬಾಹುವು ವೃದ್ಧನಾದ್ದರಿಂದ ಔರ್ವ ಎಂಬ ಋಷಿಗಳ ಆಶ್ರಮದ ಸಮೀಪ ದಲ್ಲಿ ಸತ್ತುಹೋದನು (27-29). ಆತನ ಪತ್ನಿಯು ಚಿತೆಯನ್ನು ನಿರ್ಮಿಸಿ ಅದ ರಲ್ಲಿ ಪತಿಯ ದೇಹವನ್ನಿಟ್ಟು ಸಹಗಮನ ಮಾಡಬೇಕೆಂದು ನಿಶ್ಚಯಿಸಿದಳು. ಆ ಸಮಯದಲ್ಲಿ ಭೂತ, ಭವಿಷ್ಯತ್, ವರ್ತಮಾನ—ಎಂಬ ಕಾಲತ್ರಯದಲ್ಲಾಗು ವುದನ್ನು ಬಲ್ಲ ಭಗವಾನ್ ಔರ್ವಮಹರ್ಷಿಯು ಆಶ್ರಮದಿಂದ ಹೊರಗೆ ಬಂದು "ಬೇಡ ಬೇಡ ಈ ತಪ್ಪುದಾರಿಯ ಅಭಿಮಾನ! ಅಖಿಲ ಭೂಮಂಡಲೇಶ್ವರನೂ ಮಹಾ ಬಲಪರಾಕ್ರಮಿಯೂ ಹಲವಾರು ಯಜ್ಞಗಳನ್ನು ನಡೆಸತಕ್ಕವನೂ ಶತ್ರು ವಿಧ್ವಂಸಕನೂ ಆಗುವ ಚಕ್ರವರ್ತಿಯು ನಿನ್ನ ಗರ್ಭದಲ್ಲಿದ್ದಾನೆ! (30-32). ಓ ಸಾಧ್ವಿ, ಈ ದುಡುಕಿನ ಸಾಹಸಕೃತ್ಯವನ್ನು ಮಾಡಬೇಡ" ಎಂದು ನುಡಿದು ತಡೆಯಲಾಗಿ, ಅವಳು ಸಹಗಮನವನ್ನು ನಿಲ್ಲಿಸಿದಳು. ಆ ಮಹರ್ಷಿಯು

**ದನುಮರಣನಿರ್ಬಂಧಾದ್ವಿರರಾಮ ॥ 33 ॥ ತೇನೈವ ಚ ಭಗವತಾ ಸ್ವಾಶ್ರಮಮಾನೀತಾ ॥ 34 ॥ ತತ್ರ ಕತಿಪಯದಿನಾಭ್ಯಂತರೇ ಚ ಸಹೈವ ತೇನ ಗರೇಣಾತಿತೇಜಸ್ವೀ ಬಾಲಕೋ ಜಜ್ಞೇ ॥ 35 ॥ ತಸ್ಯೌರ್ವೋ ಜಾತಕರ್ಮಾದಿಕ್ರಿಯಾ ನಿಷ್ಪಾದ್ಯ ಸಗರ ಇತಿ ನಾಮ ಚಕಾರ ॥ 36 ॥ ಕೃತೋಪನಯನಂ ಚೈನಮೌರ್ವೋ ವೇದಶಾಸ್ತ್ರಾಣ್ಯಸ್ತ್ರಂ ಚಾಗ್ನೇಯಂ ಭಾರ್ಗವಾಖ್ಯಮಧ್ಯಾಪಯಾಮಾಸ ॥ 37 ॥ ಉತ್ಪನ್ನಬುದ್ಧಿಶ್ಚ ಮಾತರಮಬ್ರವೀತ್ ॥ 38 ॥ ಅಂಬ, ಕಥಮತ್ರ ವಯಂ ಕ್ವ ವಾ ತಾತೋಽಸ್ಮಾಕಮಿತ್ಯೇವಮಾದಿಪೃಚ್ಛಂತಂ ಮಾತಾ ಸರ್ವಮೇವಾವೋಚತ್ ॥ 39 ॥ ತತಶ್ಚ ಪಿತೃರಾಜ್ಯಾಪಹರಣಾದಮರ್ಷಿತೋ ಹೈಹಯತಾಲಜಂಘಾದಿವಧಾಯ ಪ್ರತಿಜ್ಞಾಮಕರೋತ್ ॥ 40 ॥ ಪ್ರಾಯಶಶ್ಚ ಹೈಹಯತಾಲ ಜಂಘಾನ್ ಜಘಾನ ॥ 41 ॥ ಶಕಯವನಕಾಂಬೋಜಪಾರದಪಹ್ಲವಾಃ**

---

ಆಕೆಯನ್ನು ತನ್ನ ಆಶ್ರಮಕ್ಕೆ ಕರೆದೊಯ್ದನು (33-34). ಕೆಲವು ದಿನಗಳು ಕಳೆಯುವುದರೊಳಗೆ ಅತ್ಯಂತ ತೇಜಸ್ವಿಯಾದ ಬಾಲಕನು, ರಾಣಿಯು ತಿಂದಿದ್ದ ಗರ(ವಿಷ)ದಿಂದ ಸಹಿತನಾಗಿಯೇ ಜನಿಸಿದನು. ಔರ್ವಮಹರ್ಷಿಯು ಮಗುವಿಗೆ ಜಾತಕರ್ಮಾದಿಸಂಸ್ಕಾರಗಳನ್ನು ನಡೆಸಿ ಸಗರ ಎಂದು ನಾಮಕರಣ ಮಾಡಿದನು (35-36). ಹಾಗೆಯೇ ಔರ್ವಮುನಿಯು ಆ ಬಾಲಕನಿಗೆ ಉಪನಯನ ಮಾಡಿ ವೇದಶಾಸ್ತ್ರಗಳನ್ನು ಕಲಿಸಿ, ಭಾರ್ಗವ ಎಂಬ ಆಗ್ನೇಯಾಸ್ತ್ರ ವಿದ್ಯೆಯನ್ನು ಉಪದೇಶಿಸಿದನು. ಹುಡುಗನಿಗೆ ತಿಳಿವಳಿಕೆ ಬಂದಮೇಲೆ ಅವನು ತಾಯಿಯನ್ನು ಕುರಿತು 'ಅಮ್ಮ, ನಾವು ಈ ತಪೋವನದಲ್ಲಿರುವದೇಕೆ? ನಮ್ಮ ತಂದೆ ಯಾರು?' ಈ ರೀತಿಯಾಗಿ ಕೇಳತೊಡಗಿದನು. ಅವಳು ನಡೆದ ಸಂಗತಿಯೆಲ್ಲವನ್ನೂ ತಿಳಿಸಿದಳು (37-39). ಅನಂತರ ತನ್ನ ತಂದೆಯ ರಾಜ್ಯವನ್ನು ಹೈಹಯತಾಲಜಂಘಾದಿಗಳು ಅಪಹರಿಸಿದರೆಂಬುದನ್ನು ತಿಳಿದು ಸಗರನು ಕ್ರುದ್ಧನಾಗಿ ಆ ವೈರಿಗಳನ್ನು ವಧಿಸುತ್ತೇನೆಂದು ಪ್ರತಿಜ್ಞೆಮಾಡಿದನು (40). ವಿಶೇಷವಾಗಿ ಹೈಹಯತಾಲಜಂಘರನ್ನು ವಧಿಸಿದನು. ಶಕ, ಯವನ, ಕಾಂಬೋಜ, ಪಾರದ, ಪಹ್ಲವರನ್ನು ಸಂಹರಿಸತೊಡಗಲು, ಅವರು ಸಗರನ ಕುಲಗುರು

**ಹನ್ಯಮಾನಾಸ್ತತ್ಕುಲಗುರುಂ ವಸಿಷ್ಠಂ ಶರಣಂ ಜಗ್ಮುಃ ॥ 42 ॥ ಅಥೈನಾನ್ವಸಿಷ್ಠೋ ಜೀವನ್ಮೃತಕಾನ್ ಕೃತ್ವಾ ಸಗರಮಾಹ ॥ 43 ॥ ವತ್ಸ, ಅಲಮೇಭಿರ್ಜೀವನ್ಮೃತಕೈರನುಸೃತೈಃ ॥ 44 ॥ ಏತೇ ಚ ಮಯೈವ ತ್ವತ್ಪ್ರತಿಜ್ಞಾಪರಿಪಾಲನಾಯ ನಿಜಧರ್ಮದ್ವಿಜಸಂಗಪರಿತ್ಯಾಗಂ ಕಾರಿತಾಃ ॥ 45 ॥ ತಥೇತಿ ತದ್‌ಗುರುವಚನಮಭಿನಂದ್ಯ ತೇಷಾಂ ವೇಷಾನ್ಯತ್ವಮ-ಕಾರಯತ್ ॥ 46 ॥ ಯವನಾನ್ಮುಂಡಿತಶಿರಸೋಽರ್ಧಮುಂಡಿತಾಂಛ-ಕಾನ್ ಪ್ರಲಂಬಕೇಶಾನ್ ಪಾರದಾನ್ ಪಹ್ಲವಾಞ್ಶ್ಮಶ್ರುಧರಾನ್ ನಿಸ್ಸ್ವಾಧ್ಯಾಯವಷಟ್ಕಾರಾನೇತಾನನ್ಯಾಂಶ್ಚ ಕ್ಷತ್ರಿಯಾಂಶ್ಚಕಾರ ॥ 47 ॥ ಏತೇ ಚಾತ್ಮಧರ್ಮಪರಿತ್ಯಾಗಾದ್ ಬ್ರಾಹ್ಮಣೈಃ ಪರಿತ್ಯಕ್ತಾ ಮ್ಲೇಚ್ಛತಾಂ**

---

ಗಳಾದ ವಸಿಷ್ಠರ ಮರೆಹೊಕ್ಕರು (41-42). ಆಗ ವಸಿಷ್ಠರು ಶಕಾದಿಗಳನ್ನು ಜೀವನ್ಮೃತರನ್ನಾಗಿ ಮಾಡಿ ಸಗರನನ್ನು ಕುರಿತು "ವತ್ಸ, ಈ ಜೀವನ್ಮೃತ*ರನ್ನು ಬೆನ್ನಟ್ಟಿ ಹೋಗುವುದು ಬೇಡ. ನಿನ್ನ ಪ್ರತಿಜ್ಞೆಯ ಪಾಲನೆಗಾಗಿ ನಾನೇ ಇವರನ್ನು ನಿಜಧರ್ಮದಿಂದಲೂ ದ್ವಿಜರ ಸಂಸರ್ಗದಿಂದಲೂ ದೂರಮಾಡಿದ್ದೇನೆ" ಎಂದರು. ಸಗರನು ಹಾಗೆಯೇ ಆಗಲೆಂದು ವಸಿಷ್ಠರ ಆಜ್ಞೆಯನ್ನು ಮನ್ನಿಸಿ, ಶಕಾದಿಗಳು ತಮ್ಮ ವೇಷವನ್ನು ಬದಲಿಸುವಂತೆ ಆಜ್ಞೆಮಾಡಿದನು (43-46). ಯವನರು ಪೂರ್ತಿಯಾಗಿ ತಲೆಯನ್ನು ಬೋಳಿಸಬೇಕೆಂದೂ, ಶಕರು ತಲೆಯಲ್ಲಿ ಅರ್ಧಭಾಗವನ್ನು ಬೋಳಿಸಬೇಕೆಂದೂ, ಪಾರದರು ಕ್ಷೌರಮಾಡಿಸದೆ ತಲೆಯ ಕೂದಲನ್ನು ಬಿಡಬೇಕೆಂದೂ, ಪಹ್ಲವರು ಗಡ್ಡವನ್ನು ಬಿಡಬೇಕೆಂದೂ ಆಜ್ಞೆ ಮಾಡಿದನಲ್ಲದೆ, ಅವರೂ ಆ ಗುಂಪಿನ ಇತರ ಕ್ಷತ್ರಿಯರೂ ವೇದಾಧ್ಯಯನ ವಷಟ್ಕಾರಗಳನ್ನು ತ್ಯಜಿಸುವಂತೆ ಆದೇಶವಿತ್ತನು (47). ಅವರೆಲ್ಲರೂ ತಮ್ಮ ಧರ್ಮದಿಂದ ಚ್ಯುತರಾಗಿ ಬ್ರಾಹ್ಮಣರಿಂದಲೂ ಪರಿತ್ಯಕ್ತರಾಗಿ ಮ್ಲೇಚ್ಛರಾದರು.

---

* ಸ್ವಧರ್ಮದಿಂದ ಭ್ರಷ್ಟರಾಗಿ ಗುರುಹಿರಿಯರಿಂದ ಬಹಿಷ್ಕೃತರಾದವರಿಗೆ ಜೀವನ್ಮೃತರೆಂದು ಹೆಸರಿದೆ. 'ಯಃ ಸ್ವಧರ್ಮಾತ್ ಪರಿಭ್ರಷ್ಟೋ ವೃದ್ಧೈಶ್ಚೈವ ಬಹಿಷ್ಕೃತಃ। ಸಜೀವನ್ನೇವ ಲೋಕೇಽಸ್ಮಿನ್ ಮೃತ ಇತ್ಯಭಿಧೀಯತೇ ॥ ಎಂದು ಸ್ಮೃತಿವಚನ ಉಂಟು.

**ಯಯುಃ ॥ 48 ॥ ಸಗರೋಽಪಿ ಸ್ವಮಧಿಷ್ಠಾನಮಾಗಮ್ಯಾಸ್ಖಲಿತಚಕ್ರಸ್ಸಪ್ತ-ದ್ವೀಪವತೀಮಿಮಾಮುರ್ವೀಂ ಪ್ರಶಶಾಸ ॥ 49 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ತೃತೀಯೋಽಧ್ಯಾಯಃ

---

ಇತ್ತ ಸಗರನು ಅಪ್ರತಿಹತ ಸೇನಾಸಮೇತನಾಗಿ ತನ್ನ ರಾಜಧಾನಿಯನ್ನು ಸೇರಿ ಸಪ್ತದ್ವೀಪ ಸಹಿತವಾದ ಭೂಮಂಡಲವನ್ನು ಆಳತೊಡಗಿದನು (48-49).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಮೂರನೆಯ ಅಧ್ಯಾಯ ಮುಗಿಯಿತು.



## ಚತುರ್ಥೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಕಾಶ್ಯಪದುಹಿತಾ ಸುಮತಿರ್ವಿದರ್ಭರಾಜತನಯಾ ಕೇಶಿನೀ ಚ ದ್ವೇ ಭಾರ್ಯೇ ಸಗರಸ್ಯಾಸ್ತಾಮ್ ॥ 1 ॥ ತಾಭ್ಯಾಂ ಚಾಪತ್ಯಾರ್ಥಮೌರ್ವಃ ಪರಮೇಣ ಸಮಾಧಿನಾರಾಧಿತೋ ವರಮದಾತ್ ॥ 2 ॥ ಏಕಾ ವಂಶಕರಮೇಕಂ ಪುತ್ರಮಪರಾ ಷಷ್ಟಿಂ ಪುತ್ರಸಹಸ್ರಾಣಾಂ ಜನಯಿಷ್ಯತೀತಿ ಯಸ್ಯಾ ಯದಭಿಮತಂ ತದಿಚ್ಛಯಾ ಗೃಹ್ಯತಾಮಿತ್ಯುಕ್ತೇ ಕೇಶಿನ್ಯೇಕಂ ವರಯಾಮಾಸ ॥ 3 ॥ ಸುಮತಿಃ ಪುತ್ರಸಹಸ್ರಾಣಿ ಷಷ್ಟಿಂ ವವ್ರೇ ॥ 4 ॥ ತಥೇತ್ಯುಕ್ತೇ ಅಲ್ಪೈರಹೋಭಿಃ ಕೇಶಿನೀ ಪುತ್ರಮೇಕಮಸಮಂಜಸನಾಮಾನಂ ವಂಶಕರಮಸೂತ ॥ 5 ॥ ಕಾಶ್ಯಪತನಯಾಯಾಸ್ತು ಸುಮತ್ಯಾಃ ಷಷ್ಟಿಃ ಪುತ್ರಸಹಸ್ರಾಣ್ಯಭವನ್ ॥ 6 ॥ ತಸ್ಮಾದಸಮಂಜಸಾದಂಶುಮಾ-**

---

## ಅಧ್ಯಾಯ 4

ಸಗರ, ಸೌದಾಸ ಮತ್ತು ಖಟ್ವಾಂಗರ ಚರಿತೆ. ಮತ್ತು
ಶ್ರೀರಾಮನ ಚರಿತೆಯ ವಿಸ್ತೃತ ವರ್ಣನೆ.

ಪರಾಶರರು ಹೇಳಿದರು: ಕಾಶ್ಯಪನ ಮಗಳಾದ ಸುಮತಿ, ವಿದರ್ಭ ರಾಜನ ಪುತ್ರಿಯಾದ ಕೇಶಿನಿ—ಎಂಬಿಬ್ಬರು ಸಗರಚಕ್ರವರ್ತಿಯ ಪತ್ನಿಯರು. ಅವರಿಬ್ಬರೂ ಸಂತಾನಾರ್ಥವಾಗಿ ಬಹಳ ಏಕಾಗ್ರತೆಯಿಂದ ಔರ್ವಮುನಿಯನ್ನು ಆರಾಧಿಸಲಾಗಿ, ಆತನು ಹೀಗೆ ವರವನ್ನಿತ್ತನು (1). "ಒಬ್ಬಳು ವಂಶವನ್ನು ನಡೆಸುವ ಒಬ್ಬ ಪುತ್ರನನ್ನೂ ಇನ್ನೊಬ್ಬಳು ಅರವತ್ತು ಸಾವಿರ ಮಕ್ಕಳನ್ನೂ ಪಡೆಯುವಳು. ಯಾರಿಗೆ ಯಾವ ವರಬೇಕೋ ಅದನ್ನು ಸ್ವೇಚ್ಛೆಯಿಂದ ಸ್ವೀಕರಿಸ ಬಹುದು" ಎಂದನು. ಆಗ ಕೇಶಿನಿಯು ಒಬ್ಬ ಪುತ್ರನನ್ನೂ ಸುಮತಿಯು ಅರವತ್ತು ಸಾವಿರ ಪುತ್ರರನ್ನೂ ಬಯಸಿದರು (2-4). ಮುನಿಯು 'ತಥಾಸ್ತು' ಎನ್ನಲಾಗಿ ಕೆಲವು ದಿನಗಳಲ್ಲಿ ಕೇಶಿನಿಯು ವಂಶಕರನಾದ ಅಸಮಂಜಸನೆಂಬ ಮಗನನ್ನು ಹೆತ್ತಳು. ಕಾಶ್ಯಪಪುತ್ರಿಯಾದ ಸುಮತಿಗೆ ಅರವತ್ತು ಸಾವಿರ

**ನ್ನಾಮ ಕುಮಾರೋ ಜಜ್ಞೇ ॥ 7 ॥ ಸ ತ್ವಸಮಂಜಸೋ ಬಾಲೋ ಬಾಲ್ಯಾದೇವಾಸದ್‌ವೃತ್ತೋಽಭೂತ್ ॥ 8 ॥ ಪಿತಾ ಚಾಸ್ಯಾಚಿಂತಯ-ದಯಮತೀತಬಾಲ್ಯಃ ಸುಬುದ್ಧಿಮಾನ್ ಭವಿಷ್ಯತೀತಿ ॥ 9 ॥ ಅಥ ತತ್ರಾಪಿ ಚ ವಯಸ್ಯತೀತೇ ಅಸಚ್ಚರಿತಮೇನಂ ಪಿತಾ ತತ್ಯಾಜ ॥ 10 ॥ ತಾನ್ಯಪಿ ಷಷ್ಟಿಃ ಪುತ್ರಸಹಸ್ರಾಣ್ಯಸಮಂಜಸಚರಿತಮೇವಾನುಚಕ್ರುಃ ॥ 11 ॥ ತತಶ್ಚಾ-ಸಮಂಜಸಚರಿತಾನುಕಾರಿಭಿಸ್ಸಾಗರೈರಪಧ್ವಸ್ತಯಜ್ಞಾದಿಸನ್ಮಾರ್ಗೇ ಜಗತಿ ದೇವಾಃ ಸಕಲವಿದ್ಯಾಮಯಮಸಂಸ್ಪೃಷ್ಟಮಶೇಷದೋಷೈರ್ಭಗವತಃ ಪುರುಷೋತ್ತಮಸ್ಯಾಂಶಭೂತಂ ಕಪಿಲಂ ಪ್ರಣಮ್ಯ ತದರ್ಥಮೂಚುಃ ॥ 12 ॥ ಭಗವನ್, ಏಭಿಸ್ಸಗರತನಯೈರಸಮಂಜಸಚರಿತಮನುಗಮ್ಯತೇ ॥ 13 ॥ ಕಥಮೇಭಿರಸದ್‌ವೃತ್ತಮನುಸರದ್ಭಿರ್ಜಗದ್ಭವಿಷ್ಯತೀತಿ ॥ 14 ॥ ಅತ್ರಾರ್ತ್ತಜಗತ್ಪರಿತ್ರಾಣಾಯ ಚ ಭಗವತೋಽತ್ರ ಶರೀರಗ್ರಹಣಮಿತ್ಯಾ-**

---

ಮಕ್ಕಳಾದರು (5-6). ಅಸಮಂಜಸನಿಗೆ ಅಂಶುಮಂತನೆಂಬ ಕುಮಾರನು ಜನಿಸಿದನು. ಅಸಮಂಜಸನಾದರೋ ಬಾಲಕನಾಗಿದ್ದಾಗ ಕೆಟ್ಟನಡತೆಯವನಾಗಿದ್ದನು. ಇವನು ಬಾಲ್ಯವನ್ನು ಕಳೆದ ಮೇಲೆ ಒಳ್ಳೆಯ ಬುದ್ಧಿಶಾಲಿಯಾಗುವನೆಂದು ಅವನ ತಂದೆ ಆಲೋಚಿಸಿದ್ದನು (7-9). ಆದರೆ ಬಾಲ್ಯವು ಕಳೆದು ದೊಡ್ಡವನಾದಮೇಲೂ ಅಸಮಂಜಸನು ದುಷ್ಟಚಾರಿತ್ರನೇ ಆದ್ದರಿಂದ ತಂದೆಯು ಅವನನ್ನು ಬಹಿಷ್ಕರಿಸಿದನು. ಉಳಿದ ಅರವತ್ತು ಸಾವಿರ ಮಕ್ಕಳೂ ಸಹ ಅಸಮಂಜಸನ ನಡತೆಯನ್ನೇ ಅನುಸರಿಸುತ್ತಿದ್ದರು (10-11). ಹೀಗೆ ಅಸಮಂಜಸನಂತೆ ದುಷ್ಟಚಾರಿತ್ರರಾದ ಸಗರಪುತ್ರರಿಂದ ಜಗತ್ತಿನಲ್ಲಿ ಯಜ್ಞಾದಿ ಸನ್ಮಾರ್ಗವು ನಷ್ಟವಾಯಿತು. ಆಗ ದೇವತೆಗಳು ಸಕಲವಿದ್ಯಾಮಯನೂ ಅಶೇಷ ದೋಷಸ್ಪರ್ಶ ರಹಿತನೂ ಭಗವಾನ್ ಪುರುಷೋತ್ತಮನ ಅಂಶಭೂತನೂ ಆದ ಕಪಿಲಮಹರ್ಷಿಯ ಬಳಿಗೆ ಹೋಗಿ ನಮಸ್ಕರಿಸಿ ಇಂತೆಂದರು (12): "ಭಗವನ್, ಈ ಸಗರಪುತ್ರರು ಅಸಮಂಜಸನಂತೆಯೇ ನಡೆದುಕೊಳ್ಳುತ್ತಿದ್ದಾರೆ. ಈ ಕೆಟ್ಟನಡತೆಯವರಿಂದ ಜಗತ್ತಿನ ಪರಿಸ್ಥಿತಿ ಏನಾದೀತು? ಸಂಕಟಕ್ಕೆ ಸಿಕ್ಕಿದ ಜಗತ್ತನ್ನು ಪಾರುಮಾಡುವುದಕ್ಕಾಗಿಯೇ ನೀವು ಶರೀರಧಾರಿಗಳಾಗಿ ಅವತರಿಸಿದ್ದೀರಿ" ಎಂದರು. ಆಗ ಕಪಿಲಮುನಿಗಳು "ಸ್ವಲ್ಪ ದಿನಗಳಲ್ಲಿಯೇ ಅವರು

**ಕರ್ಣ್ಯ ಭಗವಾನಾಹಾಲ್ಪೈರೇವ ದಿನೈರ್ವಿನಙ್‌ಕ್ಷ್ಯಂತೀತಿ ॥ 15 ॥ ಅತ್ರಾಂತರೇ ಚ ಸಗರೋ ಹಯಮೇಧಮಾರಭತ ॥ 16 ॥ ತಸ್ಯ ಚ ಪುತ್ರೈರಧಿಷ್ಠಿತಮಸ್ಯಾಶ್ವಂ ಕೋಽಪ್ಯಪಹೃತ್ಯ ಭುವೋ ಬಿಲಂ ಪ್ರವಿವೇಶ ॥ 17 ॥ ತತಸ್ತತ್ತನಯಾಶ್ಚಾಶ್ವಖುರಗತಿನಿರ್ಬಂಧೇನಾವನೀಮೇಕೈಕೋ ಯೋಜನಂ ಚಖ್ನುಃ ॥ 18 ॥ ಪಾತಾಲೇ ಚಾಶ್ವಂ ಪರಿಭ್ರಮಂತಂ ತಮವನೀಪತಿತನಯಾಸ್ತೇ ದದೃಶುಃ ॥ 19 ॥ ನಾತಿದೂರೇಽವಸ್ಥಿತಂ ಚ ಭಗವಂತಮಪಘನೇ ಶರತ್ಕಾಲೇಽರ್ಕಮಿವ ತೇಜೋಭಿರನವರತ-ಮೂರ್ಧ್ವಮಧಶ್ಚಾಶೇಷದಿಶಶ್ಚೋದ್ಭಾಸಯಮಾನಂ ಹಯಹರ್ತಾರಂ ಕಪಿಲರ್ಷಿಮಪಶ್ಯನ್ ॥ 20 ॥ ತತಶ್ಚೋದ್ಯತಾಯುಧಾ ದುರಾತ್ಮಾನೋಽ-ಯಮಸ್ಮದಪಕಾರೀ ಯಜ್ಞವಿಘ್ನಕಾರೀ ಹನ್ಯತಾಂ ಹಯಹರ್ತಾ ಹನ್ಯತಾ-ಮಿತ್ಯವೋಚನ್ನಭ್ಯಧಾವಂಶ್ಚ ॥ 21 ॥ ತತಸ್ತೇನಾಪಿ ಭಗವತಾ ಕಿಂಚಿ-ದೀಷತ್ಪರಿವರ್ತಿತಲೋಚನೇನಾವಲೋಕಿತಾಸ್ಸ್ವಶರೀರಸಮುತ್ಥೇನಾಗ್ನಿನಾ-**

---

ನಾಶವಾಗುವರು” ಎಂದು ತಿಳಿಸಿದರು (13-15). ಈ ಸಮಯದಲ್ಲಿ ಸಗರನು ಅಶ್ವಮೇಧಯಾಗದಲ್ಲಿ ತೊಡಗಿದನು. ಅವನ ಪುತ್ರರಿಂದ ಸಂರಕ್ಷಿತವಾದ ಅಶ್ವವನ್ನು ಯಾವನೋ* ಅಪಹರಿಸಿಕೊಂಡು ಭೂವಿವರದಲ್ಲಿ ಇಳಿದು ಹೋದನು. ಆಗ ಸಗರಪುತ್ರರು ಕುದುರೆಯ ಗೊರಸುಗಳ ಚಿಹ್ನೆಯನ್ನನುಸರಿಸಿ, ಒಬ್ಬೊಬ್ಬನೂ ಒಂದೊಂದು ಯೋಜನದಂತೆ ಭೂಮಿಯನ್ನಗೆದರು (16-18). ಆಮೇಲೆ ಪಾತಾಳದಲ್ಲಿ ಸುತ್ತಾಡುತ್ತಿದ್ದ ಆ ಕುದುರೆಯನ್ನು ಈ ರಾಜಪುತ್ರರು ಕಂಡರು (19). ಸಮೀಪದಲ್ಲಿ ಭಗವಾನ್ ಕಪಿಲಮುನಿಗಳು, ಮೋಡವಿಲ್ಲದ ಶರತ್ಕಾಲದಲ್ಲಿ ಬೆಳಗುವ ಸೂರ್ಯನಂತೆ, ಮೇಲೆ ಕೆಳಗೆ ಸುತ್ತಲೂ ಸದಾ ತೇಜಸ್ಸನ್ನು ಬೀರುತ್ತ ಬೆಳಗುತ್ತಿರುವುದನ್ನು ಸಗರಪುತ್ರರು ನೋಡಿ, ಆತನೇ ಕುದುರೆಯನ್ನಪಹರಿಸಿದವನೆಂದು ಭಾವಿಸಿದರು (20). ಒಡನೆಯೇ ಆ ದುರಾತ್ಮರು ಆಯುಧಗಳನ್ನು ಹಿರಿದು ‘ಈತನೇ ನಮಗೆ ದ್ರೋಹ ಮಾಡಿದವನು, ಯಜ್ಞಕ್ಕೆ ವಿಘ್ನವನ್ನೊಡ್ಡಿದವನು. ಕುದುರೆಯ ಕಳ್ಳ! ಕೊಲ್ಲಿರಿ, ಕೊಲ್ಲಿರಿ!’ ಎನ್ನುತ್ತ ಧಾವಿಸಿ ಬಂದರು (21). ಆಗ ಭಗವಾನ್ ಕಪಿಲಮುನಿಗಳು ಸ್ವಲ್ಪ ಕಣ್ಣನ್ನು

---

* ಯಜ್ಞಾಶ್ವವನ್ನು ಇಂದ್ರನು ಅಪಹರಿಸಿದನೆಂದು ಭಾಗವತದಲ್ಲಿದೆ.

**ದಹ್ಯಮಾನಾ ವಿನೇಶುಃ ॥ 22 ॥ ಸಗರೋಽಪ್ಯವಗಮ್ಯಾಶ್ವಾನುಸಾರಿ ತತ್ಪುತ್ರಬಲಮಶೇಷಂ ಪರಮರ್ಷಿಣಾ ಕಪಿಲೇನ ತೇಜಸಾ ದಗ್ಧಂ ತತೋಽಂಶುಮಂತಮಸಮಂಜಸಪುತ್ರಮಶ್ವಾನಯನಾಯ ಯುಯೋಜ ॥ 23 ॥ ಸ ತು ಸಗರತನಯಖಾತಮಾರ್ಗೇಣ ಕಪಿಲಮುಪಗಮ್ಯ ಭಕ್ತಿನಮ್ರಸ್ತದಾ ತುಷ್ಟಾವ ॥ 24 ॥ ಅಥೈನಂ ಭಗವಾನಾಹ ॥ 25 ॥ ಗಚ್ಛೈನಂ ಪಿತಾಮಹಾಯಾಶ್ವಂ ಪ್ರಾಪಯ ವರಂ ವೃಣೀಷ್ವ ಚ ಪುತ್ರಕ ಪೌತ್ರಶ್ಚ ತೇ ಸ್ವರ್ಗಾದ್ ಗಂಗಾಂ ಭುವಮಾನೇಷ್ಯತ ಇತಿ ॥ 26 ॥ ಅಥಾಂಶುಮಾನಪಿ ಸ್ವರ್ಯಾತಾನಾಂ ಬ್ರಹ್ಮದಂಡಹತಾನಾಮಸ್ಮತ್ಪಿತೃಣಾಮಸ್ವರ್ಗಯೋಗ್ಯಾನಾಂ ಸ್ವರ್ಗಪ್ರಾಪ್ತಿಕರಂ ವರಮಸ್ಮಾಕಂ ಪ್ರಯಚ್ಛೇತಿ ಪ್ರತ್ಯಾಹ ॥ 27 ॥ ತದಾಕರ್ಣ್ಯ ತಂ ಚ ಭಗವಾನಾಹ ಉಕ್ತಮೇವೈತನ್ಮಯಾದ್ಯ ಪೌತ್ರಸ್ತೇ ತ್ರಿದಿವಾದ್ಗಂಗಾಂ ಭುವಮಾನೇಷ್ಯತೀತಿ ॥ 28 ॥ ತದಂಭಸಾ ಚ**

---

ಹೊರಳಿಸಿ ನೋಡಲಾಗಿ, ಆ ಸಗರಪುತ್ರರು ತಮ್ಮ ದೇಹದಿಂದಲೇ ಉದ್ಭವಿಸಿದ ಬೆಂಕಿಯಿಂದ ಸುಟ್ಟು ನಾಶವಾದರು (22). ಹೀಗೆ ಅಶ್ವವನ್ನು ಹಿಂಬಾಲಿಸಿ ಹೋದ ತನ್ನ ಪುತ್ರರೆಲ್ಲರೂ ಕಪಿಲಮಹರ್ಷಿಗಳ ತೇಜಸ್ಸಿನಿಂದ ಸುಟ್ಟುಹೋದ ರೆಂಬುದನ್ನು ಕೇಳಿ ಸಗರ ಚಕ್ರವರ್ತಿಯು ಅಸಮಂಜಸನ ಪುತ್ರನಾದ ಅಂಶುಮಂತನನ್ನು, ಅಶ್ವವನ್ನು ತರುವುದಕ್ಕಾಗಿ ಕಳಿಸಿದನು (23). ಅಂಶುಮಂತ ನಾದರೋ ಸಗರಪುತ್ರರು ಅಗೆದ ದಾರಿಯನ್ನು ಹಿಡಿದು ಹೋಗಿ ಕಪಿಲಮುನಿ ಗಳನ್ನು ಕಂಡು ಭಕ್ತಿನಮ್ರನಾಗಿ ಸ್ತೋತ್ರಮಾಡಿದನು. ಆಗ ಕಪಿಲಮುನಿಗಳು ಆತನನ್ನು ನೋಡಿ "ಮಗು, ಈ ಅಶ್ವವನ್ನು ತೆಗೆದುಕೊಂಡು ಹೋಗಿ ನಿನ್ನ ಅಜ್ಜನಿಗೆ ಒಪ್ಪಿಸು. ನಿನ್ನ ಮೊಮ್ಮಗನು ಗಂಗೆಯನ್ನು ಸ್ವರ್ಗದಿಂದ ಭೂಮಿಗೆ ಇಳಿಸುವನು. ಏನಾದರೂ ವರವನ್ನು ಕೇಳಿಕೊ" ಎಂದರು (24-26). ಅದಕ್ಕೆ ಅಂಶುಮಂತನು "ಬ್ರಾಹ್ಮಣಹನನಕ್ಕೆ ಉದ್ಯಮಿಸಿ ಹತರಾಗಿರುವ ನನ್ನ ಪಿತೃವ್ಯರು ಸ್ವರ್ಗಪ್ರಾಪ್ತಿಗೆ ಯೋಗ್ಯರಾಗದೆ ಹೋಗಿದ್ದಾರೆ. ಅವರಿಗೆ ಸ್ವರ್ಗಪ್ರಾಪ್ತಿಯಾಗು ವಂತೆ ನಮಗೆ ವರವನ್ನು ಅನುಗ್ರಹಿಸಬೇಕು" ಎಂದನು (27). ಆ ಮಾತನ್ನು ಕೇಳಿ ಕಪಿಲಮುನಿಗಳು "ಹೇಳಿಯೇ ಇದ್ದೇನೆ 'ನಿನ್ನ ಮೊಮ್ಮಗನು ಸ್ವರ್ಗದಿಂದ ಗಂಗೆಯನ್ನು ಭೂಮಿಗೆ ತರುವನು' ಎಂದು. ಇವರ ಅಸ್ಥಿಭಸ್ಮಗಳಿಗೆ ಗಂಗಾಜಲದ

**ಸಂಸ್ಪೃಷ್ಟೇಷ್ವಸ್ಥಿಭಸ್ಮಸು ಏತೇ ಚ ಸ್ವರ್ಗಮಾರೋಕ್ಷ್ಯಂತಿ ॥ 29 ॥ ಭಗವದ್ವಿಷ್ಣುಪಾದಾಂಗುಷ್ಠನಿರ್ಗತಸ್ಯ ಹಿ ಜಲಸ್ಯೈತನ್ಮಾಹಾತ್ಮ್ಯಮ್ ॥ 30 ॥ ಯನ್ನ ಕೇವಲಮಭಿಸಂಧಿಪೂರ್ವಕಂ ಸ್ನಾನಾದ್ಯುಪಭೋಗೇಷೂಪಕಾರಕಮನಭಿಸಂಹಿತಮಪಪ್ಯೇತಪ್ರಾಣಸ್ಯ ಅಸ್ಥಿಚರ್ಮಸ್ನಾಯುಕೇಶಾದ್ಯುಪಸ್ಪೃಷ್ಟಂ ಶರೀರಜಮಪಿ ಪತಿತಂ ಸದ್ಯಃ ಶರೀರಿಣಂ ಸ್ವರ್ಗಂ ನಯತೀತ್ಯುಕ್ತಃ ಪ್ರಣಮ್ಯ ಭಗವತೇಽಶ್ವಮಾದಾಯ ಪಿತಾಮಹಯಜ್ಞಮಾಜಗಾಮ ॥ 31 ॥ ಸಗರೋಽಪ್ಯಶ್ವಮಾಸಾದ್ಯ ತಂ ಯಜ್ಞಂ ಸಮಾಪಯಾಮಾಸ ॥ 32 ॥ ಸಾಗರಂ ಚಾತ್ಮಜಪ್ರೀತ್ಯಾ ಪುತ್ರತ್ವೇ ಕಲ್ಪಿತವಾನ್ ॥ 33 ॥ ತಸ್ಯಾಂಶುಮತೋ ದಿಲೀಪಃ ಪುತ್ರೋಽಭವತ್ ॥ 34 ॥ ದಿಲೀಪಸ್ಯ ಭಗೀರಥಃ ಯೋಽಸೌ ಗಂಗಾಂ ಸ್ವರ್ಗಾದಿಹಾನೀಯ ಭಾಗೀರಥೀಸಂಜ್ಞಾಂ ಚಕಾರ ॥ 35 ॥ ಭಗೀರಥಾತ್ಸುಹೋತ್ರಸ್ಸುಹೋತ್ರಾಚ್ಛ್ರುತಃ**

---

ಸ್ಪರ್ಶವಾದಾಗ ಇವರು ಸ್ವರ್ಗವನ್ನು ಸೇರುವರು (28-29). ಭಗವಾನ್ ಮಹಾವಿಷ್ಣುವಿನ ಪಾದಾಂಗುಷ್ಠದಿಂದ ಹೊರಬಂದ ಗಂಗಾಜಲಕ್ಕೆ ಈ ಮಹಿಮೆಯುಂಟು. ಕಾಮನಾಪೂರ್ವಕವಾಗಿ ಮಾಡುವ ಸ್ನಾನಾದಿಗಳು ಮಾತ್ರ ಫಲೋಪಭೋಗಕ್ಕೆ ಕಾರಣವೆಂದಲ್ಲ; ಸತ್ತವನ ಅಸ್ಥಿ, ಚರ್ಮ, ಸ್ನಾಯು, ಕೇಶ ಮೊದಲಾದದ್ದು ಉದ್ದೇಶವಿಲ್ಲದೆಯೇ ಗಂಗಾಜಲಸ್ಪರ್ಶವನ್ನು ಹೊಂದಿದರೂ ಗಂಗಾಜಲದಲ್ಲಿ ಬಿದ್ದರೂ ಒಡನೆಯೇ ಆ ಜೀವಿಗೆ ಸ್ವರ್ಗಪ್ರಾಪ್ತಿಯಾಗುತ್ತದೆ" ಎಂದು ನುಡಿದರು. ಅಂಶುಮಂತನು ಆ ಮಾತನ್ನಾಲಿಸಿ ಮುನಿಗಳಿಗೆ ವಂದಿಸಿ ಅಶ್ವವನ್ನು ತೆಗೆದುಕೊಂಡು ತನ್ನ ಅಜ್ಜನ ಯಜ್ಞಶಾಲೆಗೆ ಬಂದನು (30-31). ಅಶ್ವವು ದೊರಕಲಾಗಿ ಸಗರನು ಯಾಗವನ್ನು ಪೂರೈಸಿದನು. ತನ್ನ ಮಕ್ಕಳು ಅಗೆದು ಬೆಳೆಸಿದ್ದರಿಂದ ಸಮುದ್ರವನ್ನು ಪುತ್ರವಾತ್ಸಲ್ಯದಿಂದ* ಕಂಡನು (32-33). ಅಂಶುಮಂತನಿಗೆ ದಿಲೀಪನೆಂಬ ಪುತ್ರನು ಹುಟ್ಟಿದನು. ದಿಲೀಪನ ಮಗ ಭಗೀರಥ. ಆತನು ಗಂಗಾನದಿಯನ್ನು ಸ್ವರ್ಗದಿಂದ ಇಲ್ಲಿಗೆ ಇಳಿಸಿ ತಂದಿದ್ದರಿಂದ ಗಂಗೆಗೆ ಭಾಗೀರಥಿಯೆಂದು ಹೆಸರಾಯಿತು (34-35). ಭಗೀರಥನಿಂದ

---

* ಸಮುದ್ರಕ್ಕೆ 'ಸಾಗರ' ಎಂದು ನಾಮಕರಣಮಾಡಿದನೆಂದು ಅಭಿಪ್ರಾಯವಿರಬಹುದು.

**ತಸ್ಯಾಪಿ ನಾಭಾಗಃ ತತೋಽಂಬರೀಷಃ ತತ್ಪುತ್ರಸ್ಸಿಂಧುದ್ವೀಪಃ ಸಿಂಧುದ್ವೀಪಾದಯುತಾಯುಃ ॥ 36 ॥ ತತ್ಪುತ್ರಶ್ಚ ಋತುಪರ್ಣಃ ಯೋಽಸೌ ನಲಸಹಾಯೋಽಕ್ಷಹೃದಯಜ್ಞೋಽಭೂತ್ ॥ 37 ॥ ಋತುಪರ್ಣಪುತ್ರಸ್ಸರ್ವಕಾಮಃ ॥ 38 ॥ ತತ್ತನಯಸ್ಸುದಾಸಃ ॥ 39 ॥ ಸುದಾಸಾತ್ಸೌದಾಸೋ ಮಿತ್ರಸಹನಾಮಾ ॥ 40 ॥ ಸ ಚಾಟವ್ಯಾಂ ಮೃಗಯಾರ್ಥೀ ಪರ್ಯಟನ್ ವ್ಯಾಘ್ರದ್ವಯಮಪಶ್ಯತ್ ॥ 41 ॥ ತಾಭ್ಯಾಂ ತದ್ವನಮಪಮೃಗಂ ಕೃತಂ ಮತ್ವೈಕಂ ತಯೋರ್ಬಾಣೇನ ಜಘಾನ ॥ 42 ॥ ಮ್ರಿಯಮಾಣಶ್ಚಾಸಾವತಿಭೀಷಣಾಕೃತಿರತಿಕರಾಲವದನೋ ರಾಕ್ಷಸೋಽಭೂತ್ ॥ 43 ॥ ದ್ವಿತೀಯೋಽಪಿ ಪ್ರತಿಕ್ರಿಯಾಂ ತೇ ಕರಿಷ್ಯಾಮೀತ್ಯುಕ್ತ್ವಾಂತರ್ಧಾನಂ ಜಗಾಮ ॥ 44 ॥ ಕಾಲೇನ ಗಚ್ಛತಾ ಸೌದಾಸೋ ಯಜ್ಞಮಯಜತ್ ॥ 45 ॥ ಪರಿನಿಷ್ಠಿತಯಜ್ಞೇ ಆಚಾರ್ಯೇ ವಸಿಷ್ಠೇ ನಿಷ್ಕ್ರಾಂತೇ ತದ್ರಕ್ಷೋ ವಸಿಷ್ಠ-**

---

ಸುಹೋತ್ರ. ಸುಹೋತ್ರನಿಂದ ಶ್ರುತ. ಅವನ ಮಗ ನಾಭಾಗ. ಆತನ ಮಗ ಅಂಬರೀಷ. ಆತನ ಪುತ್ರ ಸಿಂಧುದ್ವೀಪ. ಸಿಂಧುದ್ವೀಪನಿಂದ ಹುಟ್ಟಿದವನು ಅಯುತಾಯು, ಆತನ ಮಗ ಋತುಪರ್ಣ. ಈತನೇ ನಳರಾಜನ ಸಹಾಯದಿಂದ ಅಕ್ಷಹೃದಯವನ್ನರಿತಿದ್ದನು* (36-37). ಋತುಪರ್ಣನ ಮಗ ಸರ್ವಕಾಮ. ಅವನ ತನಯ ಸುದಾಸ. ಸುದಾಸನಿಂದ ಸೌದಾಸನೆಂದು ಪ್ರಸಿದ್ಧನಾದ ಮಿತ್ರಸಹನು ಹುಟ್ಟಿದನು. ಅವನು ಬೇಟೆಯಾಡುವುದಕ್ಕಾಗಿ ಅಡವಿಯಲ್ಲಿ ಸಂಚರಿಸುತ್ತ ಎರಡು ಹುಲಿಗಳನ್ನು ಕಂಡನು (38-41). ಆ ಎರಡು ಹುಲಿಗಳು ಅಡವಿಯಲ್ಲಿ ಮೃಗಗಳಿಲ್ಲದಂತೆ ಮಾಡಿರುತ್ತವೆಯೆಂದು ಭಾವಿಸಿ ಅವುಗಳಲ್ಲೊಂದನ್ನು ಬಾಣದಿಂದ ಕೊಂದನು. ಸಾಯುವಾಗ ಅದು ಅತಿಭೀಕರಾಕೃತಿಯೂ ಅತಿಕರಾಳಮುಖನೂ ಆದ ರಾಕ್ಷಸನಾಯಿತು. ಎರಡನೆಯದು 'ನಿನ್ನ ಮೇಲೆ ಸೇಡು ತೀರಿಸಿಕೊಳ್ಳುವೆನು!' ಎಂದು ಹೇಳಿ ಅಂತರ್ಧಾನಹೊಂದಿತು (42-44). ಕೆಲವು ಕಾಲದ ಮೇಲೆ ಸೌದಾಸನು ಒಂದು ಯಜ್ಞವನ್ನು ಮಾಡಿದನು. ಯಜ್ಞವು ಸಮಾಪ್ತವಾದ ಮೇಲೆ ಆಚಾರ್ಯ ವಸಿಷ್ಠರು ಹೊರಗಡೆ ಹೋಗಿದ್ದಾಗ, ಆ ರಾಕ್ಷಸನು ವಸಿಷ್ಠರೂಪವನ್ನು ಧರಿಸಿ ಬಂದು ಸೌದಾಸ

* ಅಕ್ಷಹೃದಯ = ಪಗಡೆಯಾಟದ ವಿದ್ಯೆ.

**ರೂಪಮಾಸ್ಥಾಯ ಯಜ್ಞಾವಸಾನೇ ಮಮ ನರಮಾಂಸಭೋಜನಂ ದೇಯಮಿತಿ ತತ್ಸಂಸ್ಕ್ರಿಯತಾಂ ಕ್ಷಣಾದಾಗಮಿಷ್ಯಾಮೀತ್ಯುಕ್ತ್ವಾ ನಿಷ್ಕ್ರಾಂತಃ ॥ 46 ॥ ಭೂಯಶ್ಚ ಸೂದವೇಷಂ ಕೃತ್ವಾ ರಾಜಾಜ್ಞಯಾ ಮಾನುಷಂ ಮಾಂಸಂ ಸಂಸ್ಕೃತ್ಯ ರಾಜ್ಞೇ ನ್ಯವೇದಯತ್ ॥ 47 ॥ ಅಸಾವಪಿ ಹಿರಣ್ಯಪಾತ್ರೇ ಮಾಂಸಮಾದಾಯ ವಸಿಷ್ಠಾಗಮನಪ್ರತೀಕ್ಷಕೋಽ- ಭವತ್ ॥ 48 ॥ ಆಗತಾಯ ವಸಿಷ್ಠಾಯ ನಿವೇದಿತವಾನ್ ॥ 49 ॥ ಸ ಚಾಪ್ಯಚಿಂತಯದಹೋ ಅಸ್ಯ ರಾಜ್ಞೋ ದೌಶ್ಶೀಲ್ಯಂ ಯೇನೈತನ್ಮಾಂಸ ಮಸ್ಮಾಕಂ ಪ್ರಯಚ್ಛತಿ ಕಿಮೇತದ್ದ್ರವ್ಯಜಾತಮಿತಿ ಧ್ಯಾನಪರೋಽ- ಭವತ್ ॥ 50 ॥ ಅಪಶ್ಯಚ್ಚ ತನ್ಮಾಂಸಂ ಮಾನುಷಮ್ ॥ 51 ॥ ಅತಃ ಕ್ರೋಧಕಲುಷೀಕೃತಚೇತಾ ರಾಜನಿ ಶಾಪಮುತ್ಸಸರ್ಜ ॥ 52 ॥ ಯಸ್ಮಾದ ಭೋಜ್ಯಮೇತದಸ್ಮದ್ವಿಧಾನಾಂ ತಪಸ್ವಿನಾಮವಗಚ್ಛನ್ನಪಿ ಭವಾನ್ಮಹ್ಯಂ ದದಾತಿ ತಸ್ಮಾತ್ತವೈವಾತ್ರ ಲೋಲುಪತಾ ಭವಿಷ್ಯತೀತಿ ॥ 53 ॥ ಅನಂತರಂ**

---

ನೊಡನೆ ಹೀಗೆಂದನು: "ಯಜ್ಞವು ಸಮಾಪ್ತವಾಗಿರುವುದರಿಂದ ಈಗ ನನಗೆ ನರಮಾಂಸದ ಭೋಜನವನ್ನು ನೀಡಬೇಕು! ಅಡಿಗೆಯನ್ನು ಮಾಡಿಸು. ಬೇಗನೆ ಬರುವೆನು" ಎಂದು ಹೇಳಿ ರಾಕ್ಷಸನು ಹೊರಟುಹೋದನು (45-46). ಮತ್ತೆ ಆತನೆ ಅಡಿಗೆಯವನ ವೇಷದಲ್ಲಿ ಬಂದು ರಾಜನ ಆಜ್ಞೆಯನ್ನು ಪಡೆದು ನರಮಾಂಸವನ್ನು ಪಕ್ವಮಾಡಿ ರಾಜನಿಗೆ ಒಪ್ಪಿಸಿದನು. ಸೌದಾಸನಾದರೋ ಅದನ್ನು ಚಿನ್ನದ ಪಾತ್ರೆಯಲ್ಲಿಡಿಸಿ ವಸಿಷ್ಠರ ಆಗಮನವನ್ನು ನಿರೀಕ್ಷಿಸುತ್ತ ಇದ್ದನು. ಆಮೇಲೆ ವಸಿಷ್ಠರು ಬರಲಾಗಿ ಅವರಿಗೆ ಭೋಜನಕ್ಕಾಗಿ ನಿವೇದಿಸಿದನು (47-49). ವಸಿಷ್ಠರು "ಅಬ್ಬ! ಈ ರಾಜನ ದೌರ್ಜನ್ಯವೆಷ್ಟಿರಬಹುದು! ನಮಗೆ ಮಾಂಸವನ್ನು ಬಡಿಸುತ್ತಾನಲ್ಲ! ಇದು ಯಾವ ಪದಾರ್ಥವಾಗಿರಬಹುದು?" ಎಂದು ಧ್ಯಾನಸ್ಥರಾಗಿ ಜ್ಞಾನದೃಷ್ಟಿಯಿಂದ ನೋಡಿದರು. ಅದು ನರಮಾಂಸ ವೆಂದು ಗೊತ್ತಾಯಿತು (50-51). ಕ್ರೋಧದಿಂದ ಚಿತ್ತವು ಕ್ಷುಬ್ಧವಾಯಿತು. "ನಮ್ಮಂತಹ ತಪಸ್ವಿಗಳು ಇದನ್ನು ತಿನ್ನುವುದಿಲ್ಲ. ಇದು ಅಭೋಜ್ಯ—ಎಂದು ಗೊತ್ತಿದ್ದರೂ ಇದನ್ನು ನೀನು ನಮಗೆ ನೀಡಿದೆಯಲ್ಲ , ಇದರ ಫಲವಾಗಿ ನಿನಗೇ ಇದರಲ್ಲಿ ಆಸಕ್ತಿ ಬೆಳೆಯಲಿ! (ನೀನು ರಾಕ್ಷಸನಾಗು)" ಎಂದು ಶಪಿಸಿದರು

**ಚ ತೇನಾಪಿ ಭಗವತ್ಯೈವಾಭಿಹಿತೋಽಸ್ಮೀತ್ಯುಕ್ತೇ ಕಿಂ ಕಿಂ ಮಯಾಭಿಹಿತಮಿತಿ ಮುನಿಃ ಪುನರಪಿ ಸಮಾಧೌ ತಸ್ಥೌ॥ 54॥ ಸಮಾಧಿವಿಜ್ಞಾನಾವಗತಾರ್ಥಶ್ಚಾನುಗ್ರಹಂ ತಸ್ಮೈ ಚಕಾರ ನಾತ್ಯಂತಿಕಮೇತದ್ ದ್ವಾದಶಾಬ್ದಂ ತವ ಭೋಜನಂ ಭವಿಷ್ಯತೀತಿ ॥ 55॥ ಅಸಾವಪಿ ಪ್ರತಿಗೃಹ್ಯೋದಕಾಂಜಲಿಂ ಮುನಿಶಾಪಪ್ರದಾನಾಯೋದ್ಯತೋ ಭಗವನ್, ಅಯಮಸ್ಮದ್‌ಗುರುರ್ನಾರ್ಹಸ್ಯೇನಂ ಕುಲದೇವತಾಭೂತಮಾಚಾರ್ಯಂ ಶಪ್ತುಮಿತಿ ಮದಯಂತ್ಯಾ ಸ್ವಪತ್ನ್ಯಾ ಪ್ರಸಾದಿತಸ್ಸಸ್ಯಾಂಬುದರಕ್ಷಣಾರ್ಥಂ ತಚ್ಛಾಪಾಂಬು ನೋರ್ವ್ಯಾಂ ನ ಚಾಕಾಶೇ ಚಿಕ್ಷೇಪ ಕಿಂ ತು ತೇನೈವ ಸ್ವಪದೌ ಸಿಷೇಚ ॥ 56॥ ತೇನ ಚ ಕ್ರೋಧಾಶ್ರಿತೇನಾಂಬುನಾ ದಗ್ಧಚ್ಛಾಯೌ ತತ್ಪಾದೌ ಕಲ್ಮಾಷತಾಮುಪಗತೌ ತತಸ್ಸ ಕಲ್ಮಾಷಪಾದಸಂಜ್ಞಾ-**

---

(52-53). ಆಗ ಸೌದಾಸನು "ಭಗವನ್, ನೀವೇ ಈ ಆಹಾರವು ಬೇಕೆಂದು ಹೇಳಿದಿರಲ್ಲ!" ಎಂದನು. ವಸಿಷ್ಠರು "ಏನು! ಏನು! ನಾನು ಹೇಳಿದೆನೆ?" ಎಂದು ನುಡಿದು ಮತ್ತೆ ಧ್ಯಾನಸ್ಥರಾದರು (54). ಧ್ಯಾನದೃಷ್ಟಿಯಿಂದ ಸತ್ಯವೇನೆಂಬುದನ್ನರಿತು ವಸಿಷ್ಠರು ಕನಿಕರಿಸಿ "ರಾಜ, ಕಡೆಯ ತನಕ ಹೀಗೆಯೇ ಆಗುವುದು ಬೇಡ. ಕೇವಲ ಹನ್ನೆರಡು ವರ್ಷಗಳ ಕಾಲ ನಿನಗೆ ನರಮಾಂಸ ಭಕ್ಷಣವು ಪ್ರಾಪ್ತವಾಗುವುದು" ಎಂದರು (55). ಆಗ ಸೌದಾಸನೂ ಒಂದು ಬೊಗಸೆ ನೀರನ್ನು ತೆಗೆದುಕೊಂಡು ವಸಿಷ್ಠ ಮುನಿಗಳಿಗೆ ಶಾಪವನ್ನೀಯಲು ಸನ್ನದ್ಧನಾದನು. ಅಷ್ಟರಲ್ಲಿ ಅವನ ಪತ್ನಿ ಮದಯಂತಿಯು ಅಡ್ಡಬಂದು ಪತಿಯೊಡನೆ "ಸ್ವಾಮಿ, ಇವರು ನಮ್ಮ ಗುರುಗಳು. ಕುಲಪುರೋಹಿತರು. ಕುಲದೇವತಾ ಸ್ವರೂಪರು. ಇವರನ್ನು ಶಪಿಸಬಾರದು' ಎಂದು ಬೇಡಿಕೊಂಡಳು. ಆಗ ರಾಜನು ಸಸ್ಯಾಂಬುದರಕ್ಷಣೆಗಾಗಿ ಶಾಪಾರ್ಥವಾದ ಬೊಗಸೆ ನೀರನ್ನು ನೆಲಕ್ಕೂ ಚೆಲ್ಲದೆ ಆಕಾಶಕ್ಕೂ ಎರಚದೆ ತನ್ನ ಕಾಲುಗಳ ಮೇಲೆ ಸುರಿದುಕೊಂಡನು* (56). ಕ್ರೋಧಯುಕ್ತವಾದ ಆ ಜಲದ ಸ್ಪರ್ಶದಿಂದ ಅವನ ಪಾದಗಳ ಕಾಂತಿ ನಷ್ಟವಾಗಿ ಪಾದಗಳು ಕಲ್ಮಾಷವರ್ಣ(ಬಿಳಿಪು ಮಿಶ್ರ ಕಪ್ಪುವರ್ಣ)ದ

---

* ಆ ಶಾಪಜಲವನ್ನು ನೆಲದಮೇಲೆರಚಿದರೆ ಸಸ್ಯಗಳೂ ಆಕಾಶದಲ್ಲೆರಚಿದರೆ ಮೋಡಗಳೂ ನಾಶವಾಗುತ್ತವೆಂದು ತನ್ನ ಕಾಲುಗಳ ಮೇಲೆ ಸುರುವಿಕೊಂಡನು.

**ಮವಾಪ ॥ 57 ॥ ವಸಿಷ್ಠಶಾಪಾಚ್ಚ ಷಷ್ಠೇ ಷಷ್ಠೇ ಕಾಲೇ ರಾಕ್ಷಸಸ್ವಭಾವಮೇತ್ಯಾಟವ್ಯಾಂ ಪರ್ಯಟನ್ನನೇಕಶೋ ಮಾನುಷಾನಭಕ್ಷಯತ್ ॥ 58 ॥ ಏಕದಾ ತು ಕಂಚಿನ್ಮುನಿಮೃತುಕಾಲೇ ಭಾರ್ಯಾಸಂಗತಂ ದದರ್ಶ ॥ 59 ॥ ತಯೋಶ್ಚ ತಮತಿಭೀಷಣಂ ರಾಕ್ಷಸಸ್ವರೂಪಮವಲೋಕ್ಯ ತ್ರಾಸಾದ್ದಂಪತ್ಯೋಃ ಪ್ರಧಾವಿತಯೋರ್ಬ್ರಾಹ್ಮಣಂ ಜಗ್ರಾಹ ॥ 60 ॥ ತತಸ್ಸಾ ಬ್ರಾಹ್ಮಣೀ ಬಹುಶಸ್ತಮಭಿಯಾಚಿತವತೀ ॥ 61 ॥ ಪ್ರಸೀದೇಕ್ಷ್ವಾಕುಕುಲತಿಲಕಭೂತಸ್ತ್ವಂ ಮಹಾರಾಜೋ ಮಿತ್ರಸಹೋ ನ ರಾಕ್ಷಸಃ ॥ 62 ॥ ನಾರ್ಹಸಿ ಸ್ತ್ರೀಧರ್ಮಸುಖಾಭಿಜ್ಞೋ ಮಯ್ಯಕೃತಾರ್ಥಾಯಾಮಸ್ಮದ್ಭರ್ತಾರಂ ಹಂತುಮಿತ್ಯೇವಂ ಬಹುಪ್ರಕಾರಂ ತಸ್ಯಾಂ ವಿಲಪಂತ್ಯಾಂ ವ್ಯಾಘ್ರಃ ಪಶುಮಿವಾರಣ್ಯೇಽಭಿಮತಂ ತಂ ಬ್ರಾಹ್ಮಣಮಭಕ್ಷಯತ್ ॥ 63 ॥ ತತಶ್ಚಾತಿಕೋಪಸಮನ್ವಿತಾ ಬ್ರಾಹ್ಮಣೀ**

---

ವಾದವು. ಆದರಿಂದ ಸೌದಾಸನಿಗೆ ಕಲ್ಮಾಷಪಾದನೆಂದು ಹೆಸರಾಯಿತು (57). ವಸಿಷ್ಠಶಾಪದ ದೆಸೆಯಿಂದ ಪ್ರತಿಯೊಂದು ಆರನೆಯ ಊಟದ* ಸಮಯದಲ್ಲಿ ರಾಕ್ಷಸ ಸ್ವಭಾವವನ್ನೈದಿ ಅಡವಿಯಲ್ಲಿ ಅಲೆಯುತ್ತಾ ಅನೇಕ ಮನುಷ್ಯರನ್ನು ಭಕ್ಷಿಸುತ್ತಿದ್ದನು (58). ಒಂದುಸಲ ಋತುಕಾಲದಲ್ಲಿ ತನ್ನ ಭಾರ್ಯೆಯೊಡನೆ ಸಂಗಮಿಸುತ್ತಿದ್ದ ಒಬ್ಬ ಮುನಿಯನ್ನು ಕಂಡನು. ಸೌದಾಸನ ಅತಿಭಯಂಕರವಾದ ರಾಕ್ಷಸರೂಪವನ್ನು ಕಂಡು ಹೆದರಿ ಆ ದಂಪತಿಗಳು ಓಡಿಹೋಗುತ್ತಿರಲು, ಸೌದಾಸನು ಬ್ರಾಹ್ಮಣನನ್ನು ಹಿಡಿದುಕೊಂಡನು. ಆ ಬ್ರಾಹ್ಮಣಿಯು ಬಹು ವಿಧದಲ್ಲಿ ಆತನನ್ನು ಬೇಡಿಕೊಂಡಳು (59-61): "ಇಕ್ಷ್ವಾಕುಕುಲತಿಲಕನಾದ ನೀನು ಮಹಾರಾಜನಾದ ಮಿತ್ರಸಹನೇ ಹೊರತು ರಾಕ್ಷಸನಲ್ಲ ; ಪ್ರಸನ್ನನಾಗು. ಸ್ತ್ರೀಸಂಗದ ಸುಖವನ್ನು ಬಲ್ಲವನು ನೀನು. ನಾನು ತೃಪ್ತಳಾಗದಿರುವಾಗ ನನ್ನ ಪತಿಯನ್ನು ಕೊಲ್ಲುವುದು ತರವಲ್ಲ" ಎಂದು ಬಹುಪ್ರಕಾರವಾಗಿ ಅವಳು ಹಲುಬುತ್ತಿದ್ದರೂ, ಕಾಡಿನಲ್ಲಿ ಹುಲಿಯು ತನಗೆ ಇಷ್ಟವಾದ ಮೃಗವನ್ನು ಭಕ್ಷಿಸುವಂತೆ, ಅವನು ಆ ಬ್ರಾಹ್ಮಣನನ್ನು ಭಕ್ಷಿಸಿದನು (62-63). ಆಗ ಅತ್ಯಂತ

---

* ದಿನಕ್ಕೆ ಎರಡು ಊಟಗಳಾದ್ದರಿಂದ ಆರನೆಯ ಊಟವೆಂದರೆ ಮೂರನೆಯ ದಿನದ ರಾತ್ರಿಯ ಊಟ.

**ತಂ ರಾಜಾನಂ ಶಶಾಪ ॥ 64 ॥ ಯಸ್ಮಾದೇವಂ ಮಯ್ಯತೃಪ್ತಾಯಾಂ ತ್ವಯಾಯಂ ಮತ್ಪತಿರ್ಭಕ್ಷಿತಃ ತಸ್ಮಾತ್ತ್ವಮಪಿ ಕಾಮೋಪಭೋಗ-ಪ್ರವೃತ್ತೋಽಂತಂ ಪ್ರಾಪ್ಸ್ಯಸೀತಿ ॥ 65 ॥ ಶಪ್ತ್ವಾ ಚೈವಂ ಸಾಽಗ್ನಿಂ ಪ್ರವಿಶೇಶ ॥ 66 ॥ ತತಸ್ತಸ್ಯ ದ್ವಾದಶಾಬ್ದಪರ್ಯಯೇ ವಿಮುಕ್ತಶಾಪಸ್ಯ ಸ್ತ್ರೀ-ವಿಷಯಾಭಿಲಾಷಿಣೋ ಮದಯಂತೀ ತಂ ಸ್ಮಾರಯಾಮಾಸ ॥ 67 ॥ ತತಃ ಪರಮಸೌ ಸ್ತ್ರೀಭೋಗಂ ತತ್ಯಾಜ ॥ 68 ॥ ವಸಿಷ್ಠಶ್ಚಾಪುತ್ರೇಣ ರಾಜ್ಞಾ ಪುತ್ರಾರ್ಥಮಭ್ಯರ್ಥಿತೋ ಮದಯಂತ್ಯಾಂ ಗರ್ಭಾದಾನಂ ಚಕಾರ ॥ 69 ॥ ಯದಾ ಚ ಸಪ್ತವರ್ಷಾಣ್ಯಸೌ ಗರ್ಭೋ ನ ಜಜ್ಞೇ ತತಸ್ತಂ ಗರ್ಭ-ಮಶ್ಮನಾ ಸಾ ದೇವೀ ಜಘಾನ ॥ 70 ॥ ಪುತ್ರಶ್ಚಾಜಾಯತ ॥ 71 ॥ ತಸ್ಯ ಚಾಶ್ಮಕ ಇತ್ಯೇವ ನಾಮಾಭವತ್ ॥ 72 ॥ ಅಶ್ಮಕಸ್ಯ ಮೂಲಕೋ ನಾಮ ಪುತ್ರೋಽಭವತ್ ॥ 73 ॥ ಯೋಽಸೌ ನಿಃಕ್ಷತ್ರೇ ಕ್ಷ್ಮಾತಲೇಽಸ್ಮಿನ್ ಕ್ರಿಯ-**

---

ಕುಪಿತಳಾದ ಆ ಬ್ರಾಹ್ಮಣಿಯು "ಈ ರೀತಿಯಲ್ಲಿ ನಾನು ತೃಪ್ತಳಾಗದಿರುವಾಗ ನನ್ನ ಪತಿಯನ್ನು ಭಕ್ಷಿಸಿದ್ದೀಯೆ. ಎಲೈ, ನೀನೂ ಸಹ ಕಾಮೋಪಭೋಗದಲ್ಲಿ ತೊಡಗಿದಾಗ ಸಾಯಿ" ಎಂದು ರಾಜನಿಗೆ ಶಾಪವನ್ನಿತ್ತಳು. ಹೀಗೆ ಶಪಿಸಿ ಅವಳು ಅಗ್ನಿಪ್ರವೇಶ ಮಾಡಿದಳು (64-66). ಅನಂತರ ಹನ್ನೆರಡು ವರ್ಷಕಳೆದು ಮಿತ್ರಸಹನು ಶಾಪವಿಮುಕ್ತನಾದನು. ಅವನು ತನ್ನ ಪತ್ನಿಯೊಡನೆ ಕಾಮೋಪ ಭೋಗವನ್ನು ಬಯಸಿದಾಗ ಮದಯಂತಿಯು ಶಾಪವೃತ್ತಾಂತವನ್ನು ನೆನಪಿಗೆ ತಂದಳು. ಆಮೇಲೆ ಅವನು ಸ್ತ್ರೀಸಂಗವನ್ನು ತ್ಯಜಿಸಿ ಬಿಟ್ಟನು (67-68). ಪುತ್ರಹೀನನಾಗಿದ್ದ ರಾಜನ ಪ್ರಾರ್ಥನೆಯಂತೆ ವಸಿಷ್ಠರು ಮದಯಂತಿಯಲ್ಲಿ (ನಿಯೋಗ ವಿಧಿಯಿಂದ) ಗರ್ಭಾದಾನ ಮಾಡಿದರು. ಏಳು ವರ್ಷಗಳು ಕಳೆದರೂ ಗರ್ಭವು ಹೊರಗೆ ಬರದೇಹೋದದ್ದರಿಂದ ರಾಣಿಯು ಅಶ್ಮದಿಂದ (ಕಲ್ಲಿನಿಂದ) ತನ್ನ ಗರ್ಭವನ್ನು ಕುಟ್ಟಿದಳು. ಆಗ ಒಬ್ಬ ಪುತ್ರನು ಜನಿಸಿದನು (69-71). ಅವನಿಗೆ ಅಶ್ಮಕನೆಂದೇ ಹೆಸರಾಯಿತು. ಅಶ್ಮಕನಿಗೆ ಮೂಲಕನೆಂಬ ಪುತ್ರನು ಹುಟ್ಟಿದನು. (ಪರಶುರಾಮನು) ಜಗತೀತಲವನ್ನು ಕ್ಷತ್ರಿಯ ಶೂನ್ಯ ವನ್ನಾಗಿ ಮಾಡಲು ಉದ್ಯುಕ್ತನಾಗಿರುವಾಗ, ಸ್ತ್ರೀಯರು ನಗ್ನರಾಗಿ ಮೂಲಕನನ್ನು ಸುತ್ತುಗಟ್ಟಿ ಕಾಪಾಡಿದರು. ಆದ್ದರಿಂದ ಮೂಲಕನನ್ನು 'ನಾರೀಕವಚ'ನೆಂದು

**ಮಾಣೇ ಸ್ತ್ರೀಭಿರ್ವಿವಸ್ತ್ರಾಭಿಃ ಪರಿವಾರ್ಯ ರಕ್ಷಿತಃ ತತಸ್ತಂ ನಾರೀಕವಚಮುದಾಹರಂತಿ ॥ 74 ॥ ಮೂಲಕಾದ್ದಶರಥಸ್ತಸ್ಮಾದಿಲವಿಲಸ್ತತಶ್ಚ ವಿಶ್ವಸಹಃ ॥ 75 ॥ ತಸ್ಮಾಚ್ಚ ಖಟ್ವಾಂಗಃ ಯೋಽಸೌ ದೇವಾಸುರಸಂಗ್ರಾಮೇ ದೇವೈರಭ್ಯರ್ಥಿತೋಽಸುರಾನ್ ಜಘಾನ ॥ 76 ॥ ಸ್ವರ್ಗೇ ಚ ಕೃತಪ್ರಿಯೈರ್ದೇವೈರ್ವರಗ್ರಹಣಾಯ ಚೋದಿತಃ ಪ್ರಾಹ ॥ 77 ॥ ಯದ್ಯವಶ್ಯಂ ವರೋ ಗ್ರಾಹ್ಯಃ ತನ್ಮಮಾಯುಃ ಕಥ್ಯತಾಮಿತಿ ॥ 78 ॥ ಅನಂತರಂ ಚ ತೈರುಕ್ತಮೇಕಮುಹೂರ್ತಪ್ರಮಾಣಂ ತವಾಯುರಿತ್ಯುಕ್ತೋಽಥಾಸ್ಖಲಿತಗತಿನಾ ವಿಮಾನೇನ ಲಘಿಮಗುಣೋ ಮರ್ತ್ಯಲೋಕಮಾಗಮ್ಯೇದಮಾಹ ॥ 79 ॥ ಯಥಾ ನ ಬ್ರಾಹ್ಮಣೇಭ್ಯಸ್ಸಕಾಶಾದಾತ್ಮಾಪಿ ಮೇ ಪ್ರಿಯತರಃ ನ ಚ ಸ್ವಧರ್ಮೋಲ್ಲಂಘನಂ ಮಯಾ ಕದಾಚಿದಪ್ಯನುಷ್ಠಿತಂ ನ ಚ ಸಕಲದೇವಮಾನುಷಪಶುಪಕ್ಷಿವೃಕ್ಷಾದಿಕೇಷ್ವಚ್ಯುತವ್ಯತಿರೇಕವತೀ ದೃಷ್ಟಿರ್ಮಮ ಮಾ ಭೂತ್ ತಥಾ ತಮೇವಂ ಮುನಿಜನಾನುಸ್ಮೃತಂ**

---

ಹೇಳುತ್ತಾರೆ (72-74). ಮೂಲಕನಿಂದ ದಶರಥ, ಅವನಿಂದ ಇಲವಿಲ, ಅವನಿಂದ ವಿಶ್ವಸಹ, ವಿಶ್ವಸಹನ ಮಗ ಖಟ್ವಾಂಗ.* ಇವನು ದೇವಾಸುರ ಸಂಗ್ರಾಮವು ನಡೆದಾಗ ದೇವತೆಗಳ ಪ್ರಾರ್ಥನೆಯಂತೆ ಹೋಗಿ ಅಸುರರನ್ನು ಸಂಹರಿಸಿದನು (75-76). ಆಗ ಸ್ವರ್ಗದಲ್ಲಿ ಸಂತುಷ್ಟರಾದ ದೇವತೆಗಳು ವರವನ್ನು ಕೇಳಿಕೊ—ಎಂದು ಇವನನ್ನು ಪ್ರೇರಿಸಿದರು. ಆಗ ಖಟ್ವಾಂಗ ದಿಲೀಪನು 'ನಾನು ವರವನ್ನು ಸ್ವೀಕರಿಸಲೇಬೇಕೆಂದು ಒತ್ತಾಯಿಸುವಿರಾದರೆ, ನನ್ನ ಆಯುಸ್ಸನ್ನು ಹೇಳಿರಿ (ಅದೇ ನನ್ನ ವರ)' ಎಂದನು (77-78). ಅನಂತರ ದೇವತೆಗಳು 'ನಿನ್ನ ಆಯುಸ್ಸು ಇನ್ನು ಒಂದು ಮುಹೂರ್ತಕಾಲ!' ಎಂದರು. ಆಗ ಖಟ್ವಾಂಗನು ವಿಮಾನವನ್ನೇರಿ ಅಸ್ಖಲಿತಗತಿಯಿಂದ ಬೇಗನೆ ಭೂಲೋಕಕ್ಕೆ ಬಂದು ಇಂತೆಂದನು: "ನನ್ನ ಆತ್ಮವೂ ಸಹ ಬ್ರಾಹ್ಮಣರಿಗಿಂತ ನನಗೆ ಪ್ರಿಯತರವಾದುದಲ್ಲ. ನಾನು ಯಾವಾಗಲೂ ಸ್ವಧರ್ಮವನ್ನು ಉಲ್ಲಂಘಿಸಿದವನಲ್ಲ. ಸಕಲ ದೇವ-ಮಾನುಷ-ಪಶು-ಪಕ್ಷಿ-ವೃಕ್ಷಾದಿಗಳಲ್ಲಿ, ಇವೆಲ್ಲವೂ ವಿಷ್ಣು

---

* ಈತನಿಗೆ ದಿಲೀಪನೆಂದು ಇನ್ನೊಂದು ಹೆಸರಿತ್ತು. ಮೂಲದಲ್ಲಿ 'ಖಟ್ವಾಂಗೋ ದಿಲೀಪಃ' ಎಂದೂ ಪಾಠಾಂತರವಿದೆ.

**ಭಗವಂತಮಸ್ಖಲಿತಗತಿಃ ಪ್ರಾಪಯೇಯಮಿತ್ಯಶೇಷದೇವಗುರೌ ಭಗವತ್ಯನಿರ್ದೇಶ್ಯವಪುಷಿ ಸತ್ತಾಮಾತ್ರಾತ್ಮನ್ಯಾತ್ಮಾನಂ ಪರಮಾತ್ಮನಿ ವಾಸುದೇವಾಖ್ಯೇ ಯುಯೋಜ ತತ್ರೈವ ಚ ಲಯಮವಾಪ ॥ 80 ॥**

**ಅತ್ರಾಪಿ ಶ್ರೂಯತೇ ಶ್ಲೋಕೋ ಗೀತಸ್ಸಪ್ತರ್ಷಿಭಿಃ ಪುರಾ।**
**ಖಟ್ವಾಂಗೇನ ಸಮೋ ನಾನ್ಯಃ ಕಶ್ಚಿದುರ್ವ್ಯಾಂ ಭವಿಷ್ಯತಿ ॥ 81**
**ಯೇನ ಸ್ವರ್ಗಾದಿಹಾಗಮ್ಯ ಮುಹೂರ್ತಂ ಪ್ರಾಪ್ಯ ಜೀವಿತಮ್।**
**ತ್ರಯೋಽತಿಸಂಹಿತಾ ಲೋಕಾ ಬುದ್ಧ್ಯಾ ಸತ್ಯೇನ ಚೈವ ಹಿ ॥ 82**

**ಖಟ್ವಾಂಗಾದ್ದೀರ್ಘಬಾಹುಃ ಪುತ್ರೋಽಭವತ್ ॥ 83 ॥ ತತೋ ರಘುರಭವತ್ ॥ 84 ॥ ತಸ್ಮಾದಪ್ಯಜಃ ॥ 85 ॥ ಅಜಾದ್ದಶರಥಃ ॥ 86 ॥ ತಸ್ಯಾಪಿ**

---

ವೆಂದಲ್ಲದೆ ಬೇರೆ ದೃಷ್ಟಿ ನನಗೆ ಇರಲಿಲ್ಲ. ಇದೆಲ್ಲವೂ ದಿಟವಾದರೆ, ಮುನಿಜನರಿಂದ ಸಂಸ್ಕೃತನಾದ ಭಗವಂತನನ್ನು ತಡೆಯಿಲ್ಲದೆ ಸೇರಿಕೊಳ್ಳುವೆನು" ಎಂದು ನುಡಿದು, ಸಕಲ ದೇವೇಶ್ವರನೂ ಅನಿರ್ವಚನೀಯ ಸ್ವರೂಪನೂ 'ಸತ್' ಎಂದು ಮಾತ್ರ ಹೇಳಬಹುದಾದವನೂ ಆದ ಪರಮಾತ್ಮ ವಾಸುದೇವನಲ್ಲಿ ತನ್ನ ಚಿತ್ತವನ್ನು ನಿಲ್ಲಿಸಿ, ಆತನಲ್ಲಿ ಲೀನನಾದನು (79-80). ಈ ವಿಚಾರದಲ್ಲಿ ಹಿಂದೆ ಸಪ್ತರ್ಷಿಗಳು ಹಾಡಿದ ಶ್ಲೋಕವುಂಟು: 'ಖಟ್ವಾಂಗನಿಗೆ ಸಮನಾದ ಇನ್ನೊಬ್ಬನು ಈ ಲೋಕದಲ್ಲಿ ಹುಟ್ಟುವುದಿಲ್ಲ. ತನ್ನ ಜೀವಿತವು ಒಂದು ಮುಹೂರ್ತ ಕಾಲವಿರುವಾಗ ಈತನು ಸ್ವರ್ಗಲೋಕದಿಂದ ಭೂಲೋಕಕ್ಕೆ ಬಂದು, ಸತ್ಯವಾದ ಪರಮಾರ್ಥಜ್ಞಾನದಿಂದ ಮೂರುಲೋಕಗಳೂ ವಾಸುದೇವಸ್ವರೂಪವಾಗಿ ನೋಡಲ್ಪಟ್ಟವು (81-82). ಖಟ್ವಾಂಗನ ಮಗ ದೀರ್ಘಬಾಹು.* ಅವನ ಮಗ ರಘು. ರಘುವಿನ ಮಗ ಅಜ. ಅಜನಿಂದ ದಶರಥನು ಜನಿಸಿದನು. ಭಗವಾನ್ ಪದ್ಮನಾಭನು ಜಗತ್ತಿನ ಸ್ಥಿತಿಯನ್ನು ಪಾಲಿಸುವುದಕ್ಕಾಗಿ ತನ್ನ ಅಂಶದಿಂದ ರಾಮ, ಲಕ್ಷ್ಮಣ, ಭರತ, ಶತ್ರುಘ್ನ—ಎಂದು ನಾಲ್ಕು ವಿಭಾಗವಾಗಿ ದಶರಥನಿಗೆ

* ಹರಿವಂಶದಲ್ಲಿ 'ದೀರ್ಘಬಾಹುರ್ದಿಲೀಪಸ್ಯ ರಘುರ್ನಾಮ್ನಾಭವತ್ಸುತಃ' ಎಂದು ಹೇಳಿದೆ (1-15-25). ಅದರ ಪ್ರಕಾರ ದಿಲೀಪನ ಮಗ ರಘು. ದೀರ್ಘಬಾಹುವೆಂದು ರಘುವಿಗೆ ವಿಶೇಷಣ. ಈ ಕ್ರಮವನ್ನೇ ಕಾಳಿದಾಸನು ರಘುವಂಶ ಕಾವ್ಯದಲ್ಲಿ ಹೇಳಿದ್ದಾನೆ. ವಿಷ್ಣುಪುರಾಣದ ಪಾಠದಲ್ಲಿ ದೋಷವಿದೆಯೆಂದು ಕಾಣುತ್ತದೆ.

**ಭಗವಾನಬ್ಜನಾಭೋ ಜಗತಃ ಸ್ಥಿತ್ಯರ್ಥಮಾತ್ಮಾಂಶೇನ ರಾಮಲಕ್ಷ್ಮಣ-ಭರತಶತ್ರುಘ್ನರೂಪೇಣ ಚತುರ್ಧಾ ಪುತ್ರತ್ವಮಾಯಾಸೀತ್ ॥ 87 ॥ ರಾಮೋಽಪಿ ಬಾಲ ಏವ ವಿಶ್ವಾಮಿತ್ರಯಾಗರಕ್ಷಣಾಯ ಗಚ್ಛಂಸ್ತಾಟಕಾಂ ಜಘಾನ ॥ 88 ॥ ಯಜ್ಞೇ ಚ ಮಾರೀಚಮಿಷುವಾತಾಹತಂ ಸಮುದ್ರೇ ಚಿಕ್ಷೇಪ ॥ 89 ॥ ಸುಬಾಹುಪ್ರಮುಖಾಂಶ್ಚ ಕ್ಷಯಮನಯತ್ ॥ 90 ॥ ದರ್ಶನಮಾತ್ರೇಣಾಹಲ್ಯಾಮಪಾಪಾಂ ಚಕಾರ ॥ 91 ॥ ಜನಕಗೃಹೇ ಚ ಮಾಹೇಶ್ವರಂ ಚಾಪಮನಾಯಾಸೇನ ಬಭಂಜ ॥ 92 ॥ ಸೀತಾಮಯೋ-ನಿಜಾಂ ಜನಕರಾಜತನಯಾಂ ವೀರ್ಯಶುಲ್ಕಾಂ ಲೇಭೇ ॥ 93 ॥ ಸಕಲ ಕ್ಷತ್ರಿಯಕ್ಷಯಕಾರಿಣಮಶೇಷಹೈಹಯಕುಲಧೂಮಕೇತುಭೂತಂ ಚ ಪರಶುರಾಮಮಪಾಸ್ತವೀರ್ಯಬಲಾವಲೇಪಂ ಚಕಾರ ॥ 94 ॥ ಪಿತೃ-ವಚನಾಚ್ಚಾಗಣಿತರಾಜ್ಯಾಭಿಲಾಷೋ ಭ್ರಾತೃಭಾರ್ಯಾಸಮೇತೋ ವನಂ ಪ್ರವಿವೇಶ ॥ 95 ॥ ವಿರಾಧಖರದೂಷಣಾದೀನ್ ಕಬಂಧವಾಲಿನೌ ಚ**

---

ಪುತ್ರನಾಗಿ ಅವತರಿಸಿದನು (83-87). ರಾಮನಾದರೋ ಬಾಲಕನಾಗಿದ್ದಾಗಲೇ ವಿಶ್ವಾಮಿತ್ರ ಮುನಿಗಳ ಯಾಗದ ರಕ್ಷಣೆಗಾಗಿ ಹೋಗುತ್ತಿರುವಾಗ ತಾಟಕೆಯನ್ನು ಸಂಹರಿಸಿದನು. ಯಾಗಭೂಮಿಯಲ್ಲಿ ಮಾರೀಚನನ್ನು ಬಾಣದ ಗಾಳಿಯ ವೇಗದಿಂದ ಹಾರಿಸಿ ಸಮುದ್ರಕ್ಕೆ ತಳ್ಳಿದನು. ಸುಬಾಹು ಮುಂತಾದ ರಾಕ್ಷಸರನ್ನು ನಾಶಮಾಡಿದನು (88-90). ದರ್ಶನಮಾತ್ರದಿಂದಲೇ ಅಹಲ್ಯೆಯ ಪಾಪವನ್ನು ಪರಿಹರಿಸಿ ಅವಳನ್ನು ಪರಿಶುದ್ಧಳನ್ನಾಗಿ ಮಾಡಿದನು. ಜನಕರಾಜನ ಗೃಹದಲ್ಲಿ ಶೈವಧನುಸ್ಸನ್ನು ಅನಾಯಾಸವಾಗಿ ಬಗ್ಗಿಸಿ ಮುರಿದನು. ಅಯೋನಿಜೆಯೂ ಜನಕರಾಜನಂದಿನಿಯೂ ಆಗಿದ್ದ ವೀರ್ಯಶುಲ್ಕಳಾದ ಸೀತೆಯನ್ನು ಪಡೆದನು (91-93). ಸಮಸ್ತ ಹೈಹಯಕುಲಕ್ಕೆ ಧೂಮಕೇತುವೆನಿಸಿ, ಸಕಲ ಕ್ಷತ್ರಿಯರನ್ನು ಧ್ವಂಸಮಾಡುತ್ತಿದ್ದ ಪರಶುರಾಮನ ವೀರ್ಯಬಲಗಳ ದರ್ಪವನ್ನು ನಿರ್ಮೂಲ ಮಾಡಿದನು. ಅನಂತರ ಶ್ರೀರಾಮನು ತಂದೆಯ ಮಾತಿನಂತೆ ರಾಜ್ಯಾಭಿಲಾಷೆ ಯನ್ನು ಬದಿಗೊತ್ತಿ , ತಮ್ಮನಾದ ಲಕ್ಷ್ಮಣ, ಪತ್ನಿಯಾದ ಸೀತೆ—ಇವರಿಂದೊಡ ಗೂಡಿ ಅರಣ್ಯವನ್ನು ಪ್ರವೇಶಿಸಿದನು (94-95). ಅರಣ್ಯದಲ್ಲಿ ವಿರಾಧ ಖರ ದೂಷಣಾದಿ ರಾಕ್ಷಸರನ್ನೂ, ಕಬಂಧ ವಾಲಿಗಳನ್ನೂ ಸಂಹರಿಸಿದನು. ಆಮೇಲೆ

ನಿಜಘಾನ ॥ 96 ॥ ಬದ್‌ಧ್ವಾಬಾಂಭೋನಿಧಿಮಶೇಷರಾಕ್ಷಸಕುಲಕ್ಷಯಂ ಕೃತ್ವಾ ದಶಾನನಾಪಹೃತಾಂ ಭಾರ್ಯಾಂ ತದ್ವಧಾದಪಹೃತಕಲಂಕಾಮಪಿ ಅನಲಪ್ರವೇಶಶುದ್ಧಾಮಶೇಷದೇವಸಂಘೈಃ ಸ್ತೂಯಮಾನಶೀಲಾಂ ಜನಕರಾಜಕನ್ಯಾಮಯೋಧ್ಯಾಮಾನಿನ್ಯೇ ॥ 97 ॥ ತತಶ್ಚಾಭಿಷೇಕಮಂಗಲಂ ಮೈತ್ರೇಯ, ವರ್ಷಶತೇನಾಪಿ ವಕ್ತುಂ ನ ಶಕ್ಯತೇ ಸಂಕ್ಷೇಪೇಣ ಶ್ರೂಯತಾಮ್ ॥ 98 ॥ ಲಕ್ಷ್ಮಣಭರತಶತ್ರುಘ್ನವಿಭೀಷಣಸುಗ್ರೀವಾಂಗದಜಾಂಬವದ್ಧನುಮತ್ಪ್ರಭೃತಿಭಿಸ್ಸಮುತ್ಫುಲ್ಲವದನೈಶ್ಛತ್ರಚಾಮರಾದಿಯುತೈಃ ಸೇವ್ಯಮಾನೋ ದಾಶರಥಿರ್ಬ್ರಹ್ಮೇಂದ್ರಾಗ್ನಿಯಮನಿರ್‌ಋತಿವರುಣವಾಯುಕುಬೇರೇಶಾನಪ್ರಭೃತಿಭಿಃ ಸರ್ವಾಮರೈರ್ವಸಿಷ್ಠವಾಮದೇವವಾಲ್ಮೀಕಿಮಾರ್ಕಂಡೇಯವಿಶ್ವಾಮಿತ್ರ ಭರದ್ವಾಜಾಗಸ್ತ್ಯಪ್ರಭೃತಿಭಿರ್ಮುನಿವರ್ಯೈಃ ಋಗ್ಯಜುಸ್ಸಾಮಾಥರ್ವಭಿಸ್ಸಂಸ್ತೂಯಮಾನೋ ನೃತ್ಯಗೀತವಾದ್ಯಾದ್ಯಖಿಲಲೋಕಮಂಗಲವಾದ್ಯೈರ್ವೀಣಾವೇಣುಮೃದಂಗಭೇರೀಪಟಹ-

---

ಶ್ರೀರಾಮನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ, ನಿಖಿಲರಾಕ್ಷಸಕುಲವನ್ನೂ ನಾಶಮಾಡಿ, ರಾವಣನನ್ನು ವಧಿಸಿದನು. ಆತನ ವಧೆಯಿಂದ ಸೀತೆಯ ಕಳಂಕವು ಪರಿಹೃತವಾಯಿತು. ಆದರೂ ಅಗ್ನಿಪ್ರವೇಶದಿಂದ ಶುದ್ಧಳಾದ ಮೇಲೆ ನಿಖಿಲದೇವಗಣದಿಂದ ಸ್ತುತಿಸಲ್ಪಡುತ್ತಿದ್ದ ಶೀಲವತಿಯಾದ ಜನಕರಾಜಕನ್ಯೆಯನ್ನು ಸ್ವೀಕರಿಸಿ, ಅವಳನ್ನು ಅಯೋಧ್ಯೆಗೆ ಕರೆತಂದನು (96-97). ಮೈತ್ರೇಯ, ಅನಂತರ ನಡೆದ ಶ್ರೀರಾಮನ ಮಂಗಳಾಭಿಷೇಕವನ್ನು ವರ್ಣಿಸುವುದಕ್ಕೆ ನೂರು ವರ್ಷಗಳಾದರೂ ಸಾಲವು. ಸಂಕ್ಷೇಪವಾಗಿ ಹೇಳುತ್ತೇನೆ ಕೇಳು (98). ದಶರಥನ ಪುತ್ರನಾದ ಶ್ರೀರಾಮನು, ಪ್ರಸನ್ನವದನರಾದ ಲಕ್ಷ್ಮಣ, ಭರತ, ಶತ್ರುಘ್ನ, ವಿಭೀಷಣ, ಸುಗ್ರೀವ, ಅಂಗದ, ಜಾಂಬವಂತ, ಹನುಮಂತ— ಮುಂತಾದವರು ಛತ್ರಚಾಮರಾದಿಗಳನ್ನು ಹಿಡಿದು ಸೇವಿಸುತ್ತಿರಲಾಗಿ, ಬ್ರಹ್ಮ ಇಂದ್ರ ಅಗ್ನಿ ಯಮ ನಿರ್ಋತಿ ವರುಣ ವಾಯು ಕುಬೇರ ಈಶಾನ— ಮೊದಲಾದ ಸಮಸ್ತ ದೇವತೆಗಳಿಂದಲೂ, ವಸಿಷ್ಠ ವಾಮದೇವ ವಾಲ್ಮೀಕಿ ಮಾರ್ಕಂಡೇಯ ವಿಶ್ವಾಮಿತ್ರ ಭರದ್ವಾಜ ಅಗಸ್ತ್ಯ—ಮೊದಲಾದ ಮುನಿವರರಿಂದಲೂ, ಋಗ್ ಯಜುಃ ಸಾಮ ಅಥರ್ವ ವೇದಗಳಿಂದಲೂ ಸ್ತುತಿಸಲ್ಪಡುತ್ತ,

**ಶಂಖಕಾಹಲಗೋಮುಖಪ್ರಭೃತಿಭಿಸ್ಸುನಾದೈಸ್ಸಮಸ್ತಭೂಭೃತಾಂ ಮಧ್ಯೇ ಸಕಲಲೋಕರಕ್ಷಾರ್ಥಂ ಯಥೋಚಿತಮಭಿಷಿಕ್ತೋ ದಾಶರಥಿಃ ಕೋಸಲೇಂದ್ರೋ ರಘುಕುಲತಿಲಕೋ ಜಾನಕೀಪ್ರಿಯೋ ಭ್ರಾತೃತ್ರಯಪ್ರಿಯಃ ಸಿಂಹಾಸನಗತ ಏಕಾದಶಾಬ್ದಸಹಸ್ರಂ ರಾಜ್ಯಮಕರೋತ್ ॥ 99 ॥ ಭರತೋಽಪಿ ಗಂಧರ್ವವಿಷಯಸಾಧನಾಯ ಗಚ್ಛನ್ ಸಂಗ್ರಾಮೇ ಗಂಧರ್ವಕೋಟೀಸ್ತಿಸ್ರೋ ಜಘಾನ ॥ 100 ॥ ಶತ್ರುಘ್ನೇನಾಪ್ಯಮಿತಬಲಪರಾಕ್ರಮೋ ಮಧುಪುತ್ರೋ ಲವಣೋ ನಾಮ ರಾಕ್ಷಸೋ ನಿಹತೋ ಮಥುರಾ ಚ ನಿವೇಶಿತಾ ॥ 101 ॥ ಇತ್ಯೇವಮಾದ್ಯತಿಬಲಪರಾಕ್ರಮವಿಕ್ರಮಣೈರತಿದುಷ್ಟಸಂಹಾರಿಣೋಽಶೇಷಸ್ಯ ಜಗತೋ ನಿಷ್ಪಾದಿತಸ್ಥಿತಯೋ ರಾಮಲಕ್ಷ್ಮಣಭರತಶತ್ರುಘ್ನಾಃ ಪುನರಪಿ ದಿವಮಾರೂಢಾಃ ॥ 102 ॥ ಯೇಽಪಿ ತೇಷು ಭಗವದಂಶೇಷ್ವನುರಾಗಿಣಃ ಕೋಸಲನಗರಜಾನಪದಾಸ್ತೇಽಪಿ**

---

ನೃತ್ಯಗೀತವಾದ್ಯಗಳಿಂದಲೂ, ಸಮಸ್ತ ಜನರ ಮಂಗಳ ವಾಕ್ಯಗಳಿಂದಲೂ, ವೀಣೆ ಕೊಳಲು ಮೃದಂಗ ಭೇರಿ ತಮಟೆ ಶಂಖ ಕಹಳೆ ಗೋಮುಖ—ಮುಂತಾದ ಮಂಗಳಧ್ವನಿಗೈಯುವ ವಾದ್ಯಗಳಿಂದಲೂ ವೈಭವಯುಕ್ತವಾಗಿ ಶೋಭಿಸುತ್ತ ಸಮಸ್ತರಾಜರುಗಳೆದುರಿಗೆ ಸಕಲ ಪ್ರಜಾರಕ್ಷಣೆಗಾಗಿ ವಿಧಿಪೂರ್ವಕವಾಗಿ ಪಟ್ಟಾಭಿಷಿಕ್ತನಾದನು. ರಘುಕುಲತಿಲಕನಾದ ಜಾನಕೀಪ್ರಿಯ ಕೋಸಲೇಂದ್ರನು ಮೂವರು ತಮ್ಮಂದಿರ ಪ್ರೀತಿಗೆ ಪಾತ್ರನಾಗಿ ಸಿಂಹಾಸನದಲ್ಲಿ ಕುಳಿತು ಹನ್ನೊಂದು ಸಾವಿರ ವರ್ಷಗಳವರೆಗೆ ರಾಜ್ಯಭಾರವನ್ನು ನಡೆಸಿದನು (99). ಭರತನು ಗಂಧರ್ವಲೋಕವನ್ನು ಗೆಲ್ಲುವುದಕ್ಕೆ ಹೋಗಿ ಸಂಗ್ರಾಮದಲ್ಲಿ ಮೂರು ಕೋಟಿ ಗಂಧರ್ವರನ್ನು ಸಂಹರಿಸಿದನು. ಶತ್ರುಘ್ನನು ಅಸಾಧಾರಣಬಲಾಢ್ಯನಾಗಿದ್ದ ಮಧುಪುತ್ರನಾದ ಲವಣನೆಂಬ ರಾಕ್ಷಸನನ್ನು ವಧಿಸಿ ಮಧುರಾನಗರವನ್ನು ಸ್ಥಾಪಿಸಿದನು (100-101). ಈ ಪ್ರಕಾರದಲ್ಲಿ ಬಲಪರಾಕ್ರಮವಿಕ್ರಮಗಳಿಂದ ದುರ್ಜನರನ್ನು ನಿರ್ಮೂಲ ಮಾಡಿ, ಅಶೇಷ ಜಗತ್ತಿನ ಭದ್ರತಾವ್ಯವಸ್ಥೆಯನ್ನು ನಿರ್ವಹಿಸಿದ ರಾಮ, ಲಕ್ಷ್ಮಣ, ಭರತ, ಶತ್ರುಘ್ನರು ಅನಂತರ ಸ್ವರ್ಗಲೋಕವನ್ನು ಸೇರಿದರು (102). ಭಗವಂತನ ಅಂಶಾವತಾರಿಗಳಾದ ಅವರಲ್ಲಿ ಅನುರಕ್ತರಾಗಿದ್ದ ಅಯೋಧ್ಯಾನಿವಾಸಿಗಳಾದ ಪ್ರಜೆಗಳೂ ಸಹ ಶ್ರೀರಾಮಾದಿ

**ತನ್ಮನಸಸ್ತತ್ಸಾಲೋಕ್ಯತಾಮವಾಪುಃ ॥ 103 ॥ ಅತಿದುಷ್ಟಸಂಹಾರಿಣೋ ರಾಮಸ್ಯ ಕುಶಲವೌ ದ್ವೌ ಪುತ್ರೌ ಲಕ್ಷ್ಮಣಸ್ಯಾಂಗದಚಂದ್ರಕೇತೂ ತಕ್ಷ-ಪುಷ್ಕಲೌ ಭರತಸ್ಯ ಸುಬಾಹುಶೂಲಸೇನೌ ಶತ್ರುಘ್ನಸ್ಯ ॥ 104 ॥ ಕುಶ-ಸ್ಯಾತಿಥಿರತಿಥೇರಪಿ ನಿಷದಃ ಪುತ್ರೋಽಭೂತ್ ॥ 105 ॥ ನಿಷಧಸ್ಯಾಪ್ಯ-ನಲಸ್ತಸ್ಮಾದಪಿ ನಭಾಃ ನಭಸಃ ಪುಂಡರೀಕಸ್ತತ್ತನಯಃ ಕ್ಷೇಮಧನ್ವಾ ತಸ್ಯ ಚ ದೇವಾನೀಕಸ್ತಸ್ಯಾಪ್ಯಹೀನಕೋಽಹೀನಕಸ್ಯಾಪಿ ರುರುಸ್ತಸ್ಯ ಚ ಪಾರಿ-ಯಾತ್ರಕಃ ಪಾರಿಯಾತ್ರಕಾದ್ದೇವಲೋ ದೇವಲಾದ್ವಚ್ಚಲಃ ತಸ್ಯಾಪ್ಯುತ್ಕಃ ಉತ್ಕಾಚ್ಚ ವಜ್ರನಾಭಸ್ತಸ್ಮಾಚ್ಛಂಖಣಸ್ತಸ್ಮಾದ್ಯುಷಿತಾಶ್ವಃ ತತಶ್ಚ ವಿಶ್ವಸಹೋ ಜಜ್ಞೇ ॥ 106 ॥ ತಸ್ಮಾದ್ಧಿರಣ್ಯನಾಭಃ ಯೋ ಮಹಾಯೋಗೀಶ್ವರಾ-ಜ್ಜೈಮಿನೇಶ್ಶಿಷ್ಯಾದ್ಯಾಜ್ಞವಲ್ಕ್ಯಾ ದ್ಯೋಗಮವಾಪ ॥ 107 ॥ ಹಿರಣ್ಯನಾಭಸ್ಯ ಪುತ್ರಃ ಪುಷ್ಯಸ್ತಸ್ಮಾದ್ಧ್ರುವಸಂಧಿಸ್ತತಸ್ಸುದರ್ಶನಃ ತಸ್ಮಾದಗ್ನಿವರ್ಣಸ್ತತ-ಶ್ಶೀಘ್ರಗಸ್ತಸ್ಮಾದಪಿ ಮರುಃ ಪುತ್ರೋಽಭವತ್ ॥ 108 ॥ ಯೋಽಸೌ**

---

ಗಳಲ್ಲಿ ನೆಟ್ಟಮನಸ್ಸುಳ್ಳವರಾಗಿದ್ದುದರಿಂದ ಸಾಲೋಕ್ಯಮುಕ್ತಿಯನ್ನೈದಿದರು (103). ದುಷ್ಟರನ್ನು ದಮನಮಾಡಿದ ಶ್ರೀರಾಮನಿಗೆ ಕುಶ-ಲವರೆಂಬ ಇಬ್ಬರು ಪುತ್ರರಾದರು. ಲಕ್ಷ್ಮಣನಿಗೆ ಅಂಗದ-ಚಂದ್ರಕೇತು ಎಂಬವರೂ ಭರತನಿಗೆ ತಕ್ಷ-ಪುಷ್ಕಲರೂ ಶತ್ರುಘ್ನನಿಗೆ ಸುಬಾಹು-ಶೂರಸೇನರೂ ಪುತ್ರರಾದರು (104). ಕುಶನಿಗೆ ಅತಿಥಿ, ಅತಿಥಿಗೆ ನಿಷಧ, ಅವನಿಗೆ ಅನಲ, ಆತನಿಗೆ ನಭ, ನಭನಿಗೆ ಪುಂಡರೀಕ ಎಂಬವರು ಮಕ್ಕಳು. ಪುಂಡರೀಕನ ಮಗ ಕ್ಷೇಮಧನ್ವ, ಆತನ ಮಗ ದೇವಾನೀಕ, ಆತನ ಮಗ ಅಹೀನಕ. ಅವನಿಗೆ ರುರು ಎಂಬವನೂ ಆತನಿಗೆ ಪಾರಿಯಾತ್ರಕ ಎಂಬವನೂ ತನಯರು. ಪಾರಿಯಾತ್ರಕನ ತನಯ ದೇವಲ. ಅವನ ಮಗ ವಚ್ಚಲ, ಆತನ ಮಗ ಉತ್ಕ. ಉತ್ಕನಿಂದ ವಜ್ರನಾಭನೂ ಅವನಿಂದ ಶಂಖಣನೂ ಅವನಿಂದ ಯುಷಿತಾಶ್ವನೂ ಆತನಿಂದ ವಿಶ್ವಸಹನೂ ಹುಟ್ಟಿದರು (105-106). ವಿಶ್ವಸಹನ ಮಗ ಹಿರಣ್ಯನಾಭ. ಈತನು ಜೈಮಿನಿ ಶಿಷ್ಯನಾದ ಮಹಾಯೋಗೀಶ್ವರ ಯಾಜ್ಞವಲ್ಕ್ಯನಿಂದ ಯೋಗವಿದ್ಯೆಯನ್ನು ಕಲಿತನು. ಹಿರಣ್ಯನಾಭನ ತನಯ ಪುಷ್ಯ. ಆತನ ತನಯ ಧ್ರುವಸಂಧಿ. ಅವನಿಂದ ಸುದರ್ಶನನೂ ಆತನಿಂದ ಅಗ್ನಿವರ್ಣನೂ ಜನಿಸಿದರು. ಅಗ್ನಿವರ್ಣನ

**ಯೋಗಮಾಸ್ಥಾಯಾದ್ಯಾಪಿ ಕಲಾಪಗ್ರಾಮಮಾಶ್ರಿತ್ಯ ತಿಷ್ಠತಿ ॥ 109 ॥**
**ಆಗಾಮಿಯುಗೇ ಸೂರ್ಯವಂಶಕ್ಷತ್ರಪ್ರವರ್ತ್ತಯಿತಾ ಭವಿಷ್ಯತಿ ॥ 110 ॥**
**ತಸ್ಯಾತ್ಮಜಃ ಪ್ರಸುಶ್ರುತಸ್ತಸ್ಯಾಪಿ ಸುಸಂಧಿಸ್ತತಶ್ಚಾಪ್ಯಮರ್ಷಸ್ತಸ್ಯ ಚ ಸಹ-**
**ಸ್ವಾಂಸ್ತತಶ್ಚ ವಿಶ್ವಭವಃ ॥ 111 ॥ ತಸ್ಯ ಬೃಹದ್ಬಲಃ ಯೋಽರ್ಜುನತನಯೇ-**
**ನಾಭಿಮನ್ಯುನಾ ಭಾರತಯುದ್ಧೇ ಕ್ಷಯಮನೀಯತ ॥ 112 ॥**

**ಏತೇ ಇಕ್ಷ್ವಾಕುಭೂಪಾಲಾಃ ಪ್ರಾಧಾನ್ಯೇನ ಮಯೇರಿತಾಃ ।**
**ಏತೇಷಾಂ ಚರಿತಂ ಶೃಣ್ವನ್ ಸರ್ವಪಾಪೈಃ ಪ್ರಮುಚ್ಯತೇ ॥ 113**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಚತುರ್ಥೋಽಧ್ಯಾಯಃ

---

ಮಗ ಶೀಘ್ರಗ. ಆತನ ಮಗ ಮರು (107-108). ಈ ಮರು ಎಂಬವನು ಈಗಲೂ ಯೋಗಸಮಾಧಿಯನ್ನವಲಂಬಿಸಿ ಕಲಾಪಗ್ರಾಮದಲ್ಲಿದ್ದಾನೆ. ಮುಂದೆ ಬರುವ ಯುಗದಲ್ಲಿ ಇವನು ಸೂರ್ಯವಂಶದ ಕ್ಷತ್ರಿಯರಿಗೆ ಪ್ರವರ್ತಕನಾಗುವನು (109-110). ಅವನ ಮಗ ಪ್ರಸುಶ್ರುತ. ಆತನ ಮಗ ಸುಸಂಧಿ. ಅವನಿಗೆ ಅಮರ್ಷನೂ ಆತನಿಗೆ ಸಹಸ್ವಂತನೂ ಪುತ್ರರು. ಸಹಸ್ವಂತನ ಮಗ ವಿಶ್ವಭವ. ಅವನ ಮಗ ಬೃಹದ್ಬಲ. ಈ ಬೃಹದ್ಬಲನು ಭಾರತಯುದ್ಧದಲ್ಲಿ ಅರ್ಜುನನ ಪುತ್ರನಾದ ಅಭಿಮನ್ಯುವಿನಿಂದ ಹತನಾದನು (111-112). ಇವರು ಇಕ್ಷ್ವಾಕು ವಂಶದ ರಾಜರು. ಮುಖ್ಯವಾಗಿ ಕೆಲವರನ್ನು ಹೇಳಿದ್ದೇನೆ. ಇವರ ಚರಿತೆಯನ್ನು ಕೇಳತಕ್ಕವನು ಸರ್ವಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ (113).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ನಾಲ್ಕನೆಯ ಅಧ್ಯಾಯ ಮುಗಿಯಿತು.



## ಪಂಚಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಇಕ್ಷ್ವಾಕುತನಯೋ ಯೋಽಸೌ ನಿಮಿರ್ನಾಮ ಸಹಸ್ರಂ ವತ್ಸರಂ ಸತ್ರಮಾರೇಭೇ ॥ 1 ॥ ವಸಿಷ್ಠಂ ಚ ಹೋತಾರಂ ವರಯಾಮಾಸ ॥ 2 ॥ ತಮಾಹ ವಸಿಷ್ಠೋಽಹಮಿಂದ್ರೇಣ ಪಂಚವರ್ಷಶತಯಾಗಾರ್ಥಂ ಪ್ರಥಮಂ ವೃತಃ ॥ 3 ॥ ತದನಂತರಂ ಪ್ರತಿಪಾಲ್ಯತಾಮಾಗತಸ್ತವಾಪಿ ಋತ್ವಿಗ್‌ಭವಿಷ್ಯಾಮೀತ್ಯುಕ್ತೇ ಸ ಪೃಥಿವೀಪತಿರ್ನ ಕಿಂಚಿದುಕ್ತವಾನ್ ॥ 4 ॥ ವಸಿಷ್ಠೋಽಪ್ಯನೇನ ಸಮನ್ವೀಪ್ಸಿತಮಿತ್ಯಮರಪತೇರ್ಯಾಗಮಕರೋತ್ ॥ 5 ॥ ಸೋಽಪಿ ತತ್ಕಾಲ ಏವಾನ್ಯೈರ್ಗೌತಮಾದಿಭಿರ್ಯಾಗಮಕರೋತ್**

---

## ಅಧ್ಯಾಯ 5

ನಿಮಿಚರಿತ್ರೆ; ನಿಮಿವಂಶದ ವರ್ಣನೆ

ಪರಾಶರರು ಹೇಳಿದರು: ಇಕ್ಷ್ವಾಕುತನಯನಾದ ನಿಮಿ ಎಂಬುವ ನಿದ್ದನಷ್ಟೆ. ಅವನು ಸಾವಿರ ವರ್ಷಗಳು ನಡೆಸಬೇಕಾದ ಒಂದು ಯಾಗವನ್ನಾರಂಭಿಸಿದನು. ವಸಿಷ್ಠರನ್ನು ಹೋತೃವಾಗಿರುವಂತೆ ಕೇಳಿಕೊಂಡನು. ಅದಕ್ಕೆ ವಸಿಷ್ಠರು "ನಾನು ಐದುನೂರು ವರ್ಷಗಳ ಯಾಗಕ್ಕಾಗಿ ಮೊದಲೇ ದೇವೇಂದ್ರನಿಂದ ವೃತನಾಗಿದ್ದೇನೆ. ಅದಾದ ಮೇಲೆ ಬಂದು ನಿನ್ನ ಯಾಗ ದಲ್ಲಿಯೂ ಋತ್ವಿಕ್ ಆಗುವೆನು. ಅಲ್ಲಿಯವರೆಗೆ ಕಾಯುತ್ತಿರು" ಎಂದು ಹೇಳಿದರು. ಅದಕ್ಕೆ ರಾಜನು ಏನನ್ನೂ ಹೇಳಲಿಲ್ಲ (1-4). ರಾಜನು ಇದಕ್ಕೆ ಒಪ್ಪಿದ್ದಾನೆ ಎಂದುಕೊಂಡು ಹೋಗಿ ವಸಿಷ್ಠರು ದೇವೇಂದ್ರನ ಯಾಗವನ್ನು ನಡೆಸಿದರು. ನಿಮಿರಾಜನಾದರೋ ಆ ಸಮಯದಲ್ಲಿಯೇ ಗೌತಮಾದಿ ಮುನಿ ಗಳನ್ನು ಕರೆಸಿಕೊಂಡು ಯಾಗವನ್ನು ನಡೆಸಿಬಿಟ್ಟನು! ಇಂದ್ರನ ಯಾಗವು

**॥ 6 ॥ ಸಮಾಪ್ತೇ ಚಾಮರಪತೇರ್ಯಾಗೇ ತ್ವರಯಾ ವಸಿಷ್ಠೋ ನಿಮಿಯಜ್ಞಂ ಕರಿಷ್ಯಾಮೀತ್ಯಾಜಗಾಮ ॥ 7 ॥ ತತ್ಕರ್ಮಕರ್ತೃತ್ವಂ ಚ ಗೌತಮಸ್ಯ ದೃಷ್ಟ್ವಾ ಸ್ವಪತೇ ತಸ್ಮೈ ರಾಜ್ಞೇ ಮಾಂ ಪ್ರತ್ಯಾಖ್ಯಾಯೈತದನೇನ ಗೌತಮಾಯ ಕರ್ಮಾಂತರಂ ಸಮರ್ಪಿತಂ ಯಸ್ಮಾತ್ತಸ್ಮಾದಯಂ ವಿದೇಹೋ ಭವಿಷ್ಯತೀತಿ ಶಾಪಂ ದದೌ ॥ 8 ॥ ಪ್ರಬುದ್ಧಶ್ಚಾಸಾವವನಿಪತಿರಪಿ ಪ್ರಾಹ ॥ 9 ॥ ಯಸ್ಮಾನ್ಮಾಮಸಂಭಾಷ್ಯಾಜ್ಞಾನತ ಏವ ಶಯಾನಸ್ಯ ಶಾಪೋತ್ಸರ್ಗಮಸೌ ದುಷ್ಟಗುರುಶ್ಚಕಾರ ತಸ್ಮಾತ್ತಸ್ಯಾಪಿ ದೇಹಃ ಪತಿಷ್ಯತೀತಿ ಶಾಪಂ ದತ್ತ್ವಾ ದೇಹಮತ್ಯಜತ್ ॥ 10 ॥ ತಚ್ಛಾಪಾಚ್ಚ ಮಿತ್ರಾವರುಣಯೋಸ್ತೇಜಸಿ ವಸಿಷ್ಠಸ್ಯ ಚೇತಃ ಪ್ರವಿಷ್ಟಮ್ ॥ 11 ॥ ಉರ್ವಶೀದರ್ಶನಾದುದ್ಭೂತಬೀಜಪ್ರಪಾತಯೋಃ ತಯೋಸ್ಸಕಾಶಾದ್ವಸಿಷ್ಠೋ ದೇಹಮಪರಂ ಲೇಭೇ ॥ 12 ॥ ನಿಮೇರಪಿ ತಚ್ಛರೀರಮತಿಮನೋಹರಗಂಧತೈಲಾದಿಭಿರುಪಸಂಸ್ಕ್ರಿಯಮಾಣಂ ನೈವ ಕ್ಲೇದಾದಿಕಂ ದೋಷಮವಾಪ**

---

ಮುಗಿದೊಡನೆ ವಸಿಷ್ಠರು ಈಗ ನಿಮಿರಾಜನ ಯಜ್ಞವನ್ನು ನಡೆಸಬೇಕೆಂದು ತ್ವರೆಯಿಂದ ಆಗಮಿಸಿದರು (5-7). ಇಲ್ಲಿ ಗೌತಮರು ಹೋತೃವಿನ ಕೆಲಸವನ್ನು ನಡೆಸುತ್ತಿರುವುದು ಕಾಣಿಸಿತು. ನಿಮಿರಾಜನು ಆಗ ನಿದ್ರಿಸುತ್ತಿದ್ದನು. 'ಈತನು ನನ್ನನ್ನು ತಿರಸ್ಕರಿಸಿ ಗೌತಮನಿಗೆ ಹೋತೃವಿನ ಕರ್ತವ್ಯವನ್ನು ವಹಿಸಿದ್ದರಿಂದ ಈ ರಾಜನು ವಿದೇಹ (ದೇಹರಹಿತ) ನಾಗಿ ಹೋಗಲಿ!' ಎಂದು ವಸಿಷ್ಠರು ಶಪಿಸಿದರು (8). ಆಮೇಲೆ ನಿಮಿರಾಜನು ನಿದ್ರೆಯಿಂದೆದ್ದು "ಏನೂ ಗೊತ್ತಿಲ್ಲದೆ ನಾನು ಮಲಗಿರುವಾಗ, ನನ್ನೊಡನೆ ಮಾತನಾಡದೆಯೇ ಈ ದುಷ್ಟನಾದ ಗುರು ಶಾಪವನ್ನಿತ್ತಿದ್ದಾನೆ! ಆದ್ದರಿಂದ ಆತನ ದೇಹವೂ ಬಿದ್ದು ಹೋಗಲಿ!" ಎಂದು ಶಾಪವನ್ನು ಕೊಟ್ಟು ತನ್ನ ದೇಹವನ್ನು ತ್ಯಜಿಸಿದನು (9-10). ಹೀಗೆ ರಾಜನ ಶಾಪವಶದಿಂದ (ದೇಹವನ್ನು ತ್ಯಜಿಸಿದ) ವಸಿಷ್ಠರ ಲಿಂಗದೇಹವು ಮಿತ್ರಾವರುಣರ ವೀರ್ಯದಲ್ಲಿ ಸೇರಿಕೊಂಡಿತು. ಒಮ್ಮೆ ಉರ್ವಶಿಯನ್ನು ನೋಡಿದಾಗ ಮಿತ್ರಾವರುಣರ ವೀರ್ಯವು ಸ್ಖಲಿತವಾಗಲು ವಸಿಷ್ಠರು ದೇಹಾಂತರವನ್ನು ಪಡೆದರು (11-12). ಇತ್ತ ನಿಮಿಯ ದೇಹವನ್ನು (ರಾಜಪರಿವಾರದವರು) ಮನೋಹರವಾದ ಗಂಧ ತೈಲಾದಿಗಳಿಂದ ಸಂಸ್ಕರಿಸುತ್ತಿರಲಾಗಿ ದೇಹವು

**ಸದ್ಯೋ ಮೃತ ಇವ ತಸ್ಥೌ ॥ 13 ॥ ಯಜ್ಞಸಮಾಪ್ತೌ ಭಾಗಗ್ರಹಣಾಯ ದೇವಾನಾಗತಾನೃತ್ವಿಜ ಊಚುರ್ಯಜಮಾನಾಯ ವರೋ ದೀಯತಾಮಿತಿ ॥ 14 ॥ ದೇವೈಶ್ಛ ಛಂದಿತೋಽಸೌ ನಿಮಿರಾಹ ॥ 15 ॥ ಭಗವಂತೋಽಖಿಲಸಂಸಾರದುಃಖಹಂತಾರಃ ॥ 16 ॥ ನ ಹ್ಯೇತಾದೃಗನ್ಯದ್-ದುಃಖಮಸ್ತಿ ಯಚ್ಛರೀರಾತ್ಮನೋರ್ವಿಯೋಗೇ ಭವತಿ ॥ 17 ॥ ತದಹಮಿಚ್ಛಾಮಿ ಸಕಲಲೋಕಲೋಚನೇಷು ವಸ್ತುಂ ನ ಪುನಶ್ಶರೀರಗ್ರಹಣಂ ಕರ್ತುಮಿತ್ಯೇವಮುಕ್ತೈರ್ದೇವೈರಸಾವಶೇಷಭೂತಾನಾಂ ನೇತ್ರೇಷ್ವವತಾರಿತಃ ॥ 18 ॥ ತತೋ ಭೂತಾನ್ಯುನ್ಮೇಷನಿಮೇಷಂ ಚಕ್ರುಃ ॥ 19 ॥ ಅಪುತ್ರಸ್ಯ ಚ ಭೂಭುಜಃ ಶರೀರಮರಾಜಕಭೀರವೋ ಮುನಯೋಽ-**

---

ಕೊಳೆಯಲಿಲ್ಲ; ಕೆಡಲಿಲ್ಲ. ಆಗ ತಾನೇ ಜೀವ ಹೋದಂತೆ ದೇಹವು ಇದ್ದಿತು* (13). ಯಜ್ಞದ ಸಮಾಪ್ತಿಯಲ್ಲಿ ಹವಿರ್ಭಾಗವನ್ನು ಸ್ವೀಕರಿಸಲು ಬಂದ ದೇವತೆಗಳನ್ನು ಕುರಿತು ಋತ್ವಿಜರು 'ಯಜಮಾನನಾದ ನಿಮಿರಾಜನಿಗೆ (ಬದುಕುವಂತೆ) ವರವನ್ನೀಯಬೇಕು' ಎಂದು ಕೇಳಿಕೊಂಡರು (14). ಅಂತೆಯೇ ದೇವತೆಗಳು ಪ್ರೇರಿಸಲಾಗಿ ನಿಮಿಯು, "ಸಕಲ ಸಂಸಾರ ದುಃಖವನ್ನು ಪರಿಹರಿಸತಕ್ಕ ಮಹಾತ್ಮರೇ, ಶರೀರ-ಜೀವಾತ್ಮರಿಗೆ ವಿಯೋಗವಾಗುವಾಗ ಆಗುವ ದುಃಖಕ್ಕೆ ಎಣೆಯಾದದ್ದು ಇನ್ನೊಂದಿಲ್ಲ. ಆದ್ದರಿಂದ ಸಕಲ ಜೀವಿಗಳ ಕಣ್ಣುಗಳಲ್ಲಿ ನೆಲಸಬೇಕೆಂದು ಬಯಸುತ್ತೇನೆ. ಪುನಃ ಈ ಶರೀರ ಸಂಬಂಧವು ನನಗೆ ಬೇಡ!" ಎಂದನು. ಆಗ ದೇವತೆಗಳು ನಿಮಿಯನ್ನು ಸಕಲಜೀವಿಗಳ ಕಣ್ಣಿನ ರೆಪ್ಪೆಗಳಲ್ಲಿ ಸ್ಥಾಪಿಸಿದರು! ಅನಂತರ ಜೀವಿಗಳು ನಿಮೇಷೋನ್ಮೇಷಗಳನ್ನು (ರೆಪ್ಪೆ ಹೊಡೆಯುವುದನ್ನು) ಪ್ರಾರಂಭಿಸಿದರು (15-19). ರಾಜನು ಪುತ್ರಹೀನನಾದ್ದರಿಂದ ರಾಜ್ಯವು ಅರಾಜಕವಾದೀತೆಂದು ಮುನಿಗಳು ಭಯಪಟ್ಟು ಆತನ

---

* ಪ್ರಾಚೀನ ಈಜಿಪ್ಟಿನಲ್ಲಿ ಶವಗಳನ್ನು (ಮಮ್ಮಿ) ಕೆಡದಂತೆ ಬಹುಕಾಲ ಇಡುತ್ತಿದ್ದರೆಂಬುದು ಪ್ರಸಿದ್ಧವಾಗಿದೆಯಷ್ಟೆ. H. H. Wilson ಸಾಹೇಬರು ಈ ಸಂದರ್ಭದಲ್ಲಿ ಹಿಂದೂಗಳಿಗೂ ಆ ಕಲೆ ಗೊತ್ತಿತ್ತೆಂದು ಹೇಳುತ್ತಾರೆ. ಕಾಶೀಖಂಡದಲ್ಲಿ ಒಬ್ಬ ಬ್ರಾಹ್ಮಣನು ತನ್ನ ತಾಯಿಯ ಶವವು ಕೆಡದಂತೆ ಕಕ್ಕೋಲು, ಮಂಜಿಷ್ಠ—ಮುಂತಾದ ಔಷಧಗಳನ್ನು ಲೇಪಿಸಿ, ಬಟ್ಟೆಯಲ್ಲಿ ಸುತ್ತಿ ರಾಮೇಶ್ವರದಿಂದ ಕಾಶಿಗೆ ಒಯ್ದನೆಂಬ ಕಥೆ ಇರುವುದನ್ನೂ ಇಲ್ಲಿ ಉದಾಹರಿಸುತ್ತಾರೆ.

**ರಣ್ಯಾಮಮಂಥುಃ ॥ 20 ॥ ತತ್ರ ಚ ಕುಮಾರೋ ಜಜ್ಞೇ ॥ 21 ॥ ಜನನಾಜ್ಜನಕಸಂಜ್ಞಾಂ ಚಾವಾಪ ॥ 22 ॥ ಅಭೂದ್ವಿದೇಹೋಽಸ್ಯ ಪಿತೇತಿ ವೈದೇಹಃ ಮಥನಾನ್ಮಿಥಿರಿತಿ ॥ 23 ॥ ತಸ್ಯೋದಾವಸುಃ ಪುತ್ರೋಽಭವತ್ ॥ 24 ॥ ಉದಾವಸೋರ್ನಂದಿವರ್ಧನಸ್ತತಸ್ಸುಕೇತುಃ ತಸ್ಮಾದ್ದೇವರಾತಸ್ತತಶ್ಚ ಬೃಹದುಕ್ಥಃ ತಸ್ಯ ಚ ಮಹಾವೀರ್ಯಸ್ತಸ್ಯಾಪಿ ಸುಧೃತಿಃ ॥ 25 ॥ ತತಶ್ಚ ಧೃಷ್ಟಕೇತುರಜಾಯತ ॥ 26 ॥ ಧೃಷ್ಟಕೇತೋರ್ಹರ್ಯಶ್ವಸ್ತಸ್ಯ ಚ ಮನುರ್ಮನೋಃ ಪ್ರತಿಕಃ ತಸ್ಮಾತ್ಕೃತರಥಸ್ತಸ್ಯ ದೇವಮೀಢಃ ತಸ್ಯ ಚ ವಿಬುಧೋ ವಿಬುಧಸ್ಯ ಮಹಾಧೃತಿಸ್ತತಶ್ಚ ಕೃತರಾತಃ ತತೋ ಮಹಾರೋಮಾ ತಸ್ಯ ಸುವರ್ಣರೋಮಾ ತತ್ಪುತ್ರೋ ಹ್ರಸ್ವರೋಮಾ ಹ್ರಸ್ವರೋಮ್ಣಸ್ಸೀರಧ್ವಜೋಽಭವತ್ ॥ 27 ॥ ತಸ್ಯ ಪುತ್ರಾರ್ಥಂ ಯಜನಭುವಂ ಕೃಷತಃ ಸೀರೇ ಸೀತಾ ದುಹಿತಾ ಸಮುತ್ಪನ್ನಾ ॥ 28 ॥ ಸೀರಧ್ವಜಸ್ಯ ಭ್ರಾತಾ**

---

ಶರೀರವನ್ನು ಅರಣಿಯಿಂದ ಮಥಿಸಿದರು. ಆಗ ಒಬ್ಬ ಕುಮಾರನು ಹುಟ್ಟಿದನು. ಜನಿಸಿದ್ದರಿಂದ ಜನಕ ಎಂದು ಅವನಿಗೆ ಹೆಸರಾಯಿತು (20-22). ಆ ಕುಮಾರನ ತಂದೆ ವಿದೇಹನಾಗಿದ್ದುದರಿಂದ ಈತನಿಗೆ ವೈದೇಹನೆಂದೂ ಮಥನದಿಂದ ಜನಿಸಿದ ಪ್ರಯುಕ್ತ ಮಿಥಿಯೆಂದೂ ಹೆಸರು ಬಳಕೆಗೆ ಬಂದಿತು. ಆ ಜನಕನಿಗೆ ಉದಾವಸು ಎಂಬ ಪುತ್ರನು ಹುಟ್ಟಿದನು. ಉದಾವಸುವಿಗೆ ನಂದಿವರ್ಧನ, ಅವನಿಗೆ ಸುಕೇತು, ಅವನಿಗೆ ದೇವರಾತ, ಆತನಿಗೆ ಬೃಹದುಕ್ಥ, ಆತನಿಗೆ ಮಹಾವೀರನಾದ ಸುಧೃತಿ—ಎಂಬವರು ಕ್ರಮವಾಗಿ ಮಕ್ಕಳಾದರು (23-25). ಸುಧೃತಿಯ ಮಗ ಧೃಷ್ಟಕೇತು. ಆತನ ಮಗ ಹರ್ಯಶ್ವ. ಅವನ ಮಗ ಮನು. ಮನುವಿನಿಂದ ಪ್ರತಿಕನೂ, ಪ್ರತಿಕನಿಂದ ಕೃತರಥನೂ ಅವನಿಂದ ದೇವಮೀಢನೂ ಹುಟ್ಟಿದರು. ದೇವಮೀಢನ ತನಯ ವಿಬುಧ, ಆತನ ತನಯ ಮಹಾಧೃತಿ. ಅವನಿಂದ ಕೃತರಾತನೂ ಅವನಿಂದ ಮಹಾರೋಮನೂ ಜನಿಸಿದರು. ಮಹಾರೋಮನ ಪುತ್ರ ಸುವರ್ಣರೋಮ. ಅವನ ಪುತ್ರ ಹ್ರಸ್ವರೋಮ. ಅವನ ಮಗನೇ ಸೀರಧ್ವಜ. ಈತನು ಪುತ್ರಾರ್ಥವಾಗಿ ಯಾಗವನ್ನು ಮಾಡಬೇಕೆಂದು ನೆಲವನ್ನು ಉಳುತ್ತಿರುವಾಗ ನೇಗಿಲಿನ ಅಗ್ರಭಾಗದಲ್ಲಿ ಸೀತೆ ಕಾಣಿಸಿಕೊಂಡು ಸೀರಧ್ವಜನಿಗೆ ಮಗಳಾದಳು (26-28). ಸಾಂಕಾಶ್ಯದೇಶಕ್ಕೆ ಅಧಿಪತಿಯಾಗಿದ್ದ ಕುಶಧ್ವಜನು ಈ ಸೀರಧ್ವಜನ ಸೋದರ. ಸೀರಧ್ವಜನ ಮಗ

**ಸಾಂಕಾಶ್ಯಾಧಿಪತಿಃ ಕುಶಧ್ವಜನಾಮಾಽಽಸೀತ್ ॥ 29 ॥ ಸೀರಧ್ವಜಸ್ಯಾಪತ್ಯಂ ಭಾನುಮಾನ್ ಭಾನುಮತಶ್ಯತದ್ಯುಮ್ನಃ ತಸ್ಯ ತು ಶುಚಿಃ ತಸ್ಮಾಚ್ಚೋರ್ಜ-ನಾಮಾ ಪುತ್ರೋ ಜಜ್ಞೇ ॥ 30 ॥ ತಸ್ಯಾಪಿ ಶತಧ್ವಜಃ ತತಃ ಕೃತಿಃ ಕೃತೇ-ರಂಜನಃ ತತ್ಪುತ್ರಃ ಕುರುಜಿತ್ ತತೋಽರಿಷ್ಟನೇಮಿಃ ತಸ್ಮಾಚ್ಛ್ರುತಾಯುಃ ಶ್ರುತಾಯುಷಃ ಸುಪಾರ್ಶ್ವಃ ತಸ್ಮಾತ್ ಸೃಂಜಯಃ ತತಃ ಕ್ಷೇಮಾವೀ ಕ್ಷೇಮಾವಿನೋಽನೇನಾಃ ತಸ್ಮಾದ್ಭೌಮರಥಃ ತಸ್ಯ ಸತ್ಯರಥಃ ತಸ್ಮಾದುಪ-ಗುರುಪಗೋರುಪಗುಪ್ತಃ ತತ್ಪುತ್ರಃ ಸ್ವಾಗತಸ್ತಸ್ಯ ಚ ಸ್ವಾನಂದಃ ತಸ್ಮಾಚ್ಚ ಸುವರ್ಚಾಃ ತಸ್ಯ ಚ ಸುಪಾರ್ಶ್ವಃ ತಸ್ಯಾಪಿ ಸುಭಾಷಃ ತಸ್ಯ ಸುಶ್ರುತಃ ತಸ್ಮಾತ್ಸುಶ್ರುತಾಜ್ಜಯಃ ತಸ್ಯ ಪುತ್ರೋ ವಿಜಯೋ ವಿಜಯಸ್ಯ ಋತಃ ಋತಾತ್ಸುನಯಃ ಸುನಯಾದ್ವೀತಹವ್ಯಃ ತಸ್ಮಾದ್ ಧೃತಿರ್ಧೃತೇರ್ಬಹು-ಲಾಶ್ವಃ ತಸ್ಯ ಪುತ್ರಃ ಕೃತಿಃ ॥ 31 ॥ ಕೃತೌ ಸಂತಿಷ್ಠತೇಽಯಂ ಜನಕವಂಶಃ ॥ 32 ॥ ಇತ್ಯೇತೇ ಮೈಥಿಲಾಃ ॥ 33 ॥ ಪ್ರಾಯೇಣೈತೇ ಆತ್ಮವಿದ್ಯಾ-ಶ್ರಯಿಣೋ ಭೂಪಾಲಾ ಭವಂತಿ ॥ 34 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಪಂಚಮೋಽಧ್ಯಾಯಃ

---

ಭಾನುಮಂತ. ಅವನ ಮಗ ಶತದ್ಯುಮ್ನ. ಅವನಿಗೆ ಶುಚಿಯೆಂಬವನು ಮಗ. ಶುಚಿಗೆ ಊರ್ಜ ಎಂಬ ಕುಮಾರನು ಜನಿಸಿದನು (29-30). ಊರ್ಜನ ಮಗ ಶತಧ್ವಜ. (ಮುಂದಕ್ಕೆ ಈ ಜನಕವಂಶದಲ್ಲಿ ತಂದೆ ಮಕ್ಕಳ ಸಂತತಿ ಕ್ರಮ ಹೀಗಿದೆ): ಕೃತಿ, ಅಂಜನ, ಕುರುಜಿತ್, ಅರಿಷ್ಟನೇಮಿ, ಶ್ರುತಾಯು, ಸುಪಾರ್ಶ್ವ, ಸೃಂಜಯ, ಕ್ಷೇಮಾವಿ, ಅನೇನಸ್, ಭೌಮರಥ, ಸತ್ಯರಥ, ಉಪಗು, ಉಪ ಗುಪ್ತ, ಸ್ವಾಗತ, ಸ್ವಾನಂದ, ಸುವರ್ಚ, ಸುಪಾರ್ಶ್ವ, ಸುಭಾಷ, ಸುಶ್ರುತ, ಜಯ, ವಿಜಯ, ಋತ, ಸುನಯ, ವೀತಹವ್ಯ, ಧೃತಿ, ಬಹುಲಾಶ್ವ, ಕೃತಿ (31). ಕೃತಿಯೆಂಬವನಲ್ಲಿಗೆ ಈ ಜನಕವಂಶವು ಸಮಾಪ್ತವಾಗುತ್ತದೆ. ಇವರೆಲ್ಲರೂ ಮೈಥಿಲರೆಂದು ವಿಖ್ಯಾತರು. ಬಹುಶಃ ಈ ಮೈಥಿಲರೆಲ್ಲರೂ ಅಧ್ಯಾತ್ಮವಿದ್ಯೆಯಲ್ಲಿ ನಿಷ್ಣಾತರಾದ ಭೂಪಾಲರು (32-34).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಐದನೆಯ ಅಧ್ಯಾಯ ಮುಗಿಯಿತು.

## ಷಷ್ಠೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಸೂರ್ಯಸ್ಯ ವಂಶ್ಯಾ ಭಗವನ್ ಕಥಿತಾ ಭವತಾ ಮಮ।**
**ಸೋಮಸ್ಯಾಪ್ಯಖಿಲಾನ್ ವಂಶ್ಯಾನ್ ಶ್ರೋತುಮಿಚ್ಛಾಮಿ ಪಾರ್ಥಿವಾನ್॥ 1**

**ಕೀರ್ತ್ಯತೇ ಸ್ಥಿರಕೀರ್ತೀನಾಂ ಯೇಷಾಮದ್ಯಾಪಿ ಸಂತತಿಃ।**
**ಪ್ರಸಾದಸುಮುಖಸ್ತಾನ್ಮೇ ಬ್ರಹ್ಮನ್ನಾಖ್ಯಾತುಮರ್ಹಸಿ॥ 2**

*ಶ್ರೀಪರಾಶರ ಉವಾಚ:*

**ಶ್ರೂಯತಾಂ ಮುನಿಶಾರ್ದೂಲ ವಂಶಃ ಪ್ರಥಿತತೇಜಸಃ।**
**ಸೋಮಸ್ಯಾನುಕ್ರಮಾತ್ ಖ್ಯಾತಾ ಯತ್ರೋರ್ವೀಪತಯೋಽಭವನ್॥ 3**

**ಅಯಂ ಹಿ ವಂಶೋಽತಿಬಲಪರಾಕ್ರಮದ್ಯುತಿಶೀಲಚೇಷ್ಟಾವದ್ಭಿರತಿ-**

---

### ಅಧ್ಯಾಯ 6

ಸೋಮವಂಶದ ವರ್ಣನೆ. ಚಂದ್ರ, ಬುಧ, ಉರ್ವಶೀ-ಪುರೂರವರ ಚರಿತ್ರೆ.

ಮೈತ್ರೇಯರು ಪರಾಶರರನ್ನು ಕುರಿತು “ಭಗವನ್, ಸೂರ್ಯವಂಶದ ರಾಜರ ಚರಿತೆಯನ್ನು ನಮಗೆ ಹೇಳಿದ್ದೀರಿ. ಈಗ ಚಂದ್ರವಂಶದ ಎಲ್ಲ ರಾಜರ ವಿಷಯವನ್ನು ಕೇಳಲಪೇಕ್ಷಿಸುತ್ತೇನೆ. ಶಾಶ್ವತಕೀರ್ತಿಶಾಲಿಗಳಾದ ಚಂದ್ರವಂಶದ ದೊರೆಗಳ ಯಶಸ್ಸನ್ನು ಇಂದಿಗೂ ಹೊಗಳುತ್ತಾರೆ. ನೀವು ಪ್ರಸನ್ನರಾಗಿ ಆ ವಂಶದ ಚರಿತೆಯನ್ನು ಹೇಳೋಣವಾಗಬೇಕು” ಎಂದರು (1-2). ಪರಾಶರರು ಹೇಳಿದರು: ಮುನಿಶ್ರೇಷ್ಠ, ಪರಮತೇಜಸ್ವಿಯಾದ ಚಂದ್ರನ ವಂಶದಲ್ಲಿ ವಿಖ್ಯಾತರಾದ ಅನೇಕ ಭೂಪಾಲರು ಉದಿಸಿದರು. ಅನುಕ್ರಮವಾಗಿ ಕೇಳು. ಈ ಚಂದ್ರವಂಶವು ಅತ್ಯಂತ ಬಲಶಾಲಿಗಳೂ ಪರಾಕ್ರಮಿಗಳೂ ಕೀರ್ತಿವಂತರೂ ಶೀಲವಂತರೂ ಗುಣಾಢ್ಯರೂ ಆದ ನಹುಷ, ಯಯಾತಿ, ಕಾರ್ತವೀರ್ಯಾರ್ಜುನ

**ಗುಣಾನ್ವಿತೈರ್ನಹುಷ ಯಯಾತಿ ಕಾರ್ತವೀರ್ಯಾರ್ಜುನಾದಿಭಿರ್ಭೂಪಾಲೈಃ ಅಲಂಕೃತಸ್ತಮಹಂ ಕಥಯಾಮಿ ಶ್ರೂಯತಾಮ್ ॥ 4 ॥ ಅಖಿಲಜಗತ್ಸ್ರಷ್ಟುರ್ಭಗವತೋ ನಾರಾಯಣಸ್ಯ ನಾಭಿಸರೋಜಸಮುದ್ಭವಾಬ್ಜಯೋನೇರ್ಬ್ರಹ್ಮಣಃ ಪುತ್ರೋಽತ್ರಿಃ ॥ 5 ॥ ಅತ್ರೇಸ್ಸೋಮಃ ॥ 6 ॥ ತಂ ಚ ಭಗವಾನಬ್ಜಯೋನಿಃ ಅಶೇಷೌಷಧಿದ್ವಿಜನಕ್ಷತ್ರಾಣಾಮಾಧಿಪತ್ಯೇಽಭ್ಯಷೇಚಯತ್ ॥ 7 ॥ ಸ ಚ ರಾಜಸೂಯಮಕರೋತ್ ॥ 8 ॥ ತತ್ಪ್ರಭಾವಾದತ್ಯುತ್ಕೃಷ್ಟಾಧಿಪತ್ಯಾಧಿಷ್ಠಾತೃತ್ವಾಚ್ಚೈನಂ ಮದ ಆವಿವೇಶ ॥ 9 ॥ ಮದಾವಲೇಪಾಚ್ಚ ಸಕಲದೇವಗುರೋರ್ಬೃಹಸ್ಪತೇಸ್ತಾರಾಂ ನಾಮ ಪತ್ನೀಂ ಜಹಾರ ॥ 10 ॥ ಬಹುಶಶ್ಚ ಬೃಹಸ್ಪತಿಚೋದಿತೇನ ಭಗವತಾ ಬ್ರಹ್ಮಣಾ ಚೋದ್ಯಮಾನಃ ಸಕಲೈಶ್ಚ ದೇವರ್ಷಿಭಿರ್ಯಾಚ್ಯಮಾನೋಽಪಿ ನ ಮುಮೋಚ ॥ 11 ॥ ತಸ್ಯ ಚಂದ್ರಸ್ಯ ಚ ಬೃಹಸ್ಪತೇರ್ದ್ವೇಷಾದುಶನಾ ಪಾರ್ಷ್ಣಿಗ್ರಾಹೋಽಭೂತ್ ॥ 12 ॥ ಅಂಗಿರಸಶ್ಚ ಸಕಾಶಾದುಪಲಬ್ಧವಿದ್ಯೋ**

---

—ಮೊದಲಾದ ಭೂಪತಿಗಳಿಂದ ಅಲಂಕೃತವಾದದ್ದು. ಹೇಳುತ್ತೇನೆ, ಕೇಳು (3-4). ಅಖಿಲಜಗತ್ತನ್ನು ಸೃಷ್ಟಿಸಿದ ಶ್ರೀಮನ್ನಾರಾಯಣನ ನಾಭಿಕಮಲದಲ್ಲಿ ಹುಟ್ಟಿದ ಬ್ರಹ್ಮನ ಪುತ್ರ ಅತ್ರಿಮಹರ್ಷಿ. ಅತ್ರಿಯಿಂದ ಚಂದ್ರನು ಜನಿಸಿದನು. ಆ ಚಂದ್ರನನ್ನು ಭಗವಾನ್ ಬ್ರಹ್ಮನು ಎಲ್ಲ ಔಷಧಿಗಳಿಗೂ ದ್ವಿಜರಿಗೂ ನಕ್ಷತ್ರಗಳಿಗೂ ಅಧಿಪತಿಯ ಸ್ಥಾನದಲ್ಲಿ ಪಟ್ಟಾಭಿಷೇಕ ಮಾಡಿದನು (5-7). ಅನಂತರ ಚಂದ್ರನು ರಾಜಸೂಯಯಾಗವನ್ನು ಮಾಡಿದನು. ರಾಜಸೂಯ ಮಾಡಿದೆನೆಂಬ ಕಾರಣದಿಂದಲೂ ಶ್ರೇಷ್ಠವಾದ ಆಧಿಪತ್ಯದಲ್ಲಿ ವಿರಾಜಿಸುತ್ತಿದ್ದೇನೆಂದೂ ಚಂದ್ರನಿಗೆ ಅಹಂಕಾರ ಉಂಟಾಯಿತು. ಅದರ ಸೊಕ್ಕಿನಿಂದ ಅವನು ದೇವಗುರುವಾದ ಬೃಹಸ್ಪತಿಯ ಪತ್ನಿಯಾದ ತಾರೆಯನ್ನು ಅಪಹರಿಸಿದನು (8-10. ಬೃಹಸ್ಪತಿಯ ಪ್ರಾರ್ಥನೆಯಂತೆ ಬ್ರಹ್ಮದೇವನು ಬಹುವಿಧದಲ್ಲಿ ಹೇಳಿದರೂ ಸಕಲದೇವರ್ಷಿಗಳು ಬೇಡಿಕೊಂಡರೂ ಚಂದ್ರನು ಅವಳನ್ನು ಬಿಟ್ಟುಕೊಡಲಿಲ್ಲ (11). ಬೃಹಸ್ಪತಿಯ ಮೇಲೆ ದ್ವೇಷವಿದ್ದುದರಿಂದ ಶುಕ್ರಾಚಾರ್ಯನು ಚಂದ್ರನ ಸಹಾಯಕ್ಕೆ ನಿಂತನು. ಅಂಗಿರಸನಿಂದ ವಿದ್ಯೆಯನ್ನು ಕಲಿತದ್ದರಿಂದ* ಭಗವಾನ್

* ಇದಕ್ಕೆ ಬೇರೆ ಆಧಾರವೇನೂ ತಿಳಿಯದು.

**ಭಗವಾನ್ ರುದ್ರೋ ಬೃಹಸ್ಪತೇಃ ಸಾಹಾಯ್ಯಮಕರೋತ್ ॥ 13 ॥ ಯತಶ್ಚೋಶನಾ ತತೋ ಜಂಬಕುಂಭಾದ್ಯಾಃ ಸಮಸ್ತಾ ಏವ ದೈತ್ಯ-ದಾನವನಿಕಾಯಾ ಮಹಾಂತಮುದ್ಯಮಂ ಚಕ್ರುಃ ॥ 14 ॥ ಬೃಹಸ್ಪತೇರಪಿ ಸಕಲದೇವಸೈನ್ಯಯುತಃ ಸಹಾಯಃ ಶಕ್ರೋಽಭವತ್ ॥ 15 ॥ ಏವಂ ಚ ತಯೋರತೀವೋಗ್ರಸಂಗ್ರಾಮಸ್ತಾರಾನಿಮಿತ್ತಸ್ತಾರಕಾಮಯೋ ನಾಮಾ-ಭೂತ್ ॥ 16 ॥ ತತಶ್ಚ ಸಮಸ್ತಶಸ್ತ್ರಾಣ್ಯಸುರೇಷು ರುದ್ರಪುರೋಗಮಾ ದೇವಾ ದೇವೇಷು ಚಾಶೇಷದಾನವಾ ಮುಮುಚುಃ ॥ 17 ॥ ಏವಂ ದೇವಾಸುರಾಹವಸಂಕ್ಷೋಭಕ್ಷುಬ್ಧಹೃದಯಮಶೇಷಮೇವ ಜಗದ್ ಬ್ರಹ್ಮಾಣಂ ಶರಣಂ ಜಗಾಮ ॥ 18 ॥ ತತಶ್ಚ ಭಗವಾನಬ್ಜಯೋನಿರಪ್ಯು-ಶನಸಂ ಶಂಕರಮಸುರಾಂದೇವಾಂಶ್ಚ ನಿವಾರ್ಯ ಬೃಹಸ್ಪತಯೇ ತಾರಾ-ಮದಾಪಯತ್ ॥ 19 ॥ ತಾಂ ಚಾಂತಃಪ್ರಸವಾಮವಲೋಕ್ಯ ಬೃಹಸ್ಪತಿ-ರಪ್ಯಾಹ ॥ 20 ॥ ನೈಷ ಮಮ ಕ್ಷೇತ್ರೇ ಭವತ್ಯಾನ್ಯಸ್ಯ ಸುತೋ ಧಾರ್ಯ-**

---

ರುದ್ರನು (ಅಂಗಿರಸನ ಮಗನಾದ) ಬೃಹಸ್ಪತಿಯ ನೆರವಿಗೆ ಬಂದನು (12-13). ಶುಕ್ರಾಚಾರ್ಯನು ಇದರಲ್ಲಿ ಪಕ್ಷ ವಹಿಸಿದ್ದರಿಂದ ಜಂಭ, ಕುಂಭ—ಮೊದಲಾದ ಸಮಸ್ತ ದೈತ್ಯದಾನವರೂ ಚಂದ್ರನ ಪಕ್ಷವನ್ನು ಸೇರಿ ಮಹತ್ತರವಾದ ಸಮರೋದ್ಯಮವನ್ನು ನಡೆಸಿದರು. ಇತ್ತ ದೇವೇಂದ್ರನು ನಿಖಿಲದೇವತೆಗಳಿಂದ ಸಹಿತನಾಗಿ ಬೃಹಸ್ಪತಿಯ ಪಕ್ಷವನ್ನು ವಹಿಸಿದನು (14-15). ಈ ಪರಿಸ್ಥಿತಿಯಿಂದ ತಾರಾನಿಮಿತ್ತವಾಗಿ ದೇವಾಸುರರಿಗೆ ತಾರಕಾಮಯವೆಂಬ ಘೋರಸಂಗ್ರಾಮ ನಡೆಯಿತು. ರುದ್ರ ಪ್ರಮುಖರಾದ ದೇವತೆಗಳು ದಾನವರ ಮೇಲೂ ದಾನವರು ದೇವತೆಗಳ ಮೇಲೂ ಎಲ್ಲ ಬಗೆಯ ಘೋರಾಸ್ತ್ರಗಳನ್ನು ಪ್ರಯೋಗಿಸಿದರು (16-17). ಹೀಗೆ ದೇವಾಸುರರ ಘೋರಕದನದಿಂದ ತಲ್ಲಣಿಸಿಹೋದ ಜನರು ಬ್ರಹ್ಮನಿಗೆ ಶರಣಾದರು. ಆಗ ಕಮಲಸಂಭವನಾದ ಬ್ರಹ್ಮದೇವನು ಶುಕ್ರಾಚಾರ್ಯ ಮತ್ತು ರುದ್ರರನ್ನೂ ದೇವಾಸುರರನ್ನೂ ತಡೆದು ಯುದ್ಧವನ್ನು ನಿಲ್ಲಿಸಿ ಬೃಹಸ್ಪತಿಗೆ ತಾರೆಯನ್ನು ಕೊಡಿಸಿದನು! (18-19). ತಾರೆಯು ಗರ್ಭಿಣಿಯಾಗಿರುವುದನ್ನು ತಿಳಿದು ಬೃಹಸ್ಪತಿಯು "ನನ್ನ ಕ್ಷೇತ್ರದಲ್ಲಿ ನೀನು ಇನ್ನೊಬ್ಬನ ಮಗನನ್ನು ಧರಿಸಕೂಡದು! ಹೊರಗೆ ತಳ್ಳು ಆತನನ್ನು. ಇಷ್ಟು ಸೊಕ್ಕು ನಿನಗೆ

**ಷ್ವಮುಸ್ಸೃಜ್ಯೈನಮಲಮಲಮತಿಧಾರ್ಷ್ಟ್ಯೇನೇತಿ ॥ 21 ॥ ಸಾ ಚ ತೇನೈವ-ಮುಕ್ತಾತಿಪತಿವ್ರತಾ ಭರ್ತೃವಚನಾನಂತರಂ ತಮಿಷೀಕಾಸ್ತಂಬೇ ಗರ್ಭ-ಮುತ್ಸಸರ್ಜ ॥ 22 ॥ ಸ ಚೋತ್ಸೃಷ್ಟಮಾತ್ರ ಏವಾತಿತೇಜಸಾ ದೇವಾನಾಂ ತೇಜಾಂಸ್ಯಾಚಿಕ್ಷೇಪ ॥ 23 ॥ ಬೃಹಸ್ಪತಿಮಿಂದುಂ ಚ ತಸ್ಯ ಕುಮಾರಸ್ಯಾತಿ-ಚಾರುತಯಾ ಸಾಭಿಲಾಷೌ ದೃಷ್ಟ್ವಾ ದೇವಾಸ್ಸಮುತ್ಪನ್ನಸಂದೇಹಾಸ್ತಾರಾಂ ಪಪ್ರಚ್ಛುಃ ॥ 24 ॥ ಸತ್ಯಂ ಕಥಯಾಸ್ಮಾಕಮಿತಿ ಸುಭಗೇ ಸೋಮಸ್ಯಾಥ ವಾ ಬೃಹಸ್ಪತೇರಯಂ ಪುತ್ರ ಇತಿ ॥ 25 ॥ ಏವಂ ತೈರುಕ್ತಾ ಸಾ ತಾರಾ ಹ್ರಿಯಾ ಕಿಂಚಿನ್ನೋವಾಚ ॥ 26 ॥ ಬಹುಶೋಽಪ್ಯಭಿಹಿತಾ ಯದಾಸೌ ದೇವೇಭ್ಯೋ ನಾಚಚಕ್ಷೇ ತತಸ್ಸ ಕುಮಾರಸ್ತಾಂ ಶಪ್ತುಮುದ್ಯತಃ ಪ್ರಾಹ ॥ 27 ॥ ದುಷ್ಟೇಽಂಬ ಕಸ್ಮಾನ್ಮಮ ತಾತಂ ನಾಖ್ಯಾಸಿ ॥ 28 ॥ ಅದ್ಯೈವ**

---

ಬೇಡ, ಬೇಡ" ಎಂದನು (20-21). ಗಂಡನು ಹೀಗೆ ಹೇಳಲಾಗಿ ಆ ಅತಿ ಪತಿವ್ರತೆಯು* ತನ್ನ ಗರ್ಭವನ್ನು ನೊರಜುಹುಲ್ಲಿನ ನಡುವೆ ವಿಸರ್ಜಿಸಿದಳು. ಹುಟ್ಟಿದ ಮಗು ತನ್ನ ತೇಜೋವಿಶೇಷದಿಂದ ದೇವತೆಗಳ ತೇಜಸ್ಸನ್ನು ಧಿಕ್ಕರಿಸು ವಂತಿತ್ತು (22-23). ಆ ಕುಮಾರನು ಅತ್ಯಂತ ಸುಂದರನಾಗಿದ್ದುದರಿಂದ ಬೃಹಸ್ಪತಿಗೂ ಚಂದ್ರನಿಗೂ ಆತನಲ್ಲಿ ಅಭಿಲಾಷೆಯುಂಟಾಯಿತು. ಅದನ್ನು ಕಂಡು ದೇವತೆಗಳಿಗೆ ಸಂದೇಹ ಹುಟ್ಟಿ ತಾರೆಯನ್ನು ಕುರಿತು "ಹೇ ಕಲ್ಯಾಣಿ, ಈ ಕುಮಾರನು ಚಂದ್ರನ ಪುತ್ರನೋ? ಬೃಹಸ್ಪತಿಯ ಪುತ್ರನೋ? ನಮಗೆ ಸತ್ಯವನ್ನು ಹೇಳು" ಎಂದು ಕೇಳಿದರು (24-25). ಈ ಪ್ರಶ್ನೆಗೆ ತಾರೆಯು ನಾಚಿಕೆಯಿಂದ ಏನೂ ಹೇಳಲಿಲ್ಲ. ದೇವತೆಗಳು ಬಹುವಿಧದಲ್ಲಿ ಕೇಳಿದರೂ ತಾರೆಯು ಯಾವಾಗ ಮಾತಾಡಲಿಲ್ಲವೋ ಆಗ ಬಾಲಕನು ಕೋಪದಿಂದ ಅವಳನ್ನು ಶಪಿಸಲು ಉದ್ಯುಕ್ತನಾಗಿ "ಅಮ್ಮ, ನೀನು ದುಷ್ಟೆ. ನನ್ನ ತಂದೆ ಯಾರೆಂಬುದನ್ನು ಏಕೆ ನೀನು ಹೇಳುವುದಿಲ್ಲ? ಸುಳ್ಳು ನಾಚಿಕೆಯನ್ನು ನಟಿಸುವ ನಿನಗೆ ಈಗಲೇ ಶಿಕ್ಷೆಯನ್ನು ವಿಧಿಸುತ್ತೇನೆ! ಈಗಲೂ (ವ್ಯಭಿಚಾರಿಣಿಯೆಂದು ಗೊತ್ತಾದ ಮೇಲೂ) ಈ ರೀತಿ ನಿನಗೆ ಮಾತು ಕಟ್ಟಿಹೋಗ§ಬಾರದು!"

---

* ಈ ಶಬ್ದವು ನಿಂದಾರ್ಥದಲ್ಲಿ ಬಂದಿದೆ.

§ 'ಅದ್ಯಾಪಿ...ಭವಿಷ್ಯಸೀತಿ'—ಎಂಬ ಸ್ಥಳದಲ್ಲಿ 'ಅನ್ಯಾಪಿ ಅತಿಮಂಥರವಚನಾ ಭವತೀತಿ' ಎಂದು ಪಾಠಾಂತರವಿದೆ. ಉಭಯ ಪಾಠಗಳಲ್ಲಿಯೂ ಅರ್ಥ ಸ್ಪಷ್ಟವಿಲ್ಲ.

**ತೇ ವ್ಯಲೀಕಲಜ್ಜಾವತ್ಯಾಸ್ತಥಾ ಶಾಸ್ತಿಮಹಂ ಕರೋಮಿ ॥ 29 ॥ ಯಥಾ ಚ ನೈವಮದ್ಯಾಪ್ಯತಿಮಂಥರವಚನಾ ಭವಿಷ್ಯಸೀತಿ ॥ 30 ॥ ಅಥ ಭಗವಾನ್ ಪಿತಾಮಹಃ ತಂ ಕುಮಾರಂ ಸನ್ನಿವಾರ್ಯ ಸ್ವಯಮಪೃಚ್ಛತ್ತಾಂ ತಾರಾಮ್ ॥ 31 ॥ ಕಥಯ ವತ್ಸೇ ಕಸ್ಯಾಯಮಾತ್ಮಜಃ ಸೋಮಸ್ಯ ವಾ ಬೃಹಸ್ಪತೇರ್ವಾ ಇತ್ಯುಕ್ತಾ ಲಜ್ಜಮಾನಾಹ ಸೋಮಸ್ಯೇತಿ ॥ 32 ॥ ತತಃ ಪ್ರಸ್ಫುರದುಚ್ಛ್ವಸಿತಾಮಲಕಪೋಲಕಾಂತಿರ್ಭಗವಾನುಡುಪತಿಃ ಕುಮಾರಮಾಲಿಂಗ್ಯ ಸಾಧು ಸಾಧು ವತ್ಸ ಪ್ರಾಜ್ಞೋಽಸೀತಿ ಬುಧ ಇತಿ ತಸ್ಯ ಚ ನಾಮ ಚಕ್ರೇ ॥ 33 ॥ ತದಾಖ್ಯಾತಮೇವೈತತ್ ಸ ಚ ಯಥೇಲಾಯಾಮಾತ್ಮಜಂ ಪುರೂರವಸಮುತ್ಪಾದಯಾಮಾಸ ॥ 34 ॥ ಪುರೂರವಾಸ್ತ್ವತಿದಾನಶೀಲೋಽತಿಯಜ್ವಾತಿತೇಜಸ್ವೀ, ಯಂ ಸತ್ಯವಾದಿನಮತಿರೂಪವಂತಂ ಮನಸ್ವಿನಂ ಮಿತ್ರಾವರುಣಶಾಪಾನ್ಮಾನುಷೇ ಲೋಕೇ ಮಯಾ ವಸ್ತವ್ಯಮಿತಿ ಕೃತಮತಿರುರ್ವಶೀ ದದರ್ಶ ॥ 35 ॥ ದೃಷ್ಟಮಾತ್ರೇ ಚ**

---

ಎಂದನು. ಆಗ ಭಗವಾನ್ ಪಿತಾಮಹನು ಬಾಲಕನನ್ನು ತಡೆದು, ತಾನೇ ತಾರೆಯನ್ನು ಕುರಿತು "ವತ್ಸೆ, ಮಾತಾಡು, ಈ ಕುಮಾರನು ಚಂದ್ರನ ಪುತ್ರನೋ? ಬೃಹಸ್ಪತಿಯ ಪುತ್ರನೋ? ಎಂದು ಕೇಳಿದನು. ಅವಳು ನಾಚಿಕೆಯಿಂದ "ಚಂದ್ರನ ಪುತ್ರ" ಎಂದಳು (26-32). ಅದನ್ನು ಕೇಳಿದೊಡನೆ ಚಂದ್ರನಿಗೆ ಆನಂದವಾಯಿತು. ಅವನ ನಿರ್ಮಲ ಕಪೋಲಗಳು ಮಿರುಗಿ ಉಲ್ಲಸಿತವಾದವು. ಆತನು ಬಾಲಕನನ್ನು ಆಲಂಗಿಸಿಕೊಂಡು "ಚೆನ್ನಾಯಿತು, ಮಗು, ಚೆನ್ನಾಯಿತು! ನೀನು ಪ್ರಾಜ್ಞ" ಎಂದು ನುಡಿದು ಬಾಲಕನಿಗೆ ಬುಧ* ಎಂದು ನಾಮಕರಣಮಾಡಿದನು (33). ಬುಧನಿಗೆ ಇಳೆಯಲ್ಲಿ ಪುರೂರವನೆಂಬ ಪುತ್ರನು ಹುಟ್ಟಿದನೆಂದು ಹಿಂದೆ ಹೇಳಿದ್ದಾಗಿದೆ.§ ಪುರೂರವನು ಅತ್ಯಂತ ದಾನಶೀಲನೂ ಯಜನಶೀಲನೂ ತೇಜಸ್ವಿಯೂ ಆಗಿದ್ದನು. ಅವನು ಸತ್ಯವಾದಿ; ಅತ್ಯಂತ ಸುಂದರ ಮತ್ತು ಬುದ್ಧಿವಂತ. ಒಮ್ಮೆ ಮಿತ್ರಾವರುಣರ ಶಾಪವಶದಿಂದ ಭೂಲೋಕದಲ್ಲಿ ವಾಸ ಮಾಡುವುದಕ್ಕಾಗಿ ಬಂದಿದ್ದ ಉರ್ವಶಿಯು ಪುರೂರವನನ್ನು ನೋಡಿದಳು (34-35). ಆತನನ್ನು ನೋಡಿದೊಡನೆ ಉರ್ವಶಿಯು ತನ್ನ

---

* ಬುಧ = ಪ್ರಾಜ್ಞ, ಬುದ್ಧಿಶಾಲಿ. § ನೋಡಿ 4-1-12.

**ತಸ್ಮಿನ್ನಪಹಾಯ ಮಾನಮಶೇಷಮಪಾಸ್ಯ ಸ್ವರ್ಗಸುಖಾಭಿಲಾಷಂ ತನ್ಮನಸ್ಕಾ ಭೂತ್ವಾ ತಮೇವೋಪತಸ್ಥೇ ॥ 36 ॥ ಸೋಽಪಿ ಚ ತಾಮತಿ-ಶಯಿತಸಕಲಲೋಕಸ್ತ್ರೀಕಾನ್ತಿಸೌಕುಮಾರ್ಯಲಾವಣ್ಯಗತಿವಿಲಾಸಹಾಸಾದಿ ಗುಣಾಮವಲೋಕ್ಯ ತದಾಯತ್ತಚಿತ್ತವೃತ್ತಿರ್ಬಭೂವ ॥ 37 ॥ ಉಭಯ-ಮಪಿ ತನ್ಮನಸ್ಕಮನನ್ಯದೃಷ್ಟಿ ಪರಿತ್ಯಕ್ತಸಮಸ್ತಾನ್ಯಪ್ರಯೋಜನಮಭೂತ್ ॥ 38 ॥ ರಾಜಾ ತು ಪ್ರಾಗಲ್ಭ್ಯಾತ್ತಾಮಾಹ ॥ 39 ॥ ಸುಭ್ರು ತ್ವಾಮಹ-ಮಭಿಕಾಮೋಽಸ್ಮಿ ಪ್ರಸೀದಾನುರಾಗಮುದ್ವಹೇತ್ಯುಕ್ತಾ ಲಜ್ಜಾವಖಂಡಿತ-ಮುರ್ವಶೀ ತಂ ಪ್ರಾಹ ॥ 40 ॥ ಭವತ್ವೇವಂ ಯದಿ ಮೇ ಸಮಯ-ಪರಿಪಾಲನಂ ಭವಾನ್ ಕರೋತೀತ್ಯಾಖ್ಯಾತೇ ಪುನರಪಿ ತಾಮಾಹ ॥ 41 ॥ ಆಖ್ಯಾಹಿ ಮೇ ಸಮಯಮಿತಿ ॥ 42 ॥ ಅಥ ಪೃಷ್ಟಾ ಪುನರಪ್ಯಬ್ರವೀತ್ ॥ 43 ॥ ಶಯನಸಮೀಪೇ ಮಮೋರಣಕದ್ವಯಂ ಪುತ್ರಭೂತಂ ನಾಪ-ನೇಯಮ್ ॥ 44 ॥ ಭವಾಂಶ್ಚ ಮಯಾ ನ ನಗ್ನೋ ದ್ರಷ್ಟವ್ಯಃ ॥ 45 ॥**

---

ಎಲ್ಲ ಅಭಿಮಾನವನ್ನು ತೊರೆದು, ಸ್ವರ್ಗಸುಖದ ಅಭಿಲಾಷೆಯನ್ನು ಬದಿಗೊತ್ತಿ ಅವನಲ್ಲಿಯೇ ಮನಸ್ಸು ನೆಟ್ಟವಳಾಗಿ ಅವನ ಬಳಿಗೆ ಹೋದಳು (36). ಉರ್ವಶಿಯೇನು ಸಾಮಾನ್ಯಳೇ? ಕಾಂತಿ, ಸೌಕುಮಾರ್ಯ, ಲಾವಣ್ಯ, ನಡಿಗೆ, ಮುಗುಳ್ನಗೆ ಮೊದಲಾದವುಗಳಲ್ಲಿ ಸಕಲ ಲೋಕದ ಸ್ತ್ರೀಯರನ್ನೂ ಮೀರಿಸಿದ ರೂಪವತಿ. ಅವಳನ್ನು ನೋಡಿ ಪುರೂರವನ ಮನಸ್ಸು ಅವಳಿಗೆ ವಶವಾಯಿತು (37). ಉಭಯರೂ ಅನ್ಯೋನ್ಯವಶೀಕೃತಚಿತ್ತರಾಗಿ ಎಲ್ಲ ಕೆಲಸವನ್ನೂ ಬಿಟ್ಟು ಒಬ್ಬರನ್ನೊಬ್ಬರು ನೋಡತೊಡಗಿದರು! ರಾಜನು ಧೈರ್ಯವನ್ನು ತಂದುಕೊಂಡು "ಸುಂದರಿ, ನಾನು ನಿನ್ನನ್ನು ಬಯಸುತ್ತೇನೆ. ಪ್ರಸನ್ನಳಾಗು. ನನ್ನ ಪ್ರೇಮವನ್ನು ಸ್ವೀಕರಿಸು" ಎಂದನು. ಉರ್ವಶಿಯು ನಾಚುತ್ತ ಮೆಲ್ಲಗೆ "ಆಗಲಿ ನನ್ನ ನಿಯಮವನ್ನು ಪಾಲಿಸುವುದಾದರೆ" ಎಂದಳು (38-41). ಪುರೂರವನು "ಅದಾವ ನಿಯಮ? ಹೇಳು" ಎನ್ನಲಾಗಿ ಉರ್ವಶಿಯು "ನನ್ನ ಮಕ್ಕಳಂತಿರುವ ಈ ಎರಡು ಕುರಿಮರಿಗಳು ಶಯನ ಸಮೀಪದಲ್ಲಿರುತ್ತವೆ. ಇವನ್ನೂ ದೂರೀ ಕರಿಸಬಾರದು! ಬತ್ತಲೆಯಾಗಿ ನೀನು ನನಗೆ ಕಾಣಿಸಿಕೊಳ್ಳಬಾರದು! ತುಪ್ಪವು ಮಾತ್ರವೇ ನನ್ನ ಆಹಾರವಾಗಿರುವುದು. ಇದಿಷ್ಟು ನನ್ನ ನಿಯಮ" ಎಂದಳು.

**ಘೃತಮಾತ್ರಂ ಚ ಮಮಾಹಾರ ಇತಿ ॥ 46 ॥ ಏವಮೇವೇತಿ ಭೂಪತಿರಪ್ಯಾಹ ॥ 47 ॥ ತಯಾ ಸಹ ಸ ಚಾವನಿಪತಿರಲಕಾಯಾಂ ಚೈತ್ರರಥಾದಿವನೇಷ್ವಮಲಪದ್ಮಕಂಡೇಷು ಮಾನಸಾದಿಸರಸ್ಸ್ವತಿರಮಣೀಯೇಷು ರಮಮಾಣಃ ಷಷ್ಟಿವರ್ಷಸಹಸ್ರಾಣ್ಯನುದಿನಪ್ರವರ್ಧಮಾನಪ್ರಮೋದೋಽನಯತ್ ॥ 48 ॥ ಉರ್ವಶೀ ಚ ತದುಪಭೋಗಾತ್ಪ್ರತಿದಿನ ಪ್ರವರ್ಧಮಾನಾನುರಾಗಾ ಅಮರಲೋಕವಾಸೇಽಪಿ ನ ಸ್ಪೃಹಾಂ ಚಕಾರ ॥ 49 ॥ ವಿನಾ ಚೋರ್ವಶ್ಯಾ ಸುರಲೋಕೋಽಪ್ಸರಸಾಂ ಸಿದ್ಧಗಂಧರ್ವಾಣಾಂ ಚ ನಾತಿ ರಮಣೀಯೋಽಭವತ್ ॥ 50 ॥ ತತಶ್ಚೋರ್ವಶೀಪುರೂರವಸೋಸ್ಸಮಯವಿದ್ವಿಶ್ವಾವಸುರ್ಗಂಧರ್ವಸಮವೇತೋ ನಿಶಿ ಶಯನಾಭ್ಯಾಶಾದೇಕಮುರಣಕಂ ಜಹಾರ ॥ 51 ॥ ತಸ್ಯಾಕಾಶೇ ನೀಯಮಾನಸ್ಯೋರ್ವಶೀ ಶಬ್ದಮಶೃಣೋತ್ ॥ 52 ॥ ಏವಮುವಾಚ ಚ ಮಮ ಅನಾಥಾಯಾಃ ಪುತ್ರಃ ಕೇನಾಪಹ್ರಿಯತೇ ಕಂ ಶರಣಮುಪಯಾಮೀತಿ**

---

ರಾಜನು "ಹಾಗೆಯೇ ಆಗಲಿ" ಎಂದನು (42-47). ಅನಂತರ ಪುರೂರವನು ಉರ್ವಶಿಯೊಡನೆ ಅಲಕಾನಗರದ ಅತಿರಮಣೀಯವಾದ ಚೈತ್ರರಥಾದಿ ಪುಷ್ಪ ವನಗಳಲ್ಲಿಯೂ ಅರಳಿದ ತಾವರೆಗಳಿರುವ ಮಾನಸಾದಿಸರಸ್ಸುಗಳಲ್ಲಿಯೂ ವಿಹರಿಸುತ್ತ , ಅನುದಿನವೂ ಅಧಿಕವಾಗುತ್ತಿದ್ದ ಆನಂದದಿಂದ ಅರವತ್ತು ಸಾವಿರ ವರ್ಷಗಳನ್ನು ಕಳೆದನು (48). ಉರ್ವಶಿಗೂ ಆತನ ಉಪಭೋಗದಿಂದ ಪ್ರತಿದಿನವೂ ಅನುರಾಗವು ವರ್ಧಿಸುತ್ತಿರಲಾಗಿ ಸ್ವರ್ಗಲೋಕವಾಸದಲ್ಲಿಯೂ ಇಚ್ಛೆಯಾಗಲಿಲ್ಲ (49). ಅತ್ತಲಾಗಿ ಅಪ್ಸರಸ್ತ್ರೀಯರಿಗೂ ಸಿದ್ಧ ಗಂಧರ್ವರಿಗೂ ಉರ್ವಶಿಯಿಲ್ಲದ್ದರಿಂದ, ಸ್ವರ್ಗಲೋಕವು ರಮಣೀಯವೆನಿಸಲಿಲ್ಲ! ವಿಶ್ವಾವಸು ಎಂಬ ಗಂಧರ್ವನಿಗೆ ಉರ್ವಶಿ-ಪುರೂರವರ ನಡುವೆ ಗೊತ್ತಾಗಿದ್ದ ನಿಯಮ ತಿಳಿದಿತ್ತು. ಆತನು ಗಂಧರ್ವರೊಡನೆ ಒಂದು ರಾತ್ರಿ ಬಂದು ಪುರೂರವನ ಶಯನದ ಬಳಿಯಿದ್ದ ಕುರಿಮರಿಗಳಲ್ಲೊಂದನ್ನು ಅಪಹರಿಸಿದನು (50-51). ಆಕಾಶದಲ್ಲಿ ಎಳೆದೊಯ್ಯುತ್ತಿರುವಾಗ ಆ ಕುರಿಮರಿ ಕಿರಿಚಿತು. ಆ ಶಬ್ದ ಉರ್ವಶಿಗೆ ಕೇಳಿಸಿತು. ಅವಳು 'ಅಯ್ಯೋ, ನಾನು ಅನಾಥೆ. ನನ್ನ ಮಗುವನ್ನು ಯಾವನೋ ಒಯ್ಯುತ್ತಿದ್ದಾನೆ. ಯಾರಿಗೆ ಶರಣಾಗಲಿ!" ಎಂದು ಕೂಗಿ

॥53॥ ತದಾಕರ್ಣ್ಯ ರಾಜಾ ಮಾಂ ನಗ್ನಂ ದೇವೀ ವೀಕ್ಷ್ಯತೀತಿ ನ ಯಯೌ ॥ 54 ॥ ಅಥಾನ್ಯಮಪ್ಯುರಣಕಮಾದಾಯ ಗಂಧರ್ವಾ ಯಯುಃ ॥ 55 ॥ ತಸ್ಯಾಪ್ಯಪಹ್ರಿಯಮಾಣಸ್ಯಾಕರ್ಣ್ಯ ಶಬ್ದಮಾಕಾಶೇ ಪುನರಪ್ಯನಾಥಾಸ್ಮ್ಯಹಮಭರ್ತೃಕಾ ಕಾಪುರುಷಾಶ್ರಯೇತ್ಯಾರ್ತರಾವಿಣೀ ಬಭೂವ ॥ 56 ॥ ರಾಜಾಪ್ಯಮರ್ಷವಶಾದಂಧಕಾರಮೇತದಿತಿ ಖಡ್ಗಮಾದಾಯ ದುಷ್ಟ ದುಷ್ಟಹತೋಽಸೀತಿ ವ್ಯಾಹರನ್ನಭ್ಯಧಾವತ್ ॥ 57 ॥ ತಾವಚ್ಚ ಗಂಧರ್ವೈರಪ್ಯತೀವೋಜ್ಜ್ವಲಾ ವಿದ್ಯುಜ್ಜನಿತಾ ॥ 58 ॥ ತತ್ಪ್ರಭಯಾ ಚೋರ್ವಶೀ ರಾಜಾನಮಪಗತಾಂಬರಂ ದೃಷ್ಟ್ವಾಪವೃತ್ತಸಮಯಾ ತತ್ಕ್ಷಣಾದೇವಾಪಕ್ರಾಂತಾ ॥ 59 ॥ ಪರಿತ್ಯಜ್ಯ ತಾವಪ್ಯುರಣಕೌ ಗಂಧರ್ವಾಸ್ಸುರಲೋಕಮುಪಾಗತಾಃ ॥ 60 ॥ ರಾಜಾಪಿ ಚ ತೌ ಮೇಷಾವಾದಾಯಾತಿಹೃಷ್ಟಮನಾಃ ಸ್ವಶಯನಮಾಯಾತೋ ನೋರ್ವಶೀಂ ದದರ್ಶ ॥ 61 ॥ ತಾಂ

---

ಕೊಂಡಳು (52-53). ಅದು ಕೇಳಿದರೂ ರಾಜನು ಕುರಿಮರಿಯ ರಕ್ಷಣೆಗೆ ಧಾವಿಸಲಿಲ್ಲ. ತಾನು ಬತ್ತಲೆಯಾಗಿರುವುದನ್ನು ಉರ್ವಶಿಯು ನೋಡಿ ಬಿಟ್ಟಾಳೆಂದು ಎಣಿಸಿದನು. ಸ್ವಲ್ಪ ಹೊತ್ತಿನಲ್ಲಿ ಗಂಧರ್ವರು ಮತ್ತೊಂದು ಕುರಿ ಮರಿಯನ್ನೂ ಹಾರಿಸಿಕೊಂಡು ಹೋದರು (54-55). ಎಳೆದೊಯ್ಯುವಾಗ ಅದೂ ಸಹ ಆಕಾಶದಲ್ಲಿ ಕಿರಿಚಿಕೊಳ್ಳಲು, ಮತ್ತೆ ಉರ್ವಶಿ 'ಹಾ! ಅನಾಥೆ ನಾನು! ನೋಡಿಕೊಳ್ಳುವ ಪತಿ ಇಲ್ಲ. ಒಬ್ಬ ಹೇಡಿಯನ್ನು ಆಶ್ರಯಿಸಿಕೊಂಡಿದ್ದೇನೆ!' ಎಂದು ಆರ್ತಧ್ವನಿಯಲ್ಲಿ ಕೂಗಿಕೊಂಡಳು (56). ರಾಜನು ಕ್ರುದ್ಧನಾಗಿ ಧಿಗ್ಗನೆ ಮೇಲೆದ್ದು 'ಕತ್ತಲಾಗಿದೆ (ಉರ್ವಶಿಗೆ ನಾನು ಕಾಣಿಸುವುದಿಲ್ಲ)' ಎಂದುಕೊಂಡು ಖಡ್ಗವನ್ನು ಸೆಳೆದು 'ಅರೇ ದುಷ್ಟ, ಕೇಡಿ, ಸತ್ತೆ ನೀನು!' ಎನ್ನುತ್ತ ಧಾವಿಸಿದನು. ಅಷ್ಟರಲ್ಲಿ ಗಂಧರ್ವರು ಉಜ್ಜ್ವಲ ಕಾಂತಿಯುಳ್ಳ ಮಿಂಚನ್ನು ಮಿಂಚಿಸಿದರು! ಮಿಂಚಿನ ಪ್ರಭೆಯಲ್ಲಿ ಉರ್ವಶಿಯು ಬತ್ತಲೆಯಾಗಿದ್ದ ರಾಜನನ್ನು ಕಂಡಳು. ತನ್ನ ನಿಯಮವು ಮುರಿಯಿತೆಂದು ಒಡನೆಯೇ ಅವಳು ಅಲ್ಲಿಂದ ಹೊರಟುಹೋದಳು (57-59). ಇತ್ತ ಗಂಧರ್ವರು ಎರಡು ಕುರಿಮರಿಗಳನ್ನೂ ಪರಿತ್ಯಜಿಸಿ ಸುರಲೋಕಕ್ಕೆ ಹಿಂದಿರುಗಿದರು. ರಾಜಾ ಪುರೂರವನು ಆ ಕುರಿಗಳನ್ನು ಹಿಡಿದುಕೊಂಡು ಅತ್ಯಾನಂದದಿಂದ ತನ್ನ ಶಯನ ಸ್ಥಳಕ್ಕೆ ಬಂದನು.

**ಚಾಪಶ್ಯನ್ ವ್ಯಪಗತಾಂಬರ ಏವೋನ್ಮತ್ತರೂಪೋ ಬಭ್ರಾಮ ॥ 62 ॥ ಕುರುಕ್ಷೇತ್ರೇ ಚಾಂಭೋಜಸರಸ್ಯನ್ಯಾಭಿಶ್ಚತಸೃಭಿರಪ್ಸರೋಭಿಸ್ಸಮವೇತಾ-ಮುರ್ವಶೀಂ ದದರ್ಶ ॥ 63 ॥ ತತಶ್ಚೋನ್ಮತ್ತರೂಪೋ ಜಾಯೇ ಹೇ ತಿಷ್ಠ ಮನಸಿ ಘೋರೇ ತಿಷ್ಠ ವಚಸಿ ಕಪಟಿಕೇ ತಿಷ್ಠೇತ್ಯೇವಮನೇಕ-ಪ್ರಕಾರಂ ಸೂಕ್ತಮವೋಚತ್ ॥ 64 ॥ ಆಹ ಚೋರ್ವಶೀ ॥ 65 ॥ ಮಹಾರಾಜ, ಅಲಮನೇನಾವಿವೇಕಚೇಷ್ಟಿತೇನ ॥ 66 ॥ ಅಂತರ್ವತ್ನ್ಯಹ-ಮಬ್ದಾಂತೇ ಭವತಾऽತ್ರಾಗಂತವ್ಯಂ ಕುಮಾರಸ್ತೇ ಭವಿಷ್ಯತಿ ಏಕಾಂ ಚ ನಿಶಾಮಹಂ ತ್ವಯಾ ಸಹ ವತ್ಸ್ಯಾಮೀತ್ಯುಕ್ತಃ ಪ್ರಹೃಷ್ಟಸ್ಸ್ವಪುರಂ ಜಗಾಮ ॥ 67 ॥ ತಾಸಾಂ ಚಾಪ್ಸರಸಾಮುರ್ವಶೀ ಕಥಯಾಮಾಸ ॥ 68 ॥ ಅಯಂ ಸ ಪುರುಷೋತ್ಕೃಷ್ಟೋ ಯೇನಾಹಮೇತಾವಂತಂ ಕಾಲಮನು-**

---

ಉರ್ವಶಿ ಕಾಣಿಸಲಿಲ್ಲ. ಅವಳನ್ನು ಕಾಣದೆ ಹುಚ್ಚುಹಿಡಿದಂತಾಗಿ ವಸ್ತ್ರಹೀನ ನಾಗಿಯೇ ಅಲೆಯತೊಡಗಿದನು (60-62). ಅಲೆಯುತ್ತ ಕುರುಕ್ಷೇತ್ರದಲ್ಲೊಮ್ಮೆ ಕಮಲಸರೋವರದಲ್ಲಿ ಬೇರೆ ನಾಲ್ವರು ಅಪ್ಸರೆಯರೊಡನೆ ಇದ್ದ ಉರ್ವಶಿ ಯನ್ನು ಕಂಡನು. ಕಂಡೊಡನೆ ಹುಚ್ಚಿದ್ದು "ಓ ನನ್ನ ಭಾರ್ಯೆ, ನಿಲ್ಲು , ಘೋರ ಮನಸ್ಸಿನವಳೆ ನಿಲ್ಲು , ಕೊಂಕುಮಾತಿನವಳೆ ನಿಲ್ಲು"—ಎಂದು ಅನೇಕ ಪ್ರಕಾರದ ಸೂಕ್ತವನ್ನು ನುಡಿದನು* (63-64). ಆಗ ಉರ್ವಶಿಯು "ಮಹಾ ರಾಜ, ಈ ಅವಿವೇಕದ ಚೇಷ್ಟೆಯನ್ನು ಬಿಡು. ನಾನು ಗರ್ಭಿಣಿಯಾಗಿದ್ದೇನೆ. ಇನ್ನು ಒಂದು ವರ್ಷದ ಮೇಲೆ ಈ ಸ್ಥಳಕ್ಕೆ ಬಾ. ನಿನಗೆ ಒಬ್ಬ ಪುತ್ರನು ದೊರಕುವನು. ಒಂದು ರಾತ್ರಿಮಾತ್ರ ನಿನ್ನೊಡನೆ ನಾನಿರುವೆನು" ಎಂದಳು. ರಾಜನು ಸಂತುಷ್ಟನಾಗಿ ತನ್ನ ನಗರಕ್ಕೆ ಹಿಂದಿರುಗಿದನು (65-67). ಉರ್ವಶಿಯು ತನ್ನೊಡನಿದ್ದ ಅಪ್ಸರೆಯರಿಗೆ "ಈತನೇ ಆ ಪುರುಷೋತ್ತಮ. ಈತನಲ್ಲಿಯೇ ನಾನು ಅನುರಕ್ತಚಿತ್ತಳಾಗಿ ಇಷ್ಟುಕಾಲದವರೆಗೆ ಇದ್ದೆನು" ಎಂದಳು. ಅದಕ್ಕೆ

---

* ಉರ್ವಶೀ ಪುರೂರವರ ಕಥೆ ಋಗ್ವೇದದಲ್ಲಿ ಬಂದಿದೆ. ವಿಷ್ಣುಪುರಾಣದಲ್ಲಿರುವ 'ಸೂಕ್ತ' ಶಬ್ದದಿಂದ 'ಹೇ ಜಾಯೇ ಮನಸಾ ತಿಷ್ಠ....' ಇತ್ಯಾದಿ ಹದಿನೆಂಟು ಸೂಕ್ತಗಳು ಸೂಚಿತವಾಗುತ್ತವೆ. ಈ ಕಥೆ ಮಹಾಭಾರತದಲ್ಲಿಯೂ ಭಾಗವತ, ವಾಯು, ಮತ್ಸ್ಯ, ಪದ್ಮಪುರಾಣಗಳಲ್ಲಿಯೂ ಇದೆ. ಕಾಳಿದಾಸನ ವಿಕ್ರಮೋರ್ವಶೀಯ ನಾಟಕಕ್ಕೆ ಇದು ಕಥಾವಸ್ತುವಾಗಿದೆ. ಕಥೆಯಲ್ಲಿ ಬದಲಾವಣೆಯುಂಟು.

**ರಾಗಾಕೃಷ್ಟಮಾನಸಾ ಸಹೋಷಿತೇತಿ ॥ 69 ॥ ಏವಮುಕ್ತಾಸ್ತಾಶ್ಚಾಪ್ಸರಸ ಊಚುಃ ॥ 70 ॥ ಸಾಧು ಸಾಧ್ವಸ್ಯ ರೂಪಮಪ್ಯನೇನ ಸಹಾಸ್ಮಾಕಮಪಿ ಸರ್ವಕಾಲಮಾಸ್ಯಾ ಭವೇದಿತಿ ॥ 71 ॥ ಅಬ್ದೇ ಚ ಪೂರ್ಣೇ ಸ ರಾಜಾ ತತ್ರಾಜಗಾಮ ॥ 72 ॥ ಕುಮಾರಂ ಚಾಯುಷಮಸ್ಮೈ ಚೋರ್ವಶೀ ದದೌ ॥ 73 ॥ ದತ್ತ್ವಾ ಚೈಕಾಂ ನಿಶಾಂ ತೇನ ರಾಜ್ಞಾ ಸಹೋಷಿತ್ವಾ ಪಂಚಪುತ್ರೋತ್ಪತ್ತಯೇ ಗರ್ಭಮವಾಪ ॥ 74 ॥ ಉವಾಚೈನಂ ರಾಜಾನ-ಮಸ್ಮತ್ಪ್ರೀತ್ಯಾ ಮಹಾರಾಜಾಯ ಸರ್ವ ಏವ ಗಂಧರ್ವಾ ವರದಾಸ್ಸಂವೃತ್ತಾ ವ್ರಿಯತಾಂ ಚ ವರ ಇತಿ ॥ 75 ॥ ಆಹ ಚ ರಾಜಾ ॥ 76 ॥ ವಿಜಿತ-ಸಕಲಾರಾತಿರವಿಹತೇಂದ್ರಿಯಸಾಮರ್ಥ್ಯೋ ಬಂಧುಮಾನಮಿತಬಲ-ಕೋಶೋಽಸ್ಮಿ ನಾನ್ಯದಸ್ಮಾಕಮುರ್ವಶೀಸಾಲೋಕ್ಯಾತ್ಪ್ರಾಪ್ತವ್ಯಮಸ್ತಿ ತದ-ಹಮನಯಾ ಸಹೋರ್ವಶ್ಯಾ ಕಾಲಂ ನೇತುಮಭಿಲಷಾಮೀತ್ಯುಕ್ತೇ ಗಂಧರ್ವಾ ರಾಜ್ಞೇಽಗ್ನಿಸ್ಥಾಲೀಂ ದದುಃ ॥ 77 ॥ ಊಚುಶ್ಚೈನಮಗ್ನಿ-ಮಾಮ್ನಾಯಾನುಸಾರೀ ಭೂತ್ವಾ ತ್ರಿಧಾಕೃತ್ವೋರ್ವಶೀಸಲೋಕತಾ-**

---

ಅಪ್ಸರೆಯರು "ಭಲೆ, ಇವನ ರೂಪ ಬಹುಸುಂದರವಾಗಿದೆ. ಸರ್ವದಾ ಇವನೊಡನೆ ಇರಬೇಕೆಂದು ನಮಗೂ ಮನಸ್ಸಾಗುತ್ತದೆ!" ಎಂದರು (68-71). ವರ್ಷವು ಕಳೆಯಲಾಗಿ ರಾಜಾ ಪುರೂರವನು ಆ ಸ್ಥಳಕ್ಕೆ ಬಂದನು. ಊರ್ವಶಿಯು 'ಆಯು' ಎಂಬ ಹೆಸರಿನ ಕುಮಾರನನ್ನು ಅವನಿಗೆ ಒಪ್ಪಿಸಿದಳು. ಒಂದು ರಾತ್ರಿ ಪುರೂರವನೊಡನೆ ಇದ್ದು ಐದು ಮಕ್ಕಳು ಹುಟ್ಟುವಂತಹ ಗರ್ಭವನ್ನು ಧರಿಸಿದಳು. ರಾಜನನ್ನು ಕುರಿತು ಪ್ರೀತಿಯಿಂದ "ಮಹಾರಾಜ, ಎಲ್ಲ ಗಂಧರ್ವರೂ ನಿನಗೆ ವರವನ್ನು ಕೊಡಲು ಮುಂದೆ ಬಂದಿದ್ದಾರೆ. ವರವನ್ನು ಕೇಳಿಕೊ" ಎಂದಳು (72-75). ಅದಕ್ಕೆ ರಾಜನು "ನಾನು ಸಕಲ ವೈರಿಗಳನ್ನೂ ಜಯಿಸಿದ್ದೇನೆ. ನನ್ನ ಎಲ್ಲ ಇಂದ್ರಿಯಗಳೂ ಸಮರ್ಥವಾಗಿವೆ. ನನಗೆ ಬಂಧುಗಳಿದ್ದಾರೆ; ಅಪರಿಮಿತವಾದ ಸೇನೆ ಇದೆ; ಭಂಡಾರವಿದೆ. ನನಗೆ ಊರ್ವಶೀ ಸಹವಾಸಕ್ಕಿಂತ ಬೇರೆ ಬೇಕಾದದ್ದು ಯಾವುದೂ ಇಲ್ಲ. ಆದ್ದರಿಂದ ನಾನು ಊರ್ವಶಿಯೊಡನೆ ಕಾಲವನ್ನು ಕಳೆಯಲು ಬಯಸುತ್ತೇನೆ!" ಎಂದು ಹೇಳಿದನು (76-77). ಗಂಧರ್ವರು ಪುರೂರವನಿಗೆ ಅಗ್ನಿಯಿರುವ ಸ್ಥಾಲಿಯನ್ನು ಕೊಟ್ಟು 'ಈ

**ಮನೋರಥಮುದ್ದಿಶ್ಯ ಸಮ್ಯಗ್ಯಜೇಥಾಃ ತತೋಽವಶ್ಯಮಭಿಲಷಿತ-ಮವಾಪ್ಸ್ಯಸೀತ್ಯುಕ್ತಸ್ತಾಮಗ್ನಿಸ್ಥಾಲೀಮಾದಾಯ ಜಗಾಮ ॥ 78 ॥ ಅಂತ-ರಟವ್ಯಾಮಚಿಂತಯತ್ ಅಹೋ ಮೇಽತೀವ ಮೂಢತಾ ಕಿಮಹ-ಮಕರವಮ್ ॥ 79 ॥ ವಹ್ನಿಸ್ಥಾಲೀ ಮಯ್ಯೈಷಾನೀತಾ ನೋರ್ವಶೀತಿ ॥ 80 ॥ ಅಥೈನಾಮಟವ್ಯಾಮೇವಾಗ್ನಿಸ್ಥಾಲೀಂ ತತ್ಯಾಜ ಸ್ವಪುರಂ ಚ ಜಗಾಮ ॥ 81 ॥ ವ್ಯತೀತೇಽರ್ಧರಾತ್ರೇ ವಿನಿದ್ರಶ್ಚಾಚಿಂತಯತ್ ॥ 82 ॥ ಮಮೋರ್ವಶೀಸಾಲೋಕ್ಯಪ್ರಾಪ್ತ್ಯರ್ಥಮಗ್ನಿಸ್ಥಾಲೀ ಗಂಧರ್ವೈರ್ದತ್ತಾ ಸಾ ಚ ಮಯಾಟವ್ಯಾಂ ಪರಿತ್ಯಕ್ತಾ ॥ 83 ॥ ತದಹಂ ತತ್ರ ತದಾಹರಣಾಯ ಯಾಸ್ಯಾಮೀತ್ಯುತ್ಥಾಯ ತತ್ರಾಪ್ಯುಪಗತೋ ನಾಗ್ನಿಸ್ಥಾಲೀಮಪಶ್ಯತ್ ॥ 84 ॥**

---

ಅಗ್ನಿಯನ್ನು ವೈದಿಕ ವಿಧಿಯಂತೆ ಮೂರು* ವಿಭಾಗ ಮಾಡು. ಉರ್ವಶಿಯ ಸಾಲೋಕ್ಯ ಬರಲೆಂಬ ಮನೋರಥವನ್ನಿಟ್ಟುಕೊಂಡು ಕ್ರಮಬದ್ಧವಾಗಿ ಯಾಗ ಮಾಡು. ಹಾಗಾದರೆ ಅವಶ್ಯವಾಗಿ ನಿನ್ನ ಅಭಿಲಾಷೆ ಕೈಗೂಡುವುದು' ಎಂದು ನುಡಿದರು. ರಾಜನು ಆ ಅಗ್ನಿಸ್ಥಾಲಿಯನ್ನು ತೆಗೆದುಕೊಂಡು ಹೊರಟನು (78). ದಾರಿಯಲ್ಲಿ ಒಂದು ಅಡವಿಯ ನಡುವೆ "ಅಯ್ಯೊ, ಎಂತಹ ಮೌಢ್ಯ ನನ್ನದು! ಏನು ಮಾಡಿಬಿಟ್ಟೆ! ಉರ್ವಶಿಯನ್ನು ಬಿಟ್ಟು ಅಗ್ನಿಸ್ಥಾಲಿಯನ್ನು ತಂದೆನಲ್ಲ!" ಎಂದು ಚಿಂತಿಸಿ, ಅಗ್ನಿಸ್ಥಾಲಿಯನ್ನು ಅಲ್ಲಿಯೇ § ಬಿಟ್ಟು ತನ್ನ ರಾಜಧಾನಿಗೆ ಹೋದನು (79-80). ನಿದ್ರೆಯಿಲ್ಲದೆ ಅರ್ಧರಾತ್ರಿಯು ಕಳೆಯಲಾಗಿ ಮತ್ತೊಂದು ಚಿಂತೆ ಹುಟ್ಟಿತು. "ಉರ್ವಶಿಯ ಸಾಲೋಕ್ಯವು ಪ್ರಾಪ್ತವಾಗಲೆಂದು ಗಂಧರ್ವರು ಅಗ್ನಿಸ್ಥಾಲಿಯನ್ನು ನನಗೆ ಕೊಟ್ಟಿದ್ದರು. ಅದನ್ನು ಅಡವಿಯಲ್ಲಿ ಬಿಟ್ಟು ಬಂದೆನು! ಅದನ್ನು ತರುವುದಕ್ಕಾಗಿ ಅಲ್ಲಿಗೆ ಹೋಗುವೆನು!" ಎಂದು ಆಲೋಚಿಸಿ ಮತ್ತೆ ಅಡವಿಗೆ ಹೊರಟನು. ಅಲ್ಲಿ ಅಗ್ನಿಸ್ಥಾಲಿ ಕಾಣಲಿಲ್ಲ (81-84).

---

* ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ.

§ ಜೊತೆಗೆ ಉರ್ವಶಿ ಬಂದಿದ್ದಾಳೆಂಬ ಬುದ್ಧಿವ್ಯಾಮೋಹ ಅವನಿಗೆ ಉಂಟಾಗಿತ್ತು ಎಂದು ಅಭಿಪ್ರಾಯ.

**ಶಮೀಗರ್ಭಂ ಚಾಶ್ವತ್ಥಮಗ್ನಿಸ್ಥಾಲೀಸ್ಥಾನೇ ದೃಷ್ಟ್ವಾಽಚಿಂತಯತ್ ॥ 85 ॥ ಮಯಾತ್ರಾಗ್ನಿಸ್ಥಾಲೀ ನಿಕ್ಷಿಪ್ತಾ ಸಾ ಚಾಶ್ವತ್ಥಶ್ಶಮೀಗರ್ಭೋಽಭೂತ್ ॥ 86 ॥ ತದೇನಮೇವಾಹಮಗ್ನಿರೂಪಮಾದಾಯ ಸ್ವಪುರಮಭಿಗಮ್ಯಾ-ರಣಿಂ ಕೃತ್ವಾ ತದುತ್ಪನ್ನಾಗ್ನೇರುಪಾಸ್ತಿಂ ಕರಿಷ್ಯಾಮೀತಿ ॥ 87 ॥ ಏವಮೇವ ಸ್ವಪುರಮಭಿಗಮ್ಯಾರಣಿಂ ಚಕಾರ ॥ 88 ॥ ತತ್ಪ್ರಮಾಣಂ ಚಾಂಗುಲೈಃ ಕುರ್ವನ್ ಗಾಯತ್ರೀಮಪಠತ್ ॥ 89 ॥ ಪಠತಶ್ಚಾಕ್ಷರಸಂಖ್ಯಾನ್ಯೇವಾಂ-ಗುಲಾನ್ಯರಣ್ಯಭವತ್ ॥ 90 ॥ ತತ್ರಾಗ್ನಿಂ ನಿರ್ಮಥ್ಯಾಗ್ನಿತ್ರಯಮಾಮ್ನಾ-ಯಾನುಸಾರೀ ಭೂತ್ವಾ ಜುಹಾವ ॥ 91 ॥ ಉರ್ವಶೀಸಾಲೋಕ್ಯಂ ಫಲ-ಮಭಿಸಂಹಿತವಾನ್ ॥ 92 ॥ ತೇನೈವ ಚಾಗ್ನಿವಿಧಿನಾ ಬಹುವಿಧಾನ್**

---

ಅಗ್ನಿಸ್ಥಾಲಿಯನ್ನು ಬಿಟ್ಟಿದ್ದ ಸ್ಥಳದಲ್ಲಿ ಶಮೀಸಹಿತವಾದ ಅಶ್ವತ್ಥದ ಗಿಡವಿರುವುದನ್ನು ಕಂಡು ಪುರೂರವನು "ಇಲ್ಲಿ ನಾನು ಅಗ್ನಿಸ್ಥಾಲಿಯನ್ನಿಟ್ಟಿದ್ದೆ. ಅದೀಗ ಶಮೀಸಹಿತವಾದ ಅಶ್ವತ್ಥವಾಗಿದೆ! ಅಗ್ನಿರೂಪವಾದ ಇದನ್ನೇ ತೆಗೆದುಕೊಂಡು ನನ್ನ ಪಟ್ಟಣಕ್ಕೆ ಹೋಗಿ ಅರಣಿಯನ್ನು ಮಾಡಿ ಅದರಿಂದ ಉತ್ಪನ್ನವಾದ ಅಗ್ನಿಯಿಂದ ಉಪಾಸನೆಯನ್ನು ಮಾಡುವೆನು" ಎಂದು ಆಲೋಚಿಸಿದನು (85-87). ಅದೇ ಪ್ರಕಾರ ಅಶ್ವತ್ಥವನ್ನು ತೆಗೆದುಕೊಂಡು ನಗರಕ್ಕೆ ಹಿಂದಿರುಗಿ ಅದರಿಂದ ಅರಣಿಯನ್ನು ನಿರ್ಮಿಸಿದನು. ಅರಣಿಯ ಪ್ರಮಾಣವನ್ನು ಅಂಗುಲಿಗಳಿಂದ ಅಳೆಯುತ್ತ ಗಾಯತ್ರೀಮಂತ್ರವನ್ನು ಪಠಿಸುತ್ತಿದ್ದನು. ಹಾಗೆ ಪಠಿಸುತ್ತಿರುವಾಗ ಗಾಯತ್ರಿಯಲ್ಲಿರುವ ಅಕ್ಷರಗಳಷ್ಟೇ (ಇಪ್ಪತ್ತನಾಲ್ಕು) ಅಂಗುಲ ಪ್ರಮಾಣದ ಅರಣಿಯು ನಿರ್ಮಿತವಾಯಿತು* (88-90). ಅರಣಿಯನ್ನು ಉತ್ಪಾದಿಸಿ ವೈದಿಕ ವಿಧಿಯಿಂದ ಹವನ ಮಾಡಿದನು. ಉರ್ವಶೀ ಸಾಲೋಕ್ಯವು ಲಭಿಸಲೆಂದು ಫಲದ ಸಂಕಲ್ಪವನ್ನು ಮಾಡಿಕೊಂಡನು. ಅನಂತರ ಅದೇ ಪ್ರಕಾರದ ಅಗ್ನಿವಿಧಿಯಿಂದ ನಾನಾ ಬಗೆಯ ಯಜ್ಞಗಳನ್ನು ಮಾಡಿ ಗಂಧರ್ವಲೋಕವನ್ನಡರಿ, ಮತ್ತೆ

---

* ಅರಣಿಯು ಇಪ್ಪತ್ತನಾಲ್ಕು ಅಂಗುಲ ಉದ್ದವಿರಬೇಕೆಂದು ಇದರಿಂದ ಸೂಚಿತವಾಗಿದೆ.

**ಯಜ್ಞಾನಿಷ್ಟ್ವಾ ಗಾಂಧರ್ವಲೋಕಾನವಾಪ್ಯೋರ್ವಶ್ಯಾ ಸಹಾವಿಯೋಗ-ಮವಾಪ ॥ 93 ॥ ಏಕೋಽಗ್ನಿರಾದಾವಭವದ್ ಏಕೇನ ತ್ವತ್ರ ಮನ್ವಂತರೇ ತ್ರೇಧಾ ಪ್ರವರ್ತಿತಾಃ ॥ 94 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಷಷ್ಠೋಽಧ್ಯಾಯಃ

---

ವಿಯೋಗವಿಲ್ಲದಂತೆ ಉರ್ವಶಿಯೊಡನೆ ಸೇರಿಕೊಂಡನು (91-93). ಪೂರ್ವ ಕಾಲದಲ್ಲಿ ಒಂದೇ ಅಗ್ನಿ ಇತ್ತು. ಈ ಮನ್ವಂತರದಲ್ಲಿ (ವೈವಸ್ವತಮನ್ವಂತರದಲ್ಲಿ) ಅದು ತ್ರಿಪ್ರಕಾರವಾಗಿ ತ್ರೇತಾಗ್ನಿಯಾಯಿತು (94).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಆರನೆಯ ಅಧ್ಯಾಯ ಮುಗಿಯಿತು.



## ಸಪ್ತಮೋऽಧ್ಯಾಯಃ

*ಶ್ರೀಪರಾಶರ ಉವಾಚ:*

**ತಸ್ಯಾಪ್ಯಾಯುರ್ಧೀಮಾನಮಾವಸುರ್ವಿಶ್ವಾವಸುಃ ಶ್ರುತಾಯುಶ್ಶತಾಯುರಯುತಾಯುರಿತಿಸಂಜ್ಞಾಃ ಷಟ್ ಪುತ್ರಾ ಅಭವನ್ ॥ 1 ॥ ತಥಾಮಾವಸೋರ್ಭೀಮನಾಮಾ ಪುತ್ರೋऽಭವತ್ ॥ 2 ॥ ಭೀಮಸ್ಯ ಕಾಂಚನಃ ಕಾಂಚನಾತ್ಸುಹೋತ್ರಃ ತಸ್ಯಾಪಿ ಜಹ್ನುಃ ॥ 3 ॥ ಯೋऽಸೌ ಯಜ್ಞವಾಟಮಖಿಲಂ ಗಂಗಾಂಭಸಾ ಪ್ಲಾವಿತಮವಲೋಕ್ಯ ಕ್ರೋಧಸಂರಕ್ತಲೋಚನೋ ಭಗವಂತಂ ಯಜ್ಞಪುರುಷಮಾತ್ಮನಿ ಪರಮೇಣ ಸಮಾಧಿನಾ ಸಮಾರೋಪ್ಯಾಖಿಲಾಮೇವ ಗಂಗಾಮಪಿಬತ್ ॥ 4 ॥ ಅಥೈನಂ ದೇವರ್ಷಯಃ ಪ್ರಸಾದಯಾಮಾಸುಃ ॥ 5 ॥ ದುಹಿತೃತ್ವೇ ಚಾಸ್ಯ**

---

### ಅಧ್ಯಾಯ 7

ಪುರೂರವನ ವಂಶದಲ್ಲಿ ಜಹ್ನುವಿನ ಉತ್ಪತ್ತಿ.
ಆತನಿಂದ ಗಂಗಾಪಾನ. ಜಮದಗ್ನಿ ವಿಶ್ವಾಮಿತ್ರರ ಜನನ.

ಪರಾಶರರು ಹೇಳಿದರು: ರಾಜನಾದ ಪುರೂರವನಿಗೆ ಬುದ್ಧಿಶಾಲಿಯಾದ ಆಯು, ಅಮಾವಸು, ವಿಶ್ವಾವಸು, ಶ್ರುತಾಯು, ಶತಾಯು, ಅಯುತಾಯು ಎಂಬ ಆರುಮಂದಿ ಪುತ್ರರಾದರು. ಅಮಾವಸುವಿಗೆ ಭೀಮನೆಂಬ ಮಗನು ಜನಿಸಿದನು (1-2). ಭೀಮನಿಗೆ ಕಾಂಚನನೂ ಅವನಿಗೆ ಸುಹೋತ್ರನೂ ಆತನಿಗೆ ಜಹ್ನುವೂ ಮಕ್ಕಳಾದರು. ಈ ಜಹ್ನುವೇ (ಭಗೀರಥನು ತಂದಿದ್ದ) ಗಂಗಾಜಲದಿಂದ ತನ್ನ ಯಜ್ಞಶಾಲೆಯು ತುಳುಕಿ ಹೋದ್ದನ್ನು ಕಂಡು ಕ್ರೋಧ ಸಂರಕ್ತ ನೇತ್ರನಾಗಿ, ಭಗವಾನ್ ಯಜ್ಞಪುರುಷನನ್ನು ಪರಮಸಮಾಧಿಯಿಂದ ತನ್ನಲ್ಲಿ ಆವಾಹಿಸಿಕೊಂಡು, ಸಮಸ್ತ ಗಂಗಾಜಲವನ್ನೂ ಕುಡಿದುಬಿಟ್ಟನು! (3-4). ಅನಂತರ ದೇವರ್ಷಿಗಳು ಜಹ್ನುವನ್ನು ಸಮಾಧಾನಪಡಿಸಿ ಗಂಗೆಯು ಆತನ ಪುತ್ರಿಯಂತೆ ಆಗಲೆಂದು ವ್ಯವಸ್ಥೆ ಮಾಡಿದರು. ಜಹ್ನುವಿಗೆ ಸುಮಂತುವೆಂಬ ಪುತ್ರನು ಹುಟ್ಟಿದನು. ಸುಮಂತುವಿಗೆ ಅಜಕ, ಅವನಿಗೆ ಬಲಾಕಾಶ್ವ, ಅವನಿಗೆ

**ಗಂಗಾಮನಯನ್ ॥ 6 ॥ ಜಹ್ನೋಶ್ಚ ಸುಮಂತುರ್ನಾಮ ಪುತ್ರೋಽಭವತ್ ॥ 7 ॥ ತಸ್ಯಾಪ್ಯಜಕಸ್ತತೋ ಬಲಾಕಾಶ್ವಸ್ತಸ್ಮಾತ್ ಕುಶಸ್ತಸ್ಯಾಪಿ ಕುಶಾಂಬಕುಶನಾಭಾಧೂರ್ತ್ತರಜಸೋವಸುಶ್ಚೇತಿ ಚತ್ವಾರಃ ಪುತ್ರಾ ಬಭೂವುಃ ॥ 8 ॥ ತೇಷಾಂ ಕುಶಾಂಬಃ ಶಕ್ರತುಲ್ಯೋ ಮೇ ಪುತ್ರೋ ಭವೇದಿತಿ ತಪಶ್ಚಕಾರ ॥ 9 ॥ ತಂ ಚೋಗ್ರತಪಸಮವಲೋಕ್ಯ ಮಾ ಭವತ್ವನ್ಯೋಽಸ್ಮತ್ತುಲ್ಯವೀರ್ಯ ಇತ್ಯಾತ್ಮನೈವಾಸ್ಯೇಂದ್ರಃ ಪುತ್ರತ್ವಮಗಚ್ಛತ್ ॥ 10 ॥ ಸ ಗಾಧಿರ್ನಾಮ ಪುತ್ರಃ ಕೌಶಿಕೋಽಭವತ್ ॥ 11 ॥ ಗಾಧಿಶ್ಚ ಸತ್ಯವತೀಂ ಕನ್ಯಾಮಜನಯತ್ ॥ 12 ॥ ತಾಂ ಚ ಭಾರ್ಗವ ಋಚಿಕೋ ವವ್ರೇ ॥ 13 ॥ ಗಾಧಿರಪ್ಯತಿರೋಷಣಾಯಾತಿವೃದ್ಧಾಯ ಬ್ರಾಹ್ಮಣಾಯ ದಾತುಮನಿಚ್ಛನ್ನೇಕತಶ್ಯಾಮಕರ್ಣಾನಾಮಿಂದುವರ್ಚಸಾಮನಿಲರಂಹಸಾಮಶ್ವಾನಾಂ ಸಹಸ್ರಂ ಕನ್ಯಾಶುಲ್ಕಮಯಾಚತ ॥ 14 ॥ ತೇನಾಪ್ಯೃಷಿಣಾ ವರುಣಸಕಾಶಾದುಪಲಭ್ಯಾಶ್ವತೀರ್ಥೋತ್ಪನ್ನಂ ತಾದೃಶ-**

---

ಕುಶನು ಪುತ್ರರು. ಕುಶನಿಗೆ ಕುಶಾಂಬ, ಕುಶನಾಭ, ಅಧೂರ್ತರಜ, ವಸು— ಎಂಬ ನಾಲ್ವರು ಮಕ್ಕಳಾದರು (5-8). ಅವರಲ್ಲಿ ಕುಶಾಂಬನು ತನಗೆ ದೇವೇಂದ್ರ ಸಮಾನನಾದ ಪುತ್ರನು ಜನಿಸಲೆಂದು ತಪಸ್ಸು ಮಾಡಿದನು. ಅವನ ಉಗ್ರವಾದ ತಪಸ್ಸನ್ನು ಪರ್ಯಾಲೋಚಿಸಿದ ದೇವೇಂದ್ರನು 'ನಮಗೆ ಸಮಾನನಾದ ಇನ್ನೊಬ್ಬ ವೀರನು ಇರಬಾರದು' ಎಂದು ನಿಶ್ಚಯಿಸಿ, ತಾನೇ ಆತನಿಗೆ ಮಗನಾಗಿ ಅವತರಿಸಿದನು! ಆತನೇ ಗಾಧಿ. ಕುಶವಂಶದಲ್ಲಿ ಜನಿಸಿದ್ದರಿಂದ ಕೌಶಿಕನೆಂದು ವಿಖ್ಯಾತನಾದನು (9-11). ಈ ಗಾಧಿಯು ಸತ್ಯವತಿಯೆಂಬ ಮಗಳನ್ನು ಪಡೆದನು. ಭೃಗುವಂಶದ ಋಚೀಕನೆಂಬ ಬ್ರಾಹ್ಮಣನು ಸತ್ಯವತಿಯನ್ನು ಮದುವೆಯಾಗಲು ಬಯಸಿ ಯಾಚಿಸಿದನು. ಋಚೀಕನಾದರೋ ಬಹಳ ಸಿಟ್ಟಿನ ಸ್ವಭಾವದವನೂ ಅತ್ಯಂತವೃದ್ಧನೂ ಆದ್ದರಿಂದ ಅವನಿಗೆ ಮಗಳನ್ನು ಕೊಡಲು ಗಾಧಿಗೆ ಇಷ್ಟವಾಗಲಿಲ್ಲ. ಆದ್ದರಿಂದ ಚಂದ್ರನಂತೆ ಸ್ವಚ್ಛವಾದ ಬಿಳಿಯ ಮೈಬಣ್ಣವುಳ್ಳವೂ ವಾಯುವಿನಂತೆ ವೇಗಶಾಲಿಗಳೂ ಒಂದು ಕಿವಿಯು ಮಾತ್ರ ಕಪ್ಪಾಗಿಯೂ ಇರುವ ಒಂದುಸಾವಿರ ಕುದುರೆಗಳನ್ನು ಕನ್ಯಾಶುಲ್ಕವಾಗಿ ಕೊಡಬೇಕೆಂದು ಕೇಳಿದನು! (12-14). ಆಗ ಋಚೀಕಮುನಿಯು ಅಶ್ವತೀರ್ಥದಲ್ಲಿ ಉದ್ಭವಿಸಿದ

**ಮಶ್ವಸಹಸ್ರಂ ದತ್ತಮ್ ॥ 15 ॥ ತತಸ್ತಾಮೃಚೀಕಃ ಕನ್ಯಾಮುಪಯೇಮೇ ॥ 16 ॥ ಋಚೀಕಶ್ಚ ತಸ್ಯಾಶ್ಚರುಮಪತ್ಯಾರ್ಥಂ ಚಕಾರ ॥ 17 ॥ ತತ್ಪ್ರಸಾದಿತಶ್ಚ ತನ್ಮಾತ್ರೇ ಕ್ಷತ್ತ್ರವರಪುತ್ರೋತ್ಪತ್ತಯೇ ಚರುಮಪರಂ ಸಾಧಯಾಮಾಸ ॥ 18 ॥ ಏಷ ಚರುರ್ಭವತ್ಯಾ ಅಯಮಪರಶ್ಚರುಸ್ತ್ವನ್ಮಾತ್ರಾ ಸಮ್ಯಗುಪ-ಯೋಜ್ಯ ಇತ್ಯುಕ್ತ್ವಾ ವನಂ ಜಗಾಮ ॥ 19 ॥ ಉಪಯೋಗಕಾಲೇ ಚ ತಾಂ ಮಾತಾ ಸತ್ಯವತೀಮಾಹ ॥ 20 ॥ ಪುತ್ರಿ ಸರ್ವ ಏವಾತ್ಮಪುತ್ರಮತಿ-ಗುಣಮಭಿಲಷತಿ ನಾತ್ಮಜಾಯಾಭ್ರಾತೃಗುಣೇಷ್ವತೀವಾದೃತೋ ಭವ-ತೀತಿ ॥ 21 ॥ ಅತೋಽರ್ಹಸಿ ಮಮಾತ್ಮೀಯಂ ಚರುಂ ದಾತುಂ ಮದೀಯಂ ಚರುಮಾತ್ಮನೋಪಯೋಕ್ತುಮ್ ॥ 22 ॥ ಮತ್ಪುತ್ರೇಣ ಹಿ**

---

ಅಂತಹ ಸಾವಿರ ಕುದುರೆಗಳನ್ನು ವರುಣದೇವನಿಂದ ಪಡೆದು ಗಾಧಿಗೆ ಸಮರ್ಪಿಸಿದನು. ಆಮೇಲೆ ಋಚೀಕನು ಗಾಧಿಯ ಮಗಳಾದ ಸತ್ಯವತಿಯನ್ನು ಮದುವೆಯಾದನು (15-16). ಆಮೇಲೆ ಒಮ್ಮೆ ಅವಳಿಗೆ ಸಂತಾನವಾಗಲೆಂದು ಮಂತ್ರಪೂತವಾದ ಒಂದು ಚರುವನ್ನು ಋಚೀಕನು ಸಿದ್ಧಪಡಿಸಿದನು. (ಆಗ ಸತ್ಯವತಿಯ ತಾಯಿಗೆ ಪುತ್ರಸಂತಾನವಿರಲಿಲ್ಲವಾದ್ದರಿಂದ) ಸತ್ಯವತಿಯ ಪ್ರಾರ್ಥನೆಯನ್ನು ಮನ್ನಿಸಿ ಅವಳ ತಾಯಿಗೆ ಕ್ಷತ್ತ್ರಿಯೋತ್ತಮನಾದ ಪುತ್ರನು ಲಭಿಸಲೆಂದು ಋಚೀಕನು ಮತ್ತೊಂದು ಚರುವನ್ನು ಅಭಿಮಂತ್ರಿಸಿ ಸಿದ್ಧಪಡಿಸಿದನು (17-18). ಅನಂತರ "ಈ ಚರುವನ್ನು ನೀನೂ ಈ ಮತ್ತೊಂದು ಚರುವನ್ನು ನಿನ್ನ ತಾಯಿಯೂ ಶ್ರದ್ಧೆಯಿಂದ ಸೇವಿಸಬೇಕು" ಎಂದು ಮಡದಿಗೆ ತಿಳಿಸಿ ಕಾರ್ಯನಿಮಿತ್ತವಾಗಿ ವನಕ್ಕೆ ಹೋದನು (19). ಆ ಎರಡು ಚರುಗಳನ್ನು ಸೇವಿಸುವ ಸಮಯದಲ್ಲಿ ತಾಯಿಯು ಸತ್ಯವತಿಯನ್ನು ಕುರಿತು "ಮಗಳೆ, ಎಲ್ಲರೂ ತಮ್ಮ ಮಗನು ಗುಣಶಾಲಿಯಾಗಲೆಂದು ಬಯಸುತ್ತಾರೆ. ತಮ್ಮ ಹೆಂಡತಿಯ ಸಹೋದರನ ಗುಣಗಳ ವಿಷಯದಲ್ಲಿ ಅವರಿಗೆ ಅಷ್ಟು ಆದರವಿರುವುದಿಲ್ಲ ಎಂಬುದು ತಿಳಿದಿದ್ದೇ ಸರಿ (20-21). ಆದ್ದರಿಂದ ನಿನ್ನ ಚರುವನ್ನು ನನಗೆ ಕೊಡುವುದೊಳ್ಳೆಯದು. ನನ್ನ ಚರುವನ್ನು ನೀನು ಸೇವಿಸು. ನನಗೆ ಹುಟ್ಟಿದ ಮಗನಿಗೆ ನಿಖಿಲಭೂಮಂಡಲವನ್ನೂ ಪರಿಪಾಲಿಸುವ ಹೊಣೆಗಾರಿಕೆ ಇದೆ. ಬ್ರಾಹ್ಮಣನಿಗೆ ಬಲವೀರ್ಯಸಂಪತ್ತುಗಳಿಂದ ಆಗಬೇಕಾದ್ದೇನು?" ಎಂದಳು. ಆಗ

**ಸಕಲಭೂಮಂಡಲಪರಿಪಾಲನಂ ಕಾರ್ಯಂ ಕಿಯದ್ವಾ ಬ್ರಾಹ್ಮಣಸ್ಯ ಬಲವೀರ್ಯಸಂಪದೇತ್ಯುಕ್ತ್ವಾ ಸಾ ಸ್ವಚರುಂ ಮಾತ್ರೇ ದತ್ತವತೀ ॥ 23 ॥ ಅಥ ವನಾದಾಗತ್ಯ ಸತ್ಯವತೀಮೃಷಿರಪಶ್ಯತ್ ॥ 24 ॥ ಆಹ ಚೈನಾಮತಿ-ಪಾಪೇ ಕಿಮಿದಮಕಾರ್ಯಂ ಭವತ್ಯಾ ಕೃತಮ್ ಅತಿರೌದ್ರಂ ತೇ ವಪುರ್ಲಕ್ಷ್ಯತೇ ॥ 25 ॥ ನೂನಂ ತ್ವಯಾ ತ್ವನ್ಮಾತೃಸಾತ್ಕೃತಶ್ಚರುರುಪ-ಯುಕ್ತೋ ನ ಯುಕ್ತಮೇತತ್ ॥ 26 ॥ ಮಯಾ ಹಿ ತತ್ರ ಚರೌ ಸಕಲೈ-ಶ್ವರ್ಯವೀರ್ಯಶೌರ್ಯಬಲಸಂಪದಾರೋಪಿತಾ ತ್ವದೀಯಚರಾವಪ್ಯ-ಖಿಲಶಾಂತಿಜ್ಞಾನತಿತಿಕ್ಷಾದಿಬ್ರಾಹ್ಮಣಗುಣಸಂಪತ್ ॥ 27 ॥ ತಚ್ಚ ವಿಪರೀತಂ ಕುರ್ವತ್ಯಾಸ್ತವಾತಿರೌದ್ರಾಸ್ತ್ರಧಾರಣಪಾಲನನಿಷ್ಠಃ ಕ್ಷತ್ರಿಯಾಚಾರಃ ಪುತ್ರೋ-ಭವಿಷ್ಯತಿ ತಸ್ಯಾಶ್ಚೋಪಶಮರುಚಿರ್ಬ್ರಾಹ್ಮಣಾಚಾರ ಇತ್ಯಾಕರ್ಣ್ಯೈವ ಸಾ ತಸ್ಯ ಪಾದೌ ಜಗ್ರಾಹ ॥ 28 ॥ ಪ್ರಣಿಪತ್ಯ ಚೈನಮಾಹ ॥ 29 ॥ ಭಗವನ್**

---

ಸತ್ಯವತಿಯು ತನ್ನ ಚರುವನ್ನು ತಾಯಿಗೆ ಕೊಟ್ಟುಬಿಟ್ಟಳು! (22-23). ಅನಂತರ ಋಷಿಯು ವನದಿಂದ ಹಿಂದಿರುಗಿ ಬಂದು ಪತ್ನಿಯನ್ನು ದಿಟ್ಟಿಸಿ ನೋಡಿ "ಎಲೌ ಪಾಪಿಷ್ಠೆ, ಮಾಡಬಾರದ್ದನ್ನು ಮಾಡಿಬಿಟ್ಟೆಯಲ್ಲ, ಏನಿದು! ನಿನ್ನ ದೇಹವು ಅತ್ಯಂತ ಭೀಕರವಾಗಿ ಗೋಚರಿಸುತ್ತಿದೆ. ನಿನ್ನ ತಾಯಿಗೋಸ್ಕರ ಸಿದ್ಧಪಡಿಸಿದ ಚರುವನ್ನು ನೀನೇ ಸೇವಿಸಿರಬೇಕು; ಇದು ತಪ್ಪು (24-26). ಆಕೆಯ ಚರುವಿನಲ್ಲಿ ನಾನು ಸಮಸ್ತ ಐಶ್ವರ್ಯವೀರ್ಯಶೌರ್ಯಬಲಸಂಪತ್ತುಗಳನ್ನು ಸಮಾವೇಶಗೊಳಿಸಿದ್ದೆ. ನಿನ್ನ ಚರುವಿನಲ್ಲಾದರೋ ಬ್ರಾಹ್ಮಣಯೋಗ್ಯವಾದ ಶಾಂತಿ, ಜ್ಞಾನ, ತಿತಿಕ್ಷೆ— ಮುಂತಾದ ಸಾತ್ತ್ವಿಕ ಗುಣಸಂಪತ್ತುಗಳನ್ನು ಸಮಾವೇಶಗೊಳಿಸಿದ್ದೆ (27). ಇದನ್ನು ತಲೆಕೆಳಗು ಮಾಡಿಬಿಟ್ಟೆಯಲ್ಲ! ಅತ್ಯಂತ ಭೀಕರಾಸ್ತ್ರಗಳನ್ನು ಧರಿಸಿ ಜಗತ್ಪಾಲನಸಮರ್ಥನೂ ಕ್ಷತ್ರಿಯ ಸ್ವಭಾವದವನೂ ಆದ ಮಗನು ನಿನಗೆ ಹುಟ್ಟುವನು. ನಿನ್ನ ತಾಯಿಗೆ ಉಪಶಾಂತನೂ ಬ್ರಾಹ್ಮಣಾಚಾರನಿಷ್ಠನೂ ಆದ ಪುತ್ರನು ಜನಿಸುವನು" ಎಂದನು. ಈ ಮಾತನ್ನು ಕೇಳಿದೊಡನೆ ಸತ್ಯವತಿಯು ಗಂಡನ ಪಾದಗಳನ್ನು ಹಿಡಿದುಕೊಂಡಳು (28). ಅವನಿಗೆ ಅಡ್ಡಬಿದ್ದು ನಮಸ್ಕರಿಸಿ, "ಭಗವನ್ ಅಜ್ಞಾನದಿಂದ ಹೀಗೆ ಮಾಡಿಬಿಟ್ಟೆನು. ಪ್ರಸನ್ನರಾಗಿರಿ. ನನ್ನ ಮಗನು ಅಂಥವನಾಗುವುದು (ಕ್ಷತ್ರಿಯಗುಣಯುಕ್ತನಾಗುವುದು) ಬೇಡ.

**ಮಯ್ಯೈತದಜ್ಞಾನಾದನುಷ್ಠಿತಂ ಪ್ರಸಾದಂ ಮೇ ಕುರು ಮೈವಂವಿಧಃ ಪುತ್ರೋ ಭವತು ಕಾಮಮೇವಂವಿದಃ ಪೌತ್ರೋ ಭವತ್ವಿತ್ಯುಕ್ತೇ ಮುನಿರಪ್ಯಾಹ ॥ 30 ॥ ಏವಮಸ್ತ್ವಿತಿ ॥ 31 ॥ ಅನಂತರಂ ಚ ಸಾ ಜಮ-ದಗ್ನಿಮಜೀಜನತ್ ॥ 32 ॥ ತನ್ಮಾತಾ ಚ ವಿಶ್ವಾಮಿತ್ರಂ ಜನಯಾಮಾಸ ॥ 33 ॥ ಸತ್ಯವತ್ಯಪಿ ಕೌಶಿಕೀ ನಾಮ ನದ್ಯಭವತ್ ॥ 34 ॥ ಜಮದಗ್ನಿ-ರಿಕ್ಷ್ವಾಕುವಂಶೋದ್ಭವಸ್ಯ ರೇಣೋಸ್ತನಯಾಂ ರೇಣುಕಾಮುಪಯೇಮೇ ॥ 35 ॥ ತಸ್ಯಾಂ ಚಾಶೇಷಕ್ಷತ್ರಹಂತಾರಂ ಪರಶುರಾಮಸಂಜ್ಞಂ ಭಗವತ-ಸ್ಸಕಲಲೋಕಗುರೋರ್ನಾರಾಯಣಸ್ಯಾಂಶಂ ಜಮದಗ್ನಿರಜೀಜನತ್ ॥ 36 ॥ ವಿಶ್ವಾಮಿತ್ರಪುತ್ರಸ್ತು ಭಾರ್ಗವ ಏವ ಶುನಶ್ಶೇಪೋ ದೇವೈರ್ದತ್ತಃ ತತಶ್ಚ ದೇವರಾತನಾಮಾಭವತ್ ॥ 37 ॥ ತತಶ್ಚಾನ್ಯೇ ಮಧುಚ್ಛಂದೋ-ಧನಂಜಯಕೃತದೇವಾಷ್ಟಕಕಚ್ಛಪಹಾರೀತಕಾಖ್ಯಾ ವಿಶ್ವಾಮಿತ್ರಪುತ್ರಾ**

---

ಬೇಕಾದರೆ ಮೊಮ್ಮಗನು ಅಂಥವನಾಗಲಿ" ಎಂದು ಬೇಡಿದಳು. ಋಚೀಕ ಮುನಿಯು "ಹಾಗೆಯೇ ಆಗಲಿ" ಎಂದು ನುಡಿದನು (29-31). ಆಮೇಲೆ ಸತ್ಯವತಿಯು ಜಮದಗ್ನಿಯೆಂಬ ಪುತ್ರನನ್ನು ಪಡೆದಳು. ಅವಳ ತಾಯಿಗೆ ವಿಶ್ವಾಮಿತ್ರನು ಪುತ್ರನಾಗಿ ಜನಿಸಿದನು. ಮುಂದೆ ಸತ್ಯವತಿಯು ಕೌಶಿಕಿಯೆಂಬ ನದಿಯಾದಳು (32-34). ಜಮದಗ್ನಿಯು ಇಕ್ಷ್ವಾಕು ವಂಶದಲ್ಲಿ ಜನಿಸಿದ ರೇಣುವಿನ ಮಗಳಾದ ರೇಣುಕೆಯನ್ನು ವಿವಾಹವಾದನು. ಅವಳಲ್ಲಿ ಸಮಸ್ತ ಕ್ಷತ್ರಿಯ ವಿಧ್ವಂಸಕನೂ ಸಕಲಲೋಕಗುರುವಾದ ಭಗವಾನ್ ಶ್ರೀಮನ್ನಾರಾಯಣನ ಅಂಶಸಂಭೂತನೂ ಆದ ಪರಶುರಾಮನೆಂಬವನನ್ನು ಜಮದಗ್ನಿಯು ಉತ್ಪಾದಿಸಿದನು (35-36). ಭೃಗುವಂಶೀಯನೇ ಆದ ಶುನಃಶೇಪನೆಂಬವನು ವಿಶ್ವಾಮಿತ್ರನಿಗೆ ಪುತ್ರನಾಗಿ ದೇವತೆಗಳಿಂದ ದತ್ತನಾದನು. ಆದ್ದರಿಂದ ಶುನಃಶೇಪನಿಗೆ ದೇವರಾತನೆಂದು ಹೆಸರಾಯಿತು.* ಅವನಲ್ಲದೆ ವಿಶ್ವಾಮಿತ್ರನಿಗೆ ಮಧುಚ್ಛಂದ, ಧನಂಜಯ, ಕೃತದೇವ, ಅಷ್ಟಕ, ಕಚ್ಛಪ, ಹಾರೀತಕ—ಎಂಬ

---

* ಇದರ ವಿವರಣೆ ವಾಲ್ಮೀಕಿರಾಮಾಯಣದಲ್ಲಿದೆ—ಬಾಲಕಾಂಡ, ಸರ್ಗ 61-62.

**ಬಭೂವುಃ ॥ 38 ॥ ತೇಷಾಂ ಚ ಬಹೂನಿ ಕೌಶಿಕಗೋತ್ರಾಣಿ ಋಷ್ಯಂತ-ರೇಷು ವಿವಾಹ್ಯಾನ್ಯಭವನ್ ॥ 39 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಸಪ್ತಮೋಽಧ್ಯಾಯಃ

---

ಔರಸಪುತ್ರರಿದ್ದರು (37-38). ಅವರಿಂದ (ಪ್ರವರಭೇದವುಳ್ಳ) * ಹಲವಾರು ಕೌಶಿಕಗೋತ್ರಗಳು ಪ್ರವೃತ್ತವಾದವು. ಪ್ರವರಋಷಿಗಳೆಲ್ಲರೂ ಭಿನ್ನರಾದರೆ ಈ ಕೌಶಿಕಗೋತ್ರಗಳು ಪರಸ್ಪರ ವಿವಾಹಯೋಗ್ಯವಾಗುತ್ತವೆ (39).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಏಳನೆಯ ಅಧ್ಯಾಯ ಮುಗಿಯಿತು.



---

* ಪ್ರವರಭೇದವಾದರೆ ವಿವಾಹವಾಗಬಹುದೆಂಬುದು, ಆಂಗಿರಸಗೋತ್ರವನ್ನು ಬಿಟ್ಟು ಉಳಿದ ಎಲ್ಲ ಗೋತ್ರಗಳಿಗೂ ಅನ್ವಯಿಸುತ್ತದೆ—

ಏಕ ಏವ ಋಷಿರ್ಯತ್ರ ಪ್ರವರೇಷ್ವನುವರ್ತತೇ ।
ತಾವತ್‌ಸಮಾನ ಗೋತ್ರತ್ವಮನ್ಯತ್ರ ತ್ವಂಗಿರೋಗಣಾತ್ ॥

—ಧರ್ಮಸೂತ್ರ

## ಅಷ್ಟಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಪುರೂರವಸೋ ಜ್ಯೇಷ್ಠಃ ಪುತ್ರೋ ಯಸ್ತ್ವಾಯುರ್ನಾಮಾ ಸ ರಾಹೋರ್ದುಹಿತರಮುಪಯೇಮೇ ॥ 1 ॥ ತಸ್ಯಾಂ ಚ ಪಂಚಪುತ್ರಾನುತ್ಪಾದಯಾಮಾಸ ॥ 2 ॥ ನಹುಷಕ್ಷತ್ರವೃದ್ಧರಂಭರಜಿಸಂಜ್ಞಾಸ್ತಥೈವಾನೇನಾಃ ಪಂಚಮಃ ಪುತ್ರೋಽಭೂತ್ ॥ 3 ॥ ಕ್ಷತ್ರವೃದ್ಧಾತ್ಸುಹೋತ್ರಃ ಪುತ್ರೋಽಭವತ್ ॥ 4 ॥ ಕಾಶ್ಯಕಾಶಗೃತ್ಸಮದಾಸ್ತ್ರಯಸ್ತಸ್ಯ ಪುತ್ರಾ ಬಭೂವುಃ ॥ 5 ॥ ಗೃತ್ಸಮದಸ್ಯ ಶೌನಕಶ್ಚಾತುರ್ವರ್ಣ್ಯಪ್ರವರ್ತಯಿತಾಭೂತ್ ॥ 6 ॥ ಕಾಶ್ಯಸ್ಯ ಕಾಶೇಯಃ ಕಾಶೀರಾಜಃ ತಸ್ಮಾದ್ರಾಷ್ಟ್ರಃ ರಾಷ್ಟ್ರಸ್ಯ ದೀರ್ಘತಪಾಃ ಪುತ್ರೋಽಭವತ್ ॥ 7 ॥ ಧನ್ವಂತರಿಸ್ತು ದೀರ್ಘತಪಸಃ ಪುತ್ರೋಽಭವತ್ ॥ 8 ॥ ಸ ಹಿ ಸಂಸಿದ್ಧಕಾರ್ಯಕರಣಸ್ಸಕಲಸಂಭೂತಿಷ್ವ-**

---

## ಅಧ್ಯಾಯ 8

ಆಯುವಿನ ಮಗನಾದ ಕ್ಷತ್ರವೃದ್ಧನ ವಂಶ.

ಪುರೂರವನ ಹಿರಿಯಮಗನಾದ ಆಯು ಎಂಬವನಿದ್ದನಷ್ಟೆ. ಅವನು ರಾಹುವಿನ ಮಗಳನ್ನು ಮದುವೆಯಾಗಿ ಅವಳಲ್ಲಿ ಐವರು ಪುತ್ರರನ್ನು ಪಡೆದನು. ನಹುಷ, ಕ್ಷತ್ರವೃದ್ಧ, ರಂಭ, ರಜಿ—ಎಂಬವರಲ್ಲದೆ ಅನೇನ ಎಂಬ ಐದನೆಯ ಪುತ್ರನಿದ್ದನು (1-3). ಕ್ಷತ್ರವೃದ್ಧನಿಂದ ಸುಹೋತ್ರನೂ ಅವನಿಂದ ಕಾಶ್ಯ, ಕಾಶ, ಗೃತ್ಸಮದ—ಎಂಬ ಮೂವರೂ ಉದಿಸಿದರು. ಗೃತ್ಸಮದನ ಸುತನೇ ಶೌನಕ. ಅವನು ಚಾತುರ್ವರ್ಣ್ಯದ ಪ್ರವರ್ತಕ. ಕಾಶ್ಯನಿಗೆ ಕಾಶೀರಾಜನಾದ ಕಾಶೀಯನೂ, ಅವನಿಗೆ ರಾಷ್ಟ್ರನೂ, ರಾಷ್ಟ್ರನಿಗೆ ದೀರ್ಘತಪನೂ ಪುತ್ರರಾದರು (4-7). ದೀರ್ಘತಪನ ತನಯನೇ ಧನ್ವಂತರಿ. ಧನ್ವಂತರಿಯು ಶರೀರೇಂದ್ರಿಯ ಗಳಿಗೆ ಜರಾವಿಕಾರವಿಲ್ಲದವನು. ತನ್ನ ಎಲ್ಲ ಜನ್ಮಾಂತರಗಳ ಜ್ಞಾನವುಳ್ಳವನು. ಹಿಂದಿನ ಜನ್ಮದಲ್ಲಿ (ಕ್ಷೀರಸಮುದ್ರದಲ್ಲಿ ಹುಟ್ಟಿದಾಗ) ಭಗವಾನ್ ನಾರಾಯಣನು

**ಶೇಷಜ್ಞಾನವಿದ್ ಭಗವತಾ ನಾರಾಯಣೇನ ಚಾತೀತಸಂಭೂತೌ ತಸ್ಮೈ ವರೋ ದತ್ತಃ ॥ 9 ॥ ಕಾಶೀರಾಜಗೋತ್ರೇಽವತೀರ್ಯ ತ್ವಮಷ್ಟಧಾ ಸಮ್ಯಗಾಯುರ್ವೇದಂ ಕರಿಷ್ಯಸಿ ಯಜ್ಞಭಾಗಭುಗ್ಭವಿಷ್ಯಸೀತಿ ॥ 10 ॥ ತಸ್ಯ ಚ ಧನ್ವಂತರೇಃ ಪುತ್ರಃ ಕೇತುಮಾನ್ ಕೇತುಮತೋ ಭೀಮರಥಸ್ತಸ್ಯಾಪಿ ದಿವೋದಾಸಸ್ತಸ್ಯಾಪಿ ಪ್ರತರ್ದನಃ ॥ 11 ॥ ಸ ಚ ಮದ್ರಶ್ರೇಣ್ಯವಂಶವಿನಾಶ-ನಾದಶೇಷಶತ್ರವೋಽನೇನ ಜಿತಾ ಇತಿ ಶತ್ರುಜಿದಭವತ್ ॥ 12 ॥ ತೇನ ಚ ಪ್ರೀತಿಮತಾತ್ಮಪುತ್ರೋ ವತ್ಸ ವತ್ಸೇತ್ಯಭಿಹಿತೋ ವತ್ಸೋಽಭವತ್ ॥ 13 ॥ ಸತ್ಯಪರತಯಾ ಋತಧ್ವಜಸಂಜ್ಞಾಮವಾಪ ॥ 14 ॥ ತತಶ್ಚ ಕುವಲಯನಾಮಾನಮಶ್ವಂ ಲೇಭೇ ತತಃ ಕುವಲಯಾಶ್ವ ಇತ್ಯಸ್ಯಾಂ ಪೃಥಿವ್ಯಾಂ ಪ್ರಥಿತಃ ॥ 15 ॥ ತಸ್ಯ ಚ ವತ್ಸಸ್ಯ ಪುತ್ರೋಽಲರ್ಕನಾಮಾ-**

---

ಆತನಿಗೆ ವರವನ್ನು ಕೊಟ್ಟಿದ್ದನು (8-9). ಏನೆಂದರೆ, "ನೀನು ಕಾಶೀರಾಜನ ವಂಶದಲ್ಲಿ ಅವತರಿಸಿ ಆಯುರ್ವೇದವನ್ನು ಎಂಟು* ವಿಭಾಗವಾಗಿ ವಿಂಗಡಿಸಿ ಚೆನ್ನಾಗಿ ವ್ಯವಸ್ಥೆಗೊಳಿಸುವೆ ಮತ್ತು ಯಜ್ಞದಲ್ಲಿ ಹವಿರ್ಭಾಗವನ್ನು ಪಡೆಯುವೆ" ಎಂದು (10). ಆ ಧನ್ವಂತರಿಯ ಸುತ ಕೇತುಮಂತ. ಅವನ ಸುತ ಭೀಮರಥ. ಅವನಿಗೆ ದಿವೋದಾಸನೂ ಆತನಿಗೆ ಪ್ರತರ್ದನನೂ ಸುತರು. ಪ್ರತರ್ದನನು ಮದ್ರಶ್ರೇಣ್ಯವಂಶವನ್ನು ವಿಧ್ವಂಸಗೊಳಿಸಿ ಸಮಸ್ತ ಶತ್ರುಗಳನ್ನೂ ಜಯಿಸಿದ್ದರಿಂದ ಶತ್ರುಜಿತ್ ಎಂದು ಪ್ರಸಿದ್ಧನಾದನು (11-12). ದಿವೋದಾಸನು ಪ್ರೇಮವಶನಾಗಿ ಈ ಪುತ್ರನನ್ನು 'ವತ್ಸ, ವತ್ಸ' ಎಂದು ಕರೆಯುತ್ತಿದ್ದುದರಿಂದ ಪ್ರತರ್ದನನಿಗೆ ವತ್ಸನೆಂದೂ ಹೆಸರಾಯಿತು. ಇವನು ಸತ್ಯಪರಾಯಣನಾದ್ದರಿಂದ ಋತಧ್ವಜ ನೆಂಬ ಹೆಸರನ್ನೂ ಪಡೆದನು (ಋತ–ಸತ್ಯ). ಆಮೇಲೆ ಪ್ರತರ್ದನನು ಕುವಲಯ ವೆಂಬ ಅಪೂರ್ವವಾದ ಅಶ್ವವನ್ನು ಪಡೆದದ್ದರಿಂದ ಕುವಲಯಾಶ್ವನೆಂದೂ ಲೋಕದಲ್ಲಿ ಪ್ರಖ್ಯಾತನಾದನು (13-15). ಈ ವತ್ಸರಾಜನಿಗೆ ಅಲರ್ಕನೆಂಬ

---

* ಕಾಯ, ಬಾಲ, ಗ್ರಹೋ,–ರ್ಧ್ವಾಂಗ, ಶಲ್ಯ, ದಂಷ್ಟ್ರಾ, ಜರಾ, ವಿಷಾನ್ ।
ಅಷ್ಟಾವಂಗಾನಿ ತಸ್ಯಾಹುಶ್ಚಿಕಿತ್ಸಾ ಯೇಷು ಸಂಸ್ಥಿತಾ ॥
—ಶ್ರೀಧರೀಯ ವ್ಯಾಖ್ಯಾನ

ಶಲ್ಯ, ಶಲಾಕ, ಚಿಕಿತ್ಸಾ, ಭೂತವಿದ್ಯಾ, ಕೌಮಾರಭೃತ್ಯ, ಅಗದ (ವಿಷಚಿಕಿತ್ಸೆ), ರಸಾಯನ, ವಾಜೀಕರಣ—ಎಂಬ ಎಂಟು ವಿಭಾಗಗಳು ಪ್ರಸಿದ್ಧವಾದವು.

**ಭವದ್ ಯಸ್ಯಾಯಮದ್ಯಾಪಿ ಶ್ಲೋಕೋ ಗೀಯತೇ ॥ 16 ॥**

**ಷಷ್ಟಿವರ್ಷಸಹಸ್ರಾಣಿ ಷಷ್ಟಿವರ್ಷಶತಾನಿ ಚ ।**
**ಅಲರ್ಕಾದಪರೋ ನಾನ್ಯೋ ಬುಭುಜೇ ಮೇದಿನೀಂ ಯುವಾ ॥ 17**

**ತಸ್ಯಾಪ್ಯಲರ್ಕಸ್ಯ ಸನ್ನತಿನಾಮಾಭವದಾತ್ಮಜಃ ॥ 18 ॥ ಸನ್ನತೇಃ ಸುನೀಥ-ಸ್ತಸ್ಯಾಪಿ ಸುಕೇತುಸ್ತಸ್ಮಾಚ್ಚ ಧರ್ಮಕೇತುರ್ಜಜ್ಞೇ ॥ 19 ॥ ತತಶ್ಚ ಸತ್ಯಕೇತು-ಸ್ತಸ್ಮಾದ್ವಿಭುಸ್ತತ್ತನಯಸ್ಸುವಿಭುಸ್ತತಶ್ಚ ಸುಕುಮಾರಸ್ತಸ್ಯಾಪಿ ಧೃಷ್ಟಕೇತು-ಸ್ತತಶ್ಚ ವೀತಿಹೋತ್ರಸ್ತಸ್ಮಾದ್ ಭಾರ್ಗೋ ಭಾರ್ಗಸ್ಯ ಭಾರ್ಗಭೂಮಿಸ್ತತ-ಶ್ಚಾತುರ್ವರ್ಣ್ಯಪ್ರವೃತ್ತಿರಿತ್ಯೇತೇ ಕಾಶ್ಯಭೂಭೃತಃ ಕಥಿತಾಃ ॥ 20 ॥ ರಜೇಸ್ತು ಸಂತತಿಃ ಶ್ರೂಯತಾಮ್ ॥ 21 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಅಷ್ಟಮೋಽಧ್ಯಾಯಃ

---

ಪುತ್ರನು ಹುಟ್ಟಿದನು. ಅವನ ವಿಷಯವಾಗಿ ಈಗಲೂ ಈ ಶ್ಲೋಕವು ಹಾಡಲ್ಪಡುತ್ತಿದೆ: "ಅರವತ್ತು ಸಾವಿರದ ಮೇಲೆ ಅರವತ್ತು ನೂರು ವರ್ಷಗಳ ವರೆಗೆ (ಒಟ್ಟು ಅರವತ್ತಾರು ಸಾವಿರ ವರ್ಷ) ಅಲರ್ಕನನ್ನು ಬಿಟ್ಟು ಇನ್ನೊಬ್ಬ ಯುವಕನು ಈ ಪೃಥ್ವಿಯನ್ನು ಆಳಲಿಲ್ಲ" (16-17). ಆ ಅಲರ್ಕನಿಗೆ ಸನ್ನತಿ ಯೆಂಬ ಆತ್ಮಜನಿದ್ದನು. ಸನ್ನತಿಗೆ ಸುನೀಥನೂ ಅವನಿಗೆ ಸುಕೇತುವೂ ಅವನಿಗೆ ಧರ್ಮಕೇತುವೂ ಪುತ್ರರಾಗಿ ಜನಿಸಿದರು. ಧರ್ಮಕೇತುವಿನಿಂದ ಸೇತುಕೇತು, ಅವನಿಂದ ವಿಭು, ವಿಭುವಿನಿಂದ ಸುವಿಭು ಎಂಬವರು ಜನಿಸಿದರು. ಸುವಿಭುವಿಗೆ ಸುಕುಮಾರನೂ ಆತನಿಗೆ ಧೃಷ್ಟಕೇತುವೂ ಅವನಿಗೆ ವೀತಿಹೋತ್ರನೂ ಆತ್ಮಜರಾದರು. ವೀತಿಹೋತ್ರನ ಮಗ ಭಾರ್ಗ. ಅವನ ಮಗ ಭಾರ್ಗಭೂಮಿ. ಭಾರ್ಗಭೂಮಿಯಿಂದ ಚಾತುರ್ವರ್ಣ್ಯವು ಪ್ರಚುರವಾಯಿತು. ಮತ್ತೆ ಈ ರೀತಿಯಲ್ಲಿ, ಮೈತ್ರೇಯ, (ಕ್ಷತ್ರವೃದ್ಧನ ವಂಶದಲ್ಲಿ ಹುಟ್ಟಿದ) ಕಾಶ್ಯ ರೆಂಬ ರಾಜರ ವಿಷಯವನ್ನು ಹೇಳಿದ್ದಾಯಿತು. ಇನ್ನು (ಪುರೂರವನ ಮಗನ ಮಗನಾದ) ರಜಿಯ ಸಂತತಿಯ ವಿಚಾರವನ್ನು ಹೇಳುತ್ತೇನೆ ಕೇಳು (18-21).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಎಂಟನೆಯ ಅಧ್ಯಾಯ ಮುಗಿಯಿತು.

## ನವಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ರಜೇಸ್ತು ಪಂಚ ಪುತ್ರಶತಾನ್ಯತುಲಬಲಪರಾಕ್ರಮಸಾರಾಣ್ಯಾಸನ್ ॥ 1 ॥ ದೇವಾಸುರಸಂಗ್ರಾಮಾರಂಭೇ ಚ ಪರಸ್ಪರವಧೇಪ್ಸವೋ ದೇವಾಶ್ಚಾಸುರಾಶ್ಚಾ ಬ್ರಹ್ಮಾಣಮುಪೇತ್ಯ ಪಪ್ರಚ್ಛುಃ ॥ 2 ॥ ಭಗವನ್, ಅಸ್ಮಾಕಮತ್ರ ವಿರೋಧೇ ಕತರಃ ಪಕ್ಷೋ ಜೇತಾ ಭವಿಷ್ಯತೀತಿ ॥ 3 ॥ ಅಥಾಹ ಭಗವಾನ್ ॥ 4 ॥ ಯೇಷಾಮರ್ಥೇ ರಜಿರಾತ್ತಾಯುಧೋ ಯೋತ್ಸ್ಯತಿ ತತ್ಪಕ್ಷೋ ಜೇತೇತಿ ॥ 5 ॥ ಅಥ ದೈತ್ಯೈರುಪೇತ್ಯ ರಜಿರಾತ್ಮಸಾಹಾಯ್ಯದಾನಾಯಾಭ್ಯರ್ಥಿತಃ ಪ್ರಾಹ ॥ 6 ॥ ಯೋತ್ಸ್ಯೇಽಹಂ ಭವತಾಮರ್ಥೇ ಯದ್ಯಹಮಮರ ಜಯಾದ್ಭವತಾಮಿಂದ್ರೋ ಭವಿಷ್ಯಾಮೀತ್ಯಾಕರ್ಣ್ಯೈ-**

---

### ಅಧ್ಯಾಯ 9

ಆಯುವಿನ ಇನ್ನೊಬ್ಬ ಪುತ್ರನಾದ ರಜಿಯ ವಂಶ ಮತ್ತು
ಕ್ಷತ್ರವೃದ್ಧನಿಂದಾದ ಮತ್ತೊಂದು ವಂಶ.

ಪರಾಶರಮುನಿಗಳು ಹೇಳಿದರು: ರಜಿಗೆ ಅತುಲಬಲಪರಾಕ್ರಮಶಾಲಿಗಳಾದ ಐನೂರು ಮಕ್ಕಳಿದ್ದರು. ಆ ಸಮಯದಲ್ಲಿ ದೇವಾಸುರ ಸಂಗ್ರಾಮವು ತೊಡಗಿತು. ಒಬ್ಬರನ್ನೊಬ್ಬರು ಸಂಹರಿಸಬೇಕೆಂದಿದ್ದ ದೇವತೆಗಳೂ ಅಸುರರೂ ಬ್ರಹ್ಮದೇವನ ಬಳಿಗೆ ಹೋಗಿ "ಭಗವನ್, ನಮಗೆ ಈ ಪ್ರಕಾರದಲ್ಲಿ ವಿರೋಧ ಉಂಟಾಗಿದೆ. ನಮ್ಮಲ್ಲಿ ಯಾವ ಪಕ್ಷ ಗೆಲ್ಲುತ್ತದೆ?" ಎಂದು ಕೇಳಿದರು (1-3). ಆಗ ಬ್ರಹ್ಮದೇವನು "ಯಾವ ಪಕ್ಷವನ್ನು ವಹಿಸಿ ರಜಿಯು ಆಯುಧಧಾರಿಯಾಗುವನೋ ಆ ಪಕ್ಷವು ಗೆಲ್ಲುವುದು" ಎಂದು ಉತ್ತರಿಸಿದನು. ದೈತ್ಯರು ರಜಿಯ ಬಳಿಗೆ ಹೋಗಿ ತಮಗೆ ಸಹಾಯ ಮಾಡಬೇಕೆಂದು ಪ್ರಾರ್ಥಿಸಿದರು (4-6). ಅದಕ್ಕೆ ರಜಿಯು "ಆಗಬಹುದು ದೇವತೆಗಳನ್ನು ಜಯಿಸಿದ ಮೇಲೆ ನಾನು ನಿಮಗೆ ಇಂದ್ರ(ಅಧಿಪತಿ)ನಾಗುವುದಾದರೆ, ನಿಮಗೋಸ್ಕರ ಹೋರಾಡು

**ತತ್ತೈರಭಿಹಿತಮ್ ॥ 7 ॥ ನ ವಯಮನ್ಯಥಾ ವದಿಷ್ಯಾಮೋಽನ್ಯಥಾ ಕರಿಷ್ಯಾಮೋಽಸ್ಮಾಕಮಿಂದ್ರಃ ಪ್ರಹ್ಲಾದಸ್ತದರ್ಥಮೇವಾಯಮುದ್ಯಮ ಇತ್ಯುಕ್ತ್ವಾ ಗತೇಷ್ವಸುರೇಷು ದೇವೈರಪ್ಯಸಾವವನಿಪತಿರೇವಮೇವೋಕ್ತಸ್ತೇನಾಪಿ ಚ ತಥೈವೋಕ್ತೇ ದೇವೈರಿಂದ್ರಸ್ತ್ವಂ ಭವಿಷ್ಯಸೀತಿ ಸಮನ್ವೀಪ್ಸಿತಮ್ ॥ 8 ॥ ರಜಿನಾಪಿ ದೇವಸೈನ್ಯಸಹಾಯೇನಾನೇಕೈರ್ಮಹಾಸ್ತ್ರೈಸ್ತದಶೇಷಮಹಾಸುರಬಲಂ ನಿಷೂದಿತಮ್ ॥ 9 ॥ ಅಥ ಜಿತಾರಿಪಕ್ಷಶ್ಚ ದೇವೇಂದ್ರೋ ರಜಿಚರಣಯುಗಲಮಾತ್ಮನಃ ಶಿರಸಾ ನಿಪೀಡ್ಯಾಹ ॥ 10 ॥ ಭಯತ್ರಾಣಾದನ್ನದಾನಾದ್ಭವಾನಸ್ಮತ್ಪಿತಾಶೇಷಲೋಕಾನಾಮುತ್ತಮೋತ್ತಮೋ ಭವಾನ್, ಯಸ್ಯಾಹಂ ಪುತ್ರಸ್ತ್ರಿಲೋಕೇಂದ್ರಃ ॥ 11 ॥ ಸ ಚಾಪಿ ರಾಜಾ ಪ್ರಹಸ್ಯಾಹ ॥ 12 ॥ ಏವಮಸ್ತ್ವೇವಮಸ್ತ್ವನತಿಕ್ರಮಣೀಯಾ**

---

ವೆನು!" ಎಂದನು. ಆಗ ದೈತ್ಯರು ಇಂತೆಂದರು (7): "ರಾಜ, ನಾವು ಹೇಳುವುದೊಂದು ಆಮೇಲೆ ಮಾಡುವುದು ಇನ್ನೊಂದು—ಹೀಗೆ ಆಚರಿಸತಕ್ಕವರಲ್ಲ. ನಮಗೆ ಇಂದ್ರನು (ಅಧಿಪತಿ) ಪ್ರಹ್ಲಾದನೇ. ಅವನಿಗೋಸ್ಕರವೇ ನಮ್ಮ ಈ ಪ್ರಯತ್ನ ನಡೆದಿದೆ" ಎಂದು ನುಡಿದು ಹೊರಟುಹೋದರು. ಅನಂತರ ದೇವತೆಗಳು ಬಂದು ರಜಿರಾಜನನ್ನು ಕಂಡು ಅಸುರರಂತೆಯೇ ಪ್ರಾರ್ಥಿಸಿಕೊಳ್ಳಲಾಗಿ, ರಜಿಯು ಹಿಂದಿನಂತೆಯೇ ತಿಳಿಸಿದನು. ದೇವತೆಗಳು "ಆಗಲಿ, ನೀನೇ ದೇವೇಂದ್ರನಾಗುವೆ" ಎಂದು ಒಪ್ಪಿಕೊಂಡರು (8). ಅನಂತರ ರಜಿಯು ದೇವಸೈನ್ಯದ ನೆರವನ್ನು ಪಡೆದು ಹಲವಾರು ಮಹಾಸ್ತ್ರಗಳಿಂದ ಸಮಸ್ತ ಅಸುರ ಸೇನೆಯನ್ನೂ ಸಂಹರಿಸಿದನು. ಹೀಗೆ ಶತ್ರುಪಕ್ಷವನ್ನು ಜಯಿಸಿದ ಮೇಲೆ ದೇವೇಂದ್ರನು ರಜಿರಾಜನ ಪಾದಯುಗಳವನ್ನು ತನ್ನ ಶಿರಸ್ಸಿನಲ್ಲಿಟ್ಟುಕೊಂಡು "ಮಹಾರಾಜ, ಭಯವನ್ನು ಪರಿಹರಿಸಿದ್ದರಿಂದಲೂ ಅನ್ನದಾನಮಾಡಿದ್ದರಿಂದಲೂ* ನೀನು ನಮ್ಮ ತಂದೆಯೆಂದು ಭಾವಿಸುತ್ತೇನೆ. ಸಮಸ್ತ ಲೋಕಗಳಲ್ಲಿ ಸರ್ವೋತ್ತಮನಾಗಿ ವಿರಾಜಿಸುತ್ತಿದ್ದೀಯೆ. ತ್ರಿಲೋಕಗಳಿಗೆ ಇಂದ್ರನಾದ ನಾನು ನಿನಗೆ ಪುತ್ರನಾಗಿದ್ದೇನೆ" ಎಂದು ನುಡಿದನು (9-11). (ಇಂದ್ರನ ಗೂಢವಾದ ಇಂಗಿತವನ್ನರಿತು) ರಜಿರಾಜನು ಗಟ್ಟಿಯಾಗಿ ನಕ್ಕು "ಆಗಲಿ, ಹಾಗೆಯೇ ಆಗಲಿ.

* ರಾಕ್ಷಸರಿಂದ ತಪ್ಪಿಸಿ ಹವಿಸ್ಸನ್ನು ದೇವತೆಗಳಿಗೆ ಸಲ್ಲುವಂತೆ ಮಾಡಿದುದೇ ಅನ್ನದಾನ.

**ಹಿ ವೈರಿಪಕ್ಷಾದಪ್ಯನೇಕವಿಧಚಾಟುವಾಕ್ಯಗರ್ಭಾ ಪ್ರಣತಿರಿತ್ಯುಕ್ತ್ವಾ ಸ್ವಪುರಂ ಜಗಾಮ ॥ 13 ॥ ಶತಕ್ರತುರಪೀಂದ್ರತ್ವಂ ಚಕಾರ ॥ 14 ॥ ಸ್ವರ್ಯಾತೇ ತು ರಜೌ ನಾರದರ್ಷಿಚೋದಿತಾ ರಜಿಪುತ್ರಾಶ್ಶತಕ್ರತು-ಮಾತ್ಮಪಿತೃಪುತ್ರಂ ಸಮಾಚಾರಾದ್ರಾಜ್ಯಂ ಯಾಚಿತವಂತಃ ॥ 15 ॥ ಅಪ್ರದಾನೇನ ಚ ವಿಜಿತ್ಯೇಂದ್ರಮತಿಬಲಿನಃ ಸ್ವಯಮಿಂದ್ರತ್ವಂ ಚಕ್ರುಃ ॥16॥ ತತಶ್ಚ ಬಹುತಿಥೇ ಕಾಲೇ ಹ್ಯತೀತೇ ಬೃಹಸ್ಪತಿಮೇಕಾಂತೇ ದೃಷ್ಟ್ವಾ ಅಪಹೃತತ್ರೈಲೋಕ್ಯಯಜ್ಞಭಾಗಃ ಶತಕ್ರತುರುವಾಚ ॥ 17 ॥ ಬದರೀಫಲಮಾತ್ರಮಪ್ಯರ್ಹಸಿ ಮಮಾಪ್ಯಾಯನಾಯ ಪುರೋಡಾಶ-ಖಂಡಂ ದಾತುಮಿತ್ಯುಕ್ತೋ ಬೃಹಸ್ಪತಿರುವಾಚ ॥ 18 ॥ ಯದ್ಯೇವಂ**

---

ಅನೇಕಪ್ರಕಾರದ ಪ್ರಿಯಚತುರೋಕ್ತಿಗಳಿಂದ ಕೂಡಿದ ನಯಪೂರ್ವಕವಾದ ಶರಣಾಗತಿಯನ್ನು, ಅದು ಶತ್ರುಪಕ್ಷದಿಂದ ಬಂದರೂ ಸಹ, ಅತಿಕ್ರಮಿಸಲಾಗುವುದಿಲ್ಲ!" ಎಂದು ಉದ್ಗರಿಸಿ ತನ್ನ ರಾಜಧಾನಿಗೆ ಹೊರಟುಹೋದನು (12-13). ಇತ್ತ ಶಕ್ರನು ಇಂದ್ರಪದವಿಯನ್ನು ಅನುಭವಿಸುತ್ತಿದ್ದನು. ಕಾಲಾಂತರದಲ್ಲಿ ರಜಿಯು ಸ್ವರ್ಗಸ್ಥನಾಗಲು ನಾರದಮುನಿಯು ರಜಿಯ ಮಕ್ಕಳಿಗೆ ಹೇಳಿಕೊಟ್ಟು ಅವರನ್ನು ಹುರಿದುಂಬಿಸಿದನು. ತಮ್ಮ ತಂದೆಗೆ ಪುತ್ರನೆಂದು ಹೇಳಿಕೊಂಡಿದ್ದ ಇಂದ್ರನ ಬಳಿಗೆ ರಜಿಪುತ್ರರು ಹೋಗಿ ಲೋಕನ್ಯಾಯದಂತೆ ಇಂದ್ರರಾಜ್ಯದಲ್ಲಿ ಪಾಲನ್ನು ಕೇಳಿದರು! (14-15). ಅವನು ಕೊಡದಿರಲಾಗಿ, ಬಲಾಢ್ಯರಾದ ರಜಿಪುತ್ರರು ಇಂದ್ರನನ್ನು ಗೆದ್ದು ಸ್ವರ್ಗಾಧಿಪತ್ಯವನ್ನು ತಾವೇ ನಡೆಸತೊಡಗಿದರು. ಹೀಗೆ ಬಹುಕಾಲ ಕಳೆಯಿತು. ಇಂದ್ರನಿಗೆ ತ್ರಿಲೋಕಾಧಿಪತ್ಯವೂ ಯಜ್ಞದಲ್ಲಿ ಹವಿರ್ಭಾಗವೂ ತಪ್ಪಿಹೋಯಿತು. ಅವನು ಒಮ್ಮೆ ಏಕಾಂತದಲ್ಲಿ ಬೃಹಸ್ಪತಿಯನ್ನು ಕಂಡು ಹೀಗೆಂದನು (16-17): "ಗುರುಗಳೆ, (ಯಜ್ಞದಲ್ಲಿ ನಿಮಗೆ ಅರ್ಪಿತವಾಗುವ) ಪುರೋಡಾಶದಲ್ಲಿ ಒಂದು ಬೋರೆ ಹಣ್ಣಿನಷ್ಟನ್ನಾದರೂ ನನ್ನ ತೃಪ್ತಿಗಾಗಿ ನೀವು ಕೊಡಬೇಕು!" ಅದಕ್ಕೆ ಬೃಹಸ್ಪತಿಯು "ಶಕ್ರ, ಹೀಗಾಗಿದ್ದರೆ ಮೊದಲೇ ನನ್ನನ್ನು ಕೇಳಿಕೊಳ್ಳಬಹುದಾಗಿತ್ತು. ನಿನಗೋಸ್ಕರ ಯಾವ ಅಕಾರ್ಯವನ್ನಾದರೂ ನಾನು ಮಾಡಿಯೇನು. ನೋಡುತ್ತಿರು, ಸ್ವಲ್ಪ ದಿನಗಳಲ್ಲಿಯೇ ನಿನ್ನ ಇಂದ್ರಪದವಿಯನ್ನು ನಿನಗೆ

**ತ್ವಯಾಹಂ ಪೂರ್ವಮೇವ ಚೋದಿತಸ್ಸ್ಯಾಂ ತನ್ಮಯಾ ತ್ವದರ್ಥಂ ಕಿಮಕರ್ತ್ತವ್ಯಮಿತ್ಯಲ್ಪೈರೇವಾಹೋಭಿಸ್ತ್ವಾಂ ನಿಜಂ ಪದಂ ಪ್ರಾಪಯಿಷ್ಯಾ-ಮೀತ್ಯಭಿಧಾಯ ತೇಷಾಮನುದಿನಮಾಭಿಚಾರಿಕಂ ಬುದ್ಧಿಮೋಹಾಯ ಶಕ್ರಸ್ಯ ತೇಜೋಽಭಿವೃದ್ಧಯೇ ಜುಹಾವ ॥ 19 ॥ ತೇ ಚಾಪಿ ತೇನ ಬುದ್ಧಿಮೋಹೇನಾಭಿಭೂಯಮಾನಾ ಬ್ರಹ್ಮದ್ವಿಷೋ ಧರ್ಮತ್ಯಾಗಿನೋ ವೇದವಾದಪರಾಙ್ಮುಖಾ ಬಭೂವುಃ ॥ 20 ॥ ತತಸ್ತಾನಪೇತಧರ್ಮಾ-ಚಾರಾನಿಂದ್ರೋ ಜಘಾನ ॥ 21 ॥ ಪುರೋಹಿತಾಪ್ಯಾಯಿತತೇಜಾಶ್ಚ ಶಕ್ರೋ ದಿವಮಾಕ್ರಮತ್ ॥ 22 ॥ ಏತದಿಂದ್ರಸ್ಯ ಸ್ವಪದಚ್ಯವನಾದಾರೋಹಣಂ ಶ್ರುತ್ವಾ ಪುರುಷಃ ಸ್ವಪದಭ್ರಂಶಂ ದೌರಾತ್ಮ್ಯಂ ಚ ನಾಪ್ನೋತಿ ॥ 23 ॥ ರಂಭಸ್ತ್ವನಪತ್ಯೋಽಭವತ್ ॥ 24 ॥ ಕ್ಷತ್ತ್ರವೃದ್ಧಸುತಃ ಪ್ರತಿಕ್ಷತ್ತ್ರೋಽ-ಭವತ್ ॥ 25 ॥ ತತ್ಪುತ್ರಃ ಸಂಜಯಸ್ತಸ್ಯಾಪಿ ಜಯಸ್ತಸ್ಯಾಪಿ ವಿಜಯ-ಸ್ತಸ್ಮಾಚ್ಚ ಜಜ್ಞೇ ಕೃತಃ ॥ 26 ॥ ತಸ್ಯ ಚ ಹರ್ಯಧನೋ ಹರ್ಯಧನ-**

---

ಕೊಡಿಸುವೆನು" ಎಂದು ಹೇಳಿದನು. ಅಲ್ಲದೆ ರಜಿಪುತ್ರರಿಗೆ ಬುದ್ಧಿವ್ಯಾಮೋಹ ವುಂಟಾಗಬೇಕೆಂದೂ ಶಕ್ರನ ತೇಜಸ್ಸು ವರ್ಧಿಸಬೇಕೆಂದೂ ಸಂಕಲ್ಪಿಸಿ ಆಭಿಚಾರಿಕ ಹೋಮವನ್ನಾರಂಭಿಸಿದನು (18-19). ಬೃಹಸ್ಪತಿಯ ಈ ಆಭಿಚಾರಿಕ ಹೋಮದ ಪ್ರಭಾವದಿಂದ ರಜಿಪುತ್ರರಿಗೆ ಬುದ್ಧಿವ್ಯಾಮೋಹ ವುಂಟಾಯಿತು. ಅವರು ಬ್ರಹ್ಮದ್ವೇಷಿಗಳೂ ಧರ್ಮಕಾರ್ಯವನ್ನು ತ್ಯಜಿಸಿ ದವರೂ ವೇದವಚನಗಳಿಗೆ ಪರಾಙ್ಮುಖರೂ ಆದರು (20). ಆಗ ಧರ್ಮಾಚಾರ ವರ್ಜಿತರಾದ ರಜಿಪುತ್ರರನ್ನು ಇಂದ್ರನು ವಧಿಸಿದನು. ಪುರೋಹಿತನಾದ ಬೃಹಸ್ಪತಿಯಿಂದ ತೇಜೋವೃದ್ಧಿಯುಂಟಾಗಲು, ಇಂದ್ರನು ಸ್ವರ್ಗದಲ್ಲಿ ಸ್ವಸ್ಥಾನ ವನ್ನೇರಿದನು (21-22). ಈ ಪ್ರಕಾರವಾಗಿ ಇಂದ್ರನು ಸ್ಥಾನಭ್ರಷ್ಟನಾದುದನ್ನೂ ಮತ್ತೆ ಆ ಸ್ಥಾನಕ್ಕೆ ಏರಿದ್ದನ್ನೂ ಕೇಳಿದ ಪುರುಷನು ಸ್ಥಾನಭ್ರಂಶವನ್ನೂ ದುರ್ಬುದ್ಧಿ ಯನ್ನೂ ಪಡೆಯುವುದಿಲ್ಲ (23). (ಇನ್ನು ಆಯುವಿನ ಇನ್ನೊಬ್ಬ ಪುತ್ರನಾದ) ರಂಭನಿಗೆ ಸಂತಾನವಾಗಲಿಲ್ಲ. (ಹಿಂದೆ ಹೇಳಿದ) ಕ್ಷತ್ತ್ರವೃದ್ಧನಿಗೆ ಪ್ರತಿಕ್ಷತ್ತ್ರ ಎಂಬ ಇನ್ನೊಬ್ಬ ಮಗನಿದ್ದನು. ಅವನ ಮಗ ಸಂಜಯ. ಆತನ ಮಗ ಜಯ. ಜಯನ ಮಗ ವಿಜಯ. ವಿಜಯನಿಗೆ ಕೃತ ಎಂಬ ಪುತ್ರನು ಜನಿಸಿದನು (24-26). ಕೃತನ

**ಸುತಸ್ಸಹದೇವಸ್ತಸ್ಮಾದದೀನಸ್ತಸ್ಯ ಜಯತ್ಸೇನಸ್ತತಶ್ಚ ಸಂಸ್ಕೃತಿಸ್ತತ್ಪುತ್ರಃ ಕ್ಷತ್ರಧರ್ಮಾ ಇತ್ಯೇತೇ ಕ್ಷತ್ರವೃದ್ಧಸ್ಯ ವಂಶ್ಯಾಃ ॥ 27 ॥ ತತೋ ನಹುಷ-ವಂಶಂ ಪ್ರವಕ್ಷ್ಯಾಮಿ ॥ 28 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ನವಮೋಽಧ್ಯಾಯಃ

---

ತನಯ ಹರ್ಯಧನ. ಅವನ ತನಯ ಸಹದೇವ. ಅವನಿಂದ ಅದೀನನೂ, ಅವನಿಂದ ಜಯತ್ಸೇನನೂ ಹುಟ್ಟಿದರು. ಜಯತ್ಸೇನನ ಮಗ ಸಂಸ್ಕೃತಿ. ಆತನ ಮಗ ಕ್ಷತ್ರಧರ್ಮ. ಇವರು ಕ್ಷತ್ರವೃದ್ಧನ ವಂಶೀಯರು. ಇನ್ನು ನಹುಷನ ವಂಶವನ್ನು ವಿವರಿಸುವೆನು (27-28).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಒಂಬತ್ತನೆಯ ಅಧ್ಯಾಯ ಮುಗಿಯಿತು.



## ದಶಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಯತಿಯಯಾತಿಸಂಯತ್ಯಾಯಾತಿವಿಯಾತಿಕೃತಿಸಂಜ್ಞಾ ನಹುಷಸ್ಯ ಷಟ್ ಪುತ್ರಾ ಮಹಾಬಲಪರಾಕ್ರಮಾ ಬಭೂವುಃ ॥ 1 ॥ ಯತಿಸ್ತು ರಾಜ್ಯಂ ನೈಚ್ಛತ್ ॥ 2 ॥ ಯಯಾತಿಸ್ತು ಭೂಭೃದಭವತ್ ॥ 3 ॥ ಉಶನಸಶ್ಚ ದುಹಿತರಂ ದೇವಯಾನೀಂ ವಾರ್ಷಪರ್ವಣೀಂ ಚ ಶರ್ಮಿಷ್ಠಾಮುಪ ಯೇಮೇ ॥ 4 ॥ ಅತ್ರಾನುವಂಶಶ್ಲೋಕೋ ಭವತಿ ॥ 5 ॥**

**ಯದುಂ ಚ ತುರ್ವಸುಂ ಚೈವ ದೇವಯಾನೀ ವ್ಯಜಾಯತ।**
**ದ್ರುಹ್ಯುಂ ಚಾನುಂ ಚ ಪೂರುಂ ಚ ಶರ್ಮಿಷ್ಠಾ ವಾರ್ಷಪರ್ವಣೀ ॥ 6**

---

### ಅಧ್ಯಾಯ 10

ನಹುಷನ ವಂಶ; ಯಯಾತಿಯ ಚರಿತೆ.

ಪರಾಶರರು ಹೇಳಿದರು: ಮೈತ್ರೇಯ, ಆಯುವಿನ ಮಗದೊಬ್ಬ ಪುತ್ರನಾದ ನಹುಷನಿಗೆ ಯತಿ, ಯಯಾತಿ, ಸಂಯಾತಿ, ಆಯಾತಿ, ವಿಯಾತಿ, ಕೃತಿ—ಎಂಬ ಆರುಮಂದಿ ಪುತ್ರರಿದ್ದರು. ಅವರು ಬಹಳ ಬಲಶಾಲಿಗಳೂ ಪರಾಕ್ರಮಿಗಳೂ ಆಗಿದ್ದರು (1). ಅವರಲ್ಲಿ ಯತಿಯು ರಾಜ್ಯವನ್ನು ಅಪೇಕ್ಷಿಸಲಿಲ್ಲವಾದ್ದರಿಂದ ಯಯಾತಿಯು ರಾಜನಾದನು. ಶುಕ್ರನ ಪುತ್ರಿಯಾದ ದೇವಯಾನಿಯನ್ನೂ ವೃಷಪರ್ವನ ಮಗಳಾದ ಶರ್ಮಿಷ್ಠೆಯನ್ನೂ ಆತನು ಮದುವೆಯಾದನು. ಅವನ ವಂಶದ ಸಂಬಂಧದಲ್ಲಿ ಈ ಶ್ಲೋಕವು ಪ್ರಸಿದ್ಧವಾಗಿದೆ (2-5). "ದೇವಯಾನಿಯು ಯದು ಮತ್ತು ತುರ್ವಸು—ಎಂಬ ಪುತ್ರರನ್ನು ಹಡೆದಳು. ವೃಷಪರ್ವನ ಮಗಳಾದ ಶರ್ಮಿಷ್ಠೆಯು ದ್ರುಹ್ಯು, ಅನು, ಪೂರು*

---

* ಯಯಾತಿಯು ಶರ್ಮಿಷ್ಠೆಯಲ್ಲಿ ಅನುರಕ್ತನಾಗಿದ್ದು ದೇವಯಾನಿಯನ್ನು ಪ್ರೀತಿಸುತ್ತಿರಲಿಲ್ಲವೆಂದು ಮಗಳು ಹೇಳಿದ ದೂರನ್ನು ಕೇಳಿ ಶುಕ್ರನು ಯಯಾತಿಗೆ ಮುಪ್ಪು ಬರಲೆಂದು ಶಪಿಸಿದನು. ಅನಂತರ ಪ್ರಸನ್ನನಾಗಿ ಆ ಮುಪ್ಪನ್ನು ಇನ್ನೊಬ್ಬರಿಗೆ ಕೊಟ್ಟು ಯೌವನವನ್ನು ಪರಿವರ್ತಿಸಿಕೊಳ್ಳಬಹುದೆಂದು ಶಾಪಕ್ಕೆ ಪರಿಹಾರವನ್ನು ನೀಡಿದನು. ಪೂರುವಿಗೆ ಪುರಾಣಾಂತರಗಳಲ್ಲಿ 'ಪುರು' ಎಂಬ ಹೆಸರು ಇದೆ.

**ಕಾವ್ಯಶಾಪಾಚ್ಚಾಕಾಲೇನೈವ ಯಯಾತಿರ್ಜರಾಮವಾಪ ॥ 7 ॥ ಪ್ರಸನ್ನ-ಶುಕ್ರವಚನಾಚ್ಚ ಸ್ವಜರಾಂ ಸಂಕ್ರಾಮಯಿತುಂ ಜ್ಯೇಷ್ಠಂ ಪುತ್ರಂ ಯದು-ಮುವಾಚ ॥ 8 ॥ ವತ್ಸ, ತ್ವನ್ಮಾತಾಮಹಶಾಪಾದಿಯಮಕಾಲೇನೈವ ಜರಾ ಮಮೋಪಸ್ಥಿತಾ ತಾಮಹಂ ತಸ್ಯೈವಾನುಗ್ರಹಾದ್ಭವತಸ್ಸಂಚಾರಯಾಮಿ ॥ 9 ॥ ಏಕಂ ವರ್ಷಸಹಸ್ರಮತೃಪ್ತೋಽಸ್ಮಿ ವಿಷಯೇಷು ತ್ವದ್ವಯಸಾ ವಿಷಯಾನಹಂ ಭೋಕ್ತುಮಿಚ್ಛಾಮಿ ॥ 10 ॥ ನಾತ್ರ ಭವತಾ ಪ್ರತ್ಯಾಖ್ಯಾನಂ ಕರ್ತವ್ಯಮಿತ್ಯುಕ್ತಸ್ಸಯದುರ್ನೈಚ್ಛತ್ತಾಂ ಜರಾಮಾದಾತುಮ್ ॥ 11 ॥ ತಂ ಚ ಪಿತಾ ಶಶಾಪ ತ್ವತ್ಪ್ರಸೂತಿರ್ನರಾಜ್ಯಾರ್ಹಾ ಭವಿಷ್ಯತೀತಿ ॥ 12 ॥ ಅನಂತರಂ ಚ ತುರ್ವಸುಂ ದ್ರುಹ್ಯುಮನುಂ ಚ ಪೃಥಿವೀಪತಿರ್ಜರಾ-ಗ್ರಹಣಾರ್ಥಂ ಸ್ವಯೌವನಪ್ರದಾನಾಯ ಚಾಭ್ಯರ್ಥಯಾಮಾಸ ॥ 13 ॥**

---

—ಎಂಬವರನ್ನು ಹಡೆದಳು" (6). ಶುಕ್ರನ ಶಾಪದಿಂದ ಯಯಾತಿಗೆ ಅಕಾಲದಲ್ಲಿಯೇ ಮುಪ್ಪು ಬಂದಿತು. ಅನಂತರ ಪ್ರಸನ್ನನಾದ ಶುಕ್ರನ ವಚನದಂತೆ ತನ್ನ ಮುಪ್ಪನ್ನು ಹಿರಿಯ ಮಗನಾದ ಯದುವಿಗೆ ಕೊಟ್ಟು ಪರಿವರ್ತಿಸಿಕೊಳ್ಳುವುದಕ್ಕಾಗಿ ಯದುವನ್ನು ಕುರಿತು "ವತ್ಸ, ನಿನ್ನ ಮಾತಾಮಹನ ಶಾಪದಿಂದ ಅಕಾಲದಲ್ಲಿಯೇ ಮುಪ್ಪು ನನಗೆ ಬಂದುಬಿಟ್ಟಿತು. ಆತನ ಅನುಗ್ರಹದಿಂದ ಇದನ್ನು ನಿನಗೆ ವರ್ಗಾಯಿಸಲು ಬಯಸುತ್ತೇನೆ (7-9). ಇಂದಿಗೂ ವಿಷಯಸುಖಗಳನ್ನು ಅನುಭವಿಸಿ ನನಗೆ ತೃಪ್ತಿಯಾಗಿಲ್ಲ. ನಿನ್ನ ಯೌವನದ ಬಲದಿಂದ ಇನ್ನೊಂದು ಸಾವಿರ ವರ್ಷ ವಿಷಯಸುಖಗಳನ್ನನುಭವಿಸಲು ಇಚ್ಛಿಸುತ್ತೇನೆ. ಈ ಕೋರಿಕೆಯನ್ನು ನೀನು ನಿರಾಕರಿಸಬಾರದು" ಎಂದನು. ಆ ಮುಪ್ಪನ್ನು ಸ್ವೀಕರಿಸಲು ಯದು ಒಪ್ಪಲಿಲ್ಲ (10-11). ಆಗ ತಂದೆಯು "ಎಲಾ, ನಿನ್ನ ಸಂತತಿಯು ರಾಜಪದವಿಯನ್ನನುಭವಿಸಲು ಅರ್ಹವಾಗದೆ ಹೋಗಲಿ" ಎಂದು ಯದುವನ್ನು ಶಪಿಸಿದನು (12). ಅನಂತರ ಯಯಾತಿರಾಜನು ತುರ್ವಸು, ದ್ರುಹ್ಯು, ಅನು—ಇವರನ್ನು ಕುರಿತು ಯಥಾಕ್ರಮವಾಗಿ, ಅವರ ಯೌವನವನ್ನು ಕೊಟ್ಟು ತನ್ನ ಮುಪ್ಪನ್ನು ಸ್ವೀಕರಿಸಬೇಕೆಂದು ಕೇಳಿಕೊಂಡನು. ಅವರಲ್ಲಿ ಪ್ರತಿಯೊಬ್ಬರೂ ತಂದೆಯ ಕೋರಿಕೆಯನ್ನು ತಿರಸ್ಕರಿಸಿದರು. ಆಗ ಯಯಾತಿಯೂ ಆ

**ತೈರಪ್ಯೇಕೈಕೇನ ಪ್ರತ್ಯಾಖ್ಯಾತಸ್ತಾನ್ ಶಶಾಪ ॥ 14 ॥ ಅಥ ಶರ್ಮಿಷ್ಠಾತನಯಮಶೇಷಖನೀಯಾಂಸಂ ಪೂರುಂ ತಥೈವಾಹ ॥ 15 ॥ ಸ ಚಾತಿ ಪ್ರವಣಮತಿಃ ಸಬಹುಮಾನಂ ಪಿತರಂ ಪ್ರಣಮ್ಯ ಮಹಾಪ್ರಸಾದೋಽಯಮಸ್ಮಾಕಮಿತ್ಯುದಾರಮಭಿದಾಯ ಜರಾಂ ಜಗ್ರಾಹ ॥ 16 ॥ ಸ್ವಕೀಯಂ ಚ ಯೌವನಂ ಸ್ವಪಿತ್ರೇ ದದೌ ॥ 17 ॥ ಸೋಽಪಿ ಪೌರವಂ ಯೌವನಮಾಸಾದ್ಯ ಧರ್ಮಾವಿರೋಧೇನ ಯಥಾಕಾಮಂ ಯಥಾಕಾಲೋಪಪನ್ನಂ ಯಥೋತ್ಸಾಹಂ ವಿಷಯಾಂಶ್ಚಚಾರ ॥ 18 ॥ ಸಮ್ಯಕ್ ಚ ಪ್ರಜಾಪಾಲನಮಕರೋತ್ ॥ 19 ॥ ವಿಶ್ವಾಚ್ಯಾದೇವಯಾನ್ಯಾ ಚ ಸಹೋಪಭೋಗಂ ಭುಕ್ತ್ವಾ ಕಾಮಾನಾಮಂತಂ ಪ್ರಾಪ್ಸ್ಯಾಮೀತ್ಯನುದಿನಂ ಉನ್ಮನಸ್ಕೋ ಬಭೂವ ॥ 20 ॥ ಅನುದಿನಂ ಚೋಪಭೋಗತಃ ಕಾಮಾನತಿರಮ್ಯಾನ್ಮೇನೇ ॥ 21 ॥ ತತಶ್ಚೈವಮಗಾಯತ ॥ 22 ॥**

---

ಮೂವರನ್ನೂ (ಹಿಂದಿನಂತೆಯೇ) ಶಪಿಸಿದನು (13-14). ಅನಂತರ ಶರ್ಮಿಷ್ಠೆಯ ಮಗನೂ ಎಲ್ಲರಿಗಿಂತ ಕಿರಿಯನೂ ಆದ ಪೂರುವನ್ನು ಕಂಡು ಹಿಂದಿನಂತೆಯೇ ತನ್ನ ಬೇಡಿಕೆಯನ್ನು ಮುಂದಿಟ್ಟನು. ಪೂರುವಾದರೋ ಅತ್ಯಂತ ವಿನಯಶಾಲಿ. ಅವನು ಆದರದಿಂದ ತಂದೆಗೆ ನಮಸ್ಕರಿಸಿ ಉದಾರಬುದ್ಧಿಯಿಂದ "ಇದು ನನಗೆ ಅನುಗ್ರಹಿಸಿದ ದೊಡ್ಡ ಪ್ರಸಾದವೇ ಸರಿ" ಎಂದು ನುಡಿದು ತಂದೆಯ ಮುಪ್ಪನ್ನು ಸ್ವೀಕರಿಸಿದನು. ಅಲ್ಲದೆ ತನ್ನ ಯೌವನವನ್ನು ತಂದೆಗೆ ವಿನಿಮಯ ಮಾಡಿದನು (15-17). ಯಯಾತಿಯಾದರೋ ಪೂರುವಿನ ತಾರುಣ್ಯವನ್ನು ಪಡೆದು ಧರ್ಮಕ್ಕೆ ವಿರೋಧವಿಲ್ಲದಂತೆ ಸಮಯಾನುಸಾರವಾಗಿ ಪ್ರಾಪ್ತವಾದ ವಿಷಯಭೋಗಗಳನ್ನು ಯಥೇಚ್ಛವಾಗಿ ಅನುಭವಿಸಿದನು. ಪ್ರಜಾಪಾಲನಕಾರ್ಯವನ್ನೂ ದಕ್ಷತೆಯಿಂದ ನಡೆಸಿದನು (18-19). ವಿಶ್ವಾಚಿಯೆಂಬ ಅಪ್ಸರೆಯೊಡನೆಯೂ ದೇವಯಾನಿಯೊಡನೆಯೂ ಸೇರಿ ನಾನಾ ಭೋಗಗಳನ್ನು ಅನುಭವಿಸುತ್ತ "ಆಸೆಗಳನ್ನು ಮುಗಿಸಿಬಿಡುವೆನು!" ಎಂದುಕೊಂಡು ಪ್ರತಿ ದಿನವೂ ಭೋಗಸುಖಕ್ಕಾಗಿ ಹಾತೊರೆಯುತ್ತಿದ್ದನು. ಭೋಗವನ್ನು ಅನುಭವಿಸುತ್ತಲೇ ಈ ಕಾಮಸುಖವು ಅತಿ ರಮ್ಯವೆಂದು ತಿಳಿಯುತ್ತಾ ಹೋದನು. ಹೀಗಿರಲಾಗಿ ಒಂದು ಸಲ ಈ ಉದ್ಗಾರವು ಅವನಿಂದ ಬಂದಿತು (20-22):

**ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ॥ 23**

**ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ।**
**ಏಕಸ್ಯಾಪಿ ನ ಪರ್ಯಾಪ್ತಂ ತಸ್ಮಾತ್ತೃಷ್ಣಾಂ ಪರಿತ್ಯಜೇತ್॥ 24**

**ಯದಾ ನ ಕುರುತೇ ಭಾವಂ ಸರ್ವಭೂತೇಷು ಪಾಪಕಮ್।**
**ಸಮದೃಷ್ಟೇಸ್ತದಾ ಪುಂಸಃ ಸರ್ವಾಸ್ಸುಖಮಯಾ ದಿಶಃ॥ 25**

**ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ।**
**ತಾಂ ತೃಷ್ಣಾಂ ಸಂತ್ಯಜೇತ್ಪ್ರಾಜ್ಞಸ್ಸುಖೇನೈವಾಭಿಪೂರ್ಯತೇ॥ 26**

**ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ।**
**ಧನಾಶಾ ಜೀವಿತಾಶಾ ಚ ಜೀರ್ಯತೋಽಪಿ ನ ಜೀರ್ಯತಃ॥ 27**

---

“ಆಸೆಗಳ ಉಪಭೋಗದಿಂದ ಎಂದೆಂದಿಗೂ ಈ ಆಸೆಯು ಶಾಂತವಾಗುವುದಿಲ್ಲ! ಬೆಂಕಿಗೆ ತುಪ್ಪವನ್ನು ಸುರಿದಂತೆ, ಇದು ಮತ್ತೆ ಮತ್ತೆ ಬೆಳೆಯುತ್ತಲೇ ಹೋಗುವುದು (23). ಈ ಜಗತ್ತಿನಲ್ಲಿರುವ ಎಲ್ಲ ಭತ್ತ ಗೋಧಿಗಳೂ (ಕಾಳು ಕಡ್ಡಿಗಳೂ), ಚಿನ್ನವೂ, ಪಶುಗಳೂ, ಸ್ತ್ರೀಯರೂ—ಎಲ್ಲವೂ ಸಹ ಒಬ್ಬನಿಗೆ ಸಾಲವು! ಆದ್ದರಿಂದ ಆಸೆಯನ್ನು ತೊರೆಯಬೇಕು! (24). ಯಾವಾಗ ಮಾನವನು ಸಕಲಭೂತಗಳಲ್ಲಿಯೂ ಪಾಪಭಾವನೆಯನ್ನು ತಳೆಯುವುದಿಲ್ಲವೋ ಆಗ ಸಮದೃಷ್ಟಿಯಾಗುತ್ತಾನೆ. ಆತನಿಗೆ ಸಕಲದಿಕ್ಕುಗಳೂ ಸುಖಮಯವಾಗಿ ಪರಿಣಮಿಸುತ್ತವೆ (25). ಬುದ್ಧಿಹೀನರಿಗೆ ಯಾವುದನ್ನು ತೊರೆಯಲು ಅಶಕ್ಯವೋ ತಮಗೆ ಮುಪ್ಪು ಬಂದರೂ ಯಾವುದಕ್ಕೆ ಮುಪ್ಪು ಬರುವುದೇ ಇಲ್ಲವೋ ಅಂಥ ಆಸೆಯನ್ನು ಬುದ್ಧಿಶಾಲಿಯು ತೊರೆದುಬಿಡಬೇಕು. ಆಸೆಯನ್ನು ತೊರೆದವನು ಸುಖದಿಂದ ಪರಿಪೂರ್ಣನಾಗುತ್ತಾನೆ (26). ವಯಸ್ಸಾದಂತೆ ತಲೆಕೂದಲುಗಳು ಜೀರ್ಣವಾಗಿ ಉದುರುತ್ತವೆ. ಮುದುಕನಾದಂತೆ ಹಲ್ಲುಗಳು ಸಡಿಲವಾಗುತ್ತವೆ. ದೇಹವು ಜೀರ್ಣವಾದರೂ ಸಹ ಹಣದ ಆಸೆ, ಬದುಕುವ ಆಸೆ—ಇವೆರಡು ಮಾತ್ರ ಜೀರ್ಣವಾಗುವುದಿಲ್ಲ! (27). ವಿಷಯಸುಖದಲ್ಲಿ ಆಸಕ್ತನಾದ ನನಗೆ ಸಾವಿರವರ್ಷಗಳು ಕಳೆದು ಹೋದವು. ಆದರೂ ವಿಷಯ

**ಪೂರ್ಣಂ ವರ್ಷಸಹಸ್ರಂ ಮೇ ವಿಷಯಾಸಕ್ತಚೇತಸಃ।**
**ತಥಾಪ್ಯನುದಿನಂ ತೃಷ್ಣಾ ಮಮ ತೇಷೂಪಜಾಯತೇ॥** 28

**ತಸ್ಮಾದೇತಾಮಹಂ ತ್ಯಕ್ತ್ವಾ ಬ್ರಹ್ಮಣ್ಯಾಧಾಯ ಮಾನಸಮ್।**
**ನಿರ್ದ್ವಂದ್ವೋನಿರ್ಮಮೋ ಭೂತ್ವಾ ಚರಿಷ್ಯಾಮಿ ಮೃಗೈಸ್ಸಹ॥** 29

*ಶ್ರೀಪರಾಶರ ಉವಾಚ:*

**ಪುರೋಸ್ಸಕಾಶಾದಾದಾಯ ಜರಾಂ ದತ್ತ್ವಾ ಚ ಯೌವನಮ್।**
**ರಾಜ್ಯೇऽಭಿಷಿಚ್ಯ ಪೂರುಂ ಚ ಪ್ರಯಯೌ ತಪಸೇ ವನಮ್॥** 30

**ದಿಶಿ ದಕ್ಷಿಣಪೂರ್ವಸ್ಯಾಂ ತುರ್ವಸುಂ ಚ ಸಮಾದಿಶತ್।**
**ಪ್ರತೀಚ್ಯಾಂ ಚ ತಥಾ ದ್ರುಹ್ಯುಂ ದಕ್ಷಿಣಾಯಾಂ ತತೋ ಯದುಮ್॥**

**ಉದೀಚ್ಯಾಂ ಚ ತಥ್ಯೈವಾನುಂ ಕೃತ್ವಾ ಮಂಡಲಿನೋ ನೃಪಾನ್।**
**ಸರ್ವಪೃಥ್ವೀಪತಿಂ ಪೂರುಂ ಸೋऽಭಿಷಿಚ್ಯ ವನಂ ಯಯೌ॥** 32

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ದಶಮೋऽಧ್ಯಾಯಃ

---

ಭೋಗದಲ್ಲಿ ನನಗೆ ಆಸೆ ದಿನದಿನವೂ ಹುಟ್ಟುತ್ತಲೇ ಇದೆ! (28). ಆದ್ದರಿಂದ ನಾನು ಈ ಆಸೆಯನ್ನು ಒದ್ದೋಡಿಸಿ, ಭಗವಂತನಲ್ಲಿ ಮನಸ್ಸನ್ನು ನೆಲೆಗೊಳಿಸಿ, ಸುಖದುಃಖಾದಿದ್ವಂದ್ವಗಳಿಂದ ದೂರನಾಗಿ, ಮಮಕಾರವನ್ನು ಪರಿತ್ಯಜಿಸಿ, (ಕಾಡಿನಲ್ಲಿ) ಮೃಗಗಳ ಜೊತೆಯಲ್ಲಿ ಕಾಲಕಳೆಯುವೆನು" ಎಂದು ನಿಶ್ಚಯಿಸಿದನು (29). ಅನಂತರ ಪೂರುವಿನಿಂದ ಮುಪ್ಪನ್ನು ಹಿಂದಕ್ಕೆ ತೆಗೆದುಕೊಂಡು ತಾರುಣ್ಯವನ್ನು ಒಪ್ಪಿಸಿ, ಪೂರುವಿಗೆ ತನ್ನ ಮಹಾರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ ತಪಸ್ಸಿಗಾಗಿ ವನಕ್ಕೆ ಹೊರಟುಹೋದನು (30). ರಾಜ್ಯದ ಆಗ್ನೇಯ ದಿಕ್ಕಿನಲ್ಲಿ ತುರ್ವಸುವನ್ನೂ ಪಶ್ಚಿಮದಲ್ಲಿ ದ್ರುಹ್ಯುವನ್ನೂ ದಕ್ಷಿಣದಲ್ಲಿ ಯದುವನ್ನೂ ಉತ್ತರದಲ್ಲಿ ಅನುವನ್ನೂ ಮಾಂಡಲಿಕರಾಜರೆಂದು ಗೊತ್ತುಮಾಡಿದನು. ಪೂರುವನ್ನು ಮಾತ್ರ ಸರ್ವ ಪೃಥ್ವೀಶ್ವರನಾದ ಚಕ್ರವರ್ತಿಯೆಂದು ಪಟ್ಟಾಭಿಷೇಕಮಾಡಿ ವನಕ್ಕೆ ಹೋದನು (31-32).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಹತ್ತನೆಯ ಅಧ್ಯಾಯ ಮುಗಿಯಿತು.

## ಏಕಾದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಅತಃ ಪರಂ ಯಯಾತೇಃ ಪ್ರಥಮಪುತ್ರಸ್ಯ ಯದೋರ್ವಂಶಮಹಂ ಕಥಯಾಮಿ ॥ 1 ॥ ಯತ್ರಾಶೇಷಲೋಕನಿವಾಸೋ ಮನುಷ್ಯಸಿದ್ಧಗನ್ಧರ್ವಯಕ್ಷರಾಕ್ಷಸಗುಹ್ಯಕಕಿಂಪುರುಷಾಪ್ಸರಉರಗವಿಹಗದೈತ್ಯದಾನವಾದಿತ್ಯರುದ್ರವಸ್ವಶ್ವಿಮರುದ್ದೇವರ್ಷಿಭಿರ್ಮುಮುಕ್ಷುಭಿರ್ಧರ್ಮಾರ್ಥಕಾಮಮೋಕ್ಷಾರ್ಥಿಭಿಶ್ಚ ತತ್ತತ್ಫಲಲಾಭಾಯ ಸದಾಭಿಷ್ಟುತೋಽಪರಿಚ್ಛೇದ್ಯ ಮಾಹಾತ್ಮ್ಯಾಂಶೇನ ಭಗವಾನನಾದಿನಿಧನೋ ವಿಷ್ಣುರವತತಾರ ॥ 2 ॥ ಅತ್ರ ಶ್ಲೋಕಃ ॥ 3 ॥**

**ಯದೋರ್ವಂಶಂ ನರಃ ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ ।**
**ಯತ್ರಾವತೀರ್ಣಂ ಕೃಷ್ಣಾಖ್ಯಂ ಪರಂ ಬ್ರಹ್ಮನಿರಾಕೃತಿ ॥ 4**

---

### ಅಧ್ಯಾಯ 11

ಯದುವಂಶ; ಕಾರ್ತವೀರ್ಯಾರ್ಜುನ ಚರಿತೆ.

ಪರಾಶರರು ಹೇಳಿದರು: ಮೈತ್ರೇಯ, ಇನ್ನುಮುಂದೆ ಯಯಾತಿಯ ಜ್ಯೇಷ್ಠಪುತ್ರನಾದ ಯದುವಿನ ವಂಶವನ್ನು ವಿವರಿಸುತ್ತೇನೆ. ಈ ವಂಶದಲ್ಲಿ ಅನಾದಿಯೂ ಅನಂತನೂ ಆದ ಭಗವಾನ್ ವಿಷ್ಣುವು ಅಪರಿಮಿತ ಮಹತ್ತ್ವಶಾಲಿಯಾದ ಅಂಶದಿಂದ (ಶ್ರೀಕೃಷ್ಣನಾಗಿ) ಅವತರಿಸಿದನು. ಆತನು ಸಮಸ್ತ ಲೋಕಗಳಿಗೆ ಆಧಾರನು. ಮನುಷ್ಯ, ಸಿದ್ಧ, ಗಂಧರ್ವ, ಯಕ್ಷ, ರಾಕ್ಷಸ, ಗುಹ್ಯಕ, ಕಿಂಪುರುಷ, ಅಪ್ಸರೆ, ಉರಗ, ವಿಹಗ, ದೈತ್ಯ, ದಾನವ, ಆದಿತ್ಯ, ರುದ್ರ, ವಸು, ಅಶ್ವಿನೀದೇವತೆಗಳು, ಮರುತ್ತು, ದೇವತೆ, ಋಷಿಗಳು— ಇವರಲ್ಲಿ ವಿಪತ್ತಿನಿಂದ ಬಿಡುಗಡೆಯನ್ನು ಬಯಸತಕ್ಕವರಿಂದಲೂ ಧರ್ಮಾರ್ಥ ಕಾಮಮೋಕ್ಷಗಳೆಂಬ ಪುರುಷಾರ್ಥಗಳನ್ನು ಬಯಸತಕ್ಕವರಿಂದಲೂ ಅಭೀಷ್ಟ ಫಲ ಲಾಭಕ್ಕಾಗಿ ಸರ್ವದಾ ಸ್ತುತಿಸಲ್ಪಡತಕ್ಕವನು (1-2). ಇಲ್ಲೊಂದು ಶ್ಲೋಕ ಉಂಟು: "ಮಾನವನು ಯದುವಂಶದ ಚರಿತೆಯನ್ನು ಕೇಳಿದರೆ ಸರ್ವಪಾಪ ಗಳಿಂದಲೂ ಬಿಡುಗಡೆ ಹೊಂದುತ್ತಾನೆ. (ಏಕೆಂದರೆ) ಈ ವಂಶದಲ್ಲಿ ಆಕಾರ

**ಸಹಸ್ರಜಿತ್ಕ್ರೋಷ್ಟುನಲನಹುಷಸಂಜ್ಞಾಶ್ಚತ್ವಾರೋ ಯದುಪುತ್ರಾ ಬಭೂವುಃ ॥ 5 ॥ ಸಹಸ್ರಜಿತ್ಪುತ್ರಶ್ಶತಜಿತ್ ॥ 6 ॥ ತಸ್ಯ ಹೈಹಯ-ಹೇಹಯವೇಣುಹಯಾಸ್ತ್ರಯಃ ಪುತ್ರಾ ಬಭೂವುಃ ॥ 7 ॥ ಹೈಹಯ-ಪುತ್ರೋ ಧರ್ಮಸ್ತಸ್ಯಾಪಿ ಧರ್ಮನೇತ್ರಸ್ತತಃ ಕುಂತಿಃ ಕುಂತೇಃ ಸಹಜಿತ್ ॥ 8 ॥ ತತ್ತನಯೋ ಮಹಿಷ್ಮಾನ್ ಯೋಽಸೌ ಮಾಹಿಷ್ಮತೀಂ ಪುರೀಂ ನಿವಾಸಯಾಮಾಸ ॥ 9 ॥ ತಸ್ಮಾದ್ಭದ್ರಶ್ರೇಣ್ಯಸ್ತತೋದುರ್ದಮಸ್ತಸ್ಮಾ-ದ್ಧನಕೋ ಧನಕಸ್ಯ ಕೃತವೀರ್ಯಕೃತಾಗ್ನಿಕೃತಧರ್ಮಕೃತೌಜಸಶ್ಚತ್ವಾರಃ ಪುತ್ರಾ ಬಭೂವುಃ ॥ 10 ॥ ಕೃತವೀರ್ಯಾದರ್ಜುನಸ್ಸಪ್ತದ್ವೀಪಾಧಿಪತಿ-ರ್ಬಾಹುಸಹಸ್ರೋ ಜಜ್ಞೇ ॥ 11 ॥ ಯೋಽಸೌ ಭಗವದಂಶಮತ್ರಿಕುಲ-ಪ್ರಸೂತಂ ದತ್ತಾತ್ರೇಯಾಖ್ಯಮಾರಾಧ್ಯ ಬಾಹುಸಹಸ್ರಮಧರ್ಮಸೇವಾ-ನಿವಾರಣಂ ಸ್ವಧರ್ಮಸೇವಿತ್ವಂ ರಣೇ ಪೃಥಿವೀಜಯಂ ಧರ್ಮತ-ಶ್ಚಾನುಪಾಲನಮರಾತಿಭ್ಯೋಽಪರಾಜಯಮಖಿಲಜಗತ್ಪ್ರಖ್ಯಾತಪುರುಷಾಚ್ಚ**

---

ರಹಿತವಾದ ಪರಬ್ರಹ್ಮವು 'ಕೃಷ್ಣ' ಎಂಬ ಹೆಸರಿನಿಂದ ಅವತರಿಸಿತು" (3-4). ಯದುವಿಗೆ ಸಹಸ್ರಜಿತ್, ಕ್ರೋಷ್ಟು, ನಲ, ನಹುಷ—ಎಂಬ ನಾಲ್ವರು ಮಕ್ಕಳಾದರು. ಸಹಸ್ರಜಿತ್ತಿನ ಮಗ ಶತಜಿತ್, ಅವನಿಗೆ ಹೈಹಯ, ಹೇಹಯ, ವೇಣುಹಯ—ಎಂಬ ಮೂವರು ಮಕ್ಕಳು ಜನಿಸಿದರು (5-7). ಹೈಹಯನ ಪುತ್ರನು ಧರ್ಮ. ಅವನ ಪುತ್ರ ಧರ್ಮನೇತ್ರ. ಅವನ ಪುತ್ರ ಕುಂತಿ ಎಂಬವನು. ಕುಂತಿಯ ಮಗ ಸಹಜಿತ್. ಅವನ ತನಯ ಮಹಿಷ್ಮಾನ್. ಇವನು ಮಾಹಿಷ್ಮತೀ ಎಂಬ ನಗರವನ್ನು ಕಟ್ಟಿಸಿದನು (8-9). ಮಹಿಷ್ಮಂತನಿಂದ ಭದ್ರಶ್ರೇಣ್ಯನೂ ಅವನಿಂದ ದುರ್ದಮನೂ ಅವನಿಂದ ಧನಕನೂ ಹುಟ್ಟಿದರು. ಧನಕನಿಗೆ ಕೃತವೀರ್ಯ, ಕೃತಾಗ್ನಿ, ಕೃತಧರ್ಮ, ಕೃತೌಜ—ಎಂಬ ನಾಲ್ವರು ಪುತ್ರರಾದರು (10). ಸಪ್ತದ್ವೀಪಗಳಿಗೆ ಅಧಿಪತಿಯೂ ಸಹಸ್ರಬಾಹುವೂ ಆದ ಅರ್ಜುನ ಎಂಬುವನು ಕೃತವೀರ್ಯನಿಂದ ಜನಿಸಿದನು. ಈ ಕಾರ್ತವೀರ್ಯಾರ್ಜುನನು ಭಗವ ದಂಶದಿಂದ ಅತ್ರಿಕುಲದಲ್ಲಿ ಅವತರಿಸಿದ ಶ್ರೀ ದತ್ತಾತ್ರೇಯನನ್ನು ಆರಾಧಿಸಿ, ಆತನಿಂದ ಸಾವಿರ ತೋಳುಗಳು, ಅಧರ್ಮಾಚರಣ ನಿವಾರಣೆ, ಸ್ವಧರ್ಮಾ ಚರಣೆ, ರಣದಲ್ಲಿ ವಿಶ್ವಜಯ, ಧರ್ಮದಿಂದ ರಾಜ್ಯಪಾಲನೆ, ಶತ್ರುಗಳಿಗೆ ಸೋಲದಿರುವುದು, ವಿಶ್ವವಿಖ್ಯಾತನಾದ ಮಹಾಪುರುಷನಿಂದ ಮರಣ—ಎಂಬ

**ಮೃತ್ಯುಮಿತ್ಯೇತಾನ್ವರಾನಭಿಲಷಿತವಾಲ್ಲೇಭೇ ಚ ॥ 12 ॥ ತೇನೇಯ-ಮಶೇಷದ್ವೀಪವತೀ ಪೃಥಿವೀ ಸಮ್ಯಕ್ಪರಿಪಾಲಿತಾ ॥ 13 ॥ ದಶಯಜ್ಞಸಹ-ಸ್ರಾಣ್ಯಸಾವಯಜತ್ ॥ 14 ॥ ತಸ್ಯ ಚ ಶ್ಲೋಕೋಽದ್ಯಾಪಿ ಗೀಯತೇ ॥15 ॥**

**ನ ನೂನಂ ಕಾರ್ತವೀರ್ಯಸ್ಯ ಗತಿಂ ಯಾಸ್ಯಂತಿ ಪಾರ್ಥಿವಾಃ।**
**ಯಜ್ಞೈರ್ದಾನೈಸ್ತಪೋಭಿರ್ವಾ ಪ್ರಶ್ರಯೇಣ ಶ್ರುತೇನ ಚ ॥ 16**

**ಅನಷ್ಟದ್ರವ್ಯತಾ ಚ ತಸ್ಯ ರಾಜ್ಯೇಽಭವತ್ ॥ 17 ॥ ಏವಂ ಚ ಪಂಚಾ-ಶೀತಿವರ್ಷಸಹಸ್ರಾಣ್ಯವ್ಯಾಹತಾರೋಗ್ಯಶ್ರೀಬಲಪರಾಕ್ರಮೋ ರಾಜ್ಯಮಕ-ರೋತ್ ॥ 18 ॥ ಮಾಹಿಷ್ಮತ್ಯಾಂ ದಿಗ್ವಿಜಯಾಭ್ಯಾಗತೋ ನರ್ಮದಾ-ಜಲಾವಗಾಹನಕ್ರೀಡಾತಿಪಾನಮದಾಕುಲೇನಾಯತ್ನೇನೈವ ತೇನಾಶೇಷ-ದೇವದೈತ್ಯಗಂಧರ್ವೇಶಜಯೋದ್ಭೂತಮದಾವಲೇಪೋಽಪಿ ರಾವಣಃ ಪಶುರಿವ ಬದ್‌ಧ್ವಾ ಸ್ವನಗರೈಕಾಂತೇ ಸ್ಥಾಪಿತಃ ॥ 19 ॥ ಯಶ್ಚ ಪಂಚಾ-**

---

ವರಗಳನ್ನು ಯಾಚಿಸಿ ಪಡೆದುಕೊಂಡಿದ್ದನು (11-12). ಈ ಅರ್ಜುನನು ಸಮಸ್ತ ದ್ವೀಪಸಹಿತವಾದ ಈ ಪೃಥ್ವಿಯನ್ನು ಉತ್ತಮರೀತಿಯಿಂದ ಆಳಿದನು. ಹತ್ತು ಸಾವಿರ ಯಾಗಗಳನ್ನು ನಡೆಸಿದನು. ಈತನ ವಿಷಯದಲ್ಲಿ ಈಗಲೂ ಒಂದು ಶ್ಲೋಕವು ಹಾಡಲ್ಪಡುತ್ತಿದೆ (13-15): "ಯಜ್ಞ, ದಾನ, ತಪಸ್ಸುಗಳಲ್ಲಾಗಲಿ ವಿದ್ಯಾ, ವಿನಯಗಳಲ್ಲಾಗಲಿ ಯಾವ ರಾಜರೂ ಕಾರ್ತವೀರ್ಯನಿಗೆ ಸಮಾನ ರಾಗಲು ಸಾಧ್ಯವೇ ಇಲ್ಲ" (16). ಆತನ ರಾಜ್ಯದಲ್ಲಿ ಯಾವುದೇ ಒಂದು ಪದಾರ್ಥವು ಕಳೆದುಹೋಯಿತೆಂಬುದೇ ಇಲ್ಲ. ಆರೋಗ್ಯ, ಸಂಪತ್ತು , ಬಲ, ಪರಾಕ್ರಮಗಳಿಗೆ ಅಡೆತಡೆಯಿಲ್ಲದಂತೆ ಆತನು ಈ ಪ್ರಕಾರವಾಗಿ ಎಂಬತ್ತೈದು ಸಾವಿರ ವರ್ಷಗಳವರೆಗೆ ರಾಜ್ಯಭಾರ ಮಾಡಿದನು (17-18). ಒಂದು ಸಲ ರಾವಣನು ದಿಗ್ವಿಜಯಕ್ಕಾಗಿ ಮಾಹಿಷ್ಮತಿಗೆ ಬಂದನು. ರಾವಣನಾದರೋ ನಿಖಿಲ-ದೇವ-ದೈತ್ಯ-ಗಂಧರ್ವರಾಜರನ್ನು ಜಯಿಸಿ ಗರ್ವೋದ್ರಿಕ್ತನಾಗಿದ್ದನು. ಕಾರ್ತವೀರ್ಯನೂ ನರ್ಮದಾಜಲದಲ್ಲಿ ಕ್ರೀಡಿಸುತ್ತ ಮದ್ಯಪಾನದಿಂದ ಮದಿ ಸಿದ್ದನು. ಆಗ ಕಾರ್ತವೀರ್ಯನು (ಯುದ್ಧಾಪೇಕ್ಷೆಯಿಂದ ಬಂದ) ರಾವಣನನ್ನು ಲೆಕ್ಕಿಸದೆ, ಅವನು ಒಂದು ಪಶುವೋ ಎಂಬಂತೆ, ಹೆಡೆಮುರಿಗೆ ಕಟ್ಟಿ ಎಳೆದೊಯ್ದು ನಗರ ಪ್ರದೇಶದಲ್ಲಿ ಬಂದಿಯಾಗಿ ಇರಿಸಿದ್ದನು (19). ಈ

**ಶೀತಿವರ್ಷಸಹಸ್ರೋಪಲಕ್ಷಣಕಾಲಾವಸಾನೇ ಭಗವನ್ನಾರಾಯಣಾಂಶೇನ ಪರಶುರಾಮೇಣೋಪಸಂಹೃತಃ ॥ 20 ॥ ತಸ್ಯ ಚ ಪುತ್ರಶತಪ್ರಧಾನಾಃ ಪಂಚ ಪುತ್ರಾ ಬಭೂವುಃ ಶೂರಶೂರಸೇನವೃಷಸೇನಮಧುಜಯಧ್ವಜ-ಸಂಜ್ಞಾಃ ॥ 21 ॥ ಜಯಧ್ವಜಾತ್ತಾಲಜಂಘಃ ಪುತ್ರೋಽಭವತ್ ॥ 22 ॥ ತಾಲಜಂಘಸ್ಯ ತಾಲಜಂಘಾಖ್ಯಂ ಪುತ್ರಶತಮಾಸೀತ್ ॥ 23 ॥ ಏಷಾಂ ಜ್ಯೇಷ್ಠೋ ವೀತಿಹೋತ್ರಸ್ತಥಾನ್ಯೋ ಭರತಃ ॥ 24 ॥ ಭರತಾದ್ವೃಷಃ ॥ 25 ॥ ವೃಷಸ್ಯ ಪುತ್ರೋ ಮಧುರಭವತ್ ॥ 26 ॥ ತಸ್ಯಾಪಿ ವೃಷ್ಣಿ-ಪ್ರಮುಖಂ ಪುತ್ರಶತಮಾಸೀತ್ ॥ 27 ॥ ಯತೋ ವೃಷ್ಣಿಸಂಜ್ಞಾಮೇತ-ದ್ಗೋತ್ರಮವಾಪ ॥ 28 ॥ ಮಧುಸಂಜ್ಞಾಹೇತುಶ್ಚ ಮಧುರಭವತ್ ॥ 29 ॥ ಯಾದವಾಶ್ಚ ಯದುನಾಮೋಪಲಕ್ಷಣಾದಿತಿ ॥ 30 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಏಕಾದಶೋಽಧ್ಯಾಯಃ

---

ಕಾರ್ತವೀರ್ಯನು ಎಂಬತ್ತೈದುಸಾವಿರ ವರ್ಷಗಳಾದಮೇಲೆ ಶ್ರೀಮನ್ನಾರಾಯಣನ ಅಂಶದಿಂದ ಅವತರಿಸಿದ ಪರಶುರಾಮನಿಂದ ಹತನಾದನು. ಈತನ ನೂರು ಮಂದಿ ಮಕ್ಕಳಲ್ಲಿ ಶೂರ, ಶೂರಸೇನ, ವೃಷಸೇನ, ಮಧು, ಜಯಧ್ವಜ —ಎಂಬ ಐವರು ಮುಖ್ಯರಾದವರು (20-21). ಇವರಲ್ಲಿ ಜಯಧ್ವಜನ ಮಗ ತಾಲಜಂಘ. ತಾಲಜಂಘನಿಗೆ ತಾಲಜಂಘರೆಂದೇ ಪ್ರಸಿದ್ಧರಾದ ನೂರು ಮಕ್ಕಳಿದ್ದರು. ಇವರಲ್ಲಿ ಹಿರಿಯನ ಹೆಸರು ವೀತಿಹೋತ್ರ. ಇನ್ನೊಬ್ಬನ ಹೆಸರು ಭರತ. ಭರತನಿಂದ ವೃಷನೂ ವೃಷನಿಂದ ಮಧುವೂ ಹುಟ್ಟಿದರು (22-26). ಮಧುವಿಗೆ ವೃಷ್ಣಿ ಮೊದಲಾದ ನೂರು ಮಂದಿ ಪುತ್ರರಿದ್ದರು. ವೃಷ್ಣಿಯ ನಿಮಿತ್ತದಿಂದ ಇವರ ವಂಶಕ್ಕೆ ವೃಷ್ಣಿವಂಶ ಎಂದು ಹೆಸರಾಯಿತು. ಮಧುವಿನ ನಿಮಿತ್ತದಿಂದ ಮಧುವಂಶವೆಂದೂ ಹೆಸರಾಯಿತು. ಯದುವಿನ ಹೆಸರನ್ನನು ಸರಿಸಿ ಇವರೆಲ್ಲರೂ ಯಾದವರೆನಿಸಿದರು (27-30).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಹನ್ನೊಂದನೆಯ ಅಧ್ಯಾಯ ಮುಗಿಯಿತು.



## ದ್ವಾದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಕ್ರೋಷ್ಟೋಸ್ತು ಯದುಪುತ್ರಸ್ಯಾತ್ಮಜೋ ಧ್ವಜಿನೀವಾನ್ ॥ 1 ॥ ತತಶ್ಚ ಸ್ವಾತಿಸ್ತತೋ ರುಶಂಕೋಶ್ಚಿತ್ರರಥಃ ॥ 2 ॥ ತತ್ತನಯಶ್ಶಶಿಬಿಂದುಶ್ಚತುರ್ದಶಮಹಾರತ್ನೇಶಶ್ಚಕ್ರವರ್ತ್ಯಭವತ್ ॥ 3 ॥ ತಸ್ಯ ಚ ಶತಸಹಸ್ರಂ-ಪತ್ನೀನಾಮಭವತ್ ॥ 4 ॥ ದಶಲಕ್ಷಸಂಖ್ಯಾಶ್ಚ ಪುತ್ರಾಃ ॥ 5 ॥ ತೇಷಾಂ ಚ ಪೃಥುಶ್ರವಾಃ ಪೃಥುಕರ್ಮಾ ಪೃಥುಕೀರ್ತಿಃ ಪೃಥುಯಶಾಃ ಪೃಥುಜಯಃ ಪೃಥುದಾನಃ ಷಟ್ ಪುತ್ರಾಃ ಪ್ರಧಾನಾಃ ॥ 6 ॥ ಪೃಥುಶ್ರವಸಶ್ಚ ಪುತ್ರಃ**

---

## ಅಧ್ಯಾಯ 12

ಯದುಪುತ್ರನಾದ ಕ್ರೋಷ್ಟುವಿನ ವಂಶ.

ಪರಾಶರರು ಹೇಳಿದರು: ಮೈತ್ರೇಯ, ಯದುಪುತ್ರನಾದ ಕ್ರೋಷ್ಟುವಿನ ಆತ್ಮಜ ಧ್ವಜಿನೀವಾನ್. ಅವನಿಂದ ಸ್ವಾತಿಯೂ ಆತನಿಂದ ರುಶಂಕುವೂ ರುಶಂಕುವಿನಿಂದ ಚಿತ್ರರಥನೂ ಹುಟ್ಟಿದರು (1-2). ಚಿತ್ರರಥನ ಮಗ ಶಶಿಬಿಂದು. ಅವನು ಹದಿನಾಲ್ಕು* ರತ್ನಗಳಿಗೆ ಅಧೀಶನಾಗಿ ಚಕ್ರವರ್ತಿಯಾಗಿದ್ದನು. ಆತನಿಗೆ ಒಂದುಲಕ್ಷ ಪತ್ನಿಯರೂ ಹತ್ತುಲಕ್ಷ ಪುತ್ರರೂ ಇದ್ದರು. ಆ ಪುತ್ರರಲ್ಲಿ ಪೃಥುಶ್ರವ, ಪೃಥುಕರ್ಮ, ಪೃಥುಕೀರ್ತಿ, ಪೃಥುಯಶ, ಪೃಥುಜಯ, ಪೃಥುದಾನ —ಎಂಬ ಆರು ಜನರು ಮುಖ್ಯರಾದವರು. ಪೃಥುಶ್ರವನ ಮಗ ಪೃಥುತಮ

---

* ಒಂದೊಂದು ಜಾತಿಯಲ್ಲಿಯೂ ಶ್ರೇಷ್ಠವಾದ ವಸ್ತು ರತ್ನವೆನಿಸುತ್ತದೆ. ಧರ್ಮಸಂಹಿತೆಯಲ್ಲಿ ಹೇಳಿದ ಚತುರ್ದಶ ರತ್ನಗಳಿವು—

ಚಕ್ರಂ ರಥೋ ಮಣಿಃ ಖಡ್ಗಶ್ಚರ್ಮ ರತ್ನಂ ಚ ಪಂಚಮಮ್ । ಕೇತುರ್ನಿಧಿಶ್ಚ ಸಪ್ತೈವ ಪ್ರಾಣಹೀನಾನಿ ಚಕ್ಷತೇ ॥ ಭಾರ್ಯಾ ಪುರೋಹಿತಶ್ಚೈವ ಸೇನಾನೀ ರಥಕೃಚ್ಚಯಃ । ಪತ್ತ್ಯಶ್ವ ಕಲಭಾಶ್ಚೇತಿ ಪ್ರಾಣಿನಃ ಸಪ್ತ ಕೀರ್ತಿತಾಃ ॥ ಚತುರ್ದಶೇತಿ ರತ್ನಾನಿ ಸರ್ವೇಷಾಂ ಚಕ್ರವರ್ತಿನಾಮ್ ॥

ಚರ್ಮ = ಢಾಲು, ಕೇತು = ಧ್ವಜ, ಪತ್ತಿ = ಕಾಲಾಳು, ಕಲಭ = ಆನೆ.

**ಪೃಥುತಮಃ ॥ 7 ॥ ತಸ್ಮಾದುಶನಾ ಯೋ ವಾಜಿಮೇಧಾನಾಂ ಶತಮಾ-ಜಹಾರ ॥ 8 ॥ ತಸ್ಯ ಚ ಶಿತಪುರ್ನಾಮ ಪುತ್ರೋಽಭವತ್ ॥ 9 ॥ ತಸ್ಯಾಪಿ ರುಕ್ಮಕವಚಸ್ತತಃ ಪರಾವೃತ್ ॥ 10 ॥ ಪರಾವೃತೋ ರುಕ್ಮೇಷುಪೃಥು-ಜ್ಯಾಮಘವಲಿತಹರಿತಸಂಜ್ಞಾಸ್ತಸ್ಯ ಪಂಚಾತ್ಮಜಾ ಬಭೂವುಃ ॥ 11 ॥ ತಸ್ಯಾಯಮದ್ಯಾಪಿ ಜ್ಯಾಮಘಸ್ಯ ಶ್ಲೋಕೋ ಗೀಯತೇ ॥ 12 ॥**

**ಭಾರ್ಯಾವಶ್ಯಾಸ್ತು ಯೇ ಕೇಚಿದ್ಭವಿಷ್ಯಂತ್ಯಥ ವಾ ಮೃತಾಃ ।**
**ತೇಷಾಂ ತು ಜ್ಯಾಮಘಃ ಶ್ರೇಷ್ಠಶ್ಶೈಬ್ಯಾಪತಿರಭೂನ್ನೃಪಃ ॥ 13**

**ಅಪುತ್ರಾ ತಸ್ಯ ಸಾ ಪತ್ನೀ ಶೈಬ್ಯಾ ನಾಮ ತಥಾಪ್ಯಸೌ ।**
**ಅಪತ್ಯಕಾಮೋಽಪಿ ಭಯಾನ್ನಾನ್ಯಾಂ ಭಾರ್ಯಾಮವಿಂದತ ॥ 14**

**ಸ ತ್ವೇಕದಾ ಪ್ರಭೂತರಥತುರಗಗಜಸಮ್ಮರ್ದಾತಿದಾರುಣೇ ಮಹಾ-ಹವೇ ಯುಧ್ಯಮಾನಃ ಸಕಲಮೇವಾರಿಚಕ್ರಮಜಯತ್ ॥ 15 ॥**

---

(3-7). ಅವನ ಮಗ ಉಶನನು ನೂರು ಅಶ್ವಮೇಧಯಾಗಗಳನ್ನು ನಡೆಸಿದನು. ಉಶನನ ಪುತ್ರ ಶಿತಪು. ಅವನಿಗೆ ರುಕ್ಮಕವಚನೂ ಆತನಿಗೆ ಪರಾವೃತನೂ ಜನಿಸಿದರು (8-10). ಪರಾವೃತನಿಗೆ ರುಕ್ಮೇಷು, ಪೃಥು, ಜ್ಯಾಮಘ, ವಲಿತ, ಹರಿತ—ಎಂಬ ಹೆಸರಿನ ಐವರು ತನಯರಿದ್ದರು. ಅವರಲ್ಲೊಬ್ಬನಾದ ಜ್ಯಾಮಘನ ವಿಷಯದಲ್ಲಿ ಒಂದು ಶ್ಲೋಕವು ಇಂದೂ ಹಾಡಲ್ಪಡುತ್ತಿದೆ (11-12): "ಈ ಜಗತ್ತಿನಲ್ಲಿ ಹೆಂಡತಿಗೆ ಅಧೀನರಾದವರು ಯಾರು ಯಾರು ಮುಂದೆ ಹುಟ್ಟುವರೋ ಅಥವಾ ಹಿಂದೆ ಗತಿಸಿ ಹೋಗಿರುವರೋ ಅವರಲ್ಲಿ ಶೈಬ್ಯೆಯ ಗಂಡನಾದ ಜ್ಯಾಮಘರಾಜನು ಸರ್ವಶ್ರೇಷ್ಠನು!"* ಎಂದು (13). ಅವನ ಹೆಂಡತಿಯಾದ ಶೈಬ್ಯೆಗೆ ಮಕ್ಕಳಿರಲಿಲ್ಲ. ಅವನಿಗೆ ಮಕ್ಕಳು ಬೇಕೆಂಬ ಹಂಬಲವಿದ್ದರೂ ಹೆಂಡತಿಗೆ ಹೆದರಿ ಅವನು ಇನ್ನೊಬ್ಬಳನ್ನು ಮದುವೆಯಾಗಲಿಲ್ಲ! ಜ್ಯಾಮಘನು ಒಂದು ಸಲ ಅಸಂಖ್ಯಾತವಾದ ರಥ ತುರಗ ಗಜಸಂಘಟ್ಟನೆಗಳಿಂದ ಅತಿಭೀಕರವಾದ ಸಂಗ್ರಾಮದಲ್ಲಿ ತೊಡಗಿ ಯುದ್ಧಮಾಡಿ ಸಮಸ್ತ ಶತ್ರುಸೇನೆಯನ್ನೂ ಸೋಲಿಸಿದನು (14-15). ಆ ಶತ್ರುಗಳು ತಮ್ಮ ಮಕ್ಕಳು

---

* ಇವನಂತೆ ಹೆಂಡತಿಗೆ ಹೆದರತಕ್ಕವರು ಇನ್ನು ಯಾರೂ ಇರಲಿಲ್ಲ ಎಂದು ಅಭಿಪ್ರಾಯ.

**ತಚ್ಚಾರಿಚಕ್ರಮಪಾಸ್ತಪುತ್ರಕಲತ್ರಬಂಧುಬಲಕೋಶಂ ಸ್ವಮಧಿಷ್ಠಾನಂ ಪರಿತ್ಯಜ್ಯ ದಿಶಃ ಪ್ರತಿ ವಿದ್ರುತಮ್ ॥ 16 ॥ ತಸ್ಮಿಂಶ್ಚ ವಿದ್ರುತೇऽತಿತ್ರಾಸ-ಲೋಲಾಯತಲೋಚನಯುಗಲಂ ತ್ರಾಹಿ ತ್ರಾಹಿ ಮಾಂ ತಾತಾಂಬ ಭ್ರಾತರಿತ್ಯಾಕುಲವಿಲಾಪವಿಧುರಂ ಸ ರಾಜಕನ್ಯಾರತ್ನಮದ್ರಾಕ್ಷೀತ್ ॥ 17 ॥ ತದ್ದರ್ಶನಾಚ್ಚ ತಸ್ಯಾಮನುರಾಗಾನುಗತಾಂತರಾತ್ಮಾ ಸ ನೃಪೋऽಚಿಂತ-ಯತ್ ॥ 18 ॥ ಸಾಧ್ವಿದಂ ಮಮಾಪತ್ಯರಹಿತಸ್ಯ ವಂಧ್ಯಾಭರ್ತುಃ ಸಾಂಪ್ರತಂ ವಿಧಿನಾಪತ್ಯಕಾರಣಂ ಕನ್ಯಾರತ್ನಮುಪಪಾದಿತಮ್ ॥ 19 ॥ ತದೇತತ್ಸಮುದ್ವಹಾಮೀತಿ ॥ 20 ॥ ಅಥವೈನಾಂ ಸ್ಯಂದನಮಾರೋಪ್ಯ ಸ್ವಮಧಿಷ್ಠಾನಂ ನಯಾಮಿ ॥ 21 ॥ ತಯೈವ ದೇವ್ಯಾ ಶೈಬ್ಯಯಾಹ-ಮನುಜ್ಞಾತಸ್ಸಮುದ್ವಹಾಮೀತಿ ॥ 22 ॥ ಅಥೈನಾಂ ರಥಮಾರೋಪ್ಯ ಸ್ವನಗರಮಗಚ್ಛತ್ ॥ 23 ॥ ವಿಜಯಿನಂ ಚ ರಾಜಾನಮಶೇಷಪೌರಭೃತ್ಯ-ಪರಿಜನಾಮಾತ್ಯಸಮೇತಾ ಶೈಬ್ಯಾ ದ್ರಷ್ಟುಮಧಿಷ್ಠಾನದ್ವಾರಮಾಗತಾ**

---

ಮಡದಿಯರನ್ನೂ ಬಂಧು ಬಲಕೋಶಗಳನ್ನೂ ಪರಿತ್ಯಜಿಸಿ ತಮ್ಮ ನಿವಾಸಸ್ಥಾನಗಳಿಂದ ದಿಕ್ಕುದಿಕ್ಕಿಗೆ ಓಡಿ ಹೋದರು. ಹೀಗೆ ಓಡಿಹೋಗಲಾಗಿ ಒಬ್ಬ ಸುಂದರಿಯಾದ ರಾಜಕುಮಾರಿಯು ಭಯವಿಹ್ವಲಳಾಗಿ ಚಂಚಲನೇತ್ರಗಳಿಂದ ಅತ್ತಿತ್ತ ನೋಡುತ್ತ "ಅಪ್ಪಾ, ಅಮ್ಮ, ಅಣ್ಣಾ ಕಾಪಾಡು, ಕಾಪಾಡು!" ಎಂದು ದೈನ್ಯದಿಂದ ಗೋಳಾಡುತ್ತಿರುವುದನ್ನು ಜ್ಯಾಮಘನು ಕಂಡನು (16-17). ಆಗ ರಾಜನಿಗೆ ಅವಳಲ್ಲಿ ಅನುರಾಗ ಉತ್ಪನ್ನವಾಯಿತು. ಅವನು ತನ್ನ ಮನಸ್ಸಿನಲ್ಲಿ "ಒಳ್ಳೆಯದಾಯಿತು! ಬಂಜೆಗೆ ಪತಿಯಾದ ನಾನು ಸಂತತಿ ಹೀನನಾಗಿದ್ದೇನೆ. ಸಂತತಿಗಾಗಿ ಈ ಕನ್ಯಾರತ್ನವನ್ನು ದೈವವೇ ನನಗೆ ಒದಗಿಸಿತು (18-19). ಇವಳನ್ನು ಮದುವೆಯಾಗುವೆನು" ಎಂದು ಆಲೋಚಿಸಿದನು. ಅಲ್ಲದೆ "ಇವಳನ್ನು ರಥದ ಮೇಲೆ ಕುಳ್ಳಿರಿಸಿಕೊಂಡು ರಾಜಧಾನಿಗೆ ಕರೆದೊಯ್ಯುವೆನು. ರಾಣಿಯಾದ ಶೈಬ್ಯೆಯ ಒಪ್ಪಿಗೆಯನ್ನು ಪಡೆದೇ ವಿವಾಹವಾಗುವೆನು" ಎಂದು ನಿಶ್ಚಯಿಸಿಕೊಂಡನು (20-22). ಅನಂತರ ಅವಳನ್ನು ತನ್ನ ರಥದಮೇಲೆ ಹತ್ತಿಸಿಕೊಂಡು ನಗರಕ್ಕೆ ಹಿಂದಿರುಗಿದನು. ವಿಜಯಶಾಲಿಯಾಗಿ ಬರುತ್ತಿದ್ದ ರಾಜನನ್ನು ಎದುರುಗೊಳ್ಳುವುದಕ್ಕಾಗಿ ಅಮಾತ್ಯ ಭೃತ್ಯ ಪೌರಪರಿಜನರಿಂದ ಸಮೇತಳಾಗಿ

**॥ 24 ॥ ಸಾ ಚಾವಲೋಕ್ಯ ರಾಜ್ಞಃ ಸವ್ಯಪಾರ್ಶ್ವವರ್ತಿನೀಂ ಕನ್ಯಾಮೀಷ-ದುದ್‌ಭೂತಾಮರ್ಷಸ್ಫುರದಧರಪಲ್ಲವಾ ರಾಜಾನಮವೋಚತ್ ॥ 25 ॥ ಅತಿ ಚಪಲಚಿತ್ತಾತ್ರ ಸ್ಯಂದನೇ ಕೇಯಮಾರೋಪಿತೇತಿ ॥ 26 ॥ ಅಸಾವಪ್ಯನಾಲೋಚಿತೋತ್ತರವಚನೋಽತಿಭಯಾತ್ತಾಮಾಹ ಸ್ನುಷಾ ಮಮೇಯಮಿತಿ ॥ 27 ॥ ಅಥೈನಂ ಶೈಬ್ಯೋವಾಚ ॥ 28 ॥**

**ನಾಹಂ ಪ್ರಸೂತಾ ಪುತ್ರೇಣ ನಾನ್ಯಾ ಪತ್ನ್ಯಭವತ್ತವ।**
**ಸ್ನುಷಾಸಂಬಂಧತಾ ಹ್ಯೇಷಾ ಕತಮೇನ ಸುತೇನ ತೇ ॥ 29**

*ಶ್ರೀಪರಾಶರ ಉವಾಚ:*

**ಇತ್ಯಾತ್ಮೇರ್ಷ್ಯಾಕೋಪಕಲುಷಿತವಚನಮುಷಿತವಿವೇಕೋ ಭಯಾದ್-ದುರುಕ್ತಪರಿಹಾರಾರ್ಥಮಿದಮವನೀಪತಿರಾಹ ॥ 30 ॥ ಯಸ್ತೇ ಜನಿಷ್ಯತ ಆತ್ಮಜಸ್ತಸ್ಯೇಯಮನಾಗತಸ್ಯೈವ ಭಾರ್ಯಾ ನಿರೂಪಿತೇತ್ಯಾ-ಕರ್ಣ್ಯೋದ್‌ಭೂತಮೃದುಹಾಸಾ ತಥೇತ್ಯಾಹ ॥ 31 ॥ ಪ್ರವಿವೇಶ ಚ**

---

ಶೈಬ್ಯೆಯು ಆಗಮಿಸಿದಳು (23-24). ರಾಜನ ಎಡಭಾಗದಲ್ಲಿದ್ದ ಈ ರಾಜ ಕುಮಾರಿಯನ್ನು ಕಂಡೊಡನೆ ವಿಸ್ಮಿತಳಾದ ಶೈಬ್ಯೆಯು ಕೋಪೋದ್ರಿಕ್ತಳಾದಳು. ಕೋಪದಿಂದ ಅವಳ ತುಟಿ ಅದುರತೊಡಗಿತು. ಅವಳು ರಾಜನನ್ನು ಕುರಿತು "ಚಪಲಚಿತ್ತ, ನಿನ್ನ ಚಾಪಲ್ಯ ಅತಿಯಾಯಿತು! ರಥದಲ್ಲಿ ಏರಿಸಿಕೊಂಡಿದ್ದೀಯಲ್ಲ, ಯಾರಿವಳು?" ಎಂದು ಕೇಳಿದಳು (25-26). ಯಾವ ಉತ್ತರವನ್ನು ಹೇಳಬೇಕೆಂದು ರಾಜನು ಮೊದಲು ಆಲೋಚಿಸಿಕೊಂಡಿರಲಿಲ್ಲ. ಅವನು ಹೆದರಿ ಕಂಗಾಲಾಗಿ "ಇವಳು ನನ್ನ ಸೊಸೆ" ಎಂದು ಬಿಟ್ಟನು! ಅದಕ್ಕೆ ಶೈಬ್ಯೆಯು "ನನಗೆ ಯಾವ ಪುತ್ರನೂ ಇಲ್ಲ. ನಿನಗೆ ಇನ್ನೊಬ್ಬ ಹೆಂಡತಿಯೂ ಇಲ್ಲ. ಯಾವ ಪುತ್ರನ ಮೂಲಕ ಇವಳು ನಿನ್ನ ಸೊಸೆಯಾದಳು?" ಎಂದು ಕೇಳಿದಳು! (27-29). ಸಿಟ್ಟು, ಹೊಟ್ಟೆಕಿಚ್ಚುಗಳಿಂದ ಕಲುಷಿತವಾದ ಅವಳ ಮಾತನ್ನು ಕೇಳಿ ರಾಜನ ವಿವೇಕವು ನಷ್ಟವಾಯಿತು. ತಾನು ಭಯದಿಂದ ಆಡಿದ ತಪ್ಪನ್ನು ಸರಿಪಡಿಸಿಕೊಳ್ಳುವುದಕ್ಕಾಗಿ ರಾಜನು "ನಿನಗೆ ಗಂಡುಮಗನು ಹುಟ್ಟುವನು. ಹುಟ್ಟುವುದಕ್ಕೆ ಮೊದಲೇ ಅವನಿಗೆ ಇವಳನ್ನು ಮಡದಿಯಾಗಿ ಗೊತ್ತು ಮಾಡಿದ್ದೇನೆ!" ಎಂದನು. ಅದನ್ನು ಕೇಳಿ ಶೈಬ್ಯೆಯು ಮೆಲ್ಲಗೆ ನಕ್ಕು "ಆಗಲಿ"

**ರಾಜ್ಞಾ ಸಹಾಧಿಷ್ಠಾನಮ್ ॥ 32 ॥ ಅನಂತರಂ ಚಾತಿಶುದ್ಧಲಗ್ನಹೋರಾಂಶಕಾವಯವೋಕ್ತಕೃತಪುತ್ರಜನ್ಮಲಾಭಗುಣಾದ್ವಯಸಃ ಪರಿಣಾಮಮುಪಗತಾಪಿ ಶೈಬ್ಯಾ ಸ್ವಲ್ಪೈರೇವಾಹೋಭಿರ್ಗರ್ಭಮವಾಪ ॥ 33 ॥ ಕಾಲೇನ ಚ ಕುಮಾರಮಜೀಜನತ್ ॥ 34 ॥ ತಸ್ಯ ಚ ವಿದರ್ಭ ಇತಿ ಪಿತಾ ನಾಮ ಚಕ್ರೇ ॥ 35 ॥ ಸ ಚ ತಾಂ ಸ್ನುಷಾಮುಪಯೇಮೇ ॥ 36 ॥ ತಸ್ಯಾಂ ಚಾಸೌ ಕ್ರಥಕೈಶಿಕಸಂಜ್ಞೌ ಪುತ್ರಾವಜನಯತ್ ॥ 37 ॥ ಪುನಶ್ಚ ತೃತೀಯಂ ರೋಮಪಾದಸಂಜ್ಞಂ ಪುತ್ರಮಜೀಜನದ್ಯೋ ನಾರದಾದವಾಪ್ತಜ್ಞಾನವಾನಭವತ್ ॥ 38 ॥ ರೋಮಪಾದಾದ್ಬಭ್ರುರ್ಬಭ್ರೋರ್ಧೃತಿರ್ಧೃತೇಃ**

---

ಎಂದಳು. ಅನಂತರ ರಾಜನೊಡನೆ ರಾಜಧಾನಿಯನ್ನು ಪ್ರವೇಶಿಸಿದಳು (30-32). ಅತ್ಯಂತ ಶುಭಕರವಾದ ಲಗ್ನ ಹೋರಾ ಅಂಶ ಅವಯವಗಳುಳ್ಳ ಸುಮುಹೂರ್ತ*ದಲ್ಲಿ ಪುತ್ರಜನ್ಮವಾಗುವುದೆಂದು ಹೇಳಿದ್ದರ ಗುಣಸಂಪತ್ತಿನ ಪರಿಣಾಮವಾಗಿ, ಶೈಬ್ಯೆಗೆ ಸಾಕಷ್ಟು ವಯಸ್ಸಾದರೂ ಸ್ವಲ್ಪ ದಿನಗಳಲ್ಲಿ ಗರ್ಭಿಣಿಯಾದಳು. ಯಥಾ ಸಮಯದಲ್ಲಿ ಗಂಡುಮಗುವನ್ನು ಹಡೆದಳು (33-34). ಮಗುವಿಗೆ ವಿದರ್ಭ ಎಂದು ತಂದೆಯು ನಾಮಕರಣ ಮಾಡಿದನು. ರಾಜನು ತನ್ನ ಸೊಸೆಯೆಂದು ಹೇಳಿದ್ದ ಆ ಕನ್ಯೆಯನ್ನು ವಿದರ್ಭನು ಮುಂದೆ ಮದುವೆಯಾದನು. ಅವಳಲ್ಲಿ ವಿದರ್ಭನಿಗೆ ಕ್ರಥ, ಕೈಶಿಕ—ಎಂಬ ಇಬ್ಬರು ಪುತ್ರರು ಜನಿಸಿದರು. ಅಲ್ಲದೆ ರೋಮಪಾದನೆಂಬ ಮೂರನೆಯ ಮಗನೂ ಹುಟ್ಟಿದನು. ರೋಮಪಾದನು ನಾರದಮುನಿಯಿಂದ ಉಪದೇಶವನ್ನು ಪಡೆದು ಜ್ಞಾನಿಯಾದನು (35-38). ರೋಮಪಾದನಿಂದ ಬಭ್ರು, ಅವನಿಂದ ಧೃತಿ, ಧೃತಿಯಿಂದ ಕೈಶಿಕ, ಅವನಿಂದ ಚೇದಿ—ಎಂಬುವರು ಜನಿಸಿದರು. ಚೇದಿಯ

* ಲಗ್ನ = ಮೇಷಾದಿ ರಾಶಿಯ ಉದಯಕಾಲ. ಹೋರಾ = ರಾಶಿಯ ಅರ್ಧ. ಅಂಶ = ನವಾಂಶ. ಅವಯವ = ದ್ವಾದಶಾಂಶ ಮತ್ತು ತ್ರಿಂಶಾಂಶ. ಶುಭಮುಹೂರ್ತದಲ್ಲಿ ರಾಜನು ಪುತ್ರಲಾಭವಾಗುವುದೆಂದೂ ಅವನ ಹೆಂಡತಿಯು 'ಆಗಲಿ' ಎಂದೂ ಹೇಳಿದ್ದರಿಂದ ಶುಭಫಲವಾಯಿತು—ಎಂದು ಅಭಿಪ್ರಾಯ. ಜನರು ಒಳ್ಳೆಯದನ್ನೋ ಕೆಟ್ಟದ್ದನ್ನೋ ಹೇಳಿದಾಗ 'ಅಸ್ತು' ಎಂದು ಹೇಳುವ ಅಸ್ತುದೇವತೆಗಳಿದ್ದಾರಂತೆ. ಆ ದೇವತೆಗಳು 'ಅಸ್ತು' ಎಂದು ಬಿಟ್ಟರೆ ಆ ಕಾರ್ಯವು ಸಫಲವಾಗುವುದೆಂದು ಹೇಳಲಾಗಿದೆ. ಜ್ಯಾಮಘನು 'ಗಂಡು ಮಗನು ಹುಟ್ಟುವನು' ಎಂದಾಗ ಆ ದೇವತೆಗಳು 'ಅಸ್ತು' ಎಂದುಬಿಟ್ಟರು.

**ಕೈಶಿಕಃ ಕೈಶಿಕಸ್ಯಾಪಿ ಚೇದಿಃ ಪುತ್ರೋಽಭವದ್ ಯಸ್ಯ ಸಂತತೌ ಚೈದ್ಯಾ ಭೂಪಾಲಾಃ ॥ 39 ॥ ಕ್ರಥಸ್ಯ ಸ್ನುಷಾಪುತ್ರಸ್ಯ ಕುಂತಿರಭವತ್ ॥ 40 ॥ ಕುಂತೇರ್ಧೃಷ್ಟಿರ್ಧೃಷ್ಟೇರ್ನಿರ್ಧೃತಿರ್ನಿರ್ಧೃತೇರ್ದಶಾರ್ಹಸ್ತತಶ್ಚ ವ್ಯೋಮಾ ತಸ್ಯಾಪಿ ಜೀಮೂತಸ್ತತಶ್ಚ ವಿಕೃತಿಸ್ತತಶ್ಚ ಭೀಮರಥಃ ತಸ್ಮಾನ್ನವರಥಸ್ತಸ್ಯಾಪಿ ದಶರಥಸ್ತತಶ್ಚ ಶಕುನಿಃ ತತ್ತನಯಃ ಕರಂಭಿಃ ಕರಂಭೇರ್ದೇವರಾತೋಽಭವತ್ ॥ 41 ॥ ತಸ್ಮಾದ್ದೇವಕ್ಷತ್ರಸ್ತಸ್ಯಾಪಿ ಮಧುರ್ಮಧೋಃ ಕುಮಾರವಂಶಃ ಕುಮಾರವಂಶಾದನುರನೋಃ ಪುರುಮಿತ್ರಃ ಪೃಥಿವೀಪತಿರಭವತ್ ॥ 42 ॥ ತತಶ್ಚಾಂಶುಸ್ತಸ್ಮಾಚ್ಚ ಸತ್ವತಃ ॥ 43 ॥ ಸತ್ವತಾದೇತೇ ಸಾತ್ವತಾಃ ॥ 44 ॥ ಇತ್ಯೇತಾಂ ಜ್ಯಾಮಘಸ್ಯ ಸಂತತಿಂ ಸಮ್ಯಕ್‌ಶ್ರದ್ಧಾಸಮನ್ವಿತಃ ಶ್ರುತ್ವಾ ಪುಮಾನ್ ಮೈತ್ರೇಯ ಸ್ವಪಾಪ್ಯೈಃ ಪ್ರಮುಚ್ಯತೇ ॥ 45 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ದ್ವಾದಶೋಽಧ್ಯಾಯಃ

---

ಸಂತತಿಯಲ್ಲಿ ಬಂದ ಭೂಪಾಲರೇ ಚೈದ್ಯರು (39). ಜ್ಯಾಮಘನ ಸೊಸೆಯ ಮಗನಾದ ಕ್ರಥನಿಗೆ ಕುಂತಿ ಎಂಬವನು ಪುತ್ರನಾದನು. ಕುಂತಿಗೆ ಧೃಷ್ಟಿ, ಅವನಿಗೆ ನಿಧೃತಿ, ಆತನಿಗೆ ದಾಶಾರ್ಹ, ದಾಶಾರ್ಹನಿಗೆ ವ್ಯೋಮ—ಎಂಬವರು ಮಕ್ಕಳು. ವ್ಯೋಮನ ಮಗ ಜೀಮೂತ, ಅವನ ಮಗ ವಿಕೃತಿ, ಅವನ ಮಗ ಭೀಮರಥ, ಭೀಮರಥನ ಆತ್ಮಜ ನವರಥ, ಅವನ ಆತ್ಮಜ ದಶರಥ, ಆತನಿಂದ ಶಕುನಿ ಎಂಬವನು ಹುಟ್ಟಿದನು. ಅವನ ಮಗ ಕರಂಭಿ, ಕರಂಭಿಯ ಮಗ ದೇವರಾತ (40-41). ಅವನಿಂದ ದೇವಕ್ಷತ್ರ , ಅವನಿಂದ ಮಧು, ಮಧುವಿನಿಂದ ಕುಮಾರವಂಶ, ಆತನಿಂದ ಅನು, ಅನುವಿನಿಂದ ಪುರುಮಿತ್ರನೆಂಬ ರಾಜನೂ ಜನಿಸಿದರು. ಪುರುಮಿತ್ರನಿಂದ ಅಂಶು, ಅಂಶುವಿನಿಂದ ಸತ್ವತನೂ ಹುಟ್ಟಿದರು. ಸತ್ವತನ ವಂಶದವರೇ ಸಾತ್ವತರೆಂದು ಪ್ರಸಿದ್ಧರಾದರು (42-44). ಈ ಪ್ರಕಾರವಾಗಿ ಜ್ಯಾಮಘನ ಸಂತಾನದ ವೃತ್ತಾಂತವನ್ನು ಶ್ರದ್ಧಾಯುಕ್ತನಾಗಿ ಯಾವ ಪುರುಷನು ಕೇಳುವನೋ, ಮೈತ್ರೇಯ, ಅವನು ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ (45).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಹನ್ನೆರಡನೆಯ ಅಧ್ಯಾಯ ಮುಗಿಯಿತು.

## ತ್ರಯೋದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಭಜನಭಜಮಾನದಿವ್ಯಾನ್ಧಕದೇವಾವೃಧಮಹಾಭೋಜವೃಷ್ಣಿಸಂಜ್ಞಾ-
ಸ್ಸತ್ವತಸ್ಯ ಪುತ್ರಾ ಬಭೂವುಃ ॥ 1 ॥ ಭಜಮಾನಸ್ಯ ನಿಮಿಕೃಕಣವೃಷ್ಣಯಸ್ತ-
ಥಾನ್ಯೇ ದ್ವೈಮಾತ್ರಾಃ ಶತಜಿತ್‌ಸಹಸ್ರಜಿದಯುತಜಿತ್ ಸಂಜ್ಞಾಸ್ತ್ರಯಃ
॥ 2 ॥ ದೇವಾವೃಧಸ್ಯಾಪಿ ಬಭ್ರುಃ ಪುತ್ರೋಽಭವತ್ ॥ 3 ॥ ತಯೋ-
ಶ್ಚಾಯಂ ಶ್ಲೋಕೋ ಗೀಯತೇ ॥ 4 ॥**

**ಯಥೈವ ಶೃಣುಮೋ ದೂರಾತ್ಸಂಪಶ್ಯಾಮಸ್ತಥಾಂತಿಕಾತ್ ।
ಬಭ್ರುಃ ಶ್ರೇಷ್ಠೋ ಮನುಷ್ಯಾಣಾಂ ದೇವೈರ್ದೇವಾವೃಧಸ್ಸಮಃ ॥** 5

**ಪುರುಷಾಃ ಷಟ್ ಚ ಷಷ್ಟಿಶ್ಚ ಷಟ್ ಸಹಸ್ರಾಣಿ ಚಾಷ್ಟ ಚ ।
ತೇಽಮೃತತ್ವಮನುಪ್ರಾಪ್ತಾ ಬಭ್ರೋರ್ದೇವಾವೃಧಾದಪಿ ॥** 6

---

### ಅಧ್ಯಾಯ 13

ಸತ್ವತನ ಸಂತತಿ; ಸತ್ರಾಜಿತನಿಗೆ ಸ್ಯಮಂತಕಮಣಿಯ ಪ್ರಾಪ್ತಿ. ಅದರ ವಿಸ್ತೃತವಾದ ಕಥೆ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಸತ್ವತನಿಗೆ ಭಜನ, ಭಜಮಾನ, ದಿವ್ಯ, ಅಂಧಕ, ದೇವಾವೃಧ, ಮಹಾಭೋಜ, ವೃಷ್ಣಿ—ಎಂಬ ಪುತ್ರರಾದರು. ಅವರಲ್ಲಿ ಭಜಮಾನನಿಗೆ ನಿಮಿ, ಕೃಕಣ, ವೃಷ್ಣಿ—ಎಂಬ ಮೂವರೂ ಅವರಿಗೆ ಸವತಿಯಾದ ತಾಯಿಯಲ್ಲಿ ಜನಿಸಿದ ಶತಜಿತ್, ಸಹಸ್ರಜಿತ್, ಅಯುತಜಿತ್—ಎಂಬ ಮೂವರೂ ಪುತ್ರರಿದ್ದರು (1-2). ದೇವಾವೃಧನಿಗೆ ಬಭ್ರು ಎಂಬ ಪುತ್ರನಿದ್ದನು. ಇವರಿಬ್ಬರ ವಿಷಯವಾಗಿ ಒಂದು ಶ್ಲೋಕವು ಗೀತವಾಗಿದೆ: "ನಾವು ದೂರದಿಂದ ಏನನ್ನು ಕೇಳುತ್ತಿದ್ದೇವೋ ಅದನ್ನು ಹತ್ತಿರದಿಂದ ನೋಡುತ್ತಿದ್ದೇವೆ. ಏನೆಂದರೆ, ಮಾನವರಲ್ಲಿ ಬಭ್ರು ಶ್ರೇಷ್ಠನಾದವನು. ದೇವಾವೃಧನು ದೇವತೆಗಳಿಗೆ ಸಮಾನ (3-5). ಬಭ್ರು ಮತ್ತು ದೇವಾವೃಧರಿಂದ (ಅವರಿಬ್ಬರ ಉಪದೇಶಮಾರ್ಗವನ್ನವಲಂಬಿಸಿ) ಆರು ಸಾವಿರದ ಎಪ್ಪತ್ತುನಾಲ್ಕು (6074) ಮಂದಿ ಮನುಷ್ಯರು ಮೋಕ್ಷವನ್ನು

**ಮಹಾಭೋಜಸ್ತ್ವತಿಧರ್ಮಾತ್ಮಾ ತಸ್ಯಾನ್ವಯೇ ಭೋಜಾ ಮೃತ್ತಿಕಾವರಪುರನಿವಾಸಿನೋ ಮಾರ್ತಿಕಾವರಾ ಬಭೂವುಃ ॥ 7 ॥ ವೃಷ್ಣೇಃ ಸುಮಿತ್ರೋ ಯುಧಾಜಿಚ್ಚ ಪುತ್ರಾವಭೂತಾಮ್ ॥ 8 ॥ ತತಶ್ಚಾನಮಿತ್ರಸ್ತಥಾನಮಿತ್ರಾನ್ನಿಘ್ನಃ ॥ 9 ॥ ನಿಘ್ನಸ್ಯ ಪ್ರಸೇನಸತ್ರಾಜಿತೌ ॥ 10 ॥ ತಸ್ಯ ಚ ಸತ್ರಾಜಿತೋ ಭಗವಾನಾದಿತ್ಯಃ ಸಖಾಭವತ್ ॥ 11 ॥ ಏಕದಾ ತ್ವಂಭೋನಿಧಿತೀರಸಂಶ್ರಯಃ ಸೂರ್ಯಂ ಸತ್ರಾಜಿತುಸ್ತಾವ ತನ್ಮನಸ್ಕತಯಾ ಚ ಭಾಸ್ವಾನಭಿಷ್ಟೂಯಮಾನೋಽಗ್ರತಸ್ತಸ್ಥೌ ॥ 12 ॥ ತತಸ್ತ್ವಸ್ಪಷ್ಟಮೂರ್ತಿಧರಂ ಚೈನಮಾಲೋಕ್ಯ ಸತ್ರಾಜಿತ್ಸೂರ್ಯಮಾಹ ॥ 13 ॥ ಯಥೈವ ವ್ಯೋಮ್ನಿ ವಹ್ನಿಪಿಂಡೋಪಮಂ ತ್ವಾಮಹಮಪಶ್ಯಂ ತಥೈವಾದ್ಯಾಗ್ರತೋ ಗತಮ-**

---

ಪಡೆದಿದ್ದಾರೆ!" ಎಂದು (6). ಮಹಾಭೋಜನು ಅತ್ಯಂತ ಧರ್ಮಾತ್ಮನಾಗಿದ್ದನು. ಅವನ ಸಂತತಿಯಲ್ಲಿ ಜನಿಸಿದ ಭೋಜರು ಮೃತ್ತಿಕಾವರವೆಂಬ ಪುರದಲ್ಲಿ ವಾಸಮಾಡುತ್ತಿದ್ದುದರಿಂದ ಮಾರ್ತಿಕಾವರರೆಂದು ಪ್ರಸಿದ್ಧರಾದರು (7). ವೃಷ್ಣಿಗೆ ಸುಮಿತ್ರ, ಯುಧಾಜಿತ್ ಎಂಬ ಇಬ್ಬರು ಆತ್ಮಜರಿದ್ದರು. ಅವನಿಂದ* ಅನಮಿತ್ರನೂ ಅನಮಿತ್ರನಿಂದ ನಿಘ್ನನೂ ಹುಟ್ಟಿದರು. ನಿಘ್ನನಿಗೆ ಪ್ರಸೇನ, ಸತ್ರಾಜಿತ್—ಎಂಬ ಇಬ್ಬರು ಮಕ್ಕಳು. ಆ ಸತ್ರಾಜಿತನಿಗೆ ಭಗವಾನ್ ಸೂರ್ಯದೇವನು ಪ್ರಿಯನಾಗಿದ್ದನು (8-11). ಒಂದು ಸಲ ಸತ್ರಾಜಿತನು ಕಡಲಿನ ದಡವನ್ನಾಶ್ರಯಿಸಿ ಸೂರ್ಯನ ಸ್ತೋತ್ರವನ್ನು ಮಾಡುತ್ತಿದ್ದನು. ಏಕಾಗ್ರತೆಯಿಂದ ಸ್ತುತಿಸಲ್ಪಟ್ಟ ಸೂರ್ಯನು ಸತ್ರಾಜಿತನೆದುರಿಗೆ ಪ್ರಕಟವಾಗಿ ನಿಂತನು. ಆತನ ಮೂರ್ತಿಯು ಅಸ್ಪಷ್ಟವಾಗಿತ್ತು. ಅದನ್ನು ಕಂಡು ಸತ್ರಾಜಿತನು ಸೂರ್ಯನನ್ನುದ್ದೇಶಿಸಿ "ಆಕಾಶದಲ್ಲಿ ನೀನು ಬೆಂಕಿಯ ಮುದ್ದೆಯಂತೆ ಇರುವುದನ್ನು ನಾನು ನೋಡಿದ್ದೇನೆ. ಎದುರಿಗೆ ಬಂದರೂ ಹಾಗೆಯೇ ಕಾಣಿಸುತ್ತೀಯೆ. ನೀನು ಅನುಗ್ರಹಿಸಿ ತೋರಿಸಿದ ಯಾವ ವಿಶೇಷವನ್ನೂ ಕಾಣದೆ ಹೋದೆನು" ಎಂದನು. ಆಗ ಸೂರ್ಯದೇವನು ತನ್ನ ಕೊರಳಿಂದ ಸ್ಯಮಂತಕವೆಂಬ ಮಹಾರತ್ನವನ್ನು ತೆಗೆದು ಒಂದು ಕಡೆ ಇಟ್ಟನು (12-13). ಆಗ ಥಳಥಳಿಸುವ ರಕ್ತವರ್ಣನೂ ಹ್ರಸ್ವದೇಹದವನೂ ಕಿಂಚಿತ್‌ಪಿಂಗಳನೇತ್ರನೂ

---

* 'ಅವನಿಂದ' ಎಂದರೆ ಯಾರಿಂದ? ಸುಮಿತ್ರನಿಂದ—ಎಂದು ಕೆಲವರು ಹೇಳಿದ್ದಾರೆ. ಯುಧಾಜಿತನಿಂದ ಎಂದೂ ಅರ್ಥಮಾಡಲು ಸಾಧ್ಯ.

ಪ್ಯತ್ರ ಭಗವತಾ ಕಿಂಚಿನ್ನ ಪ್ರಸಾದೀಕೃತಂ ವಿಶೇಷಮುಪಲಕ್ಷಯಾ-ಮೀತ್ಯೇವಮುಕ್ತೇ ಭಗವತಾ ಸೂರ್ಯೇಣ ನಿಜಕಂಠಾದುನ್ಮುಚ್ಯ ಸ್ಯಮಂತಕಂ ನಾಮ ಮಹಾಮಣಿವರಮವತಾರ್ಯೈಕಾಂತೇ ನ್ಯಸ್ತಮ್ ॥ 14 ॥ ತತಸ್ತಮಾತಾಮ್ರೋಜ್ಜ್ವಲಂ ಹ್ರಸ್ವವಪುಷಮೀಷದಾಪಿಂಗಲ-ನಯನಮಾದಿತ್ಯಮದ್ರಾಕ್ಷೀತ್ ॥ 15 ॥ ಕೃತಪ್ರಣಿಪಾತಸ್ತವಾದಿಕಂ ಚ ಸತ್ರಾಜಿತಮಾಹ ಭಗವಾನಾದಿತ್ಯಸ್ಸಹಸ್ರದೀಧಿತಿರ್ವರಮಸ್ಮತ್ತೋಽಭಿ-ಮತಂ ವೃಣೀಷ್ವೇತಿ ॥ 16 ॥ ಸ ಚ ತದೇವ ಮಣಿರತ್ನಮಯಾಚತ ॥ 17 ॥ ಸ ಚಾಪಿ ತಸ್ಮೈತದ್ದತ್ತ್ವಾ ದೀಧಿತಿಪತಿರ್ವಿಯತಿ ಸ್ವಧಿಷ್ಣ್ಯಮಾರುರೋಹ ॥ 18 ॥ ಸತ್ರಾಜಿದಪ್ಯಮಲಮಣಿರತ್ನಸನಾಥಕಂಠತಯಾ ಸೂರ್ಯ ಇವತೇಜೋಭಿರಶೇಷದಿಗಂತರಾಣ್ಯುದ್ಭಾಸಯನ್ ದ್ವಾರಕಾಂ ವಿವೇಶ ॥ 19 ॥ ದ್ವಾರಕಾವಾಸೀಜನಸ್ತು ತಮಾಯಾಂತಮವೇಕ್ಷ್ಯ ಭಗವಂತ-ಮಾದಿಪುರುಷಂ ಪುರುಷೋತ್ತಮಮವನಿಭಾರಾವತರಣಾಯಾಂಶೇನ ಮಾನುಷರೂಪಧಾರಿಣಂ ಪ್ರಣಿಪತ್ಯಾಹ ॥ 20 ॥ ಭಗವನ್ ಭವಂತಂ ದ್ರಷ್ಟುಂ ನೂನಮಯಮಾದಿತ್ಯ ಆಯಾತೀತ್ಯುಕ್ತೋ ಭಗವಾನುವಾಚ

---

ಆದ ಆದಿತ್ಯನನ್ನು ಸತ್ರಾಜಿತನು ಕಂಡನು. ಸತ್ರಾಜಿತನು ಆತನಿಗೆ ಸಾಷ್ಟಾಂಗ ನಮಸ್ಕಾರಮಾಡಿ ಸ್ತುತಿಸಲಾಗಿ, ಸಹಸ್ರಕಿರಣನಾದ ಭಗವಾನ್ ಆದಿತ್ಯನು 'ನಿನಗೆ ಅಭಿಮತವಾದ ವರವನ್ನು ಕೇಳಿಕೊ' ಎಂದು ನುಡಿದನು (14-16). ಸತ್ರಾಜಿತನು ಆ ಸ್ಯಮಂತಕಮಣಿಯನ್ನು ಯಾಚಿಸಲಾಗಿ, ಸೂರ್ಯನು ಅದನ್ನು ಅವನಿಗೆ ಕೊಟ್ಟು ಅಂತರಿಕ್ಷದಲ್ಲಿ ತನ್ನ ಸ್ಥಾನವನ್ನು ಅಡರಿದನು. ಇತ್ತ ಸತ್ರಾಜಿತನು ನಿರ್ಮಲವಾದ ಆ ಮಣಿರತ್ನವನ್ನು ಕಂಠದಲ್ಲಿ ಧರಿಸಿ, ಸೂರ್ಯನಂತೆ ಸಕಲ ದಿಕ್ಕುಗಳನ್ನೂ ತೇಜಸ್ಸಿನಿಂದ ಬೆಳಗಿಸುತ್ತ ದ್ವಾರಕೆಗೆ ಬಂದನು (17-19). ಬರುತ್ತಿದ್ದ ಅವನನ್ನು ನೋಡಿದ ದ್ವಾರಕೆಯ ಜನರು, ಭಗವಂತನೂ ಆದಿ ಪುರುಷನೂ ಭೂಭಾರವನ್ನಿಳಿಸಲು ತನ್ನ ಅಂಶದಿಂದ ಮಾನುಷ್ಯರೂಪವನ್ನು ಧರಿಸಿದವನೂ ಪುರುಷೋತ್ತಮನೂ ಆದ ಶ್ರೀಕೃಷ್ಣನ ಬಳಿಗೆ ಹೋಗಿ ನಮಸ್ಕರಿಸಿ "ಭಗವನ್, ನಿನ್ನ ದರ್ಶನವನ್ನು ಪಡೆಯಲು ಸೂರ್ಯದೇವನೇ ಬರುತ್ತಿದ್ದಾನೆಂದು ಕಾಣುತ್ತದೆ!" ಎಂದರು (20-21). ಅದಕ್ಕೆ ಶ್ರೀಕೃಷ್ಣನು "ಅವನು

**॥ 21 ॥ ಭಗವನ್ನಾಯಮಾದಿತ್ಯಃ ಸತ್ರಾಜಿದಯಮಾದಿತ್ಯದತ್ತಸ್ಯಮಂತಕಾಖ್ಯಂ ಮಹಾಮಣಿರತ್ನಂ ಬಿಭ್ರದತ್ರೋಪಯಾತಿ ॥ 22 ॥ ತದೇನಂ ವಿಶ್ರಬ್ಧಾಃ ಪಶ್ಯತೇತ್ಯುಕ್ತಾಸ್ತೇ ತಥೈವ ದದೃಶುಃ ॥ 23 ॥ ಸ ಚ ತಂ ಸ್ಯಮಂತಕಮಣಿಮಾತ್ಮನಿವೇಶನೇ ಚಕ್ರೇ ॥ 24 ॥ ಪ್ರತಿದಿನಂ ತನ್ಮಣಿರತ್ನಮಷ್ಟೌ ಕನಕಭಾರಾನ್ ಸ್ರವತಿ ॥ 25 ॥ ತತ್ಪ್ರಭಾವಾಚ್ಚ ಸಕಲಸ್ಯೈವ ರಾಷ್ಟ್ರಸ್ಯೋಪಸರ್ಗಾನಾವೃಷ್ಟಿವ್ಯಾಲಾಗ್ನಿಚೋರದುರ್ಭಿಕ್ಷಾದಿಭಯಂ ನ ಭವತಿ ॥ 26 ॥ ಅಚ್ಯುತೋಽಪಿ ತದ್ದಿವ್ಯಂ ರತ್ನಮುಗ್ರಸೇನಸ್ಯ ಭೂಪತೇರ್ಯೋಗ್ಯಮೇತದಿತಿ ಲಿಪ್ಸಾಂ ಚಕ್ರೇ ॥ 27 ॥ ಗೋತ್ರಭೇದಭಯಾಚ್ಛಕ್ತೋಽಪಿ ನ ಜಹಾರ ॥ 28 ॥ ಸತ್ರಾಜಿದಪ್ಯಚ್ಯುತೋ ಮಾಮೇತದ್ಯಾಚಯಿಷ್ಯತೀತ್ಯವಗಮ್ಯ ರತ್ನಲೋಭಾದ್ ಭ್ರಾತ್ರೇ ಪ್ರಸೇನಾಯ ತದ್ರತ್ನಮದಾತ್ ॥ 29 ॥ ತಚ್ಚ ಶುಚಿನಾ ಧ್ರಿಯಮಾಣಮಶೇಷಮೇವ**

---

ಸೂರ್ಯದೇವನಲ್ಲ ; ಆತನು ಸತ್ರಾಜಿತ. ಸೂರ್ಯದೇವನು ಕೊಟ್ಟಿರುವ ಸ್ಯಮಂತಕವೆಂಬ ಮಣಿರತ್ನವನ್ನು ಧರಿಸಿ ಇಲ್ಲಿಗೆ ಬರುತ್ತಿದ್ದಾನೆ. ವಿಶ್ವಸ್ತರಾಗಿ ಅವನನ್ನು ನೋಡಿರಿ" ಎಂದು ನುಡಿದನು. ಅಂತೆಯೇ ಅವರು ಸತ್ರಾಜಿತನನ್ನು ನೋಡತೊಡಗಿದರು (22-23). ಸತ್ರಾಜಿತನು ಆ ಮಣಿರತ್ನವನ್ನು ತನ್ನ ಮನೆಯಲ್ಲಿ ಭದ್ರವಾಗಿ ಇರಿಸಿದನು. ಆ ಸ್ಯಮಂತಕಮಣಿಯು ಪ್ರತಿದಿನವೂ ಎಂಟು ಭಾರ* ಚಿನ್ನವನ್ನು ಕೊಡುತ್ತಿತ್ತು. ಅದರ ಮಹಿಮೆಯಿಂದ ಸಂಪೂರ್ಣ ರಾಷ್ಟ್ರದಲ್ಲಿ ರೋಗ, ಅನಾವೃಷ್ಟಿ, ಕಾಡುಮೃಗ, ಬೆಂಕಿ, ಕಳ್ಳರು, ದುರ್ಭಿಕ್ಷ—ಮುಂತಾದವುಗಳ ಭಯವಿರುತ್ತಿರಲಿಲ್ಲ (24-26). ಶ್ರೀಕೃಷ್ಣನಾದರೋ ಆ ದಿವ್ಯ ರತ್ನವು ರಾಜನಾದ ಉಗ್ರಸೇನನಿಗೆ ಯೋಗ್ಯವಾದದ್ದೆಂಬ ಅಭಿಪ್ರಾಯವನ್ನು ತಳೆದಿದ್ದನು. ತಾನು ಸಮರ್ಥನಾಗಿದ್ದರೂ ವಂಶದಲ್ಲಿ ವೈಮನಸ್ಯ ಹುಟ್ಟುವುದೆಂದು ಆ ರತ್ನವನ್ನು ಬಲಾತ್ಕಾರದಿಂದ ಕಿತ್ತುಕೊಳ್ಳಲಿಲ್ಲ (27-28). ಆ ಸ್ಯಮಂತಕ ಮಣಿಯನ್ನು ಕೊಡು ಎಂದು ಶ್ರೀಕೃಷ್ಣನು ಕೇಳಬಹುದು ಎಂದಾಲೋಚಿಸಿ ಸತ್ರಾಜಿತನು ಮಣಿಯ ಮೇಲಿನ ಲೋಭದಿಂದ ಅದನ್ನು ತನ್ನ ಸೋದರನಾದ

---

* ಭಾರ = ಹಿಂದಿನ ಕಾಲದಲ್ಲಿದ್ದ ಒಂದು ತೂಕ, 30 ತುಲಾ ಅಥವಾ 3000 ಪಲ, 'ತುಲಾಂ ಪಲಶತಂ ಪ್ರಾಹುರ್ಭಾರಃ ಸ್ಯಾದ್ವಿಂಶತಿಸ್ತುಲಾಃ'.

**ಸುವರ್ಣಸ್ರವಾದಿಕಂ ಗುಣಜಾತಮುತ್ಪಾದಯತಿ ಅನ್ಯಥಾ ಧಾರಯಂತಮೇವ ಹಂತೀತ್ಯಜಾನನ್ನಸಾವಪಿ ಪ್ರಸೇನಸ್ತೇನ ಕಂಠಸಕ್ತೇನ ಸ್ಯಮಂತಕೇನಾಶ್ವಮಾರುಹ್ಯಾಟವ್ಯಾಂ ಮೃಗಯಾಮಗಚ್ಛತ್ ॥ 30 ॥ ತತ್ರ ಚ ಸಿಂಹಾದ್ವಧಮವಾಪ ॥ 31 ॥ ಸಾಶ್ವಂ ಚ ತಂ ನಿಹತ್ಯ ಸಿಂಹೋಽಪ್ಯಮಲಮಣಿರತ್ನಮಾಸ್ಯಾಗ್ರೇಣಾದಾಯ ಗಂತುಮಭ್ಯುದ್ಯತಃ ಋಕ್ಷಾಧಿಪತಿನಾ ಜಾಂಬವತಾ ದೃಷ್ಟೋ ಘಾತಿತಶ್ಚ ॥ 32 ॥ ಜಾಂಬವಾನಪ್ಯಮಲಮಣಿರತ್ನಮಾದಾಯ ಸ್ವಬಿಲೇ ಪ್ರವಿವೇಶ ॥ 33 ॥ ಸುಕುಮಾರಸಂಜ್ಞಾಯ ಬಾಲಕಾಯ ಚ ಕ್ರೀಡನಕಮಕರೋತ್ ॥ 34 ॥ ಅನಾಗಚ್ಛತಿ ತಸ್ಮಿನ್ಪ್ರಸೇನೇ ಕೃಷ್ಣೋ ಮಣಿರತ್ನಮಭಿಲಷಿತವಾನ್ ಸ ಚ ಪ್ರಾಪ್ತವಾನ್ನೂನಮೇತದಸ್ಯ ಕರ್ಮೇತ್ಯಖಿಲ ಏವ ಯದುಲೋಕಃ ಪರಸ್ಪರಂ ಕರ್ಣಾಕರ್ಣ್ಯಕಥಯತ್ ॥ 35 ॥ ವಿದಿತಲೋಕಾಪವಾದವೃತ್ತಾಂತಶ್ಚ ಭಗವಾನ್ ಸರ್ವಯದುಸೈನ್ಯಪರಿವಾರಪರಿವೃತಃ ಪ್ರಸೇನಾಶ್ವಪದವೀಮನುಸಸಾರ ॥ 36 ॥ ದದರ್ಶ**

---

ಪ್ರಸೇನನಿಗೆ ಕೊಟ್ಟನು (29). ಆ ರತ್ನವನ್ನು ಶುಚಿಯಾಗಿಯೇ ಧರಿಸಬೇಕು, ಆಗಲೇ ಸುವರ್ಣೋತ್ಪಾದನೆ ಮುಂತಾದ ಮಹಿಮೆಯನ್ನು ಪ್ರಕಟಿಸುವುದು, ಇಲ್ಲದಿದ್ದರೆ ಧರಿಸಿದವನನ್ನೇ ಅದು ಕೊಂದುಹಾಕುವುದು—ಎಂಬ ವಿಷಯವನ್ನರಿಯದೆ ಪ್ರಸೇನನು ಸ್ಯಮಂತಕಮಣಿಯನ್ನು ಕಂಠದಲ್ಲಿ ಧರಿಸಿ ಕುದುರೆಯನ್ನೇರಿ ಬೇಟೆಗಾಗಿ ಅಡವಿಗೆ ಹೋಗಿ ಅಲ್ಲಿ ಒಂದು ಸಿಂಹದಿಂದ ಮರಣಕ್ಕೆ ತುತ್ತಾದನು (30-31). ಸಿಂಹವು ಪ್ರಸೇನನನ್ನೂ ಅವನ ಕುದುರೆಯನ್ನೂ ಕೊಂದು ಹಾಕಿ ಆ ಮಣಿರತ್ನವನ್ನು ಬಾಯಲ್ಲಿ ಕಚ್ಚಿಕೊಂಡು ಹೊರಟಿತು. ಅಷ್ಟರಲ್ಲಿ ಋಕ್ಷರಾಜನಾದ ಜಾಂಬವಂತನು ಅದನ್ನು ನೋಡಿ ಸಿಂಹವನ್ನು ಕೊಂದು ಆ ಮಣಿರತ್ನವನ್ನು ತೆಗೆದುಕೊಂಡು ತನ್ನ ಗುಹೆಯನ್ನು ಪ್ರವೇಶಿಸಿದನು. ಸುಕುಮಾರನೆಂಬ ತನ್ನ ಬಾಲಕನಿಗೆ ಆಟದ ವಸ್ತುವಾಗಿ ರತ್ನವನ್ನು ಕೊಟ್ಟನು (32-34). ಇತ್ತ ಪ್ರಸೇನನು ವಾಪಸು ಬರದಿರಲಾಗಿ ಎಲ್ಲ ಯಾದವರೂ ತಮ್ಮತಮ್ಮಲ್ಲಿ "ಕೃಷ್ಣನಿಗೆ ಆ ಮಣಿರತ್ನದ ಮೇಲೆ ಬಯಕೆ ಇತ್ತು. ಅವನೇ ಅದನ್ನು ಕಿತ್ತುಕೊಂಡಿರಬೇಕು. ಇದು ಅವನದೇ ಕೆಲಸ" ಎಂದು ಹೇಳಿಕೊಳ್ಳುತ್ತ ಕಿವಿಯಲ್ಲಿ ಗುಸುಗುಟ್ಟತೊಡಗಿದರು (35). ಭಗವಂತನಿಗೆ ಈ ಲೋಕಾಪವಾದದ ವೃತ್ತಾಂತವು ತಿಳಿಯಿತು.

**ಚಾಶ್ವಸಮವೇತಂ ಪ್ರಸೇನಂ ಸಿಂಹೇನ ವಿನಿಹತಮ್ ॥ 37 ॥ ಅಖಿಲ-ಜನಮಧ್ಯೇ ಸಿಂಹಪದದರ್ಶನಕೃತಪರಿಶುದ್ಧಿಃ ಸಿಂಹಪದಮನುಸಸಾರ ॥ 38 ॥ ಋಕ್ಷಪತಿನಿಹತಂ ಚ ಸಿಂಹಮಪ್ಯಲ್ಪೇ ಭೂಮಿಭಾಗೇ ದೃಷ್ಟ್ವಾ ತತಶ್ಚ ತದ್ರತ್ನಗೌರವಾದೃಕ್ಷಸ್ಯಾಪಿ ಪದಾನ್ಯನುಯಯೌ ॥ 39 ॥ ಗಿರಿತಟೇ ಚ ಸಕಲಮೇವ ತದ್ಯದುಸೈನ್ಯಮವಸ್ಥಾಪ್ಯ ತತ್ಪದಾನುಸಾರೀ ಋಕ್ಷಬಿಲಂ ಪ್ರವಿವೇಶ ॥ 40 ॥ ಅಂತಃ ಪ್ರವಿಷ್ಟಶ್ಚ ಧಾತ್ರ್ಯಾಃ ಸುಕುಮಾರಕಮುಲ್ಲಾಲ-ಯಂತ್ಯಾ ವಾಣೀಂ ಶುಶ್ರಾವ ॥ 41 ॥**

**ಸಿಂಹಃ ಪ್ರಸೇನಮವಧೀತ್ಸಿಂಹೋ ಜಾಂಬವತಾ ಹತಃ ।**
**ಸುಕುಮಾರಕ ಮಾ ರೋದೀಸ್ತವ ಹ್ಯೇಷ ಸ್ಯಮಂತಕಃ ॥** 42

**ಇತ್ಯಾಕರ್ಣ್ಯೋಪಲಬ್ಧಸ್ಯಮಂತಕೋಽಂತಃ ಪ್ರವಿಷ್ಟಃ ಕುಮಾರ ಕ್ರೀಡನ-**

---

ಅವನು ಸಮಸ್ತ ಯದುಸೇನೆಯಿಂದಲೂ ಪರಿವಾರದಿಂದಲೂ ಸಮೇತನಾಗಿ ಪ್ರಸೇನನ ಕುದುರೆಯು ಹೋದ ದಾರಿಯನ್ನು ಹಿಡಿದು ಹುಡುಕುತ್ತ ಹೊರಟನು. ಮುಂದೆ ಅಶ್ವದೊಡನೆ ಪ್ರಸೇನನು ಸಿಂಹದಿಂದ ಹತನಾಗಿ ಬಿದ್ದಿರುವುದನ್ನು ಕಂಡನು (36-37). ಸಮಸ್ತ ಜನರ ಮಧ್ಯದಲ್ಲಿ ಸಿಂಹದ ಹೆಜ್ಜೆಯ ಗುರುತನ್ನು ಕಂಡು ಲೋಕಾಪವಾದದಿಂದ ಮುಕ್ತನಾಗಿ, ಸಿಂಹದ ಹೆಜ್ಜೆಯನ್ನನುಸರಿಸಿ ಮುಂದೆ ಹೋದನು. ಸ್ವಲ್ಪ ದೂರದಲ್ಲಿಯೇ ಋಕ್ಷರಾಜನಿಂದ ಸಿಂಹವು ಹತವಾಗಿ ನೆಲದ ಮೇಲೆ ಬಿದ್ದಿರುವುದು ಗೋಚರಿಸಿತು. ರತ್ನವು ಮಹತ್ತರವಾದ್ದರಿಂದ ಆ ಕರಡಿಯ ಹೆಜ್ಜೆ ಗುರುತುಗಳನ್ನನುಸರಿಸಿ ಹೋದನು (38-39). ಬೆಟ್ಟದ ಕಿಬ್ಬದಿಯಲ್ಲಿ ಎಲ್ಲ ಯದು ಸೈನ್ಯವನ್ನು ನಿಲ್ಲಿಸಿ ಕರಡಿಯ ಹೆಜ್ಜೆಯನ್ನನುಸರಿಸುತ್ತ, ಋಕ್ಷರಾಜನ ಗುಹೆಯನ್ನು ಪ್ರವೇಶಿಸಿದನು. ಗುಹೆಯೊಳಗೆ ಹೋದ ಶ್ರೀಕೃಷ್ಣನಿಗೆ ಸುಕುಮಾರಕನನ್ನು ಜೋಗುಳ ಹಾಡಿ ಲಾಲಿಸುತ್ತಿದ್ದ ದಾದಿಯ ಈ ಮಾತು ಕೇಳಿಸಿತು (40-41):

"ಪ್ರಸೇನನನ್ನು ಸಿಂಹ ಒಂದು ಕೊಂದುಬಿಟ್ಟಿತು ।
ಆ ಸಿಂಹವನ್ನು ಜಾಂಬವಂತ ಮುಗಿಸಿಬಿಟ್ಟನು ।
ಅಳಬೇಡ ಸುಕುಮಾರಕ, ನಿನ್ನದಯ್ಯ ಈ ಸ್ಯಮಂತಕ!" (42).

ಇದನ್ನು ಕೇಳಿದೊಡನೆ ಸ್ಯಮಂತಕವು ಪತ್ತೆಯಾಯಿತೆಂದು ಇನ್ನೂ ಒಳಗೆ

ಕೀಕೃತಂ ಚ ಧಾತ್ರ್ಯಾ ಹಸ್ತೇ ತೇಜೋಭಿರ್ಜಾಜ್ವಲ್ಯಮಾನಂ ಸ್ಯಮಂತಕಂ ದದರ್ಶ ॥ 43 ॥ ತಂ ಚ ಸ್ಯಮಂತಕಾಭಿಲಷಿತಚಕ್ಷುಷಮಪೂರ್ವಪುರುಷ-ಮಾಗತಂ ಸಮವೇಕ್ಷ್ಯ ಧಾತ್ರೀ ತ್ರಾಹಿ ತ್ರಾಹೀತಿ ವ್ಯಾಜಹಾರ ॥ 44 ॥ ತದಾರ್ತ್ತರವಶ್ರವಣಾನಂತರಂ ಚಾಮರ್ಷಪೂರ್ಣಹೃದಯಃ ಸ ಜಾಂಬ-ವಾನಾಜಗಾಮ ॥ 45 ॥ ತಯೋಶ್ಚ ಪರಸ್ಪರಮುದ್ಧತಾಮರ್ಷಯೋ-ರ್ಯುದ್ಧಮೇಕವಿಂಶತಿದಿನಾನ್ಯಭವತ್ ॥ 46 ॥ ತೇ ಚ ಯದುಸೈನಿಕಾಸ್ತತ್ರ ಸಪ್ತಾಷ್ಟದಿನಾನಿ ತನ್ನಿಷ್ಕ್ರಾಂತಿಮುದೀಕ್ಷಮಾಣಾಸ್ತಸ್ಥುಃ ॥ 47 ॥ ಅನಿ-ಷ್ಕ್ರಮಣೇ ಚ ಮಧುರಿಪುರಸಾವವಶ್ಯಮತ್ರ ಬಿಲೇಽತ್ಯಂತಂ ನಾಶ-ಮವಾಪ್ತೋ ಭವಿಷ್ಯತ್ಯನ್ಯಥಾ ತಸ್ಯ ಜೀವತಃ ಕಥಮೇತಾವಂತಿ ದಿನಾನಿ ಶತ್ರುಜಯೇ ವ್ಯಾಕ್ಷೇಪೋ ಭವಿಷ್ಯತೀತಿ ಕೃತಾಧ್ಯವಸಾಯಾ ದ್ವಾರಕಾಮಾ-ಗಮ್ಯ ಹತಃ ಕೃಷ್ಣ ಇತಿ ಕಥಯಾಮಾಸುಃ ॥ 48 ॥ ತದ್‌ಬಾಂಧವಾಶ್ಚ-ತತ್ಕಾಲೋಚಿತಮಖಿಲಮುತ್ತರಕ್ರಿಯಾಕಲಾಪಂ ಚಕ್ರುಃ ॥ 49 ॥ ತತಶ್ಚಾಸ್ಯ-

---

ಹೋಗಿ, ಬಾಲಕನಿಗೆ ಆಟದ ವಸ್ತುವಾಗಿ ದಾದಿಯ ಕೈಯಲ್ಲಿ ತೇಜೋರಾಶಿ ಯಿಂದ ಮಿರಮಿರನೆ ಮಿರುಗುತ್ತಿದ್ದ ಸ್ಯಮಂತಕವನ್ನು ಶ್ರೀಕೃಷ್ಣನು ಕಂಡನು! (43). ಅಭಿಲಾಷೆಯ ಕಣ್ಣುಗಳಿಂದ ಸ್ಯಮಂತಕವನ್ನು ನೋಡುತ್ತ ಬಂದ ಆಗಂತುಕನನ್ನು ಕಂಡೊಡನೆ ದಾದಿಯು 'ತ್ರಾಹಿ, ತ್ರಾಹಿ' ಎಂದು ಕೂಗಿಕೊಂಡಳು. ಅವಳ ಆರ್ತಸ್ವರವನ್ನು ಕೇಳಿದೊಡನೆ ಜಾಂಬವಂತನು ಕ್ರೋಧಾವಿಷ್ಟನಾಗಿ ಅಲ್ಲಿಗೆ ಬಂದನು (44-45). ಅನಂತರ ಕ್ರೋಧಾವಿಷ್ಟರಾದ ಇಬ್ಬರಿಗೂ ಇಪ್ಪತ್ತೊಂದು ದಿನಗಳವರೆಗೆ ಯುದ್ಧ ನಡೆಯಿತು. ಹೊರಗಡೆಯಿದ್ದ ಯಾದವ ಸೈನಿಕರು ಏಳೆಂಟು ದಿನಗಳವರೆಗೆ ಶ್ರೀಕೃಷ್ಣನು ಹೊರಗೆ ಬಂದಾನೆಂದು ಕಾದಿದ್ದರು (46-47). ಆಗಲೂ ಹೊರಗೆ ಬರದಿರಲಾಗಿ "ಮಧುಸೂದನನು ಈ ಗುಹೆಯೊಳಗೆ ಖಂಡಿತವಾಗಿಯೂ ಮೃತನಾಗಿರಬೇಕು! ಹಾಗಲ್ಲದೆ ಅವನು ಬದುಕಿದ್ದರೆ ಶತ್ರುವನ್ನು ಜಯಿಸುವುದಕ್ಕೆ ಇಷ್ಟು ದಿನಗಳ ಕಾಲ ತಡವಾಗುತ್ತಿತ್ತೆ?" ಎಂದು ನಿಶ್ಚಯಿಸಿ ಅವರು ದ್ವಾರಕೆಗೆ ಹಿಂದಿರುಗಿ ಬಂದು "ಕೃಷ್ಣನು ಹತ ನಾದನು" ಎಂದು ಹೇಳಿದರು (48). ಆದನ್ನು ಕೇಳಿ ಶ್ರೀಕೃಷ್ಣನ ಬಾಂಧವರು ಕಾಲೋಚಿತವಾದ ಎಲ್ಲ ಔರ್ಧ್ವದೈಹಿಕಕ್ರಿಯೆಗಳನ್ನೂ ನಡೆಸಿಬಿಟ್ಟರು! ಅವರು

**ಯುದ್ಧ್ಯಮಾನಸ್ಯಾತಿಶ್ರದ್ಧಾದತ್ತವಿಶಿಷ್ಟಪಾತ್ರೋಪಯುಕ್ತಾನ್ನತೋಯಾದಿನಾ ಶ್ರೀಕೃಷ್ಣಸ್ಯ ಬಲಪ್ರಾಣಪುಷ್ಟಿರಭೂತ್ ॥ 50 ॥ ಇತರಸ್ಯಾನುದಿನಮತಿ-ಗುರುಪುರುಷಭೇದ್ಯಮಾನಸ್ಯ ಅತಿನಿಷ್ಠುರಪ್ರಹಾರಪಾತಪೀಡಿತಾಖಿಲಾ-ವಯವಸ್ಯ ನಿರಾಹಾರತಯಾ ಬಲಹಾನಿರಭೂತ್ ॥ 51 ॥ ನಿರ್ಜಿತಶ್ಚ ಭಗವತಾ ಜಾಂಬವಾನ್ಪ್ರಣಿಪತ್ಯ ವ್ಯಾಜಹಾರ ॥ 52 ॥ ಸುರಾಸುರಗಂಧರ್ವ-ಯಕ್ಷರಾಕ್ಷಸಾದಿಭಿರಪ್ಯಖಿಲೈರ್ಭವಾನ್ನ ಜೇತುಂ ಶಕ್ಯಃ ಕಿಮುತಾವನಿ-ಗೋಚರೈರಲ್ಪವೀರ್ಯೈರ್ನರೈರ್ನರಾವಯವಭೂತೈಶ್ಚ ತಿರ್ಯಗ್ಯೋ-ನ್ಯನುಸೃತಿಭಿಃ ಕಿಂ ಪುನರಸ್ಮದ್ವಿಧೈರವಶ್ಯಂ ಭವತಾಸ್ಮತ್ಸ್ವಾಮಿನಾ ರಾಮೇಣೇವ ನಾರಾಯಣಸ್ಯ ಸಕಲಜಗತ್ಪರಾಯಣಸ್ಯಾಂಶೇನ ಭಗವತಾ ಭವಿತವ್ಯಮಿತ್ಯುಕ್ತಸ್ತಸ್ಮೈ ಭಗವಾನಖಿಲಾವನಿಭಾರಾವತರಣಾರ್ಥಮವ-**

---

ಅತ್ಯಂತ ಶ್ರದ್ಧೆಯಿಂದ ಯೋಗ್ಯಪಾತ್ರರಾದ ವೈದಿಕರಿಗೆ ಅರ್ಪಿಸಿದ ಅನ್ನ ಜಲಾದಿಗಳಿಂದ, ಇತ್ತಲಾಗಿ ಯುದ್ಧಮಾಡುತ್ತಿದ್ದ ಶ್ರೀಕೃಷ್ಣನ ಬಲ ಮತ್ತು ಪ್ರಾಣಗಳಿಗೆ* ಆಪ್ಯಾಯನವಾಯಿತು (49-50). ಜಾಂಬವಂತನಿಗಾದರೋ ಅತ್ಯಂತ ಬಲಾಢ್ಯನಾದ ಪುರುಷನಿಂದ ಮರ್ದಿಸಲ್ಪಡುತ್ತ, ಕಠೋರವಾದ ಪ್ರಹಾರಗಳಿಂದ ನಿಖಿಲಾವಯವಗಳೂ ಪೀಡಿಸಲ್ಪಡುತ್ತಿರಲಾಗಿ ಶರೀರ ಬಲವು ಕ್ಷೀಣಿಸಿತು (51). ಜಾಂಬವಂತನು ಪರಾಜಿತನಾಗಿ ಭಗವಂತನಿಗೆ ಅಡ್ಡಬಿದ್ದು "ಹೇ ಪರಾಕ್ರಮಿ, ಸಕಲಸುರಾಸುರಗಂಧರ್ವಯಕ್ಷರಾಕ್ಷಸಾದಿಗಳಿಂದಲೂ ನಿನ್ನನ್ನು ಗೆಲ್ಲಲು ಸಾಧ್ಯವಿಲ್ಲ! ಇನ್ನು ಭೂಲೋಕದಲ್ಲಿರುವ ಅಲ್ಪವೀರ್ಯರಾದ ಮಾನವರಿಂದ ಗೆಲ್ಲಲಾದೀತೇ? ಮಾನವರ ಆಕಾರದಲ್ಲಿರುವ ತಿರ್ಯಗ್ಯೋನಿಗಳಾದ ನಮ್ಮಂತಹವರಿಂದಲೂ ಆಗತಕ್ಕದ್ದೇ ಅಲ್ಲ. ಮಹಿಮಾನ್ವಿತನಾದ ನೀನು ನನ್ನ ಸ್ವಾಮಿಯಾದ ಶ್ರೀರಾಮನಂತೆ ನಿಖಿಲಜಗತ್ತಿಗೆ ಪರಮಗತಿಯಾದ ಶ್ರೀಮನ್ನಾರಾಯಣನ ಅಂಶಾವತಾರಿಯಾಗಿರಬೇಕು" ಎಂದನು. ಆಗ ಅಚ್ಯುತನು ಸಕಲ ಭೂಭಾರವನ್ನಿಳಿಸುವುದಕ್ಕಾಗಿ ತಾನು ಅವತರಿಸಿದ್ದೇನೆಂಬು

---

* ಶ್ರಾದ್ಧದ ಮಹಿಮೆಯನ್ನೂ ಆವಶ್ಯಕತೆಯನ್ನೂ ತಿಳಿಸುವುದಕ್ಕಾಗಿ ಹೇಳಿದ ಅರ್ಥವಾದ ಇದು.

**ತರಣಮಾಚಚಕ್ಷೇ ॥ 53 ॥ ಪ್ರೀತ್ಯಭಿವ್ಯಂಜಿತಕರತಲಸ್ಪರ್ಶನೇನ ಚೈನ-ಮಪಗತಯುದ್ಧಖೇದಂ ಚಕಾರ ॥ 54 ॥ ಸ ಚ ಪ್ರಣಿಪತ್ಯ ಪುನರಪ್ಯೇನಂ ಪ್ರಸಾದ್ಯ ಜಾಂಬವತೀಂ ನಾಮ ಕನ್ಯಾಂ ಗೃಹಾಗತಾಯಾರ್ಘ್ಯಭೂತಾಂ ಗ್ರಾಹಯಾಮಾಸ ॥ 55 ॥ ಸ್ಯಮಂತಕಮಣಿರತ್ನಮಪಿ ಪ್ರಣಿಪತ್ಯ ತಸ್ಮೈ ಪ್ರದದೌ ॥ 56 ॥ ಅಚ್ಯುತೋಽಪ್ಯತಿಪ್ರಣತಾತ್ತಸ್ಮಾದಗ್ರಾಹ್ಯಮಪಿ ತನ್ಮಣಿ-ರತ್ನಮಾತ್ಮಸಂಶೋಧನಾಯ ಜಗ್ರಾಹ ॥ 57 ॥ ಸಹ ಜಾಂಬವತ್ಯಾ ಸ ದ್ವಾರಕಾಮಾಜಗಾಮ ॥ 58 ॥ ಭಗವದಾಗಮನೋದ್ಭೂತಹರ್ಷೋ-ತ್ಕರ್ಷಸ್ಯ ದ್ವಾರಕಾವಾಸಿಜನಸ್ಯ ಕೃಷ್ಣಾವಲೋಕನಾತ್ತತ್ಕ್ಷಣಮೇವಾತಿ-ಪರಿಣತವಯಸೋಽಪಿ ನವಯೌವನಮಿವಾಭವತ್ ॥ 59 ॥ ದಿಷ್ಟ್ಯಾ ದಿಷ್ಟ್ಯೇತಿ ಸಕಲಯಾದವಾಃ ಸ್ತ್ರಿಯಶ್ಚ ಸಭಾಜಯಾಮಾಸುಃ ॥ 60 ॥ ಭಗವಾನಪಿ ಯಥಾನುಭೂತಮಶೇಷಂ ಯಾದವಸಮಾಜೇ ಯಥಾ-**

---

ದನ್ನು ಜಾಂಬವಂತನಿಗೆ ತಿಳಿಸಿದನು (52-53). ಮತ್ತು ಪ್ರೀತಿಪೂರ್ವಕವಾಗಿ ಜಾಂಬವಂತನನ್ನು ಕೈಗಳಿಂದ ನೇವರಿಸಿ ಆತನ ಯುದ್ಧಶ್ರಮವನ್ನು ಹೋಗಲಾಡಿಸಿದನು. ಜಾಂಬವಂತನು ಮತ್ತೆ ನಮಸ್ಕರಿಸಿ ಆತನನ್ನು ಪ್ರಸನ್ನಗೊಳಿಸಿ, ತನ್ನ ಮಗಳಾದ ಜಾಂಬವತಿಯೆಂಬ ಕನ್ಯೆಯನ್ನು ಮನೆಗೆ ಬಂದ ಅಚ್ಯುತನಿಗೆ ಪೂಜೆಯ ಕಾಣಿಕೆಯನ್ನಾಗಿ ಅರ್ಪಿಸಿದನು. ಅಲ್ಲದೆ ಸ್ಯಮಂತಕಮಣಿರತ್ನವನ್ನೂ ಪ್ರಣಾಮಪೂರ್ವಕವಾಗಿ ಸಮರ್ಪಿಸಿದನು (54-56). ಅತ್ಯಂತವಿನತನಾದ ಜಾಂಬವಂತನಿಂದ ಆ ಮಣಿರತ್ನವನ್ನು ಪಡೆಯುವುದು ಅನುಚಿತವೆಂದು ಅಚ್ಯುತನಿಗೆ ಅನ್ನಿಸಿತು. ಆದರೂ ತನಗೆ ಬಂದ ಕೆಟ್ಟ ಹೆಸರನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಅದನ್ನು ಸ್ವೀಕರಿಸಿದನು. ಅನಂತರ ಜಾಂಬವತಿಯೊಡನೆ ದ್ವಾರಕೆಗೆ ಹಿಂದಿರುಗಿದನು (57-58). ಶ್ರೀಕೃಷ್ಣನು ಬಂದನೆಂಬುದನ್ನು ತಿಳಿದು ದ್ವಾರಕಾವಾಸಿ ಜನರ ಹರ್ಷಕ್ಕೆ ಪಾರವಿಲ್ಲವಾಯಿತು. ಅತ್ಯಂತ ವೃದ್ಧನಿಗೂ ನವಯೌವನ ಬಂದಂತಾಯಿತು. ಎಲ್ಲ ಯಾದವರೂ ಸ್ತ್ರೀಯರೂ ಸಹ "ಆಹಾ! ನಮ್ಮ ಭಾಗ್ಯವಿದು! ಆಹಾ! ನಮ್ಮ ಭಾಗ್ಯ!" ಎಂದು ಉದ್ಗರಿಸುತ್ತ ಶ್ರೀಕೃಷ್ಣನನ್ನು ಗೌರವಿಸಿದರು (59-60). ಭಗವಂತನೂ ಸಹ ನಡೆದುದೆಲ್ಲವನ್ನೂ ಯಥಾವತ್ತಾಗಿ ಯಾದವ ಸಮೂಹಕ್ಕೆ ಹೇಳಿದನು. ಸ್ಯಮಂತಕಮಣಿಯನ್ನು ಸತ್ರಾಜಿತನಿಗೆ

**ವದಾಚಚಕ್ಷೇ ॥ 61 ॥ ಸ್ಯಮಂತಕಂ ಚ ಸತ್ರಾಜಿತೇ ದತ್ತ್ವಾ ಮಿಥ್ಯಾಭಿಶಸ್ತಿಪರಿಶುದ್ಧಿಮವಾಪ ॥ 62 ॥ ಜಾಂಬವತೀಂ ಚಾಂತಃಪುರೇ ನಿವೇಶಯಾಮಾಸ ॥ 63 ॥ ಸತ್ರಾಜಿದಪಿ ಮಯಾಸ್ಯಾಭೂತಮಲಿನಮಾರೋಪಿತಮಿತಿ ಜಾತಸಂತ್ರಾಸಾತ್ಸ್ವಸುತಾಂ ಸತ್ಯಭಾಮಾಂ ಭಗವತೇ ಭಾರ್ಯಾರ್ಥಂ ದದೌ ॥ 64 ॥ ತಾಂ ಚಾಕ್ರೂರಕೃತವರ್ಮಶತಧನ್ವಪ್ರಮುಖಾ ಯಾದವಾಃ ಪ್ರಾಗ್ವರಯಾಂಬಭೂವುಃ ॥ 65 ॥ ತತಸ್ತತ್ಪ್ರದಾನಾದವಜ್ಞಾತಮೇವಾತ್ಮಾನಂ ಮನ್ಯಮಾನಾಃ ಸತ್ರಾಜಿತಿ ವೈರಾನುಬಂಧಂ ಚಕ್ರುಃ ॥ 66 ॥ ಅಕ್ರೂರಕೃತವರ್ಮಪ್ರಮುಖಾಶ್ಚ ಶತಧನ್ವಾನಮೂಚುಃ ॥ 67 ॥ ಅಯಮತೀವ ದುರಾತ್ಮಾ ಸತ್ರಾಜಿದ್ ಯೋಽಸ್ಮಾಭಿರ್ಭವತಾ ಚ ಪ್ರಾರ್ಥಿತೋಽಪ್ಯಾತ್ಮಜಾಮಸ್ಮಾನ್ ಭವಂತಂ ಚಾವಿಗಣಯ್ಯ ಕೃಷ್ಣಾಯ ದತ್ತವಾನ್ ॥ 68 ॥ ತದಲಮನೇನ ಜೀವತಾ ಘಾತಯಿತ್ವೈನಂ ತನ್ಮಹಾರತ್ನಂ ಸ್ಯಮಂತಕಾಖ್ಯಂ ತ್ವಯಾ ಕಿಂ ನ ಗೃಹ್ಯತೇ ವಯ-**

---

ಕೊಟ್ಟು ತನಗೆ ಬಂದ ಅಪಕೀರ್ತಿಯನ್ನು ಹೋಗಲಾಡಿಸಿಕೊಂಡನು. ಜಾಂಬವತಿಯನ್ನು ತನ್ನ ಅಂತಃಪುರಕ್ಕೆ ಕಳಿಸಿಕೊಟ್ಟನು (61-63). ಇತ್ತ ಸತ್ರಾಜಿತನಿಗಾದರೋ ಎಂದೂ ಇಲ್ಲದ ಕಳಂಕವನ್ನು ಶ್ರೀಕೃಷ್ಣನ ಮೇಲೆ ಹೊರಿಸಿದೆನೆಂದು ಹೆದರಿಕೆ ಹುಟ್ಟಿತು. ಅದಕ್ಕಾಗಿ ಆತನು ತನ್ನ ಪುತ್ರಿಯಾದ ಸತ್ಯಭಾಮೆಯನ್ನು ಶ್ರೀಕೃಷ್ಣನಿಗೆ ಕೊಟ್ಟು ಮದುವೆ ಮಾಡಿದನು (64). ಅಕ್ರೂರ, ಕೃತವರ್ಮ, ಶತಧನ್ವ—ಮುಂತಾದ ಯಾದವರು ಇದಕ್ಕೆ ಮೊದಲೇ ಸತ್ಯಭಾಮೆಯನ್ನು ತಮಗೆ ಕೊಡಬೇಕೆಂದು ಯಾಚಿಸಿದ್ದರು. ಆಮೇಲೆ ಅವಳನ್ನು ಶ್ರೀಕೃಷ್ಣನಿಗೆ ಕೊಟ್ಟದ್ದರಿಂದ ತಮಗೆ ಅವಮಾನವಾಯಿತೆಂದು ತಿಳಿದು ಸತ್ರಾಜಿತನ ಮೇಲೆ ವೈರವನ್ನು ಬೆಳೆಸಿದರು (65-66). (ಹೀಗಿರಲು ಒಂದು ದಿನ) ಅಕ್ರೂರ ಕೃತವರ್ಮ ಮೊದಲಾದವರು ಶತಧನ್ವನನ್ನು ಕಂಡು "ಈ ಸತ್ರಾಜಿತನು ಬಹಳ ದುರಾತ್ಮ, ನಾವೂ ನೀನೂ ಪ್ರಾರ್ಥಿಸಿಕೊಂಡಿದ್ದರೂ ಸಹ ಈತನು ನಮ್ಮನ್ನೂ ನಿನ್ನನ್ನೂ ಲೆಕ್ಕಿಸದೆ ಮಗಳನ್ನು ಶ್ರೀಕೃಷ್ಣನಿಗೆ ಮದುವೆಮಾಡಿಕೊಟ್ಟಿದ್ದಾನೆ (67-68). ಈ ಸತ್ರಾಜಿತನು ಬದುಕಿರುವುದೇ ಬೇಡ! ಇವನನ್ನು ಕೊಂದುಹಾಕಿ ಸ್ಯಮಂತಕವೆಂಬ ಮಹಾರತ್ನವನ್ನು ಏಕೆ ನೀನು ಕಿತ್ತುಕೊಳ್ಳಬಾರದು! ಕೃಷ್ಣ

**ಮಭ್ಯುಪಪತ್ಸ್ಯಾಮೋ ಯದ್ಯಚ್ಯುತಸ್ತ್ವಯ್ಯುಪರಿ ವೈರಾನುಬಂಧಂ ಕರಿಷ್ಯತೀತ್ಯೇವಮುಕ್ತಸ್ತಥೇತ್ಯಸಾವಪ್ಯಾಹ ॥ 69 ॥ ಜತುಗೃಹದಗ್ಧಾನಾಂ ಪಾಂಡುತನಯಾನಾಂ ವಿದಿತಪರಮಾರ್ಥೋಽಪಿ ಭಗವಾನ್ ದುರ್ಯೋಧನಪ್ರಯತ್ನಶೈಥಿಲ್ಯಕರಣಾರ್ಥಂ ಕುಲ್ಯಕರಣಾಯ ವಾರಣಾವತಂ ಗತಃ ॥ 70 ॥ ಗತೇ ಚ ತಸ್ಮಿನ್ ಸುಪ್ತಮೇವ ಸತ್ರಾಜಿತಂ ಶತಧನ್ವಾ ಜಘಾನ ಮಣಿರತ್ನಂ ಚಾದದಾತ್ ॥ 71 ॥ ಪಿತೃವಧಾಮರ್ಷಪೂರ್ಣಾ ಚ ಸತ್ಯಭಾಮಾ ಶೀಘ್ರಂ ಸ್ಯಂದನಮಾರೂಢಾ ವಾರಣಾವತಂ ಗತ್ವಾ ಭಗವತೇಽಹಂ ಪ್ರತಿಪಾದಿತೇತ್ಯಕ್ಷಾಂತಿಮತಾ ಶತಧನ್ವನಾಸ್ಮತ್ಪಿತಾ ವ್ಯಾಪಾದಿತಸ್ತಚ್ಚ ಸ್ಯಮಂತಕಮಣಿರತ್ನಮಪಹೃತಂ ಯಸ್ಯಾವಭಾಸನೇನಾಪಹೃತತಿಮಿರಂ ತ್ರೈಲೋಕ್ಯಂ ಭವಿಷ್ಯತಿ ॥ 72 ॥ ತದಿಯಂ ತ್ವದೀಯಾಪಹಾಸನಾ ತದಾಲೋಚ್ಯ ಯದತ್ರ ಯುಕ್ತಂ ತತ್ಕ್ರಿಯತಾಮಿತಿ ಕೃಷ್ಣ-**

---

ನೇನಾದರೂ ನಿನ್ನ ಮೇಲೆ ವೈರವನ್ನೆಳಸಿದರೆ, ನಾವು ನಿನ್ನ ಸಹಾಯಕ್ಕೆ ಬರುತ್ತೇವೆ" ಎಂದರು. ಶತಧನ್ವನು ಅದಕ್ಕೆ ಒಪ್ಪಿದನು (69). ಹೀಗಿರುವಾಗ ಪಾಂಡವರು ಅರಗಿನ ಮನೆಯಲ್ಲಿ ಸುಟ್ಟುಹೋದರೆಂಬ ಸುದ್ದಿ ಬಂದಿತು. ಶ್ರೀಕೃಷ್ಣನಿಗೆ ಪರಮಾರ್ಥವೇನೆಂಬುದು (ಪಾಂಡವರು ಬದುಕಿದ್ದಾರೆಂಬುದು) ತಿಳಿದಿದ್ದರೂ ದುರ್ಯೋಧನನು (ದ್ವೇಷಸಾಧನೆಗಾಗಿ ಮಾಡಬಹುದಾದ) ಪ್ರಯತ್ನವನ್ನು ಸಡಿಲಗೊಳಿಸಬೇಕೆಂದೂ ತನ್ನ ಬಂಧುಕೃತ್ಯವನ್ನು ಪಾಲಿಸಬೇಕೆಂದೂ ವಾರಣಾವತಕ್ಕೆ ಹೋದನು (70). ಶ್ರೀಕೃಷ್ಣನು ಅತ್ತ ಹೋದೊಡನೆಯೇ ಇತ್ತ ಶತಧನ್ವನು, ನಿದ್ರಿಸುತ್ತಿದ್ದ ಸತ್ರಾಜಿತನನ್ನು ಕೊಂದು ಸ್ಯಮಂತಕಮಣಿಯನ್ನು ತೆಗೆದುಕೊಂಡು ಹೋದನು. ಪಿತೃವಧೆಯಿಂದ ಕ್ರುದ್ಧಳಾದ ಸತ್ಯಭಾಮೆಯು ಒಡನೆಯೇ ರಥವನ್ನೇರಿ ವಾರಣಾವತಕ್ಕೆ ಧಾವಿಸಿದಳು. ಅಲ್ಲಿ ಶ್ರೀಕೃಷ್ಣನನ್ನು ಕಂಡು "ಭಗವನ್, ನನ್ನ ತಂದೆ ನನ್ನನ್ನು ನಿನಗೆ ಮದುವೆ ಮಾಡಿಕೊಟ್ಟನೆಂಬ ಹೊಟ್ಟೆಕಿಚ್ಚಿನಿಂದ ಶತಧನ್ವನು ನನ್ನ ತಂದೆಯನ್ನು ವಧಿಸಿದ್ದಾನೆ. ಸ್ಯಮಂತಕಮಣಿಯನ್ನು ಒಯ್ದಿದ್ದಾನೆ. ಮೂರು ಲೋಕದ ಕತ್ತಲೆಯನ್ನೂ ತನ್ನ ಪ್ರಕಾಶದಿಂದ ಅಡಗಿಸುತ್ತಿದ್ದ ಶ್ರೇಷ್ಠ ರತ್ನ ಅದು. ಇದೆಲ್ಲವೂ ನಿನಗೆ ಮಾಡಿದ ಅವಮಾನ. ಇದನ್ನು ಪರ್ಯಾಲೋಚಿಸಿ ಯಾವುದು ನಿನಗೆ ಯೋಗ್ಯವೆನಿಸುತ್ತದೆಯೋ ಹಾಗೆ

**ಮಾಹ ॥ 73 ॥ ತಯಾ ಚೈವಮುಕ್ತಃ ಪರಿತುಷ್ಟಾಂತಃಕರಣೋಽಪಿ ಕೃಷ್ಣಃ ಸತ್ಯಭಾಮಾಮಮರ್ಷತಾಮ್ರನಯನಃ ಪ್ರಾಹ ॥ 74 ॥ ಸತ್ಯೇ, ಸತ್ಯಂ ಮಮೈವೈಷಾಪಹಾಸನಾ ನಾಹಮೇತಾಂ ತಸ್ಯ ದುರಾತ್ಮನಸ್ಸಹಿಷ್ಯೇ ॥ 75 ॥ ನ ಹ್ಯನುಲ್ಲಂಘ್ಯ ವರಪಾದಪಂ ತತ್ಕೃತನೀಡಾಶ್ರಯಿಣೋ ವಿಹಂಗಮಾ ವಧ್ಯಂತೇ ತದಲಮಮುನಾಸ್ಮತ್ಪುರತಃ ಶೋಕಪ್ರೇರಿತ-ವಾಕ್ಯಪರಿಕರೇಣೇತ್ಯುಕ್ತ್ವಾ ದ್ವಾರಕಾಮಭ್ಯೇತ್ಯೈಕಾಂತೇ ಬಲದೇವಂ ವಾಸುದೇವಃ ಪ್ರಾಹ ॥ 76 ॥ ಮೃಗಯಾಗತಂ ಪ್ರಸೇನಮಟವ್ಯಾಂ**

---

ಮಾಡು" ಎಂದು ಬಿನ್ನಯಿಸಿದಳು (71-73). ಅವಳ ಮಾತನ್ನು ಕೇಳಿ ಅಂತರಂಗದಲ್ಲಿ ಸಂತುಷ್ಟನಾದರೂ* ಶ್ರೀಕೃಷ್ಣನು ಕೋಪದಿಂದ ರಕ್ತನೇತ್ರನಾಗಿ ಸತ್ಯಭಾಮೆಯನ್ನು ಕುರಿತು ಇಂತೆಂದನು: "ಸತ್ಯೆ, ಇದು ನನಗೆ ಮಾಡಿದ ಅವಮಾನವೇ ಸರಿ. ಆ ದುರಾತ್ಮನ ಈ ವರ್ತನೆಯನ್ನು ನಾನು ಸಹಿಸಲಾರೆ. ಶ್ರೇಷ್ಠವಾದ ದೊಡ್ಡ ವೃಕ್ಷವನ್ನು ಹತ್ತದೆ§ ಅಲ್ಲಿಯ ಗೂಡುಗಳಲ್ಲಿರುವ ಹಕ್ಕಿಗಳನ್ನು ಕೊಲ್ಲುವುದಕ್ಕಾಗುವುದಿಲ್ಲವಷ್ಟೆ? ಆದ್ದರಿಂದ ನಮ್ಮೆದುರಿಗೆ ಈ ಶೋಕಾಕುಲ ವಾದ ನುಡಿಯನ್ನು ನೀನು ಆಡುವ ಅವಶ್ಯಕತೆ ಇಲ್ಲ." ಹೀಗೆ ಹೇಳಿ ಶ್ರೀಕೃಷ್ಣನು ದ್ವಾರಕೆಗೆ ಬಂದು ಏಕಾಂತದಲ್ಲಿ ಬಲರಾಮನನ್ನು ಕಂಡು ಹೀಗೆಂದನು (74-76): "ಅಣ್ಣ, ಬೇಟೆಗಾಗಿ ಹೋಗಿದ್ದ ಪ್ರಸೇನನನ್ನು ಅಡವಿಯಲ್ಲಿ ಸಿಂಹವು ಕೊಂದು

---

* 'ಪರಿತುಷ್ಟಾಂತಃಕರಣೋಽಪಿ ಕೃಷ್ಣಃ'. ಅಂತರಂಗದಲ್ಲಿ ಸಂತೋಷವಾಗಲು ನಿಮಿತ್ತವೇನು? 'ತನಗೆ ಅಪಕೀರ್ತಿಯನ್ನು ತಂದಿದ್ದ ಸತ್ರಾಜಿತನು ಹತನಾದನೆಂದೂ ಅವನಿಗೆ ಪುತ್ರಸಂತಾನವಿಲ್ಲದ್ದರಿಂದ ಸ್ಯಮಂತಕಮಣಿಯು ಸತ್ಯಭಾಮೆಯ ಮೂಲಕ ತನಗೆ ಸೇರುತ್ತದೆಯೆಂದೂ ಸಂತೋಷ'—ಎಂಬುದಾಗಿ ವ್ಯಾಖ್ಯಾನಕಾರರು ಹೇಳಿದ್ದಾರೆ. ಇದ ರಿಂದ ಶ್ರೀಕೃಷ್ಣನ ದೊಡ್ಡತನಕ್ಕೆ ಕಳಂಕ ಬರುತ್ತದೆ. 'ಸತ್ಯಭಾಮೆಯ ನಿಮಿತ್ತವಾಗಿ ತನ್ನನ್ನು ದ್ವೇಷಿಸುತ್ತಿದ್ದವರೂ ದುಷ್ಟರೂ ಆದ ಶತಧನ್ವಾದಿಗಳನ್ನು ದಂಡಿಸುವುದಕ್ಕೆ ಒಂದು ಕಾರಣ ದೊರೆಯಿತೆಂದು ಸಂತೋಷ' ಎಂದು ಹೇಳುವುದು ಯುಕ್ತವಾಗಿ ತೋರುತ್ತದೆ. 'ಸ್ವತಃ ಪ್ರಸನ್ನಹೃದಯನಾದರೂ ಸತ್ಯಭಾಮೆಯ ಮಾತನ್ನು ಕೇಳಿ ಕೋಪಗೊಂಡನು' ಎಂದೂ ಅರ್ಥ ಹೇಳಬಹುದು.

§ ವೃಕ್ಷವನ್ನು ಲೆಕ್ಕಿಸದೆ ಕಾಲಿನಿಂದ ತುಳಿದು ಹತ್ತುವಂತೆ, ನಮ್ಮನ್ನು ಲೆಕ್ಕಿಸದೆಯೇ ನಮ್ಮ ಆಶ್ರಯದಲ್ಲಿದ್ದ ಸತ್ರಾಜಿತನನ್ನು ಕೊಲ್ಲಲಾಗಿದೆ—ಎಂದು ಅಭಿಪ್ರಾಯ.

**ಮೃಗಪತಿರ್ಜಘಾನ ॥ 77 ॥ ಸತ್ರಾಜಿದಪ್ಯಧುನಾ ಶತಧನ್ವನಾ ನಿಧನಂ ಪ್ರಾಪಿತಃ ॥ 78 ॥ ತದುಭಯವಿನಾಶಾತ್ತನ್ಮಣಿರತ್ನಮಾವಾಭ್ಯಾಂ ಸಾಮಾನ್ಯಂ ಭವಿಷ್ಯತಿ ॥ 79 ॥ ತದುತ್ತಿಷ್ಠಾರುಹ್ಯತಾಂ ರಥಃ ಶತಧನ್ವನಿಧಾನಾಯೋ-ದ್ಯಮಂ ಕುರ್ವಿತ್ಯಭಿಹಿತಸ್ತಥೇತಿ ಸಮನ್ವೀಪ್ಸಿತವಾನ್ ॥ 80 ॥ ಕೃತೋ-ದ್ಯಮೌ ಚ ತಾವುಭಾವುಪಲಭ್ಯ ಶತಧನ್ವಾ ಕೃತವರ್ಮಾಣಮುಪೇತ್ಯ ಪಾರ್ಷ್ಣಿಪೂರಣಕರ್ಮನಿಮಿತ್ತಮಚೋದಯತ್ ॥ 81 ॥ ಆಹ ಚೈನಂ ಕೃತವರ್ಮಾ ॥82॥ ನಾಹಂ ಬಲದೇವವಾಸುದೇವಾಭ್ಯಾಂ ಸಹ ವಿರೋ-ಧಾಯಾಲಮಿತ್ಯುಕ್ತಶ್ಚಾಕ್ರೂರಮಚೋದಯತ್ ॥ 83 ॥ ಅಸಾವಪ್ಯಾಹ ॥ 84 ॥ ನ ಹಿ ಕಶ್ಚಿದ್ಭಗವತಾ ಪಾದಪ್ರಹಾರಪರಿಕಂಪಿತಜಗತ್ತ್ರಯೇಣ ಸುರರಿಪುವನಿತಾವೈಧವ್ಯಕಾರಿಣಾ ಪ್ರಬಲರಿಪುಚಕ್ರಾಪ್ರತಿಹತಚಕ್ರೇಣ**

---

ಹಾಕಿತು. ಈಗ ಸತ್ರಾಜಿತನನ್ನು ಸಹ ಶತಧನ್ವನು ವಧಿಸಿದ್ದಾನೆ. ಅವರಿಬ್ಬರೂ ಸತ್ತುಹೋದ್ದರಿಂದ ಆ ಮಣಿರತ್ನವು ಈಗ ನಮ್ಮಿಬ್ಬರಿಗೂ ಸಮಾನವಾಗಿ ಸೇರ ತಕ್ಕದ್ದಾಗಿದೆ.* ಆದ್ದರಿಂದ ಏಳು; ರಥವನ್ನೇರು. ಶತಧನ್ವನ ಸಂಹಾರಕ್ಕಾಗಿ ಪ್ರಯತ್ನಿಸು" ಎಂದನು. ಅದನ್ನು ಕೇಳಿ ಬಲರಾಮನು ಆಗಲೆಂದು ಅಂಗೀಕರಿಸಿದನು. ಹೀಗೆ ಬಲರಾಮ ಶ್ರೀಕೃಷ್ಣರಿಬ್ಬರೂ ಯುದ್ಧಸನ್ನದ್ಧರಾದರೆಂಬುದು ಶತಧನ್ವನಿಗೆ ಗೊತ್ತಾಯಿತು. ಅವನು ಕೃತವರ್ಮನ ಬಳಿಗೆ ಹೋಗಿ ತನಗೆ ಬೆಂಬಲವಾಗಿ ನಿಲ್ಲಬೇಕೆಂದು ಕೇಳಿಕೊಂಡನು. ಅದಕ್ಕೆ ಕೃತವರ್ಮನು "ಬಲರಾಮ ಕೃಷ್ಣರಿಬ್ಬರೊಡನೆ ಯುದ್ಧಮಾಡುವುದಕ್ಕೆ ನಾನು ಸಮರ್ಥನಲ್ಲ" ಎಂದುಬಿಟ್ಟನು. ಆಗ ಶತಧನ್ವನು ಅಕ್ರೂರನನ್ನು ಕಂಡು ತನಗೆ ಸಹಾಯ ಮಾಡುವಂತೆ ಕೇಳಿದನು (77-83). ಅಕ್ರೂರನೂ ಸಹ "ಕೃಷ್ಣನಿಗೆ ಎದುರಾಗಿ ಯುದ್ಧ ಮಾಡಲು ನನಗೆ ಸಾಧ್ಯವೆ? ಪಾದ ಪ್ರಹಾರದಿಂದ ಮೂರು ಲೋಕವನ್ನೂ ನಡುಗಿಸತಕ್ಕವನು ಆತ. ರಾಕ್ಷಸರ ಹೆಂಡತಿಯರಿಗೆ ವೈಧವ್ಯ ದೀಕ್ಷೆಯನ್ನು ಕೊಟ್ಟವನು. ಪ್ರಬಲರಾದ ರಿಪುಗಳನ್ನೇ ಚಕ್ರದಿಂದ ಕತ್ತರಿಸಿಹಾಕುವ ಚಕ್ರಧಾರಿಯಲ್ಲವೆ ಕೃಷ್ಣ? ಬಲರಾಮನಾದರೋ ಮದವೇರಿದ ಕಣ್ಣುಗಳಿಂದ ದಿಟ್ಟಿಸಿದರೆ ಸಾಕು, ಸಕಲರೂ ವಿಧ್ವಸ್ತರಾಗಿಹೋಗುತ್ತಾರೆ! ಶತ್ರುಗಳೆಂಬ ದೊಡ್ಡ ಸಲಗ

* ಬಲರಾಮನ ಪ್ರಲೋಭನೆಗಾಗಿ ಹೇಳಿದ ಮಾತಿದು.

**ಚಕ್ರಿಣಾ ಮದಮುದಿತನಯನಾವಲೋಕಿತಾಖಿಲನಿಶಾತನೇನಾತಿಗುರು-ವೈರಿವಾರಣಾಪಕರ್ಷಣಾವಿಕೃತಮಹಿಮೋರುಸೀರೇಣ ಸೀರಿಣಾ ಚ ಸಹ ಸಕಲಜಗದ್ವಂದ್ಯಾನಾಮಮರವರಾಣಾಮಪಿ ಯೋದ್ಧುಂ ಸಮರ್ಥಃ ಕಿಮುತಾಹಮ್ ॥ 85 ॥ ತದನ್ಯಶರಣಮಭಿಲಷ್ಯತಾಮಿತ್ಯುಕ್ತಶ್ಶತಧನು-ರಾಹ ॥ 86 ॥ ಯದ್ಯಸ್ಮತ್ಪರಿತ್ರಾಣಾಸಮರ್ಥಂ ಭವಾನಾತ್ಮಾನಮಧಿಗಚ್ಛತಿ ತದಯಮಸ್ಮತ್ತಸ್ತಾವನ್ಮಣಿಃ ಸಂಗೃಹ್ಯ ರಕ್ಷ್ಯತಾಮಿತಿ ॥ 87 ॥ ಏವಮುಕ್ತಃ ಸೋಽಪ್ಯಾಹ ॥ 88 ॥ ಯದ್ಯಂತ್ಯಾಯಾಮಪ್ಯವಸ್ಥಾಯಾಂ ನ ಕಸ್ಮೈ-ಚಿದ್ಭವಾನ್ ಕಥಯಿಷ್ಯತಿ ತದಹಮೇತಂ ಗ್ರಹೀಷ್ಯಾಮೀತಿ ॥ 89 ॥ ತಥೇತ್ಯುಕ್ತೇ ಚಾಕ್ರೂರಸ್ತನ್ಮಣಿರತ್ನಂ ಜಗ್ರಾಹ ॥ 90 ॥ ಶತಧನುರಪ್ಯತುಲ-ವೇಗಾಂ ಶತಯೋಜನವಾಹಿನೀಂ ವಡವಾಮಾರುಹ್ಯಾಪಕ್ರಾಂತಃ ॥ 91 ॥ ಶೈಬ್ಯಸುಗ್ರೀವಮೇಘಪುಷ್ಪಬಲಾಹಕಾಶ್ವಚತುಷ್ಟಯಯುಕ್ತರಥಸ್ಥಿತೌ ಬಲ-**

---

ಗಳನ್ನು ಸೆಳೆದೆಳೆಯಲು ಸಮರ್ಥವಾದ ಭೀಕರ ಹಲಾಯುಧವನ್ನು ಹಿಡಿದವನು ಆತ! ಅವರೊಡನೆ ಯುದ್ಧಮಾಡಲು ಜಗದ್ವಂದ್ಯರಾದ ದೇವತೆಗಳಿಗೂ ಸಾಧ್ಯವಿಲ್ಲ. ನನ್ನಿಂದ ಆದೀತೇ? ಆದ್ದರಿಂದ ಬೇರೆ ಯಾರಿಗಾದರೂ ಶರಣಾಗು" ಎಂದು ಹೇಳಿದನು (84-85). ಆಗ ಶತಧನ್ವನು "ಒಳ್ಳೆಯದು. ನನ್ನನ್ನು ರಕ್ಷಿಸಲು ನೀನು ಅಸಮರ್ಥನೆಂದು ತಿಳಿಯುವುದಾದರೆ, ಈ ಮಣಿಯನ್ನಾದರೂ ತೆಗೆದು ಕೊಂಡು ರಕ್ಷಿಸು" ಎಂದನು. ಅದಕ್ಕೆ ಅಕ್ರೂರನು "ನೋಡು, ಕಡೆಗಾಲ ಬಂದರೂ ಈ ವಿಷಯವನ್ನು ಯಾರಿಗೂ ತಿಳಿಸಕೂಡದು. ಹಾಗಾದರೆ ಮಾತ್ರ ಇದನ್ನು ತೆಗೆದುಕೊಳ್ಳುವೆನು" ಎಂದನು. ಶತಧನ್ವನು ಅದಕ್ಕೆ ಒಪ್ಪಲಾಗಿ ಅಕ್ರೂರನು ಸ್ಯಮಂತಕಮಣಿಯನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು (86-90). ಅನಂತರ ಶತಧನ್ವನು ಅಸಾಧಾರಣ ವೇಗಶಾಲಿಯೂ ಏಕಕಾಲಕ್ಕೆ ನೂರು ಯೋಜನಗಳ ದೂರ ಓಡಬಲ್ಲುದೂ ಆದ ಒಂದು ಹೆಣ್ಣು ಕುದುರೆಯನ್ನೇರಿ (ದ್ವಾರಕೆಯಿಂದ) ಓಡಿಹೋದನು. ಅದನ್ನರಿತು ಬಲದೇವ ವಾಸುದೇವರು ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕ—ಎಂಬ ನಾಲ್ಕು ಕುದುರೆಗಳನ್ನು ಹೂಡಿದ ರಥವನ್ನೇರಿ ಅವನನ್ನು ಅಟ್ಟಿಸಿಕೊಂಡು ಹೋದರು (91-92). ಶತಧನ್ವನ ಕುದುರೆಯು ನೂರು ಯೋಜನೆಗಳ ದೂರವನ್ನು

**ದೇವವಾಸುದೇವೌ ತಮನುಪ್ರಯಾತೌ ॥ 92 ॥ ಸಾ ಚ ವಡವಾ ಶತಯೋಜನಪ್ರಮಾಣಮಾರ್ಗಮತೀತಾ ಪುನರಪಿ ವಾಹ್ಯಮಾನಾ ಮಿಥಿಲಾವನೋದ್ದೇಶೇ ಪ್ರಾಣಾನುತ್ಸಸರ್ಜ ॥ 93 ॥ ಶತಧನುರಪಿ ತಾಂ ಪರಿತ್ಯಜ್ಯ ಪದಾತಿರೇವಾದ್ರವತ್ ॥ 94 ॥ ಕೃಷ್ಣೋಽಪಿ ಬಲಭದ್ರಮಾಹ ॥ 95 ॥ ತಾವದತ್ರ ಸ್ಯಂದನೇ ಭವತಾ ಸ್ಥೇಯಮಹಮೇನಮಧಮಾ-ಚಾರಂ ಪದಾತಿರೇವ ಪದಾತಿಮನುಗಮ್ಯ ಯಾವದ್‌ಘಾತಯಾಮಿ ಅತ್ರ ಹಿ ಭೂಭಾಗೇ ದೃಷ್ಟದೋಷಾಸ್ಸಭಯಾ ಅತೋ ನೈತೇಽಶ್ವಾ ಭವ-ತೇಮಂ ಭೂಮಿಭಾಗಮುಲ್ಲಂಘನೀಯಾಃ ॥ 96 ॥ ತಥೇತ್ಯುಕ್ತ್ವಾ ಬಲ-ದೇವೋ ರಥ ಏವ ತಸ್ಥೌ ॥ 97 ॥ ಕೃಷ್ಣೋಽಪಿ ದ್ವಿಕ್ರೋಶಮಾತ್ರಂ ಭೂಮಿಭಾಗಮನುಸೃತ್ಯ ದೂರಸ್ಥಿತಸ್ಯೈವ ಚಕ್ರಂ ಕ್ಷಿಪ್ತ್ವಾ ಶತಧನುಷ-ಶ್ಶಿರಶ್ಚಿಚ್ಛೇದ ॥ 98 ॥ ತಚ್ಛರೀರಾಂಬರಾದಿಷು ಚ ಬಹುಪ್ರಕಾರಮನ್ವಿಚ್ಛನ್ನಪಿ ಸ್ಯಮಂತಕಮಣಿಂ ನಾವಾಪ ಯದಾ ತದೋಪಗಮ್ಯ ಬಲಭದ್ರಮಾಹ ॥ 99 ॥ ವೃಥೈವಾಸ್ಮಾಭಿಃ ಶತಧನುರ್ಘಾತಿತೋ ನ ಪ್ರಾಪ್ತಮಖಿಲ-**

---

ದಾಟಿತು. ಆದರೂ ತೆರಪಿಲ್ಲದಂತೆ ಇನ್ನೂ ಮುಂದೆ ಓಡಿಸಿದ್ದರಿಂದ ಮಿಥಿಲಾ ದೇಶದ ಒಂದು ಅರಣ್ಯದಲ್ಲಿ ಪ್ರಾಣವನ್ನು ಬಿಟ್ಟಿತು. ಶತಧನ್ವನು ಅದನ್ನು ತ್ಯಜಿಸಿ ಬರಿಗಾಲಿನಿಂದಲೇ ಓಡತೊಡಗಿದನು (93-94). ಆಗ ಶ್ರೀಕೃಷ್ಣನು ಬಲಭದ್ರ ನನ್ನು ಕುರಿತು "ಅಣ್ಣ, ನೀನು ಈ ರಥದಲ್ಲಿಯೇ ಕುಳಿತಿರು. ಪದಾತಿಯಾಗಿ ಓಡುತ್ತಿರುವ ಈ ಅಧಮನನ್ನು ಪದಾತಿಯಾಗಿಯೇ ಬೆನ್ನಟ್ಟಿ ಕೊಂದು ಹಾಕುವೆನು. ಇಲ್ಲಿ ನಮ್ಮ ಕುದುರೆಗಳು ಮಾರ್ಗದೋಷವನ್ನು ಕಂಡು ಹೆದರಿವೆ. ಈ ನೆಲವನ್ನು ಬಿಟ್ಟು ಇವನ್ನು ಮುಂದೆ ಓಡಿಸುವುದು ಬೇಡ" ಎಂದನು. 'ಆಗಲಿ' ಎಂದು ಒಪ್ಪಿ ಬಲರಾಮನು ರಥದಲ್ಲಿಯೇ ಇದ್ದನು (95-97). ಶ್ರೀಕೃಷ್ಣನು ಎರಡು ಕ್ರೋಶಗಳಷ್ಟು ದೂರ ನೆಲದಲ್ಲಿ ಓಡುತ್ತ ಹೋಗಿ, ದೂರದಲ್ಲಿ ಕಂಡ ಶತಧನ್ವನ ಮೇಲೆ ಚಕ್ರವನ್ನು ಪ್ರಯೋಗಿಸಿ ಅವನ ತಲೆಯನ್ನು ತರಿದನು (98). ಅನಂತರ ಅವನ ದೇಹವಸ್ತ್ರಾದಿಗಳನ್ನು ಎಷ್ಟು ಶೋಧಿಸಿದರೂ ಶ್ರೀಕೃಷ್ಣನಿಗೆ ಸ್ಯಮಂತಕಮಣಿಯು ದೊರೆಯಲಿಲ್ಲ. ಆತನು ಬಲಭದ್ರನ ಬಳಿಗೆ ಹಿಂದಿರುಗಿ ಬಂದು "ಅಣ್ಣ, ನಾವು ವ್ಯರ್ಥವಾಗಿ ಶತಧನ್ವನನ್ನು ಕೊಂದೆವು.

**ಜಗತ್ಸಾರಭೂತಂ ತನ್ಮಹಾರತ್ನಂ ಸ್ಯಮಂತಕಾಖ್ಯಮಿತ್ಯಾಕರ್ಣ್ಯೋದ್ಭೂತ-ಕೋಪೋ ಬಲದೇವೋ ವಾಸುದೇವಮಾಹ ॥ 100 ॥ ಧಿಕ್ತ್ವಾಂ-ಯಸ್ತ್ವಮೇವಮರ್ಥಲಿಪ್ಸುರೇತಚ್ಚತೇಭ್ರಾತೃತ್ವಾನ್ಮಯಾ ಕ್ಷಾಂತಂ ತದಯಂ ಪಂಥಾಸ್ಸ್ವೇಚ್ಛಯಾ ಗಮ್ಯತಾಂ ನ ಮೇ ದ್ವಾರಕಯಾ ನ ತ್ವಯಾ ನ ಚಾಶೇಷಬಂಧುಭಿಃ ಕಾರ್ಯಮಲಮಲಮೇಭಿರ್ಮಮಾ-ಗ್ರತೋಽಲೀಕಶಪಥೈರಿತ್ಯಾಕ್ಷಿಪ್ಯ ತತ್ಕಥಾಂ ಕಥಂಚಿತ್ಪ್ರಸಾದ್ಯಮಾನೋಽಪಿ ನ ತಸ್ಥೌ ॥ 101 ॥ ಸ ವಿದೇಹಪುರೀಂ ಪ್ರವಿವೇಶ ॥ 102 ॥ ಜನಕ-ರಾಜಶ್ಚಾರ್ಘ್ಯಪೂರ್ವಕಮೇನಂ ಗೃಹಪ್ರವೇಶಯಾಮಾಸ ॥ 103 ॥ ಸ ತತ್ರೈವ ಚ ತಸ್ಥೌ ॥ 104 ॥ ವಾಸುದೇವೋಽಪಿ ದ್ವಾರಕಾಮಾಜಗಾಮ ॥ 105 ॥ ಯಾವಚ್ಚ ಜನಕರಾಜಗೃಹೇ ಬಲಭದ್ರೋಽವತಸ್ಥೇ ತಾವ-ದ್ಧಾರ್ತರಾಷ್ಟ್ರೋ ದುರ್ಯೋಧನಸ್ತತ್ಸಕಾಶಾದ್ಗದಾಶಿಕ್ಷಾಮಶಿಕ್ಷಯತ್ ॥ 106 ॥ ವರ್ಷತ್ರಯಾಂತೇ ಚ ಬಭ್ರೂಗ್ರಸೇನಪ್ರಭೃತಿಭಿರ್ಯಾದವೈರ್ನ**

---

ಸಕಲ ಜಗತ್‌ಸಾರಭೂತವಾದ ಸ್ಯಮಂತಕಮಹಾರತ್ನವು ಮಾತ್ರ ದೊರೆಯಲಿಲ್ಲ" ಎಂದನು. ಅದನ್ನು ಕೇಳಿ ಬಲಭದ್ರನ ಕೋಪವು ನೆತ್ತಿಗೇರಿತು (99-100). ಅವನು ಶ್ರೀಕೃಷ್ಣನನ್ನು ನೋಡಿ "ಧಿಕ್ಕಾರ ನಿನಗೆ! ಎಷ್ಟೊಂದು ಧನಲೋಭಿಯಾಗಿದ್ದೀಯೆ! ನೀನು ಸಹೋದರನೆಂಬುದಕ್ಕಾಗಿ ಕ್ಷಮಿಸಿದ್ದೇನೆ. ಇದೋ, ಈ ದಾರಿಯನ್ನು ಹಿಡಿದು ಸ್ವೇಚ್ಛೆಯಾಗಿ ಹೊರಟುಹೋಗು! ದ್ವಾರಕೆಯಿಂದ ನನಗೆ ಆಗಬೇಕಾದ್ದೇನೂ ಇಲ್ಲ. ನಿನ್ನಿಂದಾಗಲಿ ಎಲ್ಲ ಬಂಧುಬಳಗಗಳಿಂದಾಗಲಿ ಆಗಬೇಕಾದ್ದೂ ಇಲ್ಲ. ನನ್ನೆದುರಿಗೆ ಮತ್ತೆ ಮತ್ತೆ ಸುಳ್ಳು ಆಣೆ ಹಾಕುವುದನ್ನು ನಿಲ್ಲಿಸು!" ಎಂದು ಅಬ್ಬರಿಸಿ ನಡುವೆ ಮಾತಾಡುವುದನ್ನು ತಡೆದನು. ಶ್ರೀಕೃಷ್ಣನ ಪ್ರಾರ್ಥನೆಯನ್ನು ಲೆಕ್ಕಿಸದೆ ವಿದೇಹನಗರಕ್ಕೆ ಹೊರಟುಹೋದನು (101-102). ಅಲ್ಲಿ ಜನಕರಾಜನು ಬಲಭದ್ರನಿಗೆ ಅರ್ಘ್ಯವನ್ನಿತ್ತು ಸ್ವಾಗತಿಸಿ ಅರಮನೆಗೆ ಕರೆತಂದನು. ಬಲಭದ್ರನು ಆತನ ಅರಮನೆಯಲ್ಲಿ ಉಳಿದುಕೊಂಡನು. ಇತ್ತ ಶ್ರೀಕೃಷ್ಣನು ದ್ವಾರಕೆಗೆ ಬಂದನು (103-105). ಬಲರಾಮನು ಜನಕರಾಜನ ಗೃಹದಲ್ಲಿದ್ದಾಗ ಆತನ ಬಳಿಗೆ ಧೃತರಾಷ್ಟ್ರಪುತ್ರನಾದ ದುರ್ಯೋಧನನು ಬಂದು ಗದಾಯುದ್ಧದಲ್ಲಿ ಶಿಕ್ಷಣವನ್ನು ಪಡೆದನು. ಮೂರು ವರ್ಷ ಕಳೆಯಿತು. ಶ್ರೀಕೃಷ್ಣನು ಸ್ಯಮಂತಕ

**ತದ್ರತ್ನಂ ಕೃಷ್ಣೇನಾಪಹೃತಮಿತಿ ಕೃತಾವಗತಿಭಿರ್ವಿದೇಹನಗರೀಂ ಗತ್ವಾ ಬಲದೇವಸ್ಸಂಪ್ರತ್ಯಾಯ್ಯ ದ್ವಾರಕಾಮಾನೀತಃ ॥ 107 ॥ ಅಕ್ರೂರೋಽತ್ಯುತ್ತಮಮಣಿಸಮುದ್ಭೂತಸುವರ್ಣೇನ ಭಗವದ್ಧ್ಯಾನಪರೋಽನವರತಂ ಯಜ್ಞಾನಿಯಾಜ ॥ 108 ॥ ಸವನಗತೌ ಹಿ ಕ್ಷತ್ರಿಯ ವೈಶ್ಯೌ ನಿಘ್ನನ್ ಬ್ರಹ್ಮಹಾ ಭವತೀತ್ಯೇವಂ ಪ್ರಕಾರಂ ದೀಕ್ಷಾಕವಚಂ ಪ್ರವಿಷ್ಟ ಏವ ತಸ್ಥೌ ॥ 109 ॥ ದ್ವಿಷಷ್ಟಿವರ್ಷಾಣ್ಯೇವಂ ತನ್ಮಣಿಪ್ರಭಾವಾತ್ತತ್ರೋಪಸರ್ಗದುರ್ಭಿಕ್ಷಮಾರಿಕಾಮರಣಾದಿಕಂ ನಾಭೂತ್ ॥ 110 ॥ ಅಥಾಕ್ರೂರಪಕ್ಷೀಯೈರ್ಭೋಜೈಶ್ಶತ್ರುಘ್ನೇ ಸಾತ್ವತಸ್ಯ ಪ್ರಪೌತ್ರೇ ವ್ಯಾಪಾದಿತೇ ಭೋಜೈಸ್ಸಹಾಕ್ರೂರೋ ದ್ವಾರಕಾಮಪಹಾಯಾಪಕ್ರಾಂತಃ ॥ 111 ॥ ತದಪಕ್ರಾಂತಿದಿನಾದಾರಭ್ಯ ತತ್ರೋಪಸರ್ಗದುರ್ಭಿಕ್ಷವ್ಯಾಲಾ-**

---

ವನ್ನು ಅಪಹರಿಸಿಲ್ಲವೆಂದು ಬಭ್ರು, ಉಗ್ರಸೇನ—ಮೊದಲಾದ ಯಾದವರಿಗೆ ನಿಶ್ಚಿತವಾಗಿ ತಿಳಿಯಿತು. ಅವರೆಲ್ಲರೂ ಸೇರಿ ವಿದೇಹನಗರಕ್ಕೆ ಹೋಗಿ ಈ ವಿಷಯವನ್ನು ಬಲರಾಮನಿಗೆ ಹೇಳಿ ದೃಢಪಡಿಸಿದರು. ಪೂರ್ಣ ವಿಶ್ವಾಸ ಉಂಟಾದಮೇಲೆ ಬಲರಾಮನು ದ್ವಾರಕೆಗೆ ಬಂದನು (106-107). ಇತ್ತ ಅಕ್ರೂರನು ಸದಾ ಭಗವದ್ಧ್ಯಾನಪರಾಯಣನಾಗಿ ಆ ಮಣಿರತ್ನದಿಂದ ಉಂಟಾದ ಸುವರ್ಣದಿಂದ ಅವಿರತವಾಗಿ ಯಜ್ಞಗಳನ್ನು ನಡೆಸುತ್ತಿದ್ದನು. "ಯಜ್ಞದೀಕ್ಷೆಯಲ್ಲಿರುವ ಕ್ಷತ್ರಿಯನನ್ನಾಗಲಿ ವೈಶ್ಯನನ್ನಾಗಲಿ ಕೊಂದರೆ ಬ್ರಹ್ಮಹತ್ಯಾದೋಷ ಬರುತ್ತದೆ" ಎಂಬುದನ್ನರಿತಿದ್ದ ಆತನು ಈ ಪ್ರಕಾರವಾಗಿ ಸದಾ ಯಜ್ಞದೀಕ್ಷೆಯೆಂಬ ಕವಚವನ್ನು ತೊಟ್ಟುಕೊಂಡೇ ಇರುತ್ತಿದ್ದನು* (108-109). ಆ ಮಣಿರತ್ನದ ಪ್ರಭಾವದಿಂದ ದ್ವಾರಕೆಯಲ್ಲಿ ಅರವತ್ತೆರಡು ವರ್ಷಗಳವರೆಗೆ ರೋಗ, ದುರ್ಭಿಕ್ಷ, ಮಾರಿಕಾ, ಅಕಾಲಮರಣ—ಮುಂತಾದ ಹಾವಳಿಗಳು ಸಂಭವಿಸಲಿಲ್ಲ. ಹೀಗಿರುವಾಗ ಅಕ್ರೂರ ಪಕ್ಷದವರಾದ ಭೋಜರು ಸಾತ್ವತನ ಪ್ರಪೌತ್ರನಾದ ಶತ್ರುಘ್ನನನ್ನು ವಧಿಸಿದರು. ಆಗ ಭೋಜರೊಡನೆ ಅಕ್ರೂರನೂ ದ್ವಾರಕೆಯನ್ನು ತ್ಯಜಿಸಿ ದೂರ ಹೋಗಬೇಕಾದದ್ದು ಘಟಿಸಿತು (110-111).

---

* 'ತನ್ನಲ್ಲಿ ಸ್ಯಮಂತಕಮಣಿ ಇದೆಯೆಂದು ಗೊತ್ತಾದರೂ ಬ್ರಹ್ಮಹತ್ಯಾದೋಷ ಭಯದಿಂದ ಶ್ರೀಕೃಷ್ಣನು ತನ್ನನ್ನು ಕೊಲ್ಲುವುದಿಲ್ಲ' ಎಂದು ಅಕ್ರೂರನ ಅಭಿಪ್ರಾಯ.

**ನಾವೃಷ್ಟಿಮಾರಿಕಾದ್ಯುಪದ್ರವಾ ಬಭೂವುಃ ॥ 112 ॥ ಅಥ ಯಾದವಬಲ-ಭದ್ರೋಗ್ರಸೇನಸಮವೇತೋ ಮಂತ್ರಮಮಂತ್ರಯದ್‌ಭಗವಾನುರ-ಗಾರಿಕೇತನಃ ॥ 113 ॥ ಕಿಮಿದಮೇಕದೈವ ಪ್ರಚುರೋಪದ್ರವಾಗಮನ-ಮೇತದಾಲೋಚ್ಯ ತಾಮಿತ್ಯುಕ್ತೇಽಂಧಕನಾಮಾ ಯದುವೃದ್ಧಃ ಪ್ರಾಹ ॥ 114 ॥ ಅಸ್ಯಾಕ್ರೂರಸ್ಯ ಪಿತಾ ಶ್ವಫಲ್ಕೋ ಯತ್ರಯತ್ರಾಭೂತ್ತತ್ರ ತತ್ರ ದುರ್ಭಿಕ್ಷಮಾರಿಕಾನಾವೃಷ್ಟ್ಯಾದಿಕಂ ನಾಭೂತ್ ॥ 115 ॥ ಕಾಶೀರಾಜಸ್ಯ ವಿಷಯೇ ತ್ವನಾವೃಷ್ಟ್ಯಾ ಚ ಶ್ವಫಲ್ಕೋ ನೀತಃ ತತಶ್ಚತತ್ಕ್ಷಣಾದ್ದೇವೋ ವವರ್ಷ ॥ 116 ॥ ಕಾಶೀರಾಜಪತ್ನ್ಯಾಶ್ಚ ಗರ್ಭೇ ಕನ್ಯಾರತ್ನಂ ಪೂರ್ವ-ಮಾಸೀತ್ ॥ 117 ॥ ಸಾ ಚ ಕನ್ಯಾ ಪೂರ್ಣೇಽಪಿ ಪ್ರಸೂತಿಕಾಲೇ ನೈವ ನಿಶ್ಚಕ್ರಾಮ ॥ 118 ॥ ಏವಂ ಚ ತಸ್ಯ ಗರ್ಭಸ್ಯ ದ್ವಾದಶವರ್ಷಾಣ್ಯ ನಿಷ್ಕ್ರಾಮತೋ ಯಯುಃ ॥ 119 ॥ ಕಾಶೀರಾಜಶ್ಚ ತಾಮಾತ್ಮಜಾಂ ಗರ್ಭಸ್ಥಾಮಾಹ ॥ 120 ॥ ಪುತ್ರಿ, ಕಸ್ಮಾನ್ನ ಜಾಯಸೇ ನಿಷ್ಕ್ರಮ್ಯತಾ-**

---

ಅವನು ಹೊರಟುಹೋದ ದಿನದಿಂದ ದ್ವಾರಕೆಯಲ್ಲಿ ರೋಗ, ದುರ್ಭಿಕ್ಷ, ಸರ್ಪ, ಅನಾವೃಷ್ಟಿ, ಮಾರಿಕಾಬೇನೆ—ಮುಂತಾದ ಉಪದ್ರವಗಳು ಕಾಣಿಸಿಕೊಳ್ಳಲಾರಂಭಿಸಿದವು. ಆಗ ಗರುಡಧ್ವಜನಾದ ಶ್ರೀಕೃಷ್ಣನು ಯಾದವರೊಡನೆಯೂ ಬಲಭದ್ರ, ಉಗ್ರಸೇನರೊಡನೆಯೂ ಸೇರಿ ಮಂತ್ರಾಲೋಚನೆಯನ್ನು ನಡೆಸಿದನು (112-113). "ಇದ್ದಕ್ಕಿದ್ದಂತೆ ಒಟ್ಟಿಗೇ ಹಲವಾರು ಉಪದ್ರವಗಳು ಬಂದುಬಿಟ್ಟವಲ್ಲ, ಏನಿದು? ಇದನ್ನು ಆಲೋಚಿಸಬೇಕಾಗಿದೆ" ಎಂದು ಆತನು ಪ್ರಸ್ತಾವಿಸಲಾಗಿ ಒಬ್ಬ ಅಂಧಕನೆಂಬ ಯದುವೃದ್ಧನು ಹೀಗೆಂದನು: "ಈ ಅಕ್ರೂರನಿದ್ದಾನಲ್ಲ, ಇವನ ತಂದೆ ಶ್ವಫಲ್ಕನು ಎಲ್ಲೆಲ್ಲಿ ಇರುತ್ತಿದ್ದನೋ ಅಲ್ಲಿ ದುರ್ಭಿಕ್ಷ, ಮಾರಿಕಾ, ಅನಾವೃಷ್ಟಿ—ಮೊದಲಾದದ್ದು ಸಂಭವಿಸುತ್ತಿರಲಿಲ್ಲ (114-115). ಒಂದು ಸಲ ಕಾಶೀರಾಜನ ರಾಜ್ಯದಲ್ಲಿ ಅನಾವೃಷ್ಟಿಯಾದಾಗ ಶ್ವಫಲ್ಕನನ್ನು ಅಲ್ಲಿಗೆ ಕರೆದುಕೊಂಡು ಹೋದರು. ಆ ಕ್ಷಣದಲ್ಲಿಯೇ ಅಲ್ಲಿ ಮಳೆ ಬಂದಿತು! ಹಿಂದೆ ಕಾಶೀರಾಜನ ಪತ್ನಿಯ ಗರ್ಭದಲ್ಲಿ ಒಂದು ಕನ್ಯಾರತ್ನ ಆವಿರ್ಭವಿಸಿತು (116-117). ಪ್ರಸವಕಾಲವು ಪೂರ್ಣವಾದರೂ ಆ ಮಗು ಗರ್ಭದಿಂದ ಹೊರಗೆ ಬರಲಿಲ್ಲ. ಹೀಗೆ ಗರ್ಭದಿಂದ ಹೊರಗೆ ಬರದೆ ಹನ್ನೆರಡು ವರ್ಷಗಳು ಕಳೆದವು. ಆಗ ಕಾಶೀರಾಜನು ಗರ್ಭದಲ್ಲಿದ್ದ ಮಗಳನ್ನು ಕುರಿತು

**ಮಾಸ್ಯಂ ತೇ ದ್ರಷ್ಟುಮಿಚ್ಛಾಮಿ ಏತಾಂ ಚ ಮಾತರಂ ಕಿಮಿತಿ ಚಿರಂ ಕ್ಲೇಶಯಸೀತ್ಯುಕ್ತಾ ಗರ್ಭಸ್ಥೈವ ವ್ಯಾಜಹಾರ ॥ 121 ॥ ತಾತ ಯದ್ಯೇಕೈಕಾಂ ಗಾಂ ದಿನೇ ದಿನೇ ಬ್ರಾಹ್ಮಣಾಯ ಪ್ರಯಚ್ಛಸಿ ತದಾಹಮನ್ಯೈಸ್ತ್ರಿಭಿ-ರ್ವರ್ಷೈರಸ್ಮಾದ್ಗರ್ಭಾತ್ತಾವದವಶ್ಯಂ ನಿಷ್ಕ್ರಮಿಷ್ಯಾಮೀತ್ಯೇತದ್ವಚನ-ಮಾಕರ್ಣ್ಯ ರಾಜಾ ದಿನೇ ದಿನೇ ಬ್ರಾಹ್ಮಣಾಯ ಗಾಂ ಪ್ರಾದಾತ್ ॥ 122 ॥ ಸಾಪಿ ತಾವತಾ ಕಾಲೇನ ಜಾತಾ ॥ 123 ॥ ತತಸ್ತಸ್ಯಾಃ ಪಿತಾ ಗಾಂದಿನೀತಿ ನಾಮ ಚಕಾರ ॥ 124 ॥ ತಾಂ ಚ ಗಾಂದಿನೀಂ ಕನ್ಯಾಂ ಶ್ವಫಲ್ಕಾಯೋಪ-ಕಾರಿಣೇ ಗೃಹಮಾಗತಾಯಾರ್ಘ್ಯಭೂತಾಂ ಪ್ರಾದಾತ್ ॥ 125 ॥ ತಸ್ಯಾ-ಮಯಮಕ್ರೂರಃ ಶ್ವಫಲ್ಕಾಜ್ಜಜ್ಞೇ ॥ 126 ॥ ತಸ್ಯೈವಂಗುಣಮಿಥುನಾ-ದುತ್ಪತ್ತಿಃ ॥ 127 ॥ ತತ್ಕಥಮಸ್ಮಿನ್ನಪಕ್ರಾಂತೇಽತ್ರ ದುರ್ಭಿಕ್ಷಮಾರಿಕಾ-**

---

"ಪುತ್ರಿ, ಏಕೆ ನೀನು ಹುಟ್ಟಿಬರುವುದಿಲ್ಲ? ಈಚೆಗೆ ಬಾ. ನಿನ್ನ ಮುಖವನ್ನು ನೋಡಬೇಕೆಂದು ಬಯಸುತ್ತಿದ್ದೇನೆ. ನಿನ್ನ ತಾಯಿಗೂ ಬಹಳಕಾಲ ಏಕೆ ಹೀಗೆ ಕ್ಲೇಶವನ್ನು ಕೊಡುತ್ತಿದ್ದೀಯೆ?" ಎಂದನಂತೆ (118-121). ಆಗ ಶಿಶು ಗರ್ಭ ದಲ್ಲಿದ್ದುಕೊಂಡೇ "ಅಪ್ಪ, ನೀನು ಪ್ರತಿದಿನವೂ ಒಂದೊಂದು ಗೋವನ್ನು ಬ್ರಾಹ್ಮಣನಿಗೆ ದಾನ ಮಾಡುತ್ತ ಹೋಗುವೆಯಾದರೆ, ಅವಶ್ಯವಾಗಿ ಇನ್ನು ಮೂರು ವರ್ಷಗಳಲ್ಲಿ ಗರ್ಭದಿಂದ ಹೊರಗೆ ಬರುವೆನು!" ಎಂದು ಹೇಳಿತಂತೆ. ಆ ಮಾತನ್ನು ಕೇಳಿ ರಾಜನು ಪ್ರತಿದಿನವೂ ಒಂದೊಂದು ಗೋವನ್ನು ಬ್ರಾಹ್ಮಣನಿಗೆ ದಾನಮಾಡುತ್ತ ಹೋದನು. (ಮೂರುವರ್ಷ) ಕಳೆದ ಮೇಲೆ ಆ ಕನ್ಯೆ ಜನಿಸಿದಳು (122-123). ಅವಳ ತಂದೆ ಆ ಮಗುವಿಗೆ 'ಗಾಂದಿನೀ' ಎಂದು ಹೆಸರಿಟ್ಟನು.* ಕಾಲಾಂತರದಲ್ಲಿ ತನ್ನ ಮನೆಗೆ ಬಂದು ಉಪಕಾರಮಾಡಿದ ಶ್ವಫಲ್ಕನಿಗೆ ಅವಳನ್ನು ಕಾಣಿಕೆಯಾಗಿ ಕೊಟ್ಟು ಮದುವೆ ಮಾಡಿದನು. ಅಕ್ರೂರನು ಅವಳ ಹೊಟ್ಟೆಯಲ್ಲಿ ಶ್ವಫಲ್ಕನಿಂದ ಹುಟ್ಟಿದ್ದಾನೆ (124-126). ಅಂತಹ ಗುಣಾಢ್ಯ ರಾದ ದಂಪತಿಗಳಿಂದ ಈತನ ಜನ್ಮವಾಗಿದೆ. ಹೀಗಿರುವಾಗ ಅಕ್ರೂರನು ಇಲ್ಲಿಂದ ಹೊರಟುಹೋದಮೇಲೆ, ದುರ್ಭಿಕ್ಷ ಮಾರಿಕಾ ಮೊದಲಾದ ಉಪದ್ರವಗಳು

---

* ಗಾಂ = ಗೋವನ್ನು ದಿನದಿನವೂ ದಾನಮಾಡಿದ್ದರಿಂದ 'ಗಾಂದಿನೀ' ಎಂದು ಹೆಸರು.

**ದ್ಯುಪದ್ರವಾ ನ ಭವಿಷ್ಯಂತಿ ॥ 128 ॥ ತದಯಮತ್ರಾನೀಯತಾಮಲ-ಮತಿಗುಣವತ್ಯಪರಾಧಾನ್ವೇಷಣೇನೇತಿ ಯದುವೃದ್ಧಸ್ಯಾನ್ಧಕಸ್ಯೈತದ್ವಚನ-ಮಾಕರ್ಣ್ಯ ಕೇಶವೋಗ್ರಸೇನಬಲಭದ್ರಪುರೋಗಮೈರ್ಯದುಭಿಃ ಕೃತಾಪರಾಧತಿತಿಕ್ಷುಭಿರಭಯಂ ದತ್ತ್ವಾ ಶ್ವಫಲ್ಕಪುತ್ರಃ ಸ್ವಪುರಮಾನೀತಃ ॥ 129 ॥ ತತ್ರ ಚಾಗತಮಾತ್ರ ಏವ ತಸ್ಯ ಸ್ಯಮಂತಕಮಣೇಃ ಪ್ರಭಾವಾ-ದನಾವೃಷ್ಟಿಮಾರಿಕಾದುರ್ಭಿಕ್ಷವ್ಯಾಲಾದ್ಯುಪದ್ರವೋಪಶಮಾ ಬಭೂವುಃ ॥ 130 ॥ ಕೃಷ್ಣಶ್ಚಿಂತಯಾಮಾಸ ॥ 131 ॥ ಸ್ವಲ್ಪ ಮೇತತ್ಕಾರಣಂ ಯದಯಂ ಗಾಂದಿನ್ಯಾಂ ಶ್ವಫಲ್ಕೇನಾಕ್ರೂರೋ ಜನಿತಃ ॥ 132 ॥ ಸುಮ-ಹಾಂಶ್ಚಾಯಮನಾವೃಷ್ಟಿದುರ್ಭಿಕ್ಷಮಾರಿಕಾದ್ಯುಪದ್ರವಪ್ರತಿಷೇಧಕಾರೀ ಪ್ರಭಾವಃ ॥ 133 ॥ ತನ್ನೂನಮಸ್ಯ ಸಕಾಶೇ ಸ ಮಹಾಮಣಿಃ ಸ್ಯಮಂತ-ಕಾಖ್ಯಸ್ತಿಷ್ಠತಿ ॥ 134 ॥ ತಸ್ಯ ಹ್ಯೇವಂವಿಧಾಃ ಪ್ರಭಾವಾಃ ಶ್ರೂಯಂತೇ ॥ 135 ॥ ಅಯಮಪಿ ಚ ಯಜ್ಞಾದನಂತರಮನ್ಯತ್ಕ್ರತ್ವಂತರಂ ತಸ್ಯಾ-**

---

ಬರದೆ ಇರುತ್ತವೆಯೇ? (127-128). ಆದ್ದರಿಂದ ಅಕ್ರೂರನನ್ನು ಇಲ್ಲಿಗೆ ಕರೆದು ಕೊಂಡು ಬರಬೇಕು. ಅತ್ಯಂತ ಗುಣಶಾಲಿಯಾದ ಆತನಲ್ಲಿ ತಪ್ಪನ್ನು ಹುಡುಕು ವುದು ಸರಿಯಲ್ಲ" ಎಂದನು. ಹೀಗೆ ಯದುವೃದ್ಧನಾದ ಅಂಧಕನ ಮಾತನ್ನು ಕೇಳಿ ಕೇಶವ, ಉಗ್ರಸೇನ, ಬಲಭದ್ರ—ಮೊದಲಾದ ಯಾದವ ನಾಯಕರು ಅಕ್ರೂರನ ಅಪರಾಧವನ್ನು ಕ್ಷಮಿಸಲು ಸಿದ್ಧರಾಗಿ ಅಭಯವನ್ನಿತ್ತು ಆತನನ್ನು ತಮ್ಮ ದ್ವಾರಕಾನಗರಕ್ಕೆ ಕರೆತಂದರು (129). ಅವನು ಬಂದೊಡನೆಯೇ ಅವನ ಬಳಿಯಲ್ಲಿದ್ದ ಸ್ಯಮಂತಕಮಣಿಯ ಪ್ರಭಾವದಿಂದ ಅನಾವೃಷ್ಟಿ, ಮಾರಿಕಾ, ದುರ್ಭಿಕ್ಷ, ಸರ್ಪ—ಮೊದಲಾದ ಉಪದ್ರವಗಳು ಶಾಂತವಾದವು! (130). ಶ್ರೀಕೃಷ್ಣನು ತನ್ನಲ್ಲಿಯೇ ವಿಚಾರ ಮಾಡಿದನು: "ಈ ಅಕ್ರೂರನು ಗಾಂದಿನಿಯಲ್ಲಿ ಶ್ವಫಲ್ಕನಿಂದ ಹುಟ್ಟಿದ್ದಾನೆಂಬುದು (ಈ ರೀತಿಯಾದ ಫಲವನ್ನು ಕೊಡುವುದಕ್ಕೆ) ಅತ್ಯಲ್ಪವಾದ ಕಾರಣ. ಅನಾವೃಷ್ಟಿ, ದುರ್ಭಿಕ್ಷ, ಮಾರಿಕಾ—ಮುಂತಾದ ವಿಪತ್ತುಗಳನ್ನು ತಡೆಯುವ ಪ್ರಭಾವವಾದರೋ ಮಹತ್ತರವಾದುದು. ಈತನ ಬಳಿಯಲ್ಲಿ ಸ್ಯಮಂತಕಮಹಾರತ್ನವು ಇದ್ದೇ ಇರಬೇಕು! (131-134). ಆ ರತ್ನಕ್ಕೆ ಈ ಬಗೆಯ ಪ್ರಭಾವಗಳಿವೆಯೆಂಬುದು ಪ್ರಸಿದ್ಧವಾದದ್ದು. ಈ ಅಕ್ರೂರ

**ನಂತರಮನ್ಯದ್ಯಜ್ಞಾಂತರಂ ಚಾಜಸ್ರಮವಿಚ್ಛಿನ್ನಂ ಯಜತೀತಿ ॥ 136 ॥ ಆಲ್ಪೋಪಾದಾನಂ ಚಾಸ್ಯಾಸಂಶಯಮತ್ರಾಸೌ ಮಣಿವರಸ್ತಿಷ್ಠತೀತಿ ಕೃತಾಧ್ಯವಸಾಯೋಽನ್ಯತ್ಪ್ರಯೋಜನಮುದ್ದಿಶ್ಯ ಸಕಲಯಾದವಸಮಾಜಮಾತ್ಮಗೃಹ ಏವಾಚೀಕರತ್ ॥ 137 ॥ ತತ್ರ ಚೋಪವಿಷ್ಟೇಷ್ವಖಿಲೇಷು ಯದುಷು ಪೂರ್ವಂ ಪ್ರಯೋಜನಮುಪನ್ಯಸ್ಯ ಪರ್ಯವಸಿತೇ ಚ ತಸ್ಮಿನ್ ಪ್ರಸಂಗಾಂತರಪರಿಹಾಸಕಥಾಮಕ್ರೂರೇಣ ಕೃತ್ವಾ ಜನಾರ್ದನಸ್ತಮಕ್ರೂರಮಾಹ ॥ 138 ॥ ದಾನಪತೇ ಜಾನೀಮ ಏವ ವಯಂ ಯಥಾ ಶತಧನ್ವನಾ ತದಿದಮಖಿಲಜಗತ್ಸಾರಭೂತಂ ಸ್ಯಮಂತಕಂ ರತ್ನಂ ಭವತಃ ಸಮರ್ಪಿತಂ ತದಶೇಷರಾಷ್ಟ್ರೋಪಕಾರಕಂ ಭವತ್ಸಕಾಶೇ ತಿಷ್ಠತಿ ತಿಷ್ಠತು ಸರ್ವ ಏವ ವಯಂ ತತ್ಪ್ರಭಾವಫಲಭುಜಃ ಕಿಂ ತ್ವೇಷ ಬಲಭದ್ರೋಽಸ್ಮಾನಾಶಂಕಿತವಾಂಸ್ತದಸ್ಮತ್ಪ್ರೀತಯೇ ದರ್ಶಯಸ್ವೇತ್ಯಭಿಧಾಯ ಚೋಷಂ**

---

ನಾದರೋ ಒಂದು ಯಜ್ಞವಾದಮೇಲೆ ಇನ್ನೊಂದು, ಅದಾದಮೇಲೆ ಮತ್ತೊಂದು ಯಜ್ಞ—ಹೀಗೆ ಸರ್ವದಾ ಯಜ್ಞ ಮಾಡುತ್ತಲೇ ಇರುತ್ತಾನೆ (135-136). ಆರ್ಥಿಕವಾಗಿ ಇವನ ಸಂಪಾದನೆ ಬಹಳ ಕಡಿಮೆ ಇದೆ! ಆದ್ದರಿಂದ ಆ ಮಣಿರತ್ನವು ಇವನಲ್ಲಿಯೇ ಇದೆ, ನಿಸ್ಸಂಶಯ!" ಶ್ರೀಕೃಷ್ಣನು ಹೀಗೆ ನಿರ್ಧರಿಸಿ ಯಾವುದೋ ಒಂದು ಉದ್ದೇಶವನ್ನು ಹೇಳಿ ಸಕಲ ಯಾದವರ ಸಭೆಯನ್ನು ತನ್ನ ಗೃಹದಲ್ಲಿಯೇ ಏರ್ಪಡಿಸಿದನು (137). ಎಲ್ಲ ಯಾದವರೂ ಬಂದು ಸಭಾಗೃಹ ದಲ್ಲಿ ಕುಳಿತುಕೊಳ್ಳಲಾಗಿ, ಶ್ರೀಕೃಷ್ಣನು ಸಭೆಯನ್ನು ಕರೆದ ಉದ್ದೇಶವೇನನ್ನೋ ಹೇಳಿ ಮುಗಿಸಿ, ಪ್ರಸಂಗಾಂತರದಿಂದ ಅಕ್ರೂರನೊಡನೆ ವಿನೋದವಾಗಿ ಸರಸ ಸಲ್ಲಾಪವನ್ನಾಡುತ್ತ ಇಂತೆಂದನು (138): "ಓ ದಾನಪತಿ,* ಅದು ನಮಗೆ ಗೊತ್ತಿದ್ದ ಸಂಗತಿಯೇ ಸರಿ. ಶತಧನ್ವನು ನಿನಗೆ ಸ್ಯಮಂತಕರತ್ನವನ್ನು ಕೊಟ್ಟಿದ್ದಾ ನಷ್ಟೆ! ನಿಖಿಲವಿಶ್ವದಲ್ಲಿ ಸಾರಭೂತವಾದ ಆ ಮಣಿರತ್ನವು ನಮ್ಮ ರಾಷ್ಟ್ರಕ್ಕೆಲ್ಲ ಹಿತವನ್ನುಂಟುಮಾಡುತ್ತ ನಿನ್ನ ಹತ್ತಿರ ಇದೆ. ಆಗಲಿ, ನಿನ್ನ ಹತ್ತಿರವೇ ಇರಲಿ. ಆದರ ಮಹಿಮೆಯ ಫಲವನ್ನು ನಾವೆಲ್ಲರೂ ಅನುಭವಿಸುತ್ತಿದ್ದೇವೆ. ಆದರೆ ಆ

---

* ಅಕ್ರೂರನು ಯಜ್ಞದಲ್ಲಿ ವಿಶೇಷವಾಗಿ ದಾನ ಮಾಡುತ್ತಿದ್ದುದರಿಂದ ಅವನಿಗೆ 'ದಾನಪತಿ' ಎಂಬ ಹೆಸರು ಪ್ರಸಿದ್ಧವಾಗಿತ್ತು.

**ಸ್ಥಿತೇ ಭಗವತಿ ವಾಸುದೇವೇ ಸರತ್ನಸ್ಸೋಽಚಿಂತಯತ್ ॥ 139 ॥ ಕಿಮತ್ರಾನುಷ್ಠೇಯಮನ್ಯಥಾ ಚೇದ್ ಬ್ರವೀಮ್ಯಹಂ ತತ್ಕೇವಲಾಂಬರತಿರೋಧಾನಮನ್ವಿಷ್ಯಂತೋ ರತ್ನಮೇತೇ ದ್ರಕ್ಷ್ಯಂತಿ ಅತಿವಿರೋಧೋ ನ ಕ್ಷೇಮ ಇತಿ ಸಂಚಿಂತ್ಯ ತಮಖಿಲಜಗತ್ಕಾರಣಭೂತಂ ನಾರಾಯಣಮಾಹಾಕ್ರೂರಃ ॥ 140 ॥ ಭಗವನ್, ಮಮೈತತ್ಸ್ಯಮಂತಕರತ್ನಂ ಶತಧನುಷಾ ಸಮರ್ಪಿತಮಪಗತೇ ಚ ತಸ್ಮಿನ್ನದ್ಯ ಶ್ವಃ ಪರಶ್ವೋ ವಾ ಭಗವಾನ್ ಯಾಚಯಿಷ್ಯತೀತಿ ಕೃತಮತಿರತಿಕೃಚ್ಛ್ರೇಣೈತಾವಂತಂ ಕಾಲಮಧಾರಯಮ್ ॥ 141 ॥ ತಸ್ಯ ಚ ಧಾರಣಕ್ಲೇಶೇನಾಹಮಶೇಷೋಪಭೋಗೇಷ್ವಸಂಗಿಮಾನಸೋ ನ ವೇದ್ಮಿ ಸ್ವಸುಖಕಲಾಮಪಿ ॥ 142 ॥ ಏತಾವನ್ಮಾತ್ರಮಪ್ಯಶೇಷರಾಷ್ಟ್ರೋಪಕಾರಿ ಧಾರಯಿತುಂ ನ ಶಕ್ನೋತಿ ಭವಾನ್ಮನ್ಯತ ಇತ್ಯಾತ್ಮನಾ ನ ಚೋದಿತವಾನ್ ॥ 143 ॥ ತದಿದಂ**

---

ರತ್ನವು ನನ್ನ ಹತ್ತಿರ ಇದೆಯೆಂದು ಬಲಭದ್ರನಿಗೆ ಶಂಕೆ ಉಂಟಾಗಿದೆ. ನಮ್ಮ ಸಂತೋಷಕ್ಕಾಗಿ ಅದನ್ನೊಂದು ಸಲ ತೋರಿಸಿಬಿಡು!" ಎಂದು ಹೇಳಿ ಸುಮ್ಮನಾದನು. ಆಗ ರತ್ನಸಹಿತನಾಗಿಯೇ ಇದ್ದ ಅಕ್ರೂರನು ಹೀಗೆಂದು ಚಿಂತಿಸಿದನು (139): "ಈಗ ಏನು ಮಾಡುವುದು? ಒಂದು ವೇಳೆ ಅನ್ಯಥಾ ಹೇಳಿದರೆ, ಕೇವಲ ನನ್ನ ವಸ್ತ್ರವನ್ನೆಳೆದು ಹುಡುಕಿದರೆ ಸಾಕು, ಇವರಿಗೆ ರತ್ನವು ಗೋಚರಿಸಿಬಿಡುತ್ತದೆ! (ಬಲಶಾಲಿಗಳೊಡನೆ) ಅತಿವಿರೋಧವು ಕ್ಷೇಮಕರವಲ್ಲ" ಎಂದು ಆಲೋಚಿಸಿ ಅಖಿಲಜಗತ್ಕಾರಣನಾದ ಶ್ರೀಕೃಷ್ಣನನ್ನು ಕುರಿತು ಅಕ್ರೂರನು ಹೇಳಿದನು (140): "ಭಗವನ್, ಈ ಸ್ಯಮಂತಕರತ್ನವನ್ನು ಶತಧನ್ವನು ನನಗೆ ಕೊಟ್ಟಿದ್ದನು! ಅವನು ಮೃತನಾದಮೇಲೆ, ಇಂದೋ ನಾಳೆಯೋ ನಾಡಿದ್ದೋ ಅದನ್ನು ನೀನು ಕೇಳುತ್ತೀಯೆಂದು ನನಗೆ ನಿಶ್ಚಯವಾಗಿತ್ತು. ಆದ ಕಾರಣ ಬಹುಕಷ್ಟದಿಂದ ಇಷ್ಟುದಿನ ಅದನ್ನು ರಕ್ಷಿಸಿಕೊಂಡು ಬಂದೆನು (141). ಅದರ ಧಾರಣಕ್ಲೇಶದಿಂದ ಸಕಲ ಸುಖಭೋಗಗಳಲ್ಲಿಯೂ ನಾನು ಮನಸ್ಸನ್ನಿರಿಸದೆ ಅವುಗಳಿಂದ ದೂರವಿರಬೇಕಾಯಿತು. ಸುಖದ ಲೇಶವನ್ನೂ ನಾನು ಕಾಣಲಿಲ್ಲ. 'ಈ ರತ್ನವು ನಿಖಿಲರಾಷ್ಟ್ರೋಪಕಾರಿಯಾಗಿರುವಾಗ ಕೇವಲ ಇದರ ರಕ್ಷಣೆಯ ಭಾರವನ್ನು ಈತನು ಹೊತ್ತುಕೊಳ್ಳಲಾರನಲ್ಲ' ಎಂಬುದಾಗಿ ನೀನು ಭಾವಿಸುತ್ತೀಯೆ—ಎಂಬ ಕಾರಣದಿಂದ ನಾನಾಗಿ ಇದನ್ನು ತೆಗೆದುಕೋ ಎಂದು ನಿನಗೆ

**ಸ್ಯಮಂತಕರತ್ನಂ ಗೃಹ್ಯತಾಮಿಚ್ಛಯಾ ಯಸ್ಯಾಭಿಮತಂ ತಸ್ಯ ಸಮರ್ಪ್ಯತಾಮ್ ॥ 144 ॥ ತತಃ ಸ್ವೋದರವಸ್ತ್ರನಿಗೋಪಿತಮತಿಲಘುಕನಕಸಮುದ್ಗಕಗತಂ ಪ್ರಕಟೀಕೃತವಾನ್ ॥ 145 ॥ ತತಶ್ಚ ನಿಷ್ಕ್ರಾಮ್ಯ ಸ್ಯಮಂತಕಮಣಿಂ ತಸ್ಮಿನ್ಯದುಕುಲಸಮಾಜೇ ಮುಮೋಚ ॥ 146 ॥ ಮುಕ್ತಮಾತ್ರೇ ಚ ತಸ್ಮಿನ್ನತಿಕಾಂತ್ಯಾ ತದಖಿಲಮಾಸ್ಥಾನಮುದ್ಯೋತಿತಮ್ ॥ 147 ॥ ಅಥಾಹಾಕ್ರೂರಃ ಸ ಏಷ ಮಣಿಃ ಶತಧನ್ವನಾಸ್ಮಾಕಂ ಸಮರ್ಪಿತೋ ಯಸ್ಯಾಯಂ ಸ ಏನಂ ಗೃಹ್ಣಾತು ಇತಿ ॥ 148 ॥ ತಮಾಲೋಕ್ಯ ಸರ್ವಯಾದವಾನಾಂ ಸಾಧು ಸಾಧ್ವಿತಿ ವಿಸ್ಮಿತಮನಸಾಂ ವಾಚೋಽಶ್ರೂಯಂತ ॥ 149 ॥ ತಮಾಲೋಕ್ಯಾತೀವ ಬಲಭದ್ರೋ ಮಮಾಯಮಚ್ಯುತೇನೈವ ಸಾಮಾನ್ಯಸ್ಸಮನ್ವೀಪ್ಸಿತ ಇತಿ ಕೃತಸ್ಪೃಹೋಽಭೂತ್ ॥ 150 ॥ ಮಮೈವಾಯಂ ಪಿತೃಧನಮಿತ್ಯತೀವ ಚ ಸತ್ಯಭಾಮಾಪಿ ಸ್ಪೃಹಯಾಂಚಕಾರ ॥ 151 ॥ ಬಲಸತ್ಯಾವಲೋಕನಾ-**

---

ಹೇಳಲಿಲ್ಲ! (142-143). ಇಗೋ, ಇದೇ ಸ್ಯಮಂತಕರತ್ನ ತೆಗೆದುಕೊ. ಯಾರಿಗೆ ಬೇಕಾದರೂ ಕೊಟ್ಟುಬಿಡು" ಎಂದನು. ಆಮೇಲೆ ತನ್ನ ಹೊಟ್ಟೆಗೆ ಸುತ್ತಿದ್ದ ಬಟ್ಟೆಯಲ್ಲಿ ಹುದುಗಿಸಿದ ಚಿನ್ನದ ಚಿಕ್ಕಸಂಪುಟದಲ್ಲಿದ್ದ ರತ್ನವನ್ನು ತೋರಿಸಿದನು (144). ಅನಂತರ ಸ್ಯಮಂತಕಮಣಿಯನ್ನು ಹೊರಗೆ ತೆಗೆದು ಯಾದವ ಸಭೆಯ ಮುಂದಿಟ್ಟನು. ಒಡನೆಯೇ ಅದರ ಉಜ್ಜ್ವಲ ಕಾಂತಿಯಿಂದ ಆಸ್ಥಾನ ಮಂಟಪವೆಲ್ಲವೂ ಬೆಳಗಿಹೋಯಿತು. ಆಗ ಅಕ್ರೂರನು "ಶತಧನ್ವನು ನಮಗೆ ಕೊಟ್ಟಿದ್ದ ಮಣಿ ಇದು. ಇದು ಯಾರಿಗೆ ಸಲ್ಲಬೇಕೋ ಅವರು ತೆಗೆದುಕೊಳ್ಳಲಿ" ಎಂದನು (145-148). ಅದನ್ನು ನೋಡಿ ಅಚ್ಚರಿಗೊಂಡ ಸಕಲ ಯಾದವರೂ 'ಸಾಧು ಸಾಧು' ಎಂದು ಉದ್ಗರಿಸಿದ ಧ್ವನಿ ಎಲ್ಲೆಲ್ಲಿಯೂ ಕೇಳಿಸಿತು. ಮಣಿಯನ್ನು ನೋಡಿ ಬಲಭದ್ರನು "ಇದು ನನಗೆ ಸೇರಬೇಕಾದದ್ದು. ಕೃಷ್ಣನೇ ಇದು ನಮ್ಮಿಬ್ಬರಿಗೂ ಸಮಾನವಾಗಿರತಕ್ಕದ್ದೆಂದು ಅಭಿಪ್ರಾಯಪಟ್ಟಿದ್ದಾನೆ" ಎಂದು ಅದರಲ್ಲಿ ಅಭಿಲಾಷೆಯನ್ನು ವ್ಯಕ್ತಪಡಿಸಿದನು (149-150). ಸತ್ಯಭಾಮೆಯಾದರೋ "ಇದು ನನಗೆ ಮಾತ್ರ ಸಲ್ಲಬೇಕಾದದ್ದು. ಇದು ನನಗೆ ಪಿತೃಧನ" ಎಂದು ರತ್ನವನ್ನು ಬಯಸಿದಳು. ಬಲರಾಮನನ್ನೂ ಸತ್ಯಭಾಮೆಯನ್ನೂ ನೋಡಿ

**ತ್ಕೃಷ್ಣೋಽಪ್ಯಾತ್ಮಾನಂ ಗೋಚಕ್ರಾಂತರಾವಸ್ಥಿತಮಿವ ಮೇನೇ ॥ 152॥ ಸಕಲಯಾದವಸಮಕ್ಷಂ ಚಾಕ್ರೂರಮಾಹ ॥ 153॥ ಏತದ್ಧಿ ಮಣಿರತ್ನ ಮಾತ್ಮಸಂಶೋಧನಾಯ ಏತೇಷಾಂ ಯದೂನಾಂ ಮಯಾ ದರ್ಶಿತಮ್ ಏತಚ್ಚ ಮಮ ಬಲಭದ್ರಸ್ಯ ಚ ಸಾಮಾನ್ಯಂ ಪಿತೃಧನಂ ಚೈತತ್ಸತ್ಯ-ಭಾಮಾಯಾ ನಾನ್ಯಸ್ಯೈತತ್ ॥ 154॥ ಏತಚ್ಚ ಸರ್ವಕಾಲಂ ಶುಚಿನಾ ಬ್ರಹ್ಮಚರ್ಯಾದಿಗುಣವತಾ ಧ್ರಿಯಮಾಣಮಶೇಷರಾಷ್ಟ್ರಸ್ಯೋಪಕಾರ-ಕಮ್ ಅಶುಚಿನಾ ಧ್ರಿಯಮಾಣಮಾಧಾರಮೇವ ಹಂತಿ ॥ 155॥ ಅತೋಽಹಮಸ್ಯ ಷೋಡಶಸ್ತ್ರೀಸಹಸ್ರಪರಿಗ್ರಹಾದಸಮರ್ಥೋ ಧಾರಣೇ ಕಥಮೇತತ್ಸತ್ಯಭಾಮಾ ಸ್ವೀಕರೋತಿ ॥ 156॥ ಆರ್ಯಬಲಭದ್ರೇಣಾಪಿ ಮದಿರಾಪಾನಾದ್ಯಶೇಷೋಪಭೋಗಪರಿತ್ಯಾಗಃ ಕಾರ್ಯಃ ॥ 157॥ ತದಲಂ ಯದುಲೋಕೋಽಯಂ ಬಲಭದ್ರಃ ಅಹಂ ಚ ಸತ್ಯಾ ಚ**

---

ಶ್ರೀಕೃಷ್ಣನಿಗೆ ತಾನು ಎತ್ತು ಮತ್ತು ಗಾಡಿಯ ಚಕ್ರದ ನಡುವೆ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಂತೆ ಭಾಸವಾಯಿತು (151-152). ಅವನು ಸಕಲ ಯಾದವ ರೆದುರಿಗೆ ಅಕ್ರೂರನನ್ನು ಕುರಿತು "ನನ್ನ ಆತ್ಮಶುದ್ಧಿಯನ್ನು ವ್ಯಕ್ತಪಡಿಸುವುದಕ್ಕಾಗಿ ಮಾತ್ರ ಈ ಯಾದವರೆದುರಿಗೆ ಮಣಿರತ್ನವನ್ನು ಪ್ರದರ್ಶಿಸುವಂತೆ ಮಾಡಿದ್ದೇನೆ. ಈ ರತ್ನದ ಮೇಲೆ ನನಗೂ ಬಲರಾಮನಿಗೂ ಅಧಿಕಾರವು ಸಮಾನವಾದದ್ದು. ಸತ್ಯಭಾಮೆಗೆ ಪಿತ್ರಧನವಾಗಿದೆ. (ನಾವು ಮೂವರನ್ನು ಬಿಟ್ಟು) ಇನ್ನೊಬ್ಬನಿಗೆ ಇದು ಸಲ್ಲತಕ್ಕದ್ದಲ್ಲ (153-154). ಈ ರತ್ನವನ್ನು ಧರಿಸತಕ್ಕವನು ಸರ್ವಕಾಲ ದಲ್ಲಿಯೂ ಶುಚಿಯಾಗಿ ಬ್ರಹ್ಮಚರ್ಯಾದಿಗುಣಗಳನ್ನು ಪಾಲಿಸತಕ್ಕವನಾಗಿರ ಬೇಕು. ಆಗ ಇದು ಸಮಸ್ತ ರಾಷ್ಟ್ರಕ್ಕೂ ಶುಭವನ್ನುಂಟುಮಾಡುತ್ತದೆ. ಹಾಗಲ್ಲದೆ ಅಶುಚಿಯಾದವನು ಧರಿಸಿದರೆ ಧರಿಸಿದವನನ್ನೇ ನಾಶಪಡಿಸುತ್ತದೆ (155). ನಾನು ಇದನ್ನು ಧರಿಸಲು ಶಕ್ತನಲ್ಲ. ಹದಿನಾರು ಸಾವಿರ ಹೆಂಡಿರನ್ನು ಕಟ್ಟಿ ಕೊಂಡವನು ನಾನು. ಸತ್ಯಭಾಮೆಯಾದರೂ ಇದನ್ನು ಹೇಗೆ ಸ್ವೀಕರಿಸಿ ಧರಿಸಿಯಾಳು? ಅಣ್ಣನಾದ ಬಲಭದ್ರನು ಮದ್ಯಪಾನಾದಿಸಕಲಭೋಗಗಳನ್ನೂ ತ್ಯಜಿಸಬೇಕಾಗಿ ಬರುತ್ತದೆ (156-157). ಆದ್ದರಿಂದ ಯಾವುದೂ ಬೇಡ. ಈ ಯಾದವರು, ಈ ಬಲಭದ್ರ, ನಾನು, ಸತ್ಯೆ—ಎಲ್ಲರೂ ಓ ದಾನಪತಿ, ನಿನ್ನನ್ನು

**ತ್ವಾಂ ದಾನಪತೇ ಪ್ರಾರ್ಥಯಾಮಃ || 158 || ತದ್ಭವಾನೇವ ಧಾರಯಿತುಂ ಸಮರ್ಥಃ || 159 || ತ್ವದ್‌ಧೃತಂ ಚಾಸ್ಯ ರಾಷ್ಟ್ರಸ್ಯೋಪಕಾರಕಂ ತದ್ಭವಾನ-ಶೇಷರಾಷ್ಟ್ರನಿಮಿತ್ತಮೇತತ್ಪೂರ್ವವದ್ಧಾರಯತು ಅನ್ಯನ್ನವಕ್ತವ್ಯಮಿತ್ಯುಕ್ತೋ ದಾನಪತಿಸ್ತಥೇತ್ಯಾಹ ಜಗ್ರಾಹ ಚ ತನ್ಮಹಾರತ್ನಮ್ || 160 || ತತಃ ಪ್ರಭೃತ್ಯಕ್ರೂರಃ ಪ್ರಕಟೇನೈವ ತೇನಾತಿಜಾಜ್ವಲ್ಯಮಾನೇನಾತ್ಮಕಂಠಾವ-ಸಕ್ತೇನಾದಿತ್ಯ ಇವಾಂಶುಮಾಲೀ ಚಚಾರ || 161 || ಇತ್ಯೇತದ್ಭಗವತೋ ಮಿಥ್ಯಾಭಿಶಸ್ತಿಕ್ಷಾಲನಂ ಯಃ ಸ್ಮರತಿ ನ ತಸ್ಯ ಕದಾಚಿದಲ್ಪಾಪಿ ಮಿಥ್ಯಾಭಿ-ಶಸ್ತಿರ್ಭವತಿ ಅವ್ಯಾಹತಾಖಿಲೇಂದ್ರಿಯಶ್ಚಾಖಿಲಪಾಪಮೋಕ್ಷಮವಾಪ್ನೋತಿ || 162 ||**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ತ್ರಯೋದಶೋಽಧ್ಯಾಯಃ

---

ಪ್ರಾರ್ಥಿಸಿಕೊಳ್ಳುತ್ತೇವೆ. ನೀನೇ ಇದನ್ನು ಧರಿಸಲು ಸಮರ್ಥ. ನೀನು ಧರಿಸಿದ್ದರೆ ಈ ರಾಷ್ಟ್ರಕ್ಕೆಲ್ಲ ಉಪಕಾರವೇ ಆಗುತ್ತದೆ. ಈ ರಾಷ್ಟ್ರದ ಹಿತಕ್ಕಾಗಿ ನೀನೇ ಮೊದಲಿನಂತೆ ಇದನ್ನು ಇಟ್ಟುಕೊಂಡಿರು. ಎದುರಾಗಿ ಇನ್ನೊಂದು ಮಾತನ್ನೂ ಆಡಬಾರದು" ಎಂದನು. ಆಗ ದಾನಪತಿಯಾದ ಅಕ್ರೂರನು ಹಾಗೆಯೇ ಆಗಲೆಂದು ಆ ಮಹಾರತ್ನವನ್ನು ಸ್ವೀಕರಿಸಿದನು (158-160). ಅಲ್ಲಿಂದ ಮುಂದೆ ಅಕ್ರೂರನು ಜಾಜ್ವಲ್ಯಮಾನವಾದ ಆ ಮಹಾರತ್ನವನ್ನು ಪ್ರಕಟವಾಗಿಯೇ ತನ್ನ ಕೊರಳಲ್ಲಿ ಧರಿಸಿಕೊಂಡು, ಅಂಶುಮಾಲಿಯಾದ ಆದಿತ್ಯನೋ ಎಂಬಂತೆ, ತಿರುಗಾಡುತ್ತಿದ್ದನು (161). ಈ ಪ್ರಕಾರವಾಗಿ ಭಗವಂತನಿಗೆ ಸಂಬಂಧಿಸಿದ ಮಿಥ್ಯಾಕಳಂಕಶೋಧನರೂಪವಾದ ಈ ಪ್ರಸಂಗವನ್ನು ಯಾವನು ಸ್ಮರಿಸುತ್ತಾನೊ ಆತನಿಗೆ ಮಿಥ್ಯಾಕಳಂಕವು ಎಂದೆಂದಿಗೂ ಬರುವುದಿಲ್ಲ. ಅವನ ಸಮಸ್ತೇಂದ್ರಿಯಗಳೂ ಸಮರ್ಥವಾಗಿದ್ದು ಎಲ್ಲ ಪಾಪಗಳಿಂದಲೂ ಮುಕ್ತನಾಗುತ್ತಾನೆ (162).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿಯಿತು.



## ಚತುರ್ದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಅನಮಿತ್ರಸ್ಯ ಪುತ್ರಃ ಶಿನಿರ್ನಾಮಾಭವತ್ ॥ 1 ॥ ತಸ್ಯಾಪಿ ಸತ್ಯಕಃ ಸತ್ಯಕಾತ್ಸಾತ್ಯಕಿರ್ಯುಯುಧಾನಾಪರನಾಮಾ ॥ 2 ॥ ತಸ್ಮಾದಪಿ ಸಂಜಯಃ ತತ್ಪುತ್ರಶ್ಚ ಕುಣಿಃ ಕುಣೇರ್ಯುಗಂಧರಃ ॥ 3 ॥ ಇತ್ಯೇತೇ ಶೈನೇಯಾಃ ॥ 4 ॥ ಅನಮಿತ್ರಸ್ಯಾನ್ವಯೇ ಪೃಶ್ನಿಸ್ತಸ್ಮಾತ್ ಶ್ವಫಲ್ಕಃ ತತ್ಪ್ರಭಾವಃ ಕಥಿತ ಏವ ॥ 5 ॥ ಶ್ವಫಲ್ಕಸ್ಯಾನ್ಯಃ ಕನೀಯಾಂಶ್ಚಿತ್ರಕೋ ನಾಮ ಭ್ರಾತಾ ॥ 6 ॥ ಶ್ವಫಲ್ಕಾದಕ್ರೂರೋ ಗಾಂದಿನ್ಯಾಮಭವತ್ ॥ 7 ॥ ತಥೋಪಮದ್ಗು,**

---

## ಅಧ್ಯಾಯ 14

ಅನಮಿತ್ರ ಮತ್ತು ಅಂಧಕರ ವಂಶದ ವೃತ್ತಾಂತ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಅನಮಿತ್ರ*ನಿಗೆ ಶಿನಿ ಎಂಬ ಮಗನಿದ್ದನು. ಅವನ ಮಗ ಸತ್ಯಕ. ಸತ್ಯಕನಿಂದ ಸಾತ್ಯಕಿ ಹುಟ್ಟಿದನು. ಅವನಿಗೆ ಯುಯುಧಾನ ಎಂದು ಇನ್ನೊಂದು ಹೆಸರಿತ್ತು. ಸಾತ್ಯಕಿಗೆ ಸಂಜಯನೂ ಅವನಿಗೆ ಕುಣಿಯೂ ಕುಣಿಗೆ ಯುಗಂಧರ ಎಂಬವನೂ ಪುತ್ರರಾದರು. ಇವರು ಶೈನೇಯರೆನಿಸಿಕೊಂಡರು (1-4). ಅನಮಿತ್ರನ ಇನ್ನೊಂದು ಪೀಳಿಗೆಯಲ್ಲಿ ಪೃಶ್ನಿಯೂ ಅವನಿಂದ ಶ್ವಫಲ್ಕನೂ ಹುಟ್ಟಿದರು. ಶ್ವಫಲ್ಕನ ಮಹಿಮೆಯನ್ನು ಹಿಂದೆ ಹೇಳಿದ್ದಾಗಿದೆ (ನೋಡಿ 13-115). ಆತನಿಗೆ ಚಿತ್ರಕನೆಂಬ ತಮ್ಮನೊಬ್ಬನಿದ್ದನು. ಶ್ವಫಲ್ಕನಿಂದ ಅಕ್ರೂರನು ಗಾಂದಿನಿಯೆಂಬ ಪತ್ನಿಯಲ್ಲಿ ಜನಿಸಿದನು.

---

* ಯದುವಂಶದಲ್ಲಿ ಹುಟ್ಟಿದ ವೃಷ್ಣಿಗೆ ನೂರು ಮಕ್ಕಳಿದ್ದರೆಂದು ಹನ್ನೊಂದನೆಯ ಅಧ್ಯಾಯದಲ್ಲಿ ಹೇಳಿದೆ (27). ವೃಷ್ಣಿಯ ಮಗನಾದ ಅನಮಿತ್ರನಿಗೆ ಪ್ರಸೇನ ಸತ್ರಾಜಿತರು ಮೊಮ್ಮಕ್ಕಳೆಂದು ತಿಳಿಸಿ ಪ್ರಸಂಗವಶದಿಂದ ಸ್ಯಮಂತಕಮಣಿಯ ವೃತ್ತಾಂತವನ್ನು ಹದಿಮೂರನೆಯ ಅಧ್ಯಾಯದಲ್ಲಿ ಹೇಳಲಾಯಿತು. ಈಗ ಅನಮಿತ್ರನ ಇನ್ನೊಂದು ಸಂತತಿಯನ್ನು ಹೇಳುತ್ತಿದ್ದಾರೆ.

**ಮೃದಾಮೃದ, ವಿಶ್ವಾರಿಮೇಜಯ, ಗಿರಿಕ್ಷತ್ರೋಪಕ್ಷತ್ರ, ಶತಘ್ನಾರಿ-ಮರ್ದನ, ಧರ್ಮದೃಗ್ದೃಷ್ಟಧರ್ಮ, ಗಂಧಮೋಜ, ವಾಹ, ಪ್ರತಿ-ವಾಹಾಖ್ಯಾಃ ಪುತ್ರಾಃ ॥ 8 ॥ ಸುತಾರಾಖ್ಯಾ ಕನ್ಯಾ ಚ ॥ 9 ॥ ದೇವ-ವಾನುಪದೇವಶ್ಚಾಕ್ರೂರ ಪುತ್ರೌ ॥ 10 ॥ ಪೃಥುವಿಪೃಥುಪ್ರಮುಖಾಶ್ಚಿತ್ರಕಸ್ಯ ಪುತ್ರಾ ಬಹವೋ ಬಭೂವುಃ ॥ 11 ॥ ಕುಕುರಭಜಮಾನಶುಚಿಕಂಬಲ-ಬರ್ಹಿಷಾಖ್ಯಾಸ್ತಥಾಂಧಕಸ್ಯ ಚತ್ವಾರಃ ಪುತ್ರಾಃ ॥ 12 ॥ ಕುಕುರಾದ್ಧೃಷ್ಟಃ ತಸ್ಮಾಚ್ಚ ಕಪೋತರೋಮಾ ತತಶ್ಚ ವಿಲೋಮಾ ತಸ್ಮಾದಪಿ ತುಂಬುರು-ಸಖೋಽಭವದನುಸಂಜ್ಞಶ್ಚ ॥ 13 ॥ ಅನೋರಾನಕದುಂದುಭಿಃ ತತಶ್ಚಾ-ಭಿಜಿತ್ ಅಭಿಜಿತಃ ಪುನರ್ವಸುಃ ॥ 14 ॥ ತಸ್ಯಾಪ್ಯಾಹುಕ ಆಹುಕೀ ಚ ಕನ್ಯಾ ॥ 15 ॥ ಆಹುಕಸ್ಯ ದೇವಕೋಗ್ರಸೇನೌ ದ್ವೌ ಪುತ್ರೌ ॥ 16 ॥**

---

ಅಲ್ಲದೆ ಶ್ವಫಲ್ಕನಿಗೆ* (ಇನ್ನೊಬ್ಬ ಪತ್ನಿಯಲ್ಲಿ) ಉಪಮದ್ಗು, ಮೃದಾಮೃದ, ವಿಶ್ವ, ಅರಿಮೇಜಯ, ಗಿರಿಕ್ಷತ್ರ, ಉಪಕ್ಷತ್ರ, ಶತಘ್ನ, ಅರಿಮರ್ದನ, ಧರ್ಮ ದೃಕ್, ದೃಷ್ಟಧರ್ಮ, ಗಂಧಮೋಜ, ವಾಹ ಮತ್ತು ಪ್ರತಿವಾಹ—ಎಂಬ ಪುತ್ರರೂ ಸುತಾರಾ ಎಂಬ ಪುತ್ರಿಯೂ ಜನಿಸಿದರು (5-9). ದೇವವಾನ್, ಉಪದೇವ—ಎಂಬವರು ಅಕ್ರೂರನ ಮಕ್ಕಳು. (ಶ್ವಫಲ್ಕನ ತಮ್ಮನಾದ) ಚಿತ್ರಕ ನಿಗೆ ಪೃಥು, ವಿಪೃಥು—ಮೊದಲಾದ ಬಹುಮಂದಿ ಪುತ್ರರಿದ್ದರು (10-11). (ಸತ್ವತನ ಮಗನಾದ) ಅಂಧಕನಿಗೆ ಕುಕುರ, ಭಜಮಾನ, (ಸತ್ವತನ ಮಗನಾದ ಭಜಮಾನ ಬೇರೆ) ಶುಚಿಕಂಬಲ, ಬರ್ಹಿಷ—ಎಂಬ ನಾಲ್ವರು ಪುತ್ರರಿದ್ದರು. ಕುಕುರನಿಂದ ಧೃಷ್ಟನೂ ಅವನಿಂದ ಕಪೋತರೋಮನೂ ಆತನಿಂದ ವಿಲೋಮನೂ ವಿಲೋಮನಿಂದ ಅನು ಎಂಬವನೂ ಜನಿಸಿದರು. ಅನು ಎಂಬವನು ತುಂಬುರುವಿನ ಸ್ನೇಹಿತ (12-13). ಅನುವಿನಿಂದ ಆನಕದುಂದುಭಿ, ಅವನಿಂದ ಅಭಿಜಿತ್, ಆತನಿಂದ ಪುನರ್ವಸು—ಎಂಬವರು ಹುಟ್ಟಿದರು. ಪುನರ್ವಸುವಿಗೆ ಆಹುಕನೆಂಬ ಮಗನೂ ಆಹುಕಿ ಎಂಬ ಮಗಳೂ ಇದ್ದರು. ಆಹುಕನಿಗೆ ದೇವಕ, ಉಗ್ರಸೇನ—ಎಂಬ ಇಬ್ಬರು ಮಕ್ಕಳು. ದೇವಕನಿಗೆ

---

* ಶ್ವಫಲ್ಕನಿಗೆ ಉಮದ್ಗು ಮಗನೆಂದೂ ಆತನ ಮಕ್ಕಳು ಮೃದಾಮೃದ—ಮೊದಲಾದವರೆಂದೂ ಪಾಠಾಂತರದಿಂದ ತಿಳಿದುಬರುತ್ತದೆ. ಹೀಗೆಯೇ ಅಲ್ಲಲ್ಲಿ ಪಾಠಾಂತರಗಳಿವೆ. ತುಂಬ ವಿಸ್ತರವಾಗುವುದೆಂದು ಇಲ್ಲಿ ಬರೆದಿಲ್ಲ.

**ದೇವವಾನುಪದೇವಃ ಸಹದೇವೋ ದೇವರಕ್ಷಿತಶ್ಚ ದೇವಕಸ್ಯ ಚತ್ವಾರಃ ಪುತ್ರಾಃ ॥ 17 ॥ ತೇಷಾಂ ವೃಕದೇವೋಪದೇವಾ ದೇವರಕ್ಷಿತಾ ಶ್ರೀದೇವಾ ಶಾಂತಿದೇವಾ ಸಹದೇವಾ ದೇವಕೀ ಚ ಸಪ್ತ ಭಗಿನ್ಯಃ ॥ 18 ॥ ತಾಶ್ಚ ಸರ್ವಾ ವಸುದೇವ ಉಪಯೇಮೇ ॥ 19 ॥ ಉಗ್ರಸೇನಸ್ಯಾಪಿ ಕಂಸ, ನ್ಯಗ್ರೋಧ, ಸುನಾಮಾನಕಾಹ್ವ, ಶಂಕು, ಸುಭೂಮಿ, ರಾಷ್ಟ್ರಪಾಲ, ಯುದ್ಧತುಷ್ಟಿಸುತುಷ್ಟಿಮತ್ಸಂಜ್ಞಾಃ ಪುತ್ರಾ ಬಭೂವುಃ ॥ 20 ॥ ಕಂಸಾ, ಕಂಸವತೀ, ಸುತನು, ರಾಷ್ಟ್ರಪಾಲಿಕಾಹ್ವಾಶ್ಚೋಗ್ರಸೇನಸ್ಯ ತನೂಜಾಃ ಕನ್ಯಾಃ ॥ 21 ॥ ಭಜಮಾನಾಚ್ಚ ವಿದೂರಥಃ ಪುತ್ರೋಽಭವತ್ ॥ 22 ॥ ವಿದೂರಥಾಚ್ಛೂರಃ ಶೂರಾಚ್ಛಮೀ ಶಮಿನಃ ಪ್ರತಿಕ್ಷತ್ರಃ ತಸ್ಮಾತ್ಸ್ವಯಂಭೋಜಸ್ತತಶ್ಚ ಹೃದಿಕಃ ॥ 23 ॥ ತಸ್ಯಾಪಿ ಕೃತವರ್ಮಶತಧನುರ್ದೇವಾರ್ಹದೇವಗರ್ಭಾದ್ಯಾಃ ಪುತ್ರಾ ಬಭೂವುಃ ॥ 24 ॥ ದೇವಗರ್ಭಸ್ಯಾಪಿ ಶೂರಃ ॥ 25 ॥ ಶೂರಸ್ಯಾಪಿ ಮಾರಿಷಾ ನಾಮ ಪತ್ನ್ಯಭವತ್ ॥ 26 ॥ ತಸ್ಯಾಂ ಚಾಸೌ**

---

ದೇವವಾನ್, ಉಪದೇವ, ಸಹದೇವ, ದೇವರಕ್ಷಿತ—ಎಂಬ ನಾಲ್ವರು ಪುತ್ರರಾದರು (14-17). ಅಲ್ಲದೆ ಈ ನಾಲ್ವರಿಗೆ ವೃಕದೇವಾ, ಉಪದೇವಾ, ದೇವರಕ್ಷಿತಾ, ಶ್ರೀದೇವಾ, ಶಾಂತಿದೇವಾ, ಸಹದೇವಾ ಮತ್ತು ದೇವಕಿ—ಎಂಬ ಏಳು ಮಂದಿ ಸಹೋದರಿಯರಿದ್ದರು. ಆ ಏಳು ಮಂದಿ ಕನ್ನಿಕೆಯರನ್ನು ವಸುದೇವನು ಮದುವೆಯಾದನು (18-19). ಉಗ್ರಸೇನನಿಗೂ ಸಹ ಕಂಸ, ನ್ಯಗ್ರೋಧ, ಸುನಾಮ, ಆನಕಾಹ್ವ, ಶಂಕು, ಸುಭೂಮಿ, ರಾಷ್ಟ್ರಪಾಲ, ಯುದ್ಧತುಷ್ಟಿ ಮತ್ತು ಸುತುಷ್ಟಿಮಾನ್ ಎಂಬ ಪುತ್ರರಿದ್ದರು. ಅಲ್ಲದೆ ಕಂಸಾ, ಕಂಸವತೀ, ಸುತನು, ರಾಷ್ಟ್ರಪಾಲಿಕಾ—ಎಂಬ ಪುತ್ರಿಯರೂ ಉಗ್ರಸೇನನಿಗೆ ಇದ್ದರು (20-21). (ಸತ್ವತಪುತ್ರನಾದ) ಭಜಮಾನನಿಗೆ ವಿದೂರಥನೆಂಬ ಪುತ್ರನು ಹುಟ್ಟಿದನು. ವಿದೂರಥನಿಂದ ಶೂರನೂ ಶೂರನಿಂದ ಶಮಿಯೂ ಆತನಿಂದ ಪ್ರತಿಕ್ಷತ್ರನೂ ಅವನಿಂದ ಸ್ವಯಂಭೋಜನೂ ಆತನಿಂದ ಹೃದಿಕನೂ ಜನಿಸಿದರು. ಹೃದಿಕನಿಗೆ ಕೃತವರ್ಮ, ಶತಧನು, ದೇವಾರ್ಹ, ದೇವಗರ್ಭ—ಮೊದಲಾದ ಹಲವರು ಪುತ್ರರು ಹುಟ್ಟಿದರು (22-24). ದೇವಗರ್ಭನ ಮಗ ಶೂರ. ಶೂರನಿಗೆ ಮಾರಿಷಾ ಎಂಬ ಪತ್ನಿಯಿದ್ದಳು. ಶೂರನು ಅವಳಲ್ಲಿ

**ದಶಪುತ್ರಾನಜನಯದ್ವಸುದೇವಪೂರ್ವಾನ್ ॥ 27 ॥ ವಸುದೇವಸ್ಯ ಜಾತಮಾತ್ರಸ್ಯೈವ ತದ್‌ಗೃಹೇ ಭಗವದಂಶಾವತಾರಮವ್ಯಾಹತದೃಷ್ಟ್ಯಾ ಪಶ್ಯದ್ಭಿರ್ದೇವೈರ್ದಿವ್ಯಾನಕದುಂದುಭಯೋ ವಾದಿತಾಃ ॥ 28 ॥ ತತಶ್ಚಾಸಾವಾನಕದುಂದುಭಿಸಂಜ್ಞಾಮವಾಪ ॥ 29 ॥ ತಸ್ಯ ಚ ದೇವಭಾಗ, ದೇವಶ್ರವೋಽಷ್ಟಕ, ಕಕುಚ್ಚಕ್ರ, ವತ್ಸಧಾರಕ, ಸೃಂಜಯ, ಶ್ಯಾಮ, ಶಮಿಕ, ಗಂಡೂಷಸಂಜ್ಞಾ ನವ ಭ್ರಾತರೋಽಭವನ್ ॥ 30 ॥ ಪೃಥಾ ಶ್ರುತದೇವಾ ಶ್ರುತಕೀರ್ತಿಃ ಶ್ರುತಶ್ರವಾ ರಾಜಾಧಿದೇವೀ ಚ ವಸುದೇವಾದೀನಾಂ ಪಂಚ ಭಗಿನ್ಯೋಽಭವನ್ ॥ 31 ॥ ಶೂರಸ್ಯ ಕುಂತಿರ್ನಾಮ ಸಖಾಭವತ್ ॥ 32 ॥ ತಸ್ಮೈ ಚಾಪುತ್ರಾಯ ಪೃಥಾಮಾತ್ಮಜಾಂ ವಿಧಿನಾ ಶೂರೋ ದತ್ತವಾನ್ ॥ 33 ॥ ತಾಂ ಚ ಪಾಂಡುರುವಾಹ ॥ 34 ॥ ತಸ್ಯಾಂ ಚ ಧರ್ಮಾ-**

---

ವಸುದೇವನೇ ಮೊದಲಾದ ಹತ್ತು ಪುತ್ರರನ್ನು ಪಡೆದನು. ವಸುದೇವನು ಹುಟ್ಟಿದಾಗ ಮುಂದೆ ಆತನ ಗೃಹದಲ್ಲಿ ಭಗವಂತನು ಅಂಶಾವತಾರಮಾಡುವ ನೆಂಬುದನ್ನು ಅಪ್ರತಿಹತವಾದ ದೃಷ್ಟಿಯಿಂದರಿತ ದೇವತೆಗಳು ಆನಕ, ದುಂದುಭಿ ಗಳೆಂಬ ದಿವ್ಯವಾದ್ಯಗಳನ್ನು ಮೊಳಗಿಸಿದರು. ಆದ್ದರಿಂದ ವಸುದೇವನಿಗೆ ಆನಕ ದುಂದುಭಿ*ಯೆಂದು ಹೆಸರು ಬಂದಿತು (25-29). ವಸುದೇವನಿಗೆ ದೇವಭಾಗ, ದೇವಶ್ರವ, ಅಷ್ಟಕ, ಕಕುಚ್ಚಕ್ರ, ವತ್ಸಧಾರಕ, ಸೃಂಜಯ, ಶ್ಯಾಮ, ಶಮಿಕ ಮತ್ತು ಗಂಡೂಷ ಎಂಬ ಒಂಬತ್ತು ಸಹೋದರರಿದ್ದರು. ಅಲ್ಲದೆ ಪೃಥಾ, ಶ್ರುತದೇವಾ, ಶ್ರುತಕೀರ್ತಿ, ಶ್ರುತಶ್ರವಸ್ಸು, ರಾಜಾಧಿದೇವಿ—ಎಂಬ ಐವರು ಸಹೋದರಿ ಯರು ವಸುದೇವನೇ ಮೊದಲಾದವರಿಗೆ ಇದ್ದರು (30-31). ಶೂರನಿಗೆ ಕುಂತಿ ಎಂಬ ಮಿತ್ರನಿದ್ದನು. ಆತನಿಗೆ ಸಂತತಿಯಿಲ್ಲದುದರಿಂದ ಶೂರನು ತನ್ನ ಮಗಳಾದ ಪೃಥೆಯನ್ನು ಕುಂತಿಗೆ ದತ್ತಕವಿಧಿಯಿಂದ ಕೊಟ್ಟನು. ಆ ಪೃಥೆಯನ್ನು ಪಾಂಡುರಾಜನು ಮದುವೆಯಾದನು (32-34). ಪೃಥೆಯಲ್ಲಿ ಯಮಧರ್ಮ, ವಾಯು, ಇಂದ್ರರು ಕ್ರಮವಾಗಿ ಯುಧಿಷ್ಠಿರ, ಭೀಮಸೇನ, ಅರ್ಜುನ ಎಂಬ

---

* ಹಿಂದೆ ಹೇಳಿದ (ಶ್ಲೋಕ 14) ಅನುವಿನ ಮಗನಾದ ಆನಕದುಂದುಭಿಯೆಂಬ ಅಂಕಿತನಾಮದವನು ವಸುದೇವನಿಗಿಂತ ಭಿನ್ನನಾದವನು.

ನಿಲೇಂದ್ರೈರ್ಯುಧಿಷ್ಠಿರಭೀಮಸೇನಾರ್ಜುನಾಖ್ಯಾಸ್ತ್ರಯಃ ಪುತ್ರಾಸ್ಸಮುತ್ಪಾದಿತಾಃ ॥ 35 ॥ ಪೂರ್ವಮೇವಾನೂಢಾಯಾಂಚ ಭಗವತಾ ಭಾಸ್ವತಾ ಕಾನೀನಃ ಕರ್ಣೋ ನಾಮ ಪುತ್ರೋಽಜನ್ಯತ ॥ 36 ॥ ತಸ್ಯಾಶ್ಚ ಸಪತ್ನೀ ಮಾದ್ರೀ ನಾಮಾಭೂತ್ ॥ 37 ॥ ತಸ್ಯಾಂ ಚ ನಾಸತ್ಯದಸ್ರಾಭ್ಯಾಂ ನಕುಲಸಹದೇವೌ ಪಾಂಡೋಃ ಪುತ್ರೌ ಜನಿತೌ ॥ 38 ॥ ಶ್ರುತದೇವಾಂ ತು ವೃದ್ಧಧರ್ಮಾ ನಾಮ ಕಾರೂಷ ಉಪಯೇಮೇ ॥ 39 ॥ ತಸ್ಯಾಂ ಚ ದಂತವಕ್ರೋ ನಾಮ ಮಹಾಸುರೋ ಜಜ್ಞೇ ॥ 40 ॥ ಶ್ರುತಕೀರ್ತಿಮಪಿ ಕೇಕಯರಾಜ ಉಪಯೇಮೇ ॥ 41 ॥ ತಸ್ಯಾಂ ಚ ಸಂತರ್ದನಾದಯಃ ಕೈಕೇಯಾಃ ಪಂಚ ಪುತ್ರಾ ಬಭೂವುಃ ॥ 42 ॥ ರಾಜಾಧಿದೇವ್ಯಾಮಾವಂತ್ಯೌ ವಿಂದಾನುವಿಂದೌ ಜಜ್ಞಾತೇ ॥ 43 ॥ ಶ್ರುತಶ್ರವಸಮಪಿ ಚೇದಿರಾಜೋ ದಮಘೋಷನಾಮೋಪಯೇಮೇ ॥ 44 ॥ ತಸ್ಯಾಂ ಚ ಶಿಶುಪಾಲಮುತ್ಪಾದಯಾಮಾಸ ॥ 45 ॥ ಸ ವಾ ಪೂರ್ವಮಪ್ಯುದಾರವಿಕ್ರಮೋ

---

ಪುತ್ರರನ್ನು ಉತ್ಪಾದಿಸಿದರು. ಅವಳು ಮದುವೆಯಾಗುವುದಕ್ಕೆ ಮೊದಲು ಭಗವಾನ್ ಸೂರ್ಯದೇವನಿಂದ ಕರ್ಣನೆಂಬ ಪುತ್ರನು ಹುಟ್ಟಿದನು. (ಪೃಥೆಯು ಕನ್ಯೆಯಾಗಿದ್ದಾಗ ಜನಿಸಿದ್ದರಿಂದ) ಕರ್ಣನು ಕಾನೀನ ಎನಿಸಿದನು (35-36). ಪೃಥೆಗೆ ಮಾದ್ರಿಯೆಂಬವಳು ಸವತಿಯಾಗಬೇಕು. ಅವಳಲ್ಲಿ ನಾಸತ್ಯ, ದಸ್ರ ಎಂಬ ಅಶ್ವಿನೀದೇವತೆಗಳಿಂದ ಪಾಂಡುಪುತ್ರರಾದ ನಕುಲ ಸಹದೇವರು ಜನಿಸಿದರು (37-38). ಇತ್ತಲಾಗಿ ಶ್ರುತದೇವಳನ್ನು ಕಾರೂಷಾಧಿಪತಿಯಾದ ವೃದ್ಧಧರ್ಮನು ವಿವಾಹವಾದನು. ಇವಳಲ್ಲಿ ದಂತವಕ್ರನೆಂಬ ಮಹಾಸುರನು ಹುಟ್ಟಿದನು. ಶ್ರುತಕೀರ್ತಿಯನ್ನು ಕೇಕಯರಾಜನು ಮದುವೆಯಾಗಲು, ಅವಳಲ್ಲಿ ಕೇಕಯರಾಜನಿಗೆ ಸಂತರ್ದನನೇ ಮೊದಲಾದ ಐವರು ಪುತ್ರರು ಜನಿಸಿದರು (39-42). ಅವಂತೀರಾಜನಿಗೆ ರಾಜಾಧಿದೇವಿಯಲ್ಲಿ ವಿಂದ, ಅನುವಿಂದ ರೆಂಬಿಬ್ಬರು ಹುಟ್ಟಿದರು. ಚೇದಿರಾಜನಾದ ದಮಘೋಷನು ಶ್ರುತಶ್ರವಸ್ಸನ್ನು ವಿವಾಹವಾದನು. ಅವಳಲ್ಲಿ ದಮಘೋಷನಿಗೆ ಶಿಶುಪಾಲನು ಜನಿಸಿದನು. ಈ ಶಿಶುಪಾಲನು ಪೂರ್ವಜನ್ಮದಲ್ಲಿ ಮಹಾಪರಾಕ್ರಮಿಯೂ ದೈತ್ಯರಿಗೆ

**ದೈತ್ಯಾನಾಮಾದಿಪುರುಷೋ ಹಿರಣ್ಯಕಶಿಪುರಭವತ್ ॥ 46 ॥ ಯಶ್ಚ ಭಗವತಾ ಸಕಲಲೋಕಗುರುಣಾ ನರಸಿಂಹೇನ ಘಾತಿತಃ ॥ 47 ॥ ಪುನರಪಿ ಅಕ್ಷಯವೀರ್ಯಶೌರ್ಯಸಂಪತ್ಪರಾಕ್ರಮಗುಣಸ್ಸಮಾಕ್ರಾಂತ-ಸಕಲತ್ರೈಲೋಕ್ಯೇಶ್ವರಪ್ರಭಾವೋ ದಶಾನನೋ ನಾಮಾಭೂತ್ ॥ 48 ॥ ಬಹುಕಾಲೋಪಭುಕ್ತಭಗವತ್ಸಕಾಶಾವಾಪ್ತ ಶರೀರಪಾತೋದ್ಭವಪುಣ್ಯ-ಫಲೋ ಭಗವತಾ ರಾಘವರೂಪಿಣಾ ಸೋಽಪಿ ನಿಧನಮುಪಪಾದಿತಃ ॥ 49 ॥ ಪುನಶ್ಚೇದಿರಾಜಸ್ಯ ದಮಘೋಷಸ್ಯಾತ್ಮಜಶ್ಶಿಶುಪಾಲನಾಮಾ-ಭವತ್ ॥ 50 ॥ ಶಿಶುಪಾಲತ್ವೇಽಪಿ ಭಗವತೋ ಭೂಭಾರಾವತಾರಣಾ-ಯಾವತೀರ್ಣಾಂಶಸ್ಯ ಪುಂಡರೀಕನಯನಾಖ್ಯಸ್ಯೋಪರಿ ದ್ವೇಷಾನು-ಬಂಧಮತಿತರಾಂಚಕಾರ ॥ 51 ॥ ಭಗವತಾ ಚ ಸ ನಿಧನಮುಪನೀತ-ಸ್ತತ್ರೈವ ಪರಮಾತ್ಮಭೂತೇ ಮನಸ ಏಕಾಗ್ರತಯಾ ಸಾಯುಜ್ಯಮವಾಪ**

---

ಮೊದಲಿಗನೂ ಆದ ಹಿರಣ್ಯಕಶಿಪುವಾಗಿದ್ದನು (43-46). ಆ ಹಿರಣ್ಯಕಶಿಪುವನ್ನು ಸಕಲಲೋಕಗುರುವಾದ ಭಗವಂತನು ನರಸಿಂಹಾವತಾರದಿಂದ ಸಂಹರಿಸಿದ್ದನು. ಮತ್ತೆ ಆ ಹಿರಣ್ಯಕಶಿಪು ಅಕ್ಷಯವಾದ ವೀರ್ಯ, ಶೌರ್ಯ, ಸಂಪತ್, ಪರಾಕ್ರಮಗುಣಗಳಿಂದ ಯುಕ್ತನಾಗಿ ತ್ರಿಲೋಕಾಧಿಪತಿ ದೇವೇಂದ್ರನಿಗೆ ಸಮಾನವಾದ ಪ್ರಭಾವದಿಂದ ಕೂಡಿ, ರಾವಣನಾಗಿ ಹುಟ್ಟಿದನು. (47-48). ಹಿಂದೆ ಭಗವಂತನಿಂದ ಹತನಾದ ಕಾರಣ ಆತನಿಗೆ ಮಹತ್ತರವಾದ ಪುಣ್ಯವು ಲಭಿಸಿತ್ತು. ಬಹುಕಾಲ ಆ ಪುಣ್ಯದ ಫಲವನ್ನು ಅನುಭವಿಸಿದ ಮೇಲೆ ರಾವಣನೂ ಸಹ ಶ್ರೀರಾಮಾವತಾರವನ್ನು ತಾಳಿದ ಭಗವಂತನಿಂದ ಹತನಾದನು. ಮತ್ತೆ ಶಿಶುಪಾಲನೆಂಬ ಹೆಸರಿನಿಂದ ಆತನೇ ಚೇದಿರಾಜನಾದ ದಮಘೋಷನ ಪುತ್ರನಾಗಿ ಹುಟ್ಟಿದನು (49-50). ಶಿಶುಪಾಲನಾಗಿ ಹುಟ್ಟಿದಾಗಲೂ ಸಹ ಆತನು ಭೂಭಾರವನ್ನಿಳಿಸಲು ಅವತರಿಸಿದ ಪುಂಡರೀಕಾಕ್ಷನಾದ ಭಗವಾನ್ ಶ್ರೀಕೃಷ್ಣನಲ್ಲಿ ಅತ್ಯಂತ ದ್ವೇಷಬುದ್ಧಿಯನ್ನು ತಳೆದಿದ್ದನು. ಕಡೆಗೆ ಭಗವಂತನಿಂದ ಅವನು ಹತನಾದಾಗಲೂ ಆ ಪರಮಾತ್ಮನಲ್ಲಿ ಮನಸ್ಸು ಏಕಾಗ್ರವಾಗಿ ನಿಂತುದರಿಂದ (ದ್ವೇಷಮಾಡಿದರೂ) ಪರಮಾತ್ಮನಲ್ಲಿ ಸಾಯುಜ್ಯವನ್ನು ಪಡೆದನು (51-52).

**॥ 52 ॥ ಭಗವಾನ್ ಯದಿ ಪ್ರಸನ್ನೋ ಯಥಾಭಿಲಷಿತಂ ದದಾತಿ ತಥಾ ಅಪ್ರಸನ್ನೋಽಪಿ ನಿಘ್ನನ್ ದಿವ್ಯಮನುಪಮಂ ಸ್ಥಾನಂ ಪ್ರಯಚ್ಛತಿ ॥ 53 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಚತುರ್ದಶೋಽಧ್ಯಾಯಃ

---

ಮೈತ್ರೇಯ, ಭಗವಂತನು ಪ್ರಸನ್ನನಾದರೆ ಹೇಗೆ ಅಭೀಷ್ಟವನ್ನು ದಯಪಾಲಿಸುವನೋ ಹಾಗೆ ಕ್ರುದ್ಧನಾಗಿ ಕೊಂದರೂ ಸಹ ದಿವ್ಯವೂ ಅನುಪಮವೂ ಆದ ಉತ್ತಮ ಸ್ಥಾನವನ್ನು ಅನುಗ್ರಹಿಸುತ್ತಾನೆ (53).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.



## ಪಂಚದಶೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಹಿರಣ್ಯಕಶಿಪುತ್ವೇ ಚ ರಾವಣತ್ವೇ ಚ ವಿಷ್ಣುನಾ।**
**ಅವಾಪ ನಿಹತೋ ಭೋಗಾನಪ್ರಾಪ್ಯಾನಮರೈರಪಿ॥** 1

**ನ ಲಯಂ ತತ್ರ ತೇನೈವ ನಿಹತಃ ಸ ಕಥಂ ಪುನಃ।**
**ಸಂಪ್ರಾಪ್ತಃ ಶಿಶುಪಾಲತ್ವೇ ಸಾಯುಜ್ಯಂ ಶಾಶ್ವತೇ ಹರೌ॥** 2

**ಏತದಿಚ್ಛಾಮ್ಯಹಂ ಶ್ರೋತುಂ ಸರ್ವಧರ್ಮಭೃತಾಂ ವರ।**
**ಕೌತೂಹಲಪರೇಣೈತತ್ಪೃಷ್ಟೋ ಮೇ ವಕ್ತುಮರ್ಹಸಿ॥** 3

*ಶ್ರೀಪರಾಶರ ಉವಾಚ:*

**ದೈತ್ಯೇಶ್ವರಸ್ಯ ವಧಾಯಾಖಿಲಲೋಕೋತ್ಪತ್ತಿಸ್ಥಿತಿವಿನಾಶಕಾರಿಣಾ**

---

## ಅಧ್ಯಾಯ 15

ಶಿಶುಪಾಲನು ಶ್ರೀಹರಿಯಲ್ಲಿ ಸಾಯುಜ್ಯವನ್ನು ಪಡೆದುದಕ್ಕೆ ಕಾರಣ.
ವಸುದೇವನ ಸಂತತಿ.

ಆಗ ಮೈತ್ರೇಯರು ಪ್ರಶ್ನೆ ಮಾಡಿದರು: "ಭಗವನ್, ಆತನು ಹಿರಣ್ಯಕಶಿಪುವಾದಾಗಲೂ ರಾವಣನಾದಾಗಲೂ ವಿಷ್ಣುವಿನಿಂದಲೇ ಹತನಾದನಷ್ಟೆ. ಆಗ ಆತನಿಗೆ ದೇವದುರ್ಲಭವಾದ ಭೋಗಗಳು ದೊರತವೇ ಹೊರತು ಸಾಯುಜ್ಯವು ಲಭಿಸಲಿಲ್ಲ. ಆತನೇ ಶಿಶುಪಾಲನಾಗಿ ಹುಟ್ಟಿದಾಗ ಆ ವಿಷ್ಣುವಿನಿಂದಲೇ ಹತನಾಗಿದ್ದಾನೆ. ಆಗ ಮಾತ್ರ ಅವನಿಗೆ ಶಾಶ್ವತನಾದ ಶ್ರೀಹರಿಯಲ್ಲಿ ಸಾಯುಜ್ಯವು ದೊರತದ್ದು ಹೇಗೆ? (1-2). ಧರ್ಮಜ್ಞರಲ್ಲಿ ಶ್ರೇಷ್ಠರಾದ ಮುನಿಗಳೇ, ಇದನ್ನು ಕೇಳಲು ನಾನು ಬಯಸುತ್ತಿದ್ದೇನೆ. ಕೇವಲ ಕುತೂಹಲದಿಂದ ಈ ಪ್ರಶ್ನೆಯನ್ನು ಮಾಡಿದ್ದೇನೆ. ಹೇಳೋಣವಾಗಬೇಕು". ಪರಾಶರಮುನಿಗಳು ಹೇಳಿದರು: ಮೈತ್ರೇಯ, ಮೊದಲು ದೈತ್ಯೇಶ್ವರನಾದ ಹಿರಣ್ಯಕಶಿಪುವಿನ ಸಂಹಾರಕ್ಕಾಗಿ ಸಕಲಲೋಕಗಳ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಕರ್ತನಾದ

**ಪೂರ್ವಂ ತನುಗ್ರಹಣಂ ಕುರ್ವತಾ ನೃಸಿಂಹರೂಪಮಾವಿಷ್ಕೃತಮ್ ॥ 4 ॥ ತತ್ರ ಚ ಹಿರಣ್ಯಕಶಿಪೋರ್ವಿಷ್ಣುರಯಮಿತ್ಯೇತನ್ನ ಮನಸ್ಯಭೂತ್ ॥ 5 ॥ ನಿರತಿಶಯಪುಣ್ಯಸಮುದ್ಭೂತಮೇತತ್ಸತ್ತ್ವಜಾತಮಿತಿ ॥ 6 ॥ ರಜ-ಉದ್ರೇಕಪ್ರೇರಿತೈಕಾಗ್ರಮತಿಸ್ತದ್ಭಾವನಾ ಯೋಗಾತ್ತತೋಽವಾಪ್ತವಧ-ಹೇತುಕೀಂ ನಿರತಿಶಯಾಮೇವಾಖಿಲ ತ್ರೈಲೋಕ್ಯಾಧಿಕ್ಯಧಾರಿಣೀಂ ದಶಾನನತ್ವೇ ಭೋಗಸಂಪದಮವಾಪ ॥ 7 ॥ ನ ತು ಸ ತಸ್ಮಿನ್ನನಾದಿ-ನಿಧನೇ ಪರಬ್ರಹ್ಮಭೂತೇ ಭಗವತ್ಯನಾಲಂಬಿನಿ ಕೃತೇ ಮನಸಸ್ತಲ್ಲಯ-ಮವಾಪ ॥ 8 ॥ ಏವಂ ದಶಾನನತ್ವೇಽಪ್ಯನಂಗಪರಾಧೀನತಯಾ ಜಾನಕೀ-ಸಮಾಸಕ್ತಚೇತಸೋ ಭಗವತಾ ದಾಶರಥಿರೂಪಧಾರಿಣಾ ಹತಸ್ಯ ತದ್ರೂಪದರ್ಶನಮೇವಾಸೀತ್ ನಾಯಮಚ್ಯುತ ಇತ್ಯಾಸಕ್ತಿರ್ವಿಪ-ದ್ಯತೋಽಂತಃಕರಣೇ ಮಾನುಷಬುದ್ಧಿರೇವ ಕೇವಲಮಸ್ಯಾಭೂತ್ ॥ 9 ॥**

---

ಶ್ರೀಹರಿಯು ನೃಸಿಂಹರೂಪವನ್ನು ಪ್ರಕಟಿಸಿದನು (3-4). ಆ ಸಮಯದಲ್ಲಿ ಹಿರಣ್ಯಕಶಿಪುವಿಗೆ 'ಈತನು ವಿಷ್ಣು'ವೆಂಬುದು ಮನಸ್ಸಿನಲ್ಲಿ ಹೊಳೆಯಲಿಲ್ಲ. 'ನಿರತಿಶಯವಾದ ಪುಣ್ಯದಿಂದ ಉದ್ಭವಿಸಿದ ಒಂದು ಪ್ರಾಣಿ ಇದು' ಎಂದು ಮಾತ್ರ ಅವನ ಮನಸ್ಸಿಗೆ ತೋರಿತ್ತು (5-6). ರಜೋಗುಣದ ಉದ್ರೇಕದಿಂದ ಏಕಾಗ್ರಬುದ್ಧಿಯು ವಿಪರೀತವಾಗಿ ಪ್ರೇರಿತವಾದ ಕಾರಣ ಅನ್ಯಥಾಭಾವನೆ ಯುಂಟಾಗಿತ್ತು. ಆದರೆ ವಿಷ್ಣುವಿನಿಂದ ಮರಣವುಂಟಾದನಿಮಿತ್ತ ಅವನು ರಾವಣನಾಗಿ ಜನಿಸಿದಾಗ ನಿರತಿಶಯವೂ ಸಮಸ್ತಲೋಕಗಳಿಗೆ ಅಧಿಕವೂ ಆದ ಭೋಗಸಂಪತ್ತಿಯು ಆತನಿಗೆ ದೊರಕಿತು (7). ಅನಾದಿನಿಧನನೂ ಪರಬ್ರಹ್ಮನೂ ಆದ ಭಗವಂತನಲ್ಲಿ ಹಿರಣ್ಯಕಶಿಪುವಿನ ಮನಸ್ಸು ನೆಲಸದೆ ಹೋದ್ದರಿಂದ ಭಗವಂತನಲ್ಲಿ ಸಾಯುಜ್ಯವು ಅವನಿಗೆ ಲಭಿಸಲಿಲ್ಲ (8). ಹೀಗೆಯೇ ಅವನು ದಶಕಂಠನಾಗಿ ಜನಿಸಿದಾಗಲೂ ಅನಂಗಪರವಶನಾಗಿ ಜಾನಕಿಯಲ್ಲಿ ಆಸಕ್ತಿ ಯನ್ನು ತಳೆದಿದ್ದನು. ಆದ್ದರಿಂದ ಭಗವಂತನು ದಶರಥಪುತ್ರನ ರೂಪವನ್ನು ಧರಿಸಿ ಬಂದು ಸಂಹರಿಸಿದಾಗ, ರಾವಣನಿಗೆ ಇವನು ದಶರಥಪುತ್ರನೆಂದೂ ಮನುಷ್ಯನೆಂದೂ ಬುದ್ಧಿ ಇದ್ದಿತೇ ಹೊರತು ಅಚ್ಯುತನೆಂಬ ಬುದ್ಧಿ ಇರಲಿಲ್ಲ. ಸಾಯುವಾಗಲೂ ಅವನ ಅಂತಃಕರಣದಲ್ಲಿ ಶ್ರೀರಾಮನು ಕೇವಲ ಮನುಷ್ಯ

**ಪುನರಪ್ಯಚ್ಯುತವಿನಿಪಾತಮಾತ್ರಫಲಮಖಿಲಭೂಮಂಡಲಶ್ಲಾಘ್ಯಚೇದಿ-ರಾಜಕುಲೇ ಜನ್ಮ ಅವ್ಯಾಹತೈಶ್ವರ್ಯಂ ಶಿಶುಪಾಲತ್ವೇಽಪ್ಯವಾಪ ॥ 10 ॥ ತತ್ರ ತ್ವಖಿಲಾನಾಮೇವ ಸ ಭಗವನ್ನಾಮ್ನಾಂ ತ್ವಂಕಾರಕಾರಣಮಭವತ್ ॥ 11 ॥ ತತಶ್ಚ ತತ್ಕಾಲಕೃತಾನಾಂ ತೇಷಾಮಶೇಷಾಣಾಮೇವಾಚ್ಯುತ-ನಾಮ್ನಾಮನವರತಮನೇಕಜನ್ಮಸು ವರ್ಧಿತವಿದ್ವೇಷಾನುಬಂಧಿಚಿತ್ತೋ ವಿನಿಂದನಸಂತರ್ಜನಾದಿಷೂಚ್ಚಾರಣಮಕರೋತ್ ॥ 12 ॥ ತಚ್ಚ ರೂಪ-ಮುತ್ಫುಲ್ಲಪದ್ಮದಲಾಮಲಾಕ್ಷಮತ್ಯುಜ್ಜ್ವಲಪೀತವಸ್ತ್ರಧಾರ್ಯಮಲಕಿರೀ-ಟಕೇಯೂರಹಾರಕಟಕಾದಿಶೋಭಿತಮುದಾರಚತುರ್ಬಾಹುಶಂಖಚಕ್ರ-ಗದಾಧರಮತಿಪ್ರರೂಢವೈರಾನುಭಾವಾದಟನಭೋಜನಸ್ನಾನಾಸನಶಯ-ನಾದಿಷ್ವಶೇಷಾವಸ್ಥಾಂತರೇಷು ನಾನ್ಯತ್ರೋಪಯಯಾವಸ್ಯ ಚೇತಸಃ ॥ 13 ॥**

---

ನೆಂಬ ಬುದ್ಧಿಯೇ ಇದ್ದಿತು (9). ಆಮೇಲೆ ಶಿಶುಪಾಲನಾದಾಗಲೂ, ಹಿಂದೆ ಅಚ್ಯುತನ ಕೈಯಿಂದ ಸಂಹಾರವಾದುದಕ್ಕೆ ಫಲವಾಗಿ, ಅಖಿಲ ಭೂಮಂಡಲ ಶ್ಲಾಘ್ಯವಾದ ಚೇದಿರಾಜಕುಲದಲ್ಲಿ ಜನ್ಮವನ್ನೂ ಅಖಂಡೈಶ್ವರ್ಯವನ್ನೂ ಪಡೆದನು. ಆ ಜನ್ಮದಲ್ಲಿ ಭಗವಂತನ ಸಕಲನಾಮಾವಳಿಯಲ್ಲಿಯೂ ತುಚ್ಛತೆಯ ಭಾವನೆಯನ್ನು ತಳೆದನು. (10-11). ಅಚ್ಯುತನ ವಿಷಯವಾಗಿ ಅನೇಕ ಜನ್ಮಗಳಿಂದ ಬೆಳೆದ ವಿದ್ವೇಷದ ಸಂಸ್ಕಾರವು ಶಿಶುಪಾಲನ ಚಿತ್ತದಲ್ಲಿ ನೆಲೆಸಿತ್ತು. ಅಚ್ಯುತನಿಗೆ ಆ ಸಮಯದಲ್ಲಿ (ಪೂತನಾಸಂಹಾರಾದಿ) ಲೀಲೆಗಳಿಂದ ಪ್ರಾಪ್ತವಾದ ಬಿರುದಿನ ನಾಮಾವಳಿಗಳನ್ನು ಶಿಶುಪಾಲನು ತೆಗಳುವಾಗ ಬಯ್ಯುವಾಗ ಆ ನಾಮಗಳನ್ನು ಉಚ್ಚರಿಸುತ್ತಿದ್ದನು (12). ಆತನಿಗೆ ಶ್ರೀಕೃಷ್ಣನಲ್ಲಿ ಅತಿಶಯವಾದ ವೈರವು ರೂಢಿಸಿಹೋದ್ದರಿಂದ, ತಾನು ತಿರುಗಾಡುವಾಗ ಊಟಮಾಡುವಾಗ ಸ್ನಾನಮಾಡುವಾಗ ಕುಳಿತಾಗ ಮಲಗಿದಾಗ—ಎಲ್ಲ ಸಂದರ್ಭಗಳಲ್ಲಿಯೂ ಅವನ ಮನಸ್ಸಿಗೆ ಶ್ರೀಕೃಷ್ಣನ ರೂಪವೇ ಕಟ್ಟಿನಿಲ್ಲುತ್ತಿತ್ತು. ಅರಳಿದ ತಾವರೆಯ ದಳದಂತೆ ಸ್ವಚ್ಛವಾದ ನೇತ್ರವುಳ್ಳ, ಅತ್ಯುಜ್ಜ್ವಲವಾದ ಪೀತಾಂಬರವನ್ನುಟ್ಟು ಹೊಳೆಯುವ ಕಿರೀಟ-ಕೇಯೂರಹಾರ-ಕಟಕಾದ್ಯಾಭರಣಗಳಿಂದ ಶೋಭಿಸುವ, ಚತುರ್ಭುಜವುಳ್ಳ, ಶಂಖಚಕ್ರ ಗದೆಗಳನ್ನು ಧರಿಸಿದ ಶ್ರೀಕೃಷ್ಣನ ರೂಪವಲ್ಲದೆ ಇನ್ನೊಂದು ವಸ್ತು ಅವನ ಮನಸ್ಸಿನೆದುರಿಗೆ ಸುಳಿಯುತ್ತಿರಲಿಲ್ಲ

**ತತಸ್ತಮೇವಾಕ್ರೋಶೇಷೂಚ್ಚಾರಯಂಸ್ತಮೇವ ಹೃದಯೇನ ಧಾರಯ-ನ್ನಾತ್ಮವಧಾಯ ಯಾವದ್ಭಗವದ್ಧಸ್ತಚಕ್ರಾಂಶುಮಾಲೋಜ್ಜ್ವಲಮಕ್ಷಯ-ತೇಜಸ್ಸ್ವರೂಪಂ ಬ್ರಹ್ಮಭೂತಮವಗತದ್ವೇಷಾದಿದೋಷಂ ಭಗವಂತ-ಮದ್ರಾಕ್ಷೀತ್ ॥ 14 ॥ ತಾವಚ್ಚ ಭಗವಚ್ಚಕ್ರೇಣಾಶು ವ್ಯಾಪಾದಿತಸ್ತತ್ಸ್ಮರಣ-ದಗ್ಧಾಖಿಲಾಘಸಂಚಯೋ ಭಗವತಾಂತಮುಪನೀತಸ್ತಸ್ಮಿನ್ನೇವ ಲಯ-ಮುಪಯಯೌ ॥ 15 ॥ ಏತತ್ತವಾಖಿಲಂ ಮಯಾಭಿಹಿತಮ್ ॥ 16 ॥ ಅಯಂ ಹಿ ಭಗವಾನ್ ಕೀರ್ತಿತಶ್ಚ ಸಂಸ್ಮೃತಶ್ಚ ದ್ವೇಷಾನುಬಂಧೇನಾಪಿ ಅಖಿಲಸುರಾಸುರಾದಿದುರ್ಲಭಂ ಫಲಂ ಪ್ರಯಚ್ಛತಿ ಕಿಮುತ ಸಮ್ಯಗ್ಭಕ್ತಿ-ಮತಾಮಿತಿ ॥ 17 ॥ ವಸುದೇವಸ್ಯ ತ್ವಾನಕದುಂದುಭೇಃ ಪೌರವೀರೋ-ಹಿಣೀಮದಿರಾಭದ್ರಾದೇವಕೀಪ್ರಮುಖಾ ಬಹ್ವ್ಯಃ ಪತ್ನ್ಯೋಽಭವನ್ ॥ 18 ॥ ಬಲಭದ್ರಶಠಸಾರಣದುರ್ಮದಾದೀನ್ ಪುತ್ರಾನ್ ರೋಹಿಣ್ಯಾ-**

---

(13). ಹೀಗೆ ಅನವರತವೂ ಬಯ್ಯುವಾಗ ಅಚ್ಯುತನ ನಾಮಗಳನ್ನುಚ್ಚರಿಸುತ್ತ , (ವೈರಾನುಬಂಧದಿಂದ) ಅವನನ್ನೇ ಹೃದಯದಲ್ಲಿ ನೆನೆಯುತ್ತ ಇದ್ದ ಶಿಶುಪಾಲನು, ತನ್ನ ವಧೆಗೋಸ್ಕರ ಭಗವಂತನು ಚಕ್ರವನ್ನೆತ್ತಿದಾಗ, ಚಕ್ರದ ತೇಜೋಮಾಲೆಯಿಂದ ಉಜ್ಜ್ವಲನೂ, ಅಕ್ಷಯತೇಜಃಸ್ವರೂಪನೂ, ದ್ವೇಷಾದಿದೋಷರಹಿತನೂ, ಪರಬ್ರಹ್ಮನೂ ಆದ ಭಗವಂತನನ್ನು ಕಂಡನು (14). ಒಡನೆಯೇ ಭಗವಂತನ ಚಕ್ರದಿಂದ ಹತನಾದನು. ಅಚ್ಯುತನನ್ನು ಸದಾ ಸ್ಮರಿಸುತ್ತಿದ್ದುದರಿಂದ ಶಿಶುಪಾಲನ ಸಕಲಪಾಪರಾಶಿಯೂ ಸುಟ್ಟು ಬೂದಿಯಾಯಿತು. ಭಗವಂತನಿಂದ ಮರಣವಾದ್ದರಿಂದ ಶಿಶುಪಾಲನು ಅವನಲ್ಲಿ ಲಯವನ್ನೈದಿದನು (15). ಮೈತ್ರೇಯ, ಈ ರಹಸ್ಯವನ್ನೆಲ್ಲ ನಿನಗೆ ಹೇಳಿದ್ದೇನೆ. ದ್ವೇಷದಿಂದಾದರೂ ಭಗವಂತನ ನಾಮವನ್ನು ಉಚ್ಚರಿಸಿದರೆ, ಸ್ಮರಿಸಿದರೆ, ಸಮಸ್ತ ಸುರಾಸುರರಿಗೂ ದುರ್ಲಭವಾದ ಫಲವನ್ನು ಆತನು ಅನುಗ್ರಹಿಸುತ್ತಾನೆ. ಹೀಗಿರುವಾಗ ಆತನ ಅಂತರಂಗ ಭಕ್ತರ ವಿಷಯವಾಗಿ ಹೇಳತಕ್ಕದ್ದೇನಿದೆ? (16-17). ಆನಕದುಂದುಭಿಯೆಂದು ಖ್ಯಾತನಾದ ವಸುದೇವನಿಗೆ ಪೌರವೀ, ರೋಹಿಣೀ, ಮದಿರಾ, ಭದ್ರಾ, ದೇವಕೀ—ಮುಂತಾದ ಹಲವು ಪತ್ನಿಯರಿದ್ದರು. ರೋಹಿಣಿಯಲ್ಲಿ ಆತನು ಬಲಭದ್ರ, ಶಠ, ಸಾರಣ, ದುರ್ಮದ—ಮೊದಲಾದ ಪುತ್ರರನ್ನು

**ಮಾನಕದುಂದುಭಿರುತ್ಪಾದಯಾಮಾಸ ॥ 19 ॥ ಬಲದೇವೋಽಪಿ ರೇವತ್ಯಾಂ ವಿಶಠೋಲ್ಮುಕೌ ಪುತ್ರಾವಜನಯತ್ ॥ 20 ॥ ಸಾರ್ಷ್ಟಿ-ಮಾರ್ಷ್ಟಿಶಿಶುಸತ್ಯಧೃತಿಪ್ರಮುಖಾಃ ಸಾರಣಾತ್ಮಜಾಃ ॥ 21 ॥ ಭದ್ರಾಶ್ವ-ಭದ್ರಬಾಹುದುರ್ದಮಭೂತಾದ್ಯಾ ರೋಹಿಣ್ಯಾಃ ಕುಲಜಾಃ ॥ 22 ॥ ನಂದೋಪನಂದಕೃತಕಾದ್ಯಾ ಮದಿರಾಯಾಸ್ತನಯಾಃ ॥ 23 ॥ ಭದ್ರಾಯಾ-ಶ್ಚೋಪನಿಧಿಗದಾದ್ಯಾಃ ॥ 24 ॥ ವೈಶಾಲ್ಯಾಂ ಚ ಕೌಶಿಕಮೇಕಮೇವಾ-ಜನಯತ್ ॥ 25 ॥ ಆನಕದುಂದುಭೇರ್ದೇವಕ್ಯಾಮಪಿ-ಕೀರ್ತಿಮತ್ಸು-ಷೇಣೋದಾಯುಭದ್ರಸೇನಋಜುದಾಸಭದ್ರದೇವಾಖ್ಯಾಃ ಷಟ್ ಪುತ್ರಾ ಜಜ್ಞಿರೇ ॥ 26 ॥ ತಾಂಶ್ಚ ಸರ್ವಾನೇವ ಕಂಸೋ ಘಾತಿತವಾನ್ ॥ 27 ॥ ಅನಂತರಂ ಚ ಸಪ್ತಮಂ ಗರ್ಭಮರ್ಧರಾತ್ರೇ ಭಗವತ್ಪ್ರಹಿತಾ ಯೋಗ-ನಿದ್ರಾ ರೋಹಿಣ್ಯಾ ಜಠರಮಾಕೃಷ್ಯ ನೀತವತೀ ॥ 28 ॥ ಕರ್ಷಣಾಚ್ಚಾಸಾ-ವಪಿ ಸಂಕರ್ಷಣಾಖ್ಯಾಮಗಮತ್ ॥ 29 ॥ ತತಶ್ಚ ಸಕಲಜಗನ್ಮಹಾ-**

---

ಪಡೆದನು (18-19). ಅವರಲ್ಲಿ ಬಲದೇವನು ರೇವತಿಯಲ್ಲಿ ವಿಶಠ, ಉಲ್ಮುಕ—ಎಂಬ ಇಬ್ಬರು ಪುತ್ರರನ್ನು ಪಡೆದನು. ಸಾರಣನಿಗೆ ಸಾರ್ಷ್ಟಿ, ಮಾರ್ಷ್ಟಿ, ಶಿಶು, ಸತ್ಯ, ಧೃತಿ—ಮೊದಲಾದ ಪುತ್ರರಾದರು. ಭದ್ರಾಶ್ವ, ಭದ್ರಬಾಹು, ದುರ್ದಮ, ಭೂತ—ಮುಂತಾದವರೂ ಸಹ ರೋಹಿಣಿಯ ಕುಲದಲ್ಲಿ ಜನಿಸಿದರು (20-22). ನಂದ, ಉಪನಂದ, ಕೃತಕ—ಮೊದಲಾದವರು ಮದಿರೆಯ ಮಕ್ಕಳು. ಉಪನಿಧಿ, ಗದ—ಮೊದಲಾದವರು ಭದ್ರೆಯ ಮಕ್ಕಳು. ವೈಶಾಲಿಯಲ್ಲಿ (ಪೌರವಿಯಲ್ಲಿ?) ವಸುದೇವನು ಕೌಶಿಕನೆಂಬ ಒಬ್ಬ ಪುತ್ರನನ್ನು ಮಾತ್ರ ಪಡೆದನು (23-25). ಆನಕದುಂದುಭಿಗೆ ದೇವಕಿಯಲ್ಲಿ ಕೀರ್ತಿಮಾನ್, ಸುಷೇಣ, ಉದಾಯು, ಭದ್ರಸೇನ, ಋಜುದಾಸ, ಮತ್ತು ಭದ್ರದೇವ—ಎಂಬ ಆರು ಮಂದಿ ಪುತ್ರರು ಜನಿಸಿದರು. ಅವರೆಲ್ಲರನ್ನೂ ಕಂಸನು ಕೊಂದುಹಾಕಿದನು (26-27). ಅನಂತರ ಸಂಭವಿಸಿದ ದೇವಕಿಯ ಏಳನೆಯ ಗರ್ಭವನ್ನು ಭಗವಂತ ನಿಂದ ಪ್ರೇರಿತಳಾದ ಯೋಗನಿದ್ರೆಯು ಸೆಳೆದುಕೊಂಡು ಹೋಗಿ ರೋಹಿಣಿಯ ಉದರದಲ್ಲಿ ಸೇರಿಸಿದಳು. ಹೀಗೆ ಸೆಳೆದದ್ದರಿಂದ (ಕರ್ಷಣಮಾಡಿದ್ದರಿಂದ) ಆ ಗರ್ಭದಲ್ಲಿ ಜನಿಸಿದ ಬಲಭದ್ರನು ಸಂಕರ್ಷಣನೆಂಬ ಹೆಸರನ್ನು ಪಡೆದನು.

**ತರುಮೂಲಭೂತೋ ಭೂತಭವಿಷ್ಯದಾದಿಸಕಲಸುರಾಸುರಮುನಿಜನಮನಸಾಮಪ್ಯಗೋಚರೋऽಬ್ಜಭವಪ್ರಮುಖೈರನಲಮುಖೈಃ ಪ್ರಣಮ್ಯಾವನಿಭಾರಹರಣಾಯ ಪ್ರಸಾದಿತೋ ಭಗವಾನನಾದಿಮಧ್ಯನಿಧನೋ ದೇವಕೀಗರ್ಭಮವತತಾರ ವಾಸುದೇವಃ ॥ 30 ॥ ತತ್ಪ್ರಸಾದವಿವರ್ಧಮಾನೋರುಮಹಿಮಾ ಚ ಯೋಗನಿದ್ರಾ ನಂದಗೋಪಪತ್ನ್ಯಾ ಯಶೋದಾಯಾ ಗರ್ಭಮಧಿಷ್ಠಿತವತೀ ॥ 31 ॥ ಸುಪ್ರಸನ್ನಾದಿತ್ಯಚಂದ್ರಾದಿಗ್ರಹಮವ್ಯಾಲಾದಿಭಯಂ ಸ್ವಸ್ಥಮಾನಸಮಖಿಲಮೇವೈತಜ್ಜಗದಪಾಸ್ತಾಧರ್ಮಮಭವತ್ತಸ್ಮಿಂಶ್ಚ ಪುಂಡರೀಕನಯನೇ ಜಾಯಮಾನೇ ॥ 32 ॥ ಜಾತೇನ ಚ ತೇನಾಖಿಲಮೇವೈತತ್ಸನ್ಮಾರ್ಗವರ್ತಿ ಜಗದಕ್ರಿಯತ ॥ 33 ॥ ಭಗವತೋऽಪ್ಯತ್ರ ಮರ್ತ್ಯಲೋಕೇऽವತೀರ್ಣಸ್ಯ ಷೋಡಶಸಹಸ್ರಾಣ್ಯೇಕೋತ್ತರಶತಾಧಿಕಾನಿ ಭಾರ್ಯಾಣಾಮಭವನ್ ॥ 34 ॥ ತಾಸಾಂ ಚ ರುಕ್ಮಿಣೀಸತ್ಯಭಾಮಾಜಾಂಬವತೀಚಾರುಹಾಸಿನೀಪ್ರಮುಖಾ ಹ್ಯಷ್ಟೌ**

---

(28-29). ತರುವಾಯ, ಸಂಪೂರ್ಣ ವಿಶ್ವವೆಂಬ ಮಹಾವೃಕ್ಷಕ್ಕೆ ಮೂಲಭೂತನೂ, ಹಿಂದೆ ಇದ್ದ ಮುಂದೆ ಇರಲಿರುವ ಈಗ ಇರುವ ಸಕಲಸುರಾಸುರಮುನಿಗಣಗಳ ಮನಸ್ಸಿಗೆ ಕೂಡ ನಿಲುಕದವನೂ ಆದಿಮಧ್ಯಾಂತರಹಿತನೂ ಆದ ಭಗವಾನ್ ವಾಸುದೇವನು ದೇವಕಿಯ ಗರ್ಭವನ್ನು ಪ್ರವೇಶಿಸಿದನು. ಬ್ರಹ್ಮಾದಿ ದೇವತೆಗಳು ಆತನ ಬಳಿಗೆ ಹೋಗಿ ನಮಸ್ಕರಿಸಿ ಭೂಭಾರಹರಣಕ್ಕಾಗಿ ಅವತರಿಸಬೇಕೆಂದು ಪ್ರಾರ್ಥಿಸಿ ಅವನನ್ನು ಪ್ರಸನ್ನನನ್ನಾಗಿ ಮಾಡಿಕೊಂಡಿದ್ದರು (30). ವಾಸುದೇವನ ಅನುಗ್ರಹದಿಂದ ಮಹಿಮಾತಿಶಯವನ್ನು ಬೆಳೆಸಿಕೊಂಡ ಯೋಗನಿದ್ರೆಯು ನಂದಗೋಪನ ಪತ್ನಿಯಾದ ಯಶೋದೆಯ ಗರ್ಭವನ್ನು ಸೇರಿ ನಿಂತಳು. ಆ ಪುಂಡರೀಕಾಕ್ಷನು ಅವತರಿಸುವಾಗ ಸೂರ್ಯಚಂದ್ರಾದಿ ಗ್ರಹಗಳು ಸುಪ್ರಸನ್ನವಾಗಿದ್ದವು. ಸರ್ಪಾದಿ ಭಯವಿರಲಿಲ್ಲ. ಸಮಸ್ತಜಗತ್ತೂ ಅಧರ್ಮವನ್ನು ದೂರಮಾಡಿ ಶಾಂತಚಿತ್ತವಾಗಿತ್ತು. ವಾಸುದೇವನು ಅವತರಿಸಿ ನಿಖಿಲಜಗತ್ತನ್ನೂ ಸನ್ಮಾರ್ಗವರ್ತಿಯನ್ನಾಗಿ ಮಾಡಿದನು (31-33). ಈ ಮರ್ತ್ಯಲೋಕದಲ್ಲಿ ಅವತರಿಸಿದ ಭಗವಂತನಿಗೆ ಹದಿನಾರುಸಾವಿರದ ನೂರೊಂದು ಪತ್ನಿಯರಿದ್ದರು. ಅವರಲ್ಲಿ ರುಕ್ಮಿಣಿ, ಸತ್ಯಭಾಮಾ, ಜಾಂಬವತೀ,

**ಪತ್ನ್ಯಃ ಪ್ರಧಾನಾ ಬಭೂವುಃ ॥ 35 ॥ ತಾಸು ಚಾಷ್ಟಾವಯುತಾನಿ ಲಕ್ಷಂ ಚ ಪುತ್ರಾಣಾಂ ಭಗವಾನಖಿಲಮೂರ್ತಿರನಾದಿಮಾನಜನಯತ್ ॥ 36 ॥ ತೇಷಾಂ ಚ ಪ್ರದ್ಯುಮ್ನಚಾರುದೇಷ್ಣಸಾಂಬಾದಯಃ ತ್ರಯೋದಶ ಪ್ರಧಾನಾಃ ॥ 37 ॥ ಪ್ರದ್ಯುಮ್ನೋಽಪಿ ರುಕ್ಮಿಣಸ್ತನಯಾಂ ರುಕ್ಮವತೀಂ ನಾಮೋಪಯೇಮೇ ॥ 38 ॥ ತಸ್ಯಾಮನಿರುದ್ಧೋ ಜಜ್ಞೇ ॥ 39 ॥ ಅನಿ-ರುದ್ಧೋಽಪಿ ರುಕ್ಮಿಣ ಏವ ಪೌತ್ರೀಂ ಸುಭದ್ರಾಂ ನಾಮೋಪಯೇಮೇ ॥ 40 ॥ ತಸ್ಯಾಮಸ್ಯ ವಜ್ರೋ ಜಜ್ಞೇ ॥ 41 ॥ ವಜ್ರಸ್ಯ ಪ್ರತಿಬಾಹುಸ್ತಸ್ಯಾಪಿ ಸುಚಾರುಃ ॥ 42 ॥ ಏವಮನೇಕ ಶತಸಹಸ್ರಪುರುಷಸಂಖ್ಯಸ್ಯ ಯದು-ಕುಲಸ್ಯ ಪುತ್ರಸಂಖ್ಯಾ ವರ್ಷಶತೈರಪಿ ವಕ್ತುಂ ನ ಶಕ್ಯತೇ ॥ 43 ॥ ಯತೋ ಹಿ ಶ್ಲೋಕಾವಿಮಾವತ್ರ ಚರಿತಾರ್ಥೌ ॥ 44 ॥**

**ತಿಸ್ರಃ ಕೋಟ್ಯಸ್ಸಹಸ್ರಾಣಾಮಷ್ಟಾಶೀತಿಶತಾನಿ ಚ ।**
**ಕುಮಾರಾಣಾಂ ಗೃಹಾಚಾರ್ಯಾಶ್ಚಾಪಯೋಗೇಷು ಯೇ ರತಾಃ ॥ 45**

---

ಚಾರುಹಾಸಿನೀ—ಪ್ರಮುಖರಾದ ಅಷ್ಟಭಾರ್ಯೆಯರು ಪ್ರಧಾನರು* (34-35). ಅನಾದಿಯೂ ವಿಶ್ವಮೂರ್ತಿಯೂ ಆದ ಆ ಭಗವಂತನು ಎಲ್ಲ ಪತ್ನಿಯರಲ್ಲಿ ಒಟ್ಟು ಒಂದು ಲಕ್ಷದ ಎಂಬತ್ತುಸಾವಿರ ಮಕ್ಕಳನ್ನು ಪಡೆದನು. ಅವರಲ್ಲಿ ಪ್ರದ್ಯುಮ್ನ, ಚಾರುದೇಷ್ಣ, ಸಾಂಬ—ಮೊದಲಾದ ಹದಿಮೂರು ಜನರು ಮುಖ್ಯರು (36-37). ಪ್ರದ್ಯುಮ್ನನು ರುಕ್ಮಿಯ ಮಗಳಾದ ರುಕ್ಮವತಿಯೆಂಬವಳನ್ನು ಮದುವೆಯಾದನು. ಅವಳಲ್ಲಿ ಅನಿರುದ್ಧನೆಂಬ ಮಗನು ಹುಟ್ಟಿದನು. ಅನಿರುದ್ಧನು ಅದೇ ರುಕ್ಮಿಯ ಮಗನ ಮಗಳಾದ ಸುಭದ್ರೆ ಎಂಬವಳನ್ನು ವಿವಾಹವಾದನು. ಅವಳಲ್ಲಿ ಈತನಿಗೆ ವಜ್ರನೆಂಬ ಪುತ್ರನು ಜನಿಸಿದನು (38-41). ವಜ್ರನ ಮಗ ಪ್ರತಿಬಾಹು. ಆತನ ಮಗ ಸುಚಾರು. ಹೀಗೆ ಲಕ್ಷಗಟ್ಟಲೆ ಪುರುಷರಿದ್ದ ಯದುಕುಲದವರ ಪುತ್ರರ ಸಂಖ್ಯೆಯನ್ನು ಎಣಿಸಲು ನೂರುವರ್ಷಗಳಾದರೂ ಸಾಧ್ಯವಿಲ್ಲ! ಏಕೆಂದರೆ, ಈ ಎರಡು ಶ್ಲೋಕಗಳು ಅರ್ಥವತ್ತಾದವು (42-44). ಏನೆಂದರೆ, "ಯಾದವಕುಮಾರರಿಗೆ ಧನುರ್ವಿದ್ಯೆಯನ್ನು ಕಲಿಸತಕ್ಕ ಗೃಹಾಚಾರ್ಯರಸಂಖ್ಯೆ ಮೂರುಕೋಟಿ ಎಂಬತ್ತೆಂಟು ಲಕ್ಷವಾಗಿತ್ತು! ಮಹಾತ್ಮ

---

* ರುಕ್ಮಿಣೀ, ಸತ್ಯಭಾಮೆ, ಜಾಂಬವತೀ, ಕಾಳಿಂದಿ, ಮಿತ್ರವಿಂದ, ಸತ್ಯೆ, ಭದ್ರೆ, ಲಕ್ಷ್ಮಣೆ—ಎಂಬವರು ಶ್ರೀಕೃಷ್ಣನ ಅಷ್ಟಮಹಿಷಿಯರೆಂದು ಪ್ರಸಿದ್ಧಿ.

**ಸಂಖ್ಯಾನಂ ಯಾದವಾನಾಂ ಕಃ ಕರಿಷ್ಯತಿ ಮಹಾತ್ಮನಾಮ್।**
**ಯತ್ರಾಯುತಾನಾಮಯುತಲಕ್ಷೇಣಾಸ್ತೇ ಸದಾಹುಕಃ॥** 46

**ದೇವಾಸುರೇ ಹತಾ ಯೇ ತು ದೈತೇಯಾಸ್ಸುಮಹಾಬಲಾಃ।**
**ಉತ್ಪನ್ನಾಸ್ತೇ ಮನುಷ್ಯೇಷು ಜನೋಪದ್ರವಕಾರಿಣಃ॥** 47

**ತೇಷಾಮುತ್ಸಾದನಾರ್ಥಾಯ ಭುವಿ ದೇವಾ ಯದೋಃ ಕುಲೇ।**
**ಅವತೀರ್ಣಾಃ ಕುಲಶತಂ ಯತ್ರೈಕಾಭ್ಯಧಿಕಂ ದ್ವಿಜ॥** 48

**ವಿಷ್ಣುಸ್ತೇಷಾಂ ಪ್ರಮಾಣೇ ಚ ಪ್ರಭುತ್ವೇ ಚ ವ್ಯವಸ್ಥಿತಃ।**
**ನಿದೇಶಸ್ಥಾಯಿನಸ್ತಸ್ಯ ವವೃಧುಸ್ಸರ್ವಯಾದವಾಃ॥** 49

**ಇತಿ ಪ್ರಸೂತಿಂ ವೃಷ್ಣೀನಾಂ ಯಶ್ಶೃಣೋತಿ ನರಃ ಸದಾ।**
**ಸ ಸರ್ವೈಃ ಪಾತಕೈರ್ಮುಕ್ತೋ ವಿಷ್ಣುಲೋಕಂ ಪ್ರಪದ್ಯತೇ॥** 50

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಪಂಚದಶೋಽಧ್ಯಾಯಃ

---

ರಾದ ಯಾದವರ ಸಂಖ್ಯೆ ಎಷ್ಟೆಂದು ಯಾವನು ತಾನೆ ಎಣಿಸಿಯಾನು? ಯಾದವರಾಜನಾದ ಉಗ್ರಸೇನನು ಕೋಟಿ ಕೋಟಿ ಸಂಖ್ಯೆಯಲ್ಲಿದ್ದ ಯಾದವರೊಡನೆ ಸದಾ ವಿರಾಜಿಸುತ್ತಾನೆ!" (45-46). ಹಿಂದೆ ದೇವಾಸುರಸಂಗ್ರಾಮದಲ್ಲಿ ಹತರಾದ ಬಲಾಢ್ಯದೈತ್ಯರು ಜನರಿಗೆ ಉಪದ್ರವಕೊಡುತ್ತ ಮನುಷ್ಯಜನ್ಮದಲ್ಲಿ ಜನಿಸಿದ್ದರು. ಅವರನ್ನು ಸಂಹರಿಸುವುದಕ್ಕಾಗಿ ದೇವತೆಗಳು ಯದುಕುಲದಲ್ಲಿ ಅವತರಿಸಿದರು. ಮೈತ್ರೇಯ, ಯಾದವರ ಕುಲದಲ್ಲಿ ಒಟ್ಟು ನೂರೊಂದು ಕವಲುಗಳಿದ್ದವು (47-48). ಮಹಾವಿಷ್ಣುವೇ ಅವರೆಲ್ಲರಿಗೆ ಪ್ರಮಾಣಭೂತನೂ ನಿಯಂತ್ರಕನೂ ಆಗಿದ್ದನು. ಸಮಸ್ತಯಾದವರೂ ಆತನ ಆಜ್ಞೆಗೆ ಒಳಪಟ್ಟವರಾಗಿ ಬೆಳೆದರು. ಹೀಗೆ ವೃಷ್ಣಿವಂಶದವರ ಉತ್ಪತ್ತಿಪ್ರಕಾರವನ್ನು ಯಾವ ಮಾನವನು ಸದಾ ಕೇಳುತ್ತಿರುವನೋ ಅವನು ಎಲ್ಲ ಪಾತಕಗಳಿಂದಲೂ ವಿಮುಕ್ತನಾಗಿ ವಿಷ್ಣುಲೋಕವನ್ನು ಸೇರುವನು (49-50).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಹದಿನೈದನೆಯ ಅಧ್ಯಾಯ ಮುಗಿಯಿತು.



## ಷೋಡಶೋऽಧ್ಯಾಯಃ

*ಶ್ರೀಪರಾಶರ ಉವಾಚ:*

**ಇತ್ಯೇಷ ಸಮಾಸತಸ್ತೇ ಯದೋರ್ವಂಶಃ ಕಥಿತಃ॥1॥ ಅಥ ತುರ್ವಸೋರ್ವಂಶಮವಧಾರಯ॥2॥ ತುರ್ವಸೋರ್ವಹ್ನಿರಾತ್ಮಜಃ ವಹ್ನೇರ್ಭಾರ್ಗೋ ಭಾರ್ಗಾದ್ಭಾನುಸ್ತತಶ್ಚ ತ್ರಯೀಸಾನುಸ್ತಸ್ಮಾಚ್ಚ ಕರಂಧಮಸ್ತಸ್ಯಾಪಿ ಮರುತ್ತಃ॥3॥ ಸೋऽನಪತ್ಯೋऽಭವತ್॥4॥ ತತಶ್ಚ ಪೌರವಂ ದುಷ್ಯಂತಂ ಪುತ್ರಮಕಲ್ಪಯತ್॥5॥ ಏವಂ ಯಯಾತಿಶಾಪಾತ್ತದ್ವಂಶಃ ಪೌರವಮೇವ ವಂಶಂ ಸಮಾಶ್ರಿತವಾನ್॥6॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಷೋಡಶೋऽಧ್ಯಾಯಃ

---

## ಅಧ್ಯಾಯ 16

ತುರ್ವಸುವಿನ ವಂಶ.

ಪರಾಶರರು ಹೇಳಿದರು: ಮೈತ್ರೇಯ, ಈ ರೀತಿ ಸಂಕ್ಷೇಪವಾಗಿ ಯದುವಿನ ವಂಶವನ್ನು ಹೇಳಿದ್ದಾಯಿತು. ಇನ್ನು ತುರ್ವಸುವಿನ ವಂಶವೃತ್ತವನ್ನು ಕೇಳು: ತುರ್ವಸುವಿನ ಮಗ ವಹ್ನಿ. ವಹ್ನಿಯ ಮಗ ಭಾರ್ಗ. ಆತನಿಗೆ ಭಾನುವೆಂಬವನು ಜನಿಸಿದನು. ಭಾನುವಿನಿಂದ ತ್ರಯೀಸಾನುವೂ ಅವನಿಂದ ಕರಂದಮನೂ ಆತನಿಂದ ಮರುತ್ತನೂ ಹುಟ್ಟಿದರು (1-3). ಮರುತ್ತನಿಗೆ ಸಂತಾನವಿರಲಿಲ್ಲ. ಆದ್ದರಿಂದ ಅವನು ಪುರುವಂಶದ ದುಷ್ಯಂತನನ್ನು ಪುತ್ರನನ್ನಾಗಿ ಸ್ವೀಕರಿಸಿದನು. ಹೀಗೆ ಯಯಾತಿಶಾಪದಿಂದ ತುರ್ವಸುವಿನ ವಂಶವು ಪುರುವಂಶವನ್ನೇ ಆಶ್ರಯಿಸಿತು (4-6).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಹದಿನಾರನೆಯ ಅಧ್ಯಾಯ ಮುಗಿಯಿತು.



## ಸಪ್ತದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ದ್ರುಹ್ಯೋಸ್ತು ತನಯೋ ಬಭ್ರುಃ ॥ 1 ॥ ಬಭ್ರೋಸ್ಸೇತುಃ ॥ 2 ॥ ಸೇತುಪುತ್ರ ಆರಬ್ಧನಾಮಾ ॥ 3 ॥ ಆರಬ್ಧಸ್ಯಾತ್ಮಜೋ ಗಾಂಧಾರೋ ಗಾಂಧಾರಸ್ಯ ಧರ್ಮೋ ಧರ್ಮಾದ್ ಘೃತಃ ಘೃತಾದ್ ದುರ್ದಮಸ್ತತಃ ಪ್ರಚೇತಾಃ ॥ 4 ॥ ಪ್ರಚೇತಸಃ ಪುತ್ರಶ್ಶತಧರ್ಮೋ ಬಹುಲಾನಾಂ ಮ್ಲೇಚ್ಛಾನಾಮುದೀಚ್ಯಾನಾಮಾಧಿಪತ್ಯಮಕರೋತ್ ॥ 5 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಸಪ್ತದಶೋಽಧ್ಯಾಯಃ

---

## ಅಧ್ಯಾಯ 17

ದ್ರುಹ್ಯುವಿನ ವಂಶ.

ಪರಾಶರರು ಹೇಳಿದರು: (ಇದುವರೆಗೆ ದೇವಯಾನಿಯ ಪುತ್ರರಿಬ್ಬರ ವಂಶವನ್ನು ವರ್ಣಿಸಿದ್ದಾಯಿತು. ಇನ್ನು ಶರ್ಮಿಷ್ಠೆಯ ಮಕ್ಕಳ ವಂಶವೃತ್ತಾಂತ ವನ್ನು ಕೇಳು). ದ್ರುಹ್ಯುವಿನ ಮಗ ಬಭ್ರು. ಅವನ ಮಗ ಸೇತು. ಆರಬ್ಧನು ಸೇತುವಿನ ಪುತ್ರ (1-3). ಆರಬ್ಧನ ಮಗ ಗಾಂಧಾರ. ಗಾಂಧಾರನ ತನಯ ಧರ್ಮ. ಅವನ ತನಯ ಘೃತ. ಘೃತನಿಂದ ದುರ್ದಮನೂ ಅವನಿಂದ ಪ್ರಚೇತಸನೂ ಹುಟ್ಟಿದರು. ಪ್ರಚೇತಸನ ಮಗ ಶತಧರ್ಮ. ಅವನು ಉತ್ತರ ದೇಶದಲ್ಲಿದ್ದ ಬಹುಮಂದಿ ಮ್ಲೇಚ್ಛರ ಮೇಲೆ ಒಡೆತನವನ್ನು ನಡೆಸುತ್ತಿದ್ದನು* (4-5).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಹದಿನೇಳನೆಯ ಅಧ್ಯಾಯ ಮುಗಿಯಿತು.



---

* ಇದು ಯಯಾತಿಶಾಪದ ಪರಿಣಾಮ.

## ಅಷ್ಟಾದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಯಯಾತೇಶ್ಚತುರ್ಥಪುತ್ರಸ್ಯಾನೋಸ್ಸಭಾನಲ, ಚಕ್ಷುಃ, ಪರಮೇಷು, ಸಂಜ್ಞಾಸ್ತ್ರಯಃ ಪುತ್ರಾ ಬಭೂವುಃ ॥ 1 ॥ ಸಭಾನಲಪುತ್ರಃ ಕಾಲಾನಲಃ ॥ 2 ॥ ಕಾಲಾನಲಾತ್ಸೃಂಜಯಃ ॥ 3 ॥ ಸೃಂಜಯಾತ್ ಪುರಂಜಯಃ ॥ 4 ॥ ಪುರಂಜಯಾಜ್ಜನಮೇಜಯಃ ॥ 5 ॥ ತಸ್ಮಾನ್ಮಹಾಶಾಲಃ ॥ 6 ॥ ತಸ್ಮಾಚ್ಚ ಮಹಾಮನಾಃ ॥ 7 ॥ ತಸ್ಮಾದುಶೀನರತಿತಿಕ್ಷೂ ದ್ವೌ ಪುತ್ರಾವುತ್ಪನ್ನೌ ॥ 8 ॥ ಉಶೀನರಸ್ಯಾಪಿ ಶಿಬಿನೃಗನರಕೃಮಿವರ್ಮಾಖ್ಯಾಃ ಪಂಚ ಪುತ್ರಾ ಬಭೂವುಃ ॥ 9 ॥ ಪೃಷದರ್ಭಸುವೀರಕೇಕಯಮದ್ರಕಾಶ್ಚತ್ವಾರಶ್ಶಿಬಿ-ಪುತ್ರಾಃ ॥ 10 ॥ ತಿತಿಕ್ಷೋರಪಿ ರುಶದ್ರಥಃ ಪುತ್ರೋಽಭೂತ್ ॥ 11 ॥ ತಸ್ಯಾಪಿ ಹೇಮೋ ಹೇಮಸ್ಯಾಪಿ ಸುತಪಾಃ ಸುತಪಸಶ್ಚ ಬಲಿಃ ॥ 12 ॥**

---

### ಅಧ್ಯಾಯ 18

ಅನುವಿನ ವಂಶ.

ಪರಾಶರರು ಹೇಳಿದರು: ಮೈತ್ರೇಯ, ಯಯಾತಿಯ ನಾಲ್ಕನೆಯ ಮಗನಾದ ಅನುವಿಗೆ ಸಭಾನಲ, ಚಕ್ಷು, ಪರಮೇಷು—ಎಂಬ ಮೂವರು ಮಕ್ಕಳಾದರು. ಸಭಾನಲನ ಮಗ ಕಾಲಾನಲ. ಆತನಿಂದ ಸೃಂಜಯನು ಹುಟ್ಟಿದನು. ಸೃಂಜಯನ ಮಗ ಪುರಂಜಯ (1-4). ಪುರಂಜಯನಿಂದ ಜನಮೇಜಯನೆಂಬವನೂ ಅವನಿಂದ ಮಹಾಶಾಲನೂ ಆತನಿಂದ ಮಹಾಮನನೂ ಜನಿಸಿದರು. ಮಹಾಮನನಿಂದ ಉಶೀನರ, ತಿತಿಕ್ಷು—ಎಂಬ ಇಬ್ಬರು ಪುತ್ರರು ಹುಟ್ಟಿದರು (5-8). ಉಶೀನರನಿಗೆ ಶಿಬಿ, ನೃಗ, ನರ, ಕೃಮಿ, ವರ್ಮ—ಎಂಬ ಐವರು ಮಕ್ಕಳಿದ್ದರು. ಪೃಷದರ್ಭ, ಸುವೀರ, ಕೇಕಯ, ಮದ್ರಕ—ಎಂಬ ನಾಲ್ವರು ಶಿಬಿಯ ಪುತ್ರರು. ತಿತಿಕ್ಷುವಿಗೆ ರುಶದ್ರಥನೆಂಬ ಪುತ್ರನಾದನು (9-11). ಆತನಿಗೆ ಹೇಮನೂ ಹೇಮನಿಗೆ ಸುತಪನೂ ಆತನಿಗೆ ಬಲಿಯೂ ಪುತ್ರರು. ಬಲಿಯ ಕ್ಷೇತ್ರದಲ್ಲಿ (ಮಡದಿಯಲ್ಲಿ ) ದೀರ್ಘತಮಸ್ಸೆಂಬ

**ಯಸ್ಯ ಕ್ಷೇತ್ರೇ ದೀರ್ಘತಮಸಾಂಗವಂಗಕಲಿಂಗಸುಹ್ಮಪೌಂಡ್ರಾಖ್ಯಂ ಬಾಲೇಯಂ ಕ್ಷತ್ರಮಜನ್ಯತ ॥ 13 ॥ ತನ್ನಾಮಸಂತತಿಸಂಜ್ಞಾಶ್ಚ ಪಂಚ-ವಿಷಯಾ ಬಭೂವುಃ ॥ 14 ॥ ಅಂಗಾದನಪಾನಸ್ತತೋ ದಿವಿರಥಸ್ತಸ್ಮಾ-ದ್ಧರ್ಮರಥಃ ॥ 15 ॥ ತತಶ್ಚಿತ್ರರಥೋ ರೋಮಪಾದಸಂಜ್ಞಃ ॥ 16 ॥ ಯಸ್ಯ ದಶರಥೋ ಮಿತ್ರಂ ಜಜ್ಞೇ ॥ 17 ॥ ಯಸ್ಯಾಜಪುತ್ರೋ ದಶರಥ-ಶ್ಶಾಂತಾಂ ನಾಮ ಕನ್ಯಾಮನಪತ್ಯಸ್ಯ ದುಹಿತೃತ್ವೇ ಯುಯೋಜ ॥ 18 ॥ ರೋಮಪಾದಾಚ್ಚತುರಂಗಸ್ತಸ್ಮಾತ್ಪೃಥುಲಾಕ್ಷಃ ॥ 19 ॥ ತತಶ್ಚಂಪೋ ಯಶ್ಚಂಪಾಂ ನಿವೇಶಯಾಮಾಸ ॥ 20 ॥ ಚಂಪಸ್ಯ ಹರ್ಯಂಗೋ ನಾಮಾತ್ಮಜೋಽಭೂತ್ ॥ 21 ॥ ಹರ್ಯಂಗಾದ್ಭದ್ರರಥೋ ಭದ್ರರಥಾದ್ ಬೃಹದ್ರಥೋ ಬೃಹದ್ರಥಾದ್ ಬೃಹತ್ಕರ್ಮಾ ಬೃಹತ್ಕರ್ಮಣಶ್ಚ ಬೃಹ-ದ್ಭಾನುಸ್ತಸ್ಮಾಚ್ಚ ಬೃಹನ್ಮನಾ ಬೃಹನ್ಮನಸೋ ಜಯದ್ರಥಃ ॥ 22 ॥**

---

ಋಷಿಯಿಂದ ಅಂಗ, ವಂಗ, ಕಲಿಂಗ, ಸುಹ್ಮ, ಪೌಂಡ್ರ—ಎಂಬ ಹೆಸರಿನ ಕ್ಷತ್ರಿಯರು ಹುಟ್ಟಿದರು. (ಬಲಿಯ ಕ್ಷೇತ್ರಜಾತರಾದ್ದರಿಂದ) ಇವರು ಬಾಲೇಯರು (12-13). ಹಾಗೆಯೇ ಈ ಸಂತತಿಯವರ ಹೆಸರಾದ ಅಂಗ, ವಂಗ—ಮೊದಲಾದ ನಾಮಧೇಯವುಳ್ಳ (ಅವರು ವಾಸಮಾಡುತ್ತಿದ್ದ) ಐದು ರಾಜ್ಯಗಳು ಉಂಟಾದವು. ಅಂಗನಿಂದ ಅನಪಾನನೂ ಅವನಿಂದ ದಿವಿರಥನೂ ಅವನಿಂದ ಧರ್ಮರಥನೂ ಹುಟ್ಟಿದರು. ಧರ್ಮರಥನ ಮಗ ಚಿತ್ರರಥ. ಈತನಿಗೆ ರೋಮಪಾದನೆಂಬ ಇನ್ನೊಂದು ಸಂಜ್ಞೆ ಇತ್ತು (14-16). ಈ ರೋಮಪಾದನಿಗೆ ದಶರಥನು ಮಿತ್ರನಾಗಿದ್ದನು. ಅಜರಾಜನ ಪುತ್ರನಾದ ದಶ ರಥನು ಸಂತಾನವಿಲ್ಲದ ಈ ರೋಮಪಾದನಿಗೆ ಶಾಂತಾ ಎಂಬ ಕನ್ಯೆಯನ್ನು ಮಗಳನ್ನಾಗಿ ದತ್ತುಕೊಟ್ಟಿದ್ದನು (17-18). ರೋಮಪಾದನಿಂದ ಚತುರಂಗನೂ ಅವನಿಂದ ಪೃಥುಲಾಕ್ಷನೂ ಅವನಿಂದ ಚಂಪನೂ ಜನಿಸಿದರು. ಈ ಚಂಪನು ಚಂಪೆಯೆಂಬ ನಗರಿಯನ್ನು ನಿರ್ಮಿಸಿದನು. ಅವನ ಮಗ ಹರ್ಯಂಗ. ಹರ್ಯಂಗ ನಿಂದ ಭದ್ರರಥನೂ ಅವನಿಂದ ಬೃಹದ್ರಥನೂ ಅವನಿಂದ ಬೃಹತ್ಕರ್ಮನೂ ಆತನಿಂದ ಬೃಹದ್ಭಾನುವೂ ಜನಿಸಿದರು. ಬೃಹದ್ಭಾನುವಿನ ಮಗ ಬೃಹನ್ಮನ. ಆತನ ಮಗ ಜಯದ್ರಥ (19-22). ಈ ಜಯದ್ರಥನು ಬ್ರಾಹ್ಮಣಕ್ಷತ್ರಿಯರ

**ಜಯದ್ರಥೋ ಬ್ರಹ್ಮಕ್ಷತ್ರಾಂತರಾಲಸಂಭೂತ್ಯಾಂ ಪತ್ನ್ಯಾಂ ವಿಜಯಂ ನಾಮ ಪುತ್ರಮಜೀಜನತ್ ॥ 23 ॥ ವಿಜಯಶ್ಚ ಧೃತಿಂ ಪುತ್ರಮವಾಪ ॥ 24 ॥ ತಸ್ಯಾಪಿ ಧೃತವ್ರತಃ ಪುತ್ರೋಽಭೂತ್ ॥ 25 ॥ ಧೃತವ್ರತಾತ್ಸತ್ಯ-ಕರ್ಮಾ ॥ 26 ॥ ಸತ್ಯಕರ್ಮಣಸ್ತ್ವತಿರಥಃ ॥ 27 ॥ ಯೋ ಗಂಗಾಂಗತೋ ಮಂಜೂಷಾಗತಂ ಪೃಥಾಪವಿದ್ಧಂ ಕರ್ಣಂ ಪುತ್ರಮವಾಪ ॥ 28 ॥ ಕರ್ಣಾದ್ ವೃಷಸೇನಃ ಇತ್ಯೇತದಂತಾ ಅಂಗವಂಶ್ಯಾಃ ॥ 29 ॥ ಅತಶ್ಚ ಪುರುವಂಶಂ ಶ್ರೋತುಮರ್ಹಸಿ ॥ 30 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಅಷ್ಟಾದಶೋಽಧ್ಯಾಯಃ

---

ಸಾಂಕರ್ಯದಿಂದ* ಜನಿಸಿದ ಮಡದಿಯಲ್ಲಿ ವಿಜಯನೆಂಬ ಪುತ್ರನನ್ನು ಪಡೆದನು. ವಿಜಯನಿಗೆ ಧೃತಿಯೆಂಬವನು ತನಯ. ಆತನ ಮಗ ಧೃತವ್ರತ. ಅವನ ಮಗ ಸತ್ಯಕರ್ಮ. ಸತ್ಯಕರ್ಮನ ಮಗ ಅತಿರಥ (23-27). ಈತನೇ ಗಂಗಾನದಿಗೆ ಹೋಗಿದ್ದಾಗ, ಕುಂತಿಯಿಂದ ಒಂದು ಪೆಟ್ಟಿಗೆಯಲ್ಲಿಟ್ಟು ಪರಿತ್ಯಕ್ತನಾಗಿದ್ದ ಕರ್ಣ ನನ್ನು ಪುತ್ರನೆಂದು ಸ್ವೀಕರಿಸಿದನು. ಕರ್ಣನಿಂದ ವೃಷಸೇನನು ಹುಟ್ಟಿದನು. ಇಲ್ಲಿಯವರೆಗಿನವರು ಅಂಗವಂಶೀಯರು. ಇನ್ನುಮುಂದೆ ಪುರುವಂಶದ ವೃತ್ತಾಂತವನ್ನು ಕೇಳು (28-30).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಹದಿನೆಂಟನೆಯ ಅಧ್ಯಾಯ ಮುಗಿಯಿತು.



---

* ಕ್ಷತ್ರಿಯನಿಂದ ಬ್ರಾಹ್ಮಣೆಯಲ್ಲಿ ಜನಿಸಿದವನು ಸೂತಜಾತಿಗೆ ಸೇರುತ್ತಾನೆ. ಆದಕಾರಣ ವಿಜಯನಿಂದ ಹಿಡಿದು ಮುಂದಿನವರು ಸೂತರೆನಿಸುತ್ತಾರೆ.

## ಏಕೋನವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಪುರೋರ್ಜನಮೇಜಯಸ್ತಸ್ಯಾಪಿ ಪ್ರಚಿನ್ವಾನ್ ಪ್ರಚಿನ್ವತಃ ಪ್ರವೀರಃ ಪ್ರವೀರಾನ್ಮನಸ್ಯುರ್ಮನಸ್ಯೋಶ್ಚಾಭಯದಸ್ತಸ್ಯಾಪಿ ಸುದ್ಯುಸ್ಸುದ್ಯೋ-ರ್ಬಹುಗತಸ್ತಸ್ಯಾಪಿ ಸಂಯಾತಿಸ್ಸಂಯಾತೇರಹಂಯಾತಿಸ್ತತೋ ರೌದ್ರಾಶ್ವಃ ॥ 1 ॥ ಋತೇಷುಕಕ್ಷೇಷುಸ್ಥಂಡಿಲೇಷುಕೃತೇಷುಜಲೇಷುಧರ್ಮೇಷು-ಧೃತೇಷುಸ್ಥಲೇಷುಸನ್ನತೇಷುವನೇಷುನಾಮಾನೋ ರೌದ್ರಾಶ್ವಸ್ಯ ದಶ-ಪುತ್ರಾ ಬಭೂವುಃ ॥ 2 ॥ ಋತೇಷೋರಂತಿನಾರಃ ಪುತ್ರೋಽಭೂತ್ ॥ 3 ॥ ಸುಮತಿಮಪ್ರತಿರಥಂ ಧ್ರುವಂ ಚಾಪ್ಯಂತಿನಾರಃ ಪುತ್ರಾನವಾಪ ॥ 4 ॥ ಅಪ್ರತಿರಥಸ್ಯ ಕಣ್ವಃ ಪುತ್ರೋಽಭೂತ್ ॥ 5 ॥ ತಸ್ಯಾಪಿ ಮೇಧಾ-ತಿಥಿಃ ॥ 6 ॥ ಯತಃ ಕಾಣ್ವಾಯನಾ ದ್ವಿಜಾ ಬಭೂವುಃ ॥ 7 ॥ ಅಪ್ರತಿ-**

---

## ಅಧ್ಯಾಯ 19

### ಪುರುವಂಶದ ವರ್ಣನೆ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಪುರುವಿನ ಮಗ ಜನಮೇಜಯ. ಆತನಿಗೆ ಪ್ರಚಿನ್ವಂತನೂ ಅವನಿಗೆ ಪ್ರವೀರನೂ ಆತನಿಗೆ ಮನಸ್ಯುವೂ ಆತನಿಗೆ ಅಭಯದನೂ ಪುತ್ರರಾದರು. ಅಭಯದನ ಪುತ್ರ ಸುದ್ಯು. ಆತನ ಪುತ್ರ ಬಹುಗತ. ಅವನ ತನಯ ಸಂಯಾತಿ. ಅವನಿಂದ ಅಹಂ ಯಾತಿಯೂ ಆತನಿಂದ ರೌದ್ರಾಶ್ವನೂ ಹುಟ್ಟಿದರು (1). ರೌದ್ರಾಶ್ವನಿಗೆ ಋತೇಷು, ಕಕ್ಷೇಷು, ಸ್ಥಂಡಿಲೇಷು, ಕೃತೇಷು, ಜಲೇಷು, ಧರ್ಮೇಷು, ಧೃತೇಷು, ಸ್ಥಲೇಷು, ಸನ್ನತೇಷು ಮತ್ತು ವನೇಷು ಎಂಬ ಹತ್ತು ಮಂದಿ ಪುತ್ರರಾದರು (2). ಋತೇಷುವಿನ ಮಗ ಅಂತಿನಾರ. ಅಂತಿನಾರನಿಗೆ ಸುಮತಿ, ಅಪ್ರತಿರಥ ಮತ್ತು ಧ್ರುವ ಎಂಬ (ಮೂರು) ಮಕ್ಕಳಾದರು. ಅಪ್ರತಿರಥನ ಮಗ ಕಣ್ವ. ಅವನ ಮಗ ಮೇಧಾತಿಥಿ. ಈ ಮೇಧಾತಿಥಿಯಿಂದ ಕಾಣ್ವಾಯನರೆಂಬ ಬ್ರಾಹ್ಮಣರ ಸಂತತಿಯುಂಟಾಯಿತು. ಅಪ್ರತಿರಥನಿಗೆ ಐಲೀನನೆಂಬ ಇನ್ನೊಬ್ಬ

**ರಥಸ್ಯಾಪರಃ ಪುತ್ರೋಽಭೂದೈಲೀನಃ ॥ 8 ॥ ಐಲೀನಸ್ಯ ದುಷ್ಯಂತಾದ್ಯಾಶ್ಚತ್ವಾರಃ ಪುತ್ರಾ ಬಭೂವುಃ ॥ 9 ॥ ದುಷ್ಯಂತಾಚ್ಚಕ್ರವರ್ತೀ ಭರತೋಽಭೂತ್ ॥ 10 ॥ ಯನ್ನಾಮಹೇತುರ್ದೇವೈಃ ಶ್ಲೋಕೋ ಗೀಯತೇ ॥ 11 ॥**

**ಮಾತಾ ಭಸ್ತ್ರಾ ಪಿತುಃ ಪುತ್ರೋ ಯೇನ ಜಾತಃ ಸ ಏವ ಸಃ ।**
**ಭರಸ್ವ ಪುತ್ರಂ ದುಷ್ಯಂತ ಮಾವಮಂಸ್ಥಾಶ್ಶಕುಂತಲಾಮ್ ॥** 12

**ರೇತೋಧಾಃ ಪುತ್ರೋ ನಯತಿ ನರದೇವ ಯಮಕ್ಷಯಾತ್ ।**
**ತ್ವಂ ಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುಂತಲಾ ॥** 13

**ಭರತಸ್ಯ ಪತ್ನೀತ್ರಯೇ ನವ ಪುತ್ರಾ ಬಭೂವುಃ ॥ 14 ॥ ನೈತೇ**

---

ಮಗನಿದ್ದನು (3-8). ಐಲೀನನಿಗೆ ದುಷ್ಯಂತನೇ ಮೊದಲಾದ ನಾಲ್ವರು ಮಕ್ಕಳಿದ್ದರು. ದುಷ್ಯಂತನಿಂದ ಭರತಚಕ್ರವರ್ತಿ ಹುಟ್ಟಿದನು. ಅವನಿಗೆ 'ಭರತ' ಎಂದು ಹೆಸರಾಗುವುದಕ್ಕೆ ನಿಮಿತ್ತವಾಗಿ ದೇವತೆಗಳು ಹೇಳಿದ ಶ್ಲೋಕ ಹೀಗಿದೆ (9-11): "ಎಲೈ ದುಷ್ಯಂತ, ತಾಯಿಯು ಚರ್ಮದ ಚೀಲವಿದ್ದಂತೆ (ರಕ್ಷಣೆ ಮಾಡತಕ್ಕವಳು). ಪುತ್ರನು ಪಿತೃವಿಗೆ ಸೇರತಕ್ಕವನು. ಯಾರಿಂದ ಅವನು ಹುಟ್ಟಿರುತ್ತಾನೋ ಆ ತಂದೆಯ ಸ್ವರೂಪನೇ ಅವನು. ಪುತ್ರನನ್ನು ಭರಿಸು (ಸ್ವೀಕರಿಸಿ ಪೋಷಿಸು). ಶಕುಂತಲೆಗೆ ಅವಮಾನಮಾಡಬೇಡ (12). ತನ್ನ ವೀರ್ಯದಿಂದ ಜನಿಸಿದ ಪುತ್ರನು ಅವನನ್ನು ಯಮಲೋಕದಿಂದ (ದೇವಲೋಕಕ್ಕೆ) ಒಯ್ಯುತ್ತಾನೆ. ಎಲೈ ರಾಜ, ಈ ಗರ್ಭಾಧಾನ ಮಾಡಿದವನು ನೀನು. ಶಕುಂತಲೆ ಸತ್ಯವನ್ನೇ ಹೇಳುತ್ತಿದ್ದಾಳೆ"* (13). ಭರತನಿಗೆ ಮೂವರು ಮಡದಿಯರಿದ್ದರು. ಅವರಲ್ಲಿ ಆತನಿಗೆ ಒಂಬತ್ತು ಮಕ್ಕಳು ಹುಟ್ಟಿದರು. "ಈ ಮಕ್ಕಳು ಹೋಲಿಕೆಯಲ್ಲಿ ನನಗೆ ಅನುರೂಪರಾದವರಲ್ಲ" ಎಂದು ಭರತನು ಹೇಳಿದನು.

---

* ದುಷ್ಯಂತ-ಶಕುಂತಲೆಯರ ಕಥೆ ಸುಪ್ರಸಿದ್ಧವಾದದ್ದು. ಈ ಎರಡು ಶ್ಲೋಕಗಳು ಮಹಾಭಾರತದ ಆದಿಪರ್ವದಲ್ಲಿವೆ. 'ಭರಸ್ವ' ಎಂಬ ಶಬ್ದವೇ 'ಭರತ' ಎಂಬ ಹೆಸರಿಗೆ ನಿಮಿತ್ತವಾಯಿತೆಂದು ಅಭಿಪ್ರಾಯ. ಈ ನಿಮಿತ್ತವನ್ನು ಹೇಳತಕ್ಕದ್ದು ಮೊದಲನೆಯ ಶ್ಲೋಕಮಾತ್ರ. ಆದ್ದರಿಂದ ಮೂಲದಲ್ಲಿ 'ಶ್ಲೋಕೋಗೀಯತೇ' ಎಂದು ಏಕವಚನವಿದೆ. 'ಆತ್ಮಾ ವೈ ಪುತ್ರನಾಮಾಸಿ' 'ಪತಿರ್ಜಾಯಾಂ ಪ್ರವಿಶತಿ'—ಮುಂತಾದ ಶ್ರುತಿವಾಕ್ಯಗಳು ಪುತ್ರನು ಪಿತೃಸ್ವರೂಪನೇ ಎಂದು ಹೇಳುತ್ತವೆ.

**ಮಮಾನುರೂಪಾ ಇತ್ಯಭಿಹಿತಾಸ್ತನ್ಮಾತರಃ ಪರಿತ್ಯಾಗಭಯಾತ್ತತ್ಪುತ್ರಾಂಜಘ್ನುಃ ॥ 15 ॥ ತತೋಽಸ್ಯ ವಿತಥೇ ಪುತ್ರಜನ್ಮನಿ ಪುತ್ರಾರ್ಥಿನೋ ಮರುತ್ಸೋಮಯಾಜಿನೋ ದೀರ್ಘತಮಸಃ ಪಾರ್ಷ್ಣ್ಯಪಾಸ್ತಾದ್ಬೃಹಸ್ಪತಿವೀರ್ಯಾದುತಥ್ಯಪತ್ನ್ಯಾಂ ಮಮತಾಯಾಂ ಸಮುತ್ಪನ್ನೋ ಭರದ್ವಾಜಾಖ್ಯಃ ಪುತ್ರೋ ಮರುದ್ಭಿರ್ದತ್ತಃ ॥ 16 ॥ ತಸ್ಯಾಪಿ ನಾಮನಿರ್ವಚನಶ್ಲೋಕಃ ಪಠ್ಯತೇ ॥ 17 ॥**

**ಮೂಢೇ ಭರ ದ್ವಾಜಮಿಮಂ ಭರ ದ್ವಾಜಂ ಬೃಹಸ್ಪತೇ।**
**ಯಾತೌ ಯದುಕ್ತ್ವಾ ಪಿತರೌ ಭರದ್ವಾಜಸ್ತತಸ್ತ್ವಯಮ್ ॥** 18

**ಭರದ್ವಾಜಸ್ಯ ವಿತಥೇ ಪುತ್ರಜನ್ಮನಿ ಮರುದ್ಭಿರ್ದತ್ತಃ ತತೋ ವಿತಥ-**

---

ಅದನ್ನು ಕೇಳಿ ಪತಿಯು ತಮ್ಮನ್ನು ತ್ಯಜಿಸಿಬಿಟ್ಟಾನೆಂಬ ಭಯದಿಂದ ಆ ತಾಯಂದಿರು ತಮ್ಮ ಮಕ್ಕಳನ್ನು ಕೊಂದುಬಿಟ್ಟರು! (14-15). ಹೀಗೆ ಭರತನಿಗೆ ಪುತ್ರಜನ್ಮವು ವಿತಥ(ವಿಫಲ)ವಾಗಲು, ಪುತ್ರಾರ್ಥಿಯಾದ ಭರತನು ಮರುತ್ಸೋಮವೆಂಬ ಯಾಗವನ್ನು ನಡೆಸಿದನು. ಆಗ ಮರುತ್ತುಗಳು ಭರತನಿಗೆ 'ಭರದ್ವಾಜ' ಎಂಬವನನ್ನು ಪುತ್ರನೆಂದು ಅನುಗ್ರಹಿಸಿದರು. ಈ ಭರದ್ವಾಜನು ಉತಥ್ಯನ ಭಾರ್ಯೆಯಾದ ಮಮತೆಯಲ್ಲಿ ಬೃಹಸ್ಪತಿಯ ವೀರ್ಯದಿಂದ ಹುಟ್ಟಿದವನು. ಆ ಸಮಯದಲ್ಲಿ ಮಮತೆಯ ಗರ್ಭದಲ್ಲೇ ಇದ್ದ ಇನ್ನೊಂದು ಶಿಶುವಾದ ದೀರ್ಘತಮಸ್—ಎಂಬವನು ಈತನನ್ನು ಪಕ್ಕದಿಂದ ತಿವಿದು ಗರ್ಭದಿಂದ ಹೊರಕ್ಕೆ ತಳ್ಳಿದನು (16). ಈ ಭರದ್ವಾಜನ ನಾಮನಿರ್ವಚನ ಶ್ಲೋಕವು ಹೀಗಿದೆ:—"(ಪುತ್ರೋತ್ಪತ್ತಿಯಾದ ಮೇಲೆ ಬೃಹಸ್ಪತಿಯು ಮಮತೆಗೆ ಹೇಳುತ್ತಾನೆ): 'ಎಲೌ ಮೂಢೆ, ದ್ವಾಜಂ = ನಮ್ಮಿಬ್ಬರಿಂದ ಹುಟ್ಟಿದ ಈತನನ್ನು, ಭರ = ಪೋಷಿಸು'. (ಆಗ ಮಮತೆ ಹೇಳುತ್ತಾಳೆ): 'ಬೃಹಸ್ಪತಿಯೆ, ಭರ ದ್ವಾಜಂ = ಈ ದ್ವಾಜನನ್ನು ನೀನೇ ಭರಿಸು'. ಹೀಗೆ ಪರಸ್ಪರ ವಿವಾದಮಾಡಿ ತಂದೆ ತಾಯಿಗಳು ಹೊರಟುಹೋದ್ದರಿಂದ ಈತನು 'ಭರದ್ವಾಜ' ಎಂಬ ಹೆಸರನ್ನು ಪಡೆದನು* (17-18). ಭರತ ಚಕ್ರವರ್ತಿಯ ಪುತ್ರಜನ್ಮವು ವಿತಥವಾದಾಗ ಮರುದ್ದೇವತೆಗಳು ಭರದ್ವಾಜನನ್ನು ಕೊಟ್ಟಕಾರಣ ಈತನು ವಿತಥ

* ಅನುಬಂಧವನ್ನು ನೋಡಿ.

**ಸಂಜ್ಞಾಮವಾಪ ॥ 19 ॥ ವಿತಥಸ್ಯಾಪಿ ಮನ್ಯುಃ ಪುತ್ರೋಽಭವತ್ ॥ 20 ॥ ಬೃಹತ್ಕ್ಷತ್ರಮಹಾವೀರ್ಯನರಗರ್ಗಾ ಅಭವನ್ಮನ್ಯುಪುತ್ರಾಃ ॥ 21 ॥ ನರಸ್ಯ ಸಂಕೃತಿಸ್ಸಂಕೃತೇರ್ಗುರುಪ್ರೀತಿರಂತಿದೇವೌ ॥ 22 ॥ ಗರ್ಗಾಚ್ಛಿನಿಃ ತತಶ್ಚ ಗಾರ್ಗ್ಯಾಶ್ಶೈನ್ಯಾಃ ಕ್ಷತ್ರೋಪೇತಾ ದ್ವಿಜಾತಯೋ ಬಭೂವುಃ ॥ 23 ॥ ಮಹಾವೀರ್ಯಾಚ್ಚ ದುರುಕ್ಷಯೋ ನಾಮ ಪುತ್ರೋಽಭವತ್ ॥ 24 ॥ ತಸ್ಯ ತ್ರಯ್ಯಾರುಣಿಃ ಪುಷ್ಕರಿಣ್ಯೋ ಕಪಿಶ್ಚ ಪುತ್ರತ್ರಯಮಭೂತ್ ॥ 25 ॥ ತಚ್ಚ ಪುತ್ರತ್ರಿತಯಮಪಿ ಪಶ್ಚಾದ್ದ್ವಿಪ್ರತಾಮುಪಜಗಾಮ ॥ 26 ॥ ಬೃಹತ್ಕ್ಷತ್ರಸ್ಯ ಸುಹೋತ್ರಃ ॥ 27 ॥ ಸುಹೋತ್ರಾದ್ಧಸ್ತೀ ಯ ಇದಂ ಹಸ್ತಿನಾಪುರಮಾವಾಸಯಾಮಾಸ ॥ 28 ॥ ಅಜಮೀಢದ್ವಿಜಮೀಢಪುರುಮೀಢಾಸ್ತ್ರಯೋ ಹಸ್ತಿನಸ್ತನಯಾಃ ॥ 29 ॥ ಅಜಮೀಢಾತ್ಕಣ್ವಃ ॥ 30 ॥ ಕಣ್ವಾ-**

---

ನೆಂಬ ಹೆಸರನ್ನು ಪಡೆದನು. ವಿತಥನ ಮಗ ಮನ್ಯು. ಮನ್ಯುವಿಗೆ ಬೃಹತ್‌ಕ್ಷತ್ರ, ಮಹಾವೀರ್ಯ, ನರ ಮತ್ತು ಗರ್ಗ—ಎಂಬ ಪುತ್ರರಾದರು (19-21). ನರನ ತನಯ ಸಂಕೃತಿ. ಗುರುಪ್ರೀತಿ, ರಂತಿದೇವ—ಎಂಬಿಬ್ಬರು ಸಂಕೃತಿಯ ಪುತ್ರರು. ಗರ್ಗನಿಂದ ಶಿನಿಯು ಹುಟ್ಟಿದನು. ಶಿನಿಯಿಂದ ಗಾರ್ಗ್ಯರು, ಶೈನ್ಯರು—ಎಂಬ ಕ್ಷತ್ರಿಯರು ಉದಿಸಿ ಬ್ರಾಹ್ಮಣರಾದರು. ಮಹಾವೀರ್ಯನಿಂದ ದುರುಕ್ಷಯನೆಂಬವನು ಹುಟ್ಟಿದನು. ಆತನಿಗೆ ತ್ರಯ್ಯಾರುಣಿ, ಪುಷ್ಕರಿಣ್ಯ ಮತ್ತು ಕಪಿ—ಎಂಬ ಮೂವರು ಪುತ್ರರಾದರು. ಈ ಮೂವರೂ ಸಹ ಕಾಲಾಂತರದಲ್ಲಿ ಬ್ರಾಹ್ಮಣ್ಯವನ್ನು ಪಡೆದರು (22-26). ಬೃಹತ್‌ಕ್ಷತ್ರನ ಮಗ ಸುಹೋತ್ರ. ಸುಹೋತ್ರನ ಮಗ ಹಸ್ತಿ. ಹಸ್ತಿಯೇ ಈ ಹಸ್ತಿನಾಪುರವನ್ನು ಸ್ಥಾಪಿಸಿದನು. ಅಜಮೀಢ, ದ್ವಿಜಮೀಢ, ಪುರುಮೀಢ—ಎಂಬ ಮೂವರು ಹಸ್ತಿಯ ತನಯರು. ಅಜಮೀಢನಿಂದ ಕಣ್ವನೂ ಕಣ್ವನಿಂದ ಮೇಧಾತಿಥಿಯೂ ಹುಟ್ಟಿದರು. ಮೇಧಾತಿಥಿಯಿಂದ ಕಾಣ್ವಾಯನರೆಂಬ ಬ್ರಾಹ್ಮಣರ ಸಂತತಿ ಹುಟ್ಟಿತು*

---

* ಹಿಂದೆ ಈ ವಿಷಯ ಬಂದಿದೆ (5, 6, 7). ಕಣ್ವನು ಅಪ್ರತಿರಥನ ಮಗನೆಂದು ಹೇಳಿದೆ. ಒಂದು ವಂಶದಲ್ಲಿ ಒಂದೇ ಹೆಸರಿನವರು ಅನೇಕರಿರಬಹುದು. ಹಿಂದೆ ನಡೆದ ವೃತ್ತಾಂತ ಪುನರಾವೃತ್ತವಾಗುವುದೂ ಸಾಧ್ಯ. ಇಬ್ಬರು ಕಣ್ವರಿದ್ದರೆಂದೂ ಕಣ್ವಶಾಖೆಯಲ್ಲಿ ಎರಡು ಭೇದಗಳಿವೆಯೆಂದೂ ತಿಳಿಯಬೇಕು. ಅನಂತರ ಉದ್ಭವಿಸಿದ ಕಾಣ್ವಾಯನರು ಮೊದಲನೆಯ ಗುಂಪಿನಲ್ಲಿ ಸೇರಿಕೊಂಡಿರಲೂಬಹುದು.

**ನ್ಮೇಧಾತಿಥಿಃ ॥ 31 ॥ ಯತಃ ಕಾಣ್ವಾಯನಾ ದ್ವಿಜಾಃ ॥ 32 ॥ ಅಜಮೀಢಸ್ಯಾನ್ಯಃ ಪುತ್ರೋ ಬೃಹದಿಷುಃ ॥ 33 ॥ ಬೃಹದಿಷೋರ್ಬೃಹದ್ಧನುರ್ಬೃಹದ್ಧನುಷಶ್ಚ ಬೃಹತ್ಕರ್ಮಾ ತತಶ್ಚ ಜಯದ್ರಥಸ್ತಸ್ಮಾದಪಿ ವಿಶ್ವಜಿತ್ ॥ 34 ॥ ತತಶ್ಚ ಸೇನಜಿತ್ ॥ 35 ॥ ರುಚಿರಾಶ್ವಕಾಶ್ಯದೃಢಹನುವತ್ಸಹನುಸಂಜ್ಞಾಸ್ಸೇನಜಿತಃ ಪುತ್ರಾಃ ॥ 36 ॥ ರುಚಿರಾಶ್ವಪುತ್ರಃ ಪೃಥುಸೇನಃ ಪೃಥುಸೇನಾತ್ಪಾರಃ ॥ 37 ॥ ಪಾರಾನ್ನೀಲಃ ॥ 38 ॥ ತಸ್ಯೈಕಶತಂ ಪುತ್ರಾಣಾಮ್ ॥ 39 ॥ ತೇಷಾಂ ಪ್ರಧಾನಃ ಕಾಂಪಿಲ್ಯಾಧಿಪತಿಸ್ಸಮರಃ ॥ 40 ॥ ಸಮರಸ್ಯಾಪಿ ಪಾರಸುಪಾರಸದಶ್ವಾಸ್ತ್ರಯಃ ಪುತ್ರಾಃ ॥ 41 ॥ ಸುಪಾರಾತ್ಪೃಥುಃ ಪೃಥೋಸ್ಸುಕೃತಿಸ್ತತೋ ವಿಭ್ರಾಜಃ ॥ 42 ॥ ತಸ್ಮಾಚ್ಚಾಣುಹಃ ॥ 43 ॥ ಯಶ್ಶುಕದುಹಿತರಂ ಕೀರ್ತಿಂ ನಾಮೋಪಯೇಮೇ ॥ 44 ॥ ಅಣುಹಾದ್‌ಬ್ರಹ್ಮದತ್ತಃ ॥ 45 ॥ ತತಶ್ಚ ವಿಷ್ವಕ್ಸೇನಸ್ತಸ್ಮಾದುದಕ್ಸೇನಃ ॥ 46 ॥ ಭಲ್ಲಾಭಸ್ತಸ್ಯ ಚಾತ್ಮಜಃ ॥ 47 ॥ ದ್ವಿಜಮೀಢಸ್ಯ ತು ಯವೀನರಸಂಜ್ಞಃ ಪುತ್ರಃ ॥ 48 ॥**

---

(27-32). ಅಜಮೀಢನ ಇನ್ನೊಬ್ಬ ಮಗ ಬೃಹದಿಷು. ಅವನಿಂದ ಬೃಹದ್ಧನುವೂ ಅವನಿಂದ ಬೃಹತ್‌ಕರ್ಮನೂ ಆತನಿಂದ ಜಯದ್ರಥನೂ ಹುಟ್ಟಿದರು. ಜಯದ್ರಥನಿಂದ ವಿಶ್ವಜಿತ್ ಎಂಬವನು ಜನಿಸಿದನು. ಆತನ ಮಗ ಸೇನಜಿತ್ (33-35). ರುಚಿರಾಶ್ವ, ಕಾಶ್ಯ, ದೃಢಹನು, ವತ್ಸಹನು—ಎಂಬವರು ಸೇನಜಿತ್ತಿನ ಪುತ್ರರು. ಅವರಲ್ಲಿ ರುಚಿರಾಶ್ವನ ಮಗ ಪೃಥುಸೇನ. ಆತನಿಂದ ಪಾರನೂ ಪಾರನಿಂದ ನೀಲನೂ ಹುಟ್ಟಿದರು. ನೀಲನಿಗೆ ನೂರುಮಂದಿ ಪುತ್ರರಿದ್ದರು. ಅವರಲ್ಲಿ ಕಾಂಪಿಲ್ಯಾಧಿಪತಿಯಾದ ಸಮರನು ಮುಖ್ಯನಾದವನು (36-40). ಸಮರನಿಗೆ ಪಾರ, ಸುಪಾರ, ಸದಶ್ವ—ಎಂಬ ಮೂವರು ಮಕ್ಕಳಿದ್ದರು. ಸುಪಾರನಿಂದ ಪೃಥು, ಆತನಿಂದ ಸುಕೃತಿ, ಆತನಿಂದ ವಿಭ್ರಾಜ, ಆತನಿಂದ ಅಣುಹ—ಎಂಬವರು ಉತ್ಪನ್ನರಾದರು. ಅಣುಹನು ಶುಕಮುನಿಯ ಪುತ್ರಿಯಾದ ಕೀರ್ತಿ ಎಂಬವಳನ್ನು ಮದುವೆಯಾದನು (41-44). ಅಣುಹನಿಂದ ಬ್ರಹ್ಮದತ್ತನೂ ಅವನಿಂದ ವಿಷ್ವಕ್‌ಸೇನನೂ ಆತನಿಂದ ಉದಕ್‌ಸೇನನೂ ಹುಟ್ಟಿದರು. ಭಲ್ಲಾಭನು ಉದಕ್‌ಸೇನನ ಮಗ (45-47). ದ್ವಿಜಮೀಢನ ಮಗ ಯವೀನರ ಎಂಬವನು. ಆತನ ಮಗ ಧೃತಿಮಾನ್. ಅವನಿಂದ ಸತ್ಯಧೃತಿಯೂ

**ತಸ್ಯಾಪಿ ಧೃತಿಮಾಂಸ್ತಸ್ಮಾಚ್ಚ ಸತ್ಯಧೃತಿಸ್ತತಶ್ಚ ದೃಢನೇಮಿಸ್ತಸ್ಮಾಚ್ಚ ಸುಪಾರ್ಶ್ವಸ್ತತಸ್ಸುಮತಿಸ್ತತಶ್ಚ ಸನ್ನತಿಮಾನ್ ॥ 49 ॥ ಸನ್ನತಿಮತಃ ಕೃತಃ ಪುತ್ರೋಽಭೂತ್ ॥ 50 ॥ ಯಂ ಹಿರಣ್ಯನಾಭೋ ಯೋಗಮಧ್ಯಾಪಯಾಮಾಸ ॥ 51 ॥ ಯಶ್ಚತುರ್ವಿಂಶತಿಂ ಪ್ರಾಚ್ಯಸಾಮಗಾನಾಂ ಸಂಹಿತಾಶ್ಚಕಾರ ॥ 52 ॥ ಕೃತಾಚ್ಚೋಗ್ರಾಯುಧಃ ॥ 53 ॥ ಯೇನ ಪ್ರಾಚುರ್ಯೇಣ ನೀಪಕ್ಷಯಃ ಕೃತಃ ॥ 54 ॥ ಉಗ್ರಾಯುಧಾತ್ ಕ್ಷೇಮ್ಯಃ ಕ್ಷೇಮ್ಯಾತ್ಸುಧೀರಸ್ತಸ್ಮಾದ್ರಿಪುಂಜಯಸ್ತಸ್ಮಾಚ್ಚ ಬಹುರಥ ಇತ್ಯೇತೇ ಪೌರವಾಃ ॥ 55 ॥ ಅಜಮೀಢಸ್ಯ ನಲಿನೀ ನಾಮ ಪತ್ನೀ ತಸ್ಯಾಂ ನೀಲಸಂಜ್ಞಃ ಪುತ್ರೋಽಭವತ್ ॥ 56 ॥ ತಸ್ಮಾದಪಿ ಶಾಂತಿಃ ಶಾಂತೇಸ್ಸುಶಾಂತಿಸ್ಸುಶಾಂತೇಃ ಪುರಂಜಯಸ್ತಸ್ಮಾಚ್ಚ ಋಕ್ಷಃ ॥ 57 ॥ ತತಶ್ಚ ಹರ್ಯಶ್ವಃ ॥ 58 ॥ ತಸ್ಮಾನ್ಮುದ್ಗಲಸೃಂಜಯಬೃಹದಿಷುಯವೀನರಕಾಂಪಿಲ್ಯಸಂಜ್ಞಾಃ**

---

ಆತನಿಂದ ದೃಢನೇಮಿಯೂ ಆತನಿಂದ ಸುಪಾರ್ಶ್ವನೂ ಹುಟ್ಟಿದರು. ಸುಪಾರ್ಶ್ವನಿಂದ ಸುಮತಿಯೂ ಸುಮತಿಯಿಂದ ಸನ್ನತಿಮಾನ್ ಎಂಬವನೂ ಜನಿಸಿದರು (48-49). ಸನ್ನತಿಮಂತನಿಗೆ ಕೃತ ಎಂಬ ಪುತ್ರನು ಜನಿಸಿದನು. ಕೃತನಿಗೆ ಹಿರಣ್ಯನಾಭನು ಯೋಗವಿದ್ಯೆಯಲ್ಲಿ ಶಿಕ್ಷಣವನ್ನಿತ್ತನು. ಅಲ್ಲದೆ ಈ ಕೃತನು ಪೂರ್ವದೇಶದ ಸಾಮಗರು ಅಧ್ಯಯನಮಾಡುವ ಇಪ್ಪತ್ತು ನಾಲ್ಕು ಸಾಮವೇದ ಸಂಹಿತೆಗಳನ್ನು ರಚಿಸಿದನು (50-52). ಕೃತನಿಂದ ಉಗ್ರಾಯುಧನು ಹುಟ್ಟಿದನು. ಇವನು ಮುಖ್ಯವಾಗಿ ನೀಪರೆಂಬ ಕ್ಷತ್ರಿಯರನ್ನು ಅಡಗಿಸಿದನು. ಉಗ್ರಾಯುಧನಿಂದ ಕ್ಷೇಮ್ಯನೂ ಅವನಿಂದ ಸುಧೀರನೂ ಆತನಿಂದ ರಿಪುಂಜಯನೂ ಅವನಿಂದ ಬಹುರಥನೆಂಬವನೂ ಜನಿಸಿದರು. ಇವರೆಲ್ಲರೂ ಪುರುವಂಶದ ಪೌರವರು (53-55). (ಇನ್ನು ಹಸ್ತಿಯ ಮಗನಾದ) ಅಜಮೀಢನಿಗೆ ನಳಿನೀ ಎಂಬ ಪತ್ನಿಯಿದ್ದಳು. ಅವಳಲ್ಲಿ ನೀಲನೆಂಬ ಮಗನು ಹುಟ್ಟಿದನು. ಅವನಿಂದ ಶಾಂತಿ ಎಂಬವನೂ ಶಾಂತಿಯಿಂದ ಸುಶಾಂತಿಯೂ ಅವನಿಂದ ಪುರಂಜಯನೂ ಪುರಂಜಯನಿಂದ ಋಕ್ಷನೂ ಹುಟ್ಟಿದರು. ಋಕ್ಷನಿಂದ ಜನಿಸಿದವನು ಹರ್ಯಶ್ವ (56-58). ಮುದ್ಗಲ, ಸೃಂಜಯ, ಬೃಹದಿಷು, ಯವೀನರ, ಕಾಂಪಿಲ್ಯ —ಎಂಬ ಐವರು ಹರ್ಯಶ್ವನ ಮಕ್ಕಳು. ತಂದೆಯಾದ ಹರ್ಯಶ್ವನು "ನನ್ನ ಈ

**ಪಂಚಾನಾಮೇವ ತೇಷಾಂ ವಿಷಯಾಣಾಂ ರಕ್ಷಣಾಯಾಲಮೇತೇ ಮತ್ಪುತ್ರಾ ಇತಿ ಪಿತ್ರಾಭಿಹಿತಾಃ ಪಾಂಚಾಲಾಃ ॥ 59 ॥ ಮುದ್ಗಲಾಚ್ಚ ಮೌದ್ಗಲ್ಯಾಃ ಕ್ಷತ್ರೋಪೇತಾ ದ್ವಿಜಾತಯೋ ಬಭೂವುಃ ॥ 60 ॥ ಮುದ್ಗಲಾದ್ ಬೃಹದಶ್ವಃ ॥ 61 ॥ ಬೃಹದಶ್ವಾದ್ದಿವೋದಾಸೋಽಹಲ್ಯಾ ಚ ಮಿಥುನಮಭೂತ್ ॥ 62 ॥ ಶರದ್ವತಶ್ಚಾಹಲ್ಯಾಯಾಂ ಶತಾನಂದೋಽಭವತ್ ॥ 63 ॥ ಶತಾನಂದಾತ್ಸತ್ಯಧೃತಿರ್ಧನುರ್ವೇದಾಂತಗೋ ಜಜ್ಞೇ ॥ 64 ॥ ಸತ್ಯಧೃತೇರ್ವರಾಪ್ಸರಸಮುರ್ವಶೀಂ ದೃಷ್ಟ್ವಾ ರೇತಃ ಸ್ಕನ್ನಂ ಶರಸ್ತಂಬೇ ಪಪಾತ ॥ 65 ॥ ತಚ್ಚ ದ್ವಿಧಾಗತಮಪತ್ಯದ್ವಯಂ ಕುಮಾರಃ ಕನ್ಯಾ ಚಾಭವತ್ ॥ 66 ॥ ತೌ ಚ ಮೃಗಯಾಮುಪಯಾತಶ್ಶಂತನುರ್ದೃಷ್ಟ್ವಾ ಕೃಪಯಾ ಜಗ್ರಾಹ ॥ 67 ॥ ತತಃ ಕುಮಾರಃ ಕೃಪಃ ಕನ್ಯಾ ಚಾಶ್ವತ್ಥಾಮ್ನೋ ಜನನೀ ಕೃಪೀ ದ್ರೋಣಾಚಾರ್ಯಸ್ಯ ಪತ್ನ್ಯಭವತ್ ॥ 68 ॥ ದಿವೋದಾಸಸ್ಯ ಪುತ್ರೋ ಮಿತ್ರಾಯುಃ ॥ 69 ॥ ಮಿತ್ರಾಯೋಶ್ಚ್ಯವನೋ**

---

ಪುತ್ರರು ನನಗೆ ಸೇರಿದ ಪಂಚದೇಶಗಳನ್ನು ರಕ್ಷಿಸಲು, ಅಲಂ = ಸಮರ್ಥರು" ಎಂದು ಹೇಳುತ್ತಿದ್ದನು. ಆದ್ದರಿಂದ ಇವರು ಪಾಂಚಾಲರೆನಿಸಿದರು! (59). ಮುದ್ಗಲನಿಂದ ಮುಂದೆ ಜನಿಸಿದ ಮೌದ್ಗಲ್ಯರು ಕ್ಷತ್ರಿಯರಾಗಿದ್ದು ಬ್ರಾಹ್ಮಣರಾದರು. ಮುದ್ಗಲನಿಂದ ಬೃಹದಶ್ವನು ಹುಟ್ಟಿದನು. ಆತನಿಗೆ ದಿವೋದಾಸನೆಂಬ ಮಗನೂ ಅಹಲ್ಯೆಯೆಂಬ ಮಗಳೂ ಜನಿಸಿದರು. ಶರದ್ವತನಿಂದ (ಗೌತಮನಿಂದ) ಅಹಲ್ಯೆಯಲ್ಲಿ ಶತಾನಂದನು ಹುಟ್ಟಿದನು (60-63). ಧನುರ್ವೇದದಲ್ಲಿ ಪಾರಂಗತನಾದ ಸತ್ಯಧೃತಿಯು ಶತಾನಂದನ ಮಗ. ಒಂದು ಸಲ ಶ್ರೇಷ್ಠ ಅಪ್ಸರೆಯಾದ ಉರ್ವಶಿಯನ್ನು ನೋಡಿದಾಗ ಸತ್ಯಧೃತಿಯ ವೀರ್ಯವು ಸ್ಖಲನವಾಗಿ 'ಶರ' ಎಂಬ ಹುಲ್ಲಿನ ಪೊದೆಯಲ್ಲಿ ಬಿದ್ದಿತು. ಅದು ಎರಡು ವಿಭಾಗವಾಗಿ ಒಬ್ಬ ಕುಮಾರನೂ ಇನ್ನೊಬ್ಬ ಕನ್ಯೆಯೂ ಉತ್ಪನ್ನರಾದರು (64-66). ಬೇಟೆಗಾಗಿ ಬಂದಿದ್ದ ಶಂತನು ರಾಜನು ಅವರಿಬ್ಬರನ್ನು ಕಂಡು ಕೃಪೆಯಿಂದ ಸ್ವೀಕರಿಸಿ ತೆಗೆದುಕೊಂಡು ಹೋದನು. ಆ ಕುಮಾರನೇ ಮುಂದೆ ಕೃಪಾಚಾರ್ಯನಾದನು. ಕನ್ಯೆಯು ಕೃಪೀ ಎಂಬ ಹೆಸರಿನಿಂದ ದ್ರೋಣಾಚಾರ್ಯನ ಪತ್ನಿಯಾಗಿ ಅಶ್ವತ್ಥಾಮನಿಗೆ ಜನನಿಯಾದಳು (67-68). ದಿವೋದಾಸನ ತನಯ

**ನಾಮ ರಾಜಾ ॥ 70 ॥ ಚ್ಯವನಾತ್ಸುದಾಸಃ ಸುದಾಸಾತ್ಸೌದಾಸಃ ಸೌದಾಸಾತ್ಸಹದೇವಸ್ತಸ್ಯಾಪಿ ಸೋಮಕಃ ॥ 71 ॥ ಸೋಮಕಾಜ್ಜಂತುಃ ಪುತ್ರಶತಜ್ಯೇಷ್ಠೋಽಭವತ್ ॥ 72 ॥ ತೇಷಾಂ ಯವೀಯಾನ್ ಪೃಷತಃ ಪೃಷತಾದ್ದ್ರುಪದಸ್ತಸ್ಮಾಚ್ಚ ಧೃಷ್ಟದ್ಯುಮ್ನಸ್ತತೋ ಧೃಷ್ಟಕೇತುಃ ॥ 73 ॥ ಅಜಮೀಢಸ್ಯಾನ್ಯ ಋಕ್ಷನಾಮ ಪುತ್ರೋಽಭವತ್ ॥ 74 ॥ ತಸ್ಯ ಸಂವರಣಃ ॥ 75 ॥ ಸಂವರಣಾತ್ಕುರುಃ ॥ 76 ॥ ಯ ಇದಂ ಧರ್ಮಕ್ಷೇತ್ರಂ ಕುರುಕ್ಷೇತ್ರಂ ಚಕಾರ ॥ 77 ॥ ಸುಧನುರ್ಜಹ್ನುಪರೀಕ್ಷಿತ್ಪ್ರಮುಖಾಃ ಕುರೋಃ ಪುತ್ರಾ ಬಭೂವುಃ ॥ 78 ॥ ಸುಧನುಷಃ ಪುತ್ರಸ್ಸುಹೋತ್ರಸ್ತಸ್ಮಾಚ್ಚ್ಯವನಃ-ಚ್ಯವನಾತ್ ಕೃತಕಃ ॥ 79 ॥ ತತಶ್ಚೋಪರಿಚರೋ ವಸುಃ ॥ 80 ॥ ಬೃಹದ್ರಥಪ್ರತ್ಯಗ್ರಕುಶಾಂಬುಕುಚೇಲಮಾತ್ಸ್ಯಪ್ರಮುಖಾ ವಸೋಃ ಪುತ್ರಾಸ್ಸಪ್ತಾಜಾಯಂತ ॥ 81 ॥ ಬೃಹದ್ರಥಾತ್ಕುಶಾಗ್ರಃ ಕುಶಾಗ್ರಾದ್ವೃಷಭೋ ವೃಷಭಾತ್ ಪುಷ್ಪವಾನ್ ತಸ್ಮಾತ್ಸತ್ಯಹಿತಸ್ತಸ್ಮಾತ್ಸುಧನ್ವಾ ತಸ್ಯ**

---

ಮಿತ್ರಾಯು. ಆತನ ಮಗ ಚ್ಯವನನೆಂಬ ರಾಜ. ಚ್ಯವನನಿಂದ ಸುದಾಸನೂ ಆತನಿಂದ ಸೌದಾಸನೂ ಆತನಿಂದ ಸಹದೇವನೂ ಉತ್ಪನ್ನರಾದರು. ಸಹದೇವನ ಪುತ್ರ ಸೋಮಕ. ಸೋಮಕನಿಗೆ ನೂರುಮಂದಿ ಪುತ್ರರಿದ್ದರು. ಅವರಲ್ಲಿ ಜಂತು ಎಂಬವನು ಜ್ಯೇಷ್ಠಪುತ್ರ. ಪೃಷತ ಎಂಬವನು ಎಲ್ಲರಿಗಿಂತ ಕಿರಿಯ. ಪೃಷತನಿಂದ ದ್ರುಪದನೂ ಅವನಿಂದ ಧೃಷ್ಟದ್ಯುಮ್ನನೂ ಅವನಿಂದ ಧೃಷ್ಟಕೇತುವೂ ಉತ್ಪನ್ನರಾದರು (69-73). ಅಜಮೀಢನಿಗೆ ಋಕ್ಷ ಎಂಬ ಹೆಸರಿನ ಇನ್ನೊಬ್ಬ ಪುತ್ರನಿದ್ದನು. ಅವನ ಮಗ ಸಂವರಣ. ಸಂವರಣನಿಂದ ಕುರು ಎಂಬವನು ಹುಟ್ಟಿದನು. ಈತನೇ ಧರ್ಮಕ್ಷೇತ್ರವೆನಿಸಿದ ಕುರುಕ್ಷೇತ್ರದ ಸ್ಥಾಪಕ. ಸುಧನು, ಜಹ್ನು, ಪರೀಕ್ಷಿತ್ ಮುಂತಾದವರು ಕುರುವಿನ ಪುತ್ರರು. ಸುಧನುವಿನ ಮಗ ಸುಹೋತ್ರ. ಅವನಿಂದ ಚ್ಯವನನೂ ಅವನಿಂದ ಕೃತಕನೂ ಜನಿಸಿದರು (74-79). ಕೃತಕನ ಮಗ ಉಪರಿಚರನೆಂಬ ವಸು. ಈ ವಸುವಿಗೆ ಬೃಹದ್ರಥ, ಪ್ರತ್ಯಗ್ರ, ಕುಶಾಂಬು, ಕುಚೇಲ, ಮಾತ್ಸ್ಯ—ಮೊದಲಾದ ಏಳು ಮಂದಿ ಪುತ್ರರಾದರು. ಬೃಹದ್ರಥನಿಂದ ಕುಶಾಗ್ರ, ಆತನಿಂದ ವೃಷಭ, ಆತನಿಂದ ಪುಷ್ಪವಂತ, ಅವನಿಂದ ಸತ್ಯಹಿತ, ಸತ್ಯಹಿತನಿಂದ ಸುಧನ್ವ—ಇವರ

**ಚ ಜತುಃ ॥ 82 ॥ ಬೃಹದ್ರಥಾಚ್ಚಾನ್ಯಶ್ಶಕಲದ್ವಯಜನ್ಮಾ ಜರಯಾ ಸಂಹಿತೋ ಜರಾಸಂಧನಾಮಾ ॥ 83 ॥ ತಸ್ಮಾತ್ಸಹದೇವಸ್ಸಹದೇವಾ-ತ್ಸೋಮಪಸ್ತತಶ್ಚ ಶ್ರುತಿಶ್ರವಾಃ ॥ 84 ॥ ಇತ್ಯೇತೇ ಮಯಾ ಮಾಗಧಾ ಭೂಪಾಲಾಃ ಕಥಿತಾಃ ॥ 85 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಏಕೋನವಿಂಶೋಽಧ್ಯಾಯಃ

---

ಜನ್ಮವಾಯಿತು. ಸುಧನ್ವನ ಮಗ ಜತು (80-82). ಬೃಹದ್ರಥನಿಗೆ ಇನ್ನೊಬ್ಬ ಮಗನಿದ್ದನು. ಆತನ ದೇಹದ ಎರಡು ಭಾಗಗಳನ್ನು ಜರಾ ಎಂಬವಳು ಜೋಡಿಸಿದ ಪ್ರಯುಕ್ತ ಜೀವಿಸಿದ್ದರಿಂದ ಆತನಿಗೆ ಜರಾಸಂಧ—ಎಂದು ಹೆಸರಾಯಿತು. ಜರಾಸಂಧನಿಂದ ಸಹದೇವನೂ ಅವನಿಂದ ಸೋಮಪನೂ ಆತನಿಂದ ಶ್ರುತಿಶ್ರವಸ್—ಎಂಬವನೂ ಉತ್ಪನ್ನರಾದರು. ನಾನು ಹೇಳಿದ ಈ ಭೂಪಾಲರು ಮಗಧದೇಶದ ಒಡೆಯರು (83-85).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.



## ವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಪರೀಕ್ಷಿತೋ ಜನಮೇಜಯಶ್ರುತಸೇನೋಗ್ರಸೇನಭೀಮಸೇನಾಃ ಚತ್ವಾರಃ ಪುತ್ರಾಃ ॥ 1 ॥ ಜಹ್ನೋಸ್ತು ಸುರಥೋ ನಾಮಾತ್ಮಜೋ ಬಭೂವ ॥ 2 ॥ ತಸ್ಯಾಪಿ ವಿದೂರಥಃ ॥ 3 ॥ ತಸ್ಮಾತ್ಸಾರ್ವಭೌಮಸ್ಸಾರ್ವಭೌಮಾಜ್ಜಯತ್ಸೇನಸ್ತಸ್ಮಾದಾರಾಧಿತಸ್ತತಶ್ಚಾಯುತಾಯುಃ ಅಯುತಾಯೋರಕ್ರೋಧನಃ ॥ 4 ॥ ತಸ್ಮಾದ್ದೇವಾತಿಥಿಃ ॥ 5 ॥ ತತಶ್ಚ ಋಕ್ಷೋಽನ್ಯೋಽಭವತ್ ॥ 6 ॥ ಋಕ್ಷಾದ್ಭೀಮಸೇನಸ್ತತಶ್ಚ ದಿಲೀಪಃ ॥ 7 ॥ ದಿಲೀಪಾತ್ ಪ್ರತೀಪಃ ॥ 8 ॥ ತಸ್ಯಾಪಿ ದೇವಾಪಿಶಂತನುಬಾಹ್ಲೀಕಸಂಜ್ಞಾಸ್ತ್ರಯಃ ಪುತ್ರಾ ಬಭೂವುಃ ॥ 9 ॥ ದೇವಾಪಿರ್ಬಾಲ ಏವಾರಣ್ಯಂ ವಿವೇಶ ॥ 10 ॥ ಶಂತನುಸ್ತು ಮಹೀಪಾಲೋಽಭೂತ್ ॥ 11 ॥ ಅಯಂ ಚ ತಸ್ಯ**

---

## ಅಧ್ಯಾಯ 20

### ಕುರುವಂಶದ ವರ್ಣನೆ

ಪರಾಶರಮುನಿಗಳು ಹೇಳಿದರು: ಮೈತ್ರೇಯ, (ಕುರುವಿನ ಇನ್ನೊಬ್ಬ ಪುತ್ರನಾದ) ಪರೀಕ್ಷಿತನಿಗೆ ಜನಮೇಜಯ, ಶ್ರುತಸೇನ, ಉಗ್ರಸೇನ, ಭೀಮಸೇನ —ಎಂಬ ನಾಲ್ವರು ತನಯರಿದ್ದರು. (ಇನ್ನೊಬ್ಬ ಕುರುಪುತ್ರನಾದ) ಜಹ್ನುವಿಗಾದರೋ ಸುರಥನೆಂಬ ಆತ್ಮಜನಿದ್ದನು. ಸುರಥನ ಮಗ ವಿದೂರಥ (1-3). ಆತನಿಂದ ಸಾರ್ವಭೌಮನೂ ಅವನಿಂದ ಜಯತ್ಸೇನನೂ ಆತನಿಂದ ಆರಾಧಿತನೂ ಆತನಿಂದ ಅಯುತಾಯುವೂ ಅಯುತಾಯುವಿನಿಂದ ಅಕ್ರೋಧನನೂ ಹುಟ್ಟಿದರು. ಆತನ ಮಗ ದೇವಾತಿಥಿ. ಆತನಿಗೆ ಇನ್ನೊಬ್ಬ (ಅಜಮೀಢನ ಮಗ ಋಕ್ಷನಿಗಿಂತ ಭಿನ್ನನಾದ) ಋಕ್ಷನೆಂಬ ಪುತ್ರನು ಹುಟ್ಟಿದನು. (4-6). ಋಕ್ಷನಿಂದ ಭೀಮಸೇನ, ಅವನಿಂದ ದಿಲೀಪ, ದಿಲೀಪನಿಂದ ಪ್ರತೀಪ—ಎಂಬವರು ಜನಿಸಿದರು. ಪ್ರತೀಪನಿಗೆ ದೇವಾಪಿ, ಶಂತನು, ಬಾಹ್ಲೀಕ—ಎಂಬ ಹೆಸರಿನ

**ಶ್ಲೋಕಃ ಪೃಥಿವ್ಯಾಂ ಗೀಯತೇ ॥ 12 ॥**

**ಯಂ ಯಂ ಕರಾಭ್ಯಾಂ ಸ್ಪೃಶತಿ ಜೀರ್ಣಂ ಯೌವನಮೇತಿ ಸಃ ।**
**ಶಾಂತಿಂ ಚಾಪ್ನೋತಿ ಯೇನಾಗ್ರ್ಯಾಂ ಕರ್ಮಣಾ ತೇನ ಶಂತನುಃ ॥ 13**

**ತಸ್ಯ ಚ ಶಂತನೋ ರಾಷ್ಟ್ರೇ ದ್ವಾದಶವರ್ಷಾಣಿ ದೇವೋ ನ ವವರ್ಷ ॥ 14 ॥ ತತಶ್ಚಾಶೇಷರಾಷ್ಟ್ರವಿನಾಶಮವೇಕ್ಷ್ಯಾಸೌ ರಾಜಾ ಬ್ರಾಹ್ಮಣಾನ-ಪೃಚ್ಛತ್ ಕಸ್ಮಾದಸ್ಮಾಕಂ ರಾಷ್ಟ್ರೇ ದೇವೋ ನ ವರ್ಷತಿ, ಕೋ ಮಮಾಪ-ರಾಧ ಇತಿ ॥ 15 ॥ ತತಶ್ಚ ತಮೂಚುರ್ಬ್ರಾಹ್ಮಣಾಃ ॥ 16 ॥ ಅಗ್ರಜಸ್ಯ ತೇ ಹೀಯಮವನಿಸ್ತ್ವಯಾ ಸಂಭುಜ್ಯತೇ ಅತಃ ಪರಿವೇತ್ತಾ ತ್ವಮಿತ್ಯುಕ್ತಸ್ಸ ರಾಜಾ ಪುನಸ್ತಾನಪೃಚ್ಛತ್ ॥ 17 ॥ ಕಿಂ ಮಯಾತ್ರ ವಿಧೇಯಮಿತಿ ॥ 18 ॥**

---

ಮೂವರು ಪುತ್ರರಾದರು. ದೇವಾಪಿಯು ಬಾಲಕನಾಗಿದ್ದಾಗಲೇ (ವಿರಕ್ತನಾಗಿ) ಅರಣ್ಯಕ್ಕೆ ಹೋದನು. ಆಗ* ಶಂತನುವು ರಾಜನಾದನು (7-11). ಆತನ ವಿಷಯವಾಗಿ ಜಗತ್ತಿನಲ್ಲಿ ಈ ಶ್ಲೋಕವು ಪ್ರಚುರವಾಗಿ ಹೇಳಲ್ಪಡುತ್ತದೆ— "ಶಂತನು ರಾಜನು ಯಾವ ಯಾವ ವೃದ್ಧನನ್ನು ಕೈಗಳಿಂದ ಮುಟ್ಟುವನೋ ಆತನಿಗೆ ಯೌವನ ಪ್ರಾಪ್ತವಾಗುತ್ತದೆ! ಮತ್ತು ಆತನ ಸ್ಪರ್ಶದಿಂದ ಮನುಷ್ಯನು ಜೀವನದಲ್ಲಿ ಸಮೃದ್ಧವಾದ ಶಾಂತಿಯನ್ನು ಪಡೆಯುತ್ತಾನೆ. ಹೀಗೆ ಮಾಡುವುದರಿಂದ ಅವನು ಶಂತನು ಎಂದು ಪ್ರಸಿದ್ಧನಾಗಿರುವನು" (12-13). ಇಂತಹ ಶಂತನುವಿನ ರಾಜ್ಯದಲ್ಲಿ ಒಮ್ಮೆ ಹನ್ನೆರಡು ವರ್ಷಗಳವರೆಗೆ ಇಂದ್ರನು ಮಳೆಗರೆಯಲಿಲ್ಲ. ಹೀಗೆ ಸಕಲ ರಾಷ್ಟ್ರವೂ ವಿನಾಶಕ್ಕೆ ತುತ್ತಾಗಿರುವುದನ್ನು ಕಂಡು ಆ ರಾಜನು ಬ್ರಾಹ್ಮಣರನ್ನು ಕುರಿತು "ನಮ್ಮ ರಾಷ್ಟ್ರದಲ್ಲಿ ಇಂದ್ರನು ಮಳೆಗರೆಯದಿರುವುದಕ್ಕೆ ಕಾರಣವೇನು? ನನ್ನ ತಪ್ಪು ಯಾವುದು?" ಎಂದು ಕೇಳಿದನು (14-15). ಆಗ ಬ್ರಾಹ್ಮಣರು ಅವನಿಗೆ "ರಾಜ, ನಿನ್ನ ಅಣ್ಣನಾದ ದೇವಾಪಿಗೆ ಸೇರಬೇಕಾದದ್ದು ಈ ರಾಜ್ಯ. ಇದನ್ನು ನೀನು ಆಳುತ್ತಿರುವುದರಿಂದ ನೀನು ಪರಿವೇತ್ತೃವಾದೆ§" ಎಂದರು. ಅದಕ್ಕೆ ರಾಜನು "ಈಗ ನಾನೇನು

---

* ಶಾಂತನು—ಶಂತನು ಎಂಬ ಎರಡು ಪಾಠಗಳು ಎಲ್ಲೆಡೆಯೂ ಉಂಟು.

§ ಅಣ್ಣನು ಮದುವೆಯಾಗದಿರುವಾಗ ಮದುವೆ ಮಾಡಿಕೊಂಡ ತಮ್ಮನು ಪರಿವೇತ್ತೃವೆನಿಸುತ್ತಾನೆ. ಹೀಗೆ ಮಾಡುವುದು ದೋಷ.

**ತತಸ್ತೇ ಪುನರಪ್ಯೂಚುಃ ॥ 19 ॥ ಯಾವದ್ದೇವಾಪಿರ್ನ ಪತನಾದಿಭಿ-ರ್ದೋಷೈರಭಿಭೂಯತೇ ತಾವದೇತತ್ತಸ್ಯಾರ್ಹಂ ರಾಜ್ಯಮ್ ॥ 20 ॥ ತದಲಮೇತೇನ ತು ತಸ್ಮೈ ದೀಯತಾಮಿತ್ಯುಕ್ತೇ ತಸ್ಯ ಮಂತ್ರಿಪ್ರವ-ರೇಣಾಶ್ಮಸಾರಿಣಾ ತತ್ರಾರಣ್ಯೇ ತಪಸ್ವಿನೋ ವೇದವಾದವಿರೋಧ-ವಕ್ತಾರಃ ಪ್ರಯುಕ್ತಾಃ ॥ 21 ॥ ತೈರಸ್ಯಾಪ್ಯತಿಋಜುಮತೇರ್ಮಹೀಪತಿ-ಪುತ್ರಸ್ಯ ಬುದ್ಧಿರ್ವೇದವಾದವಿರೋಧಮಾರ್ಗಾನುಸಾರಿಣ್ಯಕ್ರಿಯತ ॥ 22 ॥ ರಾಜಾ ಚ ಶಂತನುರ್ದ್ವಿಜವಚನೋತ್ಪನ್ನಪರಿದೇವನಶೋಕಸ್ತಾನ್ ಬ್ರಾಹ್ಮಣಾನಗ್ರತಃ ಕೃತ್ವಾಽಗ್ರಜಸ್ಯ ಪ್ರದಾನಾಯಾರಣ್ಯಂ ಜಗಾಮ ॥ 23 ॥ ತದಾಶ್ರಮಮುಪಗತಾಶ್ಚ ತಮವನತಮವನೀಪತಿಪುತ್ರಂ ದೇವಾಪಿ-ಮುಪತಸ್ಥುಃ। ತೇ ಬ್ರಾಹ್ಮಣಾ ವೇದವಾದಾನುಬಂಧೀನಿ ವಚಾಂಸಿ ರಾಜ್ಯಮಗ್ರಜೇನ ಕರ್ತ್ತವ್ಯಮಿತ್ಯರ್ಥವಂತಿ ತಮೂಚುಃ ॥ 24–25 ॥ ಅಸಾವಪಿ ದೇವಾಪಿರ್ವೇದವಾದವಿರೋಧಯುಕ್ತಿದೂಷಿತಮನೇಕ-**

---

ಮಾಡಬೇಕು?" ಎಂದು ಕೇಳಿದನು (16-18). ಆಗ ಬ್ರಾಹ್ಮಣರು "ರಾಜ, ಎಲ್ಲಿಯವರೆಗೆ ದೇವಾಪಿಯು ಪಾತಿತ್ಯಾದಿ ದೋಷಗಳಿಂದ ದೂಷಿತನಾಗುವುದಿಲ್ಲವೋ ಅಲ್ಲಿಯವರೆಗೆ ಈ ರಾಜ್ಯವು ಆತನಿಗೆ ಸೇರಬೇಕಾದ್ದು. ಆದ್ದರಿಂದ ನೀನು ಈ ರಾಜ್ಯವನ್ನು ತ್ಯಜಿಸಿ ಅವನಿಗೆ ಕೊಟ್ಟುಬಿಡು" ಎಂದರು. ಆಗ ಶಂತನುವಿನ ಪ್ರಧಾನ ಮಂತ್ರಿಯಾದ ಅಶ್ಮಸಾರಿಯು ದೇವಾಪಿಯಿದ್ದ ಅರಣ್ಯಕ್ಕೆ ವೇದವಾದವಿರೋಧಿಗಳಾಗಿ ಮಾತಾಡತಕ್ಕ ಕೆಲವು ತಪಸ್ವಿಗಳನ್ನು ಕಳಿಸಿ ಕೊಟ್ಟನು (19-21). ರಾಜಪುತ್ರನಾದ ದೇವಾಪಿಯಾದರೋ ಸರಳಸ್ವಭಾವದ ಯಥಾರ್ಥಗ್ರಾಹಿ. ಆ ತಪಸ್ವಿಗಳು ಅವನ ಬುದ್ಧಿಯನ್ನು ತಿರುಗಿಸಿ ವೇದ ಸಿದ್ಧಾಂತಕ್ಕೆ ವಿರುದ್ಧವಾದ ಪ್ರವೃತ್ತಿಯನ್ನುಂಟುಮಾಡಿದರು. ಶಂತನುರಾಜನು ಬ್ರಾಹ್ಮಣರ ನುಡಿಗಳನ್ನು ಕೇಳಿ ಶೋಕಾಕುಲನಾಗಿ ಗೋಳಿಡುತ್ತಿದ್ದನು. ಅವನು ಆ ಬ್ರಾಹ್ಮಣರನ್ನು ಮುಂದುಮಾಡಿಕೊಂಡು ಅಣ್ಣನಿಗೆ ರಾಜ್ಯವನ್ನು ಕೊಡುವುದಕ್ಕಾಗಿ ಅರಣ್ಯಕ್ಕೆ ಹೋದನು (22-23). ಆ ಬ್ರಾಹ್ಮಣರು ದೇವಾಪಿಯ ಆಶ್ರಮಕ್ಕೆ ಹೋಗಿ ವಿನೀತನಾದ ದೇವಾಪಿಯನ್ನು ಕಂಡು "ಅಣ್ಣನಾದವನು ರಾಜ್ಯಪಾಲನೆಯನ್ನು ಮಾಡಬೇಕು" ಇತ್ಯಾದಿಯಾಗಿ ವೇದಸಿದ್ಧಾಂತಕ್ಕೆ ಅನುಗುಣವಾದ

**ಪ್ರಕಾರಂ ತಾನಾಹ ॥ 26 ॥ ತತಸ್ತೇ ಬ್ರಾಹ್ಮಣಾಶ್ಶಂತನುಮೂಚುಃ ॥ 27 ॥ ಆಗಚ್ಛ ಹೇ ರಾಜನ್ನಲಮತ್ರಾತಿನಿರ್ಬಂಧೇನ ಪ್ರಶಾಂತ ಏವಾಸಾವನಾವೃಷ್ಟಿದೋಷಃ ಪತಿತೋಽಯಮನಾದಿಕಾಲಮಹಿತವೇದವಚನದೂಷಣೋಚ್ಚಾರಣಾತ್ ॥ 28 ॥ ಪತಿತೇ ಚಾಗ್ರಜೇ ನೈವ ತೇ ಪರಿವೇತ್ತೃತ್ವಂ ಭವತೀತ್ಯುಕ್ತಶ್ಶಂತನುಸ್ಸ್ವಪುರಮಾಗಮ್ಯ ರಾಜ್ಯಮಕರೋತ್ ॥ 29 ॥ ವೇದವಾದವಿರೋಧವಚನೋಚ್ಚಾರಣದೂಷಿತೇ ಚ ತಸ್ಮಿಂ ದೇವಾಪೌ ತಿಷ್ಠತ್ಯಪಿ ಜ್ಯೇಷ್ಠಭ್ರಾತರ್ಯಖಿಲಸಸ್ಯನಿಷ್ಪತ್ತಯೇ ವವರ್ಷ ಭಗವಾನ್ಪರ್ಜನ್ಯಃ ॥ 30 ॥ ಬಾಹ್ಲೀಕಾತ್ಸೋಮದತ್ತಃ ಪುತ್ರೋಽಭೂತ್ ॥ 31 ॥ ಸೋಮದತ್ತಸ್ಯಾಪಿ ಭೂರಿಭೂರಿಶ್ರವಃಶಲ್ಯಸಂಜ್ಞಾಸ್ತ್ರಯಃ ಪುತ್ರಾ ಬಭೂವುಃ ॥ 32 ॥ ಶಂತನೋರಪ್ಯಮರನದ್ಯಾಂ ಜಾಹ್ನವ್ಯಾಮುದಾರಕೀರ್ತಿರಶೇಷಶಾಸ್ತ್ರಾರ್ಥವಿದ್ಭೀಷ್ಮಃ ಪುತ್ರೋಽಭೂತ್ ॥ 33 ॥ ಸತ್ಯವತ್ಯಾಂ**

---

ಮಾತನ್ನಾಡಿದರು. ಆಗ ದೇವಾಪಿಯು ವೇದವಾದಕ್ಕೆ ವಿರುದ್ಧವಾದ ಯುಕ್ತಿಗಳಿಂದ ದೂಷಿತವಾದ ಹಲವಾರು ಮಾತುಗಳನ್ನಾಡಿದನು (24-26). ಆಗ ಬ್ರಾಹ್ಮಣರು ಶಂತನುವನ್ನು ಕುರಿತು "ರಾಜ, ಹೋಗೋಣ ಬಾ. ಇನ್ನು ಈತನನ್ನು ಹೆಚ್ಚಾಗಿ ನಿರ್ಬಂಧಿಸುವುದು ಬೇಡ. ಈಗ ಅನಾವೃಷ್ಟಿದೋಷವು ಶಾಂತವಾಯಿತು. ಅನಾದಿಕಾಲದಿಂದಲೂ ಮಾನ್ಯವಾಗಿರುವ ವೇದವಚನಗಳನ್ನು ದೂಷಿಸುವ ಮಾತುಗಳನ್ನು ಈತನು ಆಡಿದ್ದಾನೆ. ಇವನು ಪತಿತನಾದನು (27-28). ಅಗ್ರಜನು ಪತಿತನಾದ ಮೇಲೆ ನಿನಗೆ ಪರಿವೇತ್ತೃದೋಷವಿಲ್ಲ" ಎಂದರು. ಅನಂತರ ಶಂತನು ತನ್ನ ರಾಜಧಾನಿಗೆ ಬಂದು ರಾಜ್ಯಭಾರವನ್ನು ನಡೆಸತೊಡಗಿದನು. ವೇದವಾದ ವಿರೋಧಿಯಾದ ಮಾತನ್ನಾಡಿ ದೇವಾಪಿಯು ಪಾತಿತ್ಯದೋಷದಿಂದ ಲಿಪ್ತನಾದನು. ಆದ್ದರಿಂದ ಹಿರಿಯಣ್ಣನು ಇದ್ದರೂ ಸಹ ಶಂತನುವಿನ ರಾಜ್ಯದಲ್ಲಿ ಭಗವಾನ್ ಪರ್ಜನ್ಯನು ಸಸ್ಯಸಮೃದ್ಧಿಗಾಗಿ ಮಳೆಸುರಿಸಿದನು (29-30). ಬಾಹ್ಲೀಕನಿಂದ (ಶಂತನುವಿನ ಸೋದರ) ಸೋಮದತ್ತನೆಂಬ ಪುತ್ರನು ಜನಿಸಿದನು. ಸೋಮದತ್ತನಿಗೆ ಭೂರಿ, ಭೂರಿಶ್ರವಸ್ಸು, ಶಲ್ಯ—ಎಂಬ ಹೆಸರಿನ ಮೂವರು ಮಕ್ಕಳಾದರು. ಶಂತನುವಿಗೆ ದೇವನದಿಯಾದ ಗಂಗೆಯಲ್ಲಿ ಅತ್ಯಂತ ಕೀರ್ತಿಶಾಲಿಯೂ ಸಕಲ ಶಾಸ್ತ್ರಾರ್ಥಗಳನ್ನರಿತವನೂ ಆದ ಭೀಷ್ಮನು

**ಚ ಚಿತ್ರಾಂಗದವಿಚಿತ್ರವೀರ್ಯೌ ದ್ವೌ ಪುತ್ರಾವುತ್ಪಾದಯಾಮಾಸ ಶಂತನುಃ ॥ 34 ॥ ಚಿತ್ರಾಂಗದಸ್ತು ಬಾಲ ಏವ ಚಿತ್ರಾಂಗದೇನೈವ ಗಂಧರ್ವೇಣಾಹವೇ ನಿಹತಃ ॥ 35 ॥ ವಿಚಿತ್ರವೀರ್ಯೋಽಪಿ ಕಾಶೀರಾಜ-ತನಯೇ ಅಂಬಿಕಾಂಬಾಲಿಕೇ ಉಪಯೇಮೇ ॥ 36 ॥ ತದುಪ-ಭೋಗಾತಿಖೇದಾಚ್ಚ ಯಕ್ಷ್ಮಣಾ ಗೃಹೀತಃ ಸ ಪಂಚತ್ವಮಗಮತ್ ॥ 37 ॥ ಸತ್ಯವತೀನಿಯೋಗಾಚ್ಚ ಮತ್ಪುತ್ರಃ ಕೃಷ್ಣದ್ವೈಪಾಯನೋ ಮಾತುರ್ವಚನಮನತಿಕ್ರಮಣೀಯಮಿತಿ ಕೃತ್ವಾ ವಿಚಿತ್ರವೀರ್ಯಕ್ಷೇತ್ರೇ ಧೃತರಾಷ್ಟ್ರಪಾಂಡೂ ತತ್ಪ್ರಹಿತಭುಜಿಷ್ಯಾಯಾಂ ವಿದುರಂ ಚೋತ್ಪಾದ-ಯಾಮಾಸ ॥ 38 ॥ ಧೃತರಾಷ್ಟ್ರೋಽಪಿ ಗಾಂಧಾರ್ಯಾಂ ದುರ್ಯೋಧನ-ದುಶ್ಶಾಸನಪ್ರಧಾನಂ ಪುತ್ರಶತಮುತ್ಪಾದಯಾಮಾಸ ॥ 39 ॥ ಪಾಂಡೋ-**

---

ಪುತ್ರನಾಗಿ ಜನಿಸಿದನು (31-33). ಅಲ್ಲದೆ ಶಂತನುವು ಸತ್ಯವತಿಯಲ್ಲಿ ಚಿತ್ರಾಂಗದ. ವಿಚಿತ್ರವೀರ್ಯ ಎಂಬ ಇಬ್ಬರು ಪುತ್ರರನ್ನು ಪಡೆದನು. ಅವರಲ್ಲಿ ಚಿತ್ರಾಂಗದನು ಚಿಕ್ಕವನಾಗಿರುವಾಗ ಚಿತ್ರಾಂಗದ ಎಂದೇ ಹೆಸರಿದ್ದ ಒಬ್ಬ ಗಂಧರ್ವನಿಂದ ಯುದ್ಧದಲ್ಲಿ ಹತನಾದನು (34-35). ವಿಚಿತ್ರವೀರ್ಯನು ಕಾಶೀ ರಾಜನ ಪುತ್ರಿಯರಾದ ಅಂಬಿಕಾ, ಅಂಬಾಲಿಕಾ—ಎಂಬಿಬ್ಬರನ್ನು ಮದುವೆ ಯಾದನು. ಅವರೊಡನೆ ಅತಿಯಾದ ಭೋಗದಲ್ಲಿ ವ್ಯಗ್ರನಾದ ಪ್ರಯುಕ್ತ ಕ್ಷಯರೋಗ ಹಿಡಿದು ವಿಚಿತ್ರವೀರ್ಯನು ಸತ್ತುಹೋದನು (36-37). ಆಮೇಲೆ ಸತ್ಯವತಿಯ ಆಜ್ಞೆಯಂತೆ, ಮೈತ್ರೇಯ, ನನ್ನ ಮಗನಾದ ಕೃಷ್ಣದ್ವೈಪಾಯನನು ತಾಯಿಯ ಮಾತನ್ನು ಉಲ್ಲಂಘಿಸಬಾರದೆಂದು ತಿಳಿದು, ವಿಚಿತ್ರವೀರ್ಯನ ಪತ್ನಿಯರಲ್ಲಿ ಧೃತರಾಷ್ಟ್ರ, ಪಾಂಡು—ಎಂಬವರನ್ನೂ ಅವರು ಕಳಿಸಿದ್ದ ದಾಸಿಯಲ್ಲಿ ವಿದುರನನ್ನೂ ಉತ್ಪಾದಿಸಿದನು* (38). ಧೃತರಾಷ್ಟ್ರನು ಗಾಂಧಾರಿ ಯಲ್ಲಿ ದುರ್ಯೋಧನ, ದುಃಶಾಸನ—ಮೊದಲಾದ ನೂರು ಮಂದಿ ಮಕ್ಕಳನ್ನು ಪಡೆದನು. ಪಾಂಡು ರಾಜನು ವನದಲ್ಲಿ ಬೇಟೆಯಾಡುವಾಗ ಋಷಿಶಾಪಕ್ಕೆ

---

* ಈ ಪ್ರಕರಣ ಮಹಾಭಾರತದಲ್ಲಿ ವಿಸ್ತೃತವಾಗಿ ಬಂದಿದೆ. ಹೀಗೆ ನಿಯೋಗದಿಂದ 'ದೇವರೇಣ ಸುತೋತ್ಪತ್ತಿ'ಯು ಕಲಿಯುಗದಲ್ಲಿ ನಿಷಿದ್ಧ.

**ರಪ್ಯರಣ್ಯೇ ಮೃಗಯಾಯಾಮೃಷಿಶಾಪೋಹತಪ್ರಜಾಜನನಸಾಮರ್ಥ್ಯಸ್ಯ ಧರ್ಮವಾಯುಶಕ್ರೈರ್ಯುಧಿಷ್ಠಿರಭೀಮಸೇನಾರ್ಜುನಾಃ ಕುಂತ್ಯಾಂ ನಕುಲಸಹದೇವೌ ಚಾಶ್ವಿಭ್ಯಾಂ ಮಾದ್ರ್ಯಾಂ ಪಂಚಪುತ್ರಾಸ್ಸಮುತ್ಪಾದಿತಾಃ ॥ 40 ॥ ತೇಷಾಂ ಚ ದ್ರೌಪದ್ಯಾಂ ಪಂಚೈವ ಪುತ್ರಾ ಬಭೂವುಃ ॥ 41 ॥ ಯುಧಿಷ್ಠಿರಾತ್ ಪ್ರತಿವಿಂಧ್ಯಃ ಭೀಮಸೇನಾಚ್ಛ್ರುತಸೇನಃ ಶ್ರುತಕೀರ್ತಿ-ರರ್ಜುನಾಚ್ಛ್ರುತಾನೀಕೋ ನಕುಲಾತ್ ಶ್ರುತಕರ್ಮಾ ಸಹದೇವಾತ್ ॥ 42 ॥ ಅನ್ಯೇ ಚ ಪಾಂಡವಾನಾಮಾತ್ಮಜಾಸ್ತದ್ಯಥಾ ॥ 43 ॥ ಯೌಧೇಯೀ ಯುಧಿಷ್ಠಿರಾದ್ದೇವಕಂ ಪುತ್ರಮವಾಪ ॥ 44 ॥ ಹಿಡಿಂಬಾ ಘಟೋತ್ಕಚಂ ಭೀಮಸೇನಾತ್ಪುತ್ರಂ ಲೇಭೇ ॥ 45 ॥ ಕಾಶೀ ಚ ಭೀಮಸೇನಾದೇವ ಸರ್ವಗಂ ಸುತಮವಾಪ ॥ 46 ॥ ಸಹದೇವಾಚ್ಚ ವಿಜಯಾ ಸುಹೋತ್ರಂ ಪುತ್ರಮವಾಪ ॥ 47 ॥ ರೇಣುಮತ್ಯಾಂ ಚ ನಕುಲೋಽಪಿ ನಿರಮಿತ್ರ-**

---

ಒಳಗಾಗಿ ಸಂತಾನೋತ್ಪತ್ತಿಯಲ್ಲಿ ಅಸಮರ್ಥನಾದನು. ಅನಂತರ (ಆತನ ಪತ್ನಿಯಾದ) ಕುಂತಿಯಲ್ಲಿ ಯಮಧರ್ಮ, ವಾಯು, ಇಂದ್ರರಿಂದ ಕ್ರಮವಾಗಿ ಯುಧಿಷ್ಠಿರ, ಭೀಮಸೇನ, ಅರ್ಜುನರು ಜನಿಸಿದರು. ಅಶ್ವಿನೀ ದೇವತೆಗಳಿಂದ ಮಾದ್ರಿಯಲ್ಲಿ ನಕುಲ, ಸಹದೇವರು ಹುಟ್ಟಿದರು. ಹೀಗೆ ಪಾಂಡುರಾಜನ ಮಕ್ಕಳು ಐವರು (39-40). ಆ ಐವರಿಗೆ ದ್ರೌಪದಿಯಲ್ಲಿ ಐವರು ಮಕ್ಕಳಾದರು. ಯುಧಿಷ್ಠಿರನಿಂದ ಪ್ರತಿವಿಂಧ್ಯನೂ ಭೀಮಸೇನನಿಂದ ಶ್ರುತಸೇನನೂ ಅರ್ಜುನನಿಂದ ಶ್ರುತಕೀರ್ತಿಯೂ ನಕುಲನಿಂದ ಶ್ರುತಾನೀಕನೂ ಸಹದೇವನಿಂದ ಶ್ರುತಕರ್ಮನೂ ಜನಿಸಿದರು (41-42). ಇವರಲ್ಲದೆ ಪಾಂಡವರಿಗೆ ಇನ್ನೂ ಕೆಲವು ಆತ್ಮಜರಿದ್ದರು: ಯುಧಿಷ್ಠಿರನಿಂದ ಯೌಧೇಯಿಯು ದೇವಕನೆಂಬ ಪುತ್ರನನ್ನು ಪಡೆದಳು. ಹಿಡಿಂಬೆಯು ಭೀಮಸೇನನಿಂದ ಘಟೋತ್ಕಚನನ್ನು ಪಡೆದಳು. ಭೀಮಸೇನನಿಂದಲೇ ಕಾಶಿಯು ಸರ್ವಗನೆಂಬ ಮಗನನ್ನೂ ವಿಜಯಾ ಎಂಬುವಳು ಸಹದೇವನಿಂದ ಸುಹೋತ್ರನೆಂಬ ಮಗನನ್ನೂ ಪಡೆದರು. ನಕುಲನು ರೇಣುಮತಿಯಲ್ಲಿ ನಿರಮಿತ್ರನೆಂಬ ಪುತ್ರನನ್ನು ಉತ್ಪಾದಿಸಿದನು*

---

* ಮಹಾಭಾರತ ಆದಿಪರ್ವದಲ್ಲಿ ಈ ವಿಷಯವಿದ್ದು, ಹೆಸರುಗಳಲ್ಲಿ ಸ್ವಲ್ಪ ಭೇದವೂ ಹೆಚ್ಚಿನ ವಿವರವೂ ಇದೆ.

**ಮಜೀಜನತ್ ॥ 48 ॥ ಅರ್ಜುನಸ್ಯಾಪ್ಯುಲೂಪ್ಯಾಂ ನಾಗಕನ್ಯಾಯಾಮಿರಾವಾನ್ನಾಮ ಪುತ್ರೋಽಭವತ್ ॥ 49 ॥ ಮಣಿಪುರಪತಿಪುತ್ರ್ಯಾಂ ಪುತ್ರಿಕಾಧರ್ಮೇಣ ಬಭ್ರುವಾಹನಂ ನಾಮ ಪುತ್ರಮರ್ಜುನೋಽಜನಯತ್ ॥ 50 ॥ ಸುಭದ್ರಾಯಾಂ ಚಾರ್ಭಕತ್ವೇಽಪಿ ಯೋಽಸಾವತಿಬಲಪರಾಕ್ರಮಸ್ಸಮಸ್ತಾರಾತಿರಥಜೇತಾ ಸೋಽಭಿಮನ್ಯುರಜಾಯತ ॥ 51 ॥ ಅಭಿಮನ್ಯೋರುತ್ತರಾಯಾಂ ಪರಿಕ್ಷೀಣೇಷುಕುರುಷ್ವಶ್ವತ್ಥಾಮ ಪ್ರಯುಕ್ತಬ್ರಹ್ಮಾಸ್ತ್ರೇಣ ಗರ್ಭ ಏವ ಭಸ್ಮೀಕೃತೋ ಭಗವತಸ್ಸಕಲಸುರಾಸುರವಂದಿತಚರಣಯುಗಲಸ್ಯಾತ್ಮೇಚ್ಛಯಾ ಕಾರಣಮಾನುಷರೂಪಧಾರಿಣೋಽನುಭಾವಾತ್ಪುನರ್ಜೀವಿತಮವಾಪ್ಯ ಪರೀಕ್ಷಿಜ್ಜಜ್ಞೇ ॥ 52 ॥**

---

(43-48). ಅರ್ಜುನನಿಗೆ ಉಲೂಪಿಯೆಂಬ ನಾಗಕನ್ಯೆಯಲ್ಲಿ ಇರಾವಾನ್ ಎಂಬ ಪುತ್ರನು ಹುಟ್ಟಿದನು. ಮಣಿಪುರಾಧಿಪತಿಯ ಮಗಳಲ್ಲಿ (ಚಿತ್ರಾಂಗದೆಯಲ್ಲಿ) ಅರ್ಜುನನು ಪುತ್ರಿಕಾಧರ್ಮದಿಂದ ಬಭ್ರುವಾಹನನೆಂಬ ಪುತ್ರನನ್ನು ಉತ್ಪಾದಿಸಿದನು* (49-50). ಬಾಲಕನಾಗಿದ್ದರೂ ಯಾವಾತನು ಅತ್ಯಂತ ಬಲಾಢ್ಯನೂ ಪರಾಕ್ರಮಿಯೂ ಆಗಿದ್ದನೋ ವೈರಿಗಳ ಸಮಸ್ತ ಅತಿರಥರನ್ನೂ ಸದೆಬಡಿದನೋ ಆ ಅಭಿಮನ್ಯು ಅರ್ಜುನನಿಗೆ ಸುಭದ್ರೆಯಲ್ಲಿ ಜನಿಸಿದನು (51). ಮೈತ್ರೇಯ, ಅಭಿಮನ್ಯುವಿಗೆ ಉತ್ತರೆಯಲ್ಲಿ ಪರೀಕ್ಷಿತರಾಜನು ಹುಟ್ಟಿದನು. ಕುರುವಂಶವೇ ಲಯವಾಗುತ್ತಿದ್ದ ಸಂದರ್ಭದಲ್ಲಿ ಅಶ್ವತ್ಥಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಈತನು ಗರ್ಭದಲ್ಲಿರುವಾಗಲೇ ದಗ್ಧನಾಗಿದ್ದನು. ಆ ಸಮಯದಲ್ಲಿ ಸಕಲ ಸುರಾಸುರವಂದಿತ ಪಾದಯುಗಳನೂ ಕಾರಣ ಮಾನುಷರೂಪಧಾರಿಯೂ ಆದ ಭಗವಾನ್ ಶ್ರೀಕೃಷ್ಣನ ಮಹಿಮೆಯಿಂದ ಆತನ

---

* ಮಣಿಪುರ ಎಂಬುದಕ್ಕೆ ಬದಲಾಗಿ ಮಣಲೂರು ಎಂದು ಪಾಠಾಂತರವಿದೆ. ಕನ್ಯಾಪಿತೃವಿಗೆ ಗಂಡು ಸಂತತಿ ಇಲ್ಲದಾಗ 'ಈ ಕನ್ಯೆಯಲ್ಲಿ ಹುಟ್ಟುವ ಪುತ್ರನು ನನ್ನ ಪುತ್ರನಂತೆ ಇರತಕ್ಕದ್ದು' ಎಂಬ ಕರಾರಿನಿಂದ ವಿವಾಹ ಮಾಡಿಕೊಡುವುದು ಪುತ್ರಿಕಾಧರ್ಮ ವಿವಾಹ. 'ಅಭ್ರಾತೃಕಾಂ ಪ್ರದಾಸ್ಯಾಮಿ ತುಭ್ಯಂ ಕನ್ಯಾಮಲಂಕೃತಾಮ್ । ಅಸ್ಯಾಂ ಯೋ ಜಾಯತೇ ಪುತ್ರಃ ಸ ಮೇ ಪುತ್ರೋ ಭವೇದಿತಿ'.

**ಯೋಽಯಂ ಸಾಂಪ್ರತಮೇತದ್ಭೂಮಂಡಲಮಖಂಡಿತಾಯತಿ-ಧರ್ಮೇಣ ಪಾಲಯತೀತಿ ॥ 53 ॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ವಿಂಶೋಽಧ್ಯಾಯಃ

---

ಇಚ್ಛಾನುಸಾರವಾಗಿ ಪರೀಕ್ಷಿತನು ಮತ್ತೆ ಜೀವಿತವನ್ನು ಪಡೆದನು. ಈಗ ಈ ಭೂಮಂಡಲವನ್ನು ಆ ಪರೀಕ್ಷಿತನೇ ಧರ್ಮಾನುಸಾರವಾಗಿ ಪಾಲಿಸುತ್ತಿದ್ದಾನೆ (52-53).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಇಪ್ಪತ್ತನೆಯ ಅಧ್ಯಾಯ ಮುಗಿಯಿತು.



## ಏಕವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಅತಃ ಪರಂ ಭವಿಷ್ಯಾನಹಂ ಭೂಪಾಲಾನ್ಕೀರ್ತಯಿಷ್ಯಾಮಿ ॥ 1 ॥ ಯೋಽಯಂ ಸಾಂಪ್ರತಮವನೀಪತಿಃ ಪರೀಕ್ಷಿತ್ತಸ್ಯಾಪಿ ಜನಮೇಜಯ-ಶ್ರುತಸೇನೋಗ್ರಸೇನಭೀಮಸೇನಾಶ್ಚತ್ವಾರಃ ಪುತ್ರಾ ಭವಿಷ್ಯಂತಿ ॥ 2 ॥ ಜನಮೇಜಯಸ್ಯಾಪಿ ಶತಾನೀಕೋ ಭವಿಷ್ಯತಿ ॥ 3 ॥ ಯೋಽಸೌ ಯಾಜ್ಞವಲ್ಕ್ಯಾದ್ವೇದಮಧೀತ್ಯ ಕೃಪಾದಸ್ತ್ರಾಣ್ಯವಾಪ್ಯ ವಿಷಮವಿಷಯ-ವಿರಕ್ತಚಿತ್ತವೃತ್ತಿಶ್ಚ ಶೌನಕೋಪದೇಶಾದಾತ್ಮಜ್ಞಾನಪ್ರವೀಣಃ ಪರಂ ನಿರ್ವಾಣಮವಾಪ್ಸ್ಯತಿ ॥ 4 ॥ ಶತಾನೀಕಾದಶ್ವಮೇಧದತ್ತೋ ಭವಿತಾ**

---

## ಅಧ್ಯಾಯ 21

ಭವಿಷ್ಯತ್ತಿನಲ್ಲಿ ಆಗುವ ಕುರುವಂಶದ ರಾಜರು.

ಪರಾಶರಮುನಿಗಳು ಹೇಳಿದರು: ಇನ್ನುಮುಂದೆ ಆಗಲಿರುವ ಭೂಪಾಲರನ್ನೀಗ ಹೇಳುವೆನು: ಪ್ರಕೃತದಲ್ಲಿ ಭೂಪಾಲನಾಗಿ ಪರೀಕ್ಷಿತನಿರುವನಷ್ಟೆ, ಈತನಿಗೆ ಜನಮೇಜಯ, ಶ್ರುತಸೇನ, ಉಗ್ರಸೇನ, ಭೀಮಸೇನ—ಎಂಬ ನಾಲ್ವರು ಪುತ್ರರು ಉದಿಸುವರು (1-2). ಜನಮೇಜಯನಿಗೆ ಶತಾನೀಕ ಎಂಬವನು ಪುತ್ರನಾಗುವನು. ಅವನು ಯಾಜ್ಞವಲ್ಕ್ಯರಿಂದ ವೇದವನ್ನು ಅಧ್ಯಯನ ಮಾಡಿ ಕೃಪಾಚಾರ್ಯನಿಂದ ಅಸ್ತ್ರವಿದ್ಯೆಯನ್ನು ಕಲಿಯುವನು. ವಿಷಯಗಳು ವಿಷಮವಾದುವುಗಳೆಂದು ವಿರಕ್ತಿಯು ಅವನ ಚಿತ್ತದಲ್ಲಿ ಉದಿಸುವುದು. ಆಗ ಶೌನಕರ ಉಪದೇಶದಿಂದ ಆತ್ಮಜ್ಞಾನದಲ್ಲಿ ಪ್ರವೀಣನಾಗಿ ಪರಮನಿರ್ವಾಣವನ್ನೈದುವನು (3-4). ಶತಾನೀಕನಿಗೆ ಅಶ್ವಮೇಧದತ್ತನೆಂಬ

**॥ 5 ॥ ತಸ್ಮಾದಪ್ಯಧಿಸೀಮಕೃಷ್ಣಃ ॥ 6 ॥ ಅಧಿಸೀಮಕೃಷ್ಣಾನ್ನಿಚಕ್ನುಃ ॥ 7 ॥ ಯೋ ಗಂಗಯಾಪಹೃತೇ ಹಸ್ತಿನಾಪುರೇ ಕೌಶಾಮ್ಬ್ಯಾಂ ನಿವತ್ಸ್ಯತಿ ॥ 8 ॥ ತಸ್ಯಾಪ್ಯುಷ್ಣಃ ಪುತ್ರೋ ಭವಿತಾ ॥ 9 ॥ ಉಷ್ಣಾದ್ವಿಚಿತ್ರರಥಃ ॥ 10 ॥ ತತಃ ಶುಚಿರಥಃ ॥ 11 ॥ ತಸ್ಮಾದ್‌ವೃಷ್ಣಿಮಾಂಸ್ತತಸ್ಸುಷೇಣಸ್ತಸ್ಯಾಪಿ ಸುನೀಥ-ಸ್ಸುನೀಥಾನ್ನೃಪಚಕ್ಷುಸ್ತಸ್ಮಾದಪಿಸುಖಾವಲಸ್ತಸ್ಯ ಚ ಪಾರಿಪ್ಲವಸ್ತತಶ್ಚ ಸುನಯಸ್ತಸ್ಯಾಪಿ ಮೇಧಾವೀ ॥ 12 ॥ ಮೇಧಾವಿನೋ ರಿಪುಂಜಯ-ಸ್ತತೋ ಮೃದುಸ್ತಸ್ಮಾಚ್ಚ ತಿಗ್ಮಸ್ತಸ್ಮಾದ್‌ಬೃಹದ್ರಥೋ ಬೃಹದ್ರಥಾ-ದ್ವಸುದಾನಃ ॥ 13 ॥ ತತೋಽಪರಶ್ಶತಾನೀಕಃ ॥ 14 ॥ ತಸ್ಮಾಚ್ಚೋದಯನ ಉದಯನಾದಹೀನರಸ್ತತಶ್ಚ ದಂಡಪಾಣಿಸ್ತತೋ ನಿರಮಿತ್ರಃ ॥ 15 ॥ ತಸ್ಮಾಚ್ಚ ಕ್ಷೇಮಕಃ ॥ 16 ॥ ಅತ್ರಾಯಂ ಶ್ಲೋಕಃ ॥ 17 ॥**

---

ಪುತ್ರನು ಹುಟ್ಟಿರುವನು. ಅವನ ಮಗ ಅಧಿಸೀಮಕೃಷ್ಣ. ಅವನ ಮಗ ನಿಚಕ್ನು. ಗಂಗಾನದಿಯಿಂದ ಹಸ್ತಿನಾಪುರವು ತೇಲಿಹೋಗಲಾಗಿ ಈತನು ಕೌಶಾಂಬಿಯಲ್ಲಿ ನೆಲೆಸುವನು (5-8). ನಿಚಕ್ನುವಿಗೆ ಉಷ್ಣನೆಂಬ ಪುತ್ರನು ಜನಿಸುವನು. ಉಷ್ಣನಿಗೆ ಚಿತ್ರರಥನೂ ಅವನಿಗೆ ಶುಚಿರಥನೂ ಪುತ್ರರಾಗುವರು. ಶುಚಿರಥನಿಂದ ವೃಷ್ಣಿ ಮಂತನೂ ಅವನಿಂದ ಸುಷೇಣನೂ ಆತನಿಂದ ಸುನೀತ ಎಂಬವನೂ ಜನಿಸುವರು. ಸುನೀತನಿಗೆ ನೃಪಚಕ್ಷು, ಅವನಿಗೆ ಸುಖಾವಲ, ಆತನಿಗೆ ಪಾರಿಪ್ಲವ, ಅವನಿಗೆ ಸುನಯ, ಸುನಯನಿಗೆ ಮೇಧಾವಿ—ಎಂಬವರು ಪುತ್ರರಾಗಿ ಹುಟ್ಟುವರು (9-12). ಮೇಧಾವಿಯ ಮಗ ರಿಪುಂಜಯ. ಅವನ ಮಗ ಮೃದು. ಆತನಿಂದ ತಿಗ್ಮನೂ ಅವನಿಂದ ಬೃಹದ್ರಥನೂ ಬೃಹದ್ರಥನಿಂದ ವಸುದಾನ—ಎಂಬವನೂ ಜನಿಸುವರು. ವಸುದಾನನಿಂದ ಇನ್ನೊಬ್ಬ ಶತಾನೀಕನು ಹುಟ್ಟುವನು. ಶತಾನೀಕನಿಂದ ಉದಯನ, ಅವನಿಂದ ಅಹೀನರ, ಅವನಿಂದ ದಂಡಪಾಣಿ, ಆತನಿಂದ ನಿರಮಿತ್ರ—ಎಂಬವರು ಹುಟ್ಟುವರು (13-15). ನಿರಮಿತ್ರನ ಮಗ ಕ್ಷೇಮಕ ಎಂಬವನು. ಈ ವಿಷಯವಾಗಿ ಈ ಶ್ಲೋಕವಿದೆ—'ಯಾವ ವಂಶವು ಬ್ರಾಹ್ಮಣರ ಮತ್ತು ಕ್ಷತ್ರಿಯರ ಉತ್ಪತ್ತಿಗೆ ಕಾರಣವಾಗಿತ್ತೋ ಮತ್ತು ರಾಜರ್ಷಿಗಳಿಂದ ಗೌರವವನ್ನು ಪಡೆದಿತ್ತೋ ಆ

**ಬ್ರಹ್ಮಕ್ಷತ್ರಸ್ಯ ಯೋ ಯೋನಿರ್ವಂಶೋ ರಾಜರ್ಷಿಸತ್ಕೃತಃ।**
**ಕ್ಷೇಮಕಂ ಪ್ರಾಪ್ಯ ರಾಜಾನಂ ಸಂಸ್ಥಾನಂ ಪ್ರಾಪ್ಸ್ಯತೇ ಕಲೌ॥** 18

**ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಏಕವಿಂಶೋಽಧ್ಯಾಯಃ**

---

(ಕುರು) ವಂಶವು ಕಲಿಯುಗದಲ್ಲಿ ಕ್ಷೇಮಕರಾಜನವರೆಗೆ ನಡೆದು ಸಮಾಪ್ತಿಯನ್ನೈದುವುದು' (16-18).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.



## ದ್ವಾವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಅತಶ್ಚೇಕ್ಷ್ವಾಕವೋ ಭವಿಷ್ಯಾಃ ಪಾರ್ಥಿವಾಃ ಕಥ್ಯಂತೇ ॥ 1 ॥ ಬೃಹದ್ಬಲಸ್ಯ ಪುತ್ರೋ ಬೃಹತ್ಕ್ಷಣಃ ॥ 2 ॥ ತಸ್ಮಾದುರುಕ್ಷಯಸ್ತಸ್ಮಾಚ್ಚ ವತ್ಸವ್ಯೂಹಸ್ತತಶ್ಚ ಪ್ರತಿವ್ಯೋಮಸ್ತಸ್ಮಾದಪಿ ದಿವಾಕರಃ ॥ 3 ॥ ತಸ್ಮಾತ್ಸಹ-ದೇವಃ ಸಹದೇವಾದ್ಬೃಹದಶ್ವಸ್ತತ್ಸೂನುರ್ಭಾನುರಥಸ್ತಸ್ಯ ಚ ಪ್ರತೀ-ತಾಶ್ವಸ್ತಸ್ಯಾಪಿ ಸುಪ್ರತೀಕಸ್ತತಶ್ಚ ಮರುದೇವಸ್ತತಃ ಸುನಕ್ಷತ್ರಸ್ತಸ್ಮಾತ್ಕಿನ್ನರಃ ॥ 4 ॥ ಕಿನ್ನರಾದಂತರಿಕ್ಷಸ್ತಸ್ಮಾತ್ಸುಪರ್ಣಸ್ತತಶ್ಚಾಮಿತ್ರಜಿತ್ ॥ 5 ॥ ತತಶ್ಚ ಬೃಹದ್ರಾಜಸ್ತಸ್ಯಾಪಿ ಧರ್ಮೀ ಧರ್ಮಿಣಃ ಕೃತಂಜಯಃ ॥ 6 ॥ ಕೃತಂ-**

---

## ಅಧ್ಯಾಯ 22

ಭವಿಷ್ಯದಲ್ಲಾಗುವ ಇಕ್ಷ್ವಾಕುವಂಶದ ರಾಜರ ವರ್ಣನೆ.

ಪರಾಶರರು ಹೇಳಿದರು: ಮೈತ್ರೇಯ, ಇನ್ನು ಭವಿಷ್ಯದಲ್ಲಾಗುವ ಇಕ್ಷ್ವಾಕುವಂಶದ ಭೂಪಾಲರನ್ನು ಕುರಿತು ಹೇಳುತ್ತೇನೆ. ಬೃಹದ್ಬಲನ* ಮಗ ಬೃಹತ್ಕ್ಷಣ. ಅವನಿಂದ ಉರುಕ್ಷಯ. ಅವನಿಂದ ವತ್ಸವ್ಯೂಹ. ಆತನಿಂದ ಪ್ರತಿವ್ಯೋಮ, ಆತನಿಂದ ದಿವಾಕರ—ಎಂಬವರು ಜನಿಸುವರು (1-3). ದಿವಾಕರನಿಂದ ಸಹದೇವನೂ ಸಹದೇವನಿಂದ ಬೃಹದಶ್ವನೂ ಜನಿಸುವರು. ಬೃಹದಶ್ವನ ಮಗ ಭಾನುರಥ, ಅವನ ಮಗ ಪ್ರತೀತಾಶ್ವ, ಆತನ ಪುತ್ರ ಸುಪ್ರತೀಕ, ಆತನ ಪುತ್ರ ಮರುದೇವ. ಮರುದೇವನಿಂದ ಸುನಕ್ಷತ್ರನೂ, ಆತನಿಂದ ಕಿನ್ನರ—ಎಂಬವನೂ ಹುಟ್ಟುವರು. ಕಿನ್ನರನಿಂದ ಅಂತರಿಕ್ಷ, ಅವನಿಂದ ಸುಪರ್ಣ, ಆತನಿಂದ ಅಮಿತ್ರಜಿತ್ (4-5). ಅಮಿತ್ರಜಿತ್ತನಿಂದ ಬೃಹದ್ರಾಜ ಎಂಬಾತನೂ ಆತನಿಂದ ಧರ್ಮಿಯೂ ಧರ್ಮಿಯಿಂದ ಕೃತಂಜಯನೂ

---

* ವಿಶ್ವಭವನ ಮಗನಾದ ಈ ಬೃಹದ್ಬಲನನ್ನು ಭಾರತಯುದ್ಧದಲ್ಲಿ ಅಭಿಮನ್ಯು ಸಂಹರಿಸಿದನೆಂದು ನಾಲ್ಕನೆಯ ಅಧ್ಯಾಯದ ಕಡೆಯಲ್ಲಿ ಹೇಳಿದೆ.

**ಜಯಾದ್ರಣಂಜಯಃ ॥ ರಣಂಜಯಾತ್ಸಂಜಯಸ್ತಸ್ಮಾಚ್ಛಾಕ್ಯಶ್ಶಾಕ್ಯಾತ್ ಶುದ್ಧೋದನಸ್ತಸ್ಮಾದ್ರಾಹುಲಸ್ತತಃ ಪ್ರಸೇನಜಿತ್ ॥ 7-8 ॥ ತತಶ್ಚ ಕ್ಷುದ್ರಕ-ಸ್ತತಶ್ಚ ಕುಂಡಕಸ್ತಸ್ಮಾದಪಿ ಸುರಥಃ ॥ 9 ॥ ತತ್ಪುತ್ರಶ್ಚ ಸುಮಿತ್ರಃ ॥ 10 ॥ ಇತ್ಯೇತೇ ಚೇಕ್ಷ್ವಾಕವೋ ಬೃಹದ್ಬಲಾನ್ವಯಾಃ ॥ 11 ॥ ಅತ್ರಾನು ವಂಶ-ಶ್ಲೋಕಃ ॥ 12 ॥**

**ಇಕ್ಷ್ವಾಕೂಣಾಮಯಂ ವಂಶಸ್ಸುಮಿತ್ರಾಂತೋ ಭವಿಷ್ಯತಿ ।**
**ಯತಸ್ತಂ ಪ್ರಾಪ್ಯ ರಾಜಾನಂ ಸಂಸ್ಥಾಂ ಪ್ರಾಪ್ಸ್ಯತಿ ವೈ ಕಲೌ ॥ 13**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ದ್ವಾವಿಂಶೋಽಧ್ಯಾಯಃ

---

ಜನಿಸುವರು. ಕೃತಂಜಯನ ಮಗ ರಣಂಜಯ. ರಣಂಜಯನಿಂದ ಸಂಜಯ, ಅವನಿಂದ ಶಾಕ್ಯ, ಶಾಕ್ಯನಿಂದ ಶುದ್ಧೋದನ, ಅವನಿಂದ ರಾಹುಲ* ಆತನಿಂದ ಪ್ರಸೇನಜಿತ್—ಹುಟ್ಟುವರು (6-8). ಪ್ರಸೇನಜಿತ್ತಿನಿಂದ ಕ್ಷುದ್ರಕ, ಅವನಿಂದ ಕುಂಡಕ, ಆತನಿಂದ ಸುರಥ—ಎಂಬವರು ಜನಿಸುವರು. ಸುರಥನ ಮಗ ಸುಮಿತ್ರ. ಇವರು ಬೃಹದ್ಬಲನ ಕುಲದಲ್ಲಿ ಜನಿಸಿದ ಇಕ್ಷ್ವಾಕುವಂಶೀಯರು. ಆ ವಂಶವನ್ನು ಕುರಿತ ಶ್ಲೋಕ ಇದು (9-11): "ಇಕ್ಷ್ವಾಕುವಿನ ಈ ವಂಶವು ಸುಮಿತ್ರನವರೆಗೆ ನಡೆಯುವುದು. ಸುಮಿತ್ರರಾಜನಾದ ಮೇಲೆ ಈ ವಂಶವು ಕಲಿಯುಗದಲ್ಲಿ ಸಮಾಪ್ತವಾಗುವುದು" (12-13).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.



---

* ಶುದ್ಧೋದನನ ಮಗ ಸಿದ್ಧಾರ್ಥ (ಬುದ್ಧ)ನೆಂದೂ ಅವನ ಮಗ ರಾಹುಲನೆಂದೂ ಇತಿಹಾಸದಲ್ಲಿದೆ. ಬೌದ್ಧರೂ ಸಿದ್ಧಾರ್ಥನನ್ನು ಇಕ್ಷ್ವಾಕುವಂಶೀಯನೆಂದು ಹೇಳುತ್ತಾರೆ.

## ತ್ರಯೋವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಮಾಗಧಾನಾಂ ಬಾರ್ಹದ್ರಥಾನಾಂ ಭಾವಿನಾಮನುಕ್ರಮಂ ಕಥಯಿಷ್ಯಾಮಿ ॥ 1 ॥ ಅತ್ರ ಹಿ ವಂಶೇ ಮಹಾಬಲಪರಾಕ್ರಮಾ ಜರಾಸಂಧಪ್ರಧಾನಾ ಬಭೂವುಃ ॥ 2 ॥ ಜರಾಸಂಧಸ್ಯ ಪುತ್ರಃ ಸಹದೇವಃ ॥ 3 ॥ ಸಹದೇವಾತ್ ಸೋಮಾಪಿಸ್ತಸ್ಯ ಶ್ರುತಶ್ರವಾಸ್ತಸ್ಯಾಪ್ಯಯುತಾಯುಸ್ತತಶ್ಚ ನಿರಮಿತ್ರಸ್ತತ್ತನಯಸ್ಸುನೇತ್ರಸ್ತಸ್ಮಾದಪಿ ಬೃಹತ್ಕರ್ಮಾ ॥ 4 ॥ ತತಶ್ಚ ಸೇನಜಿತ್ತತಶ್ಚ ಶ್ರುತಂಜಯಸ್ತತೋ ವಿಪ್ರಸ್ತಸ್ಯ ಚ ಪುತ್ರಶ್ಶುಚಿನಾಮಾ ಭವಿಷ್ಯತಿ ॥ 5 ॥ ತಸ್ಯಾಪಿ ಕ್ಷೇಮ್ಯಸ್ತತಶ್ಚ ಸುವ್ರತಸ್ಸುವ್ರತಾದ್ಧರ್ಮಸ್ತತಸ್ಸುಶ್ರವಾಃ ॥ 6 ॥**

---

## ಅಧ್ಯಾಯ 23

ಮಗಧ ವಂಶದ ವರ್ಣನೆ.

ಪರಾಶರರು ಹೇಳಿದರು: ಮೈತ್ರೇಯ, ಇನ್ನು ಬೃಹದ್ರಥನ ವಂಶೀಯರಾದ ಮಗಧರಾಜರ ಅನುಕ್ರಮವನ್ನು ಹೇಳುವೆನು. ಈ ವಂಶದಲ್ಲಿ ಜರಾಸಂಧ ಪ್ರಮುಖರಾದ ಮಹಾಬಲ ಪರಾಕ್ರಮಿಗಳು ಆಗಿದ್ದಾರೆ* (1-2). ಜರಾಸಂಧನ ಮಗ ಸಹದೇವ. ಸಹದೇವನ ಮಗ ಸೋಮಪ. ಅವನ ಮಗ ಶ್ರುತಶ್ರವ. ಆತನ ಮಗ ಅಯುತಾಯ. ಅವನ ತನಯ ನಿರಮಿತ್ರ. ಆತನ ತನಯ ಸುನೇತ್ರ. ಸುನೇತ್ರನಿಗೆ ಬೃಹತ್ಕರ್ಮನೆಂಬ ಪುತ್ರನು ಜನಿಸುವನು (3-4). ಅವನಿಂದ ಸೇನಜಿತ್, ಆತನಿಂದ ಶ್ರುಂಜಯ, ಆತನಿಂದ ವಿಪ್ರ—ಎಂಬವರು ಹುಟ್ಟುವರು. ವಿಪ್ರನಿಗೆ ಶುಚಿ ಎಂಬ ಮಗನು ಹುಟ್ಟುವನು. ಆತನ ಮಗ ಕ್ಷೇಮ್ಯ, ಕ್ಷೇಮ್ಯನ ಮಗ ಸುವ್ರತ. ಸುವ್ರತನಿಂದ ಧರ್ಮನೂ ಆತನಿಂದ ಸುಶ್ರವ—ಎಂಬವರೂ ಹುಟ್ಟುವರು. ಸುಶ್ರವನ ಪುತ್ರ ದೃಢಸೇನ (5-7).

---

* ಮಗಧರಾಜರ ಪೂರ್ವವಂಶಕ್ರಮವು 19 ನೆಯ ಅಧ್ಯಾಯದ ಕೊನೆಯಲ್ಲಿ ಬಂದಿದೆ.

**ತತೋ ದೃಢಸೇನಃ ॥7॥ ತಸ್ಮಾತ್ಸುಬಲಃ ॥8॥ ಸುಬಲಾತ್ಸುನೀತೋ ಭವಿತಾ ॥9॥ ತತಸ್ಸತ್ಯಜಿತ್ ॥10॥ ತಸ್ಮಾದ್ವಿಶ್ವಜಿತ್ ॥11॥ ತಸ್ಯಾಪಿ ರಿಪುಂಜಯಃ॥12॥ ಇತ್ಯೇತೇ ಬಾರ್ಹದ್ರಥಾ ಭೂಪತಯೋ ವರ್ಷ-ಸಹಸ್ರಮೇಕಂ ಭವಿಷ್ಯಂತಿ ॥13॥**

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ತ್ರಯೋವಿಂಶೋऽಧ್ಯಾಯಃ

---

ಅವನಿಂದ ಸಬಲನೂ ಆತನಿಂದ ಸುನೀತನೂ ಜನಿಸುವರು. ಸುನೀತನ ಮಗ ಸತ್ಯಜಿತ್. ಅವನ ಮಗ ವಿಶ್ವಜಿತ್. ವಿಶ್ವಜಿತ್ತಿಗೆ ರಿಪುಂಜಯನೆಂಬವನು ಹುಟ್ಟುವನು. ಬೃಹದ್ರಥವಂಶದ ಈ ರಾಜರು ಒಂದು ಸಾವಿರ ವರ್ಷದವರೆಗೆ ಭೂಪತಿಗಳಾಗಿರುವರು (8-13).

ಇಲ್ಲಿಗೆ ಶ್ರೀವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಇಪ್ಪತ್ತಮೂರನೆಯ ಅಧ್ಯಾಯ ಮುಗಿಯಿತು.



## ಚತುರ್ವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಯೋಽಯಂ ರಿಪುಂಜಯೋ ನಾಮ ಬಾರ್ಹದ್ರಥೋಽಂತ್ಯಸ್ತಸ್ಯಾ-ಮಾತ್ಯೋ ಸುನಿಕೋ ನಾಮ ಭವಿಷ್ಯತಿ ॥ 1 ॥ ಸ ಚೈನಂ ಸ್ವಾಮಿನಂ ಹತ್ವಾ ಸ್ವಪುತ್ರಂ ಪ್ರದ್ಯೋತನಾಮಾನಮಭಿಷೇಕ್ಷ್ಯತಿ ॥ 2 ॥ ತಸ್ಯಾಪಿ ಬಲಾಕನಾಮಾ ಪುತ್ರೋ ಭವಿತಾ ॥ 3 ॥ ತತಶ್ಚ ವಿಶಾಖಯೂಪಃ ॥ 4 ॥ ತತ್ಪುತ್ರೋ ಜನಕಃ ॥ 5 ॥ ತಸ್ಯ ಚ ನಂದಿವರ್ಧನಃ ॥ 6 ॥ ತತೋ ನಂದೀ ॥ 7 ॥ ಇತ್ಯೇತೇಽಷ್ಟತ್ರಿಂಶದುತ್ತರಮಬ್ದಶತಂ ಪಂಚ ಪ್ರದ್ಯೋತಾಃ ಪೃಥಿವೀಂ ಭೋಕ್ಷ್ಯಂತಿ ॥ 8 ॥ ತತಶ್ಚ ಶಿಶುನಾಭಃ ॥ 9 ॥ ತತ್ಪುತ್ರಃ ಕಾಕವರ್ಣೋ ಭವಿತಾ ॥ 10 ॥ ತಸ್ಯ ಚ ಪುತ್ರಃ ಕ್ಷೇಮಧರ್ಮಾ ॥ 11 ॥**

---

## ಅಧ್ಯಾಯ 24

ಕಲಿಯುಗದಲ್ಲಿ ಭೂಮಿಯನ್ನಾಳುವ ಪ್ರದ್ಯೋತ-ಶಿಶುನಾಭ-ಮೌರ್ಯ-
ಶುಂಗಾದಿಗಳ ವಿವರಣೆ. ಕಲಿಧರ್ಮ; ಕೃತಯುಗದ ಪ್ರವೇಶ;
ವಂಶಾವಳಿಯ ಉಪಸಂಹಾರ. ಪೃಥಿವೀಗೀತ.

ಪರಾಶರರು ಹೇಳಿದರು: ಮೈತ್ರೇಯ, ಬೃಹದ್ರಥವಂಶದಲ್ಲಿ ಅಂತಿಮ ರಾಜನಾಗಿ ಯಾವ ರಿಪುಂಜಯ ಎಂಬವನು ಹುಟ್ಟುವನೋ ಅವನಿಗೆ ಸುನಿಕನೆಂಬ ಮಂತ್ರಿ ಇರುವನು. ಅವನು ತನ್ನ ಪ್ರಭುವನ್ನು ವಧಿಸಿ ತನ್ನ ಮಗನಾದ ಪ್ರದ್ಯೋತ ಎಂಬವನಿಗೆ ಪಟ್ಟವನ್ನು ಕಟ್ಟುವನು (1-2). ಪ್ರದ್ಯೋತನಿಗೆ ಬಲಾಕನೆಂಬ ಪುತ್ರನು ಹುಟ್ಟುವನು. ಅವನಿಂದ ವಿಶಾಖಯೂಪ. ಆತನ ಮಗ ಜನಕ. ಜನಕನ ಮಗ ನಂದಿವರ್ಧನ. ಅವನ ಮಗ ನಂದಿ. ಈ ಐದು ಜನ ಪ್ರದ್ಯೋತವಂಶೀಯರು ಒಂದು ನೂರ ಮುವತ್ತೆಂಟು ವರ್ಷಗಳ ಕಾಲ ಪೃಥ್ವಿಯನ್ನು ಪಾಲಿಸುವರು (3-8). ಅನಂತರ ಶಿಶುನಾಗ ಎಂಬುವನು ರಾಜನಾಗುವನು. ಅವನಿಗೆ ಕಾಕವರ್ಣ ಎಂಬ ಪುತ್ರನು ಹುಟ್ಟುವನು. ಆತನ ಪುತ್ರ ಕ್ಷೇಮಧರ್ಮ. ಅವನ ಪುತ್ರ ಕ್ಷತೌಜ. ಆತನ ಮಗ ವಿಧಿಸಾರ. ವಿಧಿಸಾರನ

**ತಸ್ಯಾಪಿ ಕ್ಷತೌಜಾಃ ॥ 12 ॥ ತತ್ಪುತ್ರೋ ವಿಧಿಸಾರಃ ॥ 13 ॥ ತತಶ್ಚಾಜಾತಶತ್ರುಃ ॥ 14 ॥ ತಸ್ಮಾದರ್ಭಕಃ ॥ 15 ॥ ತಸ್ಮಾಚ್ಚೋದಯನಃ ॥ 16 ॥ ತಸ್ಮಾದಪಿ ನಂದಿವರ್ದ್ಧನಃ ॥ 17 ॥ ತತೋ ಮಹಾನಂದೀ ॥ 18 ॥ ಇತ್ಯೇತೇ ಶೈಶುನಾಭಾ ಭೂಪಾಲಾಸ್ತ್ರೀಣಿ ವರ್ಷಶತಾನಿ ದ್ವಿಷಷ್ಟ್ಯಧಿಕಾನಿ ಭವಿಷ್ಯಂತಿ ॥ 19 ॥ ಮಹಾನಂದಿನಸ್ತತಶ್ಶೂದ್ರಾಗರ್ಭೋದ್ಭವೋಽತಿಲುಬ್ಧೋಽತಿಬಲೋ ಮಹಾಪದ್ಮನಾಮಾ ನಂದಃ ಪರಶುರಾಮ ಇವಾಪರೋಽಖಿಲಕ್ಷತ್ರಾಂತಕಾರೀ ಭವಿಷ್ಯತಿ ॥ 20 ॥ ತತಃ ಪ್ರಭೃತಿ ಶೂದ್ರಾ ಭೂಪಾಲಾ ಭವಿಷ್ಯಂತಿ ॥ 21 ॥ ಸ ಚೈಕಚ್ಛತ್ರಾಮನುಲ್ಲಂಘಿತಶಾಸನೋ ಮಹಾಪದ್ಮಃ ಪೃಥಿವೀಂ ಭೋಕ್ಷ್ಯತೇ ॥ 22 ॥ ತಸ್ಯಾಪ್ಯಷ್ಟೌಸುತಾಸ್ಸುಮಾಲ್ಯಾದ್ಯಾ ಭವಿತಾರಃ ॥ 23 ॥ ತಸ್ಯ ಮಹಾಪದ್ಮಸ್ಯಾನು ಪೃಥಿವೀಂ ಭೋಕ್ಷ್ಯಂತಿ ॥ 24 ॥ ಮಹಾಪದ್ಮಃ ತತ್ಪುತ್ರಾಶ್ಚೈಕಂ ವರ್ಷಶತಮವನೀಪತಯೋ ಭವಿಷ್ಯಂತಿ ॥ 25 ॥ ತತಶ್ಚ ನವ ಚೈತಾನ್ನಂದಾನ್ ಕೌಟಿಲ್ಯೋ ಬ್ರಾಹ್ಮಣಸ್ಸಮುದ್ಧರಿಷ್ಯತಿ ॥ 26 ॥ ತೇಷಾಮಭಾವೇ**

---

ಪುತ್ರ ಅಜಾತಶತ್ರು (9-14). ಅವನಿಂದ ಅರ್ಭಕನೂ ಆತನಿಂದ ಉದಯನನೂ ಅವನಿಂದ ನಂದಿವರ್ಧನನೂ ಹುಟ್ಟುವರು. ನಂದಿವರ್ಧನನ ಮಗ ಮಹಾನಂದಿ. ಈ ರೀತಿಯಲ್ಲಿ ಶಿಶುನಾಭವಂಶೀಯ ಭೂಪಾಲರು ಮುನ್ನೂರ ಅರವತ್ತೆರಡು ವರ್ಷಗಳವರೆಗೆ ಆಡಳಿತ ನಡೆಸುವರು (15-19). ಮಹಾನಂದಿಗೆ ಶೂದ್ರಸ್ತ್ರೀಯ ಗರ್ಭದಲ್ಲಿ ಬಲಾಢ್ಯನಾದ ಮಹಾಪದ್ಮನೆಂಬ ನಂದನು ಪುತ್ರನಾಗುವನು. ಅವನು ಕಡುಲೋಭಿ. ಅವನು ಇನ್ನೊಬ್ಬ ಪರಶುರಾಮನಂತೆ ಸಕಲಕ್ಷತ್ರಿಯರ ನಾಶಕ್ಕೆ ಕಾರಣನಾಗುವನು (20). ಅಲ್ಲಿಂದ ಮುಂದೆ ಶೂದ್ರರು ಭೂಪಾಲರಾಗುವರು. ಆ ಮಹಾಪದ್ಮನು ಏಕಚ್ಛತ್ರಾಧಿಪತಿಯಾಗಿ ಯಾರೂ ತನ್ನ ಆಜ್ಞೆಯನ್ನು ಮೀರದಂತೆ ನೋಡಿಕೊಂಡು ಭೂಮಿಯನ್ನಾಳುವನು. ಅವನಿಗೆ ಸುಮಾಲಿ—ಮೊದಲಾದ ಎಂಟು ಮಕ್ಕಳು ಇರುವರು. ಮಹಾಪದ್ಮನಾದ ಮೇಲೆ ಅವರು ರಾಜ್ಯವನ್ನಾಳುವರು. ಮಹಾಪದ್ಮನೂ ಆತನ ಪುತ್ರರೂ ಒಟ್ಟು ಒಂದುನೂರು ವರ್ಷ ರಾಜ್ಯವನ್ನು ಪಾಲಿಸುವರು (21-25). (ಮಹಾಪದ್ಮನಿಂದ ಹಿಡಿದು) ಈ ಒಂಬತ್ತು ಮಂದಿ ನಂದರನ್ನು ಕೌಟಿಲ್ಯ ಎಂಬ

**ಮೌರ್ಯಾಃ ಪೃಥಿವೀಂ ಭೋಕ್ಷ್ಯಂತಿ ॥ 27 ॥ ಕೌಟಿಲ್ಯ ಏವ ಚಂದ್ರಗುಪ್ತ-ಮುತ್ಪನ್ನಂ ರಾಜ್ಯೇಽಭಿಷೇಕ್ಷ್ಯತಿ ॥ 28 ॥ ತಸ್ಯಾಪಿ ಪುತ್ರೋ ಬಿಂದುಸಾರೋ ಭವಿಷ್ಯತಿ ॥ 29 ॥ ತಸ್ಯಾಪ್ಯಶೋಕವರ್ಧನಸ್ತತಸ್ಸುಯಶಾಸ್ತತಶ್ಚ ದಶರಥ-ಸ್ತತಶ್ಚ ಸಂಯುತಸ್ತತಶ್ಶಾಲಿಶೂಕಸ್ತಸ್ಮಾತ್ಸೋಮಶರ್ಮಾ ತಸ್ಯಾಪಿ ಸೋಮಶರ್ಮಣಶ್ಶತಧನ್ವಾ ॥ 30 ॥ ತಸ್ಯಾಪಿ ಬೃಹದ್ರಥನಾಮಾ ಭವಿತಾ ॥ 31 ॥ ಏವಮೇತೇ ಮೌರ್ಯಾ ದಶ ಭೂಪತಯೋ ಭವಿಷ್ಯಂತಿ ಅಬ್ದಶತಂ ಸಪ್ತತ್ರಿಂಶದುತ್ತರಮ್ ॥ 32 ॥ ತೇಷಾಮಂತೇ ಪೃಥಿವೀಂ ದಶ ಶುಂಗಾ ಭೋಕ್ಷ್ಯಂತಿ ॥ 33 ॥ ಪುಷ್ಯಮಿತ್ರಸ್ಸೇನಾಪತಿಸ್ಸ್ವಾಮಿನಂ ಹತ್ವಾ ರಾಜ್ಯಂ ಕರಿಷ್ಯತಿ ತಸ್ಯಾತ್ಮಜೋಽಗ್ನಿಮಿತ್ರಃ ॥ 34 ॥ ತಸ್ಮಾತ್ಸುಜ್ಯೇಷ್ಠಸ್ತತೋ**

---

ಬ್ರಾಹ್ಮಣನು ಧ್ವಂಸ* ಮಾಡುವನು. ಈ ನಂದರ ಅವಸಾನವಾದ ಮೇಲೆ ಮೌರ್ಯರು ರಾಜ್ಯಭಾರವನ್ನು ನಡೆಸುವರು. ಕೌಟಿಲ್ಯನೇ (ನಂದನ ಹೆಂಡತಿ ಮುರಾ ಎಂಬವಳಲ್ಲಿ ಹುಟ್ಟಿದ) ಚಂದ್ರಗುಪ್ತನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡುವನು§ (26-28). ಚಂದ್ರಗುಪ್ತನಿಗೆ ಬಿಂದುಸಾರನೆಂಬ ಪುತ್ರನು ಜನಿಸುವನು. ಬಿಂದುಸಾರನ ಮಗ ಅಶೋಕವರ್ಧನ. ಅವನಿಂದ ಸುಯಶನೂ ಆತನಿಂದ ದಶರಥನೆಂಬವನೂ ಹುಟ್ಟುವರು. ದಶರಥನೆಂಬವನ ಮಗ ಸಂಯುತ. ಆತನ ಮಗ ಶಾಲಿಶೂಕ. ಆತನ ಪುತ್ರ ಸೋಮಶರ್ಮ. ಅವನ ಮಗ ಶತಧನ್ವ (29-30). ಶತಧನ್ವನಿಗೆ ಬೃಹದ್ರಥನೆಂಬವನು ಹುಟ್ಟುವನು. ಹೀಗೆ ಮೌರ್ಯವಂಶದ ಹತ್ತುಮಂದಿ ಭೂಪಾಲರು ಒಂದುನೂರ ಎಪ್ಪತ್ತಮೂರು ವರ್ಷಗಳವರೆಗೆ ಆಳುವರು. ಅವರ ಅನಂತರ ಹತ್ತುಮಂದಿ ಶುಂಗವಂಶೀಯರು ಭೂಮಿಯನ್ನಾಳುವರು. (ಅವರಲ್ಲಿ ಮೊದಲನೆಯವನಾಗಿ) ಪುಷ್ಯಮಿತ್ರನೆಂಬ ಸೇನಾಪತಿಯು ತನ್ನ ಸ್ವಾಮಿಯನ್ನು (ಬೃಹದ್ರಥನನ್ನು) ವಧಿಸಿ ರಾಜ್ಯಭಾರ ನಡೆಸುವನು. ಪುಷ್ಯಮಿತ್ರನ ಮಗ ಅಗ್ನಿಮಿತ್ರ (31-34). ಅಗ್ನಿಮಿತ್ರನ ಮಗ

---

* ವಿಶಾಖದತ್ತನ 'ಮುದ್ರಾರಾಕ್ಷಸ' ಎಂಬ ನಾಟಕದಲ್ಲಿ ಈ ಕಥೆ ವಿಸ್ತಾರವಾಗಿ ಬಂದಿದೆ. ಕೌಟಿಲ್ಯನಿಗೆ ವಾತ್ಸಾಯನ, ವಿಷ್ಣುಗುಪ್ತ , ಚಾಣಕ್ಯ—ಎಂಬ ಹೆಸರುಗಳಿದ್ದವು.

§ ಚಂದ್ರಗುಪ್ತನ ರಾಜ್ಯಭಾರ ಕ್ರಿ. ಪೂ. 310ರಿಂದ ಎಂದು ಇತಿಹಾಸ ಹೇಳುತ್ತದೆ. ಈತನು ಕ್ರಿ. ಪೂ. 305ರಲ್ಲಿ ಗ್ರೀಕ್ ರಾಯಭಾರಿ ಸೆಲ್ಯೂಕಸ್ಸಿನೊಡನೆ ಒಂದು ರಾಜಕೀಯ ಒಪ್ಪಂದವನ್ನು ಮಾಡಿಕೊಂಡನು.

**ವಸುಮಿತ್ರಸ್ತಸ್ಮಾದಪ್ಯುದಂಕಸ್ತತಃ ಪುಲಿಂದಕಸ್ತತೋ ಘೋಷವಸುಸ್ತಸ್ಮಾ-ದಪಿ ವಜ್ರಮಿತ್ರಸ್ತತೋ ಭಾಗವತಃ ॥ 35 ॥ ತಸ್ಮಾದ್ದೇವಭೂತಿಃ ॥ 36 ॥ ಇತ್ಯೇತೇ ಶುಂಗಾ ದ್ವಾದಶೋತ್ತರಂ ವರ್ಷಶತಂ ಪೃಥಿವೀಂ ಭೋಕ್ಷ್ಯಂತಿ ॥ 37 ॥ ತತಃ ಕಣ್ವಾನೇಷಾ ಭೂರ್ಯಾಸ್ಯತಿ ॥ 38 ॥ ದೇವಭೂತಿಂ ತು ಶುಂಗರಾಜಾನಾಂ ವ್ಯಸನಿನಂ ತಸ್ಯೈವಾಮಾತ್ಯಃ ಕಾಣ್ವೋ ವಸುದೇವ ನಾಮಾ ತಂ ನಿಹತ್ಯ ಸ್ವಯಮವನೀಂ ಭೋಕ್ಷ್ಯತಿ ॥ 39 ॥ ತಸ್ಯ ಪುತ್ರೋ ಭೂಮಿತ್ರಸ್ತಸ್ಯಾಪಿ ನಾರಾಯಣಃ ॥ 40 ॥ ನಾರಾಯಣಾತ್ಮಜಸ್ಸುಶರ್ಮಾ ॥ 41 ॥ ಏತೇ ಕಾಣ್ವಾಯನಾಶ್ಚತ್ವಾರಃ ಪಂಚಚತ್ವಾರಿಂಶದ್ವರ್ಷಾಣಿ ಭೂಪತಯೋ ಭವಿಷ್ಯಂತಿ ॥ 42 ॥ ಸುಶರ್ಮಾಣಂ ತು ಕಾಣ್ವಂ ತದ್-ಭೃತ್ಯೋ ಬಲಿಪುಚ್ಛಕನಾಮಾ ಹತ್ವಾಂಧ್ರಜಾತೀಯೋ ವಸುಧಾಂ ಭೋಕ್ಷ್ಯತಿ ॥ 43 ॥ ತತಶ್ಚ ಕೃಷ್ಣನಾಮಾ ತದ್ ಭ್ರಾತಾ ಪೃಥಿವೀಪತಿರ್ಭವಿಷ್ಯತಿ ॥ 44 ॥ ತಸ್ಯಾಪಿ ಪುತ್ರಃ ಶಾಂತಕರ್ಣಿಸ್ತಸ್ಯಾಪಿ ಪೂರ್ಣೋತ್ಸಂಗ-**

---

ಸುಜ್ಯೇಷ್ಠ. ಆತನ ಮಗ ವಸುಮಿತ್ರ. ಅವನ ಮಗ ಉದಂಕ. ಉದಂಕನ ಪುತ್ರ ಪುಲಿಂದಕ. ಆತನ ಪುತ್ರ ಘೋಷವಸು. ಅವನಿಂದ ವಜ್ರಮಿತ್ರನೂ ಆತನಿಂದ ಭಾಗವತ ಎಂಬವನೂ ಜನಿಸುವರು. ಭಾಗವತನ ಮಗ ದೇವಭೂತಿ. ಹೀಗೆ ಶುಂಗರು ಒಂದುನೂರ ಹನ್ನೆರಡು ವರ್ಷಗಳ ಕಾಲ ಭೂಮಿಯನ್ನಾಳುವರು (35-37). ಇವರಾದಮೇಲೆ ರಾಜ್ಯವು ಕಣ್ವರಾಜರ ವಶವನ್ನೈದುವುದು. ಶುಂಗ ರಾಜನಾದ ದೇವಭೂತಿಯು ದುರ್ವ್ಯಸನಿಯಾಗಿರುವನು. ಅವನ ಅಮಾತ್ಯನೇ ಆದ ಕಣ್ವವಂಶದ ವಸುದೇವ ಎಂಬವನು ದೇವಭೂತಿಯನ್ನು ಕೊಲೆಮಾಡಿ, ತಾನೇ ಭೂಪತಿಯಾಗುವನು (38-39). ವಸುದೇವನ ಮಗ ಭೂಮಿತ್ರ. ಆತನ ಮಗ ನಾರಾಯಣ. ನಾರಾಯಣನ ಮಗ ಸುಶರ್ಮ. ಈ ಕಣ್ವವಂಶದ ನಾಲ್ವರು ನಲವತ್ತೈದು ವರ್ಷಗಳವರೆಗೆ ಭೂಪತಿಗಳಾಗಿರುವರು. ಕಣ್ವವಂಶದ ಸುಶರ್ಮನಿಗೆ ಬಲಿಪುಚ್ಛಕನೆಂಬ ಆಂಧ್ರಜಾತೀಯನು ಸೇವಕನಾಗಿರುವನು. ಅವನು ಸುಶರ್ಮನನ್ನು ಕೊಂದು ತಾನೇ ಭೂಮಿಯನ್ನಾಳುವನು (40-43). ಆಮೇಲೆ ಅವನ ತಮ್ಮ ಕೃಷ್ಣನು ರಾಜನಾಗುವನು. ಕೃಷ್ಣನ ಪುತ್ರ ಶಾಂತಕರ್ಣಿ. ಆತನ ಪುತ್ರ ಪೂರ್ಣೋತ್ಸಂಗ. ಅವನ ಮಗ ಶಾತಕರ್ಣಿ. ಅವನ ಮಗ

**ಸ್ತತ್ಪುತ್ರಶ್ಶಾತಕರ್ಣಿಸ್ತಸ್ಮಾಚ್ಚ ಲಂಬೋದರಸ್ತಸ್ಮಾಚ್ಚ ಪಿಲಕಸ್ತತೋ ಮೇಘಸ್ವಾತಿಸ್ತತಃ ಪಟುಮಾನ್ ॥ 45 ॥ ತತಶ್ಚಾರಿಷ್ಟಕರ್ಮಾ ತತೋ ಹಾಲಾಹಲಃ ॥ 46 ॥ ಹಾಲಾಹಲಾತ್ಪಲಲಕಸ್ತತಃ ಪುಲಿಂದಸೇನಸ್ತತಃ ಸುಂದರಸ್ತತಶ್ಶಾತಕರ್ಣಿಸ್ತತಶ್ಶಿವಸ್ವಾತಿಸ್ತತಶ್ಚ ಗೋಮತಿಪುತ್ರಸ್ತತ್ಪುತ್ರೋಽಲಿಮಾನ್ ॥ 47 ॥ ತಸ್ಯಾಪಿ ಶಾಂತಕರ್ಣಿಸ್ತತಃ ಶಿವಶ್ರಿತಸ್ತತಶ್ಚ ಶಿವಸ್ಕಂದಸ್ತಸ್ಮಾದಪಿ ಯಜ್ಞಶ್ರೀಸ್ತತೋ ದ್ವಿಯಜ್ಞಸ್ತಸ್ಮಾಚ್ಚಂದ್ರಶ್ರೀಃ ॥ 48 ॥ ತಸ್ಮಾತ್ಪುಲೋಮಾಚಿಃ ॥ 49 ॥ ಏವಮೇತೇ ತ್ರಿಂಶಚ್ಚತ್ವಾರ್ಯಬ್ದಶತಾನಿ ಷಟ್ ಪಂಚಾಶದಧಿಕಾನಿ ಪೃಥಿವೀಂ ಭೋಕ್ಷ್ಯಂತಿ ಆಂಧ್ರಭೃತ್ಯಾಃ ॥ 50 ॥ ಸಪ್ತಾಭೀರಪ್ರಭೃತಯೋ ದಶ ಗರ್ದಭಿಲಾಶ್ಚ ಭೂಭುಜೋ ಭವಿಷ್ಯಂತಿ ॥ 51 ॥ ತತಷ್ಷೋಡಶ ಶಕಾ ಭೂಪತಯೋ ಭವಿತಾರಃ ॥ 52 ॥ ತತಶ್ಚಾಷ್ಟೌ**

---

ಲಂಬೋದರ. ಲಂಬೋದರನಿಂದ ಪಿಲಕನೂ ಆತನಿಂದ ಮೇಘಸ್ವಾತಿಯೂ ಆತನಿಂದ ಪಟುಮಾನ್ ಎಂಬವರೂ ಜನಿಸುವರು (44-45). ಪಟುಮಂತನ ಮಗ ಅರಿಷ್ಟಕರ್ಮ. ಅವನ ಮಗ ಹಾಲಾಹಲ! ಹಾಲಾಹಲನಿಂದ ಪಲಲಕನೂ ಅವನಿಂದ ಪುಲಿಂದಸೇನನೂ ಆತನಿಂದ ಸುಂದರನೂ ಜನಿಸುವರು. ಸುಂದರನ ಪುತ್ರ ಶಾತಕರ್ಣಿ. ಅವನ ಪುತ್ರ ಶಿವಸ್ವಾತಿ. ಅವನಿಂದ ಗೋಮತಿಪುತ್ರ ಎಂಬವನೂ ಆತನಿಂದ ಅಲಿಮಾನ್ ಎಂಬವನೂ ಜನಿಸುವರು (46-47). ಅಲಿಮಂತನಿಗೆ ಶಾಂತಕರ್ಣಿಯೂ ಅವನಿಗೆ ಶಿವಶ್ರಿತನೂ ಅವನಿಗೆ ಶಿವಸ್ಕಂಧನೂ ಹುಟ್ಟುವರು. ಶಿವಸ್ಕಂಧನಿಂದ ಯಜ್ಞಶ್ರೀ ಎಂಬವನೂ ಆತನಿಂದ ದ್ವಿಯಜ್ಞನೂ ಅವನಿಂದ ಚಂದ್ರಶ್ರೀ ಎಂಬವನೂ ಜನಿಸುವರು. ಚಂದ್ರಶ್ರೀಯ ಮಗ ಪುಲೋಮಾಚಿ. ಈ ಪ್ರಕಾರವಾಗಿ ಮುವತ್ತುಮಂದಿ* ಆಂಧ್ರಭೃತ್ಯವಂಶೀಯರು ನಾನೂರ ಐವತ್ತಾರು ವರ್ಷಗಳವರೆಗೆ ಪೃಥ್ವಿಯನ್ನಾಳುವರು (48-50). ಅನಂತರ ನಾನಾ ವಂಶೀಯರು ರಾಜರಾಗಿ ಭೂಮಿಯನ್ನು ಆಳುವರು. ಅವರಲ್ಲಿ ಆಭೀರರು ಏಳುಮಂದಿ, ಗರ್ದಭೀಲರು ಹತ್ತುಮಂದಿ, ಶಕರು

* ಇಲ್ಲಿ ಹೇಳಿದ ಆಂಧ್ರಭೃತ್ಯರ ಸಂಖ್ಯೆ ಇಪ್ಪತ್ತೈದು ಮಾತ್ರ. ವಂಶಾವಳಿಯಲ್ಲಿ ಐವರ ಹೆಸರು ಲೇಖಕ ಪ್ರಮಾದದಿಂದ ಬಿಟ್ಟುಹೋಗಿದೆ. ಇತರ ಪುರಾಣಗಳಲ್ಲಿಯೂ ಈ ಪರಿಸ್ಥಿತಿಯೇ ಉಂಟಾಗಿದ್ದು, ಪೂರ್ವಾಪರ ಸಂಖ್ಯೆಗಳಿಗೆ ಮೇಳವಿಲ್ಲ.

**ಯವನಾಶ್ಚತುರ್ದಶ ತುರುಷ್ಕಾರಾ ಮುಂಡಾಶ್ಚ ತ್ರಯೋದಶ ಏಕಾದಶ ಮೌನಾ ಏತೇ ವೈ ಪೃಥಿವೀಪತಯಃ ಪೃಥಿವೀಂ ದಶವರ್ಷಶತಾನಿ ನವತ್ಯಧಿಕಾನಿ ಭೋಕ್ಷ್ಯಂತಿ ॥ 53 ॥ ತತಶ್ಚ ಏಕಾದಶ ಭೂಪತಯೋಽಬ್ದ-ಶತಾನಿ ತ್ರೀಣಿ ಪೃಥಿವೀಂ ಭೋಕ್ಷ್ಯಂತಿ ॥ 54 ॥ ತೇಷೂತ್ಸನ್ನೇಷು ಕೈಂಕಿಲಾಯವನಾ ಭೂಪತಯೋ ಭವಿಷ್ಯಂತ್ಯಮೂರ್ದ್ಧಾಭಿಷಿಕ್ತಾಃ ॥ 55 ॥ ತೇಷಾಮಪತ್ಯಂ ವಿಂಧ್ಯಶಕ್ತಿಸ್ತತಃ ಪುರಂಜಯಸ್ತಸ್ಮಾದ್ರಾಮಚಂದ್ರಸ್ತಸ್ಮಾ-ದ್ಧರ್ಮವರ್ಮಾ ತತೋ ವಂಗಸ್ತತೋಽಭೂನ್ನಂದನಸ್ತತಸ್ಸುನಂದೀ ತತ್‌ಭ್ರಾತಾ ನಂದಿಯಶಾಶ್ಶುಕ್ರಃ ಪ್ರವೀರ ಏತೇ ವರ್ಷಶತಂ ಷಡ್-ವರ್ಷಾಣಿ ಭೂಪತಯೋ ಭವಿಷ್ಯಂತಿ ॥ 56 ॥ ತತಸ್ತತ್ಪುತ್ರಾಸ್ತ್ರಯೋ-ದಶೈತೇ ಬಾಹ್ಲಿಕಾಶ್ಚ ತ್ರಯಃ ॥ 57 ॥ ತತಃ ಪುಷ್ಪಮಿತ್ರಾಃ ಪಟುಮಿತ್ರಾ-ಸ್ತ್ರಯೋದಶೈಕಲಾಶ್ಚ ಸಪ್ತಾಂಧ್ರಾಃ ॥ 58 ॥ ತತಶ್ಚ ಕೋಸಲಾಯಾಂ ತು**

---

ಹದಿನಾರು ಮಂದಿ, ಆಮೇಲೆ ಎಂಟು ಯವನರೂ, ಹದಿನಾಲ್ಕು ತುರುಷ್ಕರೂ, ಹದಿಮೂರು ಮುಂಡರೂ ಹನ್ನೊಂದು ಮೌನರೂ ಕ್ರಮವಾಗಿ ರಾಜ್ಯಭಾರವನ್ನು ನಡೆಸುವರು. ಒಟ್ಟು ಸಾವಿರದ ತೊಂಬತ್ತು (1090) ವರ್ಷಗಳ ಕಾಲ ಈ ನಾನಾ ವಂಶೀಯರ ಆಳ್ವಿಕೆ ನಡೆಯುವುದು (51-53). ಕಡೆಯಲ್ಲಿ ಈ ಹನ್ನೊಂದು ಮಂದಿ ಮೌನರೆಂಬ ರಾಜರು ಮುನ್ನೂರು ವರ್ಷ ರಾಜ್ಯಭಾರ ನಡೆಸುವರು. ಅವರು ಉಚ್ಛಿನ್ನರಾದ ಮೇಲೆ ಕೈಂಕಿಲಾನಗರದಲ್ಲಿದ್ದ ಯವನರು ಭೂಪತಿ ಗಳಾಗುವರು. ಅವರಿಗೆ ಪಟ್ಟಾಭಿಷೇಕವಾಗಿರುವುದಿಲ್ಲ (54-55). ಆ ಯವನರ ವಂಶೀಯನು ವಿಂಧ್ಯಶಕ್ತಿ. ಅವನ ಮಗ ಪುರಂಜಯ. ಆತನ ಮಗ ರಾಮ ಚಂದ್ರ. ಆತನಿಗೆ ಧರ್ಮವರ್ಮನೂ ಅವನಿಗೆ ವಂಗನೂ ಪುತ್ರರಾಗುವರು. ವಂಗನ ಮಗ ನಂದನ. ಆತನ ಮಗ ಸುನಂದಿ. ಸುನಂದಿಗೆ ನಂದಿಯಶ, ಶುಕ್ರ, ಪ್ರವೀರ—ಎಂಬವರು ಸೋದರರು. ಇವರೆಲ್ಲರೂ ಸೇರಿ ಒಟ್ಟು ನೂರ ಆರು (106) ವರ್ಷಗಳವರೆಗೆ ರಾಜರಾಗಿರುವರು (56). ಆಮೇಲೆ ಇವರ ವಂಶೀ ಯರೇ ಆದ ಹದಿಮೂರು ಜನರೂ ಅವರಾದ ಮೇಲೆ ಮೂವರು ಬಾಹ್ಲಿಕರೂ ರಾಜರಾಗುವರು. ಅನಂತರ ಪುಷ್ಪಮಿತ್ರ ಮತ್ತು ಪಟುಮಿತ್ರ—ಎಂಬವರ ವಂಶೀಯರು ಹದಿಮೂರು ಮಂದಿಯೂ ಏಳುಮಂದಿ ಆಂಧ್ರರೂ ಅಲ್ಲಲ್ಲಿ

**ನವ ಚೈವ ಭೂಪತಯೋ ಭವಿಷ್ಯಂತಿ ॥ 59 ॥ ನೈಷಧಾಸ್ತು ತ ಏವ ॥ 60 ॥ ಮಗಧಾಯಾಂ ತು ವಿಶ್ವಸ್ಫಟಿಕಸಂಜ್ಞೋಽನ್ಯಾನ್ವರ್ಣಾನ್ಕರಿಷ್ಯತಿ ॥ 61 ॥ ಕೈವರ್ತ್ತವಟುಪುಲಿಂದಬ್ರಾಹ್ಮಣಾನ್ರಾಜ್ಯೇ ಸ್ಥಾಪಯಿಷ್ಯತಿ ॥ 62 ॥ ಉತ್ಸಾದ್ಯಾಖಿಲಕ್ಷತ್ರಜಾತಿಂ ನವ ನಾಗಾಃ ಪದ್ಮಾವತ್ಯಾಂ ನಾಮ ಪುರ್ಯಾಮನುಗಂಗಾಪ್ರಯಾಗಂ ಗಯಾಯಾಂಚ ಮಾಗಧಾ ಗುಪ್ತಾಶ್ಚ ಭೋಕ್ಷ್ಯಂತಿ ॥ 63 ॥ ಕೋಶಲಾಂಧ್ರಪುಂಡ್ರತಾಮ್ರಲಿಪ್ತಸಮುದ್ರತಟ-ಪುರೀಂ ಚ ದೇವರಕ್ಷಿತೋ ರಕ್ಷಿತಾ ॥ 64 ॥ ಕಲಿಂಗಮಾಹಿಷಮಹೇಂದ್ರ-ಭೌಮಾನ್ ಗುಹಾ ಭೋಕ್ಷ್ಯಂತಿ ॥ 65 ॥ ನೈಷಧನೈಮಿಷಕಕಾಲಕೋಶ-ಕಾಂಚನಪದಾನ್ಮಣಿಧಾನ್ಯಕವಂಶಾ ಭೋಕ್ಷ್ಯಂತಿ ॥ 66 ॥ ತ್ರೈರಾಜ್ಯ-ಮುಷಿಕಜನಪದಾನ್ಕನಕಾಹ್ವಯೋ ಭೋಕ್ಷ್ಯತಿ ॥ 67 ॥ ಸೌರಾಷ್ಟ್ರಾವಂತಿ-ಶೂದ್ರಾಭೀರಾನ್ನರ್ಮದಾಮರುಭೂವಿಷಯಾಂಶ್ಚ ವ್ರಾತ್ಯದ್ವಿಜಾಭೀರ-**

---

ಮಾಂಡಲಿಕರಾಜರಾಗಿರುವರು. ಕೋಸಲರಾಜ್ಯದಲ್ಲಿ ಒಂಬತ್ತುಜನರು ಇವರ ನಡುವೆ ರಾಜ್ಯವಾಳುವರು. ನಿಷಧರಾಜ್ಯಕ್ಕೂ ಇವರೇ ಅಧಿಪತಿಗಳು (57-60). ಅನಂತರ (ಮಗಧದೇಶದ) ಮಗಧಾನಗರದಲ್ಲಿ ವಿಶ್ವಸ್ಪಟಿಕ ಎಂಬುವನು ಅನ್ಯ ಜಾತಿಯವರನ್ನು (ರಾಜ್ಯದಲ್ಲಿ) ಸ್ಥಾಪಿಸುವನು. ಅವನು ಬೆಸ್ತರನ್ನೂ ವಟುಗಳನ್ನೂ (?) ಕಿರಾತರನ್ನೂ ಬ್ರಾಹ್ಮಣರನ್ನೂ ರಾಜ್ಯಭಾರದಲ್ಲಿ ನಿಯೋಜಿಸುವನು (61-62). ಸಕಲ ಕ್ಷತ್ರಿಯರನ್ನೂ ನಾಶಮಾಡಿ ಒಂಬತ್ತು ಮಂದಿ ನಾಗವಂಶದ ರಾಜರು ಪದ್ಮಾವತಿಯೆಂಬ ನಗರದಲ್ಲಿಯೂ ಮಾಗಧರೂ ಗುಪ್ತವಂಶೀಯ ರಾಜರೂ ಗಂಗಾತೀರದಲ್ಲಿರುವ ಪ್ರಯಾಗದಲ್ಲಿಯೂ ಗಯೆಯಲ್ಲಿಯೂ ರಾಜ್ಯವನ್ನಾಳುವರು (63). ಕೋಸಲ, ಆಂಧ್ರ, ಪುಂಡ್ರ, ತಾಮ್ರಲಿಪ್ತದೇಶಗಳನ್ನೂ ಸಮುದ್ರ ತೀರದಲ್ಲಿರುವ ಪುರಿಯೆಂಬ ನಗರವನ್ನೂ ದೇವರಕ್ಷಿತನು ಪಾಲಿಸುವನು. ಕಳಿಂಗ, ಮಾಹಿಷ, ಮಹೇಂದ್ರ ಮತ್ತು ಭೌಮ ಎಂಬ ದೇಶಗಳನ್ನು ಗುಹ ಎಂಬುವರು ಆಳುವರು. ನೈಷಧ, ನೈಮಿಷಿಕ, ಕಾಲಕೋಶಕಗಳೆಂಬ ದೇಶಗಳನ್ನು ಮಣಿಧಾನ್ಯಕವಂಶದವರು ಭೋಗಿಸುವರು (64-66). ತ್ರೈರಾಜ್ಯ ಮುಷಿಕದೇಶಗಳನ್ನು ಕನಕ ಎಂಬವನು ಆಳುವನು. ಸೌರಾಷ್ಟ್ರ, ಅವಂತಿ, ಶೂದ್ರ, ಆಭಿರದೇಶಗಳನ್ನೂ ನರ್ಮದಾ ತೀರದ ಮರುಭೂಮಿಯ

**ಶೂದ್ರಾದ್ಯಾ ಭೋಕ್ಷ್ಯಂತಿ ॥ 68 ॥ ಸಿಂಧುತಟದಾವಿಕೋರ್ವೀಚಂದ್ರಭಾಗಾಕಾಶ್ಮೀರವಿಷಯಾಂಶ್ಚ ವ್ರಾತ್ಯಮ್ಲೇಚ್ಛಶೂದ್ರಾದಯೋ ಭೋಕ್ಷ್ಯಂತಿ ॥ 69 ॥ ಏತೇ ಚ ತುಲ್ಯಕಾಲಾಸ್ಸರ್ವೇ ಪೃಥಿವ್ಯಾಂ ಭೂಭುಜೋ ಭವಿಷ್ಯಂತಿ ॥ 70 ॥ ಅಲ್ಪಪ್ರಸಾದಾ ಬೃಹತ್ಕೋಪಾಸ್ಸರ್ವಕಾಲಮನೃತಾಧರ್ಮರುಚಯಃ ಸ್ತ್ರೀಬಾಲಗೋವಧಕರ್ತಾರಃ ಪರಸ್ವಾದಾನರುಚಯೋಽಲ್ಪಸಾರಾಸ್ತಮಿಸ್ರಪ್ರಾಯಾ ಉದಿತಾಸ್ತಮಿತಪ್ರಾಯಾ ಅಲ್ಪಾಯುಷೋ ಮಹೇಚ್ಛಾಹ್ಯಲ್ಪಧರ್ಮಾ ಲುಬ್ಧಾಶ್ಚ ಭವಿಷ್ಯಂತಿ ॥ 71 ॥ ತೈಶ್ಚ ವಿಮಿಶ್ರಾ ಜನಪದಾಸ್ತಚ್ಛೀಲಾನುವರ್ತಿನೋ ರಾಜಾಶ್ರಯಶುಷ್ಮಿಣೋ ಮ್ಲೇಚ್ಛಾಚಾರಾಶ್ಚ ವಿಪರ್ಯಯೇಣ ವರ್ತಮಾನಾಃ ಪ್ರಜಾಃ ಕ್ಷಪಯಿಷ್ಯಂತಿ ॥ 72 ॥ ತತಶ್ಚಾನುದಿನಮಲ್ಪಾಲ್ಪಹ್ರಾಸವ್ಯವಚ್ಛೇದಾದ್ಧರ್ಮಾರ್ಥಯೋರ್ಜ-**

---

ರಾಜ್ಯಗಳನ್ನೂ ವ್ರಾತ್ಯ, ದ್ವಿಜ, ಆಭೀರ, ಶೂದ್ರಾದಿಜಾತಿಯವರು ಪಾಲಿಸುವರು. ಸಿಂಧುನದಿಯ ತೀರಪ್ರದೇಶಗಳನ್ನೂ ದಾವಿಕರಾಜ್ಯವನ್ನೂ ಚಂದ್ರಭಾಗಾ ಕಾಶ್ಮೀರಗಳನ್ನೂ ವ್ರಾತ್ಯ ಮ್ಲೇಚ್ಛಶೂದ್ರಾದಿಗಳು ಅನುಭವಿಸುವರು (67-69). ಈ ರೀತಿಯಲ್ಲಿರುವ ರಾಜರುಗಳು ಎಲ್ಲೆಡೆಯೂ ಏಕಕಾಲದಲ್ಲಿ ಹರಡಿಕೊಂಡಿರುತ್ತಾರೆ. ಇವರು ಮಾಡುವ ಅನುಗ್ರಹವು ಅಲ್ಪವಾದುದು. ಇವರಿಗೆ ಕೋಪವು ಮಾತ್ರ ಅಧಿಕ. ಇವರು ಸದಾ ಸುಳ್ಳುಹೇಳುವುದರಲ್ಲಿಯೂ ಅಧರ್ಮಕಾರ್ಯದಲ್ಲಿಯೂ ಆಸಕ್ತರು. ಸ್ತ್ರೀಯರನ್ನೂ ಬಾಲಕರನ್ನೂ ಗೋವುಗಳನ್ನೂ ಲಕ್ಷಿಸದೆ ಕೊಲ್ಲತಕ್ಕವರು. ಪರರ ಸ್ವತ್ತನ್ನು ಅಪಹರಿಸುವುದರಲ್ಲಿ ಈ ರಾಜರಿಗೆ ಅಭಿರುಚಿ. ಈ ರಾಜರು ನಿಃಸತ್ತ್ವರೂ ತಮೋಗುಣದವರೂ ಆಗಿರುತ್ತಾರೆ. ಬಹುಬೇಗನೆ ಬೆಳೆದು ಹಾಗೆಯೇ ಅಡಗಿಹೋಗತಕ್ಕವರು. ಅಲ್ಪಾಯುಷಿಗಳು. ಮಹತ್ತರವಾದ ಆಸೆಯನ್ನಿಟ್ಟುಕೊಂಡವರೂ ಅಲ್ಪ ಪುಣ್ಯರೂ ಕಡುಲೋಭಿಗಳೂ ಆಗಿರುವರು (70-71). ಅವರ ಜೊತೆಗೆ ಬೇರೆ ಬೇರೆ ಕಡೆಯಿಂದ ಬಂದು ಸೇರಿಕೊಂಡ ಜನರೂ ಸಹ ಅವರಂತೆಯೇ ದುಃಶೀಲರಾಗಿ ನಡೆದುಕೊಳ್ಳುತ್ತ , ರಾಜಾಶ್ರಯದಿಂದ ದುರಹಂಕಾರಿಗಳಾಗಿ ಮ್ಲೇಚ್ಛಾಚಾರಗಳಿಂದ ಕೂಡಿರುವರು. ತಮ್ಮ ವಿಪರೀತವಾದ ನಡೆವಳಿಕೆಯಿಂದ ಪ್ರಜೆಗಳನ್ನು ಹುರಿದು ಮುಕ್ಕುವರು (72). ಆಗ ದಿನದಿನವೂ ಧರ್ಮಾರ್ಥಗಳು

**ಗತಸ್ಸಂಕ್ಷಯೋ ಭವಿಷ್ಯತಿ ॥ 73 ॥ ತತಶ್ಚಾರ್ಥ ಏವಾಭಿಜನಹೇತುಃ ॥ 74 ॥ ಬಲಮೇವಾಶೇಷಧರ್ಮಹೇತುಃ ॥ 75 ॥ ಅಭಿರುಚಿರೇವ ದಾಂಪತ್ಯಸಂಬಂಧಹೇತುಃ ॥ 76 ॥ ಸ್ತ್ರೀತ್ವಮೇವೋಪಭೋಗಹೇತುಃ ॥ 77 ॥ ಅನೃತಮೇವ ವ್ಯವಹಾರಜಯಹೇತುಃ ॥ 78 ॥ ಉನ್ನತಾಂಬುತೈವ ಪೃಥಿವೀಹೇತುಃ ॥ 79 ॥ ಬ್ರಹ್ಮಸೂತ್ರಮೇವ ವಿಪ್ರತ್ವಹೇತುಃ ॥ 80 ॥ ರತ್ನಧಾತೃತೈವ ಶ್ಲಾಘ್ಯತಾಹೇತುಃ ॥ 81 ॥ ಲಿಂಗಧಾರಣಮೇವಾಶ್ರಮಹೇತುಃ ॥ 82 ॥ ಅನ್ಯಾಯ ಏವ ವೃತ್ತಿಹೇತುಃ ॥ 83 ॥ ದೌರ್ಬಲ್ಯಮೇವಾವೃತ್ತಿಹೇತುಃ ॥ 84 ॥ ಅಭಯಪ್ರಗಲ್ಭೋಚ್ಚಾರಣಮೇವ ಪಾಂಡಿತ್ಯಹೇತುಃ ॥ 85 ॥ ಅನಾಢ್ಯತೈವ ಸಾಧುತ್ವಹೇತುಃ ॥ 86 ॥ ಸ್ನಾನಮೇವ ಪ್ರಸಾಧನಹೇತುಃ ॥ 87 ॥ ದಾನಮೇವ ಧರ್ಮಹೇತುಃ ॥ 88 ॥**

---

ಹ್ರಾಸಗೊಳ್ಳುತ್ತ ಕ್ಷಯಿಸುವುದರಿಂದ ಜಗತ್ತು ವಿನಾಶದತ್ತ ಸರಿಯುವುದು. ಆ ಸಮಯದಲ್ಲಿ ಧನವೇ ಮಾನವನ ದೊಡ್ಡತನಕ್ಕೆ ಕಾರಣವಾಗುವುದು. ಬಲ ಒಂದೇ ಸಮಸ್ತಧರ್ಮವನ್ನು ನಿರ್ಣಯಿಸುವುದಕ್ಕೆ ಹೇತುವಾಗುವುದು (73-74). ಪರಸ್ಪರ ಅಭಿರುಚಿಯೊಂದೇ ಮದುವೆಯಾಗಿ ದಂಪತಿಗಳಾಗುವುದಕ್ಕೆ ಯೋಗ್ಯ ಕಾರಣವಾಗುವುದು. ಹೆಣ್ಣುತನವೊಂದೇ ಅವಳನ್ನು ಭೋಗಿಸುವುದಕ್ಕೆ ಪ್ರವೃತ್ತಿ ಹೇತುವಾಗುವುದು. ವ್ಯವಹಾರದಲ್ಲಿ ಜಯಗಳಿಸುವುದಕ್ಕೆ ಸುಳ್ಳು ಹೇಳುವುದೇ ಸಾಕಾಗುವುದು (75-78). ಒಂದು ದೇಶವನ್ನು ವಶಪಡಿಸಿಕೊಳ್ಳಬೇಕಾದರೆ ಅದರಲ್ಲಿ ಜಲಸಮೃದ್ಧಿಯಿದೆಯೆಂಬ ಕಾರಣವೇ ಸಾಕಾಗುತ್ತದೆ. ಜನಿವಾರ ಒಂದೇ ಬ್ರಾಹ್ಮಣ್ಯಕ್ಕೆ ನಿಮಿತ್ತವಾಗುವುದು. ರತ್ನಧಾರಣವೇ ಪ್ರಶಂಸೆಯನ್ನು ಗಳಿಸಲು ಸಮರ್ಥವಾಗುವುದು. ಬ್ರಹ್ಮಚರ್ಯಾದ್ಯಾಶ್ರಮಗಳಿಗೆ ಬಾಹ್ಯ ಚಿಹ್ನವನ್ನು ಧರಿಸುವುದೊಂದೇ ಸಾಕಾಗುವುದು (79-82). ಜೀವನವೃತ್ತಿಗೆ ಅನ್ಯಾಯವೇ ಸಾಧನವಾಗುವುದು. ಉದ್ಯೋಗವನ್ನು ಕಳೆದುಕೊಳ್ಳುವುದಕ್ಕೆ ದೌರ್ಬಲ್ಯ ಒಂದೇ ನಿಮಿತ್ತವಾಗುವುದು. ನಿರ್ಭಯದಿಂದ ಗಟ್ಟಿಯಾಗಿ ಮಾತಾಡುವುದೇ ಪಾಂಡಿತ್ಯದ ಚಿಹ್ನೆಯಾಗುವುದು. ಸಾಧುವಾಗಿರಲು ಬಡತನವೇ ಕಾರಣ ವಾಗುವುದು (83-86). ಸ್ನಾನ ಒಂದೇ ಶುದ್ಧತೆಗೆ ಸಾಧನವೆನಿಸುವುದು. ದಾನ ಒಂದೇ ಧರ್ಮಕ್ಕೆ ಕಾರಣವಾಗುವುದು (ಇತರ ವೈದಿಕ ಕರ್ಮಗಳಲ್ಲ). ಸ್ವೀಕಾರ

**ಸ್ವೀಕರಣಮೇವ ವಿವಾಹಹೇತುಃ ॥ 89 ॥ ಸದ್ವೇಷಧಾರ್ಯೇವ ಪಾತ್ರಮ್ ॥ 90 ॥ ದೂರಾಯತನೋದಕಮೇವ ತೀರ್ಥಹೇತುಃ ॥ 91 ॥ ಕಪಟ-ವೇಷಧಾರಣಮೇವ ಮಹತ್ತ್ವಹೇತುಃ ॥ 92 ॥ ಇತ್ಯೇವಮನೇಕ-ದೋಷೋತ್ತರೇ ತು ಭೂಮಂಡಲೇ ಸರ್ವವರ್ಣೇಷ್ವೇವ ಯೋ ಯೋ ಬಲವಾನ್ ಸ ಸ ಭೂಪತಿರ್ಭವಿಷ್ಯತಿ ॥ 93 ॥ ಏವಂ ಚಾತಿಲುಬ್ಧಕ-ರಾಜಾಸಹಾಶ್ಶೈಲಾನಾಮಂತರದ್ರೋಣೀಃ ಪ್ರಜಾಸ್ಸಂಶ್ರಯಿಷ್ಯಂತಿ ॥ 94 ॥ ಮಧುಶಾಕಮೂಲಫಲಪತ್ರಪುಷ್ಪಾದ್ಯಾಹಾರಾಶ್ಚ ಭವಿಷ್ಯಂತಿ ॥ 95 ॥ ತರುವಲ್ಕಲಪರ್ಣಚೀರಪ್ರಾವರಣಾಶ್ಚಾತಿಬಹುಪ್ರಜಾಶ್ಶೀತವಾತಾತಪ-ವರ್ಷಸಹಾಶ್ಚ ಭವಿಷ್ಯಂತಿ ॥ 96 ॥ ನ ಚ ಕಶ್ಚಿತ್ತ್ರಯೋವಿಂಶತಿವರ್ಷಾಣಿ-ಜೀವಿಷ್ಯತಿ ಅನವರತಂ ಚಾತ್ರ ಕಲಿಯುಗೇ ಕ್ಷಯಮಾಯಾತ್ಯಖಿಲ ಏವೈಷ ಜನಃ ॥ 97 ॥ ಶ್ರೌತೇ ಸ್ಮಾರ್ತೇ ಚ ಧರ್ಮೇ ವಿಪ್ಲವಮತ್ಯಂತಮ್**

---

ಒಂದೇ ಮದುವೆಯ ಸಾಂಗತೆಗೆ ಹೇತುವೆನಿಸುವುದು. (ಶಾಸ್ತ್ರೀಯ ವಿಧಿಗಳು ಬೇಕಿಲ್ಲ). ಆಡಂಬರದ ವೇಷವನ್ನು ಧರಿಸಿದವನೇ ಸುಪಾತ್ರನಾಗುವನು (87-90). ದೂರದೇಶದ ಜಲವೇ ತೀರ್ಥವೆನಿಸುವುದು. ಕಪಟ ವೇಷ ಧಾರಣವೇ ಗೌರವಕ್ಕೆ ಕಾರಣವಾಗುವುದು. ಹೀಗೆ ನಾನಾದೋಷಗಳಿಂದ ತುಂಬಿಹೋದ ಭೂಮಂಡಲದಲ್ಲಿ, ಯಾವ ವರ್ಣದವನೇ ಆಗಿರಲಿ, ಬಲಾಢ್ಯನಾದವನು ಭೂಪತಿಯಾಗುವನು (91-93). ಮೈತ್ರೇಯ, ಈ ರೀತಿಯಾಗಿ ಅತ್ಯಂತ ಆಸೆಬುರುಕರಾದ ರಾಜರುಗಳ ಉಪದ್ರವವನ್ನು ಸಹಿಸಿ ಕೊಳ್ಳಲಾರದೆ ಜನರು ಬೆಟ್ಟಗಳ ಕಂದಕಗಳನ್ನು ಆಶ್ರಯಿಸುವರು. ಜೇನು, ಸಸ್ಯ, ಬೇರು, ಹಣ್ಣು, ಎಲೆ, ಹೂ—ಮುಂತಾದವನ್ನು ತಿನ್ನುತ್ತ ವಾಸಿಸುವರು (94-95). ಜನರಿಗೆ ಮಕ್ಕಳ ಸಂಖ್ಯೆಯೂ ಹೆಚ್ಚಾಗಿ, ಮರಗಳ ತೊಗಟೆ, ಎಲೆ, ಚಿಂದಿಗಳಿಂದ ದೇಹವನ್ನು ಮುಚ್ಚಿಕೊಂಡು, ಶೀತ, ವಾತ, ಬಿಸಿಲು ಮಳೆಗಳನ್ನು ಹೇಗೋ ಸಹಿಸಿಕೊಳ್ಳುತ್ತ ಇರುವರು. ಯಾವನೂ ಇಪ್ಪತ್ತಮೂರು ವರ್ಷಗಳ ಮೇಲೆ ಬದುಕುವುದಿಲ್ಲ. ಈ ಕಲಿಯುಗದಲ್ಲಿ ಜನರೆಲ್ಲರೂ ಸದಾ ಕ್ಷಯಿಸುತ್ತ ಹೋಗುವರು (96-97). ಕಡೆಗೆ ಕಲಿಯುಗದಲ್ಲಿ ಶ್ರೌತಸ್ಮಾರ್ತಧರ್ಮಗಳು ಸಂಪೂರ್ಣವಾಗಿ ನಾಶಹೊಂದಿ ಕಲಿಯುಗದ ಅವಧಿಯು ಮುಗಿಯುತ್ತ

**ಉಪಗತೇ ಕ್ಷೀಣಪ್ರಾಯೇ ಚ ಕಲಾವಶೇಷಜಗತ್ಸ್ರಷ್ಟುಶ್ಚರಾಚರಗುರೋಃ ಆದಿಮಧ್ಯಾಂತರಹಿತಸ್ಯ ಬ್ರಹ್ಮಮಯಸ್ಯಾತ್ಮರೂಪಿಣೋ ಭಗವತೋ ವಾಸುದೇವಸ್ಯಾಂಶಶ್ಶಂಬಲಗ್ರಾಮಪ್ರಧಾನಬ್ರಾಹ್ಮಣಸ್ಯ ವಿಷ್ಣುಯಶಸೋ ಗೃಹೇಽಷ್ಟಗುಣರ್ದ್ಧಿಸಮನ್ವಿತಃ ಕಲ್ಕಿರೂಪೀ ಜಗತ್ಯತ್ರಾವತೀರ್ಯ ಸಕಲ-ಮ್ಲೇಚ್ಛದಸ್ಯುದುಷ್ಟಾಚರಣಚೇತಸಾಮಶೇಷಾಣಾಮಪರಿಚ್ಛಿನ್ನಶಕ್ತಿಮಾಹಾ-ತ್ಮ್ಯಃ ಕ್ಷಯಂ ಕರಿಷ್ಯತಿ ಸ್ವಧರ್ಮೇಷು ಚಾಖಿಲಮೇವ ಸಂಸ್ಥಾಪಯಿಷ್ಯತಿ ॥ 98 ॥ ಅನಂತರಂ ಚಾಶೇಷಕಲೇರವಸಾನೇ ನಿಶಾವಸಾನೇ ವಿಬು-ದ್ಧಾನಾಮಿವ ತೇಷಾಮೇವ ಜನಪದಾನಾಮಮಲಸ್ಫಟಿಕವಿಶುದ್ಧಾ ಮತಯೋ ಭವಿಷ್ಯಂತಿ ॥ 99 ॥ ತೇಷಾಂ ಚ ಬೀಜಭೂತಾನಾಮಶೇಷ ಮನುಷ್ಯಾಣಾಂ ಪರಿಣತಾನಾಮಪಿ ತತ್ಕಾಲಕೃತಾಪತ್ಯಪ್ರಸೂತಿರ್ಭವಿಷ್ಯತಿ**

---

ಬರುವುದು. ಆಗ ಶಂಬಲಗ್ರಾಮವಾಸಿಯೂ ಬ್ರಾಹ್ಮಣೋತ್ತಮನೂ ಆದ ವಿಷ್ಣುಯಶಸ್ ಎಂಬಾತನ ಗೃಹದಲ್ಲಿ ಅಷ್ಟೈಶ್ವರ್ಯ*ಸಂಪನ್ನನಾದ ಕಲ್ಕಿಯು ಅವತರಿಸುವನು. ಆತನು ಅಖಿಲಜಗತ್ತಿಗೆ ಸೃಷ್ಟಿಕರ್ತನೂ ಚರಾಚರ ಗುರುವೂ ಆದಿಮಧ್ಯಾಂತರಹಿತನೂ ಬ್ರಹ್ಮಸ್ವರೂಪನೂ ಪರಮಾತ್ಮನೂ ಆದ ಭಗವಾನ್ ವಾಸುದೇವನ ಅಂಶಾವತಾರ. ಅಪರಿಮಿತವಾದ ಶಕ್ತಿಮಹಾತ್ಮ್ಯಗಳುಳ್ಳ ಆತನು ಕಲ್ಕಿ ಎಂಬ ಹೆಸರಿನಿಂದ ಅವತರಿಸಿ ಸಕಲಮ್ಲೇಚ್ಛರನ್ನೂ ದಸ್ಯುಗಳನ್ನೂ ದುರ್ಬುದ್ಧಿಯವರನ್ನೂ ಧ್ವಂಸಮಾಡಿ, ಸರ್ವರೂ ಸ್ವಸ್ವಧರ್ಮಗಳಲ್ಲಿ ನಡೆಯುವಂತೆ ನಿಯೋಜಿಸುವನು (98). ಅನಂತರ ಕಲಿಯುಗವು ಪೂರ್ತಿಯಾಗಿ ಮುಗಿಯಲು, ರಾತ್ರಿ ಕಳೆಯಲಾಗಿ ಜಾಗ್ರತರಾದವರಿಗೆ ಆಗುವಂತೆ, ಇರುವ ಪ್ರಜೆಗಳ ಬುದ್ಧಿಗಳು ಸ್ವಚ್ಛ ಸ್ಫಟಿಕದಂತೆ ಪರಿಶುದ್ಧವಾಗುವುವು (99). ಮುಂದಿನ ಪ್ರಜೆಗಳಿಗೆ ಬೀಜಸ್ವರೂಪರಾದ ಆ ಮನುಷ್ಯರಿಗೆ ವಯಸ್ಸಾಗಿದ್ದರೂ ಆ ಸಮಯದಲ್ಲಿ ಸಂತಾನಶಕ್ತಿ ಲಭಿಸುವುದು. ಅವರ ಮಕ್ಕಳು ಕೃತಯುಗಾನುಸಾರಿಯಾದ

---

* ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ।
ಪ್ರಾಪ್ತಿಃ ಪ್ರಾಕಾಮ್ಯಮೀಶಿತ್ವಂ ವಶಿತ್ವಂಚಾಷ್ಟಸಿದ್ಧಯಃ ॥

ಈ ಸಿದ್ಧಿಗಳೇ ಅಷ್ಟೈಶ್ವರ್ಯಗಳು ಅಥವಾ ಅಷ್ಟಗುಣರ್ಧಿಗಳು.

॥ 100 ॥ ತಾನಿ ಚ ತದಪತ್ಯಾನಿ ಕೃತಯುಗಾನುಸಾರೀಣ್ಯೇವ ಭವಿಷ್ಯಂತಿ ॥ 101 ॥

*ಅತ್ರೋಚ್ಯತೇ:*

**ಯದಾ ಚಂದ್ರಶ್ಚ ಸೂರ್ಯಶ್ಚ ತಥಾ ತಿಷ್ಯೋ ಬೃಹಸ್ಪತಿಃ।**
**ಏಕರಾಶೌ ಸಮೇಷ್ಯಂತಿ ತದಾ ಭವತಿ ವೈ ಕೃತಮ್॥** 102

**ಅತೀತಾ ವರ್ತಮಾನಾಶ್ಚ ತಥೈವಾನಾಗತಾಶ್ಚ ಯೇ।**
**ಏತೇ ವಂಶೇಷು ಭೂಪಾಲಾಃ ಕಥಿತಾ ಮುನಿಸತ್ತಮ॥** 103

**ಯಾವತ್ಪರೀಕ್ಷಿತೋ ಜನ್ಮ ಯಾವನ್ನಂದಾಭಿಷೇಚನಮ್।**
**ಏತದ್ವರ್ಷಸಹಸ್ರಂ ತು ಜ್ಞೇಯಂ ಪಂಚಶತೋತ್ತರಮ್॥** 104

**ಸಪ್ತರ್ಷೀಣಾಂ ತು ಯೌ ಪೂರ್ವೌ ದೃಶ್ಯೇತೇ ಹ್ಯುದಿತೌ ದಿವಿ।**
**ತಯೋಸ್ತು ಮಧ್ಯೇ ನಕ್ಷತ್ರಂ ದೃಶ್ಯೇತೇ ಯತ್ಸಮಂ ನಿಶಿ॥** 105

---

ಧರ್ಮವನ್ನು ಪಾಲಿಸತಕ್ಕವರಾಗುವರು (100-101). ಈ ವಿಷಯದಲ್ಲಿ ಹೀಗೆ ಉಕ್ತವಾಗಿದೆ: ಚಂದ್ರ, ಸೂರ್ಯ, ಬೃಹಸ್ಪತಿಗಳು ಒಂದೇ ರಾಶಿಯಲ್ಲಿ ಪುಷ್ಯನಕ್ಷತ್ರ ವನ್ನು ಯಾವಾಗ ಒಟ್ಟಿಗೆ ಪ್ರವೇಶಿಸುವರೋ ಆಗ ಕೃತಯುಗ ಆರಂಭವಾಗು ವುದು* (102). ಮುನಿಶ್ರೇಷ್ಠ—ಮೈತ್ರೇಯ, ವಿಭಿನ್ನ ವಂಶಗಳಲ್ಲಿ ಹಿಂದೆ ಸಂದುಹೋದ, ಈಗಿರುವ ಮತ್ತು ಮುಂದೆ ಬರಲಿರುವ ಭೂಪಾಲರ ವಿಷಯ ವನ್ನು ನಿನಗೆ ಹೇಳಿದ್ದೇನೆ. ಪರೀಕ್ಷಿತನ ಜನ್ಮದಿನದಿಂದ ನಂದನ ಪಟ್ಟಾಭಿಷೇಕದ ವರೆಗೆ ಒಂದು ಸಾವಿರದ ಐನೂರು (1500) ವರ್ಷಗಳು ಸಲ್ಲುತ್ತವೆಂದು ತಿಳಿಯಬೇಕು (103-104). ರಾತ್ರಿಯ ಹೊತ್ತು ಸಪ್ತರ್ಷಿಮಂಡಲದಲ್ಲಿ ಮೊದಲು ಉದಿತವಾಗಿ ಕಾಣಿಸಿಕೊಳ್ಳತಕ್ಕ ಎರಡು ನಕ್ಷತ್ರಗಳು (ಪುಲಹ, ಕ್ರತು)

---

* ಹನ್ನೆರಡು ವರ್ಷಗಳಿಗೊಮ್ಮೆ ಬೃಹಸ್ಪತಿಯು ಕರ್ಕಾಟಕ ರಾಶಿಯಲ್ಲಿ ಇದ್ದಾಗ ಈ ಮೂರು ಗ್ರಹಗಳ ಯೋಗವು ಅಮಾವಾಸ್ಯೆಯ ದಿನ ಪುಷ್ಯನಕ್ಷತ್ರದಲ್ಲಿ ಆಗುತ್ತಲೇ ಇರುವುದು. ಆದರೆ 'ಸಮೇಷ್ಯಂತಿ' ಎಂದು ಹೇಳಿದ್ದರಿಂದ ಏಕಕಾಲದಲ್ಲಿ ಮೂರು ಗ್ರಹಗಳೂ ಪುಷ್ಯನಕ್ಷತ್ರವನ್ನು ಪ್ರವೇಶಿಸಿದಾಗ ಕೃತಯುಗವೆಂದು ಅಭಿಪ್ರಾಯ. ಏಕಕಾಲ ದಲ್ಲಿ ಪ್ರವೇಶವು ಕೃತಯುಗಾರಂಭದಲ್ಲಿ ಮಾತ್ರ.

**ತೇನ ಸಪ್ತರ್ಷಯೋ ಯುಕ್ತಾಸ್ತಿಷ್ಠಂತ್ಯಬ್ದಶತಂ ನೃಣಾಮ್।**
**ತೇ ತು ಪಾರೀಕ್ಷಿತೇ ಕಾಲೇ ಮಘಾಸ್ವಾಸನ್ ದ್ವಿಜೋತ್ತಮ॥** 106

**ತದಾ ಪ್ರವೃತ್ತಶ್ಚ ಕಲಿರ್ದ್ವಾದಶಾಬ್ದಶತಾತ್ಮಕಃ॥** 107

**ಯದ್ಯೈವ ಭಗವಾನ್ ವಿಷ್ಣೋರಂಶೋ ಯಾತೋ ದಿವಂ ದ್ವಿಜ।**
**ವಸುದೇವಕುಲೋದ್ಭೂತಸ್ತದೈವಾತ್ರಾಗತಃ ಕಲಿಃ॥** 108

**ಯಾವತ್ಸ ಪಾದಪದ್ಮಾಭ್ಯಾಂ ಪಸ್ಪರ್ಶೇಮಾಂ ವಸುಂಧರಾಮ್।**
**ತಾವತ್ಪೃಥ್ವೀಪರಿಷ್ವಂಗೇ ಸಮರ್ಥೋ ನಾಭವತ್ಕಲಿಃ॥** 109

**ಗತೇ ಸನಾತನಸ್ಯಾಂಶೇ ವಿಷ್ಣೋಸ್ತತ್ರ ಭುವೋ ದಿವಮ್।**
**ತತ್ಯಾಜ ಸಾನುಜೋ ರಾಜ್ಯಂ ಧರ್ಮಪುತ್ರೋ ಯುಧಿಷ್ಠಿರಃ॥** 110

---

ಇವೆಯಷ್ಟೆ. ಅವುಗಳ ನಡುವೆ (ದಕ್ಷಿಣೋತ್ತರವಾದ ರೇಖೆಗೆ) ಸಮಭಾಗದಲ್ಲಿ (ಅಶ್ವಿನ್ಯಾದಿ ನಕ್ಷತ್ರಗಳಲ್ಲಿ) ಒಂದು ನಕ್ಷತ್ರವು ಕಂಡುಬರುತ್ತದೆ. ಸಪ್ತರ್ಷಿ ಮಂಡಲವು ಆ ನಕ್ಷತ್ರದಿಂದ ಯುಕ್ತವಾಗಿರುವುದು ಮನುಷ್ಯಮಾನದಿಂದ ಒಂದು ನೂರು ವರ್ಷ. ಹೇ ಮೈತ್ರೇಯ, ಪರೀಕ್ಷಿತನ ಕಾಲದಲ್ಲಿ ಸಪ್ತರ್ಷಿ ಮಂಡಲವು ಮಾಘಾನಕ್ಷತ್ರದಿಂದ ಸಹಿತವಾಗಿತ್ತು (105-106). ಆ ಸಮಯ ದಲ್ಲಿ (ದೇವಮಾನದಿಂದ) ಹನ್ನೆರಡು ನೂರು ವರ್ಷಗಳ ಕಲಿಯುಗವು ಪ್ರವೃತ್ತ ವಾಯಿತು.* ಮೈತ್ರೇಯ, ವಸುದೇವನ ಕುಲದಲ್ಲಿ ಅವತರಿಸಿದ ವಿಷ್ಣುವಿನ ಅಂಶಾವತಾರವಾದ ಭಗವಾನ್ ಶ್ರೀಕೃಷ್ಣನು ಯಾವಾಗ ದಿವ್ಯಲೋಕವನ್ನಡರಿ ದನೋ ಆಗಲೇ ಕಲಿಯು ಮುಂದಕ್ಕೆ ಆಗಮಿಸಿದನು (107-108). ಎಲ್ಲಿಯ ವರೆಗೆ ಶ್ರೀಕೃಷ್ಣನು ತನ್ನ ಪಾದಪದ್ಮಗಳಿಂದ ಭೂಮಿಯ ಸ್ಪರ್ಶವನ್ನು ಮಾಡು- ತ್ತಿದ್ದನೋ ಅಲ್ಲಿಯವರೆಗೆ ಭೂಮಿಯನ್ನು ವ್ಯಾಪಿಸಲು ಕಲಿಗೆ ಸಾಮರ್ಥ್ಯ ವಿರಲಿಲ್ಲ. ಸನಾತನನಾದ ಶ್ರೀವಿಷ್ಣುವಿನ ಅಂಶವು ಭೂಮಿಯಿಂದ ದಿವ್ಯಲೋಕ ವನ್ನು ಸೇರಿದಮೇಲೆ, ಧರ್ಮಪುತ್ರನಾದ ಯುಧಿಷ್ಠಿರನು ಸಹೋದರರೊಡನೆ ರಾಜ್ಯವನ್ನು ಪರಿತ್ಯಜಿಸಿದನು (109-110). ಶ್ರೀಕೃಷ್ಣನು ಲೋಕಾಂತರ ವನ್ನೈದಲು, (ಕಲಿಸಂಬಂಧಿಯಾದ) ವಿಪರೀತ ಲಕ್ಷಣಗಳನ್ನು ಕಂಡು ಪಾಂಡು

* ಅನುಬಂಧವನ್ನು ನೋಡಿ.

**ವಿಪರೀತಾನಿ ದೃಷ್ಟ್ವಾ ಚ ನಿಮಿತ್ತಾನಿ ಹಿ ಪಾಂಡವಃ।**
**ಯಾತೇ ಕೃಷ್ಣೇ ಚಕಾರಾಥ ಸೋಽಭಿಷೇಕಂ ಪರೀಕ್ಷಿತಃ॥** 111

**ಪ್ರಯಾಸ್ಯಂತಿ ಯದಾ ಚೈತೇ ಪೂರ್ವಾಷಾಢಾಂ ಮಹರ್ಷಯಃ।**
**ತದಾ ನಂದಾತ್ ಪ್ರಭೃತ್ಯೇಷ ಗತಿವೃದ್ಧಿಂ ಗಮಿಷ್ಯತಿ॥** 112

**ಯಸ್ಮಿನ್ ಕೃಷ್ಣೋ ದಿವಂ ಯಾತಸ್ತಸ್ಮಿನ್ನೇವ ತದಾಹನಿ।**
**ಪ್ರತಿಪನ್ನಂ ಕಲಿಯುಗಂ ತಸ್ಯ ಸಂಖ್ಯಾಂ ನಿಬೋಧ ಮೇ॥** 113

**ತ್ರೀಣಿ ಲಕ್ಷಾಣಿ ವರ್ಷಾಣಾಂ ದ್ವಿಜ ಮಾನುಷ್ಯಸಂಖ್ಯಯಾ।**
**ಷಷ್ಟಿಶ್ಚೈವ ಸಹಸ್ರಾಣಿ ಭವಿಷ್ಯತ್ಯೇಷ ವೈ ಕಲಿಃ॥** 114

**ಶತಾನಿ ತಾನಿ ದಿವ್ಯಾನಾಂ ಸಪ್ತ ಪಂಚ ಚ ಸಂಖ್ಯಯಾ।**
**ನಿಶ್ಶೇಷೇಣ ಗತೇ ತಸ್ಮಿನ್ ಭವಿಷ್ಯತಿ ಪುನಃ ಕೃತಮ್॥** 115

---

ಪುತ್ರನಾದ ಯುಧಿಷ್ಠಿರನು ಪರೀಕ್ಷಿತನಿಗೆ ಪಟ್ಟಾಭಿಷೇಕ ಮಾಡಿದನು. ಸಪ್ತರ್ಷಿ ಮಂಡಲದ ಈ ಮಹರ್ಷಿಗಳು ಯಾವಾಗ ಪೂರ್ವಾಷಾಢಾ ನಕ್ಷತ್ರ ವನ್ನೈದುವರೋ, ಆಗ ನಂದನಿಂದ ಹಿಡಿದು ಕಲಿಯು ವೃದ್ಧಿಯನ್ನೈದುವನು* (111-112). ಯಾವದಿನ ಶ್ರೀಕೃಷ್ಣನು ತನ್ನ ದಿವ್ಯಧಾಮಕ್ಕೆ ಹೋದನೋ ಆದಿನ ಕಲಿಯುಗವು ಭೂಮಿಯಲ್ಲಿ ಉಪಸ್ಥಿತವಾಯಿತು. ಮೈತ್ರೇಯ, ಕಲಿಯುಗದ ಕಾಲಪ್ರಮಾಣವನ್ನು ಹೇಳುತ್ತೇನೆ, ಕೇಳು (113). ಮನುಷ್ಯರ ಕಾಲಗಣನೆಗೆ ಅನುಸಾರವಾಗಿ ಮೂರು ಲಕ್ಷದ ಅರವತ್ತು ಸಾವಿರ (3,60,000) ವರ್ಷಗಳ ವರೆಗೆ (ಎರಡು ಸಂಧ್ಯಾಂಶಗಳ ಕಾಲವನ್ನು ಬಿಟ್ಟು) ಕಲಿಯುಗವಿರುತ್ತದೆ. ಕಲಿಯುಗವು ನಿಃಶೇಷವಾಗಿ ಕಳೆದಮೇಲೆ—ಎಂದರೆ ದಿವ್ಯವರ್ಷಗಣನೆಯಂತೆ (ಎರಡು ಸಂಧ್ಯಾಂಶಗಳೂ ಸೇರಿ) ಹನ್ನೆರಡು ನೂರು (1200) ದಿವ್ಯವರ್ಷಗಳು ಕಳೆದಮೇಲೆ—ಮತ್ತೆ ಕೃತಯುಗವು ಪ್ರಾರಂಭವಾಗುತ್ತದೆ§ (114-115). ಮೈತ್ರೇಯ, ಪ್ರತಿಯೊಂದು ಯುಗದಲ್ಲಿಯೂ ಮಹಾತ್ಮರಾದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು ಸಾವಿರಗಟ್ಟಲೆ ಆಗಿಹೋದರು. ಒಂದೊಂದು ವಂಶದಲ್ಲಿಯೇ

---

* ಅನುಬಂಧವನ್ನು ನೋಡಿ.

§ ವಿವರಗಳಿಗೆ ಪ್ರಥಮಾಂಶದ ಮೂರನೆಯ ಅಧ್ಯಾಯವನ್ನು ನೋಡಿ.

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚ ದ್ವಿಜಸತ್ತಮ।**
**ಯುಗೇ ಯುಗೇ ಮಹಾತ್ಮಾನಃ ಸಮತೀತಾಸ್ಸಹಸ್ರಶಃ॥** 116

**ಬಹುತ್ವಾನ್ನಾಮಧೇಯಾನಾಂ ಪರಿಸಂಖ್ಯಾ ಕುಲೇ ಕುಲೇ।**
**ಪೌನರುಕ್ತ್ಯಾದ್ಧಿ ಸಾಮ್ಯಾಚ್ಚ ನ ಮಯಾ ಪರಿಕೀರ್ತಿತಾ॥** 117

**ದೇವಾಪಿಃ ಪೌರವೋ ರಾಜಾ ಮರುಶ್ಚೇಕ್ಷ್ವಾಕುವಂಶಜಃ।**
**ಮಹಾಯೋಗಬಲೋಪೇತೌ ಕಲಾಪಗ್ರಾಮಸಂಶ್ರಿತೌ॥** 118

**ಕೃತೇ ಯುಗೇ ತ್ವಿಹಾಗಮ್ಯ ಕ್ಷತ್ರಪ್ರವರ್ತ್ತಕೌ ಹಿತೌ।**
**ಭವಿಷ್ಯತೋ ಮನೋರ್ವಂಶಬೀಜಭೂತೌ ವ್ಯವಸ್ಥಿತೌ॥** 119

**ಏತೇನ ಕ್ರಮಯೋಗೇನ ಮನುಪುತ್ರೈರ್ವಸುಂಧರಾ।**
**ಕೃತತ್ರೇತಾದ್ವಾಪರಾಣಿ ಯುಗಾನಿ ತ್ರೀಣಿ ಭುಜ್ಯತೇ॥** 120

**ಕಲೌ ತೇ ಬೀಜಭೂತಾ ವೈ ಕೇಚಿತ್ತಿಷ್ಠಂತಿ ವೈ ಮುನೇ**
**ಯಥೈವ ದೇವಾಪಿಪುರೂ ಸಾಮ್ಪ್ರತಂ ಸಮಧಿಷ್ಠಿತೌ॥** 121

---

ಅವರ ಸಂಖ್ಯೆ ಅಧಿಕವಾಗಿರುವುದರಿಂದಲೂ ಹೆಸರುಗಳಲ್ಲಿ ಸಾಮ್ಯವಿರುವುದರಿಂದಲೂ ಪುನರುಕ್ತಿಯಾದೀತೆಂಬ ಭಯದಿಂದ ಎಲ್ಲರ ಹೆಸರುಗಳನ್ನೂ ನಾನು ಹೇಳಲಿಲ್ಲ (116-117). ಪುರುವಂಶದ ದೇವಾಪಿ ಎಂಬ ರಾಜನೂ ಇಕ್ಷ್ವಾಕುವಂಶದ ಮರು ಎಂಬ ರಾಜನೂ ಮಹಾಯೋಗಬಲಸಂಪನ್ನರಾಗಿ ಕಲಾಪಗ್ರಾಮದಲ್ಲಿ ವಾಸವಾಗಿರುತ್ತಾರೆ. ಕೃತಯುಗ ಬಂದಾಗ ಮತ್ತೆ ಅವರು ಇಲ್ಲಿಗೆ ಬಂದು ಕ್ಷತ್ರಿಯವಂಶಕ್ಕೆ ಪ್ರವರ್ತಕರಾಗುವರು. ಆಗಾಮಿಯಾದ ಮನುವಂಶಕ್ಕೆ ಬೀಜಸ್ವರೂಪರಾಗಿರುವರು (118-119). ಈ ಕ್ರಮವನ್ನನುಸರಿಸಿ ಮನುಪುತ್ರರಾದ ಕ್ಷತ್ರಿಯರು ಕೃತ-ತ್ರೇತಾ-ದ್ವಾಪರಯುಗಗಳಲ್ಲಿ ಭೂಮಿಯನ್ನು ಪಾಲಿಸುತ್ತಾರೆ. ಮೈತ್ರೇಯ, ಮತ್ತೆ ಕಲಿಯುಗವು ಬಂದಾಗ ಅವರಲ್ಲಿಯೇ ಕೆಲವು ಕ್ಷತ್ರಿಯರು, ಈಗ ದೇವಾಪಿಮರುಗಳಿರುವಂತೆ, ಬೀಜಭೂತರಾಗಿ ಉಳಿದುಕೊಂಡಿರುತ್ತಾರೆ (120-121). ಒಟ್ಟಿನಲ್ಲಿ, ಮೈತ್ರೇಯ, ರಾಜರ ವಂಶಾವಳಿಯನ್ನು ಈ ಪ್ರಕಾರ ಸಂಕ್ಷೇಪವಾಗಿ ನಿನಗೆ ಹೇಳಿದ್ದೇನೆ. ಇದನ್ನು

**ಏಷ ತೂದ್ದೇಶತೋ ವಂಶಸ್ತವೋಕ್ತೋ ಭೂಭುಜಾಂ ಮಯಾ।**
**ನಿಖಿಲೋ ಗದಿತುಂ ಶಕ್ಯೋ ನೈಷ ವರ್ಷಶತೈರಪಿ॥ 122**

**ಏತೇ ಚಾನ್ಯೇ ಚ ಭೂಪಾಲಾ ಯೈರತ್ರ ಕ್ಷಿತಿಮಂಡಲೇ।**
**ಕೃತಂ ಮಮತ್ವಂ ಮೋಹಾಂಧೈರ್ನಿತ್ಯಂ ಹೇಯಕಲೇವರೇ॥ 123**

**ಕಥಂ ಮಮೇಯಮಚಲಾ ಮತ್ಪುತ್ರಸ್ಯ ಕಥಂ ಮಹೀ।**
**ಮದ್ವಂಶಸ್ಯೇತಿ ಚಿಂತಾರ್ತಾ ಜಗ್ಮುರಂತಮಿಮೇ ನೃಪಾಃ॥ 124**

**ತೇಭ್ಯಃ ಪೂರ್ವತರಾಶ್ಚಾನ್ಯೇ ತೇಭ್ಯಸ್ತೇಭ್ಯಸ್ತಥಾ ಪರೇ।**
**ಭವಿಷ್ಯಾಶ್ಚೈವ ಯಾಸ್ಯಂತಿ ತೇಷಾಮನ್ಯೇ ಚ ಯೇಽಪ್ಯನು॥ 125**

**ವಿಲೋಕ್ಯಾತ್ಮಜಯೋದ್ಯೋಗಂ ಯಾತ್ರಾವ್ಯಗ್ರಾನ್ನರಾಧಿಪಾನ್।**
**ಪುಷ್ಪಪ್ರಹಾಸೈಃ ಶರದಿ ಹಸಂತೀವ ವಸುಂಧರಾ॥ 126**

**ಮೈತ್ರೇಯ ಪೃಥಿವೀಗೀತಾನ್ ಶ್ಲೋಕಾಂಶ್ಚಾತ್ರ ನಿಬೋಧ ಮೇ।**
**ಯಾನಾಹ ಧರ್ಮಧ್ವಜಿನೇ ಜನಕಾಯಾಸಿತೋ ಮುನಿಃ॥ 127**

---

ಪೂರ್ಣವಾಗಿ ಹೇಳುವುದಕ್ಕೆ ನೂರುವರ್ಷಗಳಾದರೂ ಸಾಧ್ಯವಿಲ್ಲ! (122). ಹೇಯವಾದ ಶರೀರದಲ್ಲಿ ಮೋಹಾಂಧರಾಗಿ ಸದಾ ಮಮತ್ವವನ್ನು ಬೆಳೆಸಿಕೊಂಡ ಈ ರಾಜರೂ ಇವರಂತಹವರೂ ಭೂಮಂಡಲದಲ್ಲಿ ಅಸಂಖ್ಯಾತರಾಗಿದ್ದಾರೆ. 'ಈ ಭೂಮಿಯು ನನಗೆ ಸ್ಥಿರವಾಗಿ ಹೇಗೆ ಉಳಿದೀತು, ನನ್ನ ಮಗನಿಗೆ ಹೇಗೆ ಲಭಿಸೀತು, ನನ್ನ ವಂಶಕ್ಕೆ ಹೇಗೆ ದಕ್ಕೀತು?' ಎಂಬ ಚಿಂತೆಯಿಂದ ಕೊರಗುತ್ತಲೇ ಇವರೆಲ್ಲರೂ ಸತ್ತುಹೋದರು (123-124). ಇದೇ ಚಿಂತೆಯಿಂದ ಕನವರಿಸುತ್ತಲೇ ಇವರಿಗಿಂತ ಹಿಂದಿನವರೂ ಮುಂದಿನವರೂ ಆಮೇಲಿನವರೂ ಗತಿಸಿದರು. ಭವಿಷ್ಯದಲ್ಲಿ ಬರತಕ್ಕವರೂ ಅವರ ಅನಂತರ ದವರೂ ಹೀಗೆಯೇ ಕನವರಿಸುತ್ತ ಸತ್ತುಹೋಗುವರು (125). ಹೀಗೆ ತನ್ನನ್ನು ಜಯಿಸಬೇಕೆಂದು ವಿಜಯಯಾತ್ರೆಗೆ ಸಂನದ್ಧರಾಗುವ ಭೂಪತಿಗಳನ್ನೂ (ಅವರ ಮರುಳತನವನ್ನೂ) ಕಂಡು, ಭೂದೇವಿಯು ಶರತ್ಕಾಲದಲ್ಲಿ ಅರಳಿದ ಹೂಗಳ ನೆವದಲ್ಲಿ ನಗುವಳೋ ಎಂಬಂತೆ ಕಾಣುವಳು (126). ಮೈತ್ರೇಯ, ಪೃಥಿವಿಯು ಹಾಡಿದ ಈ ಶ್ಲೋಕಗಳನ್ನು ಕೇಳು. ಅಸಿತಮುನಿಯು ಇವನ್ನು ಧರ್ಮಧ್ವಜನೆಂಬ ಜನಕರಾಜನಿಗೆ ಹೇಳಿದ್ದನು. ಪೃಥಿವಿಯು ಹೇಳಿದ್ದೇನೆಂದರೆ (127): "ಧೀಮಂತ

*ಪೃಥಿವ್ಯುವಾಚ:*

**ಕಥಮೇಷ ನರೇಂದ್ರಾಣಾಂ ಮೋಹೋ ಬುದ್ಧಿಮತಾಮಪಿ।**
**ಯೇನ ಫೇನಸಧರ್ಮಾಣೋಽಪ್ಯತಿವಿಶ್ವಸ್ತಚೇತಸಃ॥** 128

**ಪೂರ್ವಮಾತ್ಮಜಯಂ ಕೃತ್ವಾ ಜೇತುಮಿಚ್ಛಂತಿ ಮಂತ್ರಿಣಃ।**
**ತತೋ ಭೃತ್ಯಾಂಶ್ಚ ಪೌರಾಂಶ್ಚ ಜಿಗೀಷಂತೇ ತಥಾ ರಿಪೂನ್॥** 129

**ಕ್ರಮೇಣಾನೇನ ಜೇಷ್ಯಾಮೋ ವಯಂ ಪೃಥ್ವೀಂ ಸಸಾಗರಾಮ್।**
**ಇತ್ಯಾಸಕ್ತಧಿಯೋ ಮೃತ್ಯುಂ ನ ಪಶ್ಯಂತ್ಯವಿದೂರಗಮ್॥** 130

**ಸಮುದ್ರಾವರಣಂ ಯಾತಿ ಭೂಮಂಡಲಮಥೋ ವಶಮ್।**
**ಕಿಯದಾತ್ಮಜಯಸ್ಯೈತನ್ಮುಕ್ತಿರಾತ್ಮಜಯೇ ಫಲಮ್॥** 131

**ಉತ್ಸೃಜ್ಯ ಪೂರ್ವಜಾ ಯಾತಾ ಯಾಂ ನಾದಾಯ ಗತಃ ಪಿತಾ।**
**ತಾಂ ಮಾಮತೀವಮೂಢತ್ವಾಜ್ಜೇತುಮಿಚ್ಛಂತಿ ಪಾರ್ಥಿವಾಃ॥** 132

---

ರಾದ ನರೇಂದ್ರರಿಗೂ ಸಹ ಈ ಬುದ್ಧಿಗೇಡಿತನ ಹೇಗೆ ಬಂದಿರಬಹುದು! ತಾವು ನೀರಿನ ನೊರೆಯಂತೆ ಜೊಳ್ಳುಗಳಾದರೂ ದೇಹವು ಶಾಶ್ವತವೆಂದು ನಂಬಿ ಕೊಂಡಿದ್ದಾರಲ್ಲ! (128). ಮೊದಲು ಇಂದ್ರಿಯಗಳನ್ನು ಜಯಿಸಿ ಅನಂತರ ಮಂತ್ರಿಗಳನ್ನು ಜಯಿಸಬೇಕು. ಅನಂತರ ಬೃತ್ಯರನ್ನೂ ಪೌರರನ್ನೂ ವೈರಿಗಳನ್ನೂ ಕ್ರಮವಾಗಿ ಜಯಿಸಬೇಕು. ಇಷ್ಟಾದಮೇಲೆ ಸಾಗರಾಂತವಾದ ಪೃಥ್ವಿಯನ್ನೇ ಜಯಿಸುವೆವು ನಾವೆಂದು ಸಂಕಲ್ಪಿಸುತ್ತಾರೆ. ಸಮೀಪದಲ್ಲಿಯೇ ಮೃತ್ಯು ಕಾದಿರುವದನ್ನಿವರು ಕಾಣುವುದೇ ಇಲ್ಲ! (129-130). ಒಂದು ವೇಳೆ ಸಮುದ್ರ ಪರ್ಯಂತವಾದ ಭೂಮಂಡಲವೇ ವಶವಾಯಿತೆನ್ನೋಣ, ಇದು ಇಂದ್ರಿಯ ಜಯಕ್ಕೆ ಯಾವ ಫಲವಾದೀತು? ಇಂದ್ರಿಯಜಯಕ್ಕೆ ಮುಕ್ತಿಯೇ ಸರಿಯಾದ ಫಲ. ಇವರ ಪೂರ್ವಜರೆಲ್ಲರೂ ನನ್ನನ್ನು (ಪೃಥಿವಿಯನ್ನು) ಇಲ್ಲಿಯೇ ಬಿಟ್ಟು ಸಾಗಿದರು. ಇವರ ತಂದೆಯೂ ನನ್ನನ್ನು ಜೊತೆಗೆ ಒಯ್ಯಲಿಲ್ಲ! ಈಗ ಈ ರಾಜರು ನನ್ನನ್ನು ಜಯಿಸಲು ಬಯಸುತ್ತಿದ್ದಾರೆ! ಅತ್ಯಂತ ಮೂಢರಿವರು! (131-132). ನನ್ನದು ನನ್ನದೆಂದು ಸೊಕ್ಕಿದ ಮನಸ್ಸುಳ್ಳ ಈ ಜನರಲ್ಲಿ ತಂದೆ ಮಕ್ಕಳಿಗೂ ಅಣ್ಣ ತಮ್ಮಂದಿರಿಗೂ ನನಗೋಸ್ಕರ ಹೊಡೆದಾಟ ನಡೆಯುತ್ತದೆ.

ಮತ್ಕೃತೇ ಪಿತೃಪುತ್ರಾಣಾಂ ಭ್ರಾತೄಣಾಂ ಚಾಪಿ ವಿಗ್ರಹಃ।
ಜಾಯತೇಽತ್ಯಂತಮೋಹೇನ ಮಮತ್ವಾದ್ದೃಪ್ತಚೇತಸಾಮ್॥ 133

ಪೃಥ್ವೀ ಮಮೇಯಂ ಸಕಲಾ ಮಮೈಷಾ
ಮದನ್ವಯಸ್ಯಾಪಿ ಚ ಶಾಶ್ವತೀಯಮ್।
ಯೋ ಯೋ ಮೃತೋ ಹ್ಯತ್ರ ಬಭೂವ ರಾಜಾ
ಕುಬುದ್ಧಿರಾಸೀದಿತಿ ತಸ್ಯ ತಸ್ಯ॥ 134

ದೃಷ್ಟ್ವಾ ಮಮತ್ವಾದೃತಚಿತ್ತಮೇಕಂ
ವಿಹಾಯ ಮಾಂ ಮೃತ್ಯುವಶಂ ವ್ರಜಂತಮ್।
ತಸ್ಯಾನು ಯಸ್ತಸ್ಯ ಕಥಂ ಮಮತ್ವಂ
ಹೃದ್ಯಾಸ್ಪದಂ ಮತ್ಪ್ರಭವಂ ಕರೋತಿ॥ 135

ಪೃಥ್ವೀ ಮಮೈಷಾಶು ಪರಿತ್ಯಜೈನಾಂ
ವದಂತಿ ಯೇ ದೂತಮುಖೈಸ್ಸ್ವಶತ್ರೂನ್।
ನರಾಧಿಪಾಸ್ತೇಷು ಮಮಾತಿಹಾಸಃ
ಪುನಶ್ಚ ಮೂಢೇಷು ದಯಾಭ್ಯುಪೈತಿ॥ 136

---

ಯಾವ ಯಾವ ರಾಜರು ಜಗತ್ತಿನಲ್ಲಿ ಆಗಿಹೋದರೋ ಅವರೆಲ್ಲರಿಗೂ "ಈ ರಾಜ್ಯ ನನ್ನದು, ಈ ಪೃಥ್ವಿಯೆಲ್ಲ ನನ್ನದು, ನನ್ನ ವಂಶಜರಿಗೆ ಇದು ಶಾಶ್ವತವಾಗಿ ಉಳಿಯುವುದು" ಎಂಬ ಕುತ್ಸಿತ ಬುದ್ಧಿ ಇತ್ತು (133-134). ನನ್ನ (ಪೃಥ್ವಿಯ) ವಿಷಯದಲ್ಲಿ ಒಬ್ಬನ ಚಿತ್ತವು ಮಮತ್ವದಿಂದ ತುಂಬಿದೆಯೆನ್ನೋಣ. ಆತನೂ ಸಹ ನನ್ನನ್ನು ಇಲ್ಲಿಯೇ ಬಿಟ್ಟು ಮೃತ್ಯುವಶನಾಗಿ ಹೋಗುತ್ತಿರುವುದನ್ನು ಕಣ್ಣೆದುರಿಗೆ ನೋಡುತ್ತಿದ್ದರೂ ಅನಂತರ ಬಂದ ಮತ್ತೊಬ್ಬನ ಹೃದಯದಲ್ಲಿ ಮತ್ತೆ ನನ್ನ ವಿಷಯವಾಗಿ ಮಮತ್ವವು ಬಂದು ಸೇರಿಬಿಡುವುದಲ್ಲವೆ, ಇದು ಹೇಗಿರಬಹುದು! (135). "ಇದು ನನ್ನ ರಾಜ್ಯ, ಇದನ್ನು ತ್ಯಜಿಸಿ ಹೋಗತಕ್ಕದ್ದು" ಎಂದು ಯಾವ ನರಪತಿಗಳು ದೂತರ ಮುಖದಿಂದ ಶತ್ರುಗಳಿಗೆ ಹೇಳುತ್ತಾರೋ ಅವರನ್ನು ನೋಡಿ ನನಗೆ ಬಹಳ ನಗು ಬರುತ್ತದೆ; ಮತ್ತೆ ಕನಿಕರವೂ ಹುಟ್ಟುತ್ತದೆ" (136). ಪರಾಶರರು ಹೇಳಿದರು: ಮೈತ್ರೇಯ, ಇವು ಭೂದೇವಿ ಹೇಳಿದ

*ಶ್ರೀಪರಾಶರ ಉವಾಚ:*

**ಇತ್ಯೇತೇ ಧರಣೀಗೀತಾಃ ಶ್ಲೋಕಾ ಮೈತ್ರೇಯ ಯೈಶ್ಶ್ರುತಾಃ।**
**ಮಮತ್ವಂ ವಿಲಯಂ ಯಾತಿ ತಪತ್ಯರ್ಕೇ ಯಥಾ ಹಿಮಮ್॥** 137

**ಇತ್ಯೇಷ ಕಥಿತಃ ಸಮ್ಯಙ್ಮನೋರ್ವಂಶೋ ಮಯಾ ತವ।**
**ಯತ್ರ ಸ್ಥಿತಿಪ್ರವೃತ್ತಸ್ಯ ವಿಷ್ಣೋರಂಶಾಂಶಕಾ ನೃಪಾಃ॥** 138

**ಶೃಣೋತಿ ಯ ಇಮಂ ಭಕ್ತ್ಯಾ ಮನೋರ್ವಂಶಮನುಕ್ರಮಾತ್।**
**ತಸ್ಯ ಪಾಪಮಶೇಷಂ ವೈ ಪ್ರಣಶ್ಯತ್ಯಮಲಾತ್ಮನಃ॥** 139

**ಧನಧಾನ್ಯರ್ದ್ಧಿಮತುಲಾಂ ಪ್ರಾಪ್ನೋತ್ಯವ್ಯಾಹತೇಂದ್ರಿಯಃ।**
**ಶ್ರುತ್ವೈವಮಖಿಲಂ ವಂಶಂ ಪ್ರಶಸ್ತಂ ಶಶಿಸೂರ್ಯಯೋಃ॥** 140

**ಇಕ್ಷ್ವಾಕುಜಹ್ನುಮಾಂಧಾತೃಸಗರಾವಿಕ್ಷಿತಾನ್ ರಘೂನ್।**
**ಯಯಾತಿನಹುಷಾದ್ಯಾಂಶ್ಚ ಜ್ಞಾತ್ವಾ ನಿಷ್ಠಾಮುಪಾಗತಾನ್॥** 141

**ಮಹಾಬಲಾನ್ಮಹಾವೀರ್ಯಾನನಂತಧನಸಂಚಯಾನ್।**
**ಕೃತಾನ್ಕಾಲೇನ ಬಲಿನಾ ಕಥಾಶೇಷಾನ್ನರಾಧಿಪಾನ್॥** 142

---

ಶ್ಲೋಕಗಳು. ಇವನ್ನು ಯಾರು ಕೇಳುತ್ತಾರೋ ಅವರಿಗೆ (ಯಾವುದರಲ್ಲಿಯೂ) 'ನನ್ನದು' ಎಂಬ ಭಾವನೆ ಅಳಿಯುತ್ತದೆ. ಸೂರ್ಯನೆದುರಿಗೆ ಹಿಮದಂತೆ ಕರಗಿ ಹೋಗುತ್ತದೆ (137). ಈ ರೀತಿಯಲ್ಲಿ ನಿನಗೆ ಮನುವಿನ ವಂಶವಿಸ್ತರವನ್ನು ಸರಿಯಾಗಿ ಹೇಳಿದ್ದೇನೆ. ಈ ರಾಜರೆಲ್ಲರೂ ಜಗತ್ತಿನ ಸ್ಥಿತಿಗೋಸ್ಕರ ಪ್ರವೃತ್ತನಾದ ವಿಷ್ಣುವಿನ ಅಂಶಾಂಶಗಳು. ಈ ಮನುವಂಶದ ವಿಷಯವನ್ನು ಯಾವಾತನು ಭಕ್ತಿಯಿಂದ ಕೇಳುತ್ತಾನೋ ಆತನ ಚಿತ್ತವು ಶುದ್ಧವಾಗಿ ಪಾಪವೆಲ್ಲವೂ ಲಯ ಹೊಂದುತ್ತದೆ (138-139). ಯಾವಾತನು ಜಿತೇಂದ್ರಿಯನಾಗಿ ಚಂದ್ರಸೂರ್ಯರ ಪ್ರಶಸ್ತವಾದ ಈ ವಂಶಚರಿತೆಯನ್ನು ಆಲಿಸುತ್ತಾನೋ ಆತನಿಗೆ ಅಮಿತವಾದ ಧನಧಾನ್ಯ ವೃದ್ಧಿಯಾಗುವುದು (140). ಇಕ್ಷ್ವಾಕು, ಜಹ್ನು, ಮಾಂಧಾತೃ, ಸಗರ, ಅವಿಕ್ಷಿತ, (ಮರುತ್ತ ), ರಘುವಂಶೀಯರು, ಯಯಾತಿ, ನಹುಷ—ಮೊದಲಾದ ನರೇಂದ್ರರು ಮಹಾ ಬಲಾಢ್ಯರು; ಮಹಾವೀರರು; ಅನಂತ ಧನರಾಶಿಯಿದ್ದವರು. ಇವರೆಲ್ಲರೂ ಬಲವತ್ತರನಾದ ಕಾಲನಿಗೆ ವಶರಾಗಿ ಮೃತ್ಯುವನ್ನೈಯ್ದಿದರು; ಕಥಾಶೇಷರಾದರು (141-142). ಈ ಸಂಗತಿಯನ್ನು

**ಶ್ರುತ್ವಾ ನ ಪುತ್ರದಾರಾದೌ ಗೃಹಕ್ಷೇತ್ರಾದಿಕೇ ತಥಾ।**
**ದ್ರವ್ಯಾದೌ ವಾ ಕೃತಪ್ರಜ್ಞೋ ಮಮತ್ವಂ ಕುರುತೇ ನರಃ॥** 143

**ತಪ್ತಂ ತಪೋ ಯೈಃ ಪುರುಷಪ್ರವೀರೈ-**
**ರುದ್ಬಾಹುಭಿರ್ವರ್ಷಗಣಾನನೇಕಾನ್।**
**ಇಷ್ಟ್ವಾ ಸುಯಜ್ಞೈರ್ಬಲಿನೋಽತಿವೀರ್ಯಾಃ**
**ಕೃತಾ ನು ಕಾಲೇನ ಕಥಾವಶೇಷಾಃ॥** 144

**ಪೃಥುಸ್ಸಮಸ್ತಾನ್ವಿಚಚಾರ ಲೋಕಾ-**
**ನವ್ಯಾಹತೋ ಯೋ ವಿಜಿತಾರಿಚಕ್ರಃ।**
**ಸ ಕಾಲವಾತಾಭಿಹತಃ ಪ್ರಣಷ್ಟಃ**
**ಕ್ಷಿಪ್ತಂ ಯಥಾ ಶಾಲ್ಮಲಿತೂಲಮಗ್ನೌ॥** 145

**ಯಃ ಕಾರ್ತವೀರ್ಯೋ ಬುಭುಜೇ ಸಮಸ್ತಾನ್**
**ದ್ವೀಪಾನ್ಸಮಾಕ್ರಮ್ಯ ಹತಾರಿಚಕ್ರಃ।**
**ಕಥಾಪ್ರಸಂಗೇಷ್ವಭಿಧೀಯಮಾನ-**
**ಸ್ಸ ಏವ ಸಂಕಲ್ಪವಿಕಲ್ಪಹೇತುಃ॥** 146

---

ಕೇಳಿ ತಿಳಿದ ಮೇಲೆ ವಿವೇಕಿಯಾದ ಯಾವ ಮನುಷ್ಯನೂ ಹೆಂಡತಿ ಮಕ್ಕಳಲ್ಲಾಗಲಿ ಮನೆ ಹೊಲಗದ್ದೆಗಳಲ್ಲಾಗಲಿ ಧನಾದಿಗಳಲ್ಲಾಗಲಿ ಮಮತ್ವ ವನ್ನಿಡುವುದಿಲ್ಲ (143). ಯಾವ ಪುರುಷಶ್ರೇಷ್ಠರು ಅನೇಕ ವರ್ಷಗಳವರೆಗೆ ಕೈಗಳನ್ನೆತ್ತಿ ಹಿಡಿದು ಕಠೋರವಾದ ತಪಶ್ಚರ್ಯೆಯಲ್ಲಿ ತೊಡಗಿದ್ದರೋ ನಾನಾ ಯಜ್ಞಗಳನ್ನಾಚರಿಸಿ ಬಲಾಢ್ಯರೆಂದೂ ಅತ್ಯಂತ ವೀರರೆಂದೂ ವಿಖ್ಯಾತ ರಾದರೋ ಅವರೆಲ್ಲರನ್ನೂ ಕಾಲವು ಕಥಾಶೇಷರನ್ನಾಗಿ ಮಾಡಿಬಿಟ್ಟಿತು! (144). ಶತ್ರು ಸೇನೆಗಳನ್ನು ಸದೆಬಡಿದು ಅಡೆತಡೆಯಿಲ್ಲದೆ ಯಾವ ಪೃಥುರಾಜನು ಲೋಕಗಳಲ್ಲಿ ಸುತ್ತಾಡಿದನೋ ಆತನನ್ನು ಕಾಲವೆಂಬ ಝುಂಝಾವಾತವು ಬಡಿದು ನಾಶಮಾಡಿತು. ಬೆಂಕಿಯಲ್ಲಿ ಬಿದ್ದ ಬೂರುಗದ ಹತ್ತಿಯಂತೆ ಅವನು ಭಸ್ಮವಾದನು (145). ವೈರಿಗಳನ್ನು ವಿಧ್ವಂಸಗೊಳಿಸಿ ಯಾವ ಕಾರ್ತವೀರ್ಯನು ಸಮಸ್ತ ದ್ವೀಪಗಳನ್ನೂ ಆಳಿದನೋ ಅವನನ್ನೇ ಈಗ ಕಥಾಪ್ರಸಂಗದಲ್ಲಿ ಹೇಳಿದಾಗ ಅಂತಹವನೊಬ್ಬನು ಇದ್ದನೋ ಇಲ್ಲವೋ—ಎಂಬ ವಿಕಲ್ಪಕ್ಕೆ

**ದಶಾನನಾವಿಕ್ಷಿತರಾಘವಾಣಾ-**
**ಮೈಶ್ವರ್ಯಮುದ್ಭಾಸಿತದಿಙ್ಮುಖಾನಾಮ್ ।**
**ಭಸ್ಮಾಪಿ ಶಿಷ್ಟಂ ನ ಕಥಂ ಕ್ಷಣೇನ**
**ಭ್ರೂಭಂಗಪಾತೇನ ಧಿಗಂತಕಸ್ಯ ॥** 147

**ಕಥಾಶರೀರತ್ವಮವಾಪ ಯದ್ವೈ**
**ಮಾಂಧಾತೃನಾಮಾ ಭುವಿ ಚಕ್ರವರ್ತೀ ।**
**ಶ್ರುತ್ವಾಽಪಿ ತತ್ಕೋ ಹಿ ಕರೋತಿ ಸಾಧು-**
**ರ್ಮಮತ್ವಮಾತ್ಮನ್ಯಪಿ ಮಂದಚೇತಾಃ ॥** 148

**ಭಗೀರಥಾದ್ಯಾಸ್ಸಗರಃ ಕಕುತ್ಸ್ಥೋ**
**ದಶಾನನೋ ರಾಘವಲಕ್ಷ್ಮಣೌ ಚ ।**
**ಯುಧಿಷ್ಠಿರಾದ್ಯಾಶ್ಚ ಬಭೂವುರೇತೇ**
**ಸತ್ಯಂ ನ ಮಿಥ್ಯಾ ಕ್ವ ನು ತೇ ನ ವಿದ್ಮಃ ॥** 149

---

ಕಾರಣನಾಗಿದ್ದಾನೆ! (146). ರಾವಣ, ಮರುತ್ತ , ರಘುವಂಶೀಯ ರಾಜರು—ಇವರೆಲ್ಲರೂ ದಿಗ್‌ದಿಗಂತಗಳನ್ನು ಬೆಳಗಿದ ಮಹಾಪುರುಷರು. ಇವರ ಐಶ್ವರ್ಯದ ಬೂದಿಯೂ ಸಹ ಈಗ ಉಳಿದಿಲ್ಲ! ಹುಬ್ಬು ಹಾರಿಸುವಷ್ಟರಲ್ಲಿ ಈ ಪ್ರಕಾರ ಹೇಗೆ ಆಗಿರಬಹುದು! ಅಂತಕನ ಕೆಲಸಕ್ಕೆ ಧಿಕ್ಕಾರವಿರಲಿ! (147). ಮಾಂಧಾತೃವೆಂಬ ಚಕ್ರವರ್ತಿಯು ಈ ಲೋಕದಲ್ಲಿ ಕಥಾಶೇಷನಾದನಲ್ಲ , ಈ ವೃತ್ತಾಂತವನ್ನು ಕೇಳಿದ ಮೇಲೆ ಯಾವ ದಡ್ಡನು ತಾನೇ ತನ್ನ ಶರೀರದಲ್ಲಾದರೂ ಮಮತೆಯನ್ನಿಟ್ಟಾನು! (148). ಭಗೀರಥ ಮುಂತಾದವರು, ಸಗರ ಚಕ್ರವರ್ತಿ, ಕಕುತ್ಸ್ಥ, ದಶಕಂಠ, ಶ್ರೀರಾಮ, ಲಕ್ಷ್ಮಣ, ಯುಧಿಷ್ಠಿರ—ಮೊದಲಾದವರು ಒಂದು ಕಾಲದಲ್ಲಿ ಇದ್ದರು. ಇದು ಸತ್ಯ, ಸುಳ್ಳಲ್ಲ. ಈಗ ಅವರೆಲ್ಲಿದ್ದಾರೆಂಬುದೇ ನಮಗೆ ತಿಳಿಯದು! (149). ಹೇ ಮೈತ್ರೇಯ, ಸಾಂಪ್ರತದಲ್ಲಿ ವೀರರೆನಿಸಿಕೊಂಡ ಯಾವ ಭೂಪಾಲರಿದ್ದರೋ ಭವಿಷ್ಯದಲ್ಲಾಗುವ ಯಾರನ್ನು ನಾನು ಹೇಳಿದೆನೋ

**ಯೇ ಸಾಂಪ್ರತಂ ಯೇ ಚ ನೃಪಾ ಭವಿಷ್ಯಾಃ**
**ಪ್ರೋಕ್ತಾ ಮಯಾ ವಿಪ್ರವರೋಗ್ರವೀರ್ಯಾಃ।**
**ಏತೇ ತಥಾನ್ಯೇ ಚ ತಥಾಭಿಧೇಯಾಃ**
**ಸರ್ವೇ ಭವಿಷ್ಯಂತಿ ಯಥೈವ ಪೂರ್ವೇ॥** 150

**ಏತದ್ವಿದಿತ್ವಾ ನ ನರೇಣ ಕಾರ್ಯಂ**
**ಮಮತ್ವಮಾತ್ಮನ್ಯಪಿ ಪಂಡಿತೇನ।**
**ತಿಷ್ಠಂತು ತಾವತ್ತನಯಾತ್ಮಜಾದ್ಯಾಃ**
**ಕ್ಷೇತ್ರಾದಯೋ ಯೇ ಚ ಶರೀರಿಣೋಽನ್ಯೇ॥** 151

ಇತಿ ಶ್ರೀವಿಷ್ಣುಪುರಾಣೇ ಚತುರ್ಥಾಂಶೇ ಚತುರ್ವಿಂಶೋಽಧ್ಯಾಯಃ

**ಚತುರ್ಥಾಂಶಃ ಸಮಾಪ್ತಃ**

---

ಅವರೂ ಹಾಗೆಯೇ ರಾಜರೆನಿಸಿಕೊಳ್ಳುವ ಮುಂದಿನವರೂ ಯಾರು ಇರುವರೋ, ಅವರೆಲ್ಲರೂ ಹಿಂದಿನವರ ಗತಿಯನ್ನೇ ಪಡೆಯುವರು! (150). ಮೈತ್ರೇಯ, ಇದನ್ನು ತಿಳಿದಮೇಲೆ, ಮಗ ಮಗಳು ಹೊಲ ಇತರ ಮಾನವರು ಇವರ ವಿಷಯ ಒತ್ತಟ್ಟಿಗಿರಲಿ, ತನ್ನ ದೇಹದಲ್ಲಿಯೂ ಸಹ ಪಂಡಿತನಾದವನು ಮಮತ್ವ ಬುದ್ಧಿಯನ್ನಿಡುವುದಿಲ್ಲ (151).

ಇಲ್ಲಿಗೆ ವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿಯಿತು.

**ಚತುರ್ಥಾಂಶ ಸಂಪೂರ್ಣ**



# ಪಂಚಮಃ ಅಂಶಃ

## ಪ್ರಥಮೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ನೃಪಾಣಾಂ ಕಥಿತಸ್ಸರ್ವೋ ಭವತಾ ವಂಶವಿಸ್ತರಃ।**
**ವಂಶಾನುಚರಿತಂ ಚೈವ ಯಥಾವದನುವರ್ಣಿತಮ್॥** 1

**ಅಂಶಾವತಾರೋ ಬ್ರಹ್ಮರ್ಷೇ ಯೋಽಯಂ ಯದುಕುಲೋದ್ಭವಃ।**
**ವಿಷ್ಣೋಸ್ತಂ ವಿಸ್ತರೇಣಾಹಂ ಶ್ರೋತುಮಿಚ್ಛಾಮಿ ತತ್ತ್ವತಃ॥** 2

**ಚಕಾರ ಯಾನಿ ಕರ್ಮಾಣಿ ಭಗವಾನ್ ಪುರುಷೋತ್ತಮಃ।**
**ಅಂಶಾಂಶೇನಾವತೀರ್ಯೋರ್ವ್ಯಾಂ ತತ್ರ ತಾನಿ ಮುನೇ ವದ॥** 3

---

# ಪಂಚಮಾಂಶ

## ಅಧ್ಯಾಯ 1

ವಸುದೇವ ದೇವಕಿಯರ ವಿವಾಹ. ಭಾರಪೀಡಿತಳಾದ ಪೃಥಿವಿಯು ದೇವತೆಗಳೊಡನೆ ಹೋಗಿ ಕ್ಷೀರಸಮುದ್ರಶಾಯಿಯಾದ ಭಗವಂತನನ್ನು ಸ್ತುತಿಸುವುದು. ಭಗವಂತನಿಂದ ಅಭಯಪ್ರದಾನ. ಯೋಗಮಾಯೆಗೆ ಆದೇಶವನ್ನೀಯುವುದು.

ಮೈತ್ರೇಯರು ಹೇಳಿದರು: "ಮಹರ್ಷಿಗಳೇ, ರಾಜರುಗಳ ಎಲ್ಲ ವಂಶ ವಿಸ್ತಾರವನ್ನೂ ಅದಕ್ಕೆ ಸಂಬಂಧಿಸಿದ ವಂಶಾನುಚರಿತೆಯನ್ನೂ ಯಥಾವತ್ತಾಗಿ ಹೇಳಿದ್ದೀರಿ. ಮಹಾವಿಷ್ಣುವು ಯದುವಂಶದಲ್ಲಿ ಅಂಶಾವತಾರ ಮಾಡಿದನಷ್ಟೆ. ಆ ಅವತಾರದ ವಿಷಯವನ್ನು ವಿಸ್ತಾರವಾಗಿಯೂ ಯಥಾವತ್ತಾಗಿಯೂ ಕೇಳಬೇಕೆಂದು ನನಗೆ ಅಪೇಕ್ಷೆಯಾಗಿದೆ (1-2). ಭಗವಾನ್ ಪುರುಷೋತ್ತಮನು ತನ್ನ ಅಂಶಾಂಶದಿಂದ ಈ ಪೃಥ್ವಿಯಲ್ಲವತರಿಸಿ ಯಾವ ಯಾವ ಕಾರ್ಯಗಳನ್ನು ಮಾಡಿದನು? ಓ ಬ್ರಹ್ಮರ್ಷಿಗಳೆ, ಅವನ್ನು ನನಗೆ ಹೇಳೋಣವಾಗಬೇಕು" (3). ಆಗ ಪರಾಶರ ಮುನಿಗಳು ಹೀಗೆಂದರು: ಮೈತ್ರೇಯ, ನೀನು ಪ್ರಶ್ನೆಮಾಡಿದ

*ಶ್ರೀಪರಾಶರ ಉವಾಚ:*

**ಮೈತ್ರೇಯ ಶ್ರೂಯತಾಮೇತದ್ಯತ್ಪೃಷ್ಟೋಽಹಮಿಹ ತ್ವಯಾ।**
**ವಿಷ್ಣೋರಂಶಾಂಶಸಂಭೂತಿಚರಿತಂ ಜಗತೋ ಹಿತಮ್॥** 4

**ದೇವಕಸ್ಯ ಸುತಾಂ ಪೂರ್ವಂ ವಸುದೇವೋ ಮಹಾಮುನೇ।**
**ಉಪಯೇಮೇ ಮಹಾಭಾಗಾಂ ದೇವಕೀಂ ದೇವತೋಪಮಾಮ್॥** 5

**ಕಂಸಸ್ತಯೋರ್ವರರಥಂ ಚೋದಯಾಮಾಸ ಸಾರಥಿಃ।**
**ವಸುದೇವಸ್ಯ ದೇವಕ್ಯಾಃ ಸಂಯೋಗೇ ಭೋಜನಂದನಃ॥** 6

**ಅಥಾಂತರಿಕ್ಷೇ ವಾಗುಚ್ಚೈಃ ಕಂಸಮಾಭಾಷ್ಯ ಸಾದರಮ್।**
**ಮೇಘಗಂಭೀರನಿರ್ಘೋಷಂ ಸಮಾಭಾಷ್ಯೇದಮಬ್ರವೀತ್॥** 7

**ಯಾಮೇತಾಂ ವಹಸೇ ಮೂಢ ಸಹ ಭರ್ತ್ರಾ ರಥೇ ಸ್ಥಿತಾಮ್।**
**ಅಸ್ಯಾಸ್ತವಾಷ್ಟಮೋ ಗರ್ಭಃ ಪ್ರಾಣಾನಪಹರಿಷ್ಯತಿ॥** 8

---

ವಿಷಯವನ್ನು ಹೇಳುತ್ತೇನೆ, ಆಲಿಸು. ವಿಷ್ಣುವಿನ ಅಂಶಾಂಶಾವತಾರದ ಚರಿತೆಯು ಜಗತ್ತಿಗೆ ಕಲ್ಯಾಣಕರವಾದದ್ದು (4). ವಸುದೇವನು ದೇವಕನ* ಪುತ್ರಿಯೂ ಭಾಗ್ಯಶಾಲಿನಿಯೂ ದೇವತಾಸದೃಶಳೂ ಆದ ದೇವಕಿಯನ್ನು ಮದುವೆಯಾದನು. ಅವರೀರ್ವರಿಗೆ ಮದುವೆಯಾದಾಗ ಆ ದಂಪತಿಗಳ ಮಂಗಳಕರ ರಥವನ್ನು ಭೋಜವಂಶೀಯನಾದ ಕಂಸನು ಸ್ವತಃ ಸಾರಥಿಯಾಗಿ ನಡೆಸತೊಡಗಿದನು (5-6). ಆ ಸಮಯದಲ್ಲಿ ಒಂದು ಆಕಾಶವಾಣಿಯು ಅಂತರಿಕ್ಷದಲ್ಲಿ ಕಂಸನನ್ನು ಸುಬೋಧಿಸಿ ಮೇಘ ಗಂಭೀರ ಧ್ವನಿಯಿಂದ "ಎಲೋ ಮೂಢ, ಪತಿಯೊಡನೆ ಕುಳಿತಿರುವ ಯಾವ ಸ್ತ್ರೀಯನ್ನು ನೀನು ರಥದಲ್ಲಿ ಕರೆದೊಯ್ಯುತ್ತಿರುವೆಯೋ ಅವಳ ಎಂಟನೆಯ ಗರ್ಭವು ನಿನ್ನ ಪ್ರಾಣವನ್ನು ಸೆಳೆದೊಯ್ಯುವುದು!" (7-8). ಈ ನುಡಿಯನ್ನು ಕೇಳಿದೊಡನೆ ಬಲಾಢ್ಯನಾದ ಕಂಸನು ಖಡ್ಗವನ್ನು ಹಿರಿದು ದೇವಕಿಯನ್ನು ಸಂಹರಿಸಲು ಉದ್ಯುಕ್ತನಾದನು. ಆಗ ವಸುದೇವನು "ಹೇ ಮಹಾಭಾಗ—ಪುಣ್ಯಾತ್ಮ, ನೀನು ದೇವಕಿಯನ್ನು

---

* ಕಂಸನ ತಂದೆಯಾದ ಉಗ್ರಸೇನನ ಸೋದರನೇ ದೇವಕ. ದೇವಕಿಯು ಕಂಸನಿಗೆ ತಂಗಿಯಾಗುತ್ತಾಳೆ. (ನೋಡಿ: 4 ನೇ ಅಂಶ, 14 ನೇ ಅಧ್ಯಾಯ)

*ಶ್ರೀಪರಾಶರ ಉವಾಚ:*

**ಇತ್ಯಾಕರ್ಣ್ಯ ಸಮುತ್ಪಾಟ್ಯ ಖಡ್ಗಂ ಕಂಸೋ ಮಹಾಬಲಃ।**
**ದೇವಕೀಂ ಹಂತುಮಾರಬ್ಧೋ ವಸುದೇವೋಽಬ್ರವೀದಿದಮ್॥ 9**

**ನ ಹಂತವ್ಯಾ ಮಹಾಭಾಗ ದೇವಕೀ ಭವತಾನಘ।**
**ಸಮರ್ಪಯಿಷ್ಯೇ ಸಕಲಾನ್ಗರ್ಭಾನಸ್ಯೋದರೋದ್ಭವಾನ್॥ 10**

*ಶ್ರೀಪರಾಶರ ಉವಾಚ:*

**ತತೇತ್ಯಾಹ ತತಃ ಕಂಸೋ ವಸುದೇವಂ ದ್ವಿಜೋತ್ತಮ।**
**ನ ಘಾತಯಾಮಾಸ ಚ ತಾಂ ದೇವಕೀಂ ತಸ್ಯ ಗೌರವಾತ್॥ 11**

**ಏತಸ್ಮಿನ್ನೇವ ಕಾಲೇ ತು ಭೂರಿಭಾರಾವಪೀಡಿತಾ।**
**ಜಗಾಮ ಧರಣೀ ಮೇರೌ ಸಮಾಜಂ ತ್ರಿದಿವೌಕಸಾಮ್॥ 12**

**ಸಬ್ರಹ್ಮಕಾನ್ಸುರಾನ್ಸರ್ವಾನ್ ಪ್ರಣಿಪತ್ಯಾಥ ಮೇದಿನೀ।**
**ಕಥಯಾಮಾಸ ತತ್ಸರ್ವಂ ಖೇದಾತ್ಕರುಣಭಾಷಿಣೀ॥ 13**

*ಭೂಮಿರುವಾಚ:*

**ಅಗ್ನಿಸ್ಸುವರ್ಣಸ್ಯ ಗುರುರ್ಗವಾಂ ಸೂರ್ಯಃ ಪರೋ ಗುರುಃ।**
**ಮಮಾಪ್ಯಖಿಲಲೋಕಾನಾಂ ಗುರುರ್ನಾರಾಯಣೋ ಗುರುಃ॥ 14**

---

ಕೊಲ್ಲುವುದು ತರವಲ್ಲ. ಇವಳ ಗರ್ಭದಲ್ಲಿ ಹುಟ್ಟಿದವರೆಲ್ಲರನ್ನೂ ನಿನಗೆ ಸಮರ್ಪಿಸುವೆನು" ಎಂದನು (9-10). ಆಗ ಕಂಸನು ಹಾಗೆಯೇ ಆಗಲೆಂದು ಹೇಳಿ ವಸುದೇವನ ಮೇಲಿದ್ದ ಗೌರವ ಬುದ್ಧಿಯಿಂದ ದೇವಕಿಯನ್ನು ಸಂಹರಿಸಲಿಲ್ಲ. ಈ ಸಮಯದಲ್ಲಿ ಅತಿಭಾರದಿಂದ ಪೀಡಿತಳಾಗಿದ್ದ ಪೃಥ್ವಿಯು ಸುಮೇರು ಪರ್ವತವನ್ನೇರಿ (ಗೋರೂಪದಿಂದ) ದೇವತೆಗಳ ಸಭೆಗೆ ಹೋದಳು (11-12). ಭೂದೇವಿಯು ಬ್ರಹ್ಮಾದಿ ಸಕಲದೇವತೆಗಳಿಗೂ ನಮಸ್ಕರಿಸಿ ವಿಷಣ್ಣತೆಯಿಂದ ದೀನಸ್ವರದಲ್ಲಿ ಹೀಗೆಂದಳು: "ಸುವರ್ಣಕ್ಕೆ ಅಗ್ನಿಯೂ ಕಿರಣರಾಶಿಗಳಿಗೆ ಸೂರ್ಯನೂ ಹೇಗೆ ಪರಮಗುರುವೋ ಹಾಗೆಯೇ ಸಮಸ್ತ ಲೋಕಗಳಿಗೂ ಗುರುವಾದ ಶ್ರೀಮನ್ನಾರಾಯಣನು ನನಗೆ ಗುರುವಾಗಿದ್ದಾನೆ (13-14). ಹೇ

**ಪ್ರಜಾಪತಿಪತಿರ್ಬ್ರಹ್ಮಾ ಪೂರ್ವೇಷಾಮಪಿ ಪೂರ್ವಜಃ।**
**ಕಲಾಕಾಷ್ಠಾನಿಮೇಷಾತ್ಮಾ ಕಾಲಶ್ಚಾವ್ಯಕ್ತಮೂರ್ತಿಮಾನ್॥** 15

**ತದಂಶಭೂತಸ್ಸರ್ವೇಷಾಂ ಸಮೂಹೋ ವಸ್ಸುರೋತ್ತಮಾಃ।**
**ಆದಿತ್ಯಾ ಮರುತಸ್ಸಾಧ್ಯಾ ರುದ್ರಾ ವಸ್ವಶ್ವಿವಹ್ನಯಃ॥** 16

**ಪಿತರೋ ಯೇ ಚ ಲೋಕಾನಾಂ ಸ್ರಷ್ಟಾರೋಽತ್ರಿಪುರೋಗಮಾಃ।**
**ಏತೇ ತಸ್ಯಾ ಪ್ರಮೇಯಸ್ಯ ವಿಷ್ಣೋ ರೂಪಂ ಮಹಾತ್ಮನಃ॥** 17

**ಯಕ್ಷರಾಕ್ಷಸದೈತೇಯಪಿಶಾಚೋರಗದಾನವಾಃ।**
**ಗಂಧರ್ವಾಪ್ಸರಸಶ್ಚೈವ ರೂಪಂ ವಿಷ್ಣೋರ್ಮಹಾತ್ಮನಃ॥** 18

**ಗ್ರಹರ್ಕ್ಷತಾರಕಾಚಿತ್ರಗಗನಾಗ್ನಿಜಲಾನಿಲಾಃ।**
**ಅಹಂ ಚ ವಿಷಯಾಶ್ಚೈವ ಸರ್ವಂ ವಿಷ್ಣುಮಯಂ ಜಗತ್॥** 19

---

ದೇವೋತ್ತಮರೇ, ಪ್ರಜಾಪತಿಗಳಿಗೆ ಪತಿಯೂ ಪೂರ್ವಜನೂ ಆದ ಬ್ರಹ್ಮನೂ ಕಲಾ, ಕಾಷ್ಠಾ, ನಿಮೇಷಾತ್ಮಕವೂ ಅವ್ಯಕ್ತವೂ ಆದ ಕಾಲವು ನಿಮ್ಮೆಲ್ಲರ ಸಮೂಹವೂ ಆ ನಾರಾಯಣನ ಅಂಶವೇ. ಆದಿತ್ಯರು, ಮರುತ್ತುಗಳು, ಸಾಧ್ಯರು, ರುದ್ರರು, ವಸುಗಳು, ಅಶ್ವಿನೀದೇವತೆಗಳು, ಅಗ್ನಿ, ಪಿತೃದೇವತೆಗಳು, ಜಗತ್ತಿನ ಸೃಷ್ಟಿಕರ್ತರಾದ ಅತ್ರಿ ಮೊದಲಾದ ಪ್ರಜಾಪತಿಗಳು—ಇವರೆಲ್ಲರೂ ಸಹ ಮಹಾತ್ಮನೂ ಅಪ್ರಮೇಯನೂ ಆದ ವಿಷ್ಣುವಿನ ರೂಪಗಳೇ ಸರಿ (15-17). ಹಾಗೆಯೇ ಯಕ್ಷ, ರಾಕ್ಷಸ, ದೈತ್ಯ, ಪಿಶಾಚ, ಉರಗ, ದಾನವ, ಗಂಧರ್ವರೂ ಮತ್ತು ಅಪ್ಸರೆಯರೂ ಮಹಾತ್ಮನಾದ ವಿಷ್ಣುವಿನ ಸ್ವರೂಪರೇ ಆಗಿದ್ದಾರೆ. ಗ್ರಹ, ನಕ್ಷತ್ರ, ತಾರಕೆಗಳೂ ಇವುಗಳಿಂದ ಚಿತ್ರಿತವಾದ ಗಗನವೂ ಅಗ್ನಿಜಲವಾಯುಗಳೂ ನಾನೂ (ಪೃಥಿವೀ) ಶಬ್ದಾದಿವಿಷಯಗಳೂ ಒಟ್ಟಿನಲ್ಲಿ ಈ ಸಮಸ್ತ ವಿಶ್ವವೂ ವಿಷ್ಣುಮಯವಾದದ್ದು* (18-19). ಇವೆಲ್ಲವೂ ಅನೇಕ

* 'ಅಗ್ನೇರಪತ್ಯಂ ಪ್ರಥಮಂ ಸುವರ್ಣಂ ಭೂರ್ವೈಷ್ಣವೀ ಸೂರ್ಯಸುತಾಶ್ಚಗಾವಃ' ಎಂದು ಸಂವರ್ತಸ್ಮೃತಿ ಇದೆ. ಮೇಲಿನ ಶ್ಲೋಕಗಳಲ್ಲಿ ಗುರುವೆಂದರೆ ಕಾರಣವೆಂದರ್ಥ. ಸೂರ್ಯನಿಂದ ಕಿರಣಗಳು ಹುಟ್ಟುತ್ತವೆ. ಆ ಕಿರಣಗಳು ಸೂರ್ಯನ ಅಂಶಗಳೇ. ಆದ್ದರಿಂದ ಕಿರಣಗಳು ಸೂರ್ಯನ ಸ್ವರೂಪವಾಗಿವೆ. ಅದರಂತೆ ಈ ವಿಶ್ವವು ವಿಷ್ಣುವಿನಿಂದ ಹುಟ್ಟಿ ವಿಷ್ಣುವಿನ ಅಂಶವೇ ಆಗಿದೆ.

**ತಥಾಪ್ಯನೇಕರೂಪಸ್ಯ ತಸ್ಯ ರೂಪಾಣ್ಯಹರ್ನಿಶಮ್।**
**ಬಾಧ್ಯಬಾಧಕತಾಂ ಯಾಂತಿ ಕಲ್ಲೋಲಾ ಇವ ಸಾಗರೇ॥** 20

**ತತ್ಸಾಂಪ್ರತಮಮೀ ದೈತ್ಯಾಃ ಕಾಲನೇಮಿಪುರೋಗಮಾಃ।**
**ಮರ್ತ್ಯಲೋಕಂ ಸಮಾಕ್ರಮ್ಯ ಬಾಧಂತೇಽಹರ್ನಿಶಂ ಪ್ರಜಾಃ॥** 21

**ಕಾಲನೇಮಿರ್ಹತೋ ಯೋಽಸೌ ವಿಷ್ಣುನಾ ಪ್ರಭವಿಷ್ಣುನಾ।**
**ಉಗ್ರಸೇನಸುತಃ ಕಂಸಸ್ಸಂಭೂತಸ್ಸ ಮಹಾಸುರಃ॥** 22

**ಅರಿಷ್ಟೋ ಧೇನುಕಃ ಕೇಶೀ ಪ್ರಲಂಭೋ ನರಕಸ್ತಥಾ।**
**ಸುಂದೋಽಸುರಸ್ತಥಾತ್ಯುಗ್ರೋ ಬಾಣಶ್ಚಾಪಿ ಬಲೇಸ್ಸುತಃ॥** 23

**ತಥಾನ್ಯೇ ಚ ಮಹಾವೀರ್ಯಾ ನೃಪಾಣಾಂ ಭವನೇಷು ಯೇ।**
**ಸಮುತ್ಪನ್ನಾ ದುರಾತ್ಮಾನಸ್ತಾನ್ನ ಸಂಖ್ಯಾತುಮುತ್ಸಹೇ॥** 24

---

ರೂಪನಾದ ವಿಷ್ಣುವಿನ ರೂಪಗಳೇ ಆಗಿದ್ದರೂ ಸಮುದ್ರದಲ್ಲಿರುವ ಅಲೆಗಳಂತೆ* ಸರ್ವದಾ ಬಾಧ್ಯ ಬಾಧಕಭಾವವನ್ನು ಹೊಂದಿವೆ. ಆದ್ದರಿಂದ ಈಗ ಕಾಲನೇಮಿಯೇ ಮೊದಲಾದ ದೈತ್ಯರು ಭೂಲೋಕದಲ್ಲಿ ವ್ಯಾಪಿಸಿಕೊಂಡು ಅಹರ್ನಿಶವೂ ಪ್ರಜೆಗಳನ್ನು ಪೀಡಿಸುತ್ತಿದ್ದಾರೆ (20-21). ಸಮರ್ಥನಾದ ವಿಷ್ಣುವು ಹಿಂದೆ ಕಾಲನೇಮಿಯನ್ನು ಸಂಹರಿಸಿದ್ದನಷ್ಟೆ. ಆ ಮಹಾಸುರನು ಈಗ ಉಗ್ರಸೇನನಿಗೆ ಮಗನಾಗಿ ಕಂಸನೆಂಬ ಹೆಸರಿನಿಂದ ಹುಟ್ಟಿದ್ದಾನೆ. ಅರಿಷ್ಟ, ಧೇನುಕ, ಕೇಶಿ, ಪ್ರಲಂಬ, ನರಕ, ಸುಂದ, ಬಲಿಪುತ್ರನೂ ಅತ್ಯುಗ್ರನೂ ಆದ ಬಾಣಾಸುರ—ಮೊದಲಾದ ಮಹಾವೀರರಾದ ದೈತ್ಯರು ಬೇರೆ ಬೇರೆ ಕಡೆ ರಾಜಭವನಗಳಲ್ಲಿ ಹುಟ್ಟಿದ್ದಾರೆ. ಆ ದುರಾತ್ಮರೆಲ್ಲರನ್ನೂ ಎಣಿಸಿ ಹೇಳಲು ನನಗೆ ಉತ್ಸಾಹವಿಲ್ಲ (22-24). ಓ ದಿವ್ಯಮೂರ್ತಿಧಾರಿಗಳಾದ ದೇವತೆಗಳೆ, ಮಹಾಬಲಶಾಲಿಗಳೂ ಉದ್ಧತರೂ ಆದ ಆ ದೈತ್ಯೇಶ್ವರರ ಸೇನೆಗಳೇ ನನ್ನ ಮೇಲೆ

* ಸಮುದ್ರದ ಅಲೆಗಳು ಪರಮಾರ್ಥದಲ್ಲಿ ಒಂದೇ ವಸ್ತುವಾಗಿದ್ದರೂ ಒಂದನ್ನೊಂದು ಅಪ್ಪಳಿಸುತ್ತ ವಿರೋಧವನ್ನು ಪಡೆದಿರುವಂತೆ ಜೀವರೂ ಪರಸ್ಪರ ವಿರೋಧಿಗಳಾಗಿದ್ದಾರೆ, ಎಂದು ಅಭಿಪ್ರಾಯ.

**ಅಕ್ಷೌಹಿಣ್ಯೋಽತ್ರ ಬಹುಲಾ ದಿವ್ಯಮೂರ್ತಿಧರಾಸ್ಸುರಾಃ।**
**ಮಹಾಬಲಾನಾಂ ದೃಪ್ತಾನಾಂ ದೈತ್ಯೇಂದ್ರಾಣಾಂ ಮಮೋಪರಿ॥** 25

**ತದ್ಭೂರಿಭಾರಪೀಡಾರ್ತ್ತಾ ನ ಶಕ್ನೋಮ್ಯಮರೇಶ್ವರಾಃ।**
**ಬಿಭರ್ತುಮಾತ್ಮಾನಮಹಮಿತಿ ವಿಜ್ಞಾಪಯಾಮಿ ವಃ॥** 26

**ಕ್ರಿಯತಾಂ ತನ್ಮಹಾಭಾಗಾ ಮಮ ಭಾರಾವತಾರಣಮ್।**
**ಯಥಾ ರಸಾತಲಂ ನಾಹಂ ಗಚ್ಛೇಯಮತಿವಿಹ್ವಲಾ॥** 27

**ಇತ್ಯಾಕರ್ಣ್ಯ ಧರಾವಾಕ್ಯಮಶೇಷೈಸ್ತ್ರಿದಶೇಶ್ವರೈಃ।**
**ಭುವೋ ಭಾರಾವತಾರಾರ್ಥಂ ಬ್ರಹ್ಮಾ ಪ್ರಾಹ ಪ್ರಚೋದಿತಃ॥** 28

*ಬ್ರಹ್ಮೋವಾಚ:*

**ಯಥಾಹ ವಸುಧಾ ಸರ್ವಂ ಸತ್ಯಮೇವ ದಿವೌಕಸಃ।**
**ಅಹಂ ಭವೋ ಭವಂತಶ್ಚ ಸರ್ವೇ ನಾರಾಯಣಾತ್ಮಕಾಃ॥** 29

**ವಿಭೂತಯಶ್ಚ ಯಾಸ್ತಸ್ಯ ತಾಸಾಮೇವ ಪರಸ್ಪರಮ್।**
**ಆಧಿಕ್ಯಂ ನ್ಯೂನತಾ ಬಾಧ್ಯಬಾಧಕತ್ವೇನ ವರ್ತತೇ॥** 30

---

ನಿಂತುಕೊಂಡಿವೆ. ಅವರ ಭಾರದ ಪೀಡೆಯಿಂದ ಬಳಲಿಹೋಗಿದ್ದೇನೆ. ಓ ದೇವತೆಗಳೆ, ಅವರೆಲ್ಲರನ್ನೂ ಹೊತ್ತುಕೊಂಡಿರುವುದಕ್ಕೆ ನನಗೆ ಸಾಮರ್ಥ್ಯವಿಲ್ಲ ವೆಂದು ನಿಮಗೆ ವಿಜ್ಞಾಪಿಸಿಕೊಳ್ಳುತ್ತಿದ್ದೇನೆ (25-26). ಹೇ ಮಹಾತ್ಮರೆ, ನಾನು ಹೊತ್ತಿರುವ ಭಾರವು ಇಳಿಯುವಂತೆ ಮಾಡಿರಿ. ಇಲ್ಲದಿದ್ದರೆ ಬಳಲಿಹೋಗಿರುವ ನಾನು ರಸಾತಳದವರೆಗೆ ಕುಸಿದು ಹೋದೇನು" ಎಂದಳು. ಹೀಗೆ ಹೇಳಿದ ಭೂದೇವಿಯ ಮಾತುಗಳನ್ನಾಲಿಸಿದ ದೇವತೆಗಳು ಭೂಭಾರವನ್ನಿಳಿಸುವ ವಿಷಯವಾಗಿ ಬ್ರಹ್ಮದೇವನನ್ನು ಪ್ರಾರ್ಥಿಸಲು ಬ್ರಹ್ಮದೇವನು ಇಂತೆಂದನು (27-28): "ದೇವತೆಗಳೆ, ಭೂದೇವಿಯು ಹೇಳುತ್ತಿರುವುದು ನಿಜ, ನಾನು, ಶಿವ, ನೀವು—ಎಲ್ಲರೂ ವಾಸ್ತವದಲ್ಲಿ ನಾರಾಯಣಾತ್ಮಕರೇ ಸರಿ. ಶ್ರೀಮನ್ ನಾರಾಯಣನ ಯಾವ ವಿಭೂತಿಗಳುಂಟೋ ಅವುಗಳಲ್ಲಿರುವ ಪರಸ್ಪರವಾದ ಅಧಿಕತೆ ನ್ಯೂನತೆಗಳು ಬಾದ್ಯಬಾಧಕಭಾವದಿಂದ ವರ್ತಿಸುತ್ತವೆ (29-30).

**ತದಾಗಚ್ಛತ ಗಚ್ಛಾಮ ಕ್ಷೀರಾಬ್ಧೇಸ್ತಟಮುತ್ತಮಮ್।**
**ತತ್ರಾರಾಧ್ಯ ಹರಿಂ ತಸ್ಮೈ ಸರ್ವಂ ವಿಜ್ಞಾಪಯಾಮ ವೈ॥ 31**

**ಸರ್ವಥೈವ ಜಗತ್ಯರ್ಥೇ ಸ ಸರ್ವಾತ್ಮಾ ಜಗನ್ಮಯಃ।**
**ಸತ್ತ್ವಾಂಶೇನಾವತೀರ್ಯೋರ್ವ್ಯಾಂ ಧರ್ಮಸ್ಯ ಕುರುತೇ ಸ್ಥಿತಿಮ್॥ 32**

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾ ಪ್ರಯಯೌ ತತ್ರ ಸಹ ದೇವೈಃ ಪಿತಾಮಹಃ।**
**ಸಮಾಹಿತಮನಾಶ್ಚೈವಂ ತುಷ್ಟಾವ ಗರುಡಧ್ವಜಮ್॥ 33**

*ಬ್ರಹ್ಮೋವಾಚ:*

**ದ್ವೇ ವಿದ್ಯೇ ತ್ವಮನಾಮ್ನಾಯ ಪರಾ ಚೈವಾಪರಾ ತಥಾ।**
**ತ ಏವ ಭವತೋ ರೂಪೇ ಮೂರ್ತಾಮೂರ್ತಾತ್ಮಿಕೇ ಪ್ರಭೋ॥ 34**

**ದ್ವೇ ಬ್ರಹ್ಮಣೀ ತ್ವಣೀಯೋಽತಿಸ್ಥೂಲಾತ್ಮನ್ ಸರ್ವ ಸರ್ವವಿತ್।**
**ಶಬ್ದಬ್ರಹ್ಮಪರಂ ಚೈವ ಬ್ರಹ್ಮ ಬ್ರಹ್ಮಮಯಸ್ಯ ಯತ್॥ 35**

---

ಆದ್ದರಿಂದ, ನೀವೆಲ್ಲರೂ ಬನ್ನಿರಿ. ಕ್ಷೀರಸಾಗರದ ತೀರಕ್ಕೆ ಹೋಗೋಣ. ಅಲ್ಲಿ ಶ್ರೀಹರಿಯನ್ನು ಆರಾಧಿಸಿ ಎಲ್ಲವನ್ನೂ ವಿಜ್ಞಾಪಿಸಿಕೊಳ್ಳೋಣ. ಜಗನ್ಮಯನಾದ ಆ ವಿಶ್ವಾತ್ಮನು ತನ್ನ ಸತ್ತ್ವಾಂಶದಿಂದ ಜಗತ್ತಿನ ಹಿತಕ್ಕಾಗಿ ಭೂಮಿಯಲ್ಲವತರಿಸಿ ನಿಶ್ಚಯವಾಗಿ ಧರ್ಮದ ರಕ್ಷಣೆಯನ್ನು ಮಾಡುವನು" ಎಂದನು (31-32). ಹೀಗೆ ನುಡಿದು ಪಿತಾಮಹನು ದೇವತೆಗಳಿಂದೊಡಗೂಡಿ ಕ್ಷೀರಸಾಗರದ ತೀರಕ್ಕೆ ಹೋಗಿ ಏಕಾಗ್ರಚಿತ್ತದಿಂದ ಗರುಡಧ್ವಜನನ್ನು ಈ ರೀತಿ ಸ್ತುತಿಸಿದನು (33): "ಆಮ್ನಾಯಗಳಿಗೂ (ವೇದಗಳಿಗೂ) ಅಗೋಚರನಾದ ಹೇ ಸ್ವಾಮಿ, ಪರಾ ಅಪರಾ ಎಂಬ ಎರಡು ವಿದ್ಯೆಗಳೂ ನೀನೇ ಆಗಿದ್ದೀಯೇ. ಅವೇ ಮೂರ್ತ, ಅಮೂರ್ತಗಳಾದ ನಿನ್ನ ಎರಡು ರೂಪಗಳು* (34). ಹೇ ಅತಿ ಸೂಕ್ಷ್ಮನೆ,

---

* ಜ್ಞಾಪಕವಾದ ಋಗ್ವೇದಾದಿ ಶಬ್ದಬ್ರಹ್ಮವು ಅಪರಾವಿದ್ಯೆ. ಜ್ಞಾಪ್ಯವಾದ ಪರಬ್ರಹ್ಮವು ಪರಾವಿದ್ಯೆ. ಶಬ್ದಬ್ರಹ್ಮವು ಮೂರ್ತ. ಪರಬ್ರಹ್ಮವು ಅಮೂರ್ತ. 'ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವಾಮೂರ್ತಂ ಚ' (ಬೃ. ಹ. 10-3-1)

**ಋಗ್ವೇದಸ್ತ್ವಂ ಯಜುರ್ವೇದಸ್ಸಾಮವೇದಸ್ತ್ವಥರ್ವಣಃ।**
**ಶಿಕ್ಷಾ ಕಲ್ಪೋ ನಿರುಕ್ತಂ ಚ ಛಂದೋ ಜ್ಯೌತಿಷಮೇವ ಚ॥ 36**

**ಇತಿಹಾಸಪುರಾಣೇ ಚ ತಥಾ ವ್ಯಾಕರಣಂ ಪ್ರಭೋ।**
**ಮೀಮಾಂಸಾ ನ್ಯಾಯಶಾಸ್ತ್ರಂ ಚ ಧರ್ಮಶಾಸ್ತ್ರಾಣ್ಯಧೋಕ್ಷಜ॥ 37**

**ಆತ್ಮಾತ್ಮದೇಹಗುಣವದ್ವಿಚಾರಾಚಾರಿ ಯದ್ವಚಃ।**
**ತದಪ್ಯಾದ್ಯಪತೇ ನಾನ್ಯದಧ್ಯಾತ್ಮಾತ್ಮಸ್ವರೂಪವತ್॥ 38**

**ತ್ವಮವ್ಯಕ್ತಮನಿರ್ದೇಶ್ಯಮಚಿಂತ್ಯಾನಾಮವರ್ಣವತ್।**
**ಅಪಾಣಿಪಾದರೂಪಂ ಚ ಶುದ್ಧಂ ನಿತ್ಯಂ ಪರಾತ್ಪರಮ್॥ 39**

**ಶೃಣೋಷ್ಯಕರ್ಣಃ ಪರಿಪಶ್ಯಸಿ ತ್ವ-**
**ಮಚಕ್ಷುರೇಕೋ ಬಹುರೂಪರೂಪಃ।**

---

ಹೇ (ವಿರಾಡ್ರೂಪನಾದ) ಅತಿಸ್ಥೂಲನೆ, ಸರ್ವ, ಸರ್ವಜ್ಞ, ಶಬ್ದಬ್ರಹ್ಮ ಮತ್ತು ಪರಬ್ರಹ್ಮ—ಇವೆರಡೂ ಬ್ರಹ್ಮಮಯನಾದ ನಿನ್ನ ಸ್ವರೂಪಗಳು. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಶಿಕ್ಷಾ, ಕಲ್ಪ, ನಿರುಕ್ತ, ಛಂದಸ್ಸು, ಜ್ಯೌತಿಷ—ಇವುಗಳೆಲ್ಲ ನೀನೇ ಆಗಿದ್ದೀಯೆ (35-36). ಓ ಪ್ರಭುವೆ, ಇತಿಹಾಸ ಪುರಾಣ ವ್ಯಾಕರಣ ಮೀಮಾಂಸಾ ನ್ಯಾಯಶಾಸ್ತ್ರ ಧರ್ಮಶಾಸ್ತ್ರ—ಇವುಗಳೆಲ್ಲ ನಿನ್ನ ಸ್ವರೂಪಗಳೇ. ಅಲ್ಲದೆ ಹೇ ಆದ್ಯಪತಿಯೆ (ಆದ್ಯನಾದ ಹಿರಣ್ಯ ಗರ್ಭನಿಗೆ ಪತಿಯೆ), ಜೀವಾತ್ಮ-ಪರಮಾತ್ಮ-ಸ್ಥೂಲಸೂಕ್ಷ್ಮಶರೀರಗಳು—(ಶರೀರ ಕಾರಣವಾದ) ಅವ್ಯಕ್ತ—ಇವುಗಳನ್ನು ವಿಚಾರ ಮಾಡತಕ್ಕ ಯಾವ (ಉಪನಿಷತ್ತಿನ) ವಾಕ್ಯ ಉಂಟೋ ಮತ್ತು (ತ್ವಂಪದಲಕ್ಷ್ಯವಾದ) ಅಧ್ಯಾತ್ಮ ಸ್ವರೂಪವನ್ನು (ತತ್‌ಪದ ಲಕ್ಷ್ಯವಾದ) ಆತ್ಮ ಸ್ವರೂಪವನ್ನು ತಿಳಿಸುವ (ಉಪನಿಷತ್ತಿನ) ವಾಕ್ಯ ಉಂಟೋ ಆ ಉಪನಿಷತ್ತು ಸಹ ನೀನೇ ಆಗಿದ್ದೀಯೆ (37-38). ನೀನು ಅವ್ಯಕ್ತನೂ ಅನಿರ್ವಾಚ್ಯನೂ ಅಚಿಂತ್ಯನೂ ನಾಮವರ್ಣ ರಹಿತನೂ ಪಾಣಿಪಾದರೂಪರಹಿತನೂ ಶುದ್ಧನೂ ನಿತ್ಯನೂ ಪರಾತ್ಪರನೂ ಆಗಿದ್ದೀಯೆ. ನೀನು ಕಿವಿಯಿಲ್ಲದೆ ಕೇಳಬಲ್ಲೆ. ಕಣ್ಣಿಲ್ಲದೆ ನೋಡಬಲ್ಲೆ. ಒಂಟಿ ಯಾದರೂ ಬಹುರೂಪಧಾರಿ. ಪಾದವಿಲ್ಲದಿದ್ದರೂ ವೇಗದಿಂದ ಗಮನ

ಅಪಾದಹಸ್ತೋ ಜವನೋ ಗೃಹೀತಾ
ತ್ವಂ ವೇತ್ಸಿ ಸರ್ವಂ ನ ಚ ಸರ್ವವೇದ್ಯಃ॥ 40
ಅಣೋರಣೀಯಾಂಸಮಸತ್ಸ್ವರೂಪಂ
ತ್ವಾಂ ಪಶ್ಯತೋಽಜ್ಞಾನನಿವೃತ್ತಿರಗ್ರ್ಯಾ।
ಧೀರಸ್ಯ ಧೀರಸ್ಯ ಬಿಭರ್ತಿ ನಾನ್ಯ-
ದ್ವರೇಣ್ಯರೂಪಾತ್ಪರತಃ ಪರಾತ್ಮನ್॥ 41
ತ್ವಂ ವಿಶ್ವನಾಭಿರ್ಭುವನಸ್ಯ ಗೋಪ್ತಾ
ಸರ್ವಾಣಿ ಭೂತಾನಿ ತವಾಂತರಾಣಿ।
ಯದ್ಭೂತಭವ್ಯಂ ಯದಣೋರಣೀಯಃ
ಪುಮಾಂಸ್ತ್ವಮೇಕಃ ಪ್ರಕೃತೇಃ ಪರಸ್ತಾತ್॥ 42
ಏಕಶ್ಚತುರ್ಧಾ ಭಗವಾನ್ ಹುತಾಶೋ
ವರ್ಚೋವಿಭೂತಿಂ ಜಗತೋ ದದಾಸಿ।
ತ್ವಂ ವಿಶ್ವತಶ್ಚಕ್ಷುರನಂತಮೂರ್ತೇ
ತ್ರೇಧಾ ಪದಂ ತ್ವಂ ನಿದಧಾಸಿ ಧಾತಃ॥ 43

---

ಮಾಡುತ್ತೀಯೆ. ಕೈಯಿಲ್ಲದಿದ್ದರೂ ವಸ್ತುಗಳನ್ನು ಹಿಡಿಯುತ್ತೀಯೆ. ಸರ್ವವನ್ನೂ ನೀನು ತಿಳಿದಿದ್ದೀಯೆ. ಆದರೆ ಸರ್ವರಿಗೂ ಗೋಚರನಾಗದೆ ಇದ್ದೀಯೆ (39-40). ಅಣುವಿಗಿಂತ ಅಣೀಯನಾಗಿ ಅತ್ಯಂತಸೂಕ್ಷ್ಮನೂ (ಅವ್ಯಾಕೃತನಾಮ ರೂಪನಾದ್ದರಿಂದ) ಅಸತ್‌ಸ್ವರೂಪನೂ ಆದ ನಿನ್ನನ್ನು ತಿಳಿದವನಿಗೆ ಅಜ್ಞಾನವು ಆತ್ಯಂತಿಕವಾಗಿ ನಿವೃತ್ತವಾಗುವುದು. ಹೇ ಪರಮಾತ್ಮ, ಜ್ಞಾನಿಯಾದ ಆ ಧೀರನ ಜ್ಞಾನವು ಪರಮಾನಂದ ಮೂರ್ತಿಯಾದ ನಿನಗಿಂತ ಇನ್ನೊಂದು ಧ್ಯಾನಿಸುವುದೇ ಇಲ್ಲ (41). ನೀನು ಈ ವಿಶ್ವದ ಕೇಂದ್ರವೂ ವಿಶ್ವದ ರಕ್ಷಕನೂ ಆಗಿದ್ದೀಯೆ. ಸಕಲ ಭೂತಗಳೂ ನಿನ್ನೊಳಗೆ ನಿಂತಿವೆ. ಯಾವ ಯಾವುದು ಭೂತವೋ ಭವಿಷ್ಯತ್ತೋ ಅಣುವಿಗಿಂತ ಅಣೀಯವೋ ಅದೆಲ್ಲವೂ ನಿನ್ನಿಂದಲೇ ಕಾಣಿಸಿಕೊಂಡಿವೆ. ಆದರೂ ನೀನು ಪ್ರಕೃತಿಗಿಂತ ಆಚೆಗಿರುವ ಅದ್ವಿತೀಯನಾದ ಪರಮಪುರುಷ ನಾಗಿದ್ದೀಯೆ (42). ಓ ಅನಂತ ಮೂರ್ತಿಯೆ, ನೀನೊಬ್ಬನೇ ನಾಲ್ಕು ಬಗೆಯ ಭಗವಾನ್ ಅಗ್ನಿಯಾಗಿ ಜಗತ್ತಿಗೆ ತೇಜಸ್ಸನ್ನೂ ವಿಭೂತಿಯನ್ನೂ ಅನುಗ್ರಹಿಸು

**ಯಥಾಗ್ನಿರೇಕೋ ಬಹುಧಾ ಸಮಿಧ್ಯತೇ**
**ವಿಕಾರಭೇದೈರವಿಕಾರರೂಪಃ।**
**ತಥಾ ಭವಾನ್ಸರ್ವಗತೈಕರೂಪೀ**
**ರೂಪಾಣ್ಯಶೇಷಾಣ್ಯನುಪುಷ್ಯತೀಶ॥ 44**

**ಏಕಂ ತ್ವಮಗ್ರ್ಯಂ ಪರಮಂ ಪದಂ ಯ-**
**ತ್ಪಶ್ಯಂತಿ ತ್ವಾಂ ಸೂರಯೋ ಜ್ಞಾನದೃಶ್ಯಮ್।**
**ತ್ವತ್ತೋ ನಾನ್ಯತ್ಕಿಂಚಿದಸ್ತಿ ಸ್ವರೂಪಂ**
**ಯದ್ವಾ ಭೂತಂ ಯಚ್ಚ ಭವ್ಯಂ ಪರಾತ್ಮನ್॥ 45**

**ವ್ಯಕ್ತಾವ್ಯಕ್ತಸ್ವರೂಪಸ್ತ್ವಂ ಸಮಷ್ಟಿವ್ಯಷ್ಟಿರೂಪವಾನ್।**
**ಸರ್ವಜ್ಞಸ್ಸರ್ವವಿತ್ಸರ್ವಶಕ್ತಿಜ್ಞಾನಬಲರ್ದ್ಧಿಮಾನ್॥ 46**

---

ತ್ತೀಯೆ. ಹೇ ಧಾತ, ಸರ್ವತೋನೇತ್ರನಾದ ನೀನು ಮೂರು ಪ್ರಕಾರವಾಗಿ ಪಾದಗಳನ್ನಿಟ್ಟಿದ್ದೀಯೆ* (43). ಹೇ ಈಶ್ವರ, ಒಂದೇ ಅಗ್ನಿಯು ಸ್ವಯಂ ಯಾವ ವಿಕಾರವನ್ನು ಪಡೆಯದಿದ್ದರೂ (ಉಪಾಧಿಭೇದಗಳಿಂದ) ನಾನಾ ಆಕೃತಿಗಳನ್ನು ಧರಿಸಿ ಪ್ರಕಾಶಿಸುವುದೋ ಹಾಗೆ ಸರ್ವಗತನೂ ಏಕ ರೂಪನೂ ಆದ ನೀನು ಸಕಲರೂಪಗಳನ್ನು ಧರಿಸಿ ಪೋಷಿಸುತ್ತಿದ್ದೀಯೆ (44). ಹೇ ಪರಮಾತ್ಮನೆ, ನೀನು ಏಕಮಾತ್ರವೂ ಶ್ರೇಷ್ಠವೂ ಆದ ಪರಮಪದವಾಗಿದ್ದೀಯೆ. ಜ್ಞಾನದೃಷ್ಟಿಗೆ ಮಾತ್ರ ಗೋಚರನಾದ ನಿನ್ನನ್ನು ಜ್ಞಾನಿಗಳು ಕಾಣುತ್ತಾರೆ. ಭೂತವಾಗಲಿ ಭವಿಷ್ಯತ್ತಾಗಲಿ ನಿನಗಿಂತ ಅತಿರಿಕ್ತವಾದ ಇನ್ನೊಂದು ವಸ್ತುವೇ ಇಲ್ಲ (45). ನೀನು ವ್ಯಕ್ತನೂ ಅವ್ಯಕ್ತನೂ ಸಮಷ್ಟಿಯೂ ವ್ಯಷ್ಟಿಯೂ ಆಗಿದ್ದೀಯೆ. ಸರ್ವಜ್ಞನೂ ಸರ್ವವಿದನೂ ಆಗಿದ್ದೀಯೆ. ಸರ್ವಶಕ್ತನೇ ನೀನು. ಜ್ಞಾನ, ಬಲ, ಐಶ್ವರ್ಯಗಳಿಂದ ಯುಕ್ತ

---

* ನಾಲ್ಕು ಬಗೆಯ ಅಗ್ನಿ:—ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವನೀಯ ಮತ್ತು ಔಪಾಸನಾಗ್ನಿ ಅಥವಾ ದೃಶ್ಯವಾದ ಅಗ್ನಿ, ಜಾಠರ, ವೈದ್ಯುತ, ವಾಡವ ಅಥವಾ ಬಾಹ್ಯಾಗ್ನಿ, ವೈದ್ಯುತ, ಸೌರ ಮತ್ತು ಜಾಠರ. ಮೂರು ಪ್ರಕಾರದಲ್ಲಿ ಪಾದಗಳನ್ನಿಟ್ಟಿರುವುದು ತ್ರಿವಿಕ್ರಮಾವತಾರದಲ್ಲಿ. 'ತ್ರೇಧಾ ವಿಷ್ಣುರುರುಗಾಯೋ ವಿಚಕ್ರಮೇ'. ಭೂರ್ಭುವಸ್ಸುವ ರ್ಲೋಕಗಳನ್ನು ಆಕ್ರಮಿಸಿ ಸದಾ ಇರುವುದರಿಂದಲೂ ತ್ರಿವಿಕ್ರಮ.

ಅನ್ಯೂನಶ್ಚಾಪ್ಯವೃದ್ಧಿಶ್ಚ ಸ್ವಾಧೀನೋ ನಾದಿಮಾನ್ವಶೀ।
ಕ್ಲಮತಂದ್ರಾಭಯಕ್ರೋಧಕಾಮಾದಿಭಿರಸಂಯುತಃ॥ 47

ನಿರವದ್ಯಃ ಪರಃ ಪ್ರಾಪ್ತೇರ್ನಿರಧಿಷ್ಠೋಽಕ್ಷರಃ ಕ್ರಮಃ।
ಸರ್ವೇಶ್ವರಃ ಪರಾಧಾರೋ ಧಾಮ್ನಾಂ ಧಾಮಾತ್ಮಕೋಽಕ್ಷಯಃ॥ 48

ಸಕಲಾವರಣಾತೀತ ನಿರಾಲಂಬನಭಾವನ।
ಮಹಾವಿಭೂತಿಸಂಸ್ಥಾನ ನಮಸ್ತೇ ಪುರುಷೋತ್ತಮ॥ 49

ನಾಕಾರಣಾತ್ಕಾರಣಾದ್ವಾ ಕಾರಣಾಕಾರಣಾನ್ನ ಚ।
ಶರೀರಗ್ರಹಣಂ ವಾಪಿ ಧರ್ಮತ್ರಾಣಾಯ ಕೇವಲಮ್॥ 50

---

ನಾಗಿದ್ದೀಯೆ* (46). ನೀನು ಹ್ರಾಸವೃದ್ಧಿಗಳಿಲ್ಲದವನೂ ಸ್ವತಂತ್ರನೂ ಜನ್ಮ ರಹಿತನೂ ಸರ್ವವನ್ನು ವಶಪಡಿಸಿಕೊಂಡವನೂ ಆಗಿದ್ದೀಯೆ. ಶ್ರಮ, ಆಲಸ್ಯ, ಭಯ, ಕ್ರೋಧ, ಕಾಮಾದಿ ದೋಷಗಳಾವುವೂ ನಿನ್ನಲ್ಲಿಲ್ಲ (47). ನಿರ್ಮಲನೂ ಅಪ್ರಾಪ್ಯನೂ ನಿರಾಧಾರನೂ ಅಪ್ರತಿಹತಗತಿಯುಳ್ಳವನೂ ಆಗಿದ್ದೀಯೆ. ಸರ್ವೇಶ್ವರನೂ ಬ್ರಹ್ಮಾದಿಗಳಿಗೆ ಆಶ್ರಯನೂ ಸೂರ್ಯಾದಿ ತೇಜಸ್ಸುಗಳಿಗೆ ತೇಜಸ್ಸನ್ನೀಯ ತಕ್ಕವನೂ ಅವಿನಾಶಿಯೂ ಆಗಿದ್ದೀಯೆ (48). ಹೇ ಪುರುಷೋತ್ತಮ, (ಅನ್ನಮಯಾದಿಕೋಶಗಳೆಂಬ) ಆವರಣಗಳಿಲ್ಲದವನೆ, ನಿರ್ವಿಷಯವಾದ ಚಿತ್ತಕ್ಕೆ ಗಮ್ಯನೆ, ಮಹಾವಿಭೂತಿಯಾದ ವಿಶ್ವಸ್ವರೂಪನೆ, ನಿನಗೆ ನಮಸ್ಕಾರ! (49). ನೀನು ಶರೀರ ಗ್ರಹಣ ಮಾಡುವುದು ಅಕಾರಣದಿಂದಲೂ ಅಲ್ಲ, ಕಾರಣದಿಂದಲೂ ಅಲ್ಲ, ಕಾರಣಾಕಾರಣಗಳಿಂದಲೂ ಅಲ್ಲ.§ ಕೇವಲ ಧರ್ಮ ರಕ್ಷಣೆಗಾಗಿ ನೀನು ಶರೀರವನ್ನು ಧರಿಸಿ ಅವತರಿಸುತ್ತೀಯೆ" ಎಂದು ಬ್ರಹ್ಮನು

---

* ವ್ಯಕ್ತ = ಮಹತ್ತತ್ತ್ವ ಮೊದಲಾದದ್ದು. ಅವ್ಯಕ್ತ = ಪ್ರಧಾನ (ಪ್ರಕೃತಿ). ಸಮಷ್ಟಿ = ವ್ಯಾಪಿಯಾದ ವಿರಾಟ್. ವ್ಯಷ್ಟಿ = ವಿರಾಟನ ಒಳಗಿರುವ ಪಂಚಭೂತಾದಿಗಳು. ಸರ್ವಜ್ಞ = ಸರ್ವ ಸಾಮಾನ್ಯವನ್ನು ಬಲ್ಲವನು. ಸರ್ವವಿತ್ = ಸರ್ವವಿಶೇಷಗಳನ್ನು ಬಲ್ಲವನು.

§ ಕಸ್ಯ = ಸುಖಸ್ಯ, ಅರಣಂ = ಪ್ರಾಪಣಂ ಯಸ್ಮಾತ್ ತತ್ ಕಾರಣಂ = ಧರ್ಮ, ಅಕಾರಣಂ = ಅಧರ್ಮ, ಕಾರಣಾಕಾರಣಂ = ಧರ್ಮಾಧರ್ಮಗಳ ಮಿಶ್ರಣ. ದೇವತೆಗಳಂತೆ ಸುಖಾನುಭವಕ್ಕೂ ಅಲ್ಲ, ಪಶುಗಳಂತೆ ದುಃಖಾನುಭವಕ್ಕಾಗಿಯೂ ಅಲ್ಲ, ಮನುಷ್ಯರಂತೆ ಸುಖದುಃಖಗಳ ಅನುಭವಕ್ಕಾಗಿಯೂ ಅಲ್ಲ—ಎಂದು ತಾತ್ಪರ್ಯ.

*ಶ್ರೀಪರಾಶರ ಉವಾಚ:*

**ಇತ್ಯೇವಂ ಸಂಸ್ತವಂ ಶ್ರುತ್ವಾ ಮನಸಾ ಭಗವಾನಜಃ।**
**ಬ್ರಹ್ಮಾಣಮಾಹ ಪ್ರೀತೇನ ವಿಶ್ವರೂಪಂ ಪ್ರಕಾಶಯನ್॥** 51

*ಶ್ರೀಭಗವಾನುವಾಚ:*

**ಭೋ ಭೋ ಬ್ರಹ್ಮಂಸ್ತ್ವಯಾ ಮತ್ತಸ್ಸಹ ದೇವೈರ್ಯದಿಷ್ಯತೇ।**
**ತದುಚ್ಯತಾಮಶೇಷಂ ಚ ಸಿದ್ಧಮೇವಾವಧಾರ್ಯತಾಮ್॥** 52

*ಶ್ರೀಪರಾಶರ ಉವಾಚ:*

**ತತೋ ಬ್ರಹ್ಮಾ ಹರೇರ್ದಿವ್ಯಂ ವಿಶ್ವರೂಪಮವೇಕ್ಷ್ಯ ತತ್।**
**ತುಷ್ಟಾವ ಭೂಯೋ ದೇವೇಷು ಸಾಧ್ವಸಾವನತಾತ್ಮಸು॥** 53

*ಬ್ರಹ್ಮೋವಾಚ:*

**ನಮೋ ನಮೋಽಸ್ತೇಽಸ್ತು ಸಹಸ್ರಕೃತ್ವಃ**
**ಸಹಸ್ರಬಾಹೋ ಬಹುವಕ್ತ್ರಪಾದ।**
**ನಮೋ ನಮಸ್ತೇ ಜಗತಃ ಪ್ರವೃತ್ತಿ-**
**ವಿನಾಶಸಂಸ್ಥಾನಕರಾಪ್ರಮೇಯ॥** 54

---

ಸ್ತುತಿಸಿದನು (50). ಮೈತ್ರೇಯ, ಆಗ ಜನ್ಮರಹಿತನಾದ ಭಗವಂತನು ಬ್ರಹ್ಮನ ಸ್ತುತಿಯನ್ನು ಕೇಳಿ ಸಂಪ್ರೀತನಾಗಿ ವಿಶ್ವರೂಪದಿಂದ ದರ್ಶನವನ್ನಿತ್ತು "ಭೋ ಬ್ರಹ್ಮದೇವ, ಈ ದೇವತೆಗಳೊಡನೆ ಬಂದು ನನ್ನಿಂದ ನೀನು ಬಯಸುವುದೇನನ್ನು? ಎಲ್ಲವನ್ನೂ ತಿಳಿಸು. ಅದು ನೆರವೇರಿತೆಂದೇ ತಿಳಿ" ಎಂದನು (51-52). ಶ್ರೀ ಹರಿಯ ದಿವ್ಯವಾದ ಆ ವಿಶ್ವರೂಪವನ್ನು ನೋಡಿ ದೇವತೆಗಳು ಭಯದಿಂದ ತತ್ತರಿಸಿ ಅಡ್ಡಬೀಳುತ್ತಿರಲಾಗಿ ಬ್ರಹ್ಮದೇವನು ಮತ್ತೆ ಈ ಪ್ರಕಾರ ಸ್ತುತಿಸಲಾರಂಭಿಸಿದನು (53): "ನಮೋನಮಃ ಓ ಸಹಸ್ರಬಾಹುವೆ, ನಿನಗೆ ಸಾವಿರ ಬಾರಿ ನಮಸ್ಕಾರಗಳು. ಅಸಂಖ್ಯಾತವಾದ ಮುಖಪಾದಗಳುಳ್ಳವನೆ, ನಿನಗೆ ನಮೋನಮಃ. ಹೇ ಅಪ್ರಮೇಯ, ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕರ್ತ ನೀನು (54). ಹೇ ಭಗವನ್, ಸೂಕ್ಷ್ಮವಸ್ತುಗಳಿಗಿಂತ ಅತಿ ಸೂಕ್ಷ್ಮ ನೀನು.

**ಸೂಕ್ಷ್ಮಾತಿಸೂಕ್ಷ್ಮಾತಿಬೃಹತ್ಪ್ರಮಾಣ**
**ಗರೀಯಸಾಮಪ್ಯತಿಗೌರವಾತ್ಮನ್ ।**
**ಪ್ರಧಾನಬುದ್ಧೀಂದ್ರಿಯವತ್ಪ್ರಧಾನ-**
**ಮೂಲಾತ್ಪರಾತ್ಮನ್ ಭಗವನ್ ಪ್ರಸೀದ ॥** 55

**ಏಷಾ ಮಹೀ ದೇವ ಮಹೀಪ್ರಸೂತ್ಯೈ-**
**ರ್ಮಹಾಸುರೈಃ ಪೀಡಿತಶೈಲಬಂಧಾ ।**
**ಪರಾಯಣಂ ತ್ವಾಂ ಜಗತಾಮುಪೈತಿ**
**ಭಾರಾವತಾರಾರ್ಥಮಪಾರಸಾರ ॥** 56

**ಏತೇ ವಯಂ ವೃತ್ರರಿಪುಸ್ತಥಾಯಂ**
**ನಾಸತ್ಯದಸ್ರೌ ವರುಣಸ್ತಥೈವ ।**
**ಇಮೇ ಚ ರುದ್ರಾ ವಸವಸ್ಸಸೂರ್ಯಾ-**
**ಸ್ಸಮೀರಣಾಗ್ನಿಪ್ರಮುಖಾಸ್ತಥಾನ್ಯೇ ॥** 57

---

ಬೃಹದಾಕಾರಗಳಿಗಿಂತ ಅತಿ ಬೃಹದಾಕಾರವುಳ್ಳವನು ನೀನು. ಮೂಲಪ್ರಕೃತಿ, ಮಹತ್ತತ್ತ್ವ, ಇಂದ್ರಿಯವತ್ತಾದ ಅಹಂಕಾರ—ಇವುಗಳಿಗೆ ಮೂಲಕಾರಣನಾದ ಯಾವ ಪ್ರಧಾನ ಪುರುಷ(ಹಿರಣ್ಯಗರ್ಭ)ನುಂಟೋ ಆತನಿಗಿಂತ ಶ್ರೇಷ್ಠನಾದ ಹೇ ಪರಮಾತ್ಮ, ಪ್ರಸನ್ನನಾಗು (55). ಹೇ ದೇವ, ಇವಳು ಭೂದೇವಿ. ಇವಳಲ್ಲಿಯೇ ಜನಿಸಿದ ಮಹಾದೈತ್ಯರಿಂದ ಈಕೆಯ ಪರ್ವತರೂಪವಾದ ಮೂಲಬಂಧವು ಶಿಥಿಲವಾಗಿ ಹೋಯಿತು. ಓ ಅಪಾರ ಮಹಿಮ, ಈಕೆಯು ತನ್ನ ಭಾರವನ್ನಿಳಿಸಬೇಕೆಂದು ಜಗತ್ತಿಗೆ ಏಕೈಕ ಗತಿಯಾಗಿರುವ ನಿನಗೆ ಶರಣಾಗಿದ್ದಾಳೆ (56). ಅಂತೆಯೇ, ಇದೋ, ನಾವು ಬಂದಿದ್ದೇವೆ. ಇವನು ಇಂದ್ರ. ಇವರು ಅಶ್ವಿನೀದೇವತೆಗಳು. ಈತನು ವರುಣ. ಇವರು (ಏಕಾದಶ) ರುದ್ರರು. ಅವರು ವಸುಗಳು. ಆತನು ಸೂರ್ಯ. ಇಲ್ಲಿ ವಾಯು, ಅಗ್ನಿ ಮೊದಲಾದವರಿದ್ದಾರೆ (57). ಎಲ್ಲ ದೇವತೆಗಳೂ ಬಂದಿದ್ದಾರೆ. ಹೇ ದೇವೇಶ್ವರ, ಇವರೂ ನಾನೂ ಮಾಡಬೇಕಾದ್ದೇನೆಂಬುದನ್ನು ಆಜ್ಞಾಪಿಸು. ಹೇ ಸ್ವಾಮಿ, ನಿನ್ನ ಆಜ್ಞೆಯನ್ನು ಪಾಲಿಸುತ್ತ ಸರ್ವದಾ ದೋಷಮುಕ್ತರಾಗುವಂತೆ ಯತ್ನಿಸುತ್ತೇವೆ" ಎಂದನು

**ಸುರಾಸ್ಸಮಸ್ತಾಸ್ಸುರನಾಥ ಕಾರ್ಯ-**
**ಮೇಭಿರ್ಮಯಾ ಯಚ್ಚ ತದೀಶ ಸರ್ವಮ್।**
**ಆಜ್ಞಾಪಯಾಜ್ಞಾಂ ಪರಿಪಾಲಯಂತ-**
**ಸ್ತವೈವ ತಿಷ್ಠಾಮ ಸದಾಸ್ತದೋಷಾಃ॥ 58**

*ಶ್ರೀಪರಾಶರ ಉವಾಚ:*

**ಏವಂ ಸಂಸ್ತೂಯಮಾನಸ್ತು ಭಗವಾನ್ ಪರಮೇಶ್ವರಃ।**
**ಉಜ್ಜಹಾರಾತ್ಮನಃ ಕೇಶೌ ಸಿತಕೃಷ್ಣೌ ಮಹಾಮುನೇ॥ 59**

**ಉವಾಚ ಚ ಸುರಾನೇತೌ ಮತ್ಕೇಶೌ ವಸುಧಾತಲೇ।**
**ಅವತೀರ್ಯ ಭುವೋ ಭಾರಕ್ಲೇಶಹಾನಿಂ ಕರಿಷ್ಯತಃ॥ 60**

**ಸುರಾಶ್ಚ ಸಕಲಾಸ್ಸ್ವಾಂಶೈರವತೀರ್ಯ ಮಹೀತಲೇ।**
**ಕುರ್ವಂತು ಯುದ್ಧಮುನ್ಮತ್ತೈಃ ಪೂರ್ವೋತ್ಪನ್ನೈರ್ಮಹಾಸುರೈಃ॥ 61**

**ತತಃ ಕ್ಷಯಮಶೇಷಾಸ್ತೇ ದೈತೇಯಾ ಧರಣೀತಲೇ।**
**ಪ್ರಯಾಸ್ಯಂತಿ ನ ಸಂದೇಹೋ ಮದ್‌ದೃಕ್ಪಾತವಿಚೂರ್ಣಿತಾಃ॥ 62**

---

(58). ಮೈತ್ರೇಯ, ಹೀಗೆ ಸ್ತುತಿಸುತ್ತಿರಲಾಗಿ ಭಗವಾನ್ ಸರ್ವೇಶ್ವರನು ಬೆಳ್ಳಗಿರುವ ಒಂದು, ಕಪ್ಪಾಗಿರುವ ಇನ್ನೊಂದು—ಹೀಗೆ ತನ್ನ ಎರಡು ಕೇಶಗಳನ್ನು ಕಿತ್ತು ಹಾಕಿ ಇಂತೆಂದನು: "ನನ್ನ ಈ ಎರಡು ಕೂದಲುಗಳು ಭೂಮಿಯಲ್ಲವತರಿಸಿ ಭೂಭಾರದಿಂದುಂಟಾದ ಕಷ್ಟವನ್ನೂ ಹಾನಿಯನ್ನೂ ಪರಿಹರಿಸುತ್ತವೆ (59-60). ಎಲ್ಲ ದೇವತೆಗಳೂ ತಮ್ಮ ತಮ್ಮ ಅಂಶಗಳಿಂದ ಭೂಲೋಕದಲ್ಲವತರಿಸಿ ಉನ್ಮತ್ತರಾದ ಮಹಾದೈತ್ಯರೊಡನೆ ಯುದ್ಧವನ್ನು ನಡೆಸ ತಕ್ಕದ್ದು. ಆದರಿಂದ ಭೂಲೋಕದಲ್ಲಿರುವ ಸಕಲ ದೈತ್ಯರೂ ನಿರ್ನಾಮ ವಾಗುವರು, ಸಂದೇಹವಿಲ್ಲ. ನನ್ನ ದೃಷ್ಟಿಪಾತದಿಂದಲೇ ಅವರು ವಿಧ್ವಸ್ತರಾಗುವರು (61-62). ವಸುದೇವನಿಗೆ ದೇವತಾಸದೃಶಳಾದ ದೇವಕಿ ಯೆಂಬ ಪತ್ನಿ ಇದ್ದಾಳಷ್ಟೆ. ಎಲೈ ದೇವತೆಗಳೇ, ನನ್ನ ಈ ಕೂದಲು (ಕಪ್ಪಾದದ್ದು).

**ವಸುದೇವಸ್ಯ ಯಾ ಪತ್ನೀ ದೇವಕೀ ದೇವತೋಪಮಾ।**
**ತತ್ರಾಯಮಷ್ಟಮೋ ಗರ್ಭೋ ಮತ್ಕೇಶೋ ಭವಿತಾ ಸುರಾಃ॥** 63

**ಅವತೀರ್ಯ ಚ ತತ್ರಾಯಂ ಕಂಸಂ ಘಾತಯಿತಾ ಭುವಿ।**
**ಕಾಲನೇಮಿಂ ಸಮುದ್ಭೂತಮಿತ್ಯುಕ್ತ್ವಾಂತರ್ದಧೇ ಹರಿಃ॥** 64

**ಅದೃಶ್ಯಾಯ ತತಸ್ತಸ್ಮೈ ಪ್ರಣಿಪತ್ಯ ಮಹಾಮುನೇ।**
**ಮೇರುಪೃಷ್ಠಂ ಸುರಾ ಜಗ್ಮುರವತೇರುಶ್ಚ ಭೂತಲೇ॥** 65

**ಕಂಸಾಯ ಚಾಷ್ಟಮೋ ಗರ್ಭೋ ದೇವಕ್ಯಾ ಧರಣೀಧರಃ।**
**ಭವಿಷ್ಯತೀತ್ಯಾಚಚಕ್ಷೇ ಭಗವಾನ್ನಾರದೋ ಮುನಿಃ॥** 66

**ಕಂಸೋಽಪಿ ತದುಪಶ್ರುತ್ಯ ನಾರದಾತ್ಕುಪಿತಸ್ತತಃ।**
**ದೇವಕೀಂ ವಸುದೇವಂ ಚ ಗೃಹೇ ಗುಪ್ತಾವಧಾರಯತ್॥** 67

---

ಅವಳಲ್ಲಿ ಅಷ್ಟಮ ಗರ್ಭವಾಗಿ ಅವತರಿಸಿ ಕಂಸನನ್ನು ಸಂಹರಿಸುವುದು* ಕಾಲನೇಮಿಯೇ ಕಂಸನಾಗಿ ಹುಟ್ಟಿದ್ದಾನೆ" ಎಂದು ನುಡಿದು ಶ್ರೀಹರಿಯು ಅದೃಶ್ಯನಾದನು (63-64). ಮೈತ್ರೇಯ, ಅದೃಶ್ಯನಾದ ಭಗವಂತನಿಗೇ ಮತ್ತೆ ದೇವತೆಗಳು ಅಡ್ಡಬಿದ್ದು ನಮಸ್ಕರಿಸಿ ತಮ್ಮ ಸುಮೇರು ಪರ್ವತಕ್ಕೆ ತೆರಳಿದರು. ಅನಂತರ ತಮ್ಮ ತಮ್ಮ ಅಂಶಗಳಿಂದ ಭೂಲೋಕದಲ್ಲಿ ಅವತರಿಸಿದರು (65). ಇತ್ತ ನಾರದಮುನಿಗಳು ಕಂಸನ ಬಳಿಗೆ ತೆರಳಿ ಧರಣೀರಕ್ಷಣೆಗಾಗಿ ಮಹಾ ವಿಷ್ಣುವು ದೇವಕಿಯ ಎಂಟನೆಯ ಗರ್ಭದಲ್ಲಿ ಅವತರಿಸುವನೆಂದು ಉಸುರಿದರು! ಕಂಸನು ಆ ಮಾತನ್ನು ನಾರದರಿಂದ ಕೇಳಿದೊಡನೆ ಕುಪಿತನಾಗಿ ದೇವಕಿಯನ್ನೂ ವಸುದೇವನನ್ನೂ ಕಾರಾಗೃಹದಲ್ಲಿ ಬಂಧಿಸಿಟ್ಟನು (66-67).

* ಕಪ್ಪು ಕೂದಲು ಬಿಳಿಯಕೂದಲಿಗೂ ಉಪಲಕ್ಷಣ. ಇವೆರಡರಿಂದ ಶ್ರೀಕೃಷ್ಣ ಬಲರಾಮರ ಅವತಾರ ಸೂಚಿತವಾಗುತ್ತದೆ. 'ಭೂಭಾರಹರಣಾದಿಕಾರ್ಯವು ನನಗೆ ಅತಿ ಸುಲಭವಾದದ್ದು, ಲೀಲಾಮಾತ್ರ, ಒಂದು ಕೂದಲಿಗೆ ಸಮ' ಎಂದು ಅಭಿಪ್ರಾಯ. ಕೂದಲೇ ಅವತರಿಸಿತೆಂದು ತಿಳಿಯಬಾರದು. ದೇವತೆಗಳ ಅವತಾರವೂ ತನ್ನ ಲೀಲೆಗಾಗಿ ಸಹಾಯಕ್ಕಾಗಿ ಅಲ್ಲ—ಎಂದು ತಿಳಿಯಬೇಕು. ಬಿಳಿಯ ಕೂದಲೂ ಸಹ ಲೀಲಾ ಕಲ್ಪಿತವಾದದ್ದು.

**ವಸುದೇವೇನ ಕಂಸಾಯ ತೇನೈವೋಕ್ತಂ ಯಥಾ ಪುರಾ।**
**ತಥೈವ ವಸುದೇವೋಽಪಿ ಪುತ್ರಮರ್ಪಿತವಾನ್ ದ್ವಿಜಃ॥** 68

**ಹಿರಣ್ಯಕಶಿಪೋಃ ಪುತ್ರಾಷ್ಷಡ್ಗರ್ಭಾ ಇತಿ ವಿಶ್ರುತಾಃ।**
**ವಿಷ್ಣುಪ್ರಯುಕ್ತಾ ತಾನ್ನಿದ್ರಾ ಕ್ರಮಾದ್ಗರ್ಭಾನಯೋಜಯತ್॥** 69

**ಯೋಗನಿದ್ರಾ ಮಹಾಮಾಯಾ ವೈಷ್ಣವೀ ಮೋಹಿತಂ ಯಯಾ।**
**ಅವಿದ್ಯಯಾ ಜಗತ್ಸರ್ವಂ ತಾಮಾಹ ಭಗವಾನ್ ಹರಿಃ॥** 70

*ಶ್ರೀಭಗವಾನುವಾಚ:*

**ನಿದ್ರೇ ಗಚ್ಛ ಮಮಾದೇಶಾತ್ಪಾತಾಲತಲಸಂಶ್ರಯಾನ್।**
**ಏಕೈಕತ್ವೇನ ಷಟ್‌ಗರ್ಭಾನ್ ದೇವಕೀಜಠರಂ ನಯ॥** 71

**ಹತೇಷು ತೇಷು ಕಂಸೇನ ಶೇಷಾಖ್ಯೋಽಂಶಸ್ತತೋ ಮಮ।**
**ಅಂಶಾಂಶೇನೋದರೇ ತಸ್ಯಾಸ್ಸಪ್ತಮಃ ಸಂಭವಿಷ್ಯತಿ॥** 72

---

ವಸುದೇವನು ಹಿಂದೆ ಕಂಸನಿಗೆ ಏನು ಹೇಳಿದ್ದನೋ ಅದೇ ಪ್ರಕಾರ, ದೇವಕಿಯಲ್ಲಿ ಜನಿಸಿದ ಪ್ರತಿಯೊಬ್ಬ ಪುತ್ರನನ್ನೂ ಕಂಸನಿಗೆ ಒಪ್ಪಿಸುತ್ತಿದ್ದನು. ಅದುವರೆಗೆ ಹುಟ್ಟಿದ ಆರು ಮಕ್ಕಳು ಹಿಂದೆ ಹಿರಣ್ಯಕಶಿಪುವಿನ ಪುತ್ರರಾಗಿದ್ದ ರೆಂದು ತಿಳಿದುಬರುತ್ತದೆ.* ಇತ್ತ ವಿಷ್ಣುವಿನಿಂದ ಪ್ರೇರಿತಳಾದ ಯೋಗನಿದ್ರೆಯು ಅವರನ್ನು ಕ್ರಮವಾಗಿ ದೇವಕಿಯ ಗರ್ಭದಲ್ಲಿ ತಂದಿರಿಸಿದಳು (68-69). ಯೋಗನಿದ್ರೆಯೆಂದರೆ ವಿಷ್ಣುವಿನ ಮಹಾಮಾಯೆಯೆಂಬ ಶಕ್ತಿ. ಅವಳೇ ಅವಿದ್ಯೆ. ಅವಳಿಂದಲೇ ಸಕಲಜಗತ್ತು ಅಜ್ಞಾನದಲ್ಲಿ ಸಿಕ್ಕಿ ತೊಳಲಾಡುತ್ತಿದೆ. ಆ ಯೋಗನಿದ್ರೆಯನ್ನು ಕುರಿತು ಭಗವಾನ್ ಶ್ರೀಹರಿಯು ಇಂತೆಂದನು (70): "ನಿದ್ರೆ, ಹೋಗು, ಪಾತಾಳ ತಳದಲ್ಲಿರುವ ಆರು ಗರ್ಭಗಳನ್ನು ಒಂದೊಂದಾಗಿ ದೇವಕಿಯ ಉದರಕ್ಕೆ ಸೇರಿಸು. ಅವರೆಲ್ಲರೂ ಕಂಸನಿಂದ ಹತರಾದಮೇಲೆ ಶೇಷನೆಂಬ ನನ್ನ ಅಂಶಪುರುಷನು ತನ್ನ ಅಂಶಾಂಶದಿಂದ ದೇವಕಿಯ ಏಳನೆಯ ಗರ್ಭವಾಗಿ ಸೇರುವನು (71-72). ವಸುದೇವನ ಇನ್ನೊಬ್ಬ ಮಡದಿ

* ಅನುಬಂಧವನ್ನು ನೋಡಿ.

**ಗೋಕುಲೇ ವಸುದೇವಸ್ಯ ಭಾರ್ಯಾಽನ್ಯಾ ರೋಹಿಣೀ ಸ್ಥಿತಾ।**
**ತಸ್ಯಾಸ್ಸ ಸಂಭೂತಿಸಮಂ ದೇವಿ ನೇಯಸ್ತ್ವಯೋದರಮ್॥** 73

**ಸಪ್ತಮೋ ಭೋಜರಾಜಸ್ಯ ಭಯಾದ್ರೋಧೋಪರೋಧತಃ।**
**ದೇವಕ್ಯಾಃ ಪತಿತೋ ಗರ್ಭ ಇತಿ ಲೋಕೋ ವದಿಷ್ಯತಿ॥** 74

**ಗರ್ಭಸಂಕರ್ಷಣಾತ್ಸೋಽಥ ಲೋಕೇ ಸಂಕರ್ಷಣೇತಿ ವೈ।**
**ಸಂಜ್ಞಾಮವಾಪ್ಸ್ಯತೇ ವೀರಶ್ಶ್ವೇತಾದ್ರಿಶಿಖರೋಪಮಃ॥** 75

**ತತೋಽಹಂ ಸಂಭವಿಷ್ಯಾಮಿ ದೇವಕೀಜಠರೇ ಶುಭೇ।**
**ಗರ್ಭೇ ತ್ವಯಾ ಯಶೋದಾಯಾ ಗಂತವ್ಯಮವಿಲಂಬಿತಮ್॥** 76

**ಪ್ರಾವೃಟ್ಕಾಲೇ ಚ ನಭಸಿ ಕೃಷ್ಣಾಷ್ಟಮ್ಯಾಮಹಂ ನಿಶಿ।**
**ಉತ್ಪತ್ಸ್ಯಾಮಿ ನವಮ್ಯಾಂ ತು ಪ್ರಸೂತಿಂ ತ್ವಮವಾಪ್ಸ್ಯಸಿ॥** 77

**ಯಶೋದಾಶಯನೇ ಮಾಂ ತು ದೇವಕ್ಯಾಸ್ತ್ವಾಮನಿಂದತೇ।**
**ಮಚ್ಛಕ್ತಿಪ್ರೇರಿತಮತಿರ್ವಸುದೇವೋ ನಯಿಷ್ಯತಿ॥** 78

---

ರೋಹಿಣಿಯು ಗೋಕುಲದಲ್ಲಿದ್ದಾಳೆ. ದೇವಿ, ನೀನು ಆ ಏಳನೆಯ ಗರ್ಭವನ್ನು ರೋಹಿಣಿಗೇ ಗರ್ಭವಾದ ರೀತಿಯಲ್ಲಿ ಅವಳ ಉದರಕ್ಕೆ ಸೇರಿಸಬೇಕು (73). ಭೋಜರಾಜನಾದ ಕಂಸನು ಕಾರಾಗಾರದಲ್ಲಿ ಬಂಧಿಸಿ ಪೀಡಿಸಿದ್ದರಿಂದ ಭಯವಾಗಿ ದೇವಕಿಗೆ ಗರ್ಭಸ್ರಾವವಾಯಿತೆಂದು ಜನರು ಆಡಿಕೊಳ್ಳುವರು. ಗರ್ಭಸಂಕರ್ಷಣದಿಂದ (ಆಕರ್ಷಣದಿಂದ) ಆ ಶೇಷನು ಸಂಕರ್ಷಣನೆಂಬ ಹೆಸರನ್ನು ಪಡೆಯುವನು. ಆ ವೀರನು ಶ್ವೇತ ಪರ್ವತಕ್ಕೆ ಸದೃಶನಾಗಿ ಕಾಣುವನು (74-75). ಅನಂತರ ನಾನು, ಹೇ ಶೋಭನೆ, ದೇವಕಿಯ ಗರ್ಭದಲ್ಲಿ ಸ್ಥಿತನಾಗುವೆನು. ನೀನು ಒಡನೆಯೇ ತಡಮಾಡದೆ ಯಶೋದೆಯ ಗರ್ಭವನ್ನು ಪ್ರವೇಶಿಸಬೇಕು. ವರ್ಷಾಕಾಲದ ಶ್ರಾವಣಬಹುಳ ಅಷ್ಟಮಿಯ ರಾತ್ರಿ ನಾನು ಉದಿಸುವೆನು. ನವಮಿಯ ದಿನ ನೀನು ಜನಿಸುವೆ (76-77). ಆಗ, ಹೇ ಗುಣಶಾಲಿನಿ—ನಿದ್ರೆ, ನನ್ನ ಪ್ರೇರಣೆಯಂತೆ ವಸುದೇವನು ನನ್ನನ್ನು ದೇವಕಿಯ ಬಳಿಯಿಂದ ಕರೆದೊಯ್ದು ಯಶೋದೆಯ ಹಾಸಿಗೆಯಲ್ಲಿ ಮಲಗಿಸಿ ನಿನ್ನನ್ನು ತಂದು ದೇವಕಿಯ ಹಾಸಿಗೆಯಲ್ಲಿ ಮಲಗಿಸುವನು (78). ಅನಂತರ ಕಂಸನು

**ಕಂಸಶ್ಚ ತ್ವಾಮುಪಾದಾಯ ದೇವಿ ಶೈಲಶಿಲಾತಲೇ।**
**ಪ್ರಕ್ಷೇಪ್ಸ್ಯತ್ಯಂತರಿಕ್ಷೇ ಚ ಸಂಸ್ಥಾನಂ ತ್ವಮವಾಪ್ಸ್ಯಸಿ॥ 79**

**ತತಸ್ತ್ವಾಂ ಶತದೃಕ್ ಭಕ್ತಃ ಪ್ರಣಮ್ಯ ಮಮ ಗೌರವಾತ್।**
**ಪ್ರಣಿಪಾತಾನತಶಿರಾ ಭಗಿನೀತ್ವೇ ಗ್ರಹೀಷ್ಯತಿ॥ 80**

**ತ್ವಂ ಚ ಶುಂಭನಿಶುಂಭಾದೀನ್ ಹತ್ವಾ ದೈತ್ಯಾನ್ಸಹಸ್ರಶಃ।**
**ಸ್ಥಾನೈರನೇಕೈಃ ಪೃಥಿವೀಮಶೇಷಾಂ ಮಂಡಯಿಷ್ಯಸಿ॥ 81**

**ತ್ವಂ ಭೂತಿಃ ಸನ್ನತಿಃ ಕ್ಷಾಂತಿಃ ಕಾಂತಿರ್ದ್ಯೌಃ ಪೃಥಿವೀ ಧೃತಿಃ।**
**ಲಜ್ಜಾ ಪುಷ್ಟಿರುಷಾ ಯಾ ತು ಕಾಚಿದನ್ಯಾ ತ್ವಮೇವ ಸಾ॥ 82**

**ಯೇ ತ್ವಾಮಾರ್ಯೇತಿ ದುರ್ಗೇತಿ ವೇದಗರ್ಭಾಂಬಿಕೇತಿ ಚ।**
**ಭದ್ರೇತಿ ಭದ್ರಕಾಲೀತಿ ಕ್ಷೇಮದಾ ಭಾಗ್ಯದೇತಿ ಚ॥ 83**

**ಪ್ರಾತಶ್ಚೈವಾಪರಾಹ್ಣೇ ಚ ಸ್ತೋಷ್ಯಂತ್ಯಾನಮ್ರಮೂರ್ತಯಃ।**
**ತೇಷಾಂ ಹಿ ಪ್ರಾರ್ಥಿತಂ ಸರ್ವಂ ಮತ್ಪ್ರಸಾದಾದ್ಭವಿಷ್ಯತಿ॥ 84**

---

ಬಂದು ನಿನ್ನನ್ನು ಎತ್ತಿ ಶೈಲಶಿಲಾತಲದ ಮೇಲೆ ಬಡಿಯಲು ಯತ್ನಿಸಿದಾಗ, ಹೇ ದೇವಿ, ನೀನು ಅಂತರಿಕ್ಷವನ್ನಡರಿ ನಿಲ್ಲುವೆ. ಆಗ ಸಹಸ್ರಾಕ್ಷನಾದ ದೇವೇಂದ್ರನು ನನ್ನ ಮೇಲಿನ ಗೌರವದಿಂದಾಗಿ ನಿನಗೆ ತಲೆಬಾಗಿ ನಮಸ್ಕರಿಸುವನಲ್ಲದೆ, ನಿನ್ನನ್ನು ತನ್ನ ಸೋದರಿಯೆಂದು ಸ್ವೀಕರಿಸುವನು (79-80). ಅನಂತರ ನೀನು ಶುಂಭ, ನಿಶುಂಭ—ಮೊದಲಾದ ಸಾವಿರಾರು ದೈತ್ಯರನ್ನು ಸಂಹರಿಸುವೆಯಲ್ಲದೆ, ಅನೇಕ ಸ್ಥಳಗಳಲ್ಲಿ ನೆಲೆಸಿ ಸಮಸ್ತ ಪೃಥ್ವಿಯನ್ನೂ ಪಾವನಗೊಳಿಸುವೆ. ಭೂತಿ, ಸನ್ನತಿ, ಕ್ಷಾಂತಿ, ಕಾಂತಿ, ಅಂತರಿಕ್ಷ, ಪೃಥಿವೀ, ಧೃತಿ—ಎಲ್ಲವೂ ನೀನೆ. ಲಜ್ಜಾ, ಪುಷ್ಟಿ, ಉಷಾ—ನೀನೇ ಅಲ್ಲವೆ? ಇನ್ನಾವ ಸ್ತ್ರೀದೇವತೆಯುಂಟೋ ಅದೆಲ್ಲ ನೀನೆ (81-82). ಯಾರು ಯಾರು ನಿನ್ನನ್ನು ಆರ್ಯೆಯೆಂದೂ ದುರ್ಗೆಯೆಂದೂ ವೇದ ಗರ್ಭೆಯೆಂದೂ ಅಂಬಿಕೆಯೆಂದೂ ಹಾಗೆಯೇ ಭದ್ರಾ, ಭದ್ರಕಾಲೀ, ಕ್ಷೇಮದಾ, ಭಾಗ್ಯದಾ—ಎಂದೂ ನಮ್ರತೆಯಿಂದ ತಲೆಬಾಗಿ ಪ್ರಾತಃ ಕಾಲ ಮತ್ತು ಸಾಯಂ ಕಾಲಗಳಲ್ಲಿ ಸ್ತುತಿಸುತ್ತಾರೋ ಅವರ ಸಮಸ್ತ ಇಷ್ಟಾರ್ಥವೂ ನನ್ನ ಅನುಗ್ರಹ ದಿಂದ ಕೈಗೂಡುವುದು (83-84). ಜನರು ನಿನ್ನನ್ನು ಮದ್ಯಮಾಂಸಗಳ ಅರ್ಪಣೆ

**ಸುರಾಮಾಂಸೋಪಹಾರೈಶ್ಚ ಭಕ್ಷ್ಯಭೋಜ್ಯೈಶ್ಚ ಪೂಜಿತಾ।**
**ನೃಣಾಮಶೇಷಕಾಮಾಂಸ್ತ್ವಂ ಪ್ರಸನ್ನಾ ಸಂಪ್ರದಾಸ್ಯಸಿ॥** 85

**ತೇ ಸರ್ವೇ ಸರ್ವದಾ ಭದ್ರೇ ಮತ್ಪ್ರಸಾದಾದಸಂಶಯಮ್।**
**ಅಸಂದಿಗ್ಧಾ ಭವಿಷ್ಯಂತಿ ಗಚ್ಛ ದೇವಿ ಯಥೋದಿತಮ್॥** 86

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಪ್ರಥಮೋಽಧ್ಯಾಯಃ

---

ಯಿಂದಲೂ ಭಕ್ಷ್ಯಭೋಜ್ಯಗಳ ನಿವೇದನೆಯಿಂದಲೂ ಪೂಜಿಸಿದರೆ, ನೀನು ಪ್ರಸನ್ನಳಾಗಿ ಅವರ ಇಷ್ಟಾರ್ಥಗಳೆಲ್ಲವನ್ನೂ ನೆರವೇರಿಸು (85). ಹೇ ಭದ್ರೆ, (ನಿನ್ನ ಮೂಲಕ ನನಗೆ ಸೇರುವ) ಆ ಎಲ್ಲ ಕಾಮನೆಗಳೂ ನಿಃಸಂಶಯವಾಗಿ ಸರ್ವದಾ ನೆರವೇರುವುವು. ದೇವಿ, ನಾನು ಹೇಳಿದಂತೆ ನಿನ್ನ ಕರ್ತವ್ಯದ ಸ್ಥಳಕ್ಕೆ ತೆರಳು" ಎಂದು ಆಜ್ಞಾಪಿಸಿದನು (86).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಒಂದನೆಯ ಅಧ್ಯಾಯ ಮುಗಿಯಿತು.



## ದ್ವಿತೀಯೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಯಥೋಕ್ತಂ ಸಾ ಜಗದ್ಧಾತ್ರೀ ದೇವದೇವೇನ ವೈ ತಥಾ।**
**ಷಡ್‌ಗರ್ಭಗರ್ಭವಿನ್ಯಾಸಂ ಚಕ್ರೇ ಚಾನ್ಯಸ್ಯ ಕರ್ಷಣಮ್॥** 1

**ಸಪ್ತಮೇ ರೋಹಿಣೀಂ ಗರ್ಭೇ ಪ್ರಾಪ್ತೇ ಗರ್ಭಂ ತತೋ ಹರಿಃ।**
**ಲೋಕತ್ರಯೋಪಕಾರಾಯ ದೇವಕ್ಯಾಃ ಪ್ರವಿವೇಶ ಹ॥** 2

**ಯೋಗನಿದ್ರಾ ಯಶೋದಾಯಾಸ್ತಸ್ಮಿನ್ನೇವ ತಥಾ ದಿನೇ।**
**ಸಂಭೂತಾ ಜಠರೇ ತದ್ವದ್ಯಥೋಕ್ತಂ ಪರಮೇಷ್ಠಿನಾ॥** 3

**ತತೋ ಗ್ರಹಗಣಸ್ಸಮ್ಯಕ್ ಪ್ರಚಚಾರ ದಿವಿ ದ್ವಿಜ।**
**ವಿಷ್ಣೋರಂಶೇ ಭುವಂ ಯಾತೇ ಋತವಶ್ಚಾಬಭುಶ್ಶುಭಾಃ॥** 4

---

### ಅಧ್ಯಾಯ 2

ಭಗವಂತನು ದೇವಕಿಯ ಗರ್ಭವನ್ನು ಪ್ರವೇಶಿಸುವುದು.
ದೇವತೆಗಳಿಂದ ದೇವಕಿಯ ಸ್ತುತಿ.

ಪರಾಶರರು ಹೇಳಿದರು: ಮೈತ್ರೇಯ, ದೇವದೇವನ ಆದೇಶದಂತೆ ಜಗನ್ಮಾತೆಯಾದ ಯೋಗನಿದ್ರೆಯು ಆರು ಗರ್ಭಗಳನ್ನು ದೇವಕಿಯ ಉದರದಲ್ಲಿ ಕ್ರಮವಾಗಿ ಸೇರಿಸಿದಳಲ್ಲದೆ, ಏಳನೆಯ ಗರ್ಭದ ಆಕರ್ಷಣೆಯನ್ನು ಮಾಡಿದಳು (1). ಏಳನೆಯ ಗರ್ಭವು ರೋಹಿಣಿಯ ಉದರವನ್ನು ಸೇರಲಾಗಿ, ಮೂರು ಲೋಕಗಳ ಉಪಕಾರಕ್ಕಾಗಿ ಶ್ರೀಹರಿಯು ದೇವಕಿಯ ಗರ್ಭವನ್ನು ಪ್ರವೇಶಿಸಿದನು. ಭಗವಂತನ ಆಜ್ಞೆಯಂತೆ ಅದೇ ದಿನವೇ ಯೋಗನಿದ್ರೆಯೂ ಸಹ ಯಶೋದೆಯ ಗರ್ಭವನ್ನು ಪ್ರವೇಶಿಸಿದಳು (2-3). ಮೈತ್ರೇಯ, ಈ ಪ್ರಕಾರದಲ್ಲಿ ವಿಷ್ಣುವಿನ ಅಂಶವು ಭೂಲೋಕಕ್ಕೆ ಬರಲಾಗಿ, ಗ್ರಹಗಣಗಳೆಲ್ಲವೂ ಕ್ರಮವರಿತು ಸಂಚರಿಸತೊಡಗಿದವು! ಋತುಗಳು ಶುಭಕರವಾಗಿ ಪ್ರವೃತ್ತವಾದವು! (4). ಆ ಸಮಯದಲ್ಲಿ ದೇವಕಿಯು ಪ್ರಖರವಾದ ತೇಜಸ್ಸಿನಿಂದ ಪ್ರಜ್ವಲಿಸ

**ನ ಸೇಹೇ ದೇವಕೀಂ ದ್ರಷ್ಟುಂ ಕಶ್ಚಿದಪ್ಯತಿತೇಜಸಾ।**
**ಜಾಜ್ವಲ್ಯಮಾನಾಂ ತಾಂ ದೃಷ್ಟ್ವಾ ಮನಾಂಸಿ ಕ್ಷೋಭಮಾಯಯುಃ॥ 5**

**ಅದೃಷ್ಟಾಃ ಪುರುಷೈಃ ಸ್ತ್ರೀಭಿರ್ದೇವಕೀಂ ದೇವತಾಗಣಾಃ।**
**ಬಿಭ್ರಾಣಾಂ ವಪುಷಾ ವಿಷ್ಣುಂ ತುಷ್ಟುವುಸ್ತಾಮಹರ್ನಿಶಮ್॥ 6**

*ದೇವತಾ ಊಚುಃ:*

**ಪ್ರಕೃತಿಸ್ತ್ವಂ ಪರಾ ಸೂಕ್ಷ್ಮಾ ಬ್ರಹ್ಮಗರ್ಭಾಭವಃ ಪುರಾ।**
**ತತೋ ವಾಣೀ ಜಗದ್ಧಾತುರ್ವೇದಗರ್ಭಾಸಿ ಶೋಭನೇ॥ 7**

**ಸೃಜ್ಯಸ್ವರೂಪಗರ್ಭಾಽಸಿ ಸೃಷ್ಟಿಭೂತಾ ಸನಾತನೇ।**
**ಬೀಜಭೂತಾ ತು ಸರ್ವಸ್ಯ ಯಜ್ಞಭೂತಾಭವಸ್ತ್ರಯೀ॥ 8**

**ಫಲಗರ್ಭಾ ತ್ವಮೇವೇಜ್ಯಾ ವಹ್ನಿಗರ್ಭಾ ತಥಾರಣಿಃ।**
**ಅದಿತಿರ್ದೇವಗರ್ಭಾ ತ್ವಂ ದೈತ್ಯಗರ್ಭಾ ತಥಾ ದಿತಿಃ॥ 9**

---

ತೊಡಗಿದಳು. ಅವಳ ತೇಜೋಮಹಿಮೆಯಿಂದ ಯಾರಿಗೂ ಅವಳನ್ನು ದಿಟ್ಟಿಸಿ ನೋಡಲಾಗುತ್ತಿರಲಿಲ್ಲ. ಮನಸ್ಸು ದಿಗ್ಭ್ರಾಂತವಾಗುತ್ತಿತ್ತು. ಅಲ್ಲಿದ್ದ ಪುರುಷರಿಗೂ ಸ್ತ್ರೀಯರಿಗೂ ಗೋಚರಿಸದಂತೆ ದೇವತೆಗಳು ಅದೃಶ್ಯರಾಗಿ ಬಂದು ನಿಂತು, ವಿಷ್ಣುವನ್ನು ಗರ್ಭದಲ್ಲಿ ಧರಿಸಿದ್ದ ದೇವಕೀದೇವಿಯನ್ನು ಅಹೋರಾತ್ರವೂ ಈ ಪ್ರಕಾರವಾಗಿ ಸ್ತುತಿಸುತ್ತಿದ್ದರು (5-6): "ಹೇ ಶೋಭನೆ, ಹಿಂದೆ ನೀನು ಬ್ರಹ್ಮವಸ್ತುವಿನ ಪ್ರತಿಬಿಂಬವನ್ನು ಧರಿಸಿದ್ದ ಸೂಕ್ಷ್ಮವಾದ ಪರಾಪ್ರಕೃತಿಯಾಗಿದ್ದೆ. ಅನಂತರ ಸೃಷ್ಟಿಕರ್ತನ ವೇದಗರ್ಭವಾದ ವಾಣಿ(ಪ್ರಣವ)ಯಾದೆ. ಸೃಜಿಸಲ್ಪಡುವ ವಸ್ತುಗಳನ್ನು ಗರ್ಭೀಕರಿಸಿದ ನೀನು ಸೃಷ್ಟಿರೂಪಳೂ ಆದೆ. ಸರ್ವಸೃಷ್ಟಿಗೂ ನೀನು ಬೀಜಭೂತಳೂ ಯಜ್ಞರೂಪಳೂ ವೇದತ್ರಯ ಸ್ವರೂಪಳೂ ಆಗಿದ್ದೀಯೆ (7-8). ಫಲವನ್ನೀಯುವ ಯಜ್ಞಕ್ರಿಯೆ ನೀನು; ಅಗ್ನಿಗರ್ಭವಾದ ಅರಣಿ ನೀನು; ದೇವತೆಗಳನ್ನು ಗರ್ಭದಲ್ಲಿ ಧರಿಸಿದ ಅದಿತಿ ನೀನು; ದೈತ್ಯರಿಗೆ ಜನ್ಮವಿತ್ತ ದಿತಿಯೂ ನೀನೇ. ಹಗಲನ್ನುಂಟುಮಾಡುವ ಪ್ರಕಾಶವೂ ಜ್ಞಾನವನ್ನೀಯುವ ವಿನಯವೂ ನೀನು. (ಸಾಮಾದಿ) ನ್ಯಾಯ

**ಜ್ಯೋತ್ಸ್ನಾ ವಾಸರಗರ್ಭಾ ತ್ವಂ ಜ್ಞಾನಗರ್ಭಾಽಸಿ ಸನ್ನತಿಃ।**
**ನಯಗರ್ಭಾ ಪರಾ ನೀತಿರ್ಲಜ್ಜಾ ತ್ವಂ ಪ್ರಶ್ರಯೋದ್ವಹಾ॥ 10**

**ಕಾಮಗರ್ಭಾ ತತೇಚ್ಛಾ ತ್ವಂ ತುಷ್ಟಿಃ ಸಂತೋಷಗರ್ಭಿಣೀ।**
**ಮೇಧಾ ಚ ಬೋಧಗರ್ಭಾಽಸಿ ಧೈರ್ಯಗರ್ಭೋದ್ವಹಾ ಧೃತಿಃ॥ 11**

**ಗ್ರಹರ್ಕ್ಷತಾರಕಾಗರ್ಭಾ ದ್ಯೌರಸ್ಯಾಖಿಲಹೈತುಕೀ।**
**ಏತಾ ವಿಭೂತಯೋ ದೇವಿ ತಥಾನ್ಯಾಶ್ಚ ಸಹಸ್ರಶಃ॥ 12**

**ತಥಾಸಂಖ್ಯಾ ಜಗದ್ಧಾತ್ರಿ ಸಾಂಪ್ರತಂ ಜಠರೇ ತವ।**
**ಸಮುದ್ರಾದ್ರಿನದೀದ್ವೀಪವನಪತ್ತನಭೂಷಣಾ॥ 13**

**ಗ್ರಾಮಖರ್ವಟಖೇಟಾಢ್ಯ ಸಮಸ್ತಾ ಪೃಥಿವೀ ಶುಭೇ।**
**ಸಮಸ್ತವಹ್ನಯೋಽಂಭಾಂಸಿ ಸಕಲಾಶ್ಚ ಸಮೀರಣಾಃ॥ 14**

---

ಗರ್ಭಿತವಾದ ನೀತಿಶಾಸ್ತ್ರವೂ ವಿನಯಾನ್ವಿತವಾದ ಲಜ್ಜೆಯೂ ನೀನು (9-10). ಫಲವನ್ನೀಯುವ ಇಚ್ಛೆಯೂ ತೃಪ್ತಿಯನ್ನೀಯುವ ಸಂತುಷ್ಟಿಯೂ ನೀನು. ಬೋಧವನ್ನೀಯುವ ಮೇಧಾಶಕ್ತಿಯೂ ಧೈರ್ಯವನ್ನೀಯುವ ಸ್ಥೈರ್ಯಶಕ್ತಿಯೂ ನೀನು. (ಮಳೆ-ಮುಂತಾದ್ದರ ಮೂಲಕ) ಜಗತ್ತಿನ ಸ್ಥಿತಿಗೆ ನಿಮಿತ್ತವಾಗಿ ಗ್ರಹ, ನಕ್ಷತ್ರ, ತಾರಕೆಗಳಿಂದೊಡಗೂಡಿದ ಅಂತರಿಕ್ಷವೂ ನೀನೇ. ಈ ವಿಭೂತಿಗಳಲ್ಲದೆ ಇನ್ನೂ ಇರುವ ಸಾವಿರಾರು ವಿಭೂತಿಗಳೆಲ್ಲವೂ, ಹೇ ದೇವಿ, ನೀನೇ ಆಗಿದ್ದೀಯೆ (11-12). ಅಷ್ಟೇ ಸಂಖ್ಯೆಯ ಆ ವಿಭೂತಿಗಳೆಲ್ಲವೂ, ಹೇ ಜಗದ್ಧಾತ್ರಿ, ಸಾಂಪ್ರತ ದಲ್ಲಿ ನಿನ್ನ ಜಠರ*ದಲ್ಲಿವೆ. ಸಮುದ್ರ, ಪರ್ವತ, ನದೀ, ದ್ವೀಪ, ಅರಣ್ಯ, ನಗರಗಳಿಂದ ಭೂಷಿತವಾದ ಮತ್ತು ಗ್ರಾಮ, ಖರ್ವಟ, ಖೇಟ§ಗಳಿಂದ ತುಂಬಿದ ಸಮಸ್ತ ಪೃಥ್ವಿಯೂ ಸಮಸ್ತ ವಹ್ನಿಗಳು, ಜಲ, ಎಲ್ಲ ವಾಯು ಭೇದಗಳೂ (13-14), ಗ್ರಹ, ನಕ್ಷತ್ರ, ತಾರೆಗಳಿಂದ ವಿಚಿತ್ರವಾಗಿಯೂ

* ಇದುವರೆಗೆ ಸಮಸ್ತವಿಭೂತಿ ರೂಪವಾದ ಪ್ರಕೃತಿ ನೀನೇ ಎಂದು ಸ್ತುತಿಸಿದ್ದಾಯಿತು. ಈಗ ಆ ವಿಭೂತಿಗಳನ್ನೊಳಗೊಂಡ ಪರಮಾತ್ಮನು ನಿನ್ನ ಗರ್ಭದಲ್ಲಿದ್ದಾನೆಂದು ಸ್ತುತಿಸುತ್ತಾರೆ.

§ ಖರ್ವಟ, ಖೇಟಗಳೆಂದರೆ ಗೊತ್ತಾದ ಜನಸಂಖ್ಯೆಯುಳ್ಳ ಹಳ್ಳಿಗಳು.

ಗ್ರಹರ್ಕ್ಷತಾರಕಾಚಿತ್ರಂ ವಿಮಾನಶತಸಂಕುಲಮ್।
ಅವಕಾಶಮಶೇಷಸ್ಯ ಯದ್ದದಾತಿ ನಭಃಸ್ಥಲಮ್॥ 15

ಭೂರ್ಲೋಕಶ್ಚ ಭುವರ್ಲೋಕಸ್ಸ್ವರ್ಲೋಕೋಽಥ ಮಹರ್ಜನಃ।
ತಪಶ್ಚ ಬ್ರಹ್ಮಲೋಕಶ್ಚ ಬ್ರಹ್ಮಾಂಡಮಖಿಲಂ ಶುಭೇ॥ 16

ತದಂತರೇ ಸ್ಥಿತಾ ದೇವಾ ದೈತ್ಯಗಂಧರ್ವಚಾರಣಾಃ।
ಮಹೋರಗಾಸ್ತಥಾ ಯಕ್ಷಾ ರಾಕ್ಷಸಾಃ ಪ್ರೇತಗುಹ್ಯಕಾಃ॥ 17

ಮನುಷ್ಯಾಃ ಪಶವಶ್ಚಾನ್ಯೇ ಯೇ ಚ ಜೀವಾ ಯಶಸ್ವಿನಿ।
ತೈರಂತಃಸ್ಥೈರನಂತೋಽಸೌ ಸರ್ವಗಃ ಸರ್ವಭಾವನಃ॥ 18

ರೂಪಕರ್ಮಸ್ವರೂಪಾಣಿ ನ ಪರಿಚ್ಛೇದಗೋಚರೇ।
ಯಸ್ಯಾಖಿಲಪ್ರಮಾಣಾನಿ ಸ ವಿಷ್ಣುರ್ಗರ್ಭಗಸ್ತವ॥ 19

ತ್ವಂ ಸ್ವಾಹಾ ತ್ವಂ ಸ್ವಧಾ ವಿದ್ಯಾ ಸುಧಾ ತ್ವಂ ಜ್ಯೋತಿರಂಬರೇ।
ತ್ವಂ ಸರ್ವಲೋಕರಕ್ಷಾರ್ಥಮವತೀರ್ಣಾ ಮಹೀತಲೇ॥ 20

---

ನೂರಾರು ವಿಮಾನಗಳಿಂದ ತುಂಬಿದ್ದಾಗಿಯೂ, ಸಮಸ್ತ ವಸ್ತುಗಳಿಗೆ ಅವಕಾಶ ವನ್ನೀಯತಕ್ಕದ್ದಾಗಿಯೂ ಇರುವ ಆಕಾಶವೂ ಭೂರ್ಲೋಕ, ಭುವರ್ಲೋಕ, ಸ್ವರ್ಲೋಕಗಳೂ ಮಹರ್ಜನತಪೋಲೋಕಗಳೂ ಒಟ್ಟಿನಲ್ಲಿ ನಿಖಿಲ ಬ್ರಹ್ಮಾಂಡವೂ (15-16), ಅವುಗಳಲ್ಲಿರುವ ದೇವತೆಗಳೂ ದೈತ್ಯ ಗಂಧರ್ವ ಚಾರಣರೂ ಮಹೋರಗಗಳೂ ಯಕ್ಷರೂ ರಾಕ್ಷಸರೂ ಪ್ರೇತಗುಹ್ಯಕರೂ ಮನುಷ್ಯರೂ ಪಶುಗಳೂ ಮತ್ತು ಇನ್ನು ಯಾವ ಯಾವ ಜೀವಿಗಳಿದ್ದಾವೋ ಅವೆಲ್ಲವೂ ಯಾರಲ್ಲಿ ಅಂತರ್ಗತವಾಗಿವೆಯೋ ಅಂತಹ ಸರ್ವಗನೂ ಸರ್ವ ಭಾವನನೂ ಆದ ಅನಂತನೇ ನಿನ್ನ ಗರ್ಭದಲ್ಲಿರತಕ್ಕವನು (17-18). ಯಾವಾತನ ರೂಪ, ಕ್ರಿಯೆ, ಸ್ವಭಾವ, (ಬಾಲತ್ತ್ವ, ಮಹತ್ತ್ವಾದಿ) ಪರಿಣಾಮಗಳು ಯಾರಿಂದಲೂ ಅಳೆಯಲು ಸಾಧ್ಯವಿಲ್ಲವೋ ಆ ಮಹಾವಿಷ್ಣು ನಿನ್ನ ಗರ್ಭದಲ್ಲಿದ್ದಾನೆ. ಹೇ ದೇವಿ, ಸ್ವಾಹಾ, ಸ್ವದಾ, ವಿದ್ಯೆ ಇವೆಲ್ಲವೂ ನೀನೇ. ಅಂಬರದಲ್ಲಿ ಬೆಳಗುವ ಜ್ಯೋತಿ ನೀನೇ. ಸರ್ವಲೋಕದ ರಕ್ಷಣೆಗಾಗಿ, ತಾಯಿ, ನೀನು ಭೂಲೋಕದಲ್ಲಿ ಅವತರಿಸಿದ್ದೀಯೆ (19-20). ದೇವಿ, ಪ್ರಸನ್ನಳಾಗು.

**ಪ್ರಸೀದ ದೇವಿ ಸರ್ವಸ್ಯ ಜಗತಶ್ಶ್ಯಂ ಶುಭೇ ಕುರು।**
**ಪ್ರೀತ್ಯಾ ತಂ ಧಾರಯೇಶಾನಂ ಧೃತಂ ಯೇನಾಖಿಲಂ ಜಗತ್॥** 21

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ದ್ವಿತೀಯೋಽಧ್ಯಾಯಃ

---

ಹೇ ಶುಭೆ, ಜಗತ್ತಿಗೆ ಮಂಗಳವನ್ನುಂಟುಮಾಡು. ನಿಖಿಲ ಜಗತ್ತನ್ನೂ ಧರಿಸಿರುವ ಆ ಸ್ವಾಮಿಯನ್ನು ಪ್ರೀತಿಯಿಂದ ನಿನ್ನ ಗರ್ಭದಲ್ಲಿ (ಕೆಲವು ಕಾಲ) ಧರಿಸಿರು!" ಎಂದು ಸ್ತುತಿಸುತ್ತಿದ್ದರು (21).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಎರಡನೆಯ ಅಧ್ಯಾಯ ಮುಗಿಯಿತು.



## ತೃತೀಯೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಏವಂ ಸಂಸ್ತೂಯಮಾನಾ ಸಾ ದೇವೈರ್ದೇವಮಧಾರಯತ್।**
**ಗರ್ಭೇಣ ಪುಂಡರೀಕಾಕ್ಷಂ ಜಗತಸ್ತ್ರಾಣಕಾರಣಮ್॥** 1

**ತತೋಽಖಿಲಜಗತ್ಪದ್ಮಬೋಧಾಯಾಚ್ಯುತಭಾನುನಾ।**
**ದೇವಕೀಪೂರ್ವಸಂಧ್ಯಾಯಾಮಾವಿರ್ಭೂತಂ ಮಹಾತ್ಮನಾ॥** 2

**ತಜ್ಜನ್ಮದಿನಮತ್ಯರ್ಥಮಾಹ್ಲಾದ್ಯಮಲದಿಙ್ಮುಖಮ್।**
**ಬಭೂವ ಸರ್ವಲೋಕಸ್ಯ ಕೌಮುದೀ ಶಶಿನೋ ಯಥಾ॥** 3

**ಸಂತಸ್ಸಂತೋಷಮಧಿಕಂ ಪ್ರಶಮಂ ಚಂಡಮಾರುತಾಃ।**
**ಪ್ರಸಾದಂ ನಿಮ್ನಗಾ ಯಾತಾ ಜಾಯಮಾನೇ ಜನಾರ್ದನೇ॥** 4

---

### ಅಧ್ಯಾಯ 3

ಭಗವಂತನು ಅವತರಿಸುವುದು. ವಸುದೇವ ದೇವಕಿಯರಿಂದ ಆತನ ಸ್ತುತಿ. ವಸುದೇವನು ಶಿಶುವನ್ನು ಯಶೋದೆಯ ಬಳಿಯಲ್ಲಿರಿಸಿ ಅವಳಲ್ಲಿ ಜನಿಸಿದ ಯೋಗಮಾಯೆಯನ್ನು ತರುವುದು. ಕಂಸನ ಆಗಮನ ಆತನ ಕೈಯಿಂದ ತಪ್ಪಿಸಿಕೊಂಡು ಯೋಗಮಾಯೆ ಆಕಾಶಮಾರ್ಗದಲ್ಲಿ ನಿರ್ಗಮಿಸುವುದು.

ಪರಾಶರರು ಹೇಳಿದರು: ಮೈತ್ರೇಯ, ಈ ಪ್ರಕಾರ ದೇವತೆಗಳಿಂದ ಸ್ತುತಿಸಲ್ಪಡುತ್ತ ದೇವಕಿಯು ಜಗದ್ರಕ್ಷಕನಾದ ಪುಂಡರೀಕಾಕ್ಷನನ್ನು ತನ್ನ ಗರ್ಭದಲ್ಲಿ ಧರಿಸಿದ್ದಳು. ಅನಂತರ ಜಗತ್ತೆಂಬ ಪದ್ಮವನ್ನರಳಿಸುವುದಕ್ಕಾಗಿ ಮಹಾತ್ಮನಾದ ಅಚ್ಯುತನೆಂಬ ಸೂರ್ಯನು ದೇವಕಿಯೆಂಬ ಪ್ರಾತಃಸಂಧ್ಯೆಯಲ್ಲಿ ಉದಿಸಿದನು! (1-2). ಸ್ವಚ್ಛವಾದ ದಿಗಂತವಿದ್ದ ಆ ದಿವಸವು ಸಮಸ್ತ ಜನರಿಗೂ ಚಂದ್ರನ ಬೆಳದಿಂಗಳಂತೆ ಅತ್ಯಂತ ಆಹ್ಲಾದಕರವಾಯಿತು. ಭಗವಂತನು ಅವತರಿಸಲಾಗಿ ಸಜ್ಜನರಿಗೆ (ತಾನಾಗಿ) ಆನಂದವುಂಟಾಯಿತು. ಚಂಡಮಾರುತಗಳು ಶಾಂತ ವಾದವು. ನದಿಗಳು ತಿಳಿಯಾದವು (3-4). ಸಮುದ್ರಗಳು ತಮ್ಮ ಘೋಷ

**ಸಿಂಧವೋ ನಿಜಶಬ್ದೇನ ವಾದ್ಯಂ ಚಕ್ರುರ್ಮನೋಹರಮ್।**
**ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾಃ॥ 5**

**ಸಸೃಜುಃ ಪುಷ್ಪವರ್ಷಾಣಿ ದೇವಾ ಭುವ್ಯಂತರಿಕ್ಷಗಾಃ।**
**ಜಜ್ವಲುಶ್ಚಾಗ್ನಯಶ್ಶಾಂತಾ ಜಾಯಮಾನೇ ಜನಾರ್ದನೇ॥ 6**

**ಮಂದಂ ಜಗರ್ಜುರ್ಜಲದಾಃ ಪುಷ್ಪವೃಷ್ಟಿಮುಚೋ ದ್ವಿಜ।**
**ಅರ್ಧರಾತ್ರೇಽಖಿಲಾಧಾರೇ ಜಾಯಮಾನೇ ಜನಾರ್ದನೇ॥ 7**

**ಫುಲ್ಲೇಂದೀವರಪತ್ರಾಭಂ ಚತುರ್ಬಾಹುಮುದೀಕ್ಷ್ಯತಮ್।**
**ಶ್ರೀವತ್ಸವಕ್ಷಸಂ ಜಾತಂ ತುಷ್ಟಾವಾನಕದುಂದುಭಿಃ॥ 8**

**ಅಭಿಷ್ಟೂಯ ಚ ತಂ ವಾಗ್ಭಿಃ ಪ್ರಸನ್ನಾಭಿರ್ಮಹಾಮತಿಃ।**
**ವಿಜ್ಞಾಪಯಾಮಾಸ ತದಾ ಕಂಸಾದ್ಭೀತೋ ದ್ವಿಜೋತ್ತಮ॥ 9**

*ವಸುದೇವ ಉವಾಚ:*

**ಜಾತೋಽಸಿ ದೇವದೇವೇಶ ಶಂಖಚಕ್ರಗದಾಧರಮ್।**
**ದಿವ್ಯರೂಪಮಿದಂ ದೇವ ಪ್ರಸಾದೇನೋಪಸಂಹರ॥ 10**

---

ದಿಂದಲೇ ಮನೋಹರವಾದ ವಾದ್ಯವನ್ನು ನುಡಿಸಿದವು. ಗಂಧರ್ವರಾಜರು ಹಾಡಿದರು. ಅಪ್ಸರೆಯರು ಕುಣಿದರು. ದೇವತೆಗಳು ಅಂತರಿಕ್ಷದಲ್ಲಿ ನಿಂತು ಭೂಮಿಯ ಮೇಲೆ ಹೂಮಳೆಗರೆದರು. ಶಾಂತವಾಗಿದ್ದ ಯಜ್ಞಾಗ್ನಿಗಳು ಜನಾರ್ದನನು ಜನಿಸಿದಾಗ ಮತ್ತೆ ಜ್ವಲಿಸಿದವು! (5-6). ಮೈತ್ರೇಯ, ಅರ್ಧ ರಾತ್ರಿಯಲ್ಲಿ ಅಖಿಲಾಧಾರನಾದ ಜನಾರ್ದನನು ಜನಿಸಲಾಗಿ, ಮೋಡಗಳು ಹೂಮಳೆಗರೆಯುತ್ತ ಮೆಲ್ಲಗೆ ಗುಡುಗಿದವು. ಅರಳಿದ ಇಂದೀವರದ ದಳದಂತೆ ಕಾಂತಿಯುಳ್ಳವನೂ ಚತುರ್ಬಾಹುವೂ ವಕ್ಷಃಸ್ಥಳದಲ್ಲಿ ಶ್ರೀವತ್ಸಚಿಹ್ನೆಯನ್ನು ಧರಿಸಿದವನೂ ಆದ ಶಿಶುವನ್ನು ನೋಡಿ ಆನಕದುಂದುಭಿಯು (ವಸುದೇವನು) ಸ್ತೋತ್ರ ಮಾಡಿದನು (7-8). ಆ ಬುದ್ಧಿಶಾಲಿಯು ಪ್ರಸನ್ನ ವಚನಗಳಿಂದ ಸ್ತೋತ್ರ ಮಾಡಿದ ಮೇಲೆ, ಮೈತ್ರೇಯ, ಕಂಸನಿಂದ ಭೀತನಾಗಿ ಹೀಗೆಂದನು: "ಹೇ ದೇವದೇವೇಶ್ವರ, ಪ್ರಕಟನಾಗಿದ್ದೀಯೆ. ಆದರೆ ಶಂಕಚಕ್ರಗದಾಧಾರಿಯಾದ ಈ ದಿವ್ಯರೂಪವನ್ನು, ನನ್ನ ಮೇಲೆ ಅನುಗ್ರಹಿಸಿ, ಉಪಸಂಹರಿಸು (9-10). ಸ್ವಾಮಿ,

**ಅದ್ಯೈವ ದೇವ ಕಂಸೋऽಯಂ ಕುರುತೇ ಮಮ ಘಾತನಮ್।**
**ಅವತೀರ್ಣ ಇತಿ ಜ್ಞಾತ್ವಾ ತ್ವಮಸ್ಮಿನ್ ಮಮ ಮಂದಿರೇ॥ 11**

*ದೇವಕ್ಯುವಾಚ:*

**ಯೋऽನಂತರೂಪೋऽಖಿಲವಿಶ್ವರೂಪೋ**
**ಗರ್ಭೇऽಪಿ ಲೋಕಾನ್ವಪುಷಾ ಬಿಭರ್ತಿ।**
**ಪ್ರಸೀದತಾಮೇಷ ಸ ದೇವ ದೇವೋ**
**ಯೋ ಮಾಯಯಾವಿಷ್ಕೃತಬಾಲರೂಪಃ॥ 12**

**ಉಪಸಂಹರ ಸರ್ವಾತ್ಮನ್ ರೂಪಮೇತಚ್ಚತುರ್ಭುಜಮ್।**
**ಜಾನಾತು ಮಾವತಾರಂ ತೇ ಕಂಸೋऽಯಂ ದಿತಿಜನ್ಮಜಃ॥ 13**

*ಶ್ರೀ ಭಗವಾನುವಾಚ:*

**ಸ್ತುತೋऽಹಂ ಯತ್ತ್ವಯಾ ಪೂರ್ವಂ ಪುತ್ರಾರ್ಥಿನ್ಯಾ ತದದ್ಯ ತೇ।**
**ಸಫಲಂ ದೇವಿ ಸಂಜಾತಂ ಜಾತೋऽಹಂ ಯತ್ತವೋದರಾತ್॥ 14**

---

ನನ್ನ ಮನೆಯಲ್ಲಿ ನೀನು ಅವತರಿಸಿದೆಯೆಂಬುದನ್ನು ತಿಳಿದು ಕಂಸನು ಈ ದಿನವೇ ನನ್ನ ಸರ್ವನಾಶವನ್ನೂ ಮಾಡಿಬಿಡುವನು." ಆಗ ದೇವಕಿ ಹೀಗೆಂದಳು: "ಗರ್ಭದಲ್ಲಿದ್ದರೂ ಸಕಲಲೋಕಗಳನ್ನು ಯಾವಾತನು ಧರಿಸಿರುವನೋ ಅಂತಹ ಅನಂತನೂ ವಿಶ್ವರೂಪನೂ ಆದ ಸ್ವಾಮಿ ಪ್ರಸನ್ನನಾಗಲಿ. ಮಾಯೆಯಿಂದ ಬಾಲಕರೂಪವನ್ನು ಧರಿಸಿರುವ ದೇವದೇವನು ಪ್ರಸನ್ನನಾಗಲಿ (11-12). ಹೇ ಸರ್ವಾತ್ಮ, ಚತುರ್ಭುಜವುಳ್ಳ ಈ ರೂಪವನ್ನು ಉಪಸಂಹರಿಸು. ದೈತ್ಯಾಂಶದಿಂದ* ಜನಿಸಿದ ಕಂಸನು ನಿನ್ನ ಅವತಾರ ವೃತ್ತಾಂತವನ್ನು ಅರಿಯದಿರಲಿ" (13). ಆಗ ಭಗವಂತನು "ದೇವಿ, ನಾನು ಪುತ್ರನಾಗಬೇಕೆಂದು ಪುತ್ರಾರ್ಥಿನಿಯಾಗಿ ನೀನು ಪೂರ್ವಜನ್ಮದಲ್ಲಿ (ಅದಿತಿಯಾಗಿದ್ದಾಗ) ನನ್ನನ್ನು ಭಜಿಸಿದ್ದೆ. ಅದೀಗ ಸಫಲವಾಯಿತು. ನಿನ್ನ ಉದರದಿಂದ ನಾನು ಜನಿಸಿದೆನು!"

* ದ್ರುಮಿಲನೆಂಬ ದೈತ್ಯನು ಉಗ್ರಸೇನನ ರೂಪವನ್ನು ಧರಿಸಿ ಮೋಸದಿಂದ ಉಗ್ರಸೇನನ ಪತ್ನಿಯೊಡನೆ ಸಂಗಮಿಸಿದನು. ಅದರಿಂದ ಹುಟ್ಟಿದವನು ಕಂಸ (ನೋಡಿ: ಹರಿವಂಶ 2-28).

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾ ಭಗವಾಂಸ್ತೂಷ್ಣೀಂ ಬಭೂವ ಮುನಿಸತ್ತಮ।**
**ವಸುದೇವೋऽಪಿ ತಂ ರಾತ್ರಾವಾದಾಯ ಪ್ರಯಯೌ ಬಹಿಃ॥** 15

**ಮೋಹಿತಾಶ್ಚಾಭವಂಸ್ತತ್ರ ರಕ್ಷಿಣೋ ಯೋಗನಿದ್ರಯಾ।**
**ಮಥುರಾದ್ವಾರಪಾಲಾಶ್ಚ ವ್ರಜತ್ಯಾನಕದುಂದುಭೌ॥** 16

**ವರ್ಷತಾಂ ಜಲದಾನಾಂ ಚ ತೋಯಮತ್ಯುಲ್ಬಣಂ ನಿಶಿ।**
**ಸಂವೃತ್ಯಾನುಯಯೌ ಶೇಷಃ ಫಣೈರಾನಕದುಂದುಭಿಮ್॥** 17

**ಯಮುನಾಂ ಚಾತಿಗಂಭೀರಾಂ ನಾನಾವರ್ತಶತಾಕುಲಾಮ್।**
**ವಸುದೇವೋ ವಹನ್ವಿಷ್ಣುಂ ಜಾನುಮಾತ್ರವಹಾಂ ಯಯೌ॥** 18

**ಕಂಸಸ್ಯ ಕರದಾನಾಯ ತತ್ರೈವಾಭ್ಯಾಗತಾಂಸ್ತಟೇ।**
**ನಂದಾದೀನ್ ಗೋಪವೃದ್ಧಾಂಶ್ಚ ಯಮುನಾಯಾ ದದರ್ಶ ಸಃ॥** 19

---

ಎಂದನು (14). ಮೈತ್ರೇಯ, ಹೀಗೆ ನುಡಿದು ಭಗವಂತನು ಸುಮ್ಮನಾದನು. (ತನ್ನ ದಿವ್ಯರೂಪವನ್ನು ಉಪಸಂಹರಿಸಿದನು). ವಸುದೇವನಾದರೋ ಆ ಮಗುವನ್ನೆತ್ತಿಕೊಂಡು ರಾತ್ರಿಯಲ್ಲಿಯೇ ಹೊರಗೆ ಹೊರಟನು. ವಸುದೇವನು ಹೋಗುವಾಗ ಬಂದೀಖಾನೆಯ ಕಾವಲುಗಾರರೂ ಮಥುರಾನಗರದ ದ್ವಾರಪಾಲಕರೂ ಸಹ ಯೋಗನಿದ್ರೆಯಿಂದ ಮೋಹಿತರಾಗಿ ನಿದ್ರಾವಶರಾದರು (15-16). ಆ ರಾತ್ರಿ ಮೋಡಗಳು ಉಲ್ಬಣವಾಗಿ ಮಳೆಗರೆಯುತ್ತಿರಲು, ಆದಿಶೇಷನು ತನ್ನ ಹೆಡೆಗಳನ್ನು ಬಿಚ್ಚಿ ವಸುದೇವನ ಮೇಲೆ ಹಿಡಿದು ನೀರನ್ನು ತಡೆಯುತ್ತ ಹಿಂಬಾಲಿಸಿದನು (17). ಬಹಳ ಆಳವಾಗಿಯೂ ನಾನಾ ಬಗೆಯ ನೂರಾರು ಸುಳಿಗಳಿಂದ ಸಂಕುಲವಾಗಿಯೂ ಇದ್ದ ಯಮುನಾ ನದಿಯು, ವಿಷ್ಣುವನ್ನೆತ್ತಿಕೊಂಡಿದ್ದ ವಸುದೇವನಿಗೆ ಮೊಳಕಾಲು ಮಟ್ಟದವರೆಗೆ ಬರಲಾಗಿ, ಆತನು ಅದನ್ನು ದಾಟಿ ಹೋದನು (18). ಆಗ ಕಂಸನಿಗೆ ಕಪ್ಪವನ್ನು ಕೊಡುವುದಕ್ಕಾಗಿ ಬಂದಿದ್ದ ನಂದನೇ ಮೊದಲಾದ ಗೋಪವೃದ್ಧರನ್ನು ಯಮುನಾ ತೀರದಲ್ಲಿ ಆತನು ಕಂಡನು, (ತಾನು ಮಾತ್ರ ಅವರಿಗೆ ಕಾಣಿಸಿಕೊಳ್ಳಲಿಲ್ಲ) ಅದೇ ಸಮಯದಲ್ಲಿ, ಮೈತ್ರೇಯ, ಯೋಗನಿದ್ರೆಯಿಂದ ಮೋಹಿತಳಾದ ಯಶೋದೆಯೂ

**ತಸ್ಮಿನ್ಕಾಲೇ ಯಶೋದಾಽಪಿ ಮೋಹಿತಾ ಯೋಗನಿದ್ರಯಾ।**
**ತಾಮೇವ ಕನ್ಯಾಂ ಮೈತ್ರೇಯ ಪ್ರಸೂತಾ ಮೋಹಿತೇ ಜನೇ॥** 20

**ವಸುದೇವೋಽಪಿ ವಿನ್ಯಸ್ಯ ಬಾಲಮಾದಾಯ ದಾರಿಕಾಮ್।**
**ಯಶೋದಾಶಯನಾತ್ತೂರ್ಣಮಾಜಗಾಮಾಮಿತದ್ಯುತಿಃ॥** 21

**ದದೃಶೇ ಚ ಪ್ರಬುದ್ಧಾ ಸಾ ಯಶೋದಾ ಜಾತಮಾತ್ಮಜಮ್।**
**ನೀಲೋತ್ಪಲದಲಶ್ಯಾಮಂ ತತೋಽತ್ಯರ್ಥಂ ಮುದಂ ಯಯೌ॥** 22

**ಆದಾಯ ವಸುದೇವೋಽಪಿ ದಾರಿಕಾಂ ನಿಜಮಂದಿರೇ।**
**ದೇವಕೀಶಯನೇ ನ್ಯಸ್ಯ ಯಥಾಪೂರ್ವಮತಿಷ್ಠತ॥** 23

**ತತೋ ಬಾಲಧ್ವನಿಂ ಶ್ರುತ್ವಾ ರಕ್ಷಿಣಸ್ಸಹಸೋತ್ಥಿತಾಃ।**
**ಕಂಸಾಯಾವೇದಯಾಮಾಸುರ್ದೇವಕೀಪ್ರಸವಂ ದ್ವಿಜ॥** 24

**ಕಂಸಸ್ತೂರ್ಣಮುಪೇತ್ಯೈನಾಂ ತತೋ ಜಗ್ರಾಹ ಬಾಲಿಕಾಮ್।**
**ಮುಂಚಮುಂಚೇತಿ ದೇವಕ್ಯಾ ಸನ್ನಕಂಠ್ಯಾ ನಿವಾರಿತಃ॥** 25

---

ಸಹ, ಸುತ್ತ ಮುತ್ತಲಿನ ಜನರು ಮೋಹಗೊಂಡು ನಿದ್ರಾವಶರಾಗಿರಲಾಗಿ, ಅದೇ ಯೋಗನಿದ್ರೆಯೆಂಬ ಕನ್ಯೆಯನ್ನು ಪ್ರಸವಿಸಿದಳು (19-20). ತೇಜಸ್ವಿಯಾದ ವಸುದೇವನು ಅಲ್ಲಿಗೆ ಹೋಗಿ ಈ ಬಾಲಕನನ್ನು ಅಲ್ಲಿ ಮಲಗಿಸಿ, ಯಶೋದೆಯ ಹಾಸಿಗೆಯಿಂದ ಆ ಹೆಣ್ಣುಮಗುವನ್ನೆತ್ತಿಕೊಂಡು ಬೇಗಬೇಗನೆ ಹೊರಟು ಬಂದನು. ಎಚ್ಚರವಾದ ಮೇಲೆ ಯಶೋದೆಯು ನೀಲೋತ್ಪಲದಲಶ್ಯಾಮನಾದ ಪುತ್ರನು ಹುಟ್ಟಿರುವುದನ್ನು ಕಂಡು ಬಹಳ ಸಂತುಷ್ಟಳಾದಳು (21-22). ಇತ್ತ ವಸುದೇವನು ಆ ಹೆಣ್ಣು ಮಗುವನ್ನು ತನ್ನ ವಾಸಗೃಹಕ್ಕೆ ಕರೆತಂದು ದೇವಕಿಯ ಹಾಸಿಗೆಯಲ್ಲಿ ಮಲಗಿಸಿ ಮೊದಲಿನಂತೆ ಇದ್ದು ಬಿಟ್ಟನು. ಅನಂತರ, ಮೈತ್ರೇಯ, ಶಿಶುವಿನ ರೋದನ ಧ್ವನಿಯನ್ನು ಕೇಳಿ ಕಾವಲುಗಾರರಿಗೆ ಥಟ್ಟನೆ ಎಚ್ಚರ ವಾಯಿತು! ದೇವಕಿಯು ಪ್ರಸವಿಸಿದಳೆಂಬುದನ್ನು ಅವರು ಕಂಸನಿಗೆ ಅರಿಕೆ ಮಾಡಿದರು (23-24). ಒಡನೆಯೇ ಕಂಸನು ಬಂದು ಆ ಬಾಲಿಕೆಯನ್ನು ಹಿಡಿದೆತ್ತಿದನು. ದೇವಕಿಯು ಗದ್ಗದ ಕಂಠದಿಂದ 'ಬಿಡು, ಬಿಡು' ಎಂದು

**ಚಿಕ್ಷೇಪ ಚ ಶಿಲಾಪೃಷ್ಠೇ ಸಾ ಕ್ಷಿಪ್ತಾ ವಿಯತಿ ಸ್ಥಿತಾ।**
**ಅವಾಪ ರೂಪಂ ಸುಮಹತ್ಸಾಯುಧಾಷ್ಟಮಹಾಭುಜಮ್॥** 26

**ಪ್ರಜಹಾಸ ತಥೈವೋಚ್ಚೈಃ ಕಂಸಂ ಚ ರುಷಿತಾಽಬ್ರವೀತ್।**
**ಕಿಂ ಮಯಾ ಕ್ಷಿಪ್ತಯಾ ಕಂಸ ಜಾತೋ ಯಸ್ತ್ವಾಂ ವಧಿಷ್ಯತಿ॥** 27

**ಸರ್ವಸ್ವಭೂತೋ ದೇವಾನಾಮಾಸೀನ್ಮೃತ್ಯುಃ ಪುರಾ ಸತೇ।**
**ತದೇತತ್ಸಂಪ್ರಧಾರ್ಯಾಶು ಕ್ರಿಯತಾಂ ಹಿತಮಾತ್ಮನಃ॥** 28

**ಇತ್ಯುಕ್ತ್ವಾ ಪ್ರಯಯೌ ದೇವೀ ದಿವ್ಯಸ್ರಗ್ಗಂಧಭೂಷಣಾ।**
**ಪಶ್ಯತೋ ಭೋಜರಾಜಸ್ಯ ಸ್ತುತಾ ಸಿದ್ಧೈರ್ವಿಹಾಯಸಾ॥** 29

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ತೃತೀಯೋಽಧ್ಯಾಯಃ

---

ತಡೆದರೂ ಕೇಳದೆ ಆ ಮಗುವನ್ನು ಕಲ್ಲು ಬಂಡೆಯ ಮೇಲೆ ಅಪ್ಪಳಿಸಿದನು. ಅಪ್ಪರಲ್ಲಿ ಆ ಬಾಲಿಕೆ ಕೈಯಿಂದ ಜಾರಿ ಆಕಾಶವನ್ನಡರಿ ನಿಂತಳು. ಅಲ್ಲದೆ ಆಯುಧಗಳನ್ನು ಹಿಡಿದ ಅಷ್ಟಮಹಾಭುಜಗಳಿಂದ ಕೂಡಿದ ಬೃಹದಾಕಾರವನ್ನು ತಾಳಿದಳು (25-26). ಅವಳು ಅಟ್ಟಹಾಸದಿಂದ ಗಟ್ಟಿಯಾಗಿ ನಕ್ಕಳಲ್ಲದೆ, ಕುಪಿತಳಾಗಿ ಕಂಸನನ್ನು ಕುರಿತು "ಎಲೈ ಕಂಸ, ನನ್ನನ್ನು ಅಪ್ಪಳಿಸಿದರೆ ಏನು ಪ್ರಯೋಜನ? ನಿನ್ನನ್ನು ಯಾವನು ವಧಿಸುವನೋ ಅವನು (ಮೊದಲೇ) ಜನಿಸಿಬಿಟ್ಟಿದ್ದಾನೆ! (27). ದೇವತೆಗಳಿಗೆ ಸರ್ವಸ್ವವಾಗಿರುವ ಆ ಸ್ವಾಮಿಯೇ ನಿನಗೆ ಪೂರ್ವಜನ್ಮದಲ್ಲಿ (ಕಾಲನೇಮಿಯಾಗಿದ್ದಾಗ) ಮೃತ್ಯುವಾಗಿದ್ದನು. ಆದ್ದರಿಂದ ಇದೆಲ್ಲವನ್ನೂ ಪರ್ಯಾಲೋಚಿಸಿ ಶೀಘ್ರವಾಗಿ ನಿನಗೆ ಹಿತವೇನೆಂಬುದನ್ನು ಆಚರಿಸು" ಎಂದು ನುಡಿದಳು (28). ಹೀಗೆ ನುಡಿದು ದಿವ್ಯ ಗಂಧಮಾಲೆಗಳಿಂದ ಭೂಷಿತಳಾದ ಆ ದೇವಿಯು, ಕಂಸನು ನೋಡನೋಡುತ್ತಿರುವಾಗಲೇ, ಸಿದ್ಧಪುರುಷರಿಂದ ಸ್ತುತಿಸಲ್ಪಡುತ್ತ ಆಕಾಶ ಮಾರ್ಗದಲ್ಲಿ ಹೊರಟುಹೋದಳು (29).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಮೂರನೆಯ ಅಧ್ಯಾಯ ಮುಗಿಯಿತು.



## ಚತುರ್ಥೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಕಂಸಸ್ತದೋದ್ವಿಗ್ನಮನಾಃ ಪ್ರಾಹ ಸರ್ವಾನ್ಮಹಾಸುರಾನ್।**
**ಪ್ರಲಂಬಕೇಶಿಪ್ರಮುಖಾನಾಹೂಯಾಸುರಪುಂಗವಾನ್॥** 1

*ಕಂಸ ಉವಾಚ:*

**ಹೇ ಪ್ರಲಂಬ ಮಹಾಬಾಹೋ ಕೇಶಿನ್ ಧೇನುಕ ಪೂತನೇ।**
**ಅರಿಷ್ಟಾದ್ಯಾಸ್ತಥೈವಾನ್ಯೇ ಶ್ರೂಯತಾಂ ವಚನಂ ಮಮ॥** 2

**ಮಾಂ ಹಂತುಮಮರ್ರೈರ್ಯತ್ನಃ ಕೃತಃ ಕಿಲ ದುರಾತ್ಮಭಿಃ।**
**ಮದ್ವೀರ್ಯತಾಪಿತಾನ್ವೀರೋ ನ ತ್ವೇತಾನ್ಗಣಯಾಮ್ಯಹಮ್॥** 3

---

## ಅಧ್ಯಾಯ 4

ಕಂಸನು ತನ್ನ ಪರಾಕ್ರಮವನ್ನು ವರ್ಣಿಸಿಕೊಳ್ಳುವುದು. ಯಾವುದಾದರೂ ಬಾಲಕನಲ್ಲಿ ಬಲಾತಿಶಯವನ್ನು ಕಂಡರೆ, ಆತನನ್ನು ಕೊಲ್ಲಬೇಕೆಂದು ಪ್ರಲಂಬನೇ ಮೊದಲಾದ ಅಸುರರಿಗೆ ಆಜ್ಞಾಪಿಸುವುದು. ಕಾರಾಗೃಹದಿಂದ ವಸುದೇವ ದೇವಕಿಯರ ಬಿಡುಗಡೆ.

ಪರಾಶರಮುನಿಗಳು ಹೇಳಿದರು: ಅನಂತರ ಕಂಸನು ಉದ್ವಿಗ್ನಚಿತ್ತನಾಗಿ ಪ್ರಲಂಬ, ಕೇಶಿ—ಮೊದಲಾದ ಮುಖ್ಯರಾದ ಅಸುರರನ್ನು ಕುರಿತು ಹೀಗೆಂದನು: "ಹೇ ಪ್ರಲಂಬ, ಮಹಾಬಾಹುವಾದ ಕೇಶಿ, ಧೇನುಕ, ಪೂತನೆ, ಅರಿಷ್ಟ—ಮೊದಲಾದ ವೀರರೆ ನನ್ನ ಮಾತನ್ನು ಆಲಿಸಿರಿ (1-2). ದುರಾತ್ಮರಾದ ದೇವತೆಗಳು ನನ್ನನ್ನು ಕೊಲ್ಲಲು ಪ್ರಯತ್ನಿಸಿದ್ದಾರೆ. ನನ್ನ ಪರಾಕ್ರಮದಿಂದ ಪೀಡಿತರಾದವರು ಇವರು. ವೀರನಾದ ನಾನು ಇವರನ್ನು ಲೆಕ್ಕಿಸುವುದಿಲ್ಲ. ಬಲಹೀನನಾದ ಇಂದ್ರನಿಂದ ಏನಾದೀತು? ಒಂಟಿಯಾಗಿ ಅಲೆದಾಡುವ ಹರನಿಂದಾಗುವುದೇನು? ನಾವು ಎಚ್ಚರಗೆಟ್ಟಿದ್ದಾಗ ಛಿದ್ರಾನ್ವೇಷಣೆ ಮಾಡುತ್ತ

**ಕಿಮಿಂದ್ರೇಣಾಲ್ಪವೀರ್ಯೇಣ ಕಿಂ ಹರೇಣೈಕಚಾರಿಣಾ।**
**ಹರಿಣಾ ವಾಪಿ ಕಿಂ ಸಾಧ್ಯಂ ಛಿದ್ರೇಷ್ವಸುರಘಾತಿನಾ॥** 4

**ಕಿಮಾದಿತ್ಯೈಃ ಕಿಂ ವಸುಭಿರಲ್ಪವೀರ್ಯೈಃ ಕಿಮಗ್ನಿಭಿಃ।**
**ಕಿಂ ವಾಽನ್ಯೈರಮರೈಃ ಸರ್ವೈರ್ಮದ್ಬಾಹುಬಲನಿರ್ಜಿತೈಃ॥** 5

**ಕಿಂ ನ ದೃಷ್ಟೋಽಮರಪತಿರ್ಮಯಾ ಸಂಯುಗಮೇತ್ಯ ಸಃ।**
**ಪೃಷ್ಠೇನೈವ ವಹನ್ಬಾಣಾನಪಾಗಚ್ಛನ್ನ ವಕ್ಷಸಾ॥** 6

**ಮದ್ರಾಷ್ಟ್ರೇ ವಾರಿತಾ ವೃಷ್ಟಿರ್ಯದಾ ಶಕ್ರೇಣ ಕಿಂ ತದಾ।**
**ಮದ್ಬಾಣಭಿನ್ನೈರ್ಜಲದೈರ್ನಾಪೋ ಮುಕ್ತಾ ಯಥೇಪ್ಸಿತಾಃ॥** 7

**ಕಿಮುರ್ವ್ಯಾಮವನೀಪಾಲಾ ಮದ್ಬಾಹುಬಲಭೀರವಃ।**
**ನ ಸರ್ವೇ ಸನ್ನತಿಂ ಯಾತಾ ಜರಾಸಂಧಮೃತೇ ಗುರುಮ್॥** 8

**ಅಮರೇಷು ಮಮಾವಜ್ಞಾ ಜಾಯತೇ ದೈತ್ಯಪುಂಗವಾಃ।**
**ಹಾಸ್ಯಂ ಮೇ ಜಾಯತೇ ವೀರಾಸ್ತೇಷು ಯತ್ನಪರೇಷ್ವಪಿ॥** 9

---

ಅಸುರರನ್ನು ಸಂಹರಿಸುವ ವಿಷ್ಣುವಿನಿಂದ ಏನು ಸಾಧ್ಯವಾದೀತು? (3-4). ಆದಿತ್ಯರಾಗಲಿ ವಸುಗಳಾಗಲಿ ಅಗ್ನಿಗಳಾಗಲಿ ಅಥವಾ ಉಳಿದ ದೇವತೆಗಳಾಗಲಿ ಏನು ಮಾಡಿಯಾರು? ಅಲ್ಪವೀರ್ಯರಾದ ಇವರೆಲ್ಲರೂ ನನ್ನ ಬಾಹುಬಲಕ್ಕೆ ಸೋತು ಓಡಿಹೋದವರು(5). ದೇವೇಂದ್ರನನ್ನು ನಾನು ಕಂಡಿಲ್ಲವೆ? ನನ್ನೊಡನೆ ಯುದ್ಧ ಮಾಡುವುದಕ್ಕೆ ಬಂದು ಬೆನ್ನಿಗೇ ಬಾಣಗಳನ್ನು ಬಿಗಿಸಿಕೊಳ್ಳುತ್ತ ಓಡಿ ಹೋದವನು! ಎದೆಗೆ ಬಾಣಗಳನ್ನು ಹೊಡೆಸಿಕೊಳ್ಳಲಿಲ್ಲ! ನನ್ನ ರಾಜ್ಯದಲ್ಲಿ ಮಳೆ ಸುರಿಸಬಾರದೆಂದು ಇಂದ್ರನು ಕಟ್ಟು ಮಾಡಿದ್ದ. ಆದರೇನು? ನನ್ನ ಶರಜಾಲ ದಿಂದ ವಿಚ್ಛಿನ್ನವಾದ ಮೇಘಗಳು ಬೇಕಾದಷ್ಟು ಮಳೆಯನ್ನು ಸುರಿಸಿಬಿಟ್ಟವು! (6-7). ಈ ಪೃಥ್ವಿಯಲ್ಲಿರುವ ಭೂಪಾಲರೆಲ್ಲರೂ ನನ್ನ ಬಾಹುಬಲಕ್ಕೆ ಅಂಜಿ ನನಗೆ ಶರಣಾಗಲಿಲ್ಲವೇ? (ಮಾವನಾದ್ದರಿಂದ) ನನ್ನ ಗೌರವಕ್ಕೆ ಪಾತ್ರನಾದ ಜರಾಸಂಧನನ್ನು ಬಿಟ್ಟು ಸರ್ವರೂ ಶರಣಾದರು. ಎಲೈ ದೈತ್ಯಪುಂಗವರೆ, ದೇವತೆಗಳ ವಿಷಯದಲ್ಲಿ ನನಗೆ ಅಸಡ್ಡೆಯೇ ಸರಿ. ಎಲೈ ವೀರರೆ, ಅವರೀಗ (ನನ್ನ ಸಂಹಾರಕ್ಕೆ) ಯತ್ನಿಸುತ್ತಿದ್ದಾರೆಂಬುದನ್ನು ಕೇಳಿ ನನಗೆ ನಗು ಬರುತ್ತದೆ!

**ತಥಾಪಿ ಖಲು ದುಷ್ಟಾನಾಂ ತೇಷಾಮಪ್ಯಧಿಕಂ ಮಯಾ।**
**ಅಪಕಾರಾಯ ದೈತ್ಯೇಂದ್ರಾ ಯತನೀಯಂ ದುರಾತ್ಮನಾಮ್॥ 10**

**ತದ್ಯೇ ಯಶಸ್ವಿನಃ ಕೇಚಿತ್ಪೃಥಿವ್ಯಾಂ ಯೇ ಚ ಯಾಜಕಾಃ।**
**ಕಾರ್ಯೋ ದೇವಾಪಕಾರಾಯ ತೇಷಾಂ ಸರ್ವಾತ್ಮನಾ ವಧಃ॥ 11**

**ಉತ್ಪನ್ನಶ್ಚಾಪಿ ಮೇ ಮೃತ್ಯುರ್ಭೂತಪೂರ್ವಸ್ಯ ವೈ ಕಿಲ।**
**ಇತ್ಯೇತದ್ದಾರಿಕಾ ಪ್ರಾಹ ದೇವಕೀಗರ್ಭಸಂಭವಾ॥ 12**

**ತಸ್ಮಾದ್ಬಾಲೇಷು ಚ ಪರೋ ಯತ್ನಃ ಕಾರ್ಯೋ ಮಹೀತಲೇ।**
**ಯತ್ರೋದ್ರಿಕ್ತಂ ಬಲಂ ಬಾಲೇ ಸ ಹಂತವ್ಯಃ ಪ್ರಯತ್ನತಃ॥ 13**

**ಇತ್ಯಾಜ್ಞಾಪ್ಯಾಸುರಾನ್ಕಂಸಃ ಪ್ರವಿಶ್ಯಾಶುಗ್ಗೃಹಂ ತತಃ।**
**ಮುಮೋಚ ವಸುದೇವಂ ಚ ದೇವಕೀಂ ಚ ನಿರೋಧತಃ॥ 14**

---

(8-9).ಆದರೂ ಎಲೈ ದೈತ್ಯಶ್ರೇಷ್ಠರೇ, ದುರ್ಜನರೂ ದುರಾತ್ಮರೂ ಆದ ಅವರಿಗೆ ಇನ್ನೂ ಹೆಚ್ಚಾದ ಪೀಡೆಯನ್ನು ಕೊಡಲು ಯತ್ನಿಸಬೇಕು. ಆದ್ದರಿಂದ ಈ ಪೃಥ್ವಿಯಲ್ಲಿ ಯಾರು ಯಾರು (ದೇವತೆಗಳಿಗಾಗಿ) ದಾನ ಮಾಡುತ್ತ ಕೀರ್ತಿವಂತರಾಗಿದ್ದಾರೋ ಯಾರು ಯಾರು ಯಜ್ಞಗಳನ್ನಾಚರಿಸುತ್ತಾರೋ ಅವರೆಲ್ಲರನ್ನೂ ದೇವತೆಗಳಿಗೆ ಅಪಕಾರ ಮಾಡುವ ಉದ್ದೇಶದಿಂದ ಕೊಂದುಹಾಕಬೇಕು! (10-11). ದೇವಕಿಯ ಗರ್ಭದಿಂದ ಜನಿಸಿದ ಆ ಬಾಲಿಕೆಯು 'ನನಗೆ ಮೃತ್ಯುವಾದವನು ಆಗಲೇ ಹುಟ್ಟಿಬಿಟ್ಟಿದ್ದಾನೆ' ಎಂದು ಹೇಳಿದ್ದಾಳೆ. ಆದ್ದರಿಂದ ಈ ಭೂತಳದಲ್ಲಿರುವ ಪ್ರತಿಯೊಬ್ಬ ಬಾಲಕರ ವಿಷಯವಾಗಿಯೂ ಬಹಳ ಎಚ್ಚರಿಕೆಯಿಂದ ವರ್ತಿಸತಕ್ಕದ್ದು. ಯಾವ ಬಾಲಕನಲ್ಲಾದರೂ ವಿಲಕ್ಷಣವಾದ ಬಲಾತಿಶಯವು ಕಂಡಲ್ಲಿ ತಪ್ಪದೆ ಅವನನ್ನು ಕೊಂದುಹಾಕಿರಿ" ಎಂದು ಆಜ್ಞಾಪಿಸಿದನು (12-13). ಹೀಗೆ ಆಜ್ಞಾಪಿಸಿ ಕಂಸನು ಕಾರಾಗೃಹದೊಳಗೆ ಹೋಗಿ ವಸುದೇವನನ್ನೂ ದೇವಕಿಯನ್ನೂ ಸೆರೆಯಿಂದ ಬಿಡಿಸಿದನು. ಅನಂತರ ಅವರನ್ನು ಕುರಿತು "ವ್ಯರ್ಥವಾಗಿ ನಿಮ್ಮ ಮಕ್ಕಳನ್ನು ಘಾತಿಸಿದೆನು. ನನ್ನ

*ಕಂಸ ಉವಾಚ:*

**ಯುವಯೋರ್ಘಾತಿತಾ ಗರ್ಭಾ ವೃಥೈವೈತೇ ಮಯಾಧುನಾ।**
**ಕೋಽಪ್ಯನ್ಯ ಏವ ನಾಶಾಯ ಬಾಲೋ ಮಮ ಸಮುದ್ಗತಃ॥** 15

**ತದಲಂ ಪರಿತಾಪೇನ ನೂನಂ ತದ್ಭಾವಿನೋ ಹಿ ತೇ।**
**ಅರ್ಭಕಾ ಯುವಯೋರ್ದೋಷಾಚ್ಚಾಯುಷೋ**
**ಯದ್ವಿಯೋಜಿತಾಃ॥** 16

*ಶ್ರೀಪರಾಶರ ಉವಾಚ:*

**ಇತ್ಯಾಶ್ವಾಸ್ಯ ವಿಮುಕ್ತ್ವಾ ಚ ಕಂಸಸ್ತೌ ಪರಿಶಂಕಿತಃ।**
**ಅಂತರ್ಗೃಹಂ ದ್ವಿಜಶ್ರೇಷ್ಠ ಪ್ರವಿವೇಶ ತತಃ ಸ್ವಕಮ್॥** 17

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಚತುರ್ಥೋಽಧ್ಯಾಯಃ

---

ನಾಶಕ್ಕಾಗಿ ಬೇರೆ ಯಾವನೋ ಒಬ್ಬ ಹುಡುಗನು ಹುಟ್ಟಿದ್ದಾನಂತೆ (14-15). ಇದಕ್ಕಾಗಿ ನೀವು ದುಃಖಿಸಬೇಡಿರಿ. ಆ ಶಿಶುಗಳಿಗೆ ಈ ರೀತಿಯಾದ ಪ್ರಾಪ್ತಿ ಇತ್ತು. ನಿಮ್ಮ ಪ್ರಾರಬ್ಧದೋಷದಿಂದ ಅವರ ಆಯುಸ್ಸು ಕೊನೆಗೊಂಡಿತು" ಎಂದು ಸಮಾಧಾನ ಹೇಳಿದನು. ಹೀಗೆ ಹೇಳಿ ಕಂಸನು ಅವರನ್ನು ಬಿಡುಗಡೆ ಮಾಡಿ, ಮೈತ್ರೇಯ, ಶಂಕಾಕುಲನಾಗಿಯೇ ತನ್ನ ಅಂತಃಪುರವನ್ನು ಪ್ರವೇಶಿಸಿದನು (16-17).

ಇಲ್ಲಿಗೆ ಶ್ರೀ ವಿಷ್ಣುಪುರಾಣದ ಪಂಚಮಾಂಶದಲ್ಲಿ
ನಾಲ್ಕನೆಯ ಅಧ್ಯಾಯ ಮುಗಿಯಿತು.



## ಪಂಚಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ವಿಮುಕ್ತೋ ವಸುದೇವೋಽಪಿ ನಂದಸ್ಯ ಶಕಟಂ ಗತಃ।**
**ಪ್ರಹೃಷ್ಟಂ ದೃಷ್ಟವಾನ್ನಂದಂ ಪುತ್ರೋ ಜಾತೋ ಮಮೇತಿ ವೈ॥** 1

**ವಸುದೇವೋಽಪಿ ತಂ ಪ್ರಾಹ ದಿಷ್ಟ್ಯಾ ದಿಷ್ಟ್ಯೇತಿ ಸಾದರಮ್।**
**ವಾರ್ಧಕೇಽಪಿ ಸಮುತ್ಪನ್ನಸ್ತನಯೋಽಯಂ ತವಾಧುನಾ॥** 2

**ದತ್ತೋ ಹಿ ವಾರ್ಷಿಕಸ್ಸರ್ವೋ ಭವದ್ಭಿರ್ನೃಪತೇಃ ಕರಃ।**
**ಯದರ್ಥಮಾಗತಾಸ್ತಸ್ಮಾನ್ನಾತ್ರ ಸ್ಥೇಯಂ ಮಹಾಧನೈಃ॥** 3

---

## ಅಧ್ಯಾಯ 5

ಶ್ರೀಕೃಷ್ಣನಿಂದ ಪೂತನೆಯ ವಧೆ. ನಂದಗೋಪನು ಮಗುವಿಗೆ ರಕ್ಷೆಯನ್ನಿಡುವುದು.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಸೆರೆಯಿಂದ ಬಿಡುಗಡೆ ಹೊಂದಿದ ವಸುದೇವನು ನಂದಗೋಪನ ಶಕಟವಿದ್ದ ಸ್ಥಳಕ್ಕೆ ಹೋಗಿ, ತನಗೆ ಪುತ್ರ ಸಂತಾನವಾಯಿತೆಂದು* ಆನಂದದಿಂದಿದ್ದ ನಂದಗೋಪನನ್ನು ಕಂಡನು (1). ವಸುದೇವನು ಬಹಳ ಸಂತೋಷದ ಸುದ್ದಿಯೆಂದು ಆದರದಿಂದ ನಂದನನ್ನು ಅಭಿನಂದಿಸಿ ಹೀಗೆಂದನು: "ಕಡೆಗೆ ವಾರ್ಧಕದಲ್ಲಾದರೂ ನಿನಗೆ ಪುತ್ರ ಸಂತಾನವಾಯಿತಲ್ಲವೇ? ನೀವೆಲ್ಲರೂ ಈ ವರ್ಷದ ಕಪ್ಪವನ್ನು ರಾಜನಿಗೆ ಸಲ್ಲಿಸಿದ್ದಾಯಿತಷ್ಟೆ. ನೀವು ಯಾವ ಉದ್ದೇಶಕ್ಕಾಗಿ ಬಂದಿರೋ ಅದು ನೆರವೇರಿತು. ಇಲ್ಲಿ ಧನವಂತರು ಹೆಚ್ಚು ಕಾಲ ಇರುವುದು ಸರಿಯಲ್ಲ! (2-3).

---

* ಕಂಸನಿಗೆ ಕಪ್ಪವನ್ನು ಕೊಡುವುದಕ್ಕಾಗಿ ಗಾಡಿಗಳಲ್ಲಿ ಸರಕುಗಳನ್ನು ತುಂಬಿಕೊಂಡು ನಂದಗೋಪಾದಿಗಳು ಮಧುರೆಗೆ ಬಂದಿದ್ದರು. ಇದರ ಸೂಚನೆ ಮೂರನೆಯ ಅಧ್ಯಾಯದ 19 ನೆಯ ಶ್ಲೋಕದಲ್ಲಿ ಹಿಂದೆ ಬಂದಿದೆ. ಮಧುರೆಗೆ ಬಂದ ಮೇಲೆ, ಯಶೋದೆಯು ಗಂಡು ಮಗುವನ್ನು ಪ್ರಸವಿಸಿದಳೆಂಬ ಸುದ್ದಿ ನಂದನಿಗೆ ತಲುಪಿತೆಂದು ಕಲ್ಪಿಸಿಕೊಳ್ಳಬೇಕು. ನಂದನು ಮಧುರೆಗೆ ಬಂದದ್ದು ವಸುದೇವನಿಗೆ ತಿಳಿದಿತ್ತು. ಕಂಸನಿಂದ ಮಗುವಿಗೆ ತೊಂದರೆ ಯಾದೀತೆಂದು ಶಂಕಿಸಿ, ಆತನು ನಂದನ ಬಳಿಗೆ ಬಂದಿದ್ದಾನೆ.

**ಯದರ್ಥಮಾಗತಾಃ ಕಾರ್ಯಂ ತನ್ನಿಷ್ಪನ್ನಂ ಕಿಮಾಸ್ಯತೇ।**
**ಭವದ್ಭಿರ್ಗಮ್ಯತಾಂ ನಂದ ತಚ್ಛೀಘ್ರಂ ನಿಜಗೋಕುಲಮ್॥ 4**

**ಮಮಾಪಿ ಬಾಲಕಸ್ತತ್ರ ರೋಹಿಣೀಪ್ರಭವೋ ಹಿ ಯಃ।**
**ಸ ರಕ್ಷಣೀಯೋ ಭವತಾ ಯಥಾಽಯಂ ತನಯೋ ನಿಜಃ॥ 5**

**ಇತ್ಯುಕ್ತಾಃ ಪ್ರಯಯುರ್ಗೋಪಾ ನಂದಗೋಪಪುರೋಗಮಾಃ।**
**ಶಕಟಾರೋಪಿತೈರ್ಭಾಂಡೈಃ ಕರಂ ದತ್ತ್ವಾ ಮಹಾಬಲಾಃ॥ 6**

**ವಸತಾಂ ಗೋಕುಲೇ ತೇಷಾಂ ಪೂತನಾ ಬಾಲಘಾತಿನೀ।**
**ಸುಪ್ತಂ ಕೃಷ್ಣಮುಪಾದಾಯ ರಾತ್ರೌ ತಸ್ಮೈ ಸ್ತನಂ ದದೌ॥ 7**

**ಯಸ್ಮೈ ಯಸ್ಮೈ ಸ್ತನಂ ರಾತ್ರೌ ಪೂತನಾ ಸಂಪ್ರಯಚ್ಛತಿ।**
**ತಸ್ಯ ತಸ್ಯ ಕ್ಷಣೇನಾಂಗಂ ಬಾಲಕಸ್ಯೋಪಹನ್ಯತೇ॥ 8**

**ಕೃಷ್ಣಸ್ತು ತತ್‌ಸ್ತನಂ ಗಾಢಂ ಕರಾಭ್ಯಾಮತಿಪೀಡಿತಮ್।**
**ಗೃಹೀತ್ವಾ ಪ್ರಾಣಸಹಿತಂ ಪಪೌ ಕ್ರೋಧಸಮನ್ವಿತಃ॥ 9**

---

ನಿಮ್ಮ ಕೆಲಸವು ಮುಗಿದ ಮೇಲೆ ಇಲ್ಲಿ ಏಕೆ ಇದ್ದೀರಿ? ನಂದ, ಬೇಗನೆ ನಿಮ್ಮ ಗೋಕುಲಕ್ಕೆ ಹೊರಟು ಹೋಗಿರಿ. ರೋಹಿಣಿಯ ಗರ್ಭದಲ್ಲಿ ಜನಿಸಿದ ನನ್ನ ಪುತ್ರನೂ ಇದ್ದಾನಷ್ಟೆ! ಆತನನ್ನು ನೀನು, ನಂದ, ನಿನ್ನ ಮಗನಂತೆ ಪಾಲಿಸಬೇಕು" ಎಂದನು (4-5). ವಸುದೇವನು ಈ ಪ್ರಕಾರ ಹೇಳಲಾಗಿ ಬಲಾಢ್ಯರಾದ ನಂದಾದಿಗೋಪಾಲರು ಬಂಡಿಗಳಲ್ಲಿ ಹೇರಿದ್ದ ದವಸಗಳಿಂದ ರಾಜನಿಗೆ ಕಪ್ಪವನ್ನು ಸಲ್ಲಿಸಿ ಗೋಕುಲಕ್ಕೆ ಹೊರಟುಹೋದರು. ಅವರು ಗೋಕುಲದಲ್ಲಿ ವಾಸವಾಗಿರಲಾಗಿ ಬಾಲಘಾತಿನಿಯಾದ ಪೂತನೆಯು ಒಂದು ರಾತ್ರಿ ಬಂದು ಮಲಗಿದ್ದ ಕೃಷ್ಣನನ್ನೆತ್ತಿಕೊಂಡು ಅವನಿಗೆ ಸ್ತನ್ಯಪಾನವನ್ನಿತ್ತಳು (6-7). ಆ ರಾತ್ರಿಯಲ್ಲಿ ಯಾವ ಯಾವ ಮಗುವಿಗೆ ಪೂತನೆಯು ಸ್ತನ್ಯಪಾನ ಮಾಡಿಸುತ್ತ ಹೋಗಿದ್ದಳೋ ಆ ಮಗು ಆ ಕ್ಷಣದಲ್ಲಿ ಶರೀರವನ್ನು ಬಿಡುತ್ತಿತ್ತು. ಕ್ರೋಧಾಕುಲ ನಾದ ಕೃಷ್ಣನಾದರೋ ಅವಳ ಮೊಲೆಯನ್ನು ಎರಡು ಕೈಗಳಿಂದ ಗಟ್ಟಿಯಾಗಿ ಹಿಸುಕಿ ಅವಳ ಪ್ರಾಣವನ್ನೇ ಹೀರಿಬಿಟ್ಟನು (8-9). ಪೂತನೆಯು ಗಟ್ಟಿಯಾಗಿ

**ಸಾತಿಮುಕ್ತಮಹಾರಾವಾ ವಿಚ್ಛಿನ್ನಸ್ನಾಯುಬಂಧನಾ।**
**ಪಪಾತ ಪೂತನಾ ಭೂಮೌ ಮ್ರಿಯಮಾಣಾತಿಭೀಷಣಾ॥ 10**

**ತನ್ನಾದಶ್ರುತಿಸಂತ್ರಸ್ತಾಃ ಪ್ರಬುದ್ಧಾಸ್ತೇ ವ್ರಜೌಕಸಃ।**
**ದದೃಶುಃ ಪೂತನೋತ್ಸಂಗೇ ಕೃಷ್ಣಂ ತಾಂ ಚ ನಿಪಾತಿತಾಮ್॥ 11**

**ಆದಾಯ ಕೃಷ್ಣಂ ಸಂತ್ರಸ್ತಾ ಯಶೋದಾಽಪಿ ದ್ವಿಜೋತ್ತಮ।**
**ಗೋಪುಚ್ಛಭ್ರಾಮಣೇನಾಥ ಬಾಲದೋಷಮಪಾಕರೋತ್॥ 12**

**ಗೋಪುರೀಷಮುಪಾದಾಯ ನಂದಗೋಪೋಽಪಿ ಮಸ್ತಕೇ।**
**ಕೃಷ್ಣಸ್ಯ ಪ್ರದದೌ ರಕ್ಷಾಂ ಕುರ್ವಂಶ್ಚೈತದುದೀರಯನ್॥ 13**

*ನಂದಗೋಪ ಉವಾಚ:*

**ರಕ್ಷತು ತ್ವಾಮಶೇಷಾಣಾಂ ಭೂತಾನಾಂ ಪ್ರಭವೋ ಹರಿಃ।**
**ಯಸ್ಯ ನಾಭಿಸಮುದ್ಭೂತಪಂಕಜಾದಭವಜ್ಜಗತ್॥ 14**

---

ಕಿರುಚುತ್ತ , ನರಬಂಧನಗಳೆಲ್ಲವೂ ಸಡಿಲವಾಗಲು, ಅತಿಭೀಷಣಾಕೃತಿಯನ್ನು ತಳೆದು ನೆಲದ ಮೇಲೆ ಸತ್ತು ಒರಗಿದಳು. ಅವಳ ಘೋರಧ್ವನಿಗೆ ಗೋಪರು ಹೆದರಿ ನಿದ್ರೆಯಿಂದೆದ್ದು ಬಂದು ಪೂತನೆಯ ಮಡಿಲಲ್ಲಿದ್ದ ಕೃಷ್ಣನನ್ನೂ ಅವಳು ಉರುಳಿ ಬಿದ್ದಿರುವುದನ್ನೂ ಕಂಡರು (10-11). ಮೈತ್ರೇಯ, ಯಶೋದೆಯು ಗಾಬರಿಯಿಂದ ಕೃಷ್ಣನನ್ನೆತ್ತಿಕೊಂಡು, ಗೋವಿನ ಬಾಲವನ್ನು ಅವನಿಗೆ ಸುಳಿದು ಬಾಲಗ್ರಹದೋಷವನ್ನು ನಿವಾರಿಸಿದಳು. ನಂದಗೋಪನೂ ಸಹ ಗೋಮಯ ವನ್ನು ತಂದು ಕೃಷ್ಣನ ತಲೆಗೆ ಸವರಿ ಈ ರೀತಿ ಪಠಿಸುತ್ತ ರಕ್ಷಾಬಂಧವನ್ನು ಮಾಡಿದನು (12-13): "ಯಾರ ನಾಭಿಯಿಂದ ಪ್ರಕಟವಾದ ಪದ್ಮದಿಂದ ಈ ಜಗತ್ತು ಜನಿಸಿತೋ, ಯಾರು ಸಮಸ್ತಭೂತಗಳಿಗೂ ಮೂಲಕಾರಣನೋ ಆ ಶ್ರೀಹರಿ ನಿನ್ನನ್ನು ರಕ್ಷಿಸಲಿ. ವರಾಹರೂಪಿಯಾದ ಯಾವ ದೇವನ ದಂಷ್ಟ್ರಾಗ್ರ ದಲ್ಲಿ ಧೃತವಾದ ಧರಣಿಯು ಈ ಜಗತ್ತನ್ನು ಧರಿಸಿದ್ದಾಳೋ ಆ ಕೇಶವನು,

**ಯೇನ ದಂಷ್ಟ್ರಾಗ್ರವಿಧೃತಾ ಧಾರಯತ್ಯವನಿರ್ಜಗತ್।**
**ವರಾಹರೂಪಧೃಗ್ದೇವಸ್ಸ ತ್ವಾಂ ರಕ್ಷತು ಕೇಶವಃ॥** 15

**ನಖಾಂಕುರವಿನಿರ್ಭಿನ್ನವೈರಿವಕ್ಷಸ್ಸ್ಥಲೋ ವಿಭುಃ।**
**ನೃಸಿಂಹರೂಪೀ ಸರ್ವತ್ರ ರಕ್ಷತು ತ್ವಾಂ ಜನಾರ್ದನಃ॥** 16

**ವಾಮನೋ ರಕ್ಷತು ಸದಾ ಭವಂತಂ ಯಃ ಕ್ಷಣಾದಭೂತ್।**
**ತ್ರಿವಿಕ್ರಮಃ ಕ್ರಮಾಕ್ರಾಂತತ್ರೈಲೋಕ್ಯಃ ಸ್ಫುರದಾಯುಧಃ॥** 17

**ಶಿರಸ್ತೇ ಪಾತು ಗೋವಿಂದಃ ಕಂಠಂ ರಕ್ಷತು ಕೇಶವಃ।**
**ಗುಹ್ಯಂ ಚ ಜಠರಂ ವಿಷ್ಣುರ್ಜಂಘೇ ಪಾದೌ ಜನಾರ್ದನಃ॥** 18

**ಮುಖಂ ಬಾಹೂ ಪ್ರಬಾಹೂ ಚ ಮನಃ ಸರ್ವೇಂದ್ರಿಯಾಣಿ ಚ।**
**ರಕ್ಷತ್ವವ್ಯಾಹತೈಶ್ವರ್ಯಸ್ತವ ನಾರಾಯಣೋಽವ್ಯಯಃ॥** 19

**ಶಾರ್ಙ್ಗಚಕ್ರಗದಾಪಾಣೇಶ್ಶಂಖನಾದಹತಾಃ ಕ್ಷಯಮ್।**
**ಗಚ್ಛಂತು ಪ್ರೇತಕೂಷ್ಮಾಂಡರಾಕ್ಷಸಾ ಯೇ ತವಾಹಿತಾಃ॥** 20

---

ನಿನ್ನನ್ನು ರಕ್ಷಿಸಲಿ (14-15). ಯಾವ ಸ್ವಾಮಿಯು ನಖಾಗ್ರದಿಂದ ವೈರಿಯ ವಕ್ಷಃಸ್ಥಳವನ್ನು ಸೀಳಿಹಾಕಿದನೋ ನೃಸಿಂಹರೂಪಿಯಾದ ಆ ಜನಾರ್ದನನು ನಿನ್ನನ್ನು ರಕ್ಷಿಸಲಿ. ಯಾವಾತನು ಒಂದು ಕ್ಷಣದಲ್ಲಿ ಮೂರು ಲೋಕಗಳನ್ನೂ ತನ್ನ ಹೆಜ್ಜೆಗಳಿಂದ ಆಕ್ರಮಿಸಿ ತ್ರಿವಿಕ್ರಮನೆನಿಸಿದನೋ ಆ ವಾಮನನು ಥಳ ಥಳಿಸುವ ಆಯುಧಗಳನ್ನು ಹಿಡಿದು ಸದಾ ನಿನ್ನನ್ನು ರಕ್ಷಿಸಲಿ (16-17). ಗೋವಿಂದನು ನಿನ್ನ ಶಿರಸ್ಸನ್ನೂ ಕೇಶವನು ಕಂಠವನ್ನೂ ರಕ್ಷಿಸಲಿ. ವಿಷ್ಣುವು ಗುಹ್ಯಸ್ಥಾನವನ್ನೂ ಉದರವನ್ನೂ ರಕ್ಷಿಸಲಿ. ಜನಾರ್ದನನು ನಿನ್ನ ಪಾದಗಳನ್ನೂ ತೊಡೆಗಳನ್ನೂ ರಕ್ಷಿಸಲಿ (18). ಅಖಂಡೈಶ್ವರ್ಯ ಸಂಪನ್ನನೂ ಅವಿನಾಶಿಯೂ ಆದ ಶ್ರೀಮನ್ನಾರಾಯಣನು ನಿನ್ನ ಮುಖವನ್ನೂ ಬಾಹುಗಳನ್ನೂ ಮೊಳಕೈಗಳನ್ನೂ ಮನಸ್ಸು ಮತ್ತು ಸರ್ವೇಂದ್ರಿಯಗಳನ್ನೂ ರಕ್ಷಿಸಲಿ. ಶಂಖ ಚಕ್ರಗದಾಪಾಣಿ ಯಾದ ವಿಷ್ಣುವಿನ ಶಂಖಧ್ವನಿಯಿಂದ, ನಿನಗೆ ಅಹಿತರಾದ ಪ್ರೇತ ಕೂಷ್ಮಾಂಡ ರಾಕ್ಷಸರು ಹತರಾಗಿ ನಾಶವಾಗಿ ಹೋಗಲಿ! (19-20). ಸಮಸ್ತದಿಕ್ಕುಗಳಲ್ಲಿ

**ತ್ವಾಂ ಪಾತು ದಿಕ್ಷು ವೈಕುಂಠೋ ವಿದಿಕ್ಷು ಮಧುಸೂದನಃ।**
**ಹೃಷೀಕೇಶೋಽಂಬರೇ ಭೂಮೌ ರಕ್ಷತು ತ್ವಾಂ ಮಹೀಧರಃ॥** 21

*ಶ್ರೀಪರಾಶರ ಉವಾಚ:*

**ಏವಂ ಕೃತಸ್ವಸ್ತ್ಯಯನೋ ನಂದಗೋಪೇನ ಬಾಲಕಃ।**
**ಶಾಯಿತಶ್ಶಕಟಸ್ಯಾಧೋ ಬಾಲಪರ್ಯಂಕಿಕಾತಲೇ॥** 22

**ತೇ ಚ ಗೋಪಾ ಮಹದ್‌ದೃಷ್ಟ್ವಾ ಪೂತನಾಯಾಃ ಕಲೇವರಮ್।**
**ಮೃತಾಯಾಃ ಪರಮಂ ತ್ರಾಸಂ ವಿಸ್ಮಯಂ ಚ ತದಾ ಯಯುಃ॥** 23

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಪಂಚಮೋಽಧ್ಯಾಯಃ

---

ಭಗವಾನ್ ವೈಕುಂಠನೂ ದಿಙ್ಮಧ್ಯಗಳಲ್ಲಿ ಮಧುಸೂನನೂ ಆಕಾಶದಲ್ಲಿ ಹೃಷೀಕೇಶನೂ ಭೂಮಿಯಲ್ಲಿ ಮಹೀಧರನಾದ ಅನಂತನೂ ನಿನ್ನನ್ನು ರಕ್ಷಿಸಲಿ" (21). ಈ ಪ್ರಕಾರವಾಗಿ ನಂದಗೋಪನು ಸ್ವಸ್ತಿವಚನವನ್ನು ಮಾಡಿದಮೇಲೆ, ಒಂದು ಬಂಡಿಯ ಕೆಳಗೆ ತೊಟ್ಟಿಲಲ್ಲಿ ಆ ಬಾಲಕನನ್ನು ಮಲಗಿಸಿದರು. ಇತ್ತಲಾಗಿ ಗೋಪರಿಗೆ ಮೃತಳಾದ ಪೂತನೆಯ ಬೃಹದಾಕಾರದ ಕಳೇವರವನ್ನು ನೋಡಿ ಅತ್ಯಂತ ಭಯವೂ ಪರಮಾಶ್ಚರ್ಯವೂ ಉಂಟಾದವು (22-23).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಐದನೆಯ ಅಧ್ಯಾಯ ಮುಗಿಯಿತು.



## ಷಷ್ಠೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಕದಾಚಿಚ್ಛಕಟಸ್ಯಾಧಶ್ಶಯಾನೋ ಮಧುಸೂದನಃ।**
**ಚಿಕ್ಷೇಪ ಚರಣಾವೂರ್ಧ್ವಂ ಸ್ತನ್ಯಾರ್ಥೀ ಪ್ರರುರೋದ ಹ॥** 1

**ತಸ್ಯ ಪಾದಪ್ರಹಾರೇಣ ಶಕಟಂ ಪರಿವರ್ತಿತಮ್।**
**ವಿಧ್ವಸ್ತಕುಂಭಭಾಂಡಂ ತದ್ವಿಪರೀತಂ ಪಪಾತ ವೈ॥** 2

**ತತೋ ಹಾಹಾಕೃತಂ ಸರ್ವೋ ಗೋಪಗೋಪೀಜನೋ ದ್ವಿಜ।**
**ಆಜಗಾಮಾಥ ದದೃಶೇ ಬಾಲಮುತ್ತಾನಶಾಯಿನಮ್॥** 3

**ಗೋಪಾಃ ಕೇನೇತಿ ಕೇನೇದಂ ಶಕಟಂ ಪರಿವರ್ತಿತಮ್।**
**ತತ್ರೈವ ಬಾಲಕಾಃ ಪ್ರೋಚುರ್ಬಾಲೇನಾನೇನ ಪಾತಿತಮ್॥** 4

---

## ಅಧ್ಯಾಯ 6

ಶಕಟಭಂಜನ, ಯಮಲಾರ್ಜುನಗಳ ಉದ್ಧಾರ, ವ್ರಜವಾಸಿಗಳು ಗೋಕುಲ
ದಿಂದ ವೃಂದಾವನಕ್ಕೆ ಹೋಗುವುದು. ಮಳೆಗಾಲದ ವರ್ಣನೆ.

ಪರಾಶರ ಮುನಿಗಳು ಹೇಳಿದರು: ಮೈತ್ರೇಯ, ಒಂದು ದಿನ ಮಧುಸೂದನನು ಬಂಡಿಯಕೆಳಗೆ ಮಲಗಿದ್ದಾಗ, ಸ್ತನ್ಯಪಾನಮಾಡಬೇಕೆಂದು ಅಳುತ್ತ ಪಾದಗಳನ್ನೆತ್ತಿ ಬಂಡಿಯನ್ನೊದ್ದನು (1). ಅವನ ಪಾದ ಪ್ರಹಾರದಿಂದ ಬಂಡಿಯು ಹಾರಿ ತಲೆಕೆಳಗಾಗಿ ಉರುಳಿ ಬಿದ್ದಿತು. ಬಂಡಿಯಲ್ಲಿದ್ದ ಗಡಿಗೆ ಮಡಿಕೆಗಳೆಲ್ಲವೂ ಚೂರು ಚೂರಾದವು. ಆ ಶಬ್ದದಿಂದ ಹಾಹಾಕಾರವುಂಟಾಗಿ ಗೋಪರೂ ಗೋಪಿಯರೂ ಓಡಿ ಬಂದು, ಈ ಬಾಲಕನು ಅಂಗಾತನಾಗಿ ಮಲಗಿರುವುದನ್ನು ಕಂಡರು (2-3). ಈ ಶಕಟವನ್ನು ಯಾರು ಉರುಳಿಸಿದರು? ಯಾರು ಉರುಳಿಸಿದರು?—ಎಂದು ಗೋಪರು ವಿಚಾರಿಸಲಾಗಿ, ಅಲ್ಲಿಯೇ ಇದ್ದ ಹುಡುಗರು ಈ ಬಾಲಕನು ಶಕಟವನ್ನುರುಳಿಸಿದನೆಂದು ಹೇಳಿದರು. "ಈತನು ಅಳುತ್ತ ಕಾಲುಗಳನ್ನು ಮೇಲಕ್ಕೆ ಚಿಮ್ಮಲಾಗಿ ಬಂಡಿಯು ಹಾರಿ

**ರುದತಾ ದೃಷ್ಟಮಸ್ಮಾಭಿಃ ಪಾದವಿಕ್ಷೇಪಪಾತಿತಮ್।**
**ಶಕಟಂ ಪರಿವೃತ್ತಂ ವೈ ನೈತದನ್ಯಸ್ಯ ಚೇಷ್ಟಿತಮ್॥ 5**

**ತತಃ ಪುನರತೀವಾಸನ್ ಗೋಪಾ ವಿಸ್ಮಯಚೇತಸಃ।**
**ನಂದಗೋಪೋಽಪಿ ಜಗ್ರಾಹ ಬಾಲಮತ್ಯಂತವಿಸ್ಮಿತಃ॥ 6**

**ಯಶೋದಾ ಶಕಟಾರೂಢಭಗ್ನಭಾಂಡಕಪಾಲಿಕಾಃ।**
**ಶಕಟಂ ಚಾರ್ಚಯಾಮಾಸ ದಧಿಪುಷ್ಪಫಲಾಕ್ಷತೈಃ॥ 7**

**ಗರ್ಗಶ್ಚ ಗೋಕುಲೇ ತತ್ರ ವಸುದೇವಪ್ರಚೋದಿತಃ।**
**ಪ್ರಚ್ಛನ್ನ ಏವ ಗೋಪಾನಾಂ ಸಂಸ್ಕಾರಾನಕರೋತ್ ತಯೋಃ॥ 8**

**ಜ್ಯೇಷ್ಠಂ ಚ ರಾಮಮಿತ್ಯಾಹ ಕೃಷ್ಣಂ ಚೈವ ತಥಾವರಮ್।**
**ಗರ್ಗೋ ಮತಿಮತಾಂ ಶ್ರೇಷ್ಠೋ ನಾಮ ಕುರ್ವನ್ಮಹಾಮತಿಃ॥ 9**

**ಸ್ವಲ್ಪೇನೈವ ತು ಕಾಲೇನ ರಿಂಗಿಣೌ ತೌ ತದಾ ವ್ರಜೇ।**
**ಧೃಷ್ಟಜಾನುಕರೌ ವಿಪ್ರ ಬಭೂವತುರುಭಾವಪಿ॥ 10**

---

ಉರುಳಿ ಬಿದ್ದುದನ್ನು ನಾವು ನೋಡಿದೆವು. ಇದು ಇನ್ನು ಯಾರ ತುಂಟತನವೂ ಅಲ್ಲ" ಎಂದರು (4-5). ಆ ಗೋಪರಿಗೆ ಮತ್ತೆ ಮನಸ್ಸಿನಲ್ಲಿ ಅತ್ಯಂತ ವಿಸ್ಮಯ ಹುಟ್ಟಿತು. ನಂದ ಗೋಪನೂ ಆಶ್ಚರ್ಯಚಕಿತನಾಗಿ ಮಗುವನ್ನು ಎತ್ತಿಕೊಂಡನು. ಯಶೋದೆಯು ಶಕಟ ಮತ್ತು ಆ ಶಕಟದಲ್ಲಿದ್ದ ಒಡೆದ ಮಡಕೆಯ ಚೂರುಗಳಿಗೆ ಮೊಸರು, ಹೂ, ಹಣ್ಣು, ಅಕ್ಷತೆಗಳಿಂದ ಪೂಜಿಸಿದಳು! (6-7). ಆಮೇಲೆ ವಸುದೇವನ ಹೇಳಿಕೆಯಂತೆ ಪುರೋಹಿತನಾದ ಗರ್ಗನು ಗೋಕುಲಕ್ಕೆ ಬಂದು, ತಾನು ಯಾರೆಂದು ಗೋಪರಿಗೆ ತಿಳಿಸದೆಯೇ, ಆ ಬಾಲಕರಿಬ್ಬರಿಗೂ (ದ್ವಿಜೋಚಿತವಾದ) ಶಾಸ್ತ್ರ ಸಂಸ್ಕಾರಗಳನ್ನು ಮಾಡಿದನು (8). ಮಹಾ ಪ್ರಾಜ್ಞನಾದ ಗರ್ಗನು (ರೋಹಿಣೀ ಪುತ್ರನಾದ) ಹಿರಿಯನಿಗೆ ರಾಮನೆಂದೂ, ಕಿರಿಯನಿಗೆ ಕೃಷ್ಣನೆಂದೂ ನಾಮಕರಣ ಮಾಡಿದನು. ಮೈತ್ರೇಯ, ಅನಂತರ ಸ್ವಲ್ಪ ದಿನಗಳಲ್ಲಿಯೇ ಆ ಬಾಲಕರ ಮೊಳಕಾಲು ಕೈಗಳಿಗೆ ಬಲವು ಬಂದಿತು. ಅವರಿಬ್ಬರೂ ವ್ರಜದಲ್ಲಿ ಅಂಬೆಗಾಲಿಡುತ್ತ ಸುಳಿದಾಡತೊಡಗಿದರು (9-10). ಬೆರಣಿಗಳ ಬೂದಿಯಿಂದ ಲಿಪ್ತರಾಗಿ ಅಲ್ಲಿಂದಿಲ್ಲಿಗೆ ಸದಾ ಸುತ್ತುತ್ತಲೇ

**ಕರೀಷಭಸ್ಮದಿಗ್ಧಾಂಗೌ ಭ್ರಮಮಾಣಾವಿತಸ್ತತಃ।**
**ನ ನಿವಾರಯಿತುಂ ಶೇಕೇ ಯಶೋದಾ ತೌ ನ ರೋಹಿಣೀ॥** 11

**ಗೋವಾಟಮಧ್ಯೇ ಕ್ರೀಡಂತೌ ವತ್ಸವಾಟಂ ಗತೌ ಪುನಃ।**
**ತದಹರ್ಜಾತಗೋವತ್ಸಪುಚ್ಛಾಕರ್ಷಣತತ್ಪರೌ॥** 12

**ಯದಾ ಯಶೋದಾ ತೌ ಬಾಲಾವೇಕಸ್ಥಾನಚರಾವುಭೌ।**
**ಶಶಾಕ ನೋ ವಾರಯಿತುಂ ಕ್ರೀಡಂತಾವತಿಚಂಚಲೌ॥** 13

**ದಾಮ್ನಾ ಮಧ್ಯೇ ತತೋ ಬದ್ಧ್ವಾ ಬಬಂಧ ತಮುಲೂಖಲೇ।**
**ಕೃಷ್ಣಮಕ್ಲಿಷ್ಟಕರ್ಮಾಣಮಾಹ ಚೇದಮಮರ್ಷಿತಾ॥** 14

**ಯದಿ ಶಕ್ನೋಷಿ ಗಚ್ಛ ತ್ವಮತಿಚಂಚಲಚೇಷ್ಟಿತ।**
**ಇತ್ಯುಕ್ತ್ವಾಽಥ ನಿಜಂ ಕರ್ಮ ಸಾ ಚಕಾರ ಕುಟುಂಬಿನೀ॥** 15

**ವ್ಯಗ್ರಾಯಾಮಥ ತಸ್ಯಾಂ ಸ ಕರ್ಷಮಾಣ ಉಲೂಖಲಮ್।**
**ಯಮಲಾರ್ಜುನಮಧ್ಯೇನ ಜಗಾಮ ಕಮಲೇಕ್ಷಣಃ॥** 16

---

ಇರುತ್ತಿದ್ದರು. ಅವರನ್ನು ಹಿಡಿಯಲು ಯಶೋದೆಗಾಗಲಿ ರೋಹಿಣಿಗಾಗಲಿ ಸಾಧ್ಯವಾಗುತ್ತಿರಲಿಲ್ಲ. ಈ ಕ್ಷಣದಲ್ಲಿ ಗೋವುಗಳ ಕೊಟ್ಟಿಗೆಯಲ್ಲಿ ಆಡುತ್ತಿದ್ದರೆ ಇನ್ನೊಂದು ಕ್ಷಣದಲ್ಲಿ ಕರುಗಳ ಹಿಂಡಿನ ಮಧ್ಯದಲ್ಲಿರುತ್ತಿದ್ದರು. ಆ ದಿನವೇ ಹುಟ್ಟಿದ ಎಳೆಗರುವಿನ ಬಾಲವನ್ನು ಹಿಡಿದೆಳೆಯಲು ತೊಡಗುತ್ತಿದ್ದರು (11-12). ಅತ್ಯಂತ ಚಪಲರಾದ ಆ ಬಾಲಕರು ಜೊತೆಯಾಗಿ ಆಡುತ್ತಿರಲಾಗಿ ಅವರ ಚೇಷ್ಟೆಯನ್ನು ತಪ್ಪಿಸಲು ಯಶೋದೆಗೆ ಸಾಧ್ಯವಾಗದೆ ಹೋಯಿತು. ಆಗ ಅವಳು ಲೀಲೆಯಿಂದ ತುಂಟತನ ಮಾಡುತ್ತಿದ್ದ ಕೃಷ್ಣನ ಸೊಂಟಕ್ಕೆ ಹಗ್ಗವನ್ನು ಕಟ್ಟಿ ಒಂದು ಒರಳು ಕಲ್ಲಿಗೆ ಬಂಧಿಸಿದಳು (13-14). ಅನಂತರ ಸಿಟ್ಟಿನಿಂದ "ಎಲೇ ತುಂಟ ಖೋರ! ಶಕ್ತಿ ಇದ್ದರೆ ಈಗ ಹೋಗು!" ಎಂದು ನುಡಿದು ಆ ಗೃಹಿಣಿಯು ತನ್ನ ಗೃಹಕೃತ್ಯದಲ್ಲಿ ನಿರತಳಾದಳು. ಅವಳು ತನ್ನ ಕೆಲಸದಲ್ಲಿ ವ್ಯಗ್ರಳಾಗಿದ್ದಾಗ ಕೃಷ್ಣನು ಒರಳುಕಲ್ಲನ್ನೆಳೆಯುತ್ತ (ಸಮೀಪದಲ್ಲಿದ್ದ) ಯಮಲಾರ್ಜುನಗಳ (ಜೋಡಿಯಾದ ಬಿಳಿ ಮತ್ತಿಮರಗಳ) ನಡುವೆ ತೂರಿಕೊಂಡು ಹೋದನು! (15-16).

**ಕರ್ಷತಾ ವೃಕ್ಷಯೋರ್ಮಧ್ಯೇ ತಿರ್ಯಗ್ಗತಮುಲೂಖಲಮ್।**
**ಭಗ್ನಾವುತ್ತುಂಗಶಾಖಾಗ್ರೌ ತೇನ ತೌ ಯಮಲಾರ್ಜುನೌ॥** 17

**ತತಃ ಕಟಕಟಾಶಬ್ದಸಮಾಕರ್ಣನತತ್ಪರಃ।**
**ಆಜಗಾಮ ವ್ರಜಜನೋ ದದರ್ಶ ಚ ಮಹಾದ್ರುಮೌ॥** 18

**ನವೋದ್ಗತಾಲ್ಪದಂತಾಂಶುಸಿತಹಾಸಂ ಚ ಬಾಲಕಮ್।**
**ತಯೋರ್ಮಧ್ಯಗತಂ ದಾಮ್ನಾ ಬದ್ಧಂ ಗಾಢಂ ತಥೋದರೇ॥** 19

**ತತಶ್ಚ ದಾಮೋದರತಾಂ ಸ ಯಯೌ ದಾಮಬಂಧನಾತ್॥** 20

**ಗೋಪವೃದ್ಧಾಸ್ತತಃ ಸರ್ವೇ ನಂದಗೋಪಪುರೋಗಮಾಃ।**
**ಮಂತ್ರಯಾಮಾಸುರುದ್ವಿಗ್ನಾ ಮಹೋತ್ಪಾತಾತಿಭೀರವಃ॥** 21

**ಸ್ಥಾನೇನೇಹ ನ ನಃ ಕಾರ್ಯಂ ವ್ರಜಾಮೋಽನ್ಯನ್ಮಹಾವನಮ್।**
**ಉತ್ಪಾತಾ ಬಹವೋ ಹ್ಯತ್ರ ದೃಶ್ಯಂತೇ ನಾಶಹೇತವಃ॥** 22

---

ಅಡ್ಡಲಾಗಿ ಮಲಗಿದ್ದ ಒರಳುಕಲ್ಲನ್ನು ಅವನು ಆ ವೃಕ್ಷಗಳ ಮಧ್ಯದಲ್ಲಿ ಜಗ್ಗಿ ಎಳೆಯಲಾಗಿ, ಉತ್ತುಂಗ ಶಾಖೆಗಳಿದ್ದ ಆ ಯಮಲಾರ್ಜುನಗಳು ಮುರಿದು ಬಿದ್ದವು! ಅವು ಬೀಳುವಾಗ ಉಂಟಾದ ಕಟಕಟ ಶಬ್ದವನ್ನು ಕೇಳಿ ವ್ರಜವಾಸಿಗಳು ಓಡಿ ಬಂದು, ಮುರಿದು ಬಿದ್ದಿದ್ದ ಆ ಮಹಾವೃಕ್ಷಗಳನ್ನು ನೋಡಿದರು (17-18). ಹಾಗೆಯೇ ಹೊಸದಾಗಿ ಹುಟ್ಟಿದ ಚಿಕ್ಕ ಚಿಕ್ಕ ಹಲ್ಲುಗಳ ಕಾಂತಿಯಿಂದ ಶುಭ್ರವಾದ ನಗೆಯನ್ನು ಬೀರುತ್ತಲಿದ್ದ ಮತ್ತು ಉದರದಲ್ಲಿ ಹಗ್ಗವನ್ನು ಸುತ್ತಿ ಬಿಗಿಯಾಗಿ ಕಟ್ಟಲ್ಪಟ್ಟಿದ್ದ ಬಾಲಕನು ಆ ಮರಗಳ ನಡುವೆ ನಿಂತಿರುವುದನ್ನೂ ನೋಡಿದರು! ಉದರದಲ್ಲಿ ದಾಮದ (ಹಗ್ಗದ) ಬಂಧನಕ್ಕೆ ಒಳಗಾದ ಪ್ರಯುಕ್ತ ಆ ಮೊದಲ್ಗೊಂಡು ಕೃಷ್ಣನಿಗೆ 'ದಾಮೋದರ' ಎಂದು ಹೆಸರಾಯಿತು (19-20). ಅನಂತರ ನಂದಗೋಪನೇ ಮೊದಲಾದ ಹಿರಿಯ ಗೋಪರು ಮಹೋತ್ಪಾತಗಳಾಗುತ್ತಿವೆಯೆಂದು ಅತ್ಯಂತ ಭಯಗೊಂಡು ಉದ್ವಿಗ್ನ ಚಿತ್ತರಾಗಿ ಈ ಪ್ರಕಾರ ಸಮಾಲೋಚನೆ ನಡೆಸಿದರು: "ಈ ಸ್ಥಳದಿಂದ ನಮಗೆ ಆಗಬೇಕಾದ್ದೇನೂ ಇಲ್ಲ. ಇನ್ನೊಂದು ಮಹಾವನಕ್ಕೆ ಹೊರಟುಹೋಗೋಣ. ಇಲ್ಲಿ ನಾನಾ ಉತ್ಪಾತಗಳು ಕಂಡುಬರುತ್ತಿವೆ. ಇವೆಲ್ಲ ನಾಶಕ್ಕೆ ಕಾರಣವಾದವುಗಳು (21-22). ಪೂತನೆಯ

**ಪೂತನಾಯಾ ವಿನಾಶಶ್ಚ ಶಕಟಸ್ಯ ವಿಪರ್ಯಯಃ।**
**ವಿನಾ ವಾತಾದಿದೋಷೇಣ ದ್ರುಮಯೋಃ ಪತನಂ ತಥಾ॥ 23**

**ವೃಂದಾವನಮಿತಃ ಸ್ಥಾನಾತ್ತಸ್ಮಾದ್ಗಚ್ಛಾಮ ಮಾ ಚಿರಮ್।**
**ಯಾವದ್ಭೌಮಮಹೋತ್ಪಾತದೋಷೋ ನಾಭಿಭವೇದ್‌ವ್ರಜಮ್॥ 24**

**ಇತಿ ಕೃತ್ವಾ ಮತಿಂ ಸರ್ವೇ ಗಮನೇ ತೇ ವ್ರಜೌಕಸಃ।**
**ಊಚುಸ್ಸ್ವಂ ಸ್ವಂ ಕುಲಂ ಶೀಘ್ರಂ ಗಮ್ಯತಾಂ ಮಾ ವಿಲಂಬಥ॥ 25**

**ತತಃ ಕ್ಷಣೇನ ಪ್ರಯಯುಃ ಶಕಟೈರ್ಗೋಧನೈಸ್ತಥಾ।**
**ಯೂಥಶೋ ವತ್ಸಪಾಲಾಶ್ಚ ಕಾಲಯಂತೋ ವ್ರಜೌಕಸಃ॥ 26**

**ದ್ರವ್ಯಾವಯವನಿರ್ಧೂತಂ ಕ್ಷಣಮಾತ್ರೇಣ ತತ್ತಥಾ।**
**ಕಾಕಭಾಸಸಮಾಕೀರ್ಣಂ ವ್ರಜಸ್ಥಾನಮಭೂದ್ ದ್ವಿಜ॥ 27**

---

ವಿನಾಶಪ್ರಕಾರ, ಶಕಟವು ತಲೆಕೆಳಗಾಗಿ ಉರುಳಿಬಿದ್ದದು ಗಾಳಿ ಮುಂತಾದ ಯಾವ ನಿಮಿತ್ತವೂ ಇಲ್ಲದೆ ಈ ವೃಕ್ಷಗಳು ಮುರಿದು ಬಿದ್ದದ್ದು—ಇವೆಲ್ಲ ಉತ್ಪಾತಗಳೇ ಸರಿ. ಆದ್ದರಿಂದ ನಾವು ಈ ಸ್ಥಳದಿಂದ ವೃಂದಾವನಕ್ಕೆ ಬೇಗನೆ ಹೊರಟು ಹೋಗೋಣ. ಭೂಕಂಪಾದಿ ಮಹೋತ್ಪಾತವು ವ್ರಜವನ್ನು ಅಸ್ತವ್ಯಸ್ತ ಗೊಳಿಸೀತು. ಅಷ್ಟರೊಳಗೆ ಈ ಗೋಕುಲವನ್ನು ಬಿಡೋಣ" (23-24). ಹೀಗೆ ಆ ವ್ರಜವಾಸಿಗಳೆಲ್ಲರೂ ತೆರಳಬೇಕೆಂದು ನಿಶ್ಚಯಿಸಿ ತಮ್ಮ ತಮ್ಮ ಕುಟುಂಬ ದವರಿಗೆ ಕೂಡಲೇ ಹೊರಡಬೇಕೆಂದೂ ತಡಮಾಡಬಾರದೆಂದೂ ಹೇಳಿದರು. ಕೂಡಲೆ ಗೋಪಾಲರೂ ಕರುಗಳನ್ನು ನೋಡಿಕೊಳ್ಳತಕ್ಕ ವತ್ಸಪಾಲರೂ ತಮ್ಮ ತಮ್ಮ ಶಕಟಗಳೊಡನೆಯೂ ಗೋವುಗಳೊಡನೆಯೂ ಹೊರಟು ಗೋವು ಗಳನ್ನು ಮೇಯಿಸುತ್ತ ಗುಂಪು ಗುಂಪಾಗಿ ಪ್ರಯಾಣ ಮಾಡಿದರು (25-26). ಅನ್ನ, ಧಾನ್ಯಕಣ—ಮುಂತಾದವು ಹರಡಿದ್ದ ಆ ವ್ರಜಸ್ಥಾನವು, ಮೈತ್ರೇಯ, ಕ್ಷಣಮಾತ್ರದಲ್ಲಿ ಕಾಗೆ, ಭಾಸ (ಒಂದು ಬಗೆಯ ಹದ್ದು)—ಮೊದಲಾದ ಪಕ್ಷಿಗಳಿಂದ ತುಂಬಿಹೋಯಿತು! ಇತ್ತ ಲೀಲಾವಿಹಾರಿಯಾದ ಭಗವಾನ್ ಶ್ರೀಕೃಷ್ಣನು ಗೋಧನಗಳಿಗೆ ಸಮೃದ್ಧಿಯನ್ನು ಬಯಸಿ, ಅವರೆಲ್ಲರೂ ಹೋಗಿ

**ವೃಂದಾವನಂ ಭಗವತಾ ಕೃಷ್ಣೇನಾಕ್ಲಿಷ್ಟಕರ್ಮಣಾ।**
**ಶುಭೇನ ಮನಸಾ ಧ್ಯಾತಂ ಗವಾಂ ಸಿದ್ಧಿಮಭೀಪ್ಸತಾ॥ 28**

**ತತಸ್ತತ್ರಾತಿರೂಕ್ಷೇಽಪಿ ಘರ್ಮಕಾಲೇ ದ್ವಿಜೋತ್ತಮ।**
**ಪ್ರಾವೃಟ್‌ಕಾಲ ಇವೋದ್ಭೂತಂ ನವಶಷ್ಪಂ ಸಮಂತತಃ॥ 29**

**ಸ ಸಮಾವಾಸಿತಃ ಸರ್ವೋ ವ್ರಜೋ ವೃಂದಾವನೇ ತತಃ।**
**ಶಕಟೀವಾಟಪರ್ಯಂತಶ್ಚಂದ್ರಾರ್ಧಾಕಾರಸಂಸ್ಥಿತಿಃ॥ 30**

**ವತ್ಸಪಾಲೌ ಚ ಸಂವೃತ್ತೌ ರಾಮದಾಮೋದರೌ ತತಃ।**
**ಏಕಸ್ಥಾನಸ್ಥಿತೌ ಗೋಷ್ಠೇ ಚೇರತುರ್ಬಾಲಲೀಲಯಾ॥ 31**

**ಬರ್ಹಿಪತ್ರಕೃತಾಪೀಡೌ ವನ್ಯಪುಷ್ಪಾವತಂಸಕೌ।**
**ಗೋಪವೇಣುಕೃತಾತೋದ್ಯಪತ್ರವಾದ್ಯಕೃತಸ್ವನೌ॥ 32**

---

ಸೇರಿದ ವೃಂದಾವನಕ್ಕೆ ಶುಭವಾಗಲೆಂದು ಮನಸ್ಸಿನಿಂದ ಧ್ಯಾನಿಸಿದನು (27-28). ಅವನ ಧ್ಯಾನಮಾತ್ರದಿಂದ, ಮೈತ್ರೇಯ, ಅತಿಕ್ರೂರವಾದ ಬೇಸಿಗೆಯಾಗಿದ್ದರೂ ಸಹ ಮಳೆಗಾಲದಲ್ಲಿ ಹೇಗೋ ಹಾಗೆ ಹಸಿರುಹುಲ್ಲು ವೃಂದಾವನದ ಎಲ್ಲೆಡೆಯೂ ಬೆಳೆಯಿತು! (29). ಆಮೇಲೆ ಗೋಪಾಲರು ಸುತ್ತಲೂ ಅರ್ಧ ಚಂದ್ರಾಕಾರವಾಗಿ ತಮ್ಮ ಶಕಟಗಳನ್ನು ನಿಲ್ಲಿಸಿ ನಡುವೆ ಬಿಡಾರ ಮಾಡಿದರು. ಆ ಗೊಲ್ಲರ ಹಳ್ಳಿಯಲ್ಲಿ ಬಲರಾಮ ದಾಮೋದರರು ಯಾವಾಗಲೂ ಜೊತೆಯಾಗಿ ಒಂದೇ ಕಡೆ ಇರುತ್ತ ವತ್ಸಪಾಲಕರಾಗಿ ಬಾಲಲೀಲೆಯನ್ನು ನಡೆಸುತ್ತ ವಿಹರಿಸುತ್ತಿದ್ದರು (30-31). ನವಿಲುಗರಿಗಳನ್ನು ತಲೆಗೆ ಸಿಕ್ಕಿಸಿಕೊಂಡು, ಕಾಡು ಹೂಗಳಿಂದ ರಚಿಸಿದ ಆಭರಣಗಳಿಂದ ಕಿವಿಗಳನ್ನು ಅಲಂಕರಿಸಿಕೊಳ್ಳುತ್ತಿದ್ದರು. ಗೊಲ್ಲರಿಗೆ ಸಹಜವಾದ ಬಿದಿರಿನಿಂದ ನಾನಾ ವಿಧದ ವಾದ್ಯಗಳನ್ನು ಮಾಡಿಕೊಂಡು, ಎಲೆಗಳಿಂದ ಪೀಪಿಗಳನ್ನು ತಯಾರಿಸಿ ವಿವಿಧ ಧ್ವನಿಗಳನ್ನು ಹೊರಡಿಸುತ್ತಿದ್ದರು (32). *ಕಾಕಪಕ್ಷಧರರಾದ ಆ ಬಾಲಕರು (ಸ್ಕಂದನ ಅಂಶ

* ಕಾಕಪಕ್ಷ = ಮಕ್ಕಳ ತಲೆಯಲ್ಲಿ ಎರಡೂ ಪಾರ್ಶ್ವಗಳಲ್ಲಿಯೂ ಕಾಗೆಯ ರೆಕ್ಕೆಗಳಂತೆ ಹರಡಿದ ಕೂದಲು.

**ಕಾಕಪಕ್ಷಧರೌ ಬಾಲೌ ಕುಮಾರಾವಿವ ಪಾವಕೀ।**
**ಹಸಂತೌ ಚ ರಮಂತೌ ಚ ಚೇರತುಃ ಸ್ಮ ಮಹಾವನಮ್॥ 33**

**ಕ್ವಚಿದ್ವಹಂತಾವನ್ಯೋನ್ಯಂ ಕ್ರೀಡಮಾನೌ ತಥಾ ಪರೈಃ।**
**ಗೋಪಪುತ್ರೈಸ್ಸಮಂ ವತ್ಸಾಂಶ್ಚಾರಯಂತೌ ವಿಚೇರತುಃ॥ 34**

**ಕಾಲೇನ ಗಚ್ಛತಾ ತೌ ತು ಸಪ್ತವರ್ಷೌ ಮಹಾವ್ರಜೇ।**
**ಸರ್ವಸ್ಯ ಜಗತಃ ಪಾಲೌ ವತ್ಸಪಾಲೌ ಬಭೂವತುಃ॥ 35**

**ಪ್ರಾವೃಟ್ಕಾಲಸ್ತತೋಽತೀವಮೇಘೌಘಸ್ಥಗಿತಾಂಬರಃ।**
**ಬಭೂವ ವಾರಿದಾರಾಭಿರೈಕ್ಯಂ ಕುರ್ವನ್ ದಿಶಾಮಿವ॥ 36**

**ಪ್ರರೂಢನವಶಷ್ಪಾಢ್ಯಾ ಶಕ್ರಗೋಪಾಚಿತಾ ಮಹೀ।**
**ತಥಾ ಮಾರಕತೀವಾಸೀತ್ಪದ್ಮರಾಗವಿಭೂಷಿತಾ॥ 37**

**ಊಹುರುನ್ಮಾರ್ಗವಾಹೀನಿ ನಿಮ್ನಗಾಂಭಾಂಸಿ ಸರ್ವತಃ।**
**ಮನಾಂಸಿ ದುರ್ವಿನೀತಾನಾಂ ಪ್ರಾಪ್ಯ ಲಕ್ಷ್ಮೀಂ ನವಾಮಿವ॥ 38**

---

ಗಳಾದ) ಶಾಖ-ವಿಶಾಖರೆಂಬ ಕುಮಾರರಂತೆ ವಿರಾಜಿಸುತ್ತ , ನಗುತ್ತ ಆಡುತ್ತ ಮಹಾರಣ್ಯದಲ್ಲಿ ಸಂಚರಿಸತೊಡಗಿದರು. ಒಮ್ಮೆ ಒಬ್ಬರನ್ನೊಬ್ಬರು ಹೆಗಲ ಮೇಲೆ ಹೊತ್ತುಕೊಳ್ಳುತ್ತಲೂ ಒಮ್ಮೆ ಇತರ ಗೋಪಬಾಲರೊಡನೆ ಆಡುತ್ತಲೂ ಒಮ್ಮೆ ಕರುಗಳನ್ನು ಮೇಯಿಸುತ್ತಲೂ ತಿರುಗುತ್ತಿದ್ದರು (33-34). ಈ ಪ್ರಕಾರ ವಾಗಿ ಆ ಮಹಾವ್ರಜದಲ್ಲಿದ್ದ ಬಲರಾಮಕೃಷ್ಣರು ಸ್ವಲ್ಪ ಕಾಲವನ್ನು ಕಳೆದರು. ಸಕಲ ಜಗತ್ಪಾಲಕರಾದ ಅವರು ಕರುಗಳನ್ನು ಕಾಯುವ ಏಳು ವರ್ಷದ ಹುಡುಗರಾದರು! (35). ಮಳೆಗಾಲ ಬಂದಿತು. ಮೇಘ ಜಾಲಗಳಿಂದ ಅಂಬರವು ತುಂಬಿತು. ನಿಬಿಡವಾಗಿ ಸುರಿಯುತ್ತಿದ್ದ ವಾರಿಧಾರೆಗಳಿಂದ ಸಕಲ ದಿಕ್ಕುಗಳೂ ಒಂದಾಗಿ ಕಾಣಿಸಿದವು. ಹೊಸದಾಗಿ ಬೆಳೆದ ಹಸಿರು ಹುಲ್ಲು ಗಳಿಂದಲೂ ಇಂದ್ರಗೋಪಗಳೆಂಬ (ಕೆಂಪಾದ) ಕೀಟಗಳಿಂದಲೂ ವ್ಯಾಪ್ತವಾದ ಮಹೀತಳವು ಪದ್ಮರಾಗಮಣಿಗಳಿಂದ ಚಿತ್ರಿತವಾದ ಮರಕತಮಯವಾದ ನೆಲದಂತೆ ಕಾಣಿಸಿತು! (36-37). ಹೊಸದಾಗಿ ಐಶ್ವರ್ಯ ಬಂದಾಗ ದುರುಳರ ಮನಸ್ಸುಗಳು ಹೇಗೆ ಉಚ್ಛೃಂಖಲವಾಗಿ ಹರಿಯ ತೊಡಗುತ್ತವೆಯೋ ಹಾಗೆ

**ನ ರೇಜೇಽಂತರಿತಶ್ಚಂದ್ರೋ ನಿರ್ಮಲೋ ಮಲಿನೈರ್ಘನೈಃ।**
**ಸದ್ವಾದಿವಾದೋ ಮೂರ್ಖಾಣಾಂ ಪ್ರಗಲ್ಭಾಭಿರಿವೋಕ್ತಿಭಿಃ॥ 39**

**ನಿರ್ಗುಣೇನಾಪಿ ಚಾಪೇನ ಶಕ್ರಸ್ಯ ಗಗನೇ ಪದಮ್।**
**ಅವಾಪ್ಯತಾವಿವೇಕಸ್ಯ ನೃಪಸ್ಯೇವ ಪರಿಗ್ರಹೇ॥ 40**

**ಮೇಘಪೃಷ್ಠೇ ಬಲಾಕಾನಾಂ ರರಾಜ ವಿಮಲಾ ತತಿಃ।**
**ದುರ್ವೃತ್ತೇ ವೃತ್ತಚೇಷ್ಟೇವ ಕುಲೀನಸ್ಯಾತಿಶೋಭನಾ॥ 41**

**ನ ಬಬಂಧಾಂಬರೇ ಸ್ಥೈರ್ಯಂ ವಿದ್ಯುದತ್ಯಂತಚಂಚಲಾ।**
**ಮೈತ್ರೀವ ಪ್ರವರೇ ಪುಂಸಿ ದುರ್ಜನೇನ ಪ್ರಯೋಜಿತಾ॥ 42**

**ಮಾರ್ಗಾ ಬಭೂವುರಸ್ಪಷ್ಟಾಸ್ತೃಣಶಷ್ಪಚಯಾವೃತಾಃ।**
**ಅರ್ಥಾಂತರಮನುಪ್ರಾಪ್ತಾಃ ಪ್ರಜಡಾನಾಮಿವೋಕ್ತಯಃ॥ 43**

---

ನದೀಜಲಗಳು ಉಕ್ಕಿ ದಾರಿ ತಪ್ಪಿ ಎಲ್ಲೆಲ್ಲಿಯೂ ಪ್ರವಹಿಸಿದವು (38). ಪ್ರಾಮಾಣಿಕವಾಗಿ ಮಾತಾಡತಕ್ಕವರ ಸದ್ವಾದವು ಮೂರ್ಖಜನರ ಉದ್ಧತ ವಚನಗಳಿಂದ ತಿರಸ್ಕೃತವಾಗಿ ಹೇಗೆ ಪ್ರಕಾಶಕ್ಕೆ ಬಾರದೆ ಹೋಗುವುದೋ ಹಾಗೆ ಮಲಿನವಾದ ಕಪ್ಪು ಮೋಡಗಳಿಂದ ಆಚ್ಛಾದಿತನಾದ ನಿರ್ಮಲ ಚಂದ್ರನು ಪ್ರಕಾಶಿಸಲಿಲ್ಲ (39). ವಿವೇಕಶೂನ್ಯನಾದ ರಾಜನ ಸಂಗದಲ್ಲಿ ನಿರ್ಗುಣನಾದ ಮನುಷ್ಯನು ಹೇಗೆ ಒಂದು ಸ್ಥಾನವನ್ನು ಗಳಿಸಿಕೊಳ್ಳುವನೋ ಹಾಗೆ ನಿರ್ಗುಣ ವಾದ (ಹೆದೆ ಇಲ್ಲದ) ಇಂದ್ರ ಧನುಸ್ಸು ಗಗನದಲ್ಲಿ ಸ್ಥಾನವನ್ನು ಪಡೆಯಿತು! (40). ದುಷ್ಟನ ಬಳಿಯಲ್ಲಿಯೂ ಸತ್ಪುರುಷನ ಸ್ವಚ್ಛವಾದ ವ್ಯವಹಾರವಿರುವಂತೆ, ಮೇಘ ಜಾಲದ ಬಳಿ ಶುಭ್ರವಾದ ಕೊಕ್ಕರೆ ಹಕ್ಕಿಗಳ ಸಾಲು ವಿರಾಜಿಸಿತು. ದುರ್ಜನನು ಶ್ರೇಷ್ಠನಾದ ಪುರುಷನಲ್ಲಿ ಆರಂಭಿಸಿದ ಮೈತ್ರಿಯಂತೆ ಅತ್ಯಂತ ಚಂಚಲವಾದ ಮಿಂಚು ಆಕಾಶದಲ್ಲಿ ಸ್ಥಿರವಾಗಿ ಉಳಿಯಲಿಲ್ಲ (41-42). ಅರ್ಥಾಂತರಕ್ಕೆ ಅವಕಾಶವನ್ನೀಯುವ ದಡ್ಡಜನರ ನುಡಿಗಳಂತೆ, ಹುಲ್ಲು ಸದೆಗಳಿಂದ ಆವೃತವಾದ ದಾರಿಗಳು ಅಸ್ಪಷ್ಟವಾದವು. ಆ ಮಳೆಗಾಲದಲ್ಲಿ ಮದಿಸಿದ ಮಯೂರಗಳಿಂದಲೂ ಜಿಂಕೆಗಳಿಂದಲೂ ತುಂಬಿದ ಮಹಾವನದಲ್ಲಿ

ಉನ್ಮತ್ತಶಿಖಿಸಾರಂಗೇ ತಸ್ಮಿನ್ಕಾಲೇ ಮಹಾವನೇ।
ಕೃಷ್ಣಾರಾಮೌ ಮುದಾ ಯುಕ್ತೌ ಗೋಪಾಲೈಶ್ಚೇರತುಸ್ಸಹ॥ 44

ಕ್ವಚಿದ್ಗೋಭಿಸ್ಸಮಂ ರಮ್ಯಂ ಗೇಯತಾನರತಾವುಭೌ।
ಚೇರತುಃ ಕ್ವಚಿದತ್ಯರ್ಥಂ ಶೀತವೃಕ್ಷತಲಾಶ್ರಿತೌ॥ 45

ಕ್ವಚಿತ್ಕದಂಬಸ್ರಕ್‌ಚಿತ್ರೌ ಮಯೂರಸ್ರಗ್ವಿರಾಜಿತೌ।
ವಿಲಿಪ್ತೌ ಕ್ವಚಿದಾಸಾತಾಂ ವಿವಿಧೈರ್ಗಿರಿಧಾತುಭಿಃ॥ 46

ಪರ್ಣಶಯ್ಯಾಸು ಸಂಸುಪ್ತೌ ಕ್ವಚಿನ್ನಿದ್ರಾಂತರೈಷಿಣೌ।
ಕ್ವಚಿದ್ಗರ್ಜತಿ ಜೀಮೂತೇ ಹಾಹಾಕಾರರವಾಕುಲೌ॥ 47

ಗಾಯತಾಮನ್ಯಗೋಪಾನಾಂ ಪ್ರಶಂಸಾಪರಮೌ ಕ್ವಚಿತ್।
ಮಯೂರಕೇಕಾನುಗತೌ ಗೋಪವೇಣುಪ್ರವಾದಕೌ॥ 48

ಇತಿ ನಾನಾವಿಧೈರ್ಭಾವೈರುತ್ತಮಪ್ರೀತಿಸಂಯುತೌ।
ಕ್ರೀಡಂತೌ ತೌ ವನೇ ತಸ್ಮಿಂಶ್ಚೇರತುಸ್ತುಷ್ಟಮಾನಸೌ॥ 49

---

ಬಲರಾಮಕೃಷ್ಣರು ಗೋಪಾಲರೊಡನೆ ನಲವಿನಿಂದ ನಲಿಯುತ್ತಿದ್ದರು (43-44). ಆ ರಾಮಕೃಷ್ಣರು ಒಮ್ಮೆ ಹಸುಗಳೊಡನೆ ರಮ್ಯವಾಗಿ ಹಾಡುತ್ತಲೂ ಒಮ್ಮೆ ತಂಪಾದ ನೆರಳಿರುವ ಮರಗಳ ಬುಡದಲ್ಲಿ ಕುಳಿತಿರುತ್ತಲೂ ಇದ್ದರು. ಈಚಲ ಮರದ ಹೂಗಳ ಹಾರದಿಂದ ಚಿತ್ರ ವಿಚಿತ್ರವಾಗಿ ಅಲಂಕರಿಸಿಕೊಳ್ಳುವರು. ನವಿಲು ಗರಿಗಳ ಸರಗಳಿಂದ ವೇಷ ಮಾಡಿಕೊಳ್ಳುವರು. ಗೈರಿಕ ಧಾತುಗಳಿಂದ ಬಗೆಬಗೆಯಾದ ಬಣ್ಣಗಳನ್ನೂ ಮೈಗೆ ಬಳಿದುಕೊಂಡು ಕುಳಿತುಕೊಳ್ಳುವರು (45-46). ಒಮ್ಮೊಮ್ಮೆ ನಿದ್ರೆ ಮಾಡುವುದಕ್ಕಾಗಿ ಎಲೆಗಳ ಹಾಸಿಗೆಗಳಲ್ಲಿ ಮಲಗುವರು. ಒಮ್ಮೊಮ್ಮೆ ಮೋಡವು ಗುಡುಗಿದಾಗ ಹಾಹಾಕಾರ ಮಾಡುತ್ತ ಕೂಗಾಡುವರು. ಇತರ ಗೋಪಾಲರು ಹಾಡುತ್ತಿದ್ದಾಗ 'ಭಲಾ ಬೇಷ್!' ಎಂದು ಕೊಂಡಾಡುವರು. ನವಿಲುಗಳ ಕೇಕಾಧ್ವನಿಯನ್ನನುಕರಿಸಿ ಕೊಳಲೂದುವರು (47-48). ಈ ಪ್ರಕಾರವಾಗಿ ಅವರಿಬ್ಬರೂ ಅತ್ಯಂತ ಸ್ನೇಹಸಂಪನ್ನರಾಗಿ ಸಂತೋಷದಿಂದ ವನದಲ್ಲಿ ಕ್ರೀಡಿಸುತ್ತಿದ್ದರು. ಬಲಾಢ್ಯರಾದ ಅವರಿಬ್ಬರೂ

**ವಿಕಾಲೇ ಚ ಸಮಂ. ಗೋಭಿರ್ಗೋಪವೃಂದಸಮನ್ವಿತೌ।**
**ವಿಹೃತ್ಯಾಥ ಯಥಾಯೋಗಂ ವ್ರಜಮೇತ್ಯ ಮಹಾಬಲೌ॥** 50

**ಗೋಪೈಸ್ಸಮಾನೈಸ್ಸಹಿತೌ ಕ್ರೀಡಂತಾವಮರಾವಿವ।**
**ಏವಂ ತಾವೂಷತುಸ್ತತ್ರ ರಾಮಕೃಷ್ಣೌ ಮಹಾದ್ಯುತೀ॥** 51

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಷಷ್ಠೋಽಧ್ಯಾಯಃ

---

ಗೋಪಾಲರ ಗುಂಪಿನೊಡನೆ ಸೇರಿ ವಿಹರಿಸುತ್ತ ಸಂಜೆಯಾದಾಗ ಗೋವುಗಳೊಡನೆ ಎಂದಿನಂತೆ ವ್ರಜಕ್ಕೆ ಹಿಂದಿರುಗುತ್ತಿದ್ದರು (49-50). ಮಹಾತೇಜಸ್ವಿಗಳಾದ ರಾಮಕೃಷ್ಣರು ಸಮಾನ ವಯಸ್ಕರಾದ ಗೋಪಾಲರೊಡನೆ ಈ ರೀತಿಯಲ್ಲಿ ವಿಹರಿಸುತ್ತ ಆ ವೃಂದಾವನದಲ್ಲಿ ದೇವತೆಗಳಂತೆ ವಾಸವಾಗಿದ್ದರು (51).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಆರನೆಯ ಅಧ್ಯಾಯ ಮುಗಿಯಿತು.



## ಸಪ್ತಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಏಕದಾ ತು ವಿನಾ ರಾಮಂ ಕೃಷ್ಣೋ ವೃಂದಾವನಂ ಯಯೌ।**
**ವಿಚಚಾರ ವೃತೋ ಗೋಪೈರ್ವನ್ಯಪುಷ್ಪಸ್ರಗುಜ್ಜ್ವಲಃ॥** 1

**ಸ ಜಗಾಮಾಥ ಕಾಲಿಂದೀಂ ಲೋಲಕಲ್ಲೋಲಶಾಲಿನೀಮ್।**
**ತೀರಸಂಲಗ್ನಫೇನೌಘೈರ್ಹಸಂತೀಮಿವ ಸರ್ವತಃ॥** 2

**ತಸ್ಯಾಂಚಾತಿಮಹಾಭೀಮಂ ವಿಷಾಗ್ನಿಶ್ರಿತವಾರಿಕಮ್।**
**ಹ್ರದಂ ಕಾಲಿಯನಾಗಸ್ಯ ದದರ್ಶಾತಿವಿಭೀಷಣಮ್॥** 3

---

## ಅಧ್ಯಾಯ 7

ನಾಗರಾಜನಾದ ಕಾಳಿಯ ಸರ್ಪವನ್ನು ಶ್ರೀಕೃಷ್ಣನು ನಿಗ್ರಹಿಸುವುದು.
ಕಾಳಿಯನಿಂದ ಶ್ರೀಕೃಷ್ಣನ ಸ್ತುತಿ.

ಪರಾಶರ ಮಹರ್ಷಿಗಳು ನುಡಿದರು: ಒಂದು ಸಲ ಶ್ರೀಕೃಷ್ಣನು ಬಲರಾಮನನ್ನು ಬಿಟ್ಟು ತಾನು ವೃಂದಾವನಕ್ಕೆ ಹೋಗಿ ಕಾಡು ಹೂಮಾಲೆಗಳಿಂದ ಸುಶೋಭಿತನಾಗಿ ಗೋಪರೊಡನೆ ಸುತ್ತಾಡುತ್ತಿದ್ದನು. ಹಾಗೆಯೇ ಸುತ್ತಾಡುತ್ತ , ಹೊಯ್ದಾಡುವ ಅಲೆಗಳಿಂದ ತುಂಬಿದ ಯಮುನಾ ನದಿಯ ಬಳಿಗೆ ಹೋದನು. ನದೀ ತೀರದ ಎಲ್ಲೆಡೆಯೂ (ಬಿಳಿಯ) ನೊರೆಗಳು ರಾಶಿಯಾಗಿ ಕೂಡಿದ್ದರಿಂದ ಯಮುನೆಯು ನಗುತ್ತಿರುವಳೋ ಎಂಬತೆ ಕಾಣಿಸಿದಳು (1-2). ಆ ನದಿಯಲ್ಲಿ ವಿಶಾಲವಾದ ಒಂದು ಮಡುವನ್ನು ಶ್ರೀಕೃಷ್ಣನು ಕಂಡನು. ಮಡುವಿನಲ್ಲಿ ಕಾಳಿಯ ಸರ್ಪವು ವಾಸವಾಗಿತ್ತು. ಅದರ ವಿಷಾಗ್ನಿಯಿಂದ ನೀರು ತುಂಬಿದ್ದ ಆ ಮಡು ಅತಿ ಭೀಷಣವಾಗಿತ್ತು. ಆ ವಿಷಾಗ್ನಿಯು ಎಷ್ಟು ಘೋರವಾಗಿತ್ತೆಂದರೆ, ಅದರ ಪ್ರಸರಣದಿಂದ ತೀರದಲ್ಲಿದ್ದ ಮರಗಳು ಸುಟ್ಟುಹೋಗಿದ್ದವು. ಗಾಳಿ ಬೀಸಿದಾಗ

ವಿಷಾಗ್ನಿನಾ ಪ್ರಸರತಾ ದಗ್ಧತೀರಮಹೀರುಹಮ್।
ವಾತಾಹತಾಂಬುವಿಕ್ಷೇಪಸ್ಪರ್ಶದಗ್ಧವಿಹಂಗಮಮ್॥ 4

ತಮತೀವ ಮಹಾರೌದ್ರಂ ಮೃತ್ಯುವಕ್ತ್ರಮಿವಾಪರಮ್।
ವಿಲೋಕ್ಯ ಚಿಂತಯಾಮಾಸ ಭಗವಾನ್ ಮಧುಸೂದನಃ॥ 5

ಅಸ್ಮಿನ್ವಸತಿ ದುಷ್ಟಾತ್ಮಾ ಕಾಲಿಯೋಽಸೌ ವಿಷಾಯುಧಃ।
ಯೋ ಮಯಾ ನಿರ್ಜಿತಸ್ತ್ಯಕ್ತ್ವಾ ದುಷ್ಟೋ ನಷ್ಟಃ ಪಯೋನಿಧಿಮ್॥

ತೇನೇಯಂ ದೂಷಿತಾ ಸರ್ವಾ ಯಮುನಾ ಸಾಗರಂಗಮಾ।
ನ ನರೈರ್ಗೋಧನೈಶ್ಚಾಪಿ ತೃಷಾರ್ತೈರುಪಭುಜ್ಯತೇ॥ 7

ತದಸ್ಯ ನಾಗರಾಜಸ್ಯ ಕರ್ತವ್ಯೋ ನಿಗ್ರಹೋ ಮಯಾ।
ನಿಸ್ತ್ರಾಸಾಸ್ತು ಸುಖಂ ಯೇನ ಚರೇಯುರ್ವ್ರಜವಾಸಿನಃ॥ 8

ಏತದರ್ಥಂ ತು ಲೋಕೇಽಸ್ಮಿನ್ನವತಾರಃ ಕೃತೋ ಮಯಾ।
ಯದೇಷಾಮುತ್ಪಥಸ್ಥಾನಾಂ ಕಾರ್ಯಾ ಶಾಂತಿರ್ದುರಾತ್ಮನಾಮ್॥ 9

---

ಮಡುವಿನ ನೀರು ಹಾರಿ ತಾಗಿದ್ದರಿಂದ ಹಕ್ಕಿಗಳು ಸುಟ್ಟು ಕರಕಲಾಗಿದ್ದವು! (3-4). ಮೃತ್ಯುವಿನ ಮತ್ತೊಂದು ಮುಖವೋ ಎಂಬಂತೆ ಮಹಾ ಭಯಂಕರವಾದ ಮಡುವನ್ನು ಕಂಡು ಭಗವಾನ್ ಮಧುಸೂದನನು ಇಂತು ಚಿಂತಿಸಿದನು: "ದುರುಳನೂ ವಿಷಾಯುಧನೂ ಆದ ಕಾಳಿಯನು ಇಲ್ಲಿ ನೆಲೆಸಿದ್ದಾನೆ. ಹಿಂದೆ ನನ್ನಿಂದ* ಪರಾಜಿತನಾದ ಈ ದುಷ್ಟನು ಕಡಲನ್ನು ಪರಿತ್ಯಜಿಸಿ ಇಲ್ಲಿಗೆ ಓಡಿ ಬಂದಿದ್ದಾನೆ! (5-6). ಸಾಗರ ಗಾಮಿನಿಯಾದ ಯಮುನೆಯನ್ನು ಈತನು ಕುಲಗೆಡಿಸಿದ್ದಾನೆ. ಬಾಯಾರಿದ ನರರಾಗಲಿ ಹಸುಗಳಾಗಲಿ ಇದನ್ನು ಸೇವಿಸುವಂತಿಲ್ಲ. ಆದ್ದರಿಂದ ಈ ನಾಗರಾಜನನ್ನು ನಾನು ನಿಗ್ರಹಿಸಬೇಕು. ವ್ರಜವಾಸಿಗಳು ನಿರ್ಭಯರಾಗಿ ಸುಖದಿಂದ ಇರುವಂತಾಗಲಿ (7-8). ದಾರಿ ತಪ್ಪಿ ಹೋಗುವ ಈ ದುರಾತ್ಮರನ್ನು ನಿಗ್ರಹಿಸಬೇಕೆಂದೇ ಅಲ್ಲವೆ ನಾನು ಈ

---

* ನನ್ನಿಂದ—ನನ್ನ ವಿಭೂತಿಯಾದ ಗರುಡನಿಂದ. ಈ ಕಥೆ ಶ್ರೀಮದ್ಭಾಗವತದಲ್ಲಿ ಬಂದಿದೆ (ಸ್ಕಂದ 10, ಅಧ್ಯಾಯ 17).

**ತದೇತಂ ನಾತಿದೂರಸ್ಥಂ ಕದಂಬಮುರುಶಾಖಿನಮ್।**
**ಅಧಿರುಹ್ಯ ಪತಿಷ್ಯಾಮಿ ಹ್ರದೇಽಸ್ಮಿನ್ನನಿಲಾಶಿನಃ॥** 10

*ಶ್ರೀಪರಾಶರ ಉವಾಚ:*

**ಇತ್ಥಂ ವಿಚಿಂತ್ಯ ಬದ್ಧ್ವಾ ಚ ಗಾಢಂ ಪರಿಕರಂ ತತಃ।**
**ನಿಪಪಾತ ಹ್ರದೇ ತತ್ರ ನಾಗರಾಜಸ್ಯ ವೇಗತಃ॥** 11

**ತೇನಾತಿಪತತಾ ತತ್ರ ಕ್ಷೋಭಿತಸ್ಸ ಮಹಾಹ್ರದಃ।**
**ಅತ್ಯರ್ಥಂ ದೂರಜಾತಾಂಸ್ತು ಸಮಸಿಂಚನ್ಮಹೀರುಹಾನ್॥** 12

**ತೇಽಹಿದುಷ್ಟವಿಷಜ್ವಾಲಾ ತಪ್ತಾಂಬುಪವನೋಕ್ಷಿತಾಃ।**
**ಜಜ್ವಲುಃ ಪಾದಪಾಸ್ಸದ್ಯೋ ಜ್ವಾಲಾವ್ಯಾಪ್ತದಿಗಂತರಾಃ॥** 13

**ಆಸ್ಫೋಟಯಾಮಾಸ ತದಾ ಕೃಷ್ಣೋ ನಾಗಹ್ರದೇ ಭುಜಮ್।**
**ತಚ್ಛಬ್ದಶ್ರವಣಾಚ್ಚಾಶು ನಾಗರಾಜೋಽಭ್ಯುಪಾಗಮತ್॥** 14

**ಆತಾಮ್ರನಯನಃ ಕೋಪಾದ್ವಿಷಜ್ವಾಲಾಕುಲೈರ್ಮುಖೈಃ।**
**ವೃತೋ ಮಹಾವಿಷೈಶ್ಚಾನ್ಯೈರುರಗೈರನಿಲಾಶನೈಃ॥** 15

---

ಭೂಲೋಕದಲ್ಲಿ ಅವತರಿಸಿರುವುದು? ಆದ್ದರಿಂದ ಸಮೀಪದಲ್ಲಿರುವ ಉನ್ನತವಾದ ಆ ಕದಂಬ ವೃಕ್ಷವನ್ನು ಹತ್ತಿ ಈ ಸರ್ಪರಾಜನಿರುವ ಹ್ರದಕ್ಕೆ ಧುಮುಕುವೆನು!" (9-10). ಹೀಗೆ ಆಲೋಚಿಸಿ ಕೃಷ್ಣನು ತನ್ನ ಪರಿಕರವನ್ನು ಬಿಗಿದು ಕಟ್ಟಿ ನಾಗರಾಜನ ಹ್ರದಕ್ಕೆ ರಭಸದಿಂದ ಧುಮುಕಿದನು. ಧುಮುಕಿದ ವೇಗಕ್ಕೆ ಸಂಕ್ಷೋಭೆಗೊಂಡ ಆ ಮಹಾಹ್ರದದಿಂದ ಹುಟ್ಟಿದ ಜಲಬಿಂದುಗಳು ದೂರದಲ್ಲಿ ಬೆಳದಿದ್ದ ಮರಗಳನ್ನೂ ಎರಚಿದವು (11-12). ಸರ್ಪದ ದುಷ್ಟ ವಿಷಜ್ವಾಲೆಯಿಂದ ತಪ್ತವಾದ ನೀರು ಮತ್ತು ಗಾಳಿ ಸೋಕಿದೊಡನೆ ಆ ಮರಗಳು ಎಲ್ಲೆಡೆಯೂ ಜ್ವಾಲೆಯನ್ನು ಹರಡುತ್ತ ಧಗಧಗಿಲ್ ಎಂದು ಉರಿದವು! ಸರ್ಪದ ಮಡುವಿನಲ್ಲಿ ಕೃಷ್ಣನು ತನ್ನ ಭುಜವನ್ನು ಚಪ್ಪರಿಸಿದನು. ಆ ಶಬ್ದವನ್ನು ಕೇಳಿ ದೊಡನೆ ನಾಗರಾಜನು ಮೇಲೆದ್ದು ಬಂದನು! (13-14). ಸಿಟ್ಟಿನಿಂದ ಅವನ ಕಣ್ಣುಗಳು ಕೆಂಪಾಗಿದ್ದವು. ಮುಖಗಳಿಂದ ವಿಷಜ್ವಾಲೆಗಳನ್ನು ಉಗುಳುತ್ತಿದ್ದನು. ಮಹಾವಿಷಯುಕ್ತವಾದವೂ ವಾತಾಹಾರಿಗಳೂ ಆದ ಸರ್ಪಗಳ ಪರಿವಾರ

**ನಾಗಪತ್ನ್ಯಶ್ಚ ಶತಶೋ ಹಾರಿಹಾರೋಪಶೋಭಿತಾಃ।**
**ಪ್ರಕಂಪಿತತನುಕ್ಷೇಪಚಲತ್ಕುಂಡಲಕಾಂತಯಃ॥ 16**

**ತತಃ ಪ್ರವೇಷ್ಟಿತಸ್ಸರ್ಪ್ಯೈಸ್ಸ ಕೃಷ್ಣೋ ಭೋಗಬಂಧನೈಃ।**
**ದದಂಶುಸ್ತೇಽಪಿ ತಂ ಕೃಷ್ಣಂ ವಿಷಜ್ವಾಲಾಕುಲೈರ್ಮುಖೈಃ॥ 17**

**ತಂ ತತ್ರ ಪತಿತಂ ದೃಷ್ಟ್ವಾ ಸರ್ಪಭೋಗೈರ್ನಿಪೀಡಿತಮ್।**
**ಗೋಪಾ ವ್ರಜಮುಪಾಗಮ್ಯ ಚುಕ್ರುಶುಃ ಶೋಕಲಾಲಸಾಃ॥ 18**

*ಗೋಪಾ ಊಚುಃ*

**ಏಷ ಮೋಹಂ ಗತಃ ಕೃಷ್ಣೋ ಮಗ್ನೋ ವೈ ಕಾಲಿಯ ಹ್ರದೇ।**
**ಭಕ್ಷ್ಯತೇ ನಾಗರಾಜೇನ ತಮಾಗಚ್ಛತ ಪಶ್ಯತ॥ 19**

**ತಚ್ಛ್ರುತ್ವಾ ತತ್ರ ತೇ ಗೋಪಾ ವಜ್ರಪಾತೋಪಮಂ ವಚಃ।**
**ಗೋಪ್ಯಶ್ಚ ತ್ವರಿತಾ ಜಗ್ಮುರ್ಯಶೋದಾಪ್ರಮುಖಾ ಹ್ರದಮ್॥ 20**

---

ಅವನ ಜೊತೆಯಲ್ಲಿ ಬಂದಿತ್ತು (15). ಅಲ್ಲದೆ ಮನೋಹರವಾದ ಹಾರಗಳಿಂದ ಶೋಭಿಸತಕ್ಕವರೂ ತಮ್ಮ ದೇಹಗಳನ್ನು ಕುಲುಕಿಸುವುದರಿಂದ ಅಲ್ಲಾಡುವ ಕರ್ಣಕುಂಡಲಗಳ ಕಾಂತಿಯಿಂದ ವಿರಾಜಿತರೂ ಆದ ನೂರಾರು ನಾಗ ಪತ್ನಿಯರೂ ಬಂದರು! (16). ಆ ಸರ್ಪಗಳು ತಮ್ಮ ದೇಹಗಳಿಂದ ಕೃಷ್ಣನನ್ನು ಸುತ್ತಿ ಬಿಗಿದು, ವಿಷಜ್ವಾಲೆಗಳಿಂದ ತುಂಬಿದ ಮುಖಗಳಿಂದ ಮತ್ತೆ ಮತ್ತೆ ಕಚ್ಚಿದವು. ಅನಂತರ ಕೃಷ್ಣನು ಮಡುವಿನಲ್ಲಿ ಧುಮುಕಿರುವುದನ್ನೂ ಸರ್ಪದೇಹ ಗಳಿಂದ ಪೀಡಿತನಾಗಿ ಬಿಗಿಯಲ್ಪಟ್ಟಿರುವುದನ್ನೂ ನೋಡಿದ ಗೋಪಾಲರು ಶೋಕ ವ್ಯಾಕುಲರಾಗಿ ವ್ರಜಕ್ಕೆ ಓಡಿಹೋಗಿ ಗಟ್ಟಿಯಾಗಿ ಅಳತೊಡಗಿದರು (17-18). ಅಲ್ಲದೆ "ಕೃಷ್ಣನು ಕಾಳಿಯ ಮಡುವಿಗೆ ಧುಮುಕಿ ಎಚ್ಚರದಪ್ಪಿದ್ದಾನೆ. ಸರ್ಪರಾಜನು ಅವನನ್ನು ತಿಂದುಬಿಡುತ್ತಾನೆ! ಬನ್ನಿರಿ! ನೋಡಿರಿ!" ಎಂದು ಕೂಗಾಡಿದರು. ಆ ಮಾತನ್ನು ಕೇಳಿ ವ್ರಜದಲ್ಲಿದ್ದ ಗೋಪಗೋಪಿಯರಿಗೆ ಸಿಡಿಲು ಹೊಡೆದಂತಾಯಿತು. ಯಶೋದೆಯೇ ಮೊದಲಾಗಿ ಎಲ್ಲರೂ ಮಡುವಿನ ಬಳಿಗೆ ಓಡಿದರು (19-20). "ಹಾ! ಅಯ್ಯೋ, ಕೃಷ್ಣನೆಲ್ಲಿ?" ಎಂದು ಕೂಗುತ್ತ

**ಹಾ ಹಾ ಕ್ವಾಸಾವಿತಿ ಜನೋ ಗೋಪೀನಾಮತಿವಿಹ್ವಲಃ।**
**ಯಶೋದಯಾ ಸಮಂ ಭ್ರಾಂತೋ ದ್ರುತಂ ಪ್ರಸ್ಖಲಿತಂ ಯಯೌ॥ 21**

**ನಂದಗೋಪಶ್ಚ ಗೋಪಾಶ್ಚ ರಾಮಶ್ಚಾದ್ಭುತವಿಕ್ರಮಃ।**
**ತ್ವರಿತಂ ಯಮುನಾಂ ಜಗ್ಮುಃ ಕೃಷ್ಣದರ್ಶನಲಾಲಸಾಃ॥ 22**

**ದದೃಶುಶ್ಚಾಪಿ ತೇ ತತ್ರ ಸರ್ಪರಾಜವಶಂಗತಮ್।**
**ನಿಷ್ಪ್ರಯತ್ನೀಕೃತಂ ಕೃಷ್ಣಂ ಸರ್ಪಭೋಗವಿವೇಷ್ಟಿತಮ್॥ 23**

**ನಂದಗೋಪೋಽಪಿ ನಿಶ್ಚೇಷ್ಟೋ ನ್ಯಸ್ಯ ಪುತ್ರಮುಖೇ ದೃಶಮ್।**
**ಯಶೋದಾ ಚ ಮಹಾಭಾಗಾ ಬಭೂವ ಮುನಿಸತ್ತಮ॥ 24**

**ಗೋಪ್ಯಸ್ತ್ವನ್ಯಾ ರುದತ್ಯಶ್ಚ ದದೃಶುಃ ಶೋಕಕಾತರಾಃ।**
**ಪ್ರೋಚುಶ್ಚ ಕೇಶವಂ ಪ್ರೀತ್ಯಾ ಭಯಕಾತರ್ಯಗದ್ಗದಮ್॥ 25**

---

ಅತ್ಯಂತ ಶೋಕಾತುರರಾದ ಗೋಪಿಯರು ದಿಗ್ಭ್ರಾಂತರಾಗಿ ಮುಗ್ಗರಿಸಿ ಬೀಳುತ್ತ ಯಶೋದೆಯೊಡನೆ ಧಾವಿಸಿದರು. ನಂದಗೋಪನೂ ಇತರ ಗೋಪಾಲರೂ ಪರಾಕ್ರಮಿಯಾದ ಬಲರಾಮನೂ ಕೃಷ್ಣನನ್ನು ಕಾಣುವ ಲಾಲಸೆಯಿಂದ ಬೇಗಬೇಗನೆ ಯಮುನೆಗೆ ಹೋದರು (21-22). ಅಲ್ಲಿ ಹೋಗಿ ಅವರು ಸರ್ಪರಾಜನಿಗೆ ವಶನಾಗಿದ್ದ ಕೃಷ್ಣನನ್ನು ಕಂಡರು. ಸರ್ಪಗಳು ಅವನನ್ನು ಬಿಗಿದಿದ್ದವು. ಕೃಷ್ಣನು ಅಲ್ಲಾಡದೆ ನಿಶ್ಚೇಷ್ಟನಾಗಿದ್ದನು. ನಂದಗೋಪನು ತನ್ನ ಪುತ್ರನ ಮುಖವನ್ನೇ ಕಣ್ಣಿಟ್ಟು ನೋಡುತ್ತ ನಿಶ್ಚಲನಾಗಿ ನಿಂತುಬಿಟ್ಟನು. ಭಾಗ್ಯಶಾಲಿನಿಯಾದ ಯಶೋದೆಯ ಪರಿಸ್ಥಿತಿಯೂ, ಮೈತ್ರೇಯ, ಹಾಗೆಯೇ ಆಯಿತು (23-24). ಉಳಿದ ಗೋಪಿಯರು ಶೋಕಾರ್ತರಾಗಿ ಅಳುತ್ತ , ಏನಾಗುವುದೋ ಎಂದು ಭಯದಿಂದಲೂ ವ್ಯಾಕುಲತೆಯಿಂದಲೂ ತೊದಲುತ್ತ ಕೇಶವನ* ವಿಷಯವಾಗಿ ಪ್ರೀತಿಯಿಂದ ಹೀಗೆಂದರು (25): "ಈಗ ನಾವೆಲ್ಲರೂ

* ಮೂಲದಲ್ಲಿ 'ಕೇಶವಂ ಪ್ರೀತ್ಯಾ' ಎಂದು ಪಾಠವಿದೆ. ಇಲ್ಲಿ ಗೋಪಿಯರು ಕೇಶವನಿಗೆ ಏನನ್ನೂ ಹೇಳುವುದಿಲ್ಲ. ಆದ್ದರಿಂದ 'ಕೇಶವಪ್ರೀತ್ಯಾ' ಎಂದು ಪಾಠವಿದ್ದರೆ ಉತ್ತಮ.

*ಗೋಪ್ಯ ಊಚುಃ :*

**ಸರ್ವಾ ಯಶೋದಯಾ ಸಾರ್ಧಂ ವಿಶಾಮೋಽತ್ರ ಮಹಾಹ್ರದಮ್।**
**ಸರ್ಪರಾಜಸ್ಯ ನೋ ಗಂತುಮಸ್ಮಾಭಿರ್ಯುಜ್ಯತೇ ವ್ರಜಮ್॥ 26**

**ದಿವಸಃ ಕೋ ವಿನಾ ಸೂರ್ಯಂ ವಿನಾ ಚಂದ್ರೇಣ ಕಾ ನಿಶಾ।**
**ವಿನಾ ವೃಷೇಣ ಕಾ ಗಾವೋ ವಿನಾ ಕೃಷ್ಣೇನ ಕೋ ವ್ರಜಃ॥ 27**

**ವಿನಾ ಕೃತಾ ನ ಯಾಸ್ಯಾಮಃ ಕೃಷ್ಣೇನಾನೇನ ಗೋಕುಲಮ್।**
**ಅರಮ್ಯಂ ನಾತಿಸೇವ್ಯಂ ಚ ವಾರಿಹೀನಂ ಯಥಾ ಸರಃ॥ 28**

**ಯತ್ರ ನೇಂದೀವರದಲಶ್ಯಾಮಕಾಂತಿರಯಂ ಹರಿಃ।**
**ತೇನಾಪಿ ಮಾತುರ್ವಾಸೇನ ರತಿರಸ್ತೀತಿ ವಿಸ್ಮಯಃ॥ 29**

**ಉತ್ಫುಲ್ಲಪಂಕಜದಲಸ್ಪಷ್ಟಕಾಂತಿವಿಲೋಚನಮ್।**
**ಅಪಶ್ಯಂತ್ಯೋ ಹರಿಂ ದೀನಾಃ ಕಥಂ ಗೋಷ್ಠೇ ಭವಿಷ್ಯಥ॥ 30**

**ಅತ್ಯಂತಮಧುರಾಲಾಪಹೃತಾಶೇಷಮನೋರಥಮ್।**
**ನ ವಿನಾ ಪುಂಡರೀಕಾಕ್ಷಂ ಯಾಸ್ಯಾಮೋ ನಂದಗೋಕುಲಮ್॥ 31**

---

ಯಶೋದೆಯೊಡನೆ ಸರ್ಪರಾಜನ ಈ ಮಡುವಿಗೆ ಹಾರಿಬಿಡೋಣ! ನಾವೀಗ ವ್ರಜಕ್ಕೆ ಹೋಗುವುದು ಉಚಿತವಲ್ಲ. ಸೂರ್ಯನಿಲ್ಲದ ದಿನವೆಂದರೇನು? ಚಂದ್ರನಿಲ್ಲದ ರಾತ್ರಿಯಿಂದೇನು? ಹೋರಿಯಿಲ್ಲದೆ ಹಸುಗಳಿಂದೇನು ಪ್ರಯೋಜನ? ಕೃಷ್ಣನಿಲ್ಲದೆ ವ್ರಜದಲ್ಲಿ ಇರುವುದೆಂತು? (26-27). ಕೃಷ್ಣನಿಲ್ಲದೆ ನಾವು ವ್ರಜಕ್ಕೆ ಹೋಗುವುದಿಲ್ಲ. ನೀರಿಲ್ಲದ ಕೊಳದಂತೆ ವ್ರಜವು ಕೃಷ್ಣನಿಲ್ಲದಿದ್ದರೆ ರಮ್ಯವೂ ಅಲ್ಲ, ಸೇವ್ಯವೂ ಅಲ್ಲ. ಇಂದೀವರದಲಶ್ಯಾಮಕಾಂತಿಯಾದ ಹರಿ ಇಲ್ಲದಿದ್ದಾಗ, ಅದು ತವರುಮನೆಯಾದರೂ ಸಂತೋಷವಾಗುತ್ತದೆಯೆಂದರೆ ಆಶ್ಚರ್ಯವೇ ಸರಿ! (28-29). ಅರಳಿದ ತಾವರೆಯ ಎಸಳಿನಂತೆ ರಮಣೀಯವಾದ ನೇತ್ರವುಳ್ಳ ಹರಿಯನ್ನು ಕಾಣದೆ, ವ್ರಜದಲ್ಲಿ ನೀವು ದೈನ್ಯದಿಂದ ಹೇಗೆ ಇರುವಿರಿ? ತನ್ನ ಅತ್ಯಂತ ಮಧುರವಾದ ನುಡಿಗಳಿಂದ ನಮ್ಮ ಚಿತ್ತವನ್ನೆಲ್ಲ ಅಪಹರಿಸಿರುವ ಈ ಪುಂಡರೀಕಾಕ್ಷನನ್ನು ಬಿಟ್ಟು ನಂದಗೋಕುಲಕ್ಕೆ ಹೇಗೆ

**ಭೋಗೇನಾವೇಷ್ಟಿತಸ್ಯಾಪಿ ಸರ್ಪರಾಜಸ್ಯ ಪಶ್ಯತ।**
**ಸ್ಮಿತಶೋಭಿ ಮುಖಂ ಗೋಪ್ಯಃ ಕೃಷ್ಣಸ್ಯಾಸ್ಮದ್ವಿಲೋಕನೇ॥** 32

*ಶ್ರೀಪರಾಶರ ಉವಾಚ:*

**ಇತಿ ಗೋಪೀವಚಃ ಶ್ರುತ್ವಾ ರೌಹಿಣೇಯೋ ಮಹಾಬಲಃ।**
**ಗೋಪಾಂಶ್ಚ ತ್ರಾಸವಿಧುರಾನ್ವಿಲೋಕ್ಯ ಸ್ತಿಮಿತೇಕ್ಷಣಾನ್॥** 33

**ನಂದಂ ಚ ದೀನಮತ್ಯರ್ಥಂ ನ್ಯಸ್ತದೃಷ್ಟಿಂ ಸುತಾನನೇ।**
**ಮೂರ್ಛಾಕುಲಾಂ ಯಶೋದಾಂ ಚ ಕೃಷ್ಣಮಾಹಾತ್ಮ್ಯಸಂಜ್ಞಯಾ॥** 34

**ಕಿಮಿದಂ ದೇವದೇವೇಶ ಭಾವೋಽಯಂ ಮಾನುಷಸ್ತ್ವಯಾ।**
**ವ್ಯಜ್ಯತೇಽತ್ಯಂತಮಾತ್ಮಾನಂ ಕಿಮನಂತಂ ನ ವೇತ್ಸಿ ಯತ್॥** 35

**ತ್ವಮೇವ ಜಗತೋ ನಾಭಿರರಾಣಾಮಿವ ಸಂಶ್ರಯಃ।**
**ಕರ್ತಾಪಹರ್ತಾ ಪಾತಾ ಚ ತ್ರೈಲೋಕ್ಯಂ ತ್ವಂ ತ್ರಯೀಮಯಃ॥** 36

---

ಹೋಗೋಣ? (30-31). ಗೋಪಿಯರೆ, ನೋಡಿರಿ! ಸರ್ಪರಾಜನ ದೇಹವು ತನ್ನನ್ನು ಸುತ್ತುಗಟ್ಟಿ ಬಿಗಿದಿದ್ದರೂ ನಮ್ಮನ್ನು ನೋಡುವಾಗ ಕೃಷ್ಣನ ಮುಖವು ಮುಗುಳ್ನಗೆಯಿಂದ ಹೇಗೆ ಶೋಭಿಸುತ್ತಿದೆ!" ಎಂದು ನುಡಿಯುತ್ತಿದ್ದರು (32). ರೋಹಿಣೀ ಪುತ್ರನೂ ಬಲಾಢ್ಯನೂ ಆದ ರಾಮನು ಗೋಪಿಯರ ಈ ನುಡಿಗಳನ್ನು ಕೇಳಿ, ಭಯವಿಹ್ವಲರಾಗಿ ನೆಟ್ಟದೃಷ್ಟಿಯಿಂದ ಕೃಷ್ಣನನ್ನು ನೋಡುತ್ತ ನಿಂತಿದ್ದ ಗೋಪಾಲರನ್ನೂ ಅವಲೋಕಿಸಿದನು. ಅತ್ಯಂತ ದೀನನಾಗಿ ಮಗನ ಮುಖವನ್ನೇ ನೋಡುತ್ತಿದ್ದ ನಂದನನ್ನೂ ಎಚ್ಚರದಪ್ಪಿದ ಯಶೋದೆಯನ್ನೂ ನೋಡಿ ರಾಮನು ತನ್ನ ಒಂದಾನೊಂದು ಸಂಕೇತಭಾಷೆಯಿಂದ ಕೃಷ್ಣನಿಗೆ ಹೀಗೆಂದನು (33-34): "ಹೇ ದೇವೇಶ್ವರ, ಏನಿದು ಹೀಗೆ ಮನುಷ್ಯರ ನಡವಳಿಕೆಯನ್ನೇ ವ್ಯಕ್ತಪಡಿಸುತ್ತಿದ್ದೀಯೆ? ನೀನು ಅನಂತನೆಂಬುದು ಗೊತ್ತಿಲ್ಲವೆ? (35). ಬಂಡಿಯ ಅರೆಕಾಲುಗಳಿಗೆ ಅಚ್ಚು ಇದ್ದಂತೆ ಸಮಸ್ತ ಜಗತ್ತಿಗೂ ನೀನು ಆಶ್ರಯನಾದವನು. ತ್ರಯೀಮಯನಾದ ನೀನು ಲೋಕತ್ರಯದ ಕರ್ತನೂ ವಿಧ್ವಂಸಕನೂ ರಕ್ಷಕನೂ ಆಗಿದ್ದೀಯೆ (36). ಹೇ ಅಚಿಂತ್ಯಾತ್ಮ, ಇಂದ್ರರುದ್ರಾಗ್ನಿ

**ಸೇಂದ್ರೈರುದ್ರಾಗ್ನಿವಸುಭಿರಾದಿತ್ಯೈರ್ಮರುದಶ್ವಿಭಿಃ।**
**ಚಿಂತ್ಯಸೇ ತ್ವಮಚಿಂತ್ಯಾತ್ಮನ್ ಸಮಸ್ತೈಶ್ಚೈವ ಯೋಗಿಭಿಃ॥ 37**

**ಜಗತ್ಯರ್ಥಂ ಜಗನ್ನಾಥ ಭಾರಾವತರಣೇಚ್ಛಯಾ।**
**ಅವತೀರ್ಣೋಽಸಿ ಮರ್ತ್ಯೇಷು ತವಾಂಶಶ್ಚಾಹಮಗ್ರಜಃ॥ 38**

**ಮನುಷ್ಯಲೀಲಾಂ ಭಗವನ್ ಭಜತಾ ಭವತಾ ಸುರಾಃ।**
**ವಿಡಂಬಯಂತಸ್ತ್ವಲ್ಲೀಲಾಂ ಸರ್ವ ಏವ ಸಹಾಸತೇ॥ 39**

**ಅವತಾರ್ಯ ಭವಾನ್ ಪೂರ್ವಂ ಗೋಕುಲೇ ತು ಸುರಾಂಗನಾಃ।**
**ಕ್ರೀಡಾರ್ಥಮಾತ್ಮನಃ ಪಶ್ಚಾದವತೀರ್ಣೋಽಸಿ ಶಾಶ್ವತ॥ 40**

**ಅತ್ರಾವತೀರ್ಣಯೋಃ ಕೃಷ್ಣ ಗೋಪಾ ಏವ ಹಿ ಬಾಂಧವಾಃ।**
**ಗೋಪ್ಯಶ್ಚ ಸೀದತಃ ಕಸ್ಮಾದೇತಾನ್ ಬಂಧೂನುಪೇಕ್ಷಸೇ॥ 41**

**ದರ್ಶಿತೋ ಮಾನುಷೋ ಭಾವೋ ದರ್ಶಿತಂ ಬಾಲಚಾಪಲಮ್।**
**ತದಯಂ ದಮ್ಯತಾಂ ಕೃಷ್ಣ ದುಷ್ಟಾತ್ಮಾ ದಶನಾಯುಧಃ॥ 42**

---

ವಸುಗಳಿಂದಲೂ ಆದಿತ್ಯರಿಂದಲೂ ಮರುತ್ತುಗಳಿಂದಲೂ ಅಶ್ವಿನೀದೇವತೆಗಳಿಂದಲೂ ಸಮಸ್ತಯೋಗಿಗಳಿಂದಲೂ ಧ್ಯಾನಿಸಲ್ಪಡತಕ್ಕವನು ನೀನು. ಹೇ ಜಗನ್ನಾಥ, ಪೃಥಿವಿಯ ಕಾರ್ಯಕ್ಕಾಗಿ ಅದರ ಭಾರವನ್ನಿಳಿಸಬೇಕೆಂಬ ಉದ್ದೇಶದಿಂದ ಮನುಷ್ಯರ ನಡುವೆ ಅವತರಿಸಿದ್ದೀಯೆ. ನಿನಗೆ ಅಗ್ರಜನಾದ ನಾನು ನಿನ್ನ ಒಂದಂಶವಾಗಿದ್ದೇನೆ (37-38). ಹೇ ಭಗವನ್, ಮನುಷ್ಯಲೀಲೆಯನ್ನು ನಟಿಸುತ್ತಿರುವ ನಿನ್ನೊಡನೆ ದೇವತೆಗಳೂ ನಿನ್ನ ಲೀಲೆಯನ್ನು ಅನುಕರಿಸುತ್ತ ಇದ್ದಾರೆ. ಹೇ ಶಾಶ್ವತ, ನಿನ್ನ ಕ್ರೀಡೆಗಾಗಿ ಅಪ್ಸರಸ್ತ್ರೀಯರನ್ನು ಮೊದಲೇ ಗೋಕುಲದಲ್ಲಿ ಅವತಾರ ಮಾಡಿಸಿ, ಅನಂತರ ನೀನು ಅವತರಿಸಿದ್ದೀಯೆ (39-40). ಕೃಷ್ಣ, ಇಲ್ಲಿ ಅವತರಿಸಿದ ನಮಗೆ ಗೋಪ ಗೋಪಿಯರೇ ಬಾಂಧವರಾಗಿದ್ದಾರೆ. ಶೋಕಿಸುತ್ತಿರುವ ಈ ಬಂಧುಗಳನ್ನು ಏಕೆ ಉಪೇಕ್ಷಿಸುತ್ತಿದ್ದೀಯೆ? ಮನುಷ್ಯರ ನಡವಳಿಕೆಯನ್ನು ತೋರಿಸಿದ್ದಾಯಿತು. ಬಾಲಕರ ಚಾಪಲ್ಯವನ್ನು ಮೆರೆಸಿದ್ದಾಯಿತು. ಇನ್ನು ಈ ದುಷ್ಟಾತ್ಮನಾದ ದಂತಾಯುಧನನ್ನು ದಮನಮಾಡು"

*ಶ್ರೀಪರಾಶರ ಉವಾಚ:*

**ಇತಿ ಸಂಸ್ಮಾರಿತಃ ಕೃಷ್ಣಃ ಸ್ಮಿತಭಿನ್ನೋಷ್ಠಸಂಪುಟಃ।**
**ಆಸ್ಫೋಟ್ಯ ಮೋಚಯಾಮಾಸ ಸ್ವದೇಹಂ ಭೋಗಿಬಂಧನಾತ್॥** 43

**ಆನಮ್ಯ ಚಾಪಿ ಹಸ್ತಾಭ್ಯಾಮುಭಾಭ್ಯಾಂ ಮಧ್ಯಮಂ ಶಿರಃ।**
**ಆರುಹ್ಯಾಭುಗ್ನಶಿರಸಃ ಪ್ರಣನರ್ತೋರುವಿಕ್ರಮಃ॥** 44

**ಪ್ರಾಣಾಃ ಫಣೇಽಭವಂಶ್ಚಾಸ್ಯ ಕೃಷ್ಣಸ್ಯಾಂಘ್ರಿನಿಕುಟ್ಟನೈಃ।**
**ಯತ್ರೋನ್ನತಂ ಚ ಕುರುತೇ ನನಾಮಾಸ್ಯ ತತಶ್ಶಿರಃ॥** 45

**ಮೂರ್ಛಾಮುಪಾಯಯೌ ಭ್ರಾಂತ್ಯಾ ನಾಗಃ ಕೃಷ್ಣಸ್ಯ ರೇಚಕೈಃ।**
**ದಂಡಪಾತನಿಪಾತೇನ ವವಾಮ ರುಧಿರಂ ಬಹು॥** 46

**ತಂ ವಿಭುಗ್ನಶಿರೋಗ್ರೀವಮಾಸ್ಯೇಭ್ಯಃ ಸ್ರುತಶೋಣಿತಮ್।**
**ವಿಲೋಕ್ಯ ಶರಣಂ ಜಗ್ಮುಸ್ತತ್ಪತ್ನ್ಯೋ ಮಧುಸೂದನಮ್॥** 47

---

ಎಂದನು (41-42). ಹೀಗೆ ತನ್ನ ನಿಜಸ್ವರೂಪವನ್ನು ನೆನಪುಮಾಡಿಕೊಡಲಾಗಿ, ಕೃಷ್ಣನು ಮೆಲ್ಲಗೆ ತುಟಿದೆರೆದು ನಕ್ಕು ಮೈಯನ್ನು ಕೊಡವಿ ಸರ್ಪಬಂಧನದಿಂದ ತನ್ನ ದೇಹವನ್ನು ಬಿಡಿಸಿಕೊಂಡನು. ಅನಂತರ ಅಗಾಧ ಪರಾಕ್ರಮಿಯಾದ ಕೃಷ್ಣನು ತನ್ನ ಎರಡು ಕೈಗಳಿಂದ ಸರ್ಪರಾಜನ ನಡುವಿನ ಹೆಡೆಯನ್ನೆಳೆದು ಬಗ್ಗಿಸಿ ಅದರ ಮೇಲೆ ಹತ್ತಿ ನಿಂತು ನರ್ತನ ಮಾಡತೊಡಗಿದನು (43-44). ಕೃಷ್ಣನ ಚರಣಕುಟ್ಟನಗಳಿಂದ ಕಾಳಿಯನ ಪ್ರಾಣಗಳು ಫಣೆಗೆ ಬಂದವು! ಅವನು ಯಾವ ಶಿರಸ್ಸನ್ನು ಮೇಲೆತ್ತುವನೋ ಅದನ್ನು ಕೃಷ್ಣನು ತುಳಿದು ಬಗ್ಗಿಸುವನು. ಶ್ರೀಕೃಷ್ಣನ ಭ್ರಮಣ, ರೇಚಕ, ದಂಡನಿಪಾತಗಳೆಂಬ ನೃತ್ಯ ಗತಿಗಳಿಂದ ನಾಗರಾಜನಿಗೆ ಮೂರ್ಛೆ ಬಂದಿತು. ಬಹಳ ರಕ್ತವನ್ನು ಕಕ್ಕಿದನು (45-46). ಆತನ ತಲೆಗಳೂ ಕುತ್ತಿಗೆಗಳೂ ಬಗ್ಗಿದವು. ಬಾಯಿಗಳಿಂದ ರಕ್ತವು ಉಕ್ಕಿ ಹರಿಯಿತು. ಅವನ ಕರುಣ ಸ್ಥಿತಿಯನ್ನು ಕಂಡು ಕಾಳಿಯನ ಪತ್ನಿಯರು ಮಧುಸೂದನನಿಗೆ ಶರಣಾದರು. ಶರಣಾಗಿ ಇಂತೆಂದರು (47): "ಓ ದೇವೇಶ್ವರ, ನೀನು ಯಾರೆಂದು ತಿಳಿಯಿತು. ಸರ್ವಜ್ಞನೀನು. ಸರ್ವೋತ್ತಮ ನೀನು. ಅಚಿಂತ್ಯವಾದ

*ನಾಗಪತ್ನ್ಯ ಊಚುಃ:*

**ಜ್ಞಾತೋಽಸಿ ದೇವದೇವೇಶ ಸರ್ವಜ್ಞಸ್ತ್ವಮನುತ್ತಮ ।**
**ಪರಂ ಜ್ಯೋತಿರಚಿಂತ್ಯಂ ಯತ್ತದಂಶಃ ಪರಮೇಶ್ವರಃ ॥** 48

**ನ ಸಮರ್ಥಾಃ ಸುರಾಸ್ತೋತುಂ ಯಮನನ್ಯಭವಂ ವಿಭುಮ್ ।**
**ಸ್ವರೂಪವರ್ಣನಂ ತಸ್ಯ ಕಥಂ ಯೋಷಿತ್ ಕರಿಷ್ಯತಿ ॥** 49

**ಯಸ್ಯಾಖಿಲಮಹೀವ್ಯೋಮಜಲಾಗ್ನಿಪವನಾತ್ಮಕಮ್ ।**
**ಬ್ರಹ್ಮಾಂಡಮಲ್ಪಕಾಲ್ಪಾಂಶಃ ಸ್ತೋಷ್ಯಾಮಸ್ತಂ ಕಥಂ ವಯಮ್ ॥** 50

**ಯತಂತೋ ನ ವಿದುರ್ನಿತ್ಯಂ ಯತ್ ಸ್ವರೂಪಂ ಹಿ ಯೋಗಿನಃ ।**
**ಪರಮಾರ್ಥಮಣೋರಲ್ಪಂ ಸ್ಥೂಲಾತ್ ಸ್ಥೂಲಂ ನತಾಃ ಸ್ಮ ತಮ್ ॥**

**ನ ಯಸ್ಯ ಜನ್ಮನೇ ಧಾತಾ ಯಸ್ಯ ಚಾಂತಾಯ ನಾಂತಕಃ ।**
**ಸ್ಥಿತಿಕರ್ತಾ ನ ಚಾನ್ಯೋಽಸ್ತಿ ಯಸ್ಯ ತಸ್ಮೈ ನಮಸ್ಸದಾ ॥** 52

**ಕೋಪಃ ಸ್ವಲ್ಪೋಽಪಿ ತೇ ನಾಸ್ತಿ ಸ್ಥಿತಿಪಾಲನಮೇವ ತೇ ।**
**ಕಾರಣಂ ಕಾಲಿಯಸ್ಯಾಸ್ಯ ದಮನೇ ಶ್ರೂಯತಾಂ ವಚಃ ॥** 53

---

ಯಾವ ಪರಂಜ್ಯೋತಿಯುಂಟೋ ಅದರ ಅಂಶನಾದ ಪರಮೇಶ್ವರನೇ ನೀನು (48). ಸ್ವಯಂಭುವೂ ವಿಭುವೂ ಆದ ಯಾವ ನಿನ್ನನ್ನು ಸ್ತುತಿಸಲು ಸುರರೇ ಅಸಮರ್ಥರೋ ಅಂತಹವನನ್ನು ಒಬ್ಬ ಹೆಂಗಸು ಹೇಗೆ ಸ್ತುತಿಸಿಯಾಳು? ಸಮಸ್ತ ಭೂಮಿ ವ್ಯೋಮ ಜಲ ವಹ್ನಿ ವಾಯುಗಳನ್ನೊಳಗೊಂಡ ಬ್ರಹ್ಮಾಂಡವು ಯಾವಾತನ ಒಂದು ಚಿಕ್ಕ ಅಂಶದ ಅಂಶವೋ ಅವನನ್ನು ನಾವು ಹೇಗೆ ಸ್ತುತಿಸಬಲ್ಲೆವು? (49-50). ಯೋಗಿಜನರು ಪ್ರಯತ್ನ ಮಾಡಿದರೂ ಯಾರ ನಿತ್ಯ ಸ್ವರೂಪವನ್ನು ಅರಿಯಲಾರದೆ ಹೋಗಿದ್ದಾರೋ, ಯಾರು ಅಣುವಿಗಿಂತ ಅಣುವಾಗಿಯೂ ಸ್ಥೂಲಕ್ಕಿಂತ ಸ್ಥೂಲವಾಗಿಯೂ ಇರುವನೋ ಆ ಪರಮಾರ್ಥಕ್ಕೆ ನಾವು ಮಣಿದಿದ್ದೇವೆ (51). ಯಾರ ಜನ್ಮಕ್ಕೆ ಸೃಷ್ಟಿಕರ್ತನೂ ಯಾರ ಅಂತಕ್ಕೆ ಲಯಕರ್ತನೂ ಸ್ಥಿತಿಗೆ ಸ್ಥಿತಿಕರ್ತನೂ ಇಲ್ಲವೋ ಅಂತಹ ಸರ್ವತಂತ್ರ ಸ್ವತಂತ್ರನಿಗೆ ಸದಾ ನಮಸ್ಕಾರ. ಈ ಕಾಳಿಯನಾಗನನ್ನು ದಮನ ಮಾಡಬೇಕೆಂದು ನಿನಗೆ ಕೋಪ ಲೇಶವೂ ಇಲ್ಲ. ಲೋಕ ರಕ್ಷಣೆಯೇ ಹೀಗೆ ದಮನ ಮಾಡಲು

**ಸ್ತ್ರಿಯೋಽನುಕಂಪ್ಯಾಸ್ಸಾಧೂನಾಂ ಮೂಢಾ ದೀನಾಶ್ಚ ಜಂತವಃ।**
**ಯತಸ್ತತೋಽಸ್ಯ ದೀನಸ್ಯ ಕ್ಷಮ್ಯತಾಂ ಕ್ಷಮತಾಂ ವರ॥ 54**

**ಸಮಸ್ತಜಗದಾಧಾರೋ ಭವಾನಲ್ಪಬಲಃ ಫಣೀ।**
**ತ್ವತ್ಪಾದಪೀಡಿತೋ ಜಹ್ಯಾನ್ಮುಹೂರ್ತಾರ್ಧೇನ ಜೀವಿತಮ್॥ 55**

**ಕ್ವ ಪನ್ನಗೋಽಲ್ಪವೀರ್ಯೋಽಯಂ ಕ್ವ ಭವಾನ್ಭುವನಾಶ್ರಯಃ।**
**ಪ್ರೀತಿದ್ವೇಷೌ ಸಮೋತ್ಕೃಷ್ಟಗೋಚರೌ ಭವತೋಽವ್ಯಯ॥ 56**

**ತತಃ ಕುರು ಜಗತ್ಸ್ವಾಮಿನ್ ಪ್ರಸಾದಮವಸೀದತಃ।**
**ಪ್ರಾಣಾಂಸ್ತ್ಯಜತಿ ನಾಗೋಽಯಂ ಭರ್ತೃಭಿಕ್ಷಾಪ್ರದೀಯತಾಮ್॥ 57**

**ಭುವನೇಶ ಜಗನ್ನಾಥ ಮಹಾಪುರುಷ ಪೂರ್ವಜ।**
**ಪ್ರಾಣಾಂಸ್ತ್ಯಜತಿ ನಾಗೋಽಯಂ ಭರ್ತೃಭಿಕ್ಷಾಂ ಪ್ರಯಚ್ಛ ನಃ॥ 58**

---

ನಿಮಿತ್ತವಾಗಿದೆ. ಆದ್ದರಿಂದ ನಮ್ಮ ಪ್ರಾರ್ಥನೆಯನ್ನು ಆಲಿಸು (52-53). ಕ್ಷಮಾಶೀಲರಲ್ಲಿ ಶ್ರೇಷ್ಠನಾದವನೆ, ಸ್ತ್ರೀಯರೂ ಮೂಢರೂ ದೀನಜಂತುಗಳೂ ಸಾಧುಜನರ ಕೃಪೆಗೆ ಸದಾ ಪಾತ್ರರಾದವರು. ಆದ್ದರಿಂದ ದೀನನಾದ ಈ ಸರ್ಪರಾಜನನ್ನು ಕ್ಷಮಿಸು. ನೀನು ಸಮಸ್ತ ಜಗತ್ತುಗಳಿಗೆ ಆಧಾರನಾದವನು. ಈ ಸರ್ಪವು ದುರ್ಬಲವಾದ ಒಂದು ಜಂತು. ನಿನ್ನ ಪಾದದ ತುಳಿತಕ್ಕೆ ಸಿಕ್ಕಿ ಈತನು ಅರ್ಧಮುಹೂರ್ತದಲ್ಲಿ ಪ್ರಾಣವನ್ನು ತೊರೆಯುವನು (54-55). ಅಲ್ಪ ಬಲನಾದ ಈ ನಾಗನೆಲ್ಲಿ? ಜಗದಾಧಾರನಾದ ನೀನೆಲ್ಲಿ? ಹೇ ಅವ್ಯಯ, ತನಗೆ ಸಮಾನರಾದವರಲ್ಲಿ ಪ್ರೀತಿಯೂ ತನಗಿಂತ ಉತ್ಕೃಷ್ಟರಲ್ಲಿ ದ್ವೇಷವೂ ಕಂಡುಬರುತ್ತವೆ (ಈ ದೀನನಲ್ಲಿ ದ್ವೇಷವೆ?) (56). ಆದ್ದರಿಂದ, ಹೇ ಜಗದೀಶ್ವರ, ಕುಸಿದು ಬೀಳುತ್ತಿರುವ ಈತನಲ್ಲಿ ಪ್ರಸನ್ನನಾಗು. ಈ ನಾಗನು ಪ್ರಾಣವನ್ನು ಬಿಡುವುದರಲ್ಲಿದ್ದಾನೆ. ನಮಗೆ ಪತಿಭಿಕ್ಷೆಯನ್ನು ಕರುಣಿಸು. ಹೇ ವಿಶ್ವೇಶ್ವರ, ಜಗನ್ನಾಥ, ಮಹಾಪುರುಷ, ಜಗದಾದ್ಯ ಈ ನಾಗನು ಪ್ರಾಣವನ್ನು ತೊರೆಯುತ್ತಿದ್ದಾನೆ. ನಮಗೆ ಪತಿಭಿಕ್ಷೆಯನ್ನು ನೀಡು (57-58). ಹೇ ವೇದಾಂತ ವೇದ್ಯ, ದೇವೇಶ, ದುಷ್ಟದೈತ್ಯ

**ವೇದಾಂತವೇದ್ಯ ದೇವೇಶ ದುಷ್ಟದೈತ್ಯನಿಬರ್ಹಣ।**
**ಪ್ರಾಣಾಂಸ್ತ್ಯಜತಿ ನಾಗೋಽಯಂ ಭರ್ತೃಭಿಕ್ಷಾ ಪ್ರದೀಯತಾಮ್॥ 59**

*ಶ್ರೀಪರಾಶರ ಉವಾಚ:*

**ಇತ್ಯುಕ್ತೇ ತಾಭಿರಾಶ್ವಸ್ಯ ಕ್ಲಾಂತದೇಹೋಽಪಿ ಪನ್ನಗಃ।**
**ಪ್ರಸೀದ ದೇವದೇವೇತಿ ಪ್ರಾಹ ವಾಕ್ಯಂ ಶನೈಃ ಶನೈಃ॥ 60**

*ಕಾಲಿಯ ಉವಾಚ:*

**ತವಾಷ್ಟಗುಣಮೈಶ್ವರ್ಯಂ ನಾಥ ಸ್ವಾಭಾವಿಕಂ ಪರಮ್।**
**ನಿರಸ್ತಾತಿಶಯಂ ಯಸ್ಯ ತಸ್ಯ ಸ್ತೋಷ್ಯಾಮಿ ಕಿನ್ನ್ವಹಮ್॥ 61**

**ತ್ವಂ ಪರಸ್ತ್ವಂ ಪರಸ್ಯಾದ್ಯಃ ಪರಂ ತ್ವತ್ತಃ ಪರಾತ್ಮಕ।**
**ಪರಸ್ಮಾತ್ಪರಮೋ ಯಸ್ತ್ವಂ ತಸ್ಯ ಸ್ತೋಷ್ಯಾಮಿ ಕಿನ್ನ್ವಹಮ್॥ 62**

**ಯಸ್ಮಾದ್‌ಬ್ರಹ್ಮಾ ಚ ರುದ್ರಶ್ಚ ಚಂದ್ರೇಂದ್ರಮರುದಶ್ವಿನಃ।**
**ವಸವಶ್ಚ ಸಹಾದಿತ್ಯೈಸ್ತಸ್ಯ ಸ್ತೋಷ್ಯಾಮಿ ಕಿನ್ನ್ವಹಮ್॥ 63**

---

ಸಂಹಾರಕ, ಈ ನಾಗನು ಪ್ರಾಣವನ್ನು ಬಿಡುತ್ತಿದ್ದಾನೆ. ಪತಿ ಭಿಕ್ಷೆಯನ್ನು ನೀಡು" ಎಂದು ಪ್ರಾರ್ಥಿಸಿದರು. ಹೀಗೆ ನಾಗಪತ್ನಿಯರು ಪ್ರಾರ್ಥಿಸುತ್ತಿರಲಾಗಿ ನಾಗರಾಜನು ತುಂಬ ಬಳಲಿದ್ದರೂ ಸ್ವಲ್ಪ ಚೇತರಿಸಿಕೊಂಡು 'ದೇವದೇವ, ಪ್ರಸನ್ನನಾಗು' ಎಂದು ಹೇಳಿ ಮೆಲ್ಲ ಮೆಲ್ಲಗೆ ಈ ಮಾತನ್ನಾಡಿದನು (59-60). "ಸ್ವಾಮಿ, ನಿರತಿಶಯವಾದ ಅಷ್ಟಗುಣೈಶ್ವರ್ಯವೂ ನಿನ್ನಲ್ಲಿ ಸಹಜವಾಗಿದೆ. ನಿನ್ನ ಒಂದಂಶವನ್ನಾದರೂ ಸ್ತುತಿಸಲು ನನಗೆ ಯಾವ ಶಕ್ತಿಯುಂಟು? (61). ಪರಮೋತ್ಕೃಷ್ಟನಾದ ಪರನು ನೀನು. ಹಿರಣ್ಯಗರ್ಭನಾದ ಪರನಿಗೆ ಜನಕ, ಅವ್ಯಕ್ತವಾದ ಪರವು ನಿನ್ನಿಂದ ಪ್ರವರ್ತಿಸುತ್ತದೆ. ಅವ್ಯಕ್ತವಾದ ಪರಕ್ಕೆ ಪ್ರೇರಕ ನೀನು. ಇಂದ್ರಿಯಾದಿಪರಗಳಿಗಿಂತಲೂ ಪರಮ ನೀನು. ನಿನ್ನನ್ನು ನಾನು ಸ್ತುತಿಸಬಲ್ಲೆನೆ? (62). ಯಾರಿಂದ ಬ್ರಹ್ಮ, ರುದ್ರ, ಚಂದ್ರ, ಇಂದ್ರ, ಮರುತ್, ಅಶ್ವಿನೀ ದೇವತೆಗಳು, ವಸುಗಳು, ಆದಿತ್ಯರು ಉದ್ಭವಿಸಿದ್ದಾರೋ ಅಂತಹ ನಿನ್ನನ್ನು ನಾನು ಸ್ತುತಿಸಬಲ್ಲೆನೆ? ಈ ಸಮಸ್ತ ವಿಶ್ವವೂ ಯಾವಾತನ ಕಾಲ್ಪನಿಕ

**ಏಕಾವಯವಸೂಕ್ಷ್ಮಾಂಶೋ ಯಸ್ಯೈತದಖಿಲಂ ಜಗತ್।**
**ಕಲ್ಪನಾವಯವಸ್ಯಾಂಶಸ್ತಸ್ಯ ಸ್ತೋಷ್ಯಾಮಿ ಕಿನ್ನ್ವಹಮ್॥** 64

**ಸದಸದ್ರೂಪಿಣೋ ಯಸ್ಯ ಬ್ರಹ್ಮಾದ್ಯಾಸ್ತ್ರಿದಶೇಶ್ವರಾಃ।**
**ಪರಮಾರ್ಥಂ ನ ಜಾನಂತಿ ತಸ್ಯ ಸ್ತೋಷ್ಯಾಮಿ ಕಿನ್ನ್ವಹಮ್॥** 65

**ಬ್ರಹ್ಮಾದ್ಯೈರರ್ಚಿತೋ ಯಸ್ತು ಗಂಧಪುಷ್ಪಾನುಲೇಪನೈಃ।**
**ನಂದನಾದಿಸಮುದ್ಭೂತೈಸ್ಸೋಽರ್ಚ್ಯತೇ ವಾ ಕಥಂ ಮಯಾ॥** 66

**ಯಸ್ಯಾವತಾರರೂಪಾಣಿ ದೇವರಾಜಸ್ಸದಾರ್ಚತಿ।**
**ನ ವೇತ್ತಿ ಪರಮಂ ರೂಪಂ ಸೋಽರ್ಚ್ಯತೇ ವಾ ಕಥಂ ಮಯಾ॥** 67

**ವಿಷಯೇಭ್ಯಸ್ಸಮಾವೃತ್ಯ ಸರ್ವಾಕ್ಷಾಣಿ ಚ ಯೋಗಿನಃ।**
**ಯಮರ್ಚಯಂತಿ ಧ್ಯಾನೇನ ಸೋಽರ್ಚ್ಯತೇ ವಾ ಕಥಂ ಮಯಾ॥** 68

**ಹೃದಿಸಂಕಲ್ಪ್ಯ ಯದ್ರೂಪಂ ಧ್ಯಾನೇನಾರ್ಚಂತಿ ಯೋಗಿನಃ।**
**ಭಾವಪುಷ್ಪಾದಿನಾ ನಾಥಃ ಸೋಽರ್ಚ್ಯತೇ ವಾ ಕಥಂ ಮಯಾ॥** 69

---

ಅವಯವದ ಅತ್ಯಂತ ಸೂಕ್ಷ್ಮಭಾಗದ ಒಂದಂಶವೋ ಆತನನ್ನು ನಾನು ಸ್ತುತಿಸ ಬಲ್ಲೆನೆ? (63-64). ಸದಸದ್ರೂಪಿಯಾದ (ಕಾರ್ಯ-ಕಾರಣರೂಪನಾದ) ಯಾವಾತನ ನಿಜತತ್ತ್ವವನ್ನು ಬ್ರಹ್ಮಾದಿದೇವತೆಗಳೂ ಅರಿತಿಲ್ಲವೋ ಆತನನ್ನು ನಾನು ಸ್ತುತಿಸಬಲ್ಲೆನೆ? ನಂದನಾದಿದಿವ್ಯವನಗಳಲ್ಲಿ ಉದ್ಭವಿಸಿದ ಗಂಧಪುಷ್ಪಾನು ಲೇಪನಗಳಿಂದ ಬ್ರಹ್ಮಾದಿಗಳು ಯಾರನ್ನು ಅರ್ಚಿಸುತ್ತಾರೋ ಅಂತಹ ನಿನ್ನನ್ನು ನಾನು ಆರ್ಚಿಸುವುದಾದರೂ ಹೇಗೆ? (65-66). ದೇವ ರಾಜನಾದ ಇಂದ್ರನು ಯಾವಾತನ ಅವತಾರದ ರೂಪಗಳನ್ನು ಸದಾ ಅರ್ಚಿಸುತ್ತಿದ್ದರೂ ಆತನ ಪರಮಸ್ವರೂಪವನ್ನರಿಯದೆ ಹೋಗಿದ್ದಾನೋ ಅವನನ್ನು ನಾನು ಹೇಗೆ ಪೂಜಿಸಿಯೇನು? (67). ಯೋಗಿಜನರು ಶಬ್ದಾದಿ ವಿಷಯಗಳಿಂದ ಸರ್ವೇಂದ್ರಿಯಗಳನ್ನೂ ನಿವೃತ್ತಿಗೊಳಿಸಿ ಧ್ಯಾನಮಾತ್ರದಿಂದ ಯಾರನ್ನು ಅರ್ಚಿಸುತ್ತಾರೋ ಆತನನ್ನು ಹೇಗೆ ಅರ್ಚಿಸಿಯೇನು? ಯೋಗಿ ಜನರು ಯಾರ ರೂಪವನ್ನು ಹೃದಯದಲ್ಲಿ ಸಂಕಲ್ಪಿಸಿಕೊಂಡು ಭಾವಮಯವಾದ ಪುಷ್ಪಾದಿ ಗಳಿಂದ ಅರ್ಚಿಸುವರೋ ಆ ಸ್ವಾಮಿಯನ್ನು ನಾನು ಅರ್ಚಿಸುವುದು ಹೇಗೆ?

**ಸೋಽಹಂ ತೇ ದೇವದೇವೇಶ ನಾರ್ಚನಾದೌ ಸ್ತುತೌ ನ ಚ।**
**ಸಾಮರ್ಥ್ಯವಾನ್ ಕೃಪಾಮಾತ್ರಮನೋವೃತ್ತಿಃ ಪ್ರಸೀದ ಮೇ॥** 70

**ಸರ್ಪಜಾತಿರಿಯಂ ಕ್ರೂರಾ ಯಸ್ಯಾಂ ಜಾತೋಽಸ್ಮಿ ಕೇಶವ।**
**ತತ್ಸ್ವಭಾವೋಽಯಮತ್ರಾಸ್ತಿ ನಾಪರಾಧೋ ಮಮಾಚ್ಯುತ॥** 71

**ಸೃಜ್ಯತೇ ಭವತಾ ಸರ್ವಂ ತಥಾ ಸಂಹ್ರಿಯತೇ ಜಗತ್।**
**ಜಾತಿರೂಪಸ್ವಭಾವಾಶ್ಚ ಸೃಜ್ಯಂತೇ ಸೃಜತಾ ತ್ವಯಾ॥** 72

**ಯಥಾಹಂ ಭವತಾ ಸೃಷ್ಟೋ ಜಾತ್ಯಾ ರೂಪೇಣ ಚೇಶ್ವರ।**
**ಸ್ವಭಾವೇನ ಚ ಸಂಯುಕ್ತಸ್ತಥೇದಂ ಚೇಷ್ಟಿತಂ ಮಯಾ॥** 73

**ಯದ್ಯನ್ಯಥಾ ಪ್ರವರ್ತೇಯಂ ದೇವದೇವ ತತೋ ಮಯಿ।**
**ನ್ಯಾಯೋ ದಂಡನಿಪಾತೋ ವೈ ತವೈವ ವಚನಂ ಯಥಾ॥** 74

**ತಥಾಪ್ಯಜ್ಞೇ ಜಗತ್ಸ್ವಾಮೀ ದಂಡಂ ಪಾತಿತವಾನ್ಮಯಿ।**
**ಸ ಶ್ಲಾಘ್ಯೋಽಯಂ ಪರೋ ದಂಡಸ್ತ್ವತ್ತೋ ಮೇ ನಾನ್ಯತೋ ವರಃ॥**

---

(68-69). ಆದ್ದರಿಂದ (ಅತ್ಯಲ್ಪನಾದ) ನಾನು, ಹೇ ದೇವ ದೇವೇಶ್ವರ, ನಿನ್ನ ಅರ್ಚನಾದಿಗಳಲ್ಲಾಗಲಿ ಸ್ತುತಿಯಲ್ಲಾಗಲಿ ಸಾಮರ್ಥ್ಯವಿಲ್ಲದವನು. ಕೇವಲ ನಿನ್ನ ಕಾರುಣ್ಯವನ್ನು ಮಾತ್ರ ಬಯಸುವ ಮನೋವೃತ್ತಿಯವನು. ನನ್ನಲ್ಲಿ ಪ್ರಸನ್ನನಾಗು (70). ಓ ಕೇಶವ, ಕ್ರೂರವಾದ ಈ ಸರ್ಪಜಾತಿಯಲ್ಲಿ ಹುಟ್ಟಿದ್ದೇನೆ. ಆದ್ದರಿಂದ ಸಹಜವಾದ ಕ್ರೂರಸ್ವಭಾವ ನನ್ನದಾಗಿದೆ. ನನ್ನ ಅಪರಾಧ ಇದರಲ್ಲಿಲ್ಲ! ಹೇ ಅಚ್ಯುತ, ಸರ್ವವನ್ನು ಸೃಷ್ಟಿಸತಕ್ಕವನು ನೀನು. ಹಾಗೆಯೇ ಸಂಹರಿಸತಕ್ಕವನೂ ನೀನು. ಜಾತಿ-ರೂಪ-ಸ್ವಭಾವಗಳು ಸೃಷ್ಟಿಕರ್ತನಾದ ನಿನ್ನಿಂದಲೇ ನಿರ್ಮಿಸಲ್ಪಟ್ಟಿವೆ! (71-72). ಹೇ ಪರಮೇಶ್ವರ, ಯಾವ ಜಾತಿ-ರೂಪ-ಸ್ವಭಾವಗಳನ್ನಿತ್ತು ನನ್ನನ್ನು ನೀನು ಸೃಷ್ಟಿಸಿದೆಯೋ ಅದಕ್ಕೆ ಅನುಗುಣವಾಗಿ ನಾನು ಚೇಷ್ಟೆ ಮಾಡಿದೆನು! ಹಾಗಲ್ಲದೆ, ದೇವ ದೇವ, ನನ್ನ ಜಾತಿಸ್ವಭಾವಕ್ಕೆ ವಿರುದ್ಧವಾಗಿ ನಾನು ನಡೆದುಕೊಂಡಿದ್ದರೆ, ಆಗ ನಿನ್ನ ಆಜ್ಞೆಯಂತೆಯೇ ನನ್ನನ್ನು ದಂಡಿಸುವುದು ನ್ಯಾಯವಾಗುತ್ತಿತ್ತು! (73-74). ಆದರೂ ಜಗದೀಶ್ವರನಾದ ನೀನು ಅಜ್ಞನಾದ ನನಗೆ ಈ ಶಿಕ್ಷೆಯನ್ನು ವಿಧಿಸಿದ್ದೀಯೆ. ನಿನ್ನಿಂದ ಬಂದ ಈ ಶಿಕ್ಷೆ, ಮತ್ತೊಬ್ಬನಿಂದ

**ಹತವೀರ್ಯೋ ಹತವಿಷೋ ದಮಿತೋಽಹಂ ತ್ವಯಾಚ್ಯುತ।**
**ಜೀವಿತಂ ದೀಯತಾಮೇಕಮಾಜ್ಞಾಪಯ ಕರೋಮಿ ಕಿಮ್॥** 76

*ಶ್ರೀಭಗವಾನುವಾಚ:*

**ನಾತ್ರ ಸ್ಥೇಯಂ ತ್ವಯಾ ಸರ್ಪ ಕದಾಚಿದ್ಯಮುನಾಜಲೇ।**
**ಸಪುತ್ರಪರಿವಾರಸ್ತ್ವಂ ಸಮುದ್ರಸಲಿಲಂ ವ್ರಜ॥** 77

**ಮತ್ಪದಾನಿ ಚ ತೇ ಸರ್ಪ ದೃಷ್ಟ್ವಾ ಮೂರ್ಧನಿ ಸಾಗರೇ।**
**ಗರುಡಃ ಪನ್ನಗರಿಪುಸ್ತ್ವಯಿ ನ ಪ್ರಹರಿಷ್ಯತಿ॥** 78

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾ ಸರ್ಪರಾಜಂ ತಂ ಮುಮೋಚ ಭಗವಾನ್ ಹರಿಃ।**
**ಪ್ರಣಮ್ಯ ಸೋಽಪಿ ಕೃಷ್ಣಾಯ ಜಗಾಮ ಪಯಸಾಂ ನಿಧಿಮ್॥** 79

**ಪಶ್ಯತಾಂ ಸರ್ವಭೂತಾನಾಂ ಸಭೃತ್ಯಸುತಬಾಂಧವಃ।**
**ಸಮಸ್ತಭಾರ್ಯಾಸಹಿತಃ ಪರಿತ್ಯಜ್ಯ ಸ್ವಕಂ ಹ್ರದಮ್॥** 80

---

ಬಂದ ವರಕ್ಕಿಂತ ಶ್ರೇಷ್ಠವಾದದ್ದು! ನನ್ನ ವೀರ್ಯವನ್ನಡಗಿಸಿ ವಿಷವನ್ನು ನೀಗಿಸಿ, ಅಚ್ಯುತ, ನನ್ನ ಸೊಕ್ಕನ್ನು ಮುರಿದಿದ್ದೀಯೆ. ನನ್ನಲ್ಲಿ ಇನ್ನೂ ಉಳಿದಿರುವ ಪ್ರಾಣವನ್ನು ಹಾಗೆಯೇ ಉಳಿಸು. ನಾನು ಏನು ಮಾಡಲಿ? ಆಜ್ಞಾಪಿಸು" ಎಂದನು (75-76). ಆಗ ಭಗವಂತನು "ಎಲೈ ಸರ್ಪವೇ, ಈ ಯಮುನಾ ಜಲದಲ್ಲಿ ನೀನು ಎಂದಿಗೂ ಇರಕೂಡದು. ಪುತ್ರ ಪರಿವಾರ ಸಮೇತನಾಗಿ ನೀನು ಸಮುದ್ರ ಜಲಕ್ಕೆ ಹೊರಟುಹೋಗು. ಎಲೈ ಸರ್ಪ, ನಿನ್ನ ತಲೆಯ ಮೇಲೆ ಮಾಡಿರುವ ನನ್ನ ಪಾದ ಚಿಹ್ನೆಗಳನ್ನು ನೋಡಿ, ಸರ್ಪವೈರಿಯಾದ ಗರುಡನು ನಿನ್ನ ಮೇಲೆ ಆಕ್ರಮಣ ಮಾಡುವುದಿಲ್ಲ" ಎಂದನು (77-78). ಹೀಗೆ ಹೇಳಿ ಭಗವಾನ್ ಹರಿಯು ಸರ್ಪರಾಜನನ್ನು ಬಿಟ್ಟನು. ಆತನು ಶ್ರೀಕೃಷ್ಣನಿಗೆ ನಮಸ್ಕರಿಸಿ, ಸಮಸ್ತರೂ ನೋಡುತ್ತಿರುವಾಗ, ತನ್ನ ಭೃತ್ಯಸುತ ಬಾಂಧವರನ್ನೂ ಭಾರ್ಯೆಯರನ್ನೂ ಕರೆದುಕೊಂಡು, ತನ್ನದಾಗಿ ಮಾಡಿಕೊಂಡಿದ್ದ ಆ ಮಡುವನ್ನು ಪರಿತ್ಯಜಿಸಿ ಸಮುದ್ರಕ್ಕೆ ಹೊರಟು ಹೋದನು (79-80). ಕಾಳಿಯ

**ಗತೇ ಸರ್ಪೇ ಪರಿಷ್ವಜ್ಯ ಮೃತಂ ಪುನರಿವಾಗತಮ್।**
**ಗೋಪಾ ಮೂರ್ಧನಿ ಹಾರ್ದೇನ ಸಿಷಿಚುರ್ನೇತ್ರಜೈರ್ಜಲೈಃ॥** 81

**ಕೃಷ್ಣಮಕ್ಲಿಷ್ಟಕರ್ಮಾಣಮನ್ಯೇ ವಿಸ್ಮಿತಚೇತಸಃ।**
**ತುಷ್ಟುವುರ್ಮುದಿತಾ ಗೋಪಾ ದೃಷ್ಟ್ವಾ ಶಿವಜಲಾಂ ನದೀಮ್॥** 82

**ಗೀಯಮಾನಃ ಸ ಗೋಪೀಭಿಶ್ಚರಿತೈಸ್ಸಾಧುಚೇಷ್ಟಿತೈಃ।**
**ಸಂಸ್ತೂಯಮಾನೋ ಗೋಪೈಶ್ಚ ಕೃಷ್ಣೋ ವ್ರಜಮುಪಾಗಮತ್॥** 83

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಸಪ್ತಮೋಽಧ್ಯಾಯಃ

---

ಸರ್ಪವು ಹೊರಟುಹೋಗಲಾಗಿ ಗೋಪಾಲರು ಕೃಷ್ಣನನ್ನು ಅಪ್ಪಿಕೊಂಡರು. ಸತ್ತವನು ಬದುಕಿಬಂದಂತಾಗಿ, ಅವರೆಲ್ಲರೂ ಪ್ರೀತಿಪೂರ್ವಕವಾದ ಆನಂದ ಬಾಷ್ಪಗಳಿಂದ ಕೃಷ್ಣನನ್ನು ತೋಯಿಸಿದರು (81). ಇನ್ನು ಕೆಲವರು ಈ ಲೀಲಾಕೃತ್ಯ ವನ್ನೆಸಗಿದ ಕೃಷ್ಣನನ್ನು ನೋಡಿ ವಿಸ್ಮಿತಚಿತ್ತರಾದರಲ್ಲದೆ, ಯಮುನಾನದಿಯು ಸ್ವಚ್ಛಜಲಯುಕ್ತವಾದ್ದರಿಂದ ಸಂತುಷ್ಟರಾಗಿ ಅವನನ್ನು ಹೊಗಳಿದರು (82). ಅನಂತರ ತಾನೆಸಗಿದ ಉತ್ತಮ ಕಾರ್ಯಗಳಿಗಾಗಿ ಗೋಪಿಯರು ಹಾಡುತ್ತಿರಲು, ಗೋಪಾಲರು ಪ್ರಶಂಸೆ ಮಾಡುತ್ತಿರಲು, ಕೃಷ್ಣನು ವ್ರಜಕ್ಕೆ ಹಿಂದಿರುಗಿದನು (83).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಏಳನೆಯ ಅಧ್ಯಾಯ ಮುಗಿಯಿತು.



## ಅಷ್ಟಮೋಽಧ್ಯಾಯಃ

### ಧೇನುಕಾಸುರವಧಃ

*ಶ್ರೀಪರಾಶರ ಉವಾಚ:*

**ಗಾಃ ಪಾಲಯಂತೌ ಚ ಪುನಃ ಸಹಿತೌ ಬಲಕೇಶವೌ।**
**ಭ್ರಮಮಾಣೌ ವನೇ ತಸ್ಮಿನ್ ರಮ್ಯಂ ತಾಲವನಂ ಗತೌ॥** 1

**ತತ್ತು ತಾಲವನಂ ದಿವ್ಯಂ ಧೇನುಕೋ ನಾಮ ದಾನವಃ।**
**ಮೃಗಮಾಂಸಕೃತಾಹಾರಃ ಸದಾಧ್ಯಾಸ್ತೇ ಖರಾಕೃತಿಃ॥** 2

**ತತ್ತು ತಾಲವನಂ ಪಕ್ವಫಲಸಂಪತ್ಸಮನ್ವಿತಮ್।**
**ದೃಷ್ಟ್ವಾ ಸ್ಪೃಹಾನ್ವಿತಾ ಗೋಪಾಃ ಫಲಾದಾನೇಽಬ್ರುವನ್ ವಚಃ॥** 3

---

## ಅಧ್ಯಾಯ 8

### ಬಲರಾಮನಿಂದ ಧೇನುಕಾಸುರನ ವಧೆ.

ಪರಾಶರಮಹರ್ಷಿಗಳು ನುಡಿದರು: ಎಂದಿನಂತೆ ಬಲರಾಮ ಕೇಶವರು ಜೊತೆಗೂಡಿ ಹಸುಗಳನ್ನು ನೋಡಿಕೊಳ್ಳುತ್ತ ಅರಣ್ಯದಲ್ಲಿ ತಿರುಗುವಾಗ ಒಂದು ದಿನ ತಾಳೆಯ ಮರಗಳ ವನಕ್ಕೆ ಹೋದರು. ದಿವ್ಯವಾದ ಆ ತಾಲವನದಲ್ಲಿ ಧೇನುಕನೆಂಬ ದಾನವನು ಕತ್ತೆಯ ಆಕೃತಿಯನ್ನು ಧರಿಸಿ ಮೃಗಮಾಂಸಗಳನ್ನು ತಿನ್ನುತ್ತ ಯಾವಾಗಲೂ ಇರುತ್ತಿದ್ದನು (1-2). ಮಾಗಿದ ಹಣ್ಣುಗಳು ಯಥೇಚ್ಛವಾಗಿದ್ದ ಆ ತಾಲವನವನ್ನು ಕಂಡು ಗೋಪಾಲರಿಗೆ ಹಣ್ಣುಗಳನ್ನು ಕೀಳಬೇಕೆಂದು ಆಸೆಯಾಯಿತು. ಅವರು ಬಲರಾಮ ಕೃಷ್ಣರನ್ನು ಕುರಿತು, "ರಾಮ, ಕೃಷ್ಣ, ಈ ಭೂಪ್ರದೇಶವನ್ನು ಸರ್ವದಾ ಧೇನುಕನು ಕಾಯುತ್ತಿದ್ದಾನೆ. ಆದ್ದರಿಂದ ಈ

*ಗೋಪಾ ಊಚುಃ :*

**ಹೇ ರಾಮ ಹೇ ಕೃಷ್ಣ ಸದಾ ಧೇನುಕೇನೈಷ ರಕ್ಷ್ಯತೇ।**
**ಭೂಪ್ರದೇಶೋ ಯತಸ್ತಸ್ಮಾತ್ ಪಕ್ವಾನೀಮಾನಿ ಸಂತಿ ವೈ॥ 4**

**ಫಲಾನಿ ಪಶ್ಯ ತಾಲಾನಾಂ ಗಂತಾಮೋದಿತದಿಂಶಿ ವೈ।**
**ವಯಮೇತಾನ್ಯಭೀಪ್ಸಾಮಃ ಪಾತ್ಯಂತಾಂ ಯದಿ ರೋಚತೇ॥ 5**

*ಶ್ರೀಪರಾಶರ ಉವಾಚ:*

**ಇತಿ ಗೋಪಕುಮಾರಾಣಾಂ ಶ್ರುತ್ವಾ ಸಂಕರ್ಷಣೋ ವಚಃ।**
**ಏತತ್ಕರ್ತವ್ಯಮಿತ್ಯುಕ್ತ್ವಾ ಪಾತಯಾಮಾಸ ತಾನಿ ವೈ।**
**ಕೃಷ್ಣಶ್ಚ ಪಾತಯಾಮಾಸ ಭುವಿ ತಾನಿ ಫಲಾನಿ ವೈ॥ 6**

**ಫಲಾನಾಂ ಪತತಾಂ ಶಬ್ದಮಾಕರ್ಣ್ಯ ಸುದುರಾಸದಃ।**
**ಆಜಗಾಮ ಸ ದುಷ್ಟಾತ್ಮಾ ಕೋಪಾದ್ದೈತೇಯಗರ್ದಭಃ॥ 7**

**ಪದ್‌ಭ್ಯಾಮುಭಾಭ್ಯಾಂ ಸ ತದಾ ಪಶ್ಚಿಮಾಭ್ಯಾಂ ಬಲಂ ಬಲೀ।**
**ಜಘಾನೋರಸಿ ತಾಭ್ಯಾಂ ಚ ಸ ಚ ತೇನಾಭ್ಯಗೃಹ್ಯತ॥ 8**

**ಗೃಹೀತ್ವಾ ಭ್ರಾಮಯಾಮಾಸ ಸೋಽಂಬರೇ ಗತಜೀವಿತಮ್।**
**ತಸ್ಮಿನ್ನೇವ ಸ ಚಿಕ್ಷೇಪ ವೇಗೇನ ತೃಣರಾಜನಿ॥ 9**

---

ರೀತಿಯಲ್ಲಿ ಮಾಗಿದ ಹಣ್ಣುಗಳು ಇಲ್ಲಿ ತುಂಬಿವೆ (3-4). ದಿಕ್ಕು ದಿಕ್ಕಿಗೂ ಸುಗಂಧವನ್ನು ಬೀರುತ್ತಿರುವ ಆ ತಾಳೆ ಹಣ್ಣುಗಳನ್ನು ನೋಡಿರಿ! ನಮಗೆ ಇವುಗಳಲ್ಲಿ ಆಸೆಯಾಗಿದೆ. ನಿಮಗೆ ಇಷ್ಟವಾದರೆ ಹಣ್ಣುಗಳನ್ನು ಕೆಡವಿರಿ" ಎಂದರು. ಗೋಪಬಾಲಕರ ಆ ನುಡಿಯನ್ನು ಕೇಳಿ ಬಲರಾಮನು 'ಹೀಗೆ ಮಾಡುವುದು ಸರಿ' ಎಂದು ನುಡಿದು ಕೆಲವು ಹಣ್ಣುಗಳನ್ನು ನೆಲದ ಮೇಲೆ ಉದುರಿಸಿದನು. ಕೃಷ್ಣನೂ ಕೆಲವನ್ನು ಬೀಳಿಸಿದನು (5-6). ಹಣ್ಣುಗಳು ಬೀಳುವ ಶಬ್ದವನ್ನು ಕೇಳಿ ದುರ್ಧರ್ಷನೂ ದುರುಳನೂ ಆದ ಆ ದೈತ್ಯಗರ್ದಭನು ಸಿಟ್ಟೆದ್ದು ಅಲ್ಲಿಗೆ ಬಂದನು. ಬಲಶಾಲಿಯಾದ ಆ ದೈತ್ಯನು ತನ್ನ ಹಿಂಗಾಲುಗಳಿಂದ ಬಲರಾಮನ ಎದೆಗೆ ಒದ್ದನು (7-8). ಬಲರಾಮನು ಆತನ ಹಿಂಗಾಲುಗಳನ್ನು ಹಿಡಿದೆತ್ತಿ ದೈತ್ಯನು ಸಾಯುವವರೆಗೆ ಆಕಾಶದಲ್ಲಿ ಗಿರ್ರನೆ ತಿರುಗಿಸಿ ತಾಳೆಯ

**ತತಃ ಫಲಾನ್ಯನೇಕಾನಿ ತಾಲಾಗ್ರಾನ್ನಿಪತನ್ ಖರಃ।**
**ಪೃಥಿವ್ಯಾಂ ಪಾತಯಾಮಾಸ ಮಹಾವಾತೋ ಘನಾನಿವ॥ 10**

**ಅನ್ಯಾನಥ ಸಜಾತೀಯಾನಾಗತಾನ್ ದೈತ್ಯಗರ್ದಭಾನ್।**
**ಕೃಷ್ಣಶ್ಚಿಕ್ಷೇಪ ತಾಲಾಗ್ರೇ ಬಲಭದ್ರಶ್ಚ ಲೀಲಯಾ॥ 11**

**ಕ್ಷಣೇನಾಲಂಕೃತಾಲ ಪೃಥ್ವೀ ಪಕ್ವೈಸ್ತಾಲಫಲೈಸ್ತದಾ।**
**ದೈತ್ಯಗರ್ದಭದೇಹೈಶ್ಚ ಮೈತ್ರೇಯ ಶುಶುಭೇಽಧಿಕಮ್॥ 12**

**ತತೋ ಗಾವೋ ನಿರಾಬಾಧಾಸ್ತಸ್ಮಿಂಸ್ತಾಲವನೇ ದ್ವಿಜ।**
**ನವಶಷ್ಪಂ ಸುಖಂ ಚೇರುರ್ಯನ್ನ ಭುಕ್ತಮಭೂತ್ ಪುರಾ॥ 13**

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಅಷ್ಟಮೋಽಧ್ಯಾಯಃ

---

ಮರಕ್ಕೆ ಬೀಸಿ ಹೊಡೆದನು. (ಆ ಹೊಡೆತಕ್ಕೆ) ಮರದ ತುದಿಯಿಂದ ಅನೇಕ ಫಲಗಳು ನೆಲಕ್ಕೆ ಉದುರಿಬಿದ್ದವು. ಬಿರುಗಾಳಿಯು ಮೇಘವನ್ನು (ಮಳೆಯ ರೂಪದಲ್ಲಿ) ಕೆಳಗೆ ಉದುರಿಸುವಂತೆ ಧೇನುಕಾಸುರನ (ದೈತ್ಯಗರ್ದಭನ) ದೇಹವು ಫಲಗಳನ್ನು ಬಳಬಳನೆ ಉದುರಿಸಿತು! (9-10). ಆಮೇಲೆ ಅಲ್ಲಿಗೆ ಬಂದ ಧೇನುಕನ ಸಜಾತೀಯರಾದ ದೈತ್ಯಗರ್ದಭರನ್ನು ಬಲರಾಮನೂ ಕೃಷ್ಣನೂ ಲೀಲೆಯಿಂದ ಹಿಡಿದೆತ್ತಿ ತಾಳೆಯ ಮರಗಳ ತುದಿಗೆ ಬೀಸಿ ಹೊಡೆಯಲಾರಂಭಿಸಿದರು (11). ಮೈತ್ರೇಯ, ಕ್ಷಣಮಾತ್ರದಲ್ಲಿ ಆ ನೆಲವು ಪಕ್ವವಾದ ತಾಳೆಯ ಫಲಗಳಿಂದಲೂ ದೈತ್ಯಗರ್ದಭರ ದೇಹಗಳಿಂದಲೂ ಅಲಂಕೃತವಾಗಿ ವಿಶೇಷವಾಗಿ ರಂಜಿಸಿತು! ಅನಂತರ, ಮೈತ್ರೇಯ, ಹಸುಗಳು ನಿರಾಂತಕವಾಗಿ ಆ ತಾಲವನದಲ್ಲಿ ಹಸಿಹುಲ್ಲನ್ನು ಮೇಯತೊಡಗಿದವು. ಹಿಂದೆ ಆ ಹುಲ್ಲನ್ನು ಹಸುಗಳು ತಿಂದೇ ಇರಲಿಲ್ಲ (12-13).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಎಂಟನೆಯ ಅಧ್ಯಾಯ ಮುಗಿಯಿತು.



## ನವಮೋಽಧ್ಯಾಯಃ

### ಪ್ರಲಂಭವಧಃ

*ಶ್ರೀ ಪರಾಶರ ಉವಾಚ:*

**ತಸ್ಮಿನ್‌ರಾಸಭದೈತೇಯೇ ಸಾನುಗೇ ವಿನಿಪಾತಿತೇ।**
**ಸೌಮ್ಯಂ ತದ್ಗೋಪಗೋಪೀನಾಂ ರಮ್ಯಂ ತಾಲವನಂ ಬಭೌ॥ 1**

**ತತಸ್ತೌ ಜಾತಹರ್ಷೌ ತು ವಸುದೇವಸುತಾವುಭೌ।**
**ಹತ್ವಾ ಧೇನುಕದೈತೇಯಂ ಭಾಂಡೀರವಟಮಾಗತೌ॥ 2**

**ಕ್ಷ್ವೇಲಮಾನೌ ಪ್ರಗಾಯಂತೌ ವಿಚಿನ್ವಂತೌ ಚ ಪಾದಪಾನ್।**
**ಚಾರಯಂತೌ ಚ ಗಾ ದೂರೇ ವ್ಯಾಹರಂತೌ ಚ ನಾಮಭಿಃ॥ 3**

**ನಿರ್ಯೋಗಪಾಶಸ್ಕಂಧೌ ತೌ ವನಮಾಲಾವಿಭೂಷಿತೌ।**
**ಶುಶುಭಾತೇ ಮಹಾತ್ಮಾನೌ ಬಾಲಶೃಂಗಾವಿವರ್ಷಭೌ॥ 4**

---

## ಅಧ್ಯಾಯ 9

### ಬಲರಾಮನಿಂದ ಪ್ರಲಂಬಾಸುರನ ವಧೆ.

ಪರಾಶರಮುನಿಗಳು ಹೇಳಿದರು: ಹೀಗೆ ಗಾರ್ದಭದೈತ್ಯನಾದ ಧೇನುಕನು ಪರಿವಾರ ಸಹಿತನಾಗಿ ಹತನಾಗಲು, ರಮ್ಯವಾದ ತಾಲವನವು ಗೋಪ ಗೋಪಿಯರಿಗೆ ಸೌಮ್ಯವಾಗಿ ಸುಖದಾಯಕವಾಯಿತು. ಧೇನುಕನನ್ನು ಸಂಹರಿಸಿ ವಸುದೇವಸುತರಾದ ರಾಮ-ಕೃಷ್ಣರು ಸಂತುಷ್ಟರಾಗಿ ಭಾಂಡೀರವೆಂಬ ವಟವೃಕ್ಷದ ಬಳಿಗೆ ಬಂದರು (1-2). ಅವರು ಕೇಕೆ ಹಾಕುತ್ತ, ಹಾಡುತ್ತ, (ಹಣ್ಣಿನ) ಮರಗಳನ್ನು ಹುಡುಕುತ್ತ, ಹಸುಗಳನ್ನು ಮೇಯಿಸುತ್ತ, ಅವುಗಳ ಹೆಸರನ್ನು ಹೇಳಿ ದೂರದಿಂದ ಕರೆಯುತ್ತ ರಂಜಿಸಿದರು. ಹಸುಕಟ್ಟುವ ಹಗ್ಗ ಗಳನ್ನು ಹೆಗಲ ಮೇಲೆ ಹೇರಿಕೊಂಡು ವನಮಾಲಾ ಭೂಷಿತರಾಗಿದ್ದ ಮಹಾತ್ಮ ರಾದ ರಾಮ-ಕೃಷ್ಣರು ಹೊಸದಾಗಿ ಕೊಂಬು ಹುಟ್ಟುತ್ತಿರುವ ಹೋರಿಕರುಗಳಂತೆ

**ಸುವರ್ಣಾಂಜನಚೂರ್ಣಾಭ್ಯಾಂ ತೌ ತದಾ ರುಷಿತಾಂಬರೌ।**
**ಮಹೇಂದ್ರಾಯುಧಸಂಯುಕ್ತೌ ಶ್ವೇತಕೃಷ್ಣಾವಿವಾಂಬುದೌ॥ 5**

**ಚೇರತುರ್ಲೋಕಸಿದ್ಧಾಭಿಃ ಕ್ರೀಡಾಭಿರಿತರೇತರಮ್।**
**ಸಮಸ್ತಲೋಕನಾಥಾನಾಂ ನಾಥಭೂತೌ ಭುವಂ ಗತೌ॥ 6**

**ಮನುಷ್ಯಧರ್ಮಾಭಿರತೌ ಮಾನಯಂತೌ ಮನುಷ್ಯತಾಮ್।**
**ತಜ್ಜಾತಿಗುಣಯುಕ್ತಾಭಿಃ ಕ್ರೀಡಾಭಿಶ್ಚೇರತುರ್ವನಮ್॥ 7**

**ತತಸ್ತ್ವಾಂದೋಲಿಕಾಭಿಶ್ಚ ನಿಯುದ್ಧೈಶ್ಚ ಮಹಾಬಲೌ।**
**ವ್ಯಾಯಾಮಂ ಚಕ್ರತುಸ್ತತ್ರ ಕ್ಷೇಪಣೀಯೈಸ್ತಥಾಶ್ಮಭಿಃ॥ 8**

**ತಲ್ಲಿಪ್ಸುರಸುರಸ್ತತ್ರ ಹ್ಯುಭಯೋ ರಮಮಾಣಯೋಃ।**
**ಆಜಗಾಮ ಪ್ರಲಂಬಾಖ್ಯೋ ಗೋಪವೇಷತಿರೋಹಿತಃ॥ 9**

---

ಶೋಭಿಸಿದರು! (3-4). ಹಳದಿ ಮತ್ತು ಕಪ್ಪಾದ ಬಣ್ಣದ ಪುಡಿಗಳಿಂದ ಬಣ್ಣ ಹಾಕಿದ ಪೀತಾಂಬರ ಮತ್ತು ಕೃಷ್ಣಾಂಬರಗಳನ್ನು ಧರಿಸಿದ್ದ ಆ ಬಾಲಕರು ಇಂದ್ರ ಧನುಸ್ಸಿನೊಡನೆ ಪ್ರಕಾಶಿಸುವ* ಬಿಳಿಯ ಮತ್ತು ಕರಿಯ ಮೇಘಗಳಂತೆ ಕಾಣಿ ಸುತ್ತಿದ್ದರು (5). ಸಮಸ್ತ ಲೋಕನಾಥರಿಗೆ ನಾಥರಾದ ಅವರು ಭೂಮಿಯಲ್ಲಿ ಅವತರಿಸಿ ಬಂದು ಲೋಕಸಿದ್ಧವಾದ ಕ್ರೀಡೆಗಳಿಂದ ಅನ್ಯೋನ್ಯವಾಗಿ ವಿಹರಿಸು ತ್ತಿದ್ದರು. ಮನುಷ್ಯ ಧರ್ಮದಲ್ಲಿ ಅಭಿರತರಾದ ಅವರು ಮನುಷ್ಯತ್ವಕ್ಕೆ ಮಾನ್ಯತೆ ಯನ್ನಿತ್ತು ಮನುಷ್ಯರಿಗೆ ಉಚಿತವಾದ ಕ್ರೀಡೆಗಳನ್ನಾಡುತ್ತ ವೃಂದಾವನದಲ್ಲಿ ಅಲೆದಾಡಿದರು (6-7). ಆ ಬಲಾಢ್ಯರು ಉಯ್ಯಾಲೆಗಳಲ್ಲಿ ತೂಗುತ್ತ , ಕುಸ್ತಿ ಗಳನ್ನಾಡುತ್ತ , ಕವಣೆಗಳಿಂದ ಹೊಡೆಯುತ್ತ , ಬಂಡೆಗಳನ್ನು ಎತ್ತುತ್ತ ವ್ಯಾಯಾಮ ಮಾಡುತ್ತಿದ್ದರು. ಹೀಗೆ ಬಲರಾಮ-ಕೃಷ್ಣರು ಆಟವಾಡುತ್ತಿರುವಾಗ ಅವರನ್ನು ಹಿಡಿದೊಯ್ಯಬೇಕೆಂದು ಪ್ರಲಂಬನೆಂಬ ಒಬ್ಬ ಅಸುರನು ಗೊಲ್ಲರ ವೇಷದಿಂದ ತನ್ನ ಸ್ವರೂಪವನ್ನು ಮರೆ ಮಾಡಿಕೊಂಡು ಬಂದನು (8-9).

---

* ಬಿಳಿಯ ಬಣ್ಣದ ಬಲರಾಮನು ಕೃಷ್ಣಾಂಬರಧಾರಿ. ಕಪ್ಪು ಬಣ್ಣದ ಕೃಷ್ಣನು ಪೀತಾಂಬರಧಾರಿ.

**ಸೋಽವಗಾಹತ ನಿಶ್ಶಂಕಸ್ತೇಷಾಂ ಮಧ್ಯಮಮಾನುಷಃ।**
**ಮಾನುಷಂ ವಪುರಾಸ್ಥಾಯ ಪ್ರಲಂಬೋ ದಾನವೋತ್ತಮಃ॥** 10

**ತಯೋಶ್ಛಿದ್ರಾಂತರಪ್ರೇಪ್ಸುರವಿಸಹ್ಯಮಮನ್ಯತ।**
**ಕೃಷ್ಣಂ ತತೋ ರೌಹಿಣೇಯಂ ಹಂತುಂ ಚಕ್ರೇ ಮನೋರಥಮ್॥** 11

**ಹರಿಣಾಕ್ರೀಡನಂ ನಾಮ ಬಾಲಕ್ರೀಡನಕಂ ತತಃ।**
**ಪ್ರಕುರ್ವಂತೋ ಹಿ ತೇ ಸರ್ವೇ ದ್ವೌ ದ್ವೌ ಯುಗಪದುತ್ಥಿತೌ॥** 12

**ಶ್ರೀದಾಮ್ನಾ ಸಹ ಗೋವಿಂದಃ ಪ್ರಲಂಬೇನ ತಥಾ ಬಲಃ।**
**ಗೋಪಾಲೈರಪರೈಶ್ಚಾನ್ಯೇ ಗೋಪಾಲಾಃ ಪಪ್ಲುವುಸ್ತತಃ॥** 13

**ಶ್ರೀದಾಮಾನಂ ತತಃ ಕೃಷ್ಣಃ ಪ್ರಲಂಬಂ ರೋಹಿಣೀಸುತಃ।**
**ಜಿತವಾನ್ಕೃಷ್ಣಪಕ್ಷೀಯೈರ್ಗೋಪೈರನ್ಯೇ ಪರಾಜಿತಾಃ॥** 14

---

ದಾನವೋತ್ತಮನಾದ ಆ ಪ್ರಲಂಬನು, ಮಾನವನಲ್ಲದಿದ್ದರೂ ಮಾನವ ವೇಷ ಧಾರಿಯಾಗಿ, ನಿಶ್ಶಂಕೆಯಿಂದ ಅವರ ನಡುವೆ ಬಂದು ಸೇರಿಕೊಂಡನು. ಹೊಂಚು ಹಾಕುತ್ತಿದ್ದ ಆತನು ಅವರಿಬ್ಬರಲ್ಲಿ ಕೃಷ್ಣನು ಅಜೇಯನೆಂದು ಭಾವಿಸಿ, ಬಲರಾಮನನ್ನು ಕೊಲ್ಲುವುದಕ್ಕೆ ಮನಸ್ಸು ಮಾಡಿದನು (10-11). ಗೋಪಾಲರು ಹರಿಣಾ* ಕ್ರೀಡನವೆಂಬ ಬಾಲಕ್ರೀಡೆಯನ್ನಾಡುತ್ತ ಒಟ್ಟಿಗೆ ಇಬ್ಬಿಬ್ಬರಾಗಿ ಹೊರಟರು. ಶ್ರೀದಾಮನೊಂದಿಗೆ ಗೋವಿಂದನೂ ಪ್ರಲಂಬನೊಂದಿಗೆ ಬಲರಾಮನೂ ಅನ್ಯ ಗೋಪಾಲರು ಇತರ ಗೋಪಾಲರೊಡನೆಯೂ ಹೊರಟು ಸ್ಪರ್ಧೆಯಿಂದ ಓಡಲಾರಂಭಿಸಿದರು (12-13). ಕೃಷ್ಣನು ಶ್ರೀದಾಮನನ್ನೂ ಬಲರಾಮನು ಪ್ರಲಂಬನನ್ನೂ ಸೋಲಿಸಿದರು. ಕೃಷ್ಣ ಪಕ್ಷೀಯರಾದ ಗೋಪರು

* ಒಂದು ಸ್ಥಳದಿಂದ ಇಬ್ಬಿಬ್ಬರು ಏಕಕಾಲದಲ್ಲಿ ಹೊರಟು ನಿರ್ದಿಷ್ಟವಾದ ಗುರಿಯ ಕಡೆಗೆ, ಹರಿಣಗಳು ನಾಲ್ಕೂ ಕಾಲುಗಳಿಂದ ಓಡುವಂತೆ, ಕೈಗಳನ್ನೂರಿಕೊಂಡು ವೇಗವಾಗಿ ಓಡತಕ್ಕದ್ದು. ಗುರಿಯನ್ನು ಇಬ್ಬರಲ್ಲಿ ಯಾವಾತನು ಮೊದಲು ತಲುಪುತ್ತಾನೋ ಅವನು ಗೆದ್ದವನು. ಇನ್ನೊಬ್ಬನು ಸೋತವನು. ಸೋತವನು ಗೆದ್ದವನನ್ನು ಹೊತ್ತುಕೊಂಡು ನಿರ್ದಿಷ್ಟವಾದ ಗುರಿಯವರೆಗೆ ಹೋಗಿ ಮತ್ತೆ ಸ್ವಸ್ಥಾನಕ್ಕೆ ಹಿಂದಿರುಗಿ ಬರಬೇಕು. ಇದು ಹರಿಣಾಕ್ರೀಡನ. ಪ್ರಕೃತದಲ್ಲಿ ಭಾಂಡೀರ ವೃಕ್ಷವನ್ನು ಅವರು ಗುರಿಯಾಗಿ ಇಟ್ಟು ಕೊಂಡಿದ್ದರು.

**ತೇ ವಾಹಯಂತಸ್ತ್ವನ್ಯೋನ್ಯಂ ಭಾಂಡೀರಂ ವಟಮೇತ್ಯ ವೈ।**
**ಪುನರ್ನಿವವೃತುಸ್ಸರ್ವೇ ಯೇ ಯೇ ತತ್ರ ಪರಾಜಿತಾಃ॥** 15

**ಸಂಕರ್ಷಣಂ ತು ಸ್ಕಂಧೇನ ಶೀಘ್ರಮುತ್ಕ್ಷಿಪ್ಯ ದಾನವಃ।**
**ನಭಸ್ಥ್ಸಲಂ ಜಗಾಮಾಶು ಸಚಂದ್ರ ಇವ ವಾರಿದಃ॥** 16

**ಅಸಹನ್ ರೌಹಿಣೇಯಸ್ಯ ಸ ಭಾರಂ ದಾನವೋತ್ತಮಃ।**
**ವವೃಧೇ ಸ ಮಹಾಕಾಯಃ ಪ್ರಾವೃಷೀವ ಬಲಾಹಕಃ॥** 17

**ಸಂಕರ್ಷಣಸ್ತು ತಂ ದೃಷ್ಟ್ವಾ ದಗ್ಧಶೈಲೋಪಮಾಕೃತಿಮ್।**
**ಸ್ರಗ್ದಾಮಲಂಬಾಭರಣಂ ಮುಕುಟಾಟೋಪಮಸ್ತಕಮ್॥** 18

**ರೌದ್ರಂ ಶಕಟಚಕ್ರಾಕ್ಷಂ ಪಾದನ್ಯಾಸಚಲತ್ಕ್ಷಿತಿಮ್।**
**ಅಭೀತಮನಸಾ ತೇನ ರಕ್ಷಸಾ ರೋಹಿಣೀಸುತಃ**
**ಹ್ರಿಯಮಾಣಸ್ತತಃ ಕೃಷ್ಣಮಿದಂ ವಚನಮಬ್ರವೀತ್॥** 19

**ಕೃಷ್ಣ ಕೃಷ್ಣ ಹ್ರಿಯೇ ಹ್ಯೇಷ ಪರ್ವತೋದಗ್ರಮೂರ್ತಿನಾ।**
**ಕೇನಾಪಿ ಪಶ್ಯ ದೈತ್ಯೇನ ಗೋಪಾಲಚ್ಛದ್ಮರೂಪಿಣಾ॥** 20

---

ಅನ್ಯಗೋಪರನ್ನು ಸೋಲಿಸಿದರು. ಆಟದಲ್ಲಿ ಸೋತವರೆಲ್ಲರೂ ಗೆದ್ದವರನ್ನು ಹೊತ್ತುಕೊಂಡು ಭಾಂಡೀರ ವೃಕ್ಷದ ಬಳಿಗೆ ಹೋಗಿ ಹೊರಟ ಸ್ಥಳಕ್ಕೆ ಹಿಂದಿರುಗಿದರು (14-15). ಪ್ರಲಂಬ ದಾನವನಾದರೋ ಬಲರಾಮನನ್ನು ಹೆಗಲ ಮೇಲೆ ಹೊತ್ತುಕೊಂಡು, ಚಂದ್ರ ಸಮೇತವಾದ ಮೇಘದಂತೆ, ಆಕಾಶವನ್ನಡರಿದನು. ಬಲರಾಮನ ಭಾರವನ್ನು ತಾಳಲಾರದೆ ಆ ದಾನವನು, ಮಳೆಗಾಲದ ಮೋಡದಂತೆ, ತನ್ನ ದೇಹವನ್ನು ದೊಡ್ಡದಾಗಿ ಬೆಳೆಸಿದನು (16-17). ಕರ್ರಗೆ ಸುಟ್ಟುಹೋದ ಬೆಟ್ಟದಂತಿದ್ದ ಆ ದೈತ್ಯನು ನಾನಾ ಮಾಲೆಗಳಿಂದ ಭೂಷಿತನಾಗಿ ತಲೆಯಲ್ಲಿ ಕಿರೀಟವನ್ನು ಧರಿಸಿದ್ದನು. ಭೀಕರನಾದ ಆತನ ಕಣ್ಣುಗಳು ಬಂಡಿಯ ಗಾಲಿಗಳಂತಿದ್ದವು. ಅವನು ಹೆಜ್ಜೆಯಿಡುವ ರಭಸಕ್ಕೆ ಭೂಮಿ ಕಂಪಿಸುತ್ತಿತ್ತು! ನಿರ್ಭಯದಿಂದ ಆ ರಾಕ್ಷಸನು ತನ್ನನ್ನು ಒಯ್ಯುತ್ತಿರುವಾಗ ರೋಹಿಣೀಸುತನಾದ ಸಂಕರ್ಷಣನು ಕೃಷ್ಣನನ್ನು ಕೂಗಿ ಈ ರೀತಿ ಹೇಳಿದನು (18-19): "ಕೃಷ್ಣ, ಕೃಷ್ಣ, ಪರ್ವತಾಕಾರನಾದ ಯಾವನೋ ಒಬ್ಬ ದೈತ್ಯನು ನನ್ನನ್ನು ಹೊತ್ತುಕೊಂಡು

**ಯದತ್ರ ಸಾಂಪ್ರತಂ ಕಾರ್ಯಂ ಮಯಾ ಮಧುನಿಷೂದನ।**
**ತತ್ಕಥ್ಯತಾಂ ಪ್ರಯಾತ್ಯೇಷ ದುರಾತ್ಮಾತಿತ್ವರಾನ್ವಿತಃ॥** 21

*ಶ್ರೀಪರಾಶರ ಉವಾಚ:*

**ತಮಾಹ ರಾಮಂ ಗೋವಿಂದಃ ಸ್ಮಿತಭಿನ್ನೋಷ್ಠಸಂಪುಟಃ।**
**ಮಹಾತ್ಮಾ ರೌಹಿಣೇಯಸ್ಯ ಬಲವೀರ್ಯಪ್ರಮಾಣವಿತ್॥** 22

*ಶ್ರೀಕೃಷ್ಣ ಉವಾಚ:*

**ಕಿಮಯಂ ಮಾನುಷೋ ಭಾವೋ ವ್ಯಕ್ತಮೇವಾವಲಂಬ್ಯತೇ।**
**ಸರ್ವಾತ್ಮನ್ ಸರ್ವಗುಹ್ಯಾನಾಂ ಗುಹ್ಯಗುಹ್ಯಾತ್ಮನಾ ತ್ವಯಾ॥** 23

**ಸ್ಮರಾಶೇಷಜಗದ್ಬೀಜಕಾರಣಂ ಕಾರಣಾಗ್ರಜಮ್।**
**ಆತ್ಮಾನಮೇಕಂ ತದ್ವಚ್ಚ ಜಗತ್ಯೇಕಾರ್ಣವೇ ಚ ಯತ್॥** 24

**ಕಿಂ ನ ವೇತ್ಸಿ ಯಥಾಹಂ ಚ ತ್ವಂ ಚೈಕಂ ಕಾರಣಂ ಭುವಃ।**
**ಭಾರಾವತಾರಣಾರ್ಥಾಯ ಮರ್ತ್ಯಲೋಕಮುಪಾಗತೌ॥** 25

---

ಹೋಗುತ್ತಿದ್ದಾನೆ. ಈತನು ಗೊಲ್ಲರ ವೇಷವನ್ನು ಧರಿಸಿ ಬಂದಿದ್ದನು. ಈಗ ನಾನು ಏನು ಮಾಡಬೇಕೆಂಬುದನ್ನು ಹೇಳು. ಈ ದುರಾತ್ಮನು ಮಹಾವೇಗದಿಂದ ಧಾವಿಸುತ್ತಿದ್ದಾನೆ" ಎಂದನು (20-21). ಮಹಾತ್ಮನಾದ ಗೋವಿಂದನಿಗೆ ಬಲರಾಮನ ಬಲವೀರ್ಯಗಳು ಎಷ್ಟೆಂಬುದು ತಿಳಿದಿತ್ತು. ಅವನು ತುಟಿದೆರೆದು ಮುಗುಳ್ನಗೆಯನ್ನು ಬೀರುತ್ತ ಬಲರಾಮನನ್ನುದ್ದೇಶಿಸಿ ಈ ರೀತಿ ನುಡಿದನು (22): "ಹೇ ಸರ್ವಾತ್ಮ, ನೀನು ಸರ್ವರಹಸ್ಯಗಳಿಗೂ ಪರಮರಹಸ್ಯರೂಪನಾಗಿದ್ದುಕೊಂಡು ಈ ಪರಿಯ ಮನುಷ್ಯಭಾವವನ್ನೇಕೆ ಸ್ಪಷ್ಟವಾಗಿ ಅವಲಂಬಿಸುತ್ತಿದ್ದೀಯೆ? ನೀನು ಸಮಸ್ತ ಜಗತ್ತುಗಳ ಕಾರಣಕ್ಕೂ ಪೂರ್ವದಲ್ಲಿರುವ, ಮೂಲಕಾರಣನಾದ ಏಕೈಕ ಕಾರಣನೆಂಬುದನ್ನೂ ಪ್ರಲಯಕಾಲದಲ್ಲಿಯೂ ಉಳಿದಿರತಕ್ಕವನೆಂಬುದನ್ನೂ ಸ್ಮರಿಸಿಕೋ (23-24). ನಾನೂ ನೀನೂ ಸಹ ಈ ವಿಶ್ವಕ್ಕೆ ಮೂಲಕಾರಣರೆಂಬುದನ್ನೂ ಭೂಭಾರವನ್ನಿಳಿಸುವುದಕ್ಕಾಗಿ ಈ ಮರ್ತ್ಯಲೋಕದಲ್ಲಿ ಅವತರಿಸಿದ್ದೇವೆಂಬುದನ್ನೂ ನೀನು ತಿಳಿದಿಲ್ಲವೆ? (25). ಹೇ

ನಭಶ್ಶಿರಸ್ತೇಽಂಬುವಹಾಶ್ಚ ಕೇಶಾಃ
ಪಾದೌ ಕ್ಷಿತಿರ್ವಕ್ತ್ರಮನಂತ ವಹ್ನಿಃ।
ಸೋಮೋ ಮನಸ್ತೇ ಶ್ವಸಿತಂ ಸಮೀರಣೋ
ದಿಶಶ್ಚತಸ್ರೋಽವ್ಯಯ ಬಾಹವಸ್ತೇ॥ 26

ಸಹಸ್ರವಕ್ತ್ರೋ ಭಗವನ್ ಮಹಾತ್ಮಾ
ಸಹಸ್ರಹಸ್ತಾಂಘ್ರಿಶರೀರಭೇದಃ।
ಸಹಸ್ರಪದ್ಮೋದ್ಭವಯೋನಿರಾದ್ಯ-
ಸ್ಸಹಸ್ರಶಸ್ತ್ವಾಂ ಮುನಯೋ ಗೃಣಂತಿ॥ 27

ದಿವ್ಯಂ ಹಿ ರೂಪಂ ತವ ವೇತ್ತಿ ನಾನ್ಯೋ
ದೇವೈರಶೇಷೈರವತಾರರೂಪಮ್।
ತದರ್ಚ್ಯತೇ ವೇತ್ಸಿ ನ ಕಿಂ ಯದಂತೇ
ತ್ವಯ್ಯೇವ ವಿಶ್ವಂ ಲಯಮಭ್ಯುಪೈತಿ॥ 28

ತ್ವಯಾ ಧೃತೇಯಂ ಧರಣೀ ಬಿಭರ್ತಿ
ಚರಾಚರಂ ವಿಶ್ವಮನಂತಮೂರ್ತೇ।

---

ಅನಂತ, ಹೇ ಅವ್ಯಯ, ಆಕಾಶವೇ ನಿನ್ನ ಶಿರಸ್ಸು; ಮೇಘಗಳೇ ಕೇಶಗಳು; ಭೂಮಿಯೇ ಪಾದಗಳು; ವಹ್ನಿಯೇ ನಿನ್ನ ಮುಖ; ಚಂದ್ರನು ನಿನ್ನ ಮನಸ್ಸು; ವಾಯು ನಿನ್ನ ಉಚ್ಛ್ವಾಸ; ನಾಲ್ಕು ದಿಕ್ಕುಗಳು ನಿನ್ನ ನಾಲ್ಕು ಬಾಹುಗಳು (26). ಹೇ ಭಗವನ್, ಮುನಿಗಳು ನಿನ್ನನ್ನು "ಮಹಾತ್ಮನಾದ ನೀನು ಸಹಸ್ರಮುಖವುಳ್ಳವನು; ನಿನಗೆ ಸಾವಿರ ಕೈಗಳಿವೆ, ಸಾವಿರ ಪಾದಗಳಿವೆ, ಸಾವಿರ ಶರೀರಗಳಿವೆ. ಸಾವಿರಾರು ಬ್ರಹ್ಮರು ನಿನ್ನಿಂದ ಜನಿಸಿದ್ದಾರೆ!" ಹೀಗೆಂದು ಸಾವಿರ ವಿಧದಲ್ಲಿ ಸ್ತೋತ್ರಮಾಡುತ್ತಾರೆ (27). ನಿನ್ನ ದಿವ್ಯರೂಪವನ್ನು ಇನ್ನೊಬ್ಬನು ಅರಿಯನು. ಆದ್ದರಿಂದ ಸಮಸ್ತ ದೇವತೆಗಳೂ ನಿನ್ನ ಅವತಾರರೂಪವನ್ನೇ ಅರ್ಚಿಸುತ್ತಾರೆ. ಅಂತಕಾಲದಲ್ಲಿ ಸಮಸ್ತ ಪ್ರಪಂಚವೂ ನಿನ್ನಲ್ಲಿಯೇ ಲಯ ಹೊಂದುತ್ತದೆ. ಇದನ್ನು ನೀನು ಅರಿಯೆಯಾ? (28). ಹೇ ಅನಂತ ಮೂರ್ತಿಯೆ, ನೀನು ಧರಿಸಿರುವ ಈ ಪೃಥ್ವಿಯು ಚರಾಚರಾತ್ಮಕವಾದ ಈ

**ಕೃತಾದಿಭೇದೈರಜ ಕಾಲರೂಪೋ**
**ನಿಮೇಷಪೂರ್ವೋ ಜಗದೇತದತ್ಸಿ॥** 29

**ಅತ್ತಂ ಯಥಾ ವಾಡವವಹ್ನಿನಾಂಬು**
**ಹಿಮಸ್ವರೂಪಂ ಪರಿಗೃಹ್ಯ ಕಾಸ್ತಮ್।**
**ಹಿಮಾಚಲೇ ಭಾನುಮತೋಽಂಶುಸಂಗಾ-**
**ಜ್ಜಲತ್ವಮಭ್ಯೇತಿ ಪುನಸ್ತದೇವ॥** 30

**ಏವಂ ತ್ವಯಾ ಸಂಹರಣೇಽತ್ತಮೇತ-**
**ಜ್ಜಗತ್ಸಮಸ್ತಂ ತ್ವದಧೀನಕಂ ಪುನಃ।**

---

ಸೃಷ್ಟಿಯನ್ನು ಧರಿಸಿದೆ. ಹೇ ಅಜ, ನಿಮೇಷಾದಿ ಕಾಲಸ್ವರೂಪನಾದ ನೀನು ಕೃತಯುಗಾದಿರೂಪಗಳಿಂದ ಈ ಜಗತ್ತನ್ನು ನುಂಗಿಬಿಡುತ್ತೀಯೆ! (29). ವಡವಾಗ್ನಿಯಿಂದ ಹೀರಲ್ಪಟ್ಟು ಸಮುದ್ರ ಜಲವು (ಸೂರ್ಯನಾಡೀಮಯವಾದ) ವಾಯುವಿನಿಂದ ಹಿಮಾಚಲದಲ್ಲಿ ನ್ಯಸ್ತವಾಗಿ ಹಿಮಸ್ವರೂಪವನ್ನು ಪಡೆಯುತ್ತದೆ. ಅನಂತರ ಸೂರ್ಯಕಿರಣದ ಸಂಬಂಧದಿಂದ ಅದೇ ಹಿಮವು ಮತ್ತೆ ಜಲಸ್ವರೂಪವನ್ನು* ಪಡೆಯುತ್ತದೆ (30). ಹಾಗೆಯೇ ನೀನು ಈ ಜಗತ್ತನ್ನು ರುದ್ರಾದಿರೂಪದಿಂದ ಸಂಹಾರ ಕಾಲದಲ್ಲಿ ಭಕ್ಷಿಸಿ (ಪರಮೇಶ್ವರನಾದ) ನಿನ್ನ ಅಧೀನದಲ್ಲಿ ಇಟ್ಟುಕೊಂಡಿರುತ್ತೀಯೆ. ಹೇ ಈಶ್ವರ, (ಹಿರಣ್ಯಗರ್ಭನಾಗಿ) ಜಗತ್ತಿನ ಸೃಷ್ಟಿಯಲ್ಲಿ ನೀನು ತೊಡಗಿದಾಗ ಪ್ರತಿಯೊಂದು ಕಲ್ಪದಲ್ಲಿಯೂ ಅದು

* ಈ ಶ್ಲೋಕದಲ್ಲಿ 'ಕಾಸ್ತಂ' ಎಂಬ ಪದವಿದೆ. ಕೇನ + ಅಸ್ತಂ = ಕಾಸ್ತಂ ಎಂದು ಬಿಡಿಸಬೇಕು. 'ಕ' ಎಂದರೆ ವಾಯು ಅಸ್ತ = ನ್ಯಸ್ತ. ವಾಯುವಿನಿಂದ ನ್ಯಸ್ತವಾದ —ತಂದು ಇರಿಸಲ್ಪಟ್ಟ ಎಂದರ್ಥ. ನದೀಜಲವು ಸಮುದ್ರದಲ್ಲಿ ಬಡಬಾಗ್ನಿಯಿಂದ ಹೀರಲ್ಪಡುತ್ತದೆ. ಅದು ಸೂರ್ಯಕಿರಣ ಸಂಬಂಧದಿಂದ ಆವಿಯಾಗಿ ವಾಯುವಿನ ಮೂಲಕ ಪರ್ವತ ಪ್ರದೇಶಗಳಲ್ಲಿ ಹಿಮರೂಪದಲ್ಲಿರುತ್ತದೆ. ಮತ್ತೆ ಸೂರ್ಯಕಿರಣಸಂಬಂಧದಿಂದ ವಾಯುವಿನೊಡನೆ ಸೇರಿ ಮೋಡವಾಗಿ ಮಳೆ ಬಂದು ಜಲರೂಪವಾಗುತ್ತದೆ. ಸೂರ್ಯನು ಜಲವನ್ನು ಹೀರಿ ಅಡಗಿಸಿ ಮತ್ತೆ ಜಲರೂಪದಲ್ಲಿ ವಿಸರ್ಜಿಸುತ್ತಾನೆ—ಎಂದು ತಾತ್ಪರ್ಯ. ಹಾಗೆಯೇ ನೀನು ಜಗತ್ತನ್ನು ಪ್ರಳಯಕಾಲದಲ್ಲಿ ನುಂಗಿ ಮತ್ತೆ ಸೃಷ್ಟಿಸುತ್ತೀಯೆ—ಎಂದು ಮುಂದಿನ ಶ್ಲೋಕಾರ್ಥಕ್ಕೆ ಇದು ದೃಷ್ಟಾಂತವಾಗಿದೆ.

**ತವೈವ ಸರ್ಗಾಯ ಸಮುದ್ಯತಸ್ಯ**
**ಜಗತ್ತ್ವಮಭ್ಯೇತ್ಯನುಕಲ್ಪಮೀಶ ॥** 31

**ಭವಾನಹಂ ಚ ವಿಶ್ವಾತ್ಮನ್ ಏಕಮೇವ ಚ ಕಾರಣಮ್ ।**
**ಜಗತೋಽಸ್ಯ ಜಗತ್ಯರ್ಥೇ ಭೇದೇನಾವಾಂ ವ್ಯವಸ್ಥಿತೌ ॥** 32

**ತತ್ ಸ್ಮರ್ಯತಾಮಮೇಯಾತ್ಮಂಸ್ತ್ವಯಾತ್ಮಾ ಜಹಿ ದಾನವಮ್ ।**
**ಮಾನುಷ್ಯಮೇವಾವಲಂಬ್ಯ ಬಂಧೂನಾಂ ಕ್ರಿಯತಾಂ ಹಿತಮ್ ॥** 33

*ಶ್ರೀಪರಾಶರ ಉವಾಚ:*

**ಇತಿ ಸಂಸ್ಮಾರಿತೋ ವಿಪ್ರ ಕೃಷ್ಣೇನ ಸುಮಹಾತ್ಮನಾ ।**
**ವಿಹಸ್ಯ ಪೀಡಯಾಮಾಸ ಪ್ರಲಂಬಂ ಬಲವಾನ್ ಬಲಃ ॥** 34

**ಮುಷ್ಟಿನಾ ಸೋಽಹನನ್ಮೂರ್ಧ್ನಿ ಕೋಪಸಂರಕ್ತಲೋಚನಃ ।**
**ತೇನ ಚಾಸ್ಯ ಪ್ರಹಾರೇಣ ಬಹಿರ್ಯಾತೇ ವಿಲೋಚನೇ ॥** 35

**ಸ ನಿಷ್ಕಾಸಿತಮಸ್ತಿಷ್ಕೋ ಮುಖಾಚ್ಛೋಣಿತಮುದ್ವಮನ್ ।**
**ನಿಪಪಾತ ಮಹೀಪೃಷ್ಠೇ ದೈತ್ಯವರ್ಯೋ ಮಮಾರ ಚ ॥** 36

---

ಮತ್ತೆ ಜಗತ್ತಿನ ರೂಪವಾಗಿ ಕಾಣಿಸಿಕೊಳ್ಳುತ್ತದೆ (31). ಹೇ ವಿಶ್ವಾತ್ಮ, ನೀನು ನಾನು ಇಬ್ಬರೂ ಈ ಜಗತ್ತಿಗೆ ಒಂದೇ ಕಾರಣವಾಗಿದ್ದೇವೆ. ಈ ಜಗತ್ತಿನ ವ್ಯವಸ್ಥೆಗಾಗಿಯೇ ಭೇದದಿಂದ ಎರಡಾಗಿದ್ದೇವೆ. ಆದ್ದರಿಂದ, ಹೇ ಅಮೇಯಾತ್ಮ, ನಿನ್ನ ನಿಜಸ್ವರೂಪವನ್ನು ಸ್ಮರಿಸಿಕೊ. ದಾನವನನ್ನು ಧ್ವಂಸ ಮಾಡು. ಅನಂತರ ಮನುಷ್ಯತ್ವವನ್ನು ಅವಲಂಬಿಸಿ ಬಂಧುಗಳ ಹಿತವನ್ನು ಸಾಧಿಸು!" ಎಂದನು (32-33). ಮೈತ್ರೇಯ, ಈ ಪ್ರಕಾರವಾಗಿ ಮಹಾತ್ಮನಾದ ಕೃಷ್ಣನು ಬಲರಾಮನ ನಿಜಸ್ವರೂಪವನ್ನು ಸ್ಮರಿಸಿಕೊಡಲಾಗಿ, ಬಲಾಢ್ಯನಾದ ಬಲರಾಮನು ಒಮ್ಮೆ ನಕ್ಕು ಪ್ರಲಂಬನನ್ನು ಅದುಮಿದನು. ಕ್ರೋಧದಿಂದ ರಕ್ತನೇತ್ರನಾಗಿ ಪ್ರಲಂಬಾಸುರನ ನೆತ್ತಿಯ ಮೇಲೆ ಮುಷ್ಟಿಯಿಂದ ಗುದ್ದಿದನು. ಗುದ್ದಿನ ರಭಸಕ್ಕೆ ದೈತ್ಯನ ಎರಡೂ ಕಣ್ಣುಗಳು ಹೊರಬಂದವು (34-35). ಮೆದುಳು ಈಚೆಗೆ ಬಂದಿತು. ಆ ದೈತ್ಯನು ರಕ್ತವನ್ನು ಕಾರುತ್ತ ನೆಲದ ಮೇಲೆ

**ಪ್ರಲಂಬಂ ನಿಹತಂ ದೃಷ್ಟ್ವಾ ಬಲೇನಾದ್ಭುತಕರ್ಮಣಾ।**
**ಪ್ರಹೃಷ್ಟಾಸ್ತುಷ್ಟುವುರ್ಗೋಪಾಸ್ಸಾಧುಸಾಧ್ವಿತಿ ಚಾಬ್ರುವನ್॥** 37

**ಸಂಸ್ತೂಯಮಾನೋ ಗೋಪೈಸ್ತು ರಾಮೋ ದೈತ್ಯೇ ನಿಪಾತಿತೇ।**
**ಪ್ರಲಂಬೇ ಸಹ ಕೃಷ್ಣೇನ ಪುನರ್ಗೋಕುಲಮಾಯಯೌ॥** 38

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ನವಮೋಽಧ್ಯಾಯಃ

---

ಬಿದ್ದು ಸತ್ತು ಹೋದನು. ಅದ್ಭುತ ಕರ್ಮನಾದ ಬಲನಿಂದ ಪ್ರಲಂಬನು ಹತನಾಗಿ ಬಿದ್ದುದನ್ನು ಕಂಡು ಗೋಪಾಲರು 'ಭಲಾ! ಭೇಷ್' ಎನ್ನುತ್ತ ರಾಮನನ್ನು ಹೊಗಳಿದರು (36-37). ಈ ರೀತಿಯಾಗಿ ದೈತ್ಯನಾದ ಪ್ರಲಂಬನು ಹತನಾಗಲಾಗಿ, ಬಲರಾಮನು ಗೋಪಾಲರಿಂದ ಸ್ತುತಿಸಲ್ಪಡುತ್ತ ಕೃಷ್ಣನೊಡನೆ ಗೋಕುಲಕ್ಕೆ ಹಿಂದಿರುಗಿ ಬಂದನು (38).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಒಂಬತ್ತನೆಯ ಅಧ್ಯಾಯ ಮುಗಿಯಿತು.



## ದಶಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ತಯೋರ್ವಿಹರತೋರೇವಂ ರಾಮಕೇಶವಯೋರ್ವ್ರಜೇ।**
**ಪ್ರಾವೃಡ್ ವ್ಯತೀತಾ ವಿಕಸತ್ಸರೋಜಾ ಚಾಭವಚ್ಛರತ್॥** 1

**ಅವಾಪುಸ್ತಾಪಮತ್ಯರ್ಥಂ ಶಫರ್ಯಃ ಪಲ್ವಲೋದಕೇ।**
**ಪುತ್ರಕ್ಷೇತ್ರಾದಿಸಕ್ತೇನ ಮಮತ್ವೇನ ಯಥಾ ಗೃಹೀ॥** 2

**ಮಯೂರಾ ಮೌನಮಾತಸ್ಥುಃ ಪರಿತ್ಯಕ್ತಮದಾ ವನೇ।**
**ಅಸಾರತಾಂ ಪರಿಜ್ಞಾಯ ಸಂಸಾರಸ್ಯೇವ ಯೋಗಿನಃ॥** 3

---

## ಅಧ್ಯಾಯ 10

ಶರತ್ಕಾಲದ ವರ್ಣನೆ. ಗೋವರ್ಧನಗಿರಿಯ ಪೂಜೆ.

ಪರಾಶರಮುನಿಗಳು ನುಡಿದರು: ಮೈತ್ರೇಯ, ಈ ವಿಧದಲ್ಲಿ ಬಲರಾಮ ಕೇಶವರು ವ್ರಜದಲ್ಲಿ ವಿಹರಿಸುತ್ತಿರುವಾಗ ಮಳೆಗಾಲವು ಕಳೆಯಿತು. ಅರಳಿದ ತಾವರೆಗಳಿಂದ ಸಹಿತವಾದ ಶರತ್ಕಾಲವು ಬಂದಿತು (1). ಮಕ್ಕಳು, ಹೊಲ ಮುಂತಾದವುಗಳಲ್ಲಿ ಆಸಕ್ತವಾದ ಮಮತ್ವಬುದ್ಧಿಯಿಂದ ಗೃಹಸ್ಥನು ಹೇಗೆ ಸಂತಾಪಕ್ಕೆ ಒಳಗಾಗುವನೋ, ಹಾಗೆ ಮೀನುಗಳು ಅಲ್ಪಜಲವುಳ್ಳ ಕೆರೆಯ ನೀರಿನಲ್ಲಿ ಬಹಳ ತಾಪವನ್ನನನುಭವಿಸಿದವು! (2). ಸಂಸಾರದ ಅಸಾರತೆ ಯನ್ನರಿತು ಯೋಗಿಗಳು ಹೇಗೆ ಮೌನವನ್ನ ಅವಲಂಬಿಸುವರೋ, ಹಾಗೆ ವನದಲ್ಲಿ ನವಿಲುಗಳು ಮದವನ್ನು ಕಳೆದುಕೊಂಡು ತೆಪ್ಪಗಾದವು! (3). ಜಡವಾದ* (ಅಹಂಕಾರಾದಿ) ಸರ್ವಸ್ವವನ್ನು ಪರಿತ್ಯಜಿಸಿ, (ರಾಗರಾಹಿತ್ಯದಿಂದ) ನಿರ್ಮಲರಾದ ಶುದ್ಧಸತ್ತ್ವರಾದ ಜ್ಞಾನಿಗಳು ಗೃಹವನ್ನು ಹೇಗೆ ತ್ಯಜಿಸುವರೋ,

---

* ಜಲಸರ್ವಸ್ವಂ—ಎಂದು ಮೂಲದಲ್ಲಿದೆ. 'ಲಡಯೋರಭೇದಃ' ಎಂಬ ವಚನದಂತೆ ಜಲಶಬ್ದವು 'ಜಡ'ವೂ ಆಗುತ್ತದೆ.

**ಉತ್ಸೃಜ್ಯ ಜಲಸರ್ವಸ್ವಂ ವಿಮಲಾಸ್ಸಿತಮೂರ್ತಯಃ।**
**ತತ್ಯಜುಶ್ಚಾಂಬರಂ ಮೇಘಾ ಗೃಹಂ ವಿಜ್ಞಾನಿನೋ ಯಥಾ॥ 4**

**ಶರತ್ಸೂರ್ಯಾಂಶುತಪ್ತಾನಿ ಯಯುಶ್ಶೋಷಂ ಸರಾಂಸಿ ಚ।**
**ಬಹ್ವಾಲಂಬಮಮತ್ವೇನ ಹೃದಯಾನೀವ ದೇಹಿನಾಮ್॥ 5**

**ಕುಮುದೈಶ್ಶರದಂಭಾಂಸಿ ಯೋಗ್ಯತಾಲಕ್ಷಣಂ ಯಯುಃ।**
**ಅವಬೋಧೈರ್ಮನಾಂಸೀವ ಸಮತ್ವಮಮಲಾತ್ಮನಾಮ್॥ 6**

**ತಾರಕಾವಿಮಲೇ ವ್ಯೋಮ್ನಿ ರರಾಜಾಖಂಡಮಂಡಲಃ।**
**ಚಂದ್ರಶ್ಚರಮದೇಹಾತ್ಮಾ ಯೋಗೀ ಸಾಧುಕುಲೇ ಯಥಾ॥ 7**

**ಶನಕೈಶ್ಶನಕೈಸ್ತೀರಂ ತತ್ಯಜುಶ್ಚ ಜಲಾಶಯಾಃ।**
**ಮಮತ್ವಂ ಕ್ಷೇತ್ರಪುತ್ರಾದಿರೂಢಮುಚ್ಚೈರ್ಯಥಾ ಬುಧಾಃ॥ 8**

---

ಹಾಗೆ ಜಲವೆಲ್ಲವನ್ನೂ ಸುರಿಸಿ ಕಪ್ಪು ಬಣ್ಣವನ್ನು ಕಳೆದುಕೊಂಡು ಶುಭ್ರವಾದ ಮೇಘಗಳು ಆಕಾಶವನ್ನು ಬಿಟ್ಟು ಹೋದವು! (4). ನಾನಾಬಗೆಯ ವಸ್ತುಗಳಲ್ಲಿಡುವ ಮಮತ್ತ್ವದಿಂದ ಮಾನವರ ಹೃದಯಗಳು ನಿಃಸಾರವಾಗುವ ಹಾಗೆ, ಶರತ್ಕಾಲದ ಸೂರ್ಯನ ಕಿರಣಗಳಿಂದ ತಪ್ತವಾದ ಸರೋವರಗಳು ಒಣಗುತ್ತ ಹೋದವು (5). ಶುದ್ಧಾತ್ಮರ ಮನಸ್ಸುಗಳು ತತ್ತ್ವಜ್ಞಾನದಿಂದ ಸಮತ್ತ್ವವನ್ನು ಪಡೆಯುವ ಹಾಗೆ, ಶರತ್ಕಾಲದ ಸ್ವಚ್ಛ ಜಲಗಳು (ಬಿಳಿಯ) ಅರಳಿದ ನೈದಿಲೆಗಳಿಂದ ಅನ್ಯೋನ್ಯ ಸಮತ್ತ್ವವನ್ನು ಪಡೆದವು (6). ಚರಮ* ದೇಹಿಯಾದ ಯೋಗಿಯು ಸತ್ಪುರುಷರ ಕುಲದಲ್ಲಿ ಪ್ರಕಾಶಿಸುವ ಹಾಗೆ, ತಾರೆಗಳಿಂದ ಕೂಡಿದ ವಿಮಲವಾದ ಗಗನದಲ್ಲಿ ಪೂರ್ಣಚಂದ್ರನು ವಿರಾಜಿಸಿದನು (7). ಹೊಲ, ಮಕ್ಕಳು—ಮೊದಲಾದವುಗಳಲ್ಲಿ ಬೆಳೆದಿರುವ ಮಮತೆಯನ್ನು ವಿದ್ವಾಂಸರು ಹೇಗೆ ಕ್ರಮವಾಗಿ ಬಿಡುವರೋ, ಹಾಗೆ ಜಲಾಶಯಗಳು ತಮ್ಮ ತೀರಗಳನ್ನು ಮೆಲ್ಲಮೆಲ್ಲಗೆ§ ಬಿಟ್ಟವು (8). ಅಂತರಾಯಗಳಿಂದ ವಿಘ್ನಿತ

* ಚರಮದೇಹವೆಂದರೆ ಕಡೆಯ ದೇಹ. ಮುಕ್ತನಿಗೆ ಪುನಃ ದೇಹ ಇಲ್ಲ. ಯಾವ ದೇಹ ಬಂದಾಗ ಮೋಕ್ಷವನ್ನು ಸಾಧಿಸುತ್ತಾನೋ ಆ ದೇಹವುಳ್ಳವನು ಚರಮದೇಹಿ.

§ ತೀರದವರೆಗೆ ತುಂಬಿದ ಜಲಾಶಯಗಳು ಕುಗ್ಗಿದವು—ಎಂದು ಅಭಿಪ್ರಾಯ.

**ಪೂರ್ವಂ ತ್ಯಕ್ತ್ಯೈಸ್ಸರೋಽಂಭೋಭಿರ್ಹಂಸಾ ಯೋಗಂ ಪುನರ್ಯಯುಃ।**
**ಕ್ಲೇಶೈಃ ಕುಯೋಗಿನೋಽಶೇಷೈರಂತರಾಯಹತಾ ಇವ॥ 9**

**ನಿಭೃತೋಽಭವದತ್ಯರ್ಥಂ ಸಮುದ್ರಃ ಸ್ತಿಮಿತೋದಕಃ।**
**ಕ್ರಮಾವಾಪ್ತಮಹಾಯೋಗೋ ನಿಶ್ಚಲಾತ್ಮಾ ಯಥಾ ಯತಿಃ॥ 10**

**ಸರ್ವತ್ರಾತಿಪ್ರಸನ್ನಾನಿ ಸಲಿಲಾನಿ ತಥಾಭವನ್।**
**ಜ್ಞಾತೇ ಸರ್ವಗತೇ ವಿಷ್ಣೌ ಮನಾಂಸೀವ ಸುಮೇಧಸಾಮ್॥ 11**

**ಬಭೂವ ನಿರ್ಮಲಂ ವ್ಯೋಮ ಶರದಾ ಧ್ವಸ್ತತೋಯದಮ್।**
**ಯೋಗಾಗ್ನಿದಗ್ಧಕ್ಲೇಶೌಘಂ ಯೋಗಿನಾಮಿವ ಮಾನಸಮ್॥ 12**

**ಸೂರ್ಯಾಂಶುಜನಿತಂ ತಾಪಂ ನಿನ್ಯೇ ತಾರಾಪತಿಃ ಶಮಮ್।**
**ಅಹಂಮಾನೋದ್ಭವಂ ದುಃಖಂ ವಿವೇಕಃ ಸುಮಹಾನಿವ॥ 13**

---

ರಾದ ಯೋಗಭ್ರಷ್ಟರು ಮತ್ತೆ ಅವಿದ್ಯಾದಿಕ್ಲೇಶಗಳೊಡನೆ ಹೇಗೆ ಸಂಬಂಧವನ್ನು ಪಡೆಯುವರೋ, ಹಾಗೆ ಹಂಸಗಳು ಹಿಂದೆ ಪರಿತ್ಯಜಿಸಿದ ಜಲದೊಡನೆ ಸಂಬಂಧವನ್ನು ಹೊಂದಿದವು* (9). ಯಮ, ನಿಯಮಾದಿ ಕ್ರಮಗಳಿಂದ (ಸಂಪ್ರಜ್ಞಾತ ಸಮಾಧಿಯೆಂಬ) ಮಹಾಯೋಗವನ್ನು ಸಾಧಿಸಿದ ಯತಿಯು ಹೇಗೆ ನಿಶ್ಚಲಚಿತ್ತನಾಗುವನೋ, ಹಾಗೆ ನಿಂತ ನೀರುಳ್ಳ ಸಮುದ್ರವು ನಿಶ್ಚಲ ವಾಯಿತು (10). ಸರ್ವಗತನಾದ ವಿಷ್ಣುವನ್ನರಿತ ಮೇಲೆ ಜ್ಞಾನಿಗಳ ಮನಸ್ಸು ಸುಪ್ರಸನ್ನವಾಗುವಂತೆ, ಎಲ್ಲೆಡೆಯೂ ನೀರು ತಿಳಿಯಾಯಿತು (11). ಯೋಗಾಗ್ನಿ ಯಿಂದ ಯಾರ ಕ್ಲೇಶರಾಶಿಗಳು ಸುಟ್ಟು ಹೋಗಿವೆಯೋ ಅವರ ಮನಸ್ಸಿನಂತೆ, ಶರತ್ಕಾಲದಿಂದ ಮೇಘವು ಚದರಿಹೋಗಲಾಗಿ ಆಕಾಶವು ನಿರ್ಮಲವಾಯಿತು (12). ಪ್ರಬಲವಾದ ವಿವೇಕವು ಅಹಂಕಾರದಿಂದ ಉಂಟಾದ ದುಃಖವನ್ನು ಶಮನಗೊಳಿಸುವಂತೆ, ತಾರಾಪತಿಯಾದ ಚಂದ್ರನು ಸೂರ್ಯಕಿರಣದಿಂದಾದ ತಾಪವನ್ನು ಶಮನಗೊಳಿಸಿದನು (13). ಇಂದ್ರಿಯಾರ್ಥಗಳಾದ ಶಬ್ದಾದಿ

---

* ಮಳೆಗಾಲದಲ್ಲಿ ತೊರೆದು ಹೋದ ಹಂಸಗಳು ಮತ್ತೆ ಜಲಾಶಯಗಳಿಗೆ ಮರಳಿದವು—ಎಂದು ಅಭಿಪ್ರಾಯ. ಕ್ಲೇಶ, ಅಂತರಾಯ—ಇವುಗಳಿಗೆ ಅನುಬಂಧವನ್ನು ನೋಡಿ.

**ನಭಸೋಽಬ್ದಂ ಭುವಃ ಪಂಕಂ ಕಾಲುಷ್ಯಂ ಚಾಂಭಸಶ್ಶರತ್।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಃ ಪ್ರತ್ಯಾಹಾರ ಇವಾಹರತ್॥ 14**

**ಪ್ರಾಣಾಯಾಮ ಇವಾಂಭೋಭಿಸ್ಸರಸಾಂ ಕೃತಪೂರಕೈಃ।**
**ಅಭ್ಯಸ್ಯತೇಽನುದಿವಸಂ ರೇಚಕಾಕುಂಭಕಾದಿಭಿಃ॥ 15**

**ವಿಮಲಾಂಬರನಕ್ಷತ್ರೇ ಕಾಲೇ ಚಾಭ್ಯಾಗತೇ ವ್ರಜೇ।**
**ದದರ್ಶೇಂದ್ರಮಹಾರಂಭಾಯೋದ್ಯತಾಂಸ್ತಾನ್ ವ್ರಜೌಕಸಃ॥ 16**

**ಕೃಷ್ಣಸ್ತಾನುತ್ಸುಕಾನ್ ದೃಷ್ಟ್ವಾ ಗೋಪಾನುತ್ಸವಲಾಲಸಾನ್।**
**ಕೌತೂಹಲಾದಿದಂ ವಾಕ್ಯಂ ಪ್ರಾಹ ವೃದ್ಧಾನ್ ಮಹಾಮತಿಃ॥ 17**

---

ವಿಷಯಗಳಿಂದ ಇಂದ್ರಿಯಗಳನ್ನು ಪ್ರತ್ಯಾಹಾರವು* ಹೇಗೆ ಕಿತ್ತು ಬೇರ್ಪಡಿಸುವುದೋ, ಹಾಗೆ ಆಕಾಶದಿಂದ ಮೋಡವನ್ನೂ ನೆಲದಿಂದ ಕೆಸರನ್ನೂ ನೀರಿನಿಂದ ಮಾಲಿನ್ಯವನ್ನೂ ಶರತ್ಕಾಲವು ಬೇರ್ಪಡಿಸಿ ದೂರಮಾಡಿತು! (14). ಪೂರಕಗಳನ್ನು ಮಾಡಿದ್ದ ಜಲಾಶಯಗಳ ಜಲಗಳು ಈಗ ಕುಂಭಕ ರೇಚಕಗಳಿಂದ ಪ್ರಾಣಾಯಾಮವನ್ನು§ ಅಭ್ಯಾಸಮಾಡುತ್ತವೆಯೋ ಎಂಬಂತೆ ಕಾಣಿಸಿದವು! (15). ಈ ಪ್ರಕಾರವಾಗಿ ನಿರ್ಮಲವಾದ ಗಗನವೂ ನಕ್ಷತ್ರಗಳೂ ಇರುವ ಶರತ್ಕಾಲವು ಬರಲಾಗಿ, ವ್ರಜದಲ್ಲಿ ವ್ರಜವಾಸಿಗಳೆಲ್ಲರೂ 'ಇಂದ್ರಮಹ' ಎಂಬ ದೇವೇಂದ್ರನನ್ನು ಪೂಜಿಸುವ ಹಬ್ಬದ ಸಡಗರದಲ್ಲಿ ತೊಡಗಿರುವುದನ್ನು ಶ್ರೀಕೃಷ್ಣನು ನೋಡಿದನು (16). ಗೋಪಾಲರು ಉತ್ಸಾಹದಿಂದ ಆ ಉತ್ಸವದಲ್ಲಿ ಸಂಭ್ರಮಿಸುವುದನ್ನು ನೋಡಿ ಮಹಾ ಬುದ್ಧಿಶಾಲಿಯಾದ ಶ್ರೀಕೃಷ್ಣನು ಕೆಲವು ವೃದ್ಧರನ್ನು ಕುರಿತು ಕುತೂಹಲದಿಂದ "ಪೂಜ್ಯರೆ, ನೀವು ಬಹಳ ಹರ್ಷ

---

* ಇಂದ್ರಿಯ ನಿಗ್ರಹಕ್ಕಾಗಿ ಮಾಡುವ ಪ್ರಯತ್ನ.

§ ಪ್ರಾಣಾಯಾಮ ಪಕ್ಷದಲ್ಲಿ, ಪೂರಕ = ಉಸಿರನ್ನು ಒಳಗೆ ತೆಗೆದುಕೊಳ್ಳುವುದು. ಕುಂಭಕ = ಉಸಿರು ಕಟ್ಟುವುದು. ರೇಚಕ = ಕ್ರಮವಾಗಿ ಉಸಿರನ್ನು ಹೊರಬಿಡುವುದು. ಜಲಾಶಯ ಪಕ್ಷದಲ್ಲಿ, ಪೂರಕ = ಮಳೆಗಾಲದಲ್ಲಿ ನೀರು ತುಂಬುವುದು. ಕುಂಭಕ = ನೀರನ್ನು ಹಾಗೆಯೇ ಧರಿಸಿರುವುದು. ರೇಚಕ = ಕಾಲುವೆಯ ಮೂಲಕ ನೀರನ್ನು ಬಿಡುವುದು.

**ಕೋಽಯಂ ಶಕ್ರಮಖೋ ನಾಮ ಯೇನ ವೋ ಹರ್ಷ ಆಗತಃ।**
**ಪ್ರಾಹ ತಂ ನಂದಗೋಪಶ್ಚ ಪೃಚ್ಛಂತಮತಿಸಾದರಮ್॥ 18**

*ನಂದಗೋಪ ಉವಾಚ:*

**ಮೇಘಾನಾಂ ಪಯಸಾಂ ಚೇಶೋ ದೇವರಾಜಶ್ಶತಕ್ರತುಃ।**
**ತೇನ ಸಂಚೋದಿತಾ ಮೇಘಾ ವರ್ಷಂತ್ಯಂಬುಮಯಂ ರಸಮ್॥ 19**

**ತದ್‌ವೃಷ್ಟಿಜನಿತಂ ಸಸ್ಯಂ ವಯಮನ್ಯೇ ಚ ದೇಹಿನಃ।**
**ವರ್ತಯಾಮೋಪಯುಂಜಾನಾಸ್ತರ್ಪಯಾಮಶ್ಚ ದೇವತಾಃ॥ 20**

**ಕ್ಷೀರವತ್ಯ ಇಮಾ ಗಾವೋ ವತ್ಸವತ್ಯಶ್ಚ ನಿರ್ವೃತಾಃ।**
**ತೇನ ಸಂವರ್ಧಿತೈಸ್ಸಸ್ಯೈಸ್ತುಷ್ಟಾಃ ಪುಷ್ಟಾ ಭವಂತಿ ವೈ॥ 21**

**ನಾಸಸ್ಯಾ ನಾತೃಣಾ ಭೂಮಿರ್ನ ಬುಭುಕ್ಷಾರ್ದಿತೋ ಜನಃ।**
**ದೃಶ್ಯತೇ ಯತ್ರ ದೃಶ್ಯಂತೇ ವೃಷ್ಟಿಮಂತೋ ಬಲಾಹಕಾಃ॥ 22**

**ಭೌಮಮೇತತ್ಪಯೋ ದುಗ್ಧಂ ಗೋಭಿಸ್ಸೂರ್ಯಸ್ಯ ವಾರಿದೈಃ।**
**ಪರ್ಜನ್ಯಸ್ಸರ್ವಲೋಕಸ್ಯೋದ್ಭವಾಯ ಭುವಿ ವರ್ಷತಿ॥ 23**

---

ಗೊಂಡಿದ್ದೀರಲ್ಲ, 'ಇಂದ್ರ ಮಹ' ಎಂದರೆ ಯಾವುದಿದು?" ಎಂದು ಕೇಳಿದನು. ಆಗ ಅಲ್ಲಿದ್ದ ನಂದಗೋಪನು ಅತ್ಯಂತ ಆದರದಿಂದ ಹೀಗೆಂದನು (17-18): "ದೇವರಾಜನಾದ ಶತಕ್ರತು ಮೇಘಗಳಿಗೂ ಜಲಕ್ಕೂ ಅಧಿದೇವತೆ. ಆತನ ಪ್ರೇರಣೆಯಿಂದ ಮೇಘಗಳು ಜಲಮಯವಾದ ರಸವನ್ನು ಸುರಿಸುತ್ತವೆ. ಅಂತಹ ಮಳೆಯಿಂದ ಬೆಳೆದ ಸಸ್ಯಗಳನ್ನು ನಾವೂ ಅನ್ಯ ಪ್ರಾಣಿಗಳೂ ತಿಂದು ಜೀವಿಸುತ್ತೇವೆ. ಸಸ್ಯಗಳನ್ನು ಬಳಸುವ ನಾವು ದೇವತೆಗಳನ್ನು ತೃಪ್ತಿಗೊಳಿಸುತ್ತಿದ್ದೇವೆ (19-20). ಮಳೆಯಿಂದ ಬೆಳೆದ ಸಸ್ಯಗಳಿಂದ ಹೃಷ್ಟಪುಷ್ಟಗಳಾದ ಈ ಹಸುಗಳು ಸುಖವಾಗಿದ್ದು ಕರುಗಳನ್ನು ಹಾಕುತ್ತವೆ; ಹಾಲನ್ನು ಕೊಡುತ್ತವೆ. ಎಲ್ಲಿ ಮೋಡಗಳು ಮಳೆ ಸುರಿಸುತ್ತವೋ ಆ ಭೂಮಿಯಲ್ಲಿ ಸಸ್ಯಗಳಿಗೂ ಹುಲ್ಲಿಗೂ ಅಭಾವ ಇರುವುದಿಲ್ಲ. ಜನರು ಹಸಿವಿನಿಂದ ಬಳಲುವುದೂ ಇಲ್ಲ (21-22). ಭೂಮಿಯಲ್ಲಿರುವ ಜಲವನ್ನು ಸೂರ್ಯನ ಕಿರಣಗಳು ಹೀರಿ ಮೇಘಗಳನ್ನು

**ತಸ್ಮಾತ್ ಪ್ರಾವೃಷಿ ರಾಜಾನಸ್ಸರ್ವೇ ಶಕ್ರಂ ಮುದಾ ಯುತಾಃ।**
**ಮಖೈಸ್ಸುರೇಶಮರ್ಚಂತಿ ವಯಮನ್ಯೇ ಚ ಮಾನವಾಃ॥** 24

*ಶ್ರೀಪರಾಶರ ಉವಾಚ:*

**ನಂದಗೋಪಸ್ಯ ವಚನಂ ಶ್ರುತ್ವೇತ್ಥಂ ಶಕ್ರಪೂಜನೇ।**
**ರೋಷಾಯ ತ್ರಿದಶೇಂದ್ರಸ್ಯ ಪ್ರಾಹ ದಾಮೋದರಸ್ತದಾ॥** 25

**ನ ವಯಂ ಕೃಷಿಕರ್ತಾರೋ ವಾಣಿಜ್ಯಾಜೀವಿನೋ ನ ಚ।**
**ಗಾವೋಽಸ್ಮದ್ದೈವತಂ ತಾತ ವಯಂ ವನಚರಾ ಯತಃ॥** 26

**ಆನ್ವೀಕ್ಷಿಕೀ ತ್ರಯೀ ವಾರ್ತಾ ದಂಡನೀತಿಸ್ತಥಾ ಪರಾ।**
**ವಿದ್ಯಾಚತುಷ್ಟಯಂ ಚೈತದ್ವಾರ್ತಾಮಾತ್ರಂ ಶೃಣುಷ್ವ ಮೇ॥** 27

**ಕೃಷಿರ್ವಣಿಜ್ಯಾ ತದ್ವಚ್ಚ ತೃತೀಯಂ ಪಶುಪಾಲನಮ್।**
**ವಿದ್ಯಾ ಹ್ಯೇಕಾ ಮಹಾಭಾಗ ವಾರ್ತಾ ವೃತ್ತಿತ್ರಯಾಶ್ರಯಾ॥** 28

---

ನಿರ್ಮಿಸುತ್ತವೆ. ಪರ್ಜನ್ಯನು (ದೇವೇಂದ್ರ) ಮೇಘಗಳ ಮೂಲಕ ಸರ್ವ ಪ್ರಾಣಿಗಳ ಹಿತಕ್ಕಾಗಿ ಜಲವನ್ನು ಮತ್ತೆ ಭೂಮಿಗೆ ಸುರಿಯುತ್ತಾನೆ *. ಆದ್ದರಿಂದ ಮಳೆಗಾಲ ಕಳೆದ ಮೇಲೆ ಎಲ್ಲ ರಾಜರೂ ಸಂತುಷ್ಟರಾಗಿ ಈ ಬಗೆಯ ಯಜ್ಞಗಳಿಂದ ದೇವೇಂದ್ರನನ್ನು ಪೂಜಿಸುತ್ತಾರೆ. ಹಾಗೆಯೇ ಮನುಷ್ಯರಾದ ನಾವೂ ಸಹ 'ಇಂದ್ರಮಹ'ವನ್ನು ಆಚರಿಸುತ್ತೇವೆ." ಎಂದನು (23-24). ಇಂದ್ರಪೂಜೆಯ ವಿಷಯವಾಗಿ ಈ ರೀತಿ ಹೇಳಿದ ನಂದಗೋಪನ ನುಡಿಗಳನ್ನು ಕೇಳಿ ದಾಮೋದರನು, ಇಂದ್ರನಿಗೆ ರೋಷವನ್ನು ಬರಿಸುವ ಈ ಮಾತುಗಳನ್ನು ಹೇಳಿದನು (25): "ತಂದೆಯೆ, ನಾವು ಕೃಷಿಕರಲ್ಲ , ವಣಿಜರೂ ಅಲ್ಲ. ನಾವು ಕಾಡಿನಲ್ಲಿರತಕ್ಕವರು. ಗೋವುಗಳೇ ನಮ್ಮ ದೇವತೆ. ಆನ್ವೀಕ್ಷಿಕೀ (ತರ್ಕಶಾಸ್ತ್ರ), ವೇದತ್ರಯೀ, ವಾರ್ತಾ, ದಂಡನೀತಿ (ಅರ್ಥಶಾಸ್ತ್ರ)—ಎಂದು ನಾಲ್ಕು ವಿದ್ಯೆಗಳು ಇರತಕ್ಕವು. ಇವುಗಳಲ್ಲಿ ವಾರ್ತೆಯೆಂದರೇನೆಂಬುದನ್ನು ಹೇಳುತ್ತೇನೆ, ಕೇಳು (26-27). ಕೃಷಿ, ವಾಣಿಜ್ಯ ಮತ್ತು ಮೂರನೆಯದಾದ ಪಶುಪಾಲನೆ—ಈ ಮೂರು ವೃತ್ತಿಗಳನ್ನೊಳಗೊಂಡದ್ದು ವಾರ್ತೆಯೆಂಬ ಒಂದೇ ವಿದ್ಯೆ.

* 'ಯಾಭಿರಾದಿತ್ಯಸ್ತಪತಿ ರಶ್ಮಿಭಿಸ್ತಾಭಿಃ ಪರ್ಜನ್ಯೋ ವರ್ಷತಿ'—ಶ್ರುತಿವಾಕ್ಯ.

**ಕರ್ಷಕಾಣಾಂ ಕೃಷಿರ್ವೃತ್ತಿಃ ಪಣ್ಯಂ ವಿಪಣಿಜೀವಿನಾಮ್।**
**ಅಸ್ಮಾಕಂ ಗೌಃ ಪರಾ ವೃತ್ತಿರ್ವಾರ್ತಾ ಭೇದೈರಿಯಂ ತ್ರಿಭಿಃ॥** 29

**ವಿದ್ಯಯಾ ಯೋ ಯಯಾ ಯುಕ್ತಸ್ತಸ್ಯ ಸಾ ದೈವತಂ ಮಹತ್।**
**ಸೈವ ಪೂಜ್ಯಾರ್ಚನೀಯಾ ಚ ಸೈವ ತಸ್ಯೋಪಕಾರಿಕಾ॥** 30

**ಯೋ ಯಸ್ಯ ಫಲಮಶ್ನನ್ ವೈ ಪೂಜಯತ್ಯಪರಂ ನರಃ।**
**ಇಹ ಚ ಪ್ರೇತ್ಯ ಚೈವಾಸೌ ನ ತದಾಪ್ನೋತಿ ಶೋಭನಮ್॥** 31

**ಕೃಷ್ಯಂತಾ ಪ್ರಥಿತಾ ಸೀಮಾ ಸೀಮಾಂತಂ ಚ ಪುನರ್ವನಮ್।**
**ವನಾಂತಾ ಗಿರಯಸ್ಸರ್ವೇ ತೇ ಚಾಸ್ಮಾಕಂ ಪರಾ ಗತಿಃ॥** 32

**ನ ದ್ವಾರಬಂಧಾವರಣಾ ನ ಗೃಹಕ್ಷೇತ್ರಿಣಸ್ತಥಾ।**
**ಸುಖಿನಸ್ತ್ವಖಿಲೇ ಲೋಕೇ ಯಥಾ ವೈ ಚಕ್ರಚಾರಿಣಃ॥** 33

---

ಬೇಸಾಯಗಾರರ ವೃತ್ತಿ ಕೃಷಿ, ವಣಿಜರ ವೃತ್ತಿ ವ್ಯಾಪಾರ. ನಮಗಾದರೋ ಪಶುಪಾಲನೆಯೇ ಮುಖ್ಯವಾದ ವೃತ್ತಿ. ವಾರ್ತಾವಿದ್ಯೆಯ ವೃತ್ತಿಭೇದಗಳು ಹೀಗೆ ಮೂರುಂಟು (28-29). ಯಾವ ವ್ಯಕ್ತಿಯು ಯಾವ ವಿದ್ಯೆಯಿಂದ ಕೂಡಿರುತ್ತಾನೋ ಅವನಿಗೆ ಆ ವಿದ್ಯೆಯೇ ಮಹತ್ತರವಾದ ದೇವತೆಯೆಂದು ತಿಳಿಯಬೇಕು. ಆ ದೇವತೆಯನ್ನೇ ಸೇವಿಸಬೇಕು, ಅರ್ಚಿಸಬೇಕು. ಆ ವ್ಯಕ್ತಿಗೆ ಅದೇ ಉಪಕಾರಿ ದೇವತೆ (30). ಒಬ್ಬರಿಂದಾದ ಫಲವನ್ನು ಅನುಭವಿಸುತ್ತ, ಅವರನ್ನು ಬಿಟ್ಟು ಇನ್ನೊಬ್ಬರನ್ನು ಯಾವ ಮನುಷ್ಯನು ಪೂಜಿಸುತ್ತಾನೋ ಅವನಿಗೆ ಇಹದಲ್ಲಿಯೂ ಪರದಲ್ಲಿಯೂ ಒಳ್ಳೆಯದಾಗುವುದಿಲ್ಲ (31). ಕೃಷ್ಯವೆಂದರೆ ಕೃಷಿ ಮಾಡುವ ಹೊಲ. ಅದು ಮುಗಿದ ಮೇಲೆ ಗಡಿಯಲ್ಲಿರತಕ್ಕದ್ದು ಸಾಮಾನ್ಯ, ಸಂಚಾರದ ನೆಲ. ಅದು ಕಳೆದ ಮೇಲೆ ಅರಣ್ಯ (ನಾವಾದರೋ ಅರಣ್ಯವಾಸಿಗಳು). ಅರಣ್ಯದ ಗಡಿಯಲ್ಲಿರತಕ್ಕವು ಪರ್ವತಗಳು. ಆದ್ದರಿಂದ ಪರ್ವತಗಳೇ ನಮಗೆ ಪರಮಗತಿ (32). ನಾವೆಲ್ಲರೂ ಬಾಗಿಲು ಗೋಡೆ ಮುಂತಾದ ಆವರಣಗಳೊಳಗೆ ನೆಲಸತಕ್ಕವರಲ್ಲ. ನಿಯತವಾದ ಗೃಹವಾಗಲಿ ಹೊಲವಾಗಲಿ ನಮಗೆ ಇಲ್ಲ. ಚಕ್ರಚಾರಿಗಳಾದ ಎಂದರೆ ಸದಾ ಸಂಚಾರಿಗಳಾದ ಮುನಿಗಳಂತೆ ನಾವು ಜನರೆಲ್ಲರ ನಡುವೆ ಸುಖವಾಗಿ ಇದ್ದೇವೆ (33). ಅಲ್ಲದೆ ಕಾಮರೂಪಿಗಳಾದ ಈ

**ಶ್ರೂಯಂತೇ ಗಿರಯಶ್ಚೈವ ವನೇಽಸ್ಮಿನ್ ಕಾಮರೂಪಿಣಃ।**
**ತತ್ತದ್ರೂಪಂ ಸಮಾಸ್ಥಾಯ ರಮಂತೇ ಸ್ವೇಷು ಸಾನುಷು॥ 34**

**ಯದಾ ಚೈತ್ರೈಃ ಪ್ರಬಾಧ್ಯಂತೇ ತೇಷಾಂ ಯೇ ಕಾನನೌಕಸಃ।**
**ತದಾ ಸಿಂಹಾದಿರೂಪೈಸ್ತಾನ್ ಘಾತಯಂತಿ ಮಹೀಧರಾಃ॥ 35**

**ಗಿರಿಯಜ್ಞಸ್ತ್ವಯಂ ತಸ್ಮಾದ್ ಗೋಯಜ್ಞಶ್ಚ ಪ್ರವರ್ತ್ಯತಾಮ್।**
**ಕಿಮಸ್ಮಾಕಂ ಮಹೇಂದ್ರೇಣ ಗಾವಶ್ಶೈಲಾಶ್ಚ ದೇವತಾಃ॥ 36**

**ಮಂತ್ರಯಜ್ಞಪರಾ ವಿಪ್ರಾಸ್ಸೀರಯಜ್ಞಾಶ್ಚ ಕರ್ಷಕಾಃ।**
**ಗಿರಿಗೋಯಜ್ಞಶೀಲಾಶ್ಚ ವಯಮದ್ರಿವನಾಶ್ರಯಾಃ॥ 37**

**ತಸ್ಮಾದ್ಗೋವರ್ಧನಶ್ಶೈಲೋ ಭವದ್ಭಿರ್ವಿವಿಧಾರ್ಹಣೈಃ।**
**ಅರ್ಚ್ಯತಾಂ ಪೂಜ್ಯತಾಂ ಮೇಧ್ಯಾನ್ ಪಶೂನ್ ಹತ್ವಾ ವಿಧಾನತಃ॥ 38**

**ಸರ್ವಘೋಷಸ್ಯ ಸಂದೋಹೋ ಗೃಹ್ಯತಾಂ ಮಾ ವಿಚಾರ್ಯತಾಮ್।**
**ಭೋಜ್ಯಂತಾಂ ತೇನ ವೈ ವಿಪ್ರಾಸ್ತಥಾ ಯೇ ಚಾಭಿವಾಂಛಕಾಃ॥ 39**

---

ಪರ್ವತಗಳು ಬೇರೆ ಬೇರೆ ರೂಪವನ್ನು ಧರಿಸಿ ತಮ್ಮ ಶಿಖರ ಪ್ರಾಂತಗಳಲ್ಲಿ ಸಂಚರಿಸುತ್ತವೆಯೆಂದು ಕೇಳಿ ಬರುತ್ತದೆ. ಈ ವನವಾಸಿಗಳೇನಾದರೂ ಅರಣ್ಯದ ಪ್ರಾಣಿಗಳನ್ನು ಬಾಧಿಸತೊಡಗಿದರೆ ಆಗ ಈ ಪರ್ವತಗಳು ಸಿಂಹಾದಿರೂಪ ಗಳನ್ನು ಧರಿಸಿ ಆ ಜನರನ್ನು ಕೊಂದುಹಾಕುತ್ತವೆಂದು ಸುದ್ದಿ ಇದೆ! (34-35). ಆದ್ದರಿಂದ ಗಿರಿ ಯಜ್ಞವನ್ನೂ ಗೋ ಯಜ್ಞವನ್ನೂ ನಡೆಸೋಣವಾಗಲಿ. ದೇವೇಂದ್ರನಿಂದ ನಮಗೇನಾಗಬೇಕು? ಗೋವುಗಳೂ ಬೆಟ್ಟಗಳೂ ನಮ್ಮ ದೇವತೆಗಳು! ಬ್ರಾಹ್ಮಣರು ಮಂತ್ರೋಕ್ತ ದೇವತೆಗಳನ್ನು ಪೂಜಿಸುತ್ತಾರೆ. ಕೃಷಿಕರು ನೇಗಿಲನ್ನು ಪೂಜಿಸುತ್ತಾರೆ. ಗಿರಿವನಗಳಲ್ಲಿ ನೆಲೆಸಿರುವ ನಮಗೆ ಗಿರಿಗಳೂ ಗೋವುಗಳೂ ದೇವತೆಗಳು (36-37). ಆದ್ದರಿಂದ ಈ ಗೋವರ್ಧನ ಗಿರಿಯನ್ನು ನೀವು ವಿವಿಧ ಸೇವಾ ಸಾಮಗ್ರಿಗಳಿಂದ ಅರ್ಚಿಸಿರಿ. ವಿಧಿಪೂರ್ವಕ ವಾಗಿ ಯೋಗ್ಯ ಪಶುಗಳನ್ನು ಬಲಿಕೊಟ್ಟು ಪೂಜಿಸಿರಿ. ಹಿಂದೆ ಮುಂದೆ ನೋಡುವ ವಿಚಾರ ಬೇಡ. ವ್ರಜದ ಎಲ್ಲ ಹಸುಗಳ ಹಾಲನ್ನೂ ಸಂಗ್ರಹಿಸ ಬೇಕು. ಆದರಿಂದ ಬ್ರಾಹ್ಮಣರಿಗೂ ಯಾಚಕರಿಗೂ ಸಂತರ್ಪಣೆ ನಡೆಯಲಿ

**ತತ್ರಾರ್ಚಿತೇ ಕೃತೇ ಹೋಮೇ ಭೋಜಿತೇಷು ದ್ವಿಜಾತಿಷು।**
**ಶರತ್ಪುಷ್ಪಕೃತಾಪೀಡಾಃ ಪರಿಗಚ್ಛಂತು ಗೋಗಣಾಃ॥ 40**

**ಏತನ್ಮಮ ಮತಂ ಗೋಪಾಸ್ಸಂಪ್ರೀತ್ಯಾ ಕ್ರಿಯತೇ ಯದಿ।**
**ತತಃ ಕೃತಾ ಭವೇತ್ಪ್ರೀತಿರ್ಗವಾಮದ್ರೇಸ್ತಥಾ ಮಮ॥ 41**

*ಶ್ರೀ ಪರಾಶರ ಉವಾಚ:*

**ಇತಿ ತಸ್ಯ ವಚಃ ಶ್ರುತ್ವಾ ನಂದಾದ್ಯಾಸ್ತೇ ವ್ರಜೌಕಸಃ।**
**ಪ್ರೀತ್ಯುತ್ಫುಲ್ಲಮುಖಾ ಗೋಪಾಸ್ಸಾಧುಸಾಧ್ವಿತ್ಯಥಾಬ್ರುವನ್॥ 42**

**ಶೋಭನಂ ತೇ ಮತಂ ವತ್ಸ ಯದೇತದ್ಭವತೋದಿತಮ್।**
**ತತ್ಕರಿಷ್ಯಾಮಹೇ ಸರ್ವಂ ಗಿರಿಯಜ್ಞಃ ಪ್ರವರ್ತ್ಯತಾಮ್॥ 43**

**ತಥಾ ಚ ಕೃತವಂತಸ್ತೇ ಗಿರಿಯಜ್ಞಂ ವ್ರಜೌಕಸಃ।**
**ದಧಿಪಾಯಸಮಾಂಸಾದ್ಯೈರ್ದದುಶ್ಶೈಲಬಲಿಂ ತತಃ॥ 44**

**ದ್ವಿಜಾಂಶ್ಚ ಭೋಜಯಾಮಾಸುಶ್ಶತಶೋಽಥ ಸಹಸ್ರಶಃ 45**

---

(38-39). ಗೋವರ್ಧನಗಿರಿಯ ಪೂಜೆಯೂ ಹೋಮವೂ ಬ್ರಾಹ್ಮಣ ಭೋಜನವೂ ನಡೆದ ಮೇಲೆ, ಶರತ್ಕಾಲದ ಹೂಮಾಲೆಗಳಿಂದ ಅಲಂಕೃತವಾದ ಹಸುಗಳು ಗೋವರ್ಧನಗಿರಿಯ ಪ್ರದಕ್ಷಿಣೆ ಮಾಡಲಿ! ಎಲೈ ಗೋಪಾಲರೆ, ಇದು ನನ್ನ ಅಭಿಪ್ರಾಯ. ನೀವು ಪ್ರೀತಿಯಿಂದ ಹೀಗೆ ಆಚರಿಸಿದರೆ ಗೋವುಗಳಿಗೂ ಒಳ್ಳೆಯದಾಗುವುದು, ಗೋವರ್ಧನಗಿರಿಗೂ ತೃಪ್ತಿಯಾಗುವುದು, ನನಗೂ ಸಂತೋಷವಾಗುವುದು!" ಎಂದನು (40-41). ಮೈತ್ರೇಯ, ಶ್ರೀಕೃಷ್ಣನ ಈ ಮಾತನ್ನು ಕೇಳಿ ನಂದನೇ ಮೊದಲಾದ ವ್ರಜವಾಸಿಗಳಾದ ಗೋಪರಿಗೆ ಸಂತೋಷದಿಂದ ಮುಖವರಳಿತು. ಅವರು 'ಭಲಾ, ಭೇಷ್' ಎಂದು ಉದ್ಗರಿಸಿದರು. ಅವರು ಶ್ರೀಕೃಷ್ಣನಿಗೆ "ವತ್ಸ, ನೀನು ಹೇಳಿದ ಮಾತು ಸರಿಯಾಗಿದೆ, ಹಾಗೆಯೇ ಎಲ್ಲವನ್ನೂ ಮಾಡುವೆವು. ಗಿರಿಯಜ್ಞವು ನಡೆಯಲಿ" ಎಂದರು (42-43). ಅಂತೆಯೇ ವ್ರಜವಾಸಿಗಳು ಗಿರಿಯಜ್ಞವನ್ನು ನಡೆಸಿದರು. ಮೊಸರು, ಪಾಯಸ, ಮಾಂಸ—ಮೊದಲಾದವುಗಳಿಂದ ಗೋವರ್ಧನಗಿರಿಗೆ

**ಗಾವಶ್ಶೈಲಂ ತತಶ್ಚಕ್ರುರರ್ಚಿತಾಸ್ತಾಃ ಪ್ರದಕ್ಷಿಣಮ್।**
**ವೃಷಭಾಶ್ಚಾತಿನರ್ದಂತಸ್ಸತೋಯಾ ಜಲದಾ ಇವ॥ 46**

**ಗಿರಿಮೂರ್ಧನಿ ಕೃಷ್ಣೋಽಪಿ ಶೈಲೋಽಹಮಿತಿ ಮೂರ್ತಿಮಾನ್।**
**ಬುಭುಜೇಽನ್ನಂ ಬಹುತರಂ ಗೋಪವರ್ಯಾಹೃತಂ ದ್ವಿಜ॥ 47**

**ಸ್ವೇನೈವ ಕೃಷ್ಣೋ ರೂಪೇಣ ಗೋಪೈಸ್ಸಹ ಗಿರೇಶ್ಶಿರಃ।**
**ಅಧಿರುಹ್ಯಾರ್ಚಯಾಮಾಸ ದ್ವಿತೀಯಾಮಾತ್ಮನಸ್ತನುಮ್॥ 48**

**ಅಂತರ್ಧಾನಂ ಗತೇ ತಸ್ಮಿನ್ ಗೋಪಾ ಲಬ್ಧ್ವಾ ತತೋ ವರಾನ್।**
**ಕೃತ್ವಾ ಗಿರಿಮಖಂ ಗೋಷ್ಠಂ ನಿಜಮಭ್ಯಾಯಯುಃ ಪುನಃ॥ 49**

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ದಶಮೋಽಧ್ಯಾಯಃ

---

ಬಲಿಯನ್ನರ್ಪಿಸಿದರು. ನೂರಾರು ಸಾವಿರಾರು ಬ್ರಾಹ್ಮಣರಿಗೆ ಸಂತರ್ಪಣೆ ಮಾಡಿಸಿದರು. (ಪುಷ್ಪಾಲಂಕೃತಗಳಾಗಿ) ಪೂಜಿಸಲ್ಪಟ್ಟ ಗೋವುಗಳು ಆ ಪರ್ವತಕ್ಕೆ ಪ್ರದಕ್ಷಿಣೆ ಮಾಡಿದವು. ಎತ್ತುಗಳು ನೀರ್ದುಂಬಿದ ಮೇಘಗಳು ಗುಡುಗುವಂತೆ ಗುಟರು ಹಾಕುತ್ತ ಗಿರಿಯನ್ನು ಬಳಸಿ ಬಂದವು (44-46). ಗೋವರ್ಧನಗಿರಿಯ ಶಿಖರದ ಮೇಲೆ ಶ್ರೀಕೃಷ್ಣನು ರೂಪಾಂತರವನ್ನು ಧರಿಸಿ ಕುಳಿತುಕೊಂಡು 'ನಾನು ಪರ್ವತರಾಜ' ಎಂದು ಹೇಳುತ್ತಾ , ಗೋಪವರ್ಯರು ತಂದು ಅರ್ಪಿಸಿದ ನಾನಾ ಬಗೆಯ ಆಹಾರವನ್ನು ಭುಂಜಿಸಿದನು! (47). ಮೈತ್ರೇಯ, ಶ್ರೀಕೃಷ್ಣನು ಇತ್ತಲಾಗಿ ತನ್ನ ಸಹಜ ರೂಪದಿಂದ ಗೋಪರೊಡನೆ ಸೇರಿ ಬೆಟ್ಟದ ಶಿಖರವನ್ನು ಹತ್ತಿ ತನ್ನದೇ ಆದ ಆ ಇನ್ನೊಂದು ರೂಪವನ್ನು ಅರ್ಚಿಸಿದನು! ಆಮೇಲೆ ಪರ್ವತರಾಜನು ಅಂತರ್ಧಾನವನ್ನು ಹೊಂದಲಾಗಿ, ಆತನಿಂದ ಇಷ್ಟವರಗಳನ್ನು ಪಡೆದಿದ್ದ ಗೋಪರು ಈ ಪ್ರಕಾರ ಗಿರಿಯಜ್ಞವನ್ನು ನೆರವೇರಿಸಿ ತಮ್ಮ ವ್ರಜಕ್ಕೆ ಹಿಂದಿರುಗಿ ಬಂದರು (48-49).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಹತ್ತನೆಯ ಅಧ್ಯಾಯ ಮುಗಿಯಿತು.



## ಏಕಾದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಮಖೇ ಪ್ರತಿಹತೇ ಶಕ್ರೋ ಮೈತ್ರೇಯಾತಿರುಷಾನ್ವಿತಃ।**
**ಸಂವರ್ತಕಂ ನಾಮ ಗಣಂ ತೋಯದಾನಾಮಥಾಬ್ರವೀತ್॥** 1

**ಭೋ ಭೋ ಮೇಘಾ ನಿಶಮ್ಯೈತದ್ವಚನಂ ಗದತೋ ಮಮ।**
**ಆಜ್ಞಾನಂತರಮೇವಾಶು ಕ್ರಿಯತಾಮವಿಚಾರಿತಮ್॥** 2

**ನಂದಗೋಪಸ್ಸುದುರ್ಬುದ್ಧಿರ್ಗೋಪೈರನ್ಯೈಸ್ಸಹಾಯವಾನ್।**
**ಕೃಷ್ಣಾಶ್ರಯಬಲಾಧ್ಮಾತೋ ಮಖಭಂಗಮಚೀಕರತ್॥** 3

**ಆಜೀವೋ ಯಃ ಪರಸ್ತೇಷಾಂ ಗಾವಸ್ತಸ್ಯ ಚ ಕಾರಣಮ್।**
**ತಾ ಗಾವೋ ವೃಷ್ಟಿವಾತೇನ ಪೀಡ್ಯಂತಾಂ ವಚನಾನ್ಮಮ॥** 4

---

### ಅಧ್ಯಾಯ 11

ಇಂದ್ರಮಹವನ್ನು ನಿಲ್ಲಿಸಿದ್ದರಿಂದ ದೇವೇಂದ್ರನು ಕುಪಿತನಾಗುವುದು. ಆವನ ಆಜ್ಞೆಯಂತೆ ವ್ರಜದಲ್ಲಿ ಏಳು ರಾತ್ರಿಗಳವರೆಗೆ ಘೋರವೃಷ್ಟಿ. ಶ್ರೀಕೃಷ್ಣನು ಗೋವರ್ಧನ ಗಿರಿಯನ್ನು ಎತ್ತಿ ಹಿಡಿದು ಗೋಪರನ್ನೂ ಗೋವುಗಳನ್ನೂ ರಕ್ಷಿಸುವುದು.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಇಂದ್ರಮಹವು ಈ ಪ್ರಕಾರವಾಗಿ ನಿಂತು ಹೋಗಲಾಗಿ ದೇವೇಂದ್ರನು ಅತ್ಯಂತ ಕೋಪಗೊಂಡನು. ಅವನು ಸಂವರ್ತಕ ಎಂಬ ಮೇಘಗಣವನ್ನು ಕರೆದು ಇಂತೆಂದನು(1): "ಎಲೈ ಮೇಘಗಳೆ, ನನ್ನ ಮಾತನ್ನಾಲಿಸಿರಿ. ನನ್ನ ಆಜ್ಞೆಯನ್ನು ಕೇಳಿ. ಹಿಂದೆ ಮುಂದೆ ನೋಡದೆ ಒಡನೆಯೇ ಅದರಂತೆ ಆಚರಿಸತಕ್ಕದ್ದು. ಬಹಳ ದುರ್ಬುದ್ಧಿಯಾದ ನಂದಗೋಪನು ಕೃಷ್ಣನ ಆಶ್ರಯಬಲವಿದೆಯೆಂದು ಸೊಕ್ಕಿದ್ದಾನೆ. ಆತನು ಅನ್ಯ ಗೋಪಾಲರೊಂದಿಗೆ ಸೇರಿಕೊಂಡು ಎಂದಿನಂತೆ ಆಚರಿಸಬೇಕಾದ ಇಂದ್ರ ಯಜ್ಞಕ್ಕೆ ಭಂಗವನ್ನುಂಟು ಮಾಡಿದ್ದಾನೆ. (2-3). ಆದ್ದರಿಂದ ಆ ಗೊಲ್ಲರ

**ಅಹಮಪ್ಯದ್ರಿಶೃಂಗಾಭಂ ತುಂಗಮಾರುಹ್ಯ ವಾರಣಮ್।**
**ಸಾಹಾಯ್ಯಂ ವಃ ಕರಿಷ್ಯಾಮಿ ವಾಯ್ವಂಬೂತ್ಸರ್ಗಯೋಜಿತಮ್॥ 5**

*ಶ್ರೀಪರಾಶರ ಉವಾಚ:*

**ಇತ್ಯಾಜ್ಞಪ್ತಾಸ್ತತಸ್ತೇನ ಮುಮುಚುಸ್ತೇ ಬಲಾಹಕಾಃ।**
**ವಾತವರ್ಷಂ ಮಹಾಭೀಮಮಭಾವಾಯ ಗವಾಂ ದ್ವಿಜ॥ 6**

**ತತಃ ಕ್ಷಣೇನ ಪೃಥಿವೀ ಕಕುಭೋಽಂಬರಮೇವ ಚ।**
**ಏಕಂ ಧಾರಾಮಹಾಸಾರಪೂರಣೇನಾಭವನ್ಮುನೇ॥ 7**

**ವಿದ್ಯುಲ್ಲತಾಕಶಾಘಾತತ್ರಸ್ತೈರಿವ ಘನೈರ್ಘನಮ್।**
**ನಾದಾಪೂರಿತದಿಕ್ಚಕ್ರೈರ್ಧಾರಾಸಾರಮಪಾತ್ಯತ॥ 8**

**ಅಂಧಕಾರೀಕೃತೇ ಲೋಕೇ ವರ್ಷದ್ಭಿರನಿಶಂ ಘನೈಃ।**
**ಅಧಶ್ಚೋರ್ಧ್ವಂ ಚ ತಿರ್ಯಕ್ ಚ ಜಗದಾಪ್ಯಮಿವಾಭವತ್॥ 9**

---

ಜೀವಿಕೆಗೆ ಮೂಲಭೂತವೂ ನಂದಗೋಪನ ಆಢ್ಯತೆಗೆ ಕಾರಣವೂ ಆದ ಯಾವ ಗೋವುಗಳುಂಟೋ ಅವುಗಳನ್ನು ಬಿರುಗಾಳಿ ಬಿರುಮಳೆಗಳಿಂದ ಪೀಡಿಸಿರಿ! ಇದು ನನ್ನ ಆಜ್ಞೆ! ನಾನೂ ಸಹ ಪರ್ವತಶಿಖರದಂತಿರುವ ಉನ್ನತವಾದ ಐರಾವತ ಗಜವನ್ನೇರಿ ಬಿರುಗಾಳಿ ಬಿರುಮಳೆಗಳ ಕಾರ್ಯದಲ್ಲಿ ನಿಮಗೆ ಸಹಾಯಮಾಡುವೆನು!" ಎಂದನು (4-5). ಮೈತ್ರೇಯ, ಈ ಪ್ರಕಾರವಾದ ಇಂದ್ರನ ಆಜ್ಞೆಯನ್ನು ಕೇಳಿ ಆ ಮೇಘಗಳು ವ್ರಜದ ಗೋವುಗಳು ನಾಶವಾಗುವ ಪರಿಯಲ್ಲಿ ಭೀಕರವಾದ ಜಡಿಮಳೆಯನ್ನು ಸುರಿಸಲಾರಂಭಿಸಿದವು. ಒಂದು ಕ್ಷಣದಲ್ಲಿ ಭೂಮಿ, ಆಕಾಶ, ದಿಕ್ಕುಗಳು ಆ ಧಾರಾಕಾರವಾದ ವೃಷ್ಟಿಯಿಂದ, ಏಕಾಕಾರವಾಗಿ ಹೋದವು! (6-7). ವಿದ್ಯುಲ್ಲತೆಗಳೆಂಬ ಚಾಟಿಗಳಿಂದ ಯಾರೋ ಮೇಘಗಳನ್ನು ಬಾರಿಸುತ್ತಿದ್ದಾರೆಂದೂ ಅವುಗಳಿಗೆ ಹೆದರಿ ದಿಗ್ದಿಗಂತ ಗಳು ಮೊಳಗುವಂತೆ ಮೇಘಗಳು ಕೂಗುತ್ತ ಸತತವಾಗಿ ಧಾರಾವೃಷ್ಟಿಯನ್ನು (ಕಣ್ಣೀರಿನ ಮಳೆಯನ್ನು) ಸುರಿಸುತ್ತಿರುವಂತೆಯೂ ಕಾಣಿಸಿತು! (8). ಎಡೆಬಿಡದೆ ಸುರಿಯುವ ಮೋಡಗಳ ನಿಬಿಡವಾದ ಜಡಿಮಳೆಯಿಂದ ಲೋಕದಲ್ಲಿ ಕತ್ತಲೆ ಕವಿಯಲಾಗಿ, ಕೆಳಗೆ ಮೇಲೆ ಅಡ್ಡಲಾಗಿ ಜಗತ್ತೆಲ್ಲವೂ ಜಲಮಯವಾಯಿತು

**ಗಾವಸ್ತು ತೇನ ಪತತಾ ವರ್ಷವಾತೇನ ವೇಗಿನಾ।**
**ಧೂತಾಃ ಪ್ರಾಣಾಂಜಹುಸ್ಸನ್ನತ್ರಿಕಸಕ್ಥಿಶಿರೋಧರಾಃ॥** 10

**ಕ್ರೋಡೇನ ವತ್ಸಾನಾಕ್ರಮ್ಯ ತಸ್ಥುರನ್ಯಾ ಮಹಾಮುನೇ।**
**ಗಾವೋ ವಿವತ್ಸಾಶ್ಚ ಕೃತಾ ವಾರಿಪೂರೇಣ ಚಾಪರಾಃ॥** 11

**ವತ್ಸಾಶ್ಚ ದೀನವದನಾ ವಾತಕಂಪಿತಕಂಧರಾಃ।**
**ತ್ರಾಹಿ ತ್ರಾಹೀತ್ಯಲ್ಪಶಬ್ದಾಃ ಕೃಷ್ಣಮೂಚುರಿವಾತುರಾಃ॥** 12

**ತತಸ್ತದ್ಗೋಕುಲಂ ಸರ್ವಂ ಗೋಗೋಪೀಗೋಪಸಂಕುಲಮ್।**
**ಅತೀವಾರ್ತಂ ಹರಿರ್ದೃಷ್ಟ್ವಾ ಮೈತ್ರೇಯಾಚಿಂತಯತ್ತದಾ॥** 13

**ಏತತ್ಕೃತಂ ಮಹೇಂದ್ರೇಣ ಮಖಭಂಗವಿರೋಧಿನಾ।**
**ತದೇತದಖಿಲಂ ಗೋಷ್ಠಂ ತ್ರಾತವ್ಯಮಧುನಾ ಮಯಾ॥** 14

**ಇಮಮದ್ರಿಮಹಂ ಧೈರ್ಯಾದುತ್ಪಾಟ್ಯೋರುಶಿಲಾಘನಮ್।**
**ಧಾರಯಿಷ್ಯಾಮಿ ಗೋಷ್ಠಸ್ಯ ಪೃಥುಚ್ಛತ್ರಮಿವೋಪರಿ॥** 15

---

(9). ವೇಗವಾಗಿ ಜಡಿಯುತ್ತಿದ್ದ ಬಿರುಗಾಳಿ ಬಿರುಮಳೆಗಳ ಹೊಡೆತಕ್ಕೆ ಸಿಕ್ಕಿದ ಹಸುಗಳು ತಮ್ಮ ಸೊಂಟ ತೊಡೆ ತಲೆಗಳನ್ನು ಬಳುಕಿಸಿ ಜೀವವನ್ನು ತೊರೆದವೋ ಎಂಬಂತಾದವು. ಮೈತ್ರೇಯ, ಕೆಲವು ಹಸುಗಳು ತನ್ನ ಎದೆಯ ಕೆಳಗೆ ಕರುಗಳನ್ನು ತರುಬಿ ನಿಂತವು. ಕೆಲವು ಹಸುಗಳು ಪ್ರವಾಹದ ಹೊಡೆತದಿಂದ ಕರುಗಳನ್ನು ಕಳೆದುಕೊಂಡವು (10-11). ಬಿರುಗಾಳಿಯಿಂದ ಕಂಪಿಸುತ್ತಿದ್ದ ಕತ್ತುಗಳುಳ್ಳ ಕರುಗಳು ಕರುಣಾಪೂರ್ಣ ಮುಖದಿಂದ ಕೃಷ್ಣನನ್ನು ಕುರಿತು ಮೆಲುದನಿಯಲ್ಲಿ ಕ್ರಂದಿಸುತ್ತ 'ತ್ರಾಹಿ ತ್ರಾಹಿ!' ಎಂದು ಬೇಡುತ್ತಿರುವಂತೆ ಕಂಡಿತು! (12). ಈ ಪ್ರಕಾರವಾಗಿ, ಮೈತ್ರೇಯ, ಗೋಕುಲವೆಲ್ಲವೂ ಗೋವು ಗೋಪೀ ಗೋಪರೊಡನೆ ಅತ್ಯಂತ ಖಿನ್ನವಾಗಿರುವುದನ್ನು ನೋಡಿ ಗೋವಿಂದನು "ಇಂದ್ರಯಜ್ಞ ಭಂಗವು ತನಗೆ ವಿರುದ್ಧವೆಂದು ಭಾವಿಸಿದ ದೇವೇಂದ್ರನು ಹೀಗೆ ಮಾಡಿದ್ದಾನೆ. ಈ ಗೋಕುಲವೆಲ್ಲವನ್ನೂ ಈಗ ನಾನು ಕಾಪಾಡಲೇಬೇಕು (13-14). ವಿಶಾಲ ಶಿಲೆಗಳಿಂದ ದಟ್ಟವಾಗಿರುವ ಈ ಗೋವರ್ಧನಗಿರಿಯನ್ನು ಧೈರ್ಯದಿಂದ ಕಿತ್ತು ಎತ್ತಿ ಬಿಡುತ್ತೇನೆ! ಈ ಗೋಕುಲದ

*ಶ್ರೀಪರಾಶರ ಉವಾಚ:*

**ಇತಿ ಕೃತ್ವಾ ಮತಿಂ ಕೃಷ್ಣೋ ಗೋವರ್ಧನಮಹೀಧರಮ್।**
**ಉತ್ಪಾಟ್ಯೈಕಕರೇಣೈವ ಧಾರಯಾಮಾಸ ಲೀಲಯಾ॥** 16

**ಗೋಪಾಂಶ್ಚಾಹ ಹಸನ್‌ಶೌರಿಸ್ಸಮುತ್ಪಾಟಿತಭೂಧರಃ।**
**ವಿಶಧ್ವಮತ್ರ ತ್ವರಿತಾಃ ಕೃತಂ ವರ್ಷನಿವಾರಣಮ್॥** 17

**ಸುನಿವಾತೇಷು ದೇಶೇಷು ಯಥಾ ಜೋಷಮಿಹಾಸ್ಯತಾಮ್।**
**ಪ್ರವಿಶ್ಯತಾಂ ನ ಭೇತವ್ಯಂ ಗಿರಿಪಾತಾಚ್ಚ ನಿರ್ಭಯೈಃ॥** 18

**ಇತ್ಯುಕ್ತಾಸ್ತೇನ ತೇ ಗೋಪಾ ವಿವಿಶುರ್ಗೋಧನೈಸ್ಸಹ।**
**ಶಕಟಾರೋಪಿತೈರ್ಭಾಂಡೈರ್ಗೋಪ್ಯಶ್ಚಾಸಾರಪೀಡಿತಾಃ॥** 19

**ಕೃಷ್ಣೋಽಪಿ ತಂ ದಧಾರೈವ ಶೈಲಮತ್ಯಂತನಿಶ್ಚಲಮ್।**
**ವ್ರಜೈಕವಾಸಿಭಿರ್ಹರ್ಷವಿಸ್ಮಿತಾಕ್ಷೈರ್ನಿರೀಕ್ಷಿತಃ॥** 20

---

ಮೇಲ್ಗಡೆ ದೊಡ್ಡದಾದ ಕೊಡೆ ಎಂಬಂತೆ ಈ ಗಿರಿಯನ್ನು ಹಿಡಿಯುತ್ತೇನೆ!" ಎಂದು ನಿಶ್ಚಯಿಸಿದನು (15). ಶ್ರೀಕೃಷ್ಣನು ಹೀಗೆ ವಿಚಾರಮಾಡಿ ಗೋವರ್ಧನ ಗಿರಿಯನ್ನು ಲೀಲೆಯಿಂದ ಕಿತ್ತು ಒಂದೇ ಕೈಯಲ್ಲಿ ಎತ್ತಿ ಹಿಡಿದನು. ಪರ್ವತವನ್ನೆತ್ತಿ ಹಿಡಿದ ಶೌರಿಯು ನಗುತ್ತ ಗೋಪಾಲರನ್ನು ಕುರಿತು "ಮಳೆಯನ್ನು ತಡೆಯುವಂತೆ ಮಾಡಿದ್ದೇನೆ. ಎಲ್ಲರೂ ತ್ವರೆಯಿಂದ ಇಲ್ಲಿ ಬಂದು ಸೇರಿಕೊಳ್ಳಿರಿ! (16-17). ಗಾಳಿ ಬೀಸದ ಶಾಂತ ಪ್ರದೇಶಗಳಲ್ಲಿ ಸುಖವಾಗಿ ಕುಳಿತುಕೊಳ್ಳಿರಿ. ಬೆಟ್ಟವು ಬಿದ್ದೀತೆಂದು ಹೆದರಬೇಡಿರಿ. ನಿರ್ಭಯವಾಗಿ ಪ್ರವೇಶಿಸಿರಿ" ಎಂದನು. ಆಗ ಗೋಪಾಲರು ತಮ್ಮ ಗೋಧನಗಳೊಡನೆ ಬೆಟ್ಟದ ಅಡಿಗೆ ಬಂದು ಸೇರಿದರು. ಮಳೆಯಿಂದ ತೊಂದರೆಗೊಳಗಾದ ಗೋಪಿಯರೂ ಸಹ ತಮ್ಮ ಪಾತ್ರೆ ಪಡಗಗಳನ್ನು ಗಾಡಿಯ ಮೇಲೆ ಹೇರಿಕೊಂಡು ಬಂದರು (18-19). ಶ್ರೀಕೃಷ್ಣನಾದರೋ ಶೈಲವು ಅಲ್ಲಾಡದಂತೆ ನಿಶ್ಚಲವಾಗಿ ಎತ್ತಿ ಹಿಡಿದೇ ಇದ್ದನು. ವ್ರಜವಾಸಿಗಳು ಆನಂದ ವಿಸ್ಮಯಗಳನ್ನು ಸೂಸುವ ಕಣ್ಣುಗಳಿಂದ ಆತನನ್ನು ನೋಡುತ್ತಿದ್ದರು (20). ಹರ್ಷಿತರಾದ ಗೋಪಗೋಪಿಯರು ಪ್ರೀತಿಯಿಂದ

**ಗೋಪಗೋಪೀಜನೈರ್ಹೃಷ್ಟೈಃ ಪ್ರೀತಿವಿಸ್ತಾರಿತೇಕ್ಷಣೈಃ।**
**ಸಂಸ್ತೂಯಮಾನಚರಿತಃ ಕೃಷ್ಣಶ್ಶೈಲಮಧಾರಯತ್॥** 21

**ಸಪ್ತರಾತ್ರಂ ಮಹಾಮೇಘಾ ವವರ್ಷುರ್ನಂದಗೋಕುಲೇ।**
**ಇಂದ್ರೇಣ ಚೋದಿತಾ ವಿಪ್ರ ಗೋಪಾನಾಂ ನಾಶಕಾರಿಣಾ॥** 22

**ತತೋ ಧೃತೇ ಮಹಾಶೈಲೇ ಪರಿತ್ರಾತೇ ಚ ಗೋಕುಲೇ।**
**ಮಿಥ್ಯಾಪ್ರತಿಜ್ಞೋ ಬಲಭಿದ್ವಾರಯಾಮಾಸ ತಾನ್ ಘನಾನ್॥** 23

**ವ್ಯಭ್ರೇ ನಭಸಿ ದೇವೇಂದ್ರೇ ವಿತಥಾತ್ಮವಚಸ್ಯಥ।**
**ನಿಷ್ಕ್ರಮ್ಯ ಗೋಕುಲಂ ಹೃಷ್ಟಂ ಸ್ವಸ್ಥಾನಂ ಪುನರಾಗಮತ್॥** 24

**ಮುಮೋಚ ಕೃಷ್ಣೋಽಪಿ ತದಾ ಗೋವರ್ಧನಮಹಾಚಲಮ್।**
**ಸ್ವಸ್ಥಾನೇ ವಿಸ್ಮಿತಮುಖೈರ್ದೃಷ್ಟಸ್ತೈಸ್ತು ವ್ರಜೌಕಸೈಃ॥** 25

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಏಕಾದಶೋಽಧ್ಯಾಯಃ

---

ಹಿಗ್ಗಿದ ನೇತ್ರಗಳಿಂದ ನೋಡುತ್ತ ಆತನ ಚರಿತೆಯನ್ನು ಹೊಗಳಿ ಹಾಡುತ್ತಿರಲು ಗೋವಿಂದನು ಗೋವರ್ಧನಗಿರಿಯನ್ನು ಹೊತ್ತು ನಿಂತಿದ್ದನು! (21). ಆ ನಂದ ಗೋಕುಲದಲ್ಲಿ ಮಹಾ ಮೇಘಗಳು ಏಳು ರಾತ್ರಿಯಗಳವರೆಗೆ ಸತತವಾಗಿ ಮಳೆಗರೆದವು. ಮೈತ್ರೇಯ, ಗೋಪಾಲರನ್ನು ನಾಶಪಡಿಸಬೇಕೆಂಬ ಇಂದ್ರನ ಪ್ರೇರಣೆಯಿಂದ ಹಾಗೆ ಮಾಡಿದವು (22). ಈ ಪ್ರಕಾರ ಶ್ರೀಕೃಷ್ಣನು ಮಹಾಶೈಲವನ್ನೆತ್ತಿ ಹಿಡಿದು ಗೋಕುಲವನ್ನು ರಕ್ಷಿಸಲಾಗಿ ಇಂದ್ರನ ಪ್ರತಿಜ್ಞೆ ಸುಳ್ಳಾಯಿತು! ಇನ್ನು ಮಳೆ ಸುರಿಸುವುದು ಬೇಡವೆಂದು ಆತನು ಮೇಘಗಳನ್ನು ತಡೆದನು! (23). ಮೋಡಗಳು ಚದರಿ ಆಕಾಶವು ಸ್ವಚ್ಛವಾಯಿತು. ದೇವೇಂದ್ರನ ಉದ್ದೇಶ ನಡೆಯಲಿಲ್ಲ. ಆಗ ಗೋಕುಲದವರೆಲ್ಲರೂ ಸಂತೋಷದಿಂದ ತಮ್ಮ ತಮ್ಮ ನಿವಾಸಸ್ಥಾನಗಳಿಗೆ ತೆರಳಿದರು. ಅನಂತರ ಶ್ರೀಕೃಷ್ಣನು ಗೋವರ್ಧನ ಮಹಾಶೈಲವನ್ನು ಸ್ವಸ್ಥಾನದಲ್ಲಿ ಇಳಿಸಿದನು. ವ್ರಜವಾಸಿಗಳು ವಿಸ್ಮಯದಿಂದ ಆತನನ್ನು ನೋಡುತ್ತಿದ್ದರು (24-25).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಹನ್ನೊಂದನೆಯ ಅಧ್ಯಾಯ ಮುಗಿಯಿತು.

## ದ್ವಾದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಧೃತೇ ಗೋವರ್ಧನೇ ಶೈಲೇ ಪರಿತ್ರಾತೇ ಚ ಗೋಕುಲೇ।**
**ರೋಚಯಾಮಾಸ ಕೃಷ್ಣಸ್ಯ ದರ್ಶನಂ ಪಾಕಶಾಸನಃ॥** 1

**ಸೋಽಧಿರುಹ್ಯ ಮಹಾನಾಗಮೈರಾವತಮಮಿತ್ರಜಿತ್।**
**ಗೋವರ್ಧನಗಿರೌ ಕೃಷ್ಣಂ ದದರ್ಶ ತ್ರಿದಶೇಶ್ವರಃ॥** 2

**ಚಾರಯಂತಂ ಮಹಾವೀರ್ಯಂ ಗಾಸ್ತು ಗೋಪವಪುರ್ಧರಮ್।**
**ಕೃತ್ಸ್ನಸ್ಯ ಜಗತೋ ಗೋಪಂ ವೃತಂ ಗೋಪಕುಮಾರಕೈಃ॥** 3

**ಗರುಡಂ ಚ ದದರ್ಶೋಚ್ಚೈರಂತರ್ಧಾನಗತಂ ದ್ವಿಜ।**
**ಕೃತಚ್ಛಾಯಂ ಹರೇರ್ಮೂರ್ಧ್ನಿ ಪಕ್ಷಾಭ್ಯಾಂ ಪಕ್ಷಿಪುಂಗವಮ್॥** 4

---

### ಅಧ್ಯಾಯ 12

ದೇವೇಂದ್ರನು ಆಗಮಿಸಿ ಶ್ರೀಕೃಷ್ಣನನ್ನು ಸ್ತೋತ್ರಮಾಡಿ, ಆತನನ್ನು ಉಪೇಂದ್ರನೆಂದೂ ಗೋವಿಂದನೆಂದೂ ಹೆಸರಿಸಿ ಪಟ್ಟಾಭಿಷೇಕ ಮಾಡುವುದು. ತನ್ನ ಅಂಶದಿಂದ ಜನಿಸಿದ ಅರ್ಜುನನ ಹಿತರಕ್ಷಣೆ ಮಾಡಬೇಕೆಂದು ಬೇಡಿಕೊಳ್ಳುವುದು. ಅಂತೆಯೇ ಶ್ರೀಕೃಷ್ಣನ ಅಂಗೀಕಾರ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಶ್ರೀಕೃಷ್ಣನು ಗೋವರ್ಧನ ಗಿರಿಯನ್ನೆತ್ತಿ ಹಿಡಿದು ಗೋಕುಲವನ್ನು ಸಂರಕ್ಷಿಸಲಾಗಿ, ದೇವೇಂದ್ರನು ಶ್ರೀಕೃಷ್ಣನನ್ನು ಸಂದರ್ಶಿಸಬೇಕೆಂದು ಬಯಸಿದನು (1). ಅಂತೆಯೇ ಶತ್ರು ಸಂತಾಪಕನಾದ ದೇವರಾಜನು ಐರಾವತನೆಂಬ ಮಹಾಗಜವನ್ನೇರಿ ಬಂದು ಗೋವರ್ಧನಗಿರಿ ಪ್ರಾಂತದಲ್ಲಿ ಶ್ರೀಕೃಷ್ಣನನ್ನು ಕಂಡನು. ಸಮಸ್ತ ಜಗದ್ರಕ್ಷಕನಾದ ಆ ಮಹಾವೀರನು ಗೋಪವೇಷವನ್ನು ಧರಿಸಿ ಗೊಲ್ಲರ ಹುಡುಗರೊಡನೆ ದನಗಳನ್ನು ಮೇಯಿಸುತ್ತಿದ್ದನು! (2-3). ಹೇ ಮೈತ್ರೇಯ, ಪಕ್ಷಿರಾಜನಾದ ಗರುಡನು ಅದೃಶ್ಯನಾಗಿಯೇ ಇದ್ದು ಶ್ರೀಹರಿಯ ಮೇಲ್ಗಡೆ ತನ್ನ ಎರಡು

**ಅವರುಹ್ಯ ಸ ನಾಗೇಂದ್ರಾದೇಕಾಂತೇ ಮಧುಸೂದನಮ್।**
**ಶಕ್ರಸ್ಸಸ್ಮಿತಮಾಹೇದಂ ಪ್ರೀತಿವಿಸ್ತಾರಿತೇಕ್ಷಣಃ॥ 5**

*ಇಂದ್ರ ಉವಾಚ:*

**ಕೃಷ್ಣ ಕೃಷ್ಣ ಶೃಣುಷ್ವೇದಂ ಯದರ್ಥಮಹಮಾಗತಃ।**
**ತ್ವತ್ಸಮೀಪಂ ಮಹಾಭಾಗೋ ನೈತಚ್ಚಿಂತ್ಯಂ ತ್ವಯಾನ್ಯಥಾ॥ 6**

**ಭಾರಾವತಾರಣಾರ್ಥಾಯ ಪೃಥಿವ್ಯಾಃ ಪೃಥಿವೀತಲೇ।**
**ಅವತೀರ್ಣೋಽಖಿಲಾಧಾರ ತ್ವಮೇವ ಪರಮೇಶ್ವರ॥ 7**

**ಮಖಭಂಗವಿರೋಧೇನ ಮಯಾ ಗೋಕುಲನಾಶಕಾಃ।**
**ಸಮಾದಿಷ್ಟಾ ಮಹಾಮೇಘಾಸ್ತೈಶ್ಚೇದಂ ಕದನಂ ಕೃತಮ್॥ 8**

**ತ್ರಾತಾಸ್ತಾಶ್ಚ ತ್ವಯಾ ಗಾವಸ್ಸಮುತ್ಪಾಟ್ಯ ಮಹೀಧರಮ್।**
**ತೇನಾಹಂ ತೋಷಿತೋ ವೀರ ಕರ್ಮಣಾತ್ಯದ್ಭುತೇನ ತೇ॥ 9**

**ಸಾಧಿತಂ ಕೃಷ್ಣ ದೇವಾನಾಮಹಂ ಮನ್ಯೇ ಪ್ರಯೋಜನಮ್।**
**ತ್ವಯಾಯಮದ್ರಿಪ್ರವರಃ ಕರೇಣೈಕೇನ ಯದ್‌ಧೃತಃ॥ 10**

---

ರೆಕ್ಕೆಗಳಿಂದ ನೆರಳು ಮಾಡಿರುವುದನ್ನೂ ಇಂದ್ರನು ಕಂಡನು! ಅನಂತರ ಶಕ್ರನು ಐರಾವತದಿಂದ ಇಳಿದು ಏಕಾಂತದಲ್ಲಿ ಶ್ರೀಕೃಷ್ಣನ ಬಳಿಗೆ ಹೋಗಿ ಪ್ರೀತಿ ವಿಸ್ತೃತನೇತ್ರನಾಗಿ ಮುಗುಳ್ನಗೆ ಬೀರುತ್ತ ಹೀಗೆಂದನು (4-5): "ಹೇ ಕೃಷ್ಣ, ಮಹಾಬಾಹು, ನಾನು ನಿನ್ನ ಬಳಿಗೆ ಏಕೆ ಬಂದಿದ್ದೇನೆಂಬುದನ್ನು ಕೇಳು. ಇದನ್ನು ನೀನು ಅನ್ಯಥಾ ಭಾವಿಸಬಾರದು. ಹೇ ಪರಮೇಶ್ವರ, ಅಕಿಲಾಧಾರ, ಭೂಭಾರವನ್ನಿಳಿಸುವುದಕ್ಕಾಗಿಯೇ ನೀನು ಈ ಭೂತಳದಲ್ಲಿ ಅವತರಿಸಿದ್ದೀಯೆ (6-7). ನಾನು ಯಜ್ಞಭಂಗವನ್ನು ವಿರೋಧಿಸಿ ಗೋಕುಲವನ್ನು ನಾಶಮಾಡಬೇಕೆಂದು ಮಹಾ ಮೇಘಗಳಿಗೆ ಆಜ್ಞಾಪಿಸಿದೆನು. ಅವು ಈ ಹಾವಳಿಯನ್ನುಂಟು ಮಾಡಿದವು! ನೀನಾದರೋ ಬೆಟ್ಟವನ್ನೆತ್ತಿ ಹಿಡಿದು ಗೋವುಗಳನ್ನು ರಕ್ಷಿಸಿದ್ದೀಯೆ. ಹೇ ವೀರ, ಅದ್ಭುತವಾದ ನಿನ್ನ ಈ ಕೃತ್ಯದಿಂದ ನಾನು ಸಂತುಷ್ಟನಾಗಿದ್ದೇನೆ (8-9). ಓ ಕೃಷ್ಣ, ಒಂದು ಕೈಯಿಂದಲೇ ಈ ಪರ್ವತರಾಜನನ್ನು ಎತ್ತಿ

**ಗೋಭಿಶ್ಚ ಚೋದಿತಃ ಕೃಷ್ಣ ತ್ವತ್ಸಕಾಶಮಿಹಾಗತಃ।**
**ತ್ವಯಾ ತ್ರಾತಾಭಿರತ್ಯರ್ಥಂ ಯುಷ್ಮತ್ಸತ್ಕಾರಕಾರಣಾತ್॥ 11**

**ಸ ತ್ವಾಂ ಕೃಷ್ಣಾಭಿಷೇಕ್ಷ್ಯಾಮಿ ಗವಾಂ ವಾಕ್ಯಪ್ರಚೋದಿತಃ।**
**ಉಪೇಂದ್ರತ್ವೇ ಗವಾಮಿಂದ್ರೋ ಗೋವಿಂದಸ್ತ್ವಂ ಭವಿಷ್ಯಸಿ॥ 12**

*ಶ್ರೀಪರಾಶರ ಉವಾಚ:*

**ಅಥೋಪವಾಹ್ಯಾದಾದಾಯ ಘಂಟಾಮೈರಾವತಾದ್ಗಜಾತ್।**
**ಅಭಿಷೇಕಂ ತಯಾ ಚಕ್ರೇ ಪವಿತ್ರಜಲಪೂರ್ಣಯಾ॥ 13**

**ಕ್ರಿಯಮಾಣೇಽಭಿಷೇಕೇ ತು ಗಾವಃ ಕೃಷ್ಣಸ್ಯ ತತ್ ಕ್ಷಣಾತ್।**
**ಪ್ರಸ್ರವೋದ್‌ಭೂತದುಗ್ಧಾರ್ದ್ರಾಂ ಸದ್ಯಶ್ಚಕ್ರುರ್ವಸುಂಧರಾಮ್॥ 14**

---

ಹಿಡಿದೆಯಲ್ಲ! ದೇವತೆಗಳ ಕಾರ್ಯ ಸಿದ್ಧಿಸಿತೆಂದೇ ಭಾವಿಸುತ್ತೇನೆ. ಹೇ ಕೃಷ್ಣ, (ಗೋಲೋಕದಲ್ಲಿರುವ) ಗೋವುಗಳಿಂದ ಪ್ರೇರಿತನಾಗಿ ನಾನು ನಿನ್ನ ಬಳಿಗೆ ಬಂದಿದ್ದೇನೆ. (ಅವುಗಳ ಸಂತತಿಯಾದ) ಈ ಗೋವುಗಳನ್ನು ನೀನು ರಕ್ಷಿಸಿದ್ದ ರಿಂದ ನಿನ್ನನ್ನು ಸಂಮಾನಿಸಬೇಕೆಂದು ಅವು ನನ್ನನ್ನು ಪ್ರೇರಿಸಿವೆ (10-11). ಗೋವಾಕ್ಯದಿಂದ ಪ್ರೇರಿತನಾದ ನಾನು, ಕೃಷ್ಣ, ಗೋವುಗಳ ಉಪೇಂದ್ರ ಪದವಿಯಲ್ಲಿ ನಿನಗೆ ಅಭಿಷೇಕ ಮಾಡುತ್ತೇನೆ. ಗೋವುಗಳಿಗೆ ಇಂದ್ರನಾದ ನೀನು ಇನ್ನು ಮುಂದೆ 'ಗೋವಿಂದ'ನೆಂದು ಪ್ರಸಿದ್ಧನಾಗುವೆ" ಎಂದನು* (12). ಅನಂತರ ದೇವೇಂದ್ರನು ತನ್ನ ವಾಹನವಾದ ಐರಾವತದಿಂದ ಘಂಟೆಯನ್ನು ತೆಗೆದು ಅದರಲ್ಲಿ ಪವಿತ್ರ ಜಲವನ್ನು ತುಂಬಿ ಶ್ರೀಕೃಷ್ಣನಿಗೆ ಅಭಿಷೇಕ ಮಾಡಿದನು. ಶ್ರೀಕೃಷ್ಣನಿಗೆ ಅಭಿಷೇಕ ಮಾಡುತ್ತಿರುವಾಗ ಆ ಕ್ಷಣದಲ್ಲಿಯೇ (ಗೋಲೋಕ ದಲ್ಲಿದ್ದ) ಕಾಮಧೇನುಗಳು ತಮ್ಮ ಕೆಚ್ಚಲಿನಿಂದ ಸ್ರವಿಸಿದ ಹಾಲಿನಿಂದ ಭೂಲೋಕವನ್ನು ಒದ್ದೆ ಮಾಡಿದವು (13-14). ಶಚೀಪತಿಯಾದ ಇಂದ್ರನು

---

* ಅನುಬಂಧವನ್ನು ನೋಡಿ.

**ಅಭಿಷಿಚ್ಯ ಗವಾಂ ವಾಕ್ಯಾದುಪೇಂದ್ರಂ ವೈ ಜನಾರ್ದನಮ್।**
**ಪ್ರೀತ್ಯಾ ಸಪ್ರಶ್ರಯಂ ವಾಕ್ಯಂ ಪುನರಾಹ ಶಚೀಪತಿಃ॥** 15

**ಗವಾಮೇತತ್ಕೃತಂ ವಾಕ್ಯಂ ತಥಾನ್ಯದಪಿ ಮೇ ಶೃಣು।**
**ಯದ್‌ಬ್ರವೀಮಿ ಮಹಾಭಾಗ ಭಾರಾವತರಣೇಚ್ಛಯಾ॥** 16

**ಮಮಾಂಶಃ ಪುರುಷವ್ಯಾಘ್ರ ಪೃಥಿವ್ಯಾಂ ಪೃಥಿವೀಧರ।**
**ಅವತೀರ್ಣೋಽರ್ಜುನೋ ನಾಮ ಸಂರಕ್ಷ್ಯೋ ಭವತಾ ಸದಾ॥** 17

**ಭಾರಾವತರಣೇ ಸಾಹ್ಯಂ ಸ ತೇ ವೀರಃ ಕರಿಷ್ಯತಿ।**
**ಸಂರಕ್ಷಣೀಯೋ ಭವತಾ ಯಥಾತ್ಮಾ ಮಧುಸೂದನ॥** 18

*ಶ್ರೀಭಗವಾನುವಾಚ:*

**ಜಾನಾಮಿ ಭರತೇ ವಂಶೇ ಜಾತಂ ಪಾರ್ಥಂ ತವಾಂಶತಃ।**
**ತಮಹಂ ಪಾಲಯಿಷ್ಯಾಮಿ ಯಾವತ್ ಸ್ಥಾಸ್ಯಾಮಿ ಭೂತಲೇ॥** 19

---

ಗೋವುಗಳ ಪ್ರೇರಣೆಯಂತೆ ಜನಾರ್ದನನನ್ನು ಉಪೇಂದ್ರ ಪದವಿಯಲ್ಲಿ ಅಭಿಷೇಚಿಸಿ ಪ್ರೀತಿಪೂರ್ವಕವಾಗಿ ವಿನಯದಿಂದ ಇಂತೆಂದನು (15): "ಹೇ ಮಹಾಭಾಗ, ಗೋದೇವತೆಗಳ ಮಾತನ್ನು ನಡೆಸಿದ್ದೇನೆ. ಇನ್ನೊಂದು ಹೇಳತಕ್ಕ ವಿಷಯವಿದೆ, ಕೇಳು. ಭೂಭಾರವನ್ನಿಳಿಸುವ ಇಚ್ಛೆಯಿಂದಲೇ ನನ್ನ ಒಂದಂಶವು ಭೂಮಿಯಲ್ಲಿ 'ಅರ್ಜುನ' ಎಂಬ ಹೆಸರಿನಿಂದ ಅವತರಿಸಿದೆ. ಹೇ ಪುರುಷೋತ್ತಮ, ಪೃಥಿವೀಧರ, ನೀನು ಆತನನ್ನು ಸರ್ವದಾ ಸಂರಕ್ಷಿಸಬೇಕೆಂದು ಬೇಡುತ್ತೇನೆ (16-17). ಭೂಭಾರವಿಳಿಸುವ ನಿನ್ನ ಕಾರ್ಯದಲ್ಲಿ ಆ ವೀರನು ನಿನಗೆ ಸಹಾಯ ಮಾಡುವನು. ಆದ್ದರಿಂದ, ಮಧುಸೂದನ, ಆತನು ನಾನೇ ಎಂದು ತಿಳಿದು ಸಂರಕ್ಷಿಸು" ಎಂದನು (18). ಅದಕ್ಕೆ ಶ್ರೀಕೃಷ್ಣನು "ಇಂದ್ರ, ನಿನ್ನ ಅಂಶದಿಂದ ಭರತವಂಶದಲ್ಲಿ ಪಾರ್ಥನು ಹುಟ್ಟಿದ್ದಾನೆಂಬುದನ್ನು ನಾನು ಬಲ್ಲೆ. ನಾನು ಭೂತಳದಲ್ಲಿರುವವರೆಗೂ ಆತನನ್ನು ಸಂರಕ್ಷಿಸುವೆನು. ಎಲೈ ಶಕ್ರ—ಅರಿಂದಮ, ನಾನು ಈ ಭೂಮಿಯಲ್ಲಿರುವವರೆಗೆ ಅರ್ಜುನನನ್ನು

**ಯಾವನ್ಮಹೀತಲೇ ಶಕ್ರ ಸ್ಥಾಸ್ಯಾಮ್ಯಹಮರಿಂದಮ।**
**ನ ತಾವದರ್ಜುನಂ ಕಶ್ಚಿದ್‌ದೇವೇಂದ್ರ ಯುಧಿ ಜೇಷ್ಯತಿ॥** 20

**ಕಂಸೋ ನಾಮ ಮಹಾಬಾಹುರ್ದೈತ್ಯೋಽರಿಷ್ಟಸ್ತಥಾಸುರಃ।**
**ಕೇಶೀ ಕುವಲಯಾಪೀಡೋ ನರಕಾದ್ಯಾಸ್ತಥಾಪರೇ॥** 21

**ಹತೇಷು ತೇಷು ದೇವೇಂದ್ರ ಭವಿಷ್ಯತಿ ಮಹಾಹವಃ।**
**ತತ್ರ ವಿದ್ಧಿ ಸಹಸ್ರಾಕ್ಷ ಭಾರಾವತರಣಂ ಕೃತಮ್॥** 22

**ಸ ತ್ವಂ ಗಚ್ಛ ನ ಸಂತಾಪಂ ಪುತ್ರಾರ್ಥೇ ಕರ್ತುಮರ್ಹಸಿ।**
**ನಾರ್ಜುನಸ್ಯ ರಿಪುಃ ಕಶ್ಚಿನ್ಮಮಾಗ್ರೇ ಪ್ರಭವಿಷ್ಯತಿ॥** 23

**ಅರ್ಜುನಾರ್ಥೇ ತ್ವಹಂ ಸರ್ವಾನ್ ಯುಧಿಷ್ಠಿರಪುರೋಗಮಾನ್।**
**ನಿವೃತ್ತೇ ಭಾರತೇ ಯುದ್ಧೇ ಕುಂತ್ಯೈ ದಾಸ್ಯಾಮ್ಯವಿಕ್ಷತಾನ್॥** 24

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾ ಸಂಪರಿಷ್ವಜ್ಯ ದೇವರಾಜೋ ಜನಾರ್ದನಮ್।**
**ಆರುಹ್ಯೈರಾವತಂ ನಾಗಂ ಪುನರೇವ ದಿವಂ ಯಯೌ॥** 25

---

ಯುದ್ಧದಲ್ಲಿ ಯಾವನೂ ಜಯಿಸಲಾರ (19-20). ದೇವೇಂದ್ರ, ಕಂಸನೆಂಬ ಮಹಾವೀರನಾದ ಒಬ್ಬ ದೈತ್ಯನಿದ್ದಾನೆ. ಹಾಗೆಯೇ ಅರಿಷ್ಟ, ಕೇಶಿ, ಕುವಲಯಾ ಪೀಡ, ನರಕ—ಮೊದಲಾದ ಅಸುರರಿದ್ದಾರೆ. ಇವರೆಲ್ಲರೂ ಹತರಾದಮೇಲೆ ಒಂದು ಮಹಾಯುದ್ಧ ನಡೆಯುವುದು. ಸಹಸ್ರಾಕ್ಷ, ಆಗ ಭೂಭಾರವೆಲ್ಲ ಇಳಿಯುವುದೆಂದು ತಿಳಿ (21-22). ಮಗನಿಗಾಗಿ ಚಿಂತಿಸಬೇಡ; ನೀನು ಹೋಗು ನನ್ನೆದುರಿಗೆ ಯಾವ ವೈರಿಯೂ ಅರ್ಜುನನ ಮೇಲೆ ಕೈಮಾಡಿ ಸಫಲನಾಗಲಾರ. ಭಾರತಯುದ್ಧವು ಸಮಾಪ್ತವಾದ ಮೇಲೆ ಅರ್ಜುನನಿಗೋಸ್ಕರವೇ ಯುಧಿಷ್ಠಿ ರಾದಿಗಳನ್ನು ಉಳಿಸಿ ಕುಂತಿಗೆ ಒಪ್ಪಿಸುವೆನು" ಎಂದು ನುಡಿದನು (23-24). ಜನಾರ್ದನನು ಹೀಗೆ ನುಡಿಯಲಾಗಿ ದೇವೇಂದ್ರನು ಅವನನ್ನು ಆಲಂಗಿಸಿ ಬೀಳ್ಕೊಂಡು ಐರಾವತಗಜವನ್ನೇರಿ ಮತ್ತೆ ದೇವಲೋಕಕ್ಕೆ ಹೊರಟು ಹೋದನು. ಇತ್ತಲಾಗಿ ಶ್ರೀಕೃಷ್ಣನು ಗೋವುಗಳಿಂದಲೂ ಗೋಪಾಲರಿಂದಲೂ

**ಕೃಷ್ಣೋ ಹಿ ಸಹಿತೋ ಗೋಭಿರ್ಗೋಪಾಲೈಶ್ಚ ಪುನರ್ವ್ರಜಮ್।**
**ಆಜಗಾಮಾಥ ಗೋಪೀನಾಂ ದೃಷ್ಟಿಪೂತೇನ ವರ್ತ್ಮನಾ॥ 26**

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ದ್ವಾದಶೋಽಧ್ಯಾಯಃ

---

ಪರಿವೃತನಾಗಿ ಮತ್ತೆ ವ್ರಜಕ್ಕೆ ಹಿಂದಿರುಗಿದನು. ಎದುರು ನೋಡುತ್ತಿದ್ದ ಗೋಪಿಯರ ದೃಷ್ಟಿಯಿಂದ ವ್ರಜಮಾರ್ಗವು ಪವಿತ್ರವಾಗಿತ್ತು! (25-26).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಹನ್ನೆರಡನೆಯ ಅಧ್ಯಾಯ ಮುಗಿಯಿತು.



## ತ್ರಯೋದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಗತೇ ಶಕ್ರೇ ತು ಗೋಪಾಲಾಃ ಕೃಷ್ಣಮಕ್ಲಿಷ್ಟಕಾರಿಣಮ್।**
**ಊಚುಃ ಪ್ರೀತ್ಯಾ ಧೃತಂ ದೃಷ್ಟ್ವಾ ತೇನ ಗೋವರ್ಧನಾಚಲಮ್॥ 1**

**ವಯಮಸ್ಮಾನ್ಮಹಾಭಾಗ ಭಗವನ್ ಮಹತೋ ಭಯಾತ್।**
**ಗಾವಶ್ಚ ಭವತಾ ತ್ರಾತಾ ಗಿರಿಧಾರಣಕರ್ಮಣಾ॥ 2**

**ಬಾಲಕ್ರೀಡೇಯಮತುಲಾ ಗೋಪಾಲತ್ವಂ ಜುಗುಪ್ಸಿತಮ್।**
**ದಿವ್ಯಂ ಚ ಭವತಃ ಕರ್ಮ ಕಿಮೇತತ್ತಾತ ಕಥ್ಯತಾಮ್॥ 3**

**ಕಾಲಿಯೋ ದಮಿತಸ್ತೋಯೇ ಧೇನುಕೋ ವಿನಿಪಾತಿತಃ।**
**ಧೃತೋ ಗೋವರ್ಧನಶ್ಚಾಯಂ ಶಂಕಿತಾನಿ ಮನಾಂಸಿ ನಃ॥ 4**

---

### ಅಧ್ಯಾಯ 13

ಗೋಪಾಲರು ಶ್ರೀಕೃಷ್ಣನ ಮಹಿಮೆಯನ್ನು ವರ್ಣಿಸುವುದು.
ಶ್ರೀಕೃಷ್ಣನ ಉತ್ತರ. ಗೋಪಿಯರೊಡನೆ ರಾಸಕ್ರೀಡೆ.

ಪರಾಶರಮಹರ್ಷಿಗಳು ಹೇಳಿದರು: ಮೈತ್ರೇಯ, ದೇವೇಂದ್ರನು ಹೊರಟುಹೋದ ಮೇಲೆ, ಕ್ಲೇಶವಿಲ್ಲದೆ ಮಹಾಕಾರ್ಯವನ್ನು ನಡೆಸುತ್ತ ಹಾಗೆಯೇ ಗೋವರ್ಧನ ಗಿರಿಯನ್ನು ಎತ್ತಿ ಹಿಡಿದಿದ್ದ ಶ್ರೀಕೃಷ್ಣನನ್ನು ಕುರಿತು ಗೋಪಾಲರು ಪ್ರೀತಿಯಿಂದ ಹೀಗೆಂದರು (1). "ಓ ಮಹಾಭಾಗ, ನಮ್ಮ ಪಾಲಿನ ಭಗವಂತನೆ, ಬೆಟ್ಟವನ್ನು ಹಿಡಿದೆತ್ತಿದ್ದ ಈ ಕೃತಿಯಿಂದ ನಮ್ಮನ್ನೂ ಗೋವುಗಳನ್ನೂ ಮಹತ್ತರವಾದ ವಿಪತ್ತಿನಿಂದ ಪಾರುಮಾಡಿದ್ದೀಯೆ. ಅಸಾಧಾರಣವಾದ ಈ ಬಾಲಕ್ರೀಡೆ ಎಲ್ಲಿ? ಹೇಯವಾದ ಈ ದನಕಾಯುವ ಕೆಲಸವೆಲ್ಲಿ? ನಿನ್ನ ಕಾರ್ಯವಾದರೋ ದೇವತೆಗಳು ಮಾಡುವಂತಹದು. ಅಪ್ಪಾ, ಇದೇನು ಹೇಳು (2-3). ನೀರಲ್ಲಿದ್ದ ಕಾಲಿಯನನ್ನು ದಮನಮಾಡಿದೆ. ಧೇನುಕಾಸುರನನ್ನು ಧ್ವಂಸಮಾಡಿದೆ. ಈಗ ಈ ಗೋವರ್ಧನ ಪರ್ವತವನ್ನೆತ್ತಿದೆ!

**ಸತ್ಯಂ ಸತ್ಯಂ ಹರೇಃ ಪಾದೌ ಶಪಾಮೋಽಮಿತವಿಕ್ರಮ।**
**ಯಥಾವದ್ವೀರ್ಯಮಾಲೋಕ್ಯ ನ ತ್ವಾಂ ಮನ್ಯಾಮಹೇ ನರಮ್॥ 5**

**ಪ್ರೀತಿಃ ಸಸ್ತ್ರೀಕುಮಾರಸ್ಯ ವ್ರಜಸ್ಯ ತ್ವಯಿ ಕೇಶವ।**
**ಕರ್ಮ ಚೇದಮಶಕ್ಯಂ ಯತ್ಸಮಸ್ತೈಸ್ತ್ರಿದಶೈರಪಿ॥ 6**

**ಬಾಲತ್ವಂ ಚಾತಿವೀರ್ಯತ್ವಂ ಜನ್ಮ ಚಾಸ್ಮಾಸ್ವಶೋಭನಮ್।**
**ಚಿಂತ್ಯಮಾನಮಮೇಯಾತ್ಮನ್ ಶಂಕಾಂ ಕೃಷ್ಣ ಪ್ರಯಚ್ಛತಿ॥ 7**

**ದೇವೋ ವಾ ದಾನವೋ ವಾ ತ್ವಂ ಯಕ್ಷೋ ಗಂಧರ್ವ ಏವ ವಾ।**
**ಕಿಮಸ್ಮಾಕಂ ವಿಚಾರೇಣ ಬಾಂಧವೋಽಸಿ ನಮೋಽಸ್ತು ತೇ॥ 8**

*ಶ್ರೀಪರಾಶರ ಉವಾಚ:*

**ಕ್ಷಣಂ ಭೂತ್ವಾ ತ್ವಸೌ ತೂಷ್ಣೀಂ ಕಿಂಚಿತ್ ಪ್ರಣಯಕೋಪವಾನ್।**
**ಇತ್ಯೇವಮುಕ್ತಸ್ತೈರ್ಗೋಪೈಃ ಕೃಷ್ಣೋಽಪ್ಯಾಹ ಮಹಾಮತಿಃ॥ 9**

---

ನಮ್ಮ ಮನಸ್ಸುಗಳು ನಾನಾಶಂಕೆಗೊಳಗಾದವು! ಅಮಿತ ಪರಾಕ್ರಮಶಾಲಿ ನೀನು. ನಿನ್ನ ಶೌರ್ಯವನ್ನು ಕಂಡು ನೀನು ಮಾನವನಲ್ಲವೆಂದು ತಿಳಿದಿದ್ದೇವೆ! ಇದು ಸತ್ಯ, ಸತ್ಯ! ಶ್ರೀಹರಿಯ ಪಾದಗಳ ಮೇಲೆ ಆಣೆಯಿಟ್ಟು ಹೇಳುತ್ತೇವೆ! (4-5). ಓ ಕೇಶವ, ಹೆಂಗಸರು ಮಕ್ಕಳಿಂದ ಹಿಡಿದು ಗೋಕುಲವೆಲ್ಲವೂ ನಿನ್ನಲ್ಲಿ ಪ್ರೀತಿಯಿಟ್ಟಿದೆ. ಸಮಸ್ತ ದೇವತೆಗಳಿಂದಲೂ ಅಶಕ್ಯವಾದ ಈ ಕಾರ್ಯವನ್ನೆಸಗಿದ್ದೀಯೆ (6). ಈ ಬಾಲ್ಯ, ಅಸಾಧಾರಣವಾದ ಈ ಶೌರ್ಯ, ನಮ್ಮ ನಡುವೆ ಕುತ್ಸಿತವಾದ ಈ ಜನ್ಮ—ಇದನ್ನೆಲ್ಲ ಆಲೋಚಿಸಿದರೆ, ಹೇ ಕೃಷ್ಣ—ಅಮೇಯಾತ್ಮ, ನಮಗೆ ಏನೋ ಶಂಕೆ ಹುಟ್ಟುತ್ತದೆ! ನೀನು ದೇವತೆಯೋ, ದಾನವನೋ, ಯಕ್ಷನೋ, ಗಂಧರ್ವನೋ! (ಹೋಗಲಿ) ಈ ವಿಚಾರದಿಂದ ನಮಗೇನು! ನಮಗೆ ಆಪ್ತ ಬಂಧುವಾಗಿದ್ದೀಯೆ. ನಿನಗೆ ನಮೋ ನಮಃ!" ಎಂದರು (7-8). ಗೋಪಾಲರು ಹೀಗೆ ನುಡಿಯಲಾಗಿ ಶ್ರೀಕೃಷ್ಣನು ಒಂದು ಕ್ಷಣಕಾಲ ಸುಮ್ಮನಿದ್ದನು. ಅನಂತರ ಪ್ರಣಯಕೋಪವನ್ನು ನಟಿಸುತ್ತ "ಎಲೈ ಗೋಪರೆ, ನನ್ನ ಸಂಬಂಧದಿಂದ ನಿಮಗೆ ಲಜ್ಜೆಯಾಗುವುದಿಲ್ಲವಾದಮೇಲೆ, ನಿಮ್ಮ ಪ್ರಶಂಸೆಗೆ ನಾನು ಪಾತ್ರನಾದಮೇಲೆ ಈ ವಿಚಾರದಿಂದ ಪ್ರಯೋಜನ

*ಶ್ರೀಭಗವಾನುವಾಚ:*

**ಮತ್ಸಂಬಂಧೇನ ವೋ ಗೋಪಾ ಯದಿ ಲಜ್ಜಾ ನ ಜಾಯತೇ।**
**ಶ್ಲಾಘ್ಯೋ ವಾಹಂ ತತಃ ಕಿಂ ವೋ ವಿಚಾರೇಣ ಪ್ರಯೋಜನಮ್॥ 10**

**ಯದಿ ವೋಽಸ್ತಿ ಮಯಿ ಪ್ರೀತಿಃ ಶ್ಲಾಘ್ಯೋಽಹಂ ಭವತಾಂ ಯದಿ।**
**ತದಾತ್ಮಬಂಧುಸದೃಶೀ ಬುದ್ಧಿರ್ವಃ ಕ್ರಿಯತಾಂ ಮಯಿ॥ 11**

**ನಾಹಂ ದೇವೋ ನ ಗಂಧರ್ವೋ ನ ಯಕ್ಷೋ ನ ಚ ದಾನವಃ।**
**ಅಹಂ ವೋ ಬಾಂಧವೋ ಜಾತೋ ನೈತಚ್ಚಿಂತ್ಯಮಿತೋಽನ್ಯಥಾ॥ 12**

*ಶ್ರೀಪರಾಶರ ಉವಾಚ:*

**ಇತಿ ಶ್ರುತ್ವಾ ಹರೇರ್ವಾಕ್ಯಂ ಬದ್ಧಮೌನಾಸ್ತತೋ ವನಮ್।**
**ಯಯುರ್ಗೋಪಾ ಮಹಾಭಾಗ ತಸ್ಮಿನ್ ಪ್ರಣಯಕೋಪಿನಿ॥ 13**

**ಕೃಷ್ಣಸ್ತು ವಿಮಲಂ ವ್ಯೋಮ ಶರಚ್ಚಂದ್ರಸ್ಯ ಚಂದ್ರಿಕಾಮ್।**
**ತದಾ ಕುಮುದಿನೀಂ ಫುಲ್ಲಾಮಾಮೋದಿತದಿಗಂತರಾಮ್॥ 14**

**ವನರಾಜಿಂ ತಥಾ ಕೂಜದ್‌ಭೃಂಗಮಾಲಾಮನೋಹರಾಮ್।**
**ವಿಲೋಕ್ಯ ಸಹ ಗೋಪೀಭಿರ್ಮನಶ್ಚಕ್ರೇ ರತಿಂ ಪ್ರತಿ॥ 15**

---

ವೇನು? (9-10). ನನ್ನಲ್ಲಿ ನಿಮಗೆ ಪ್ರೀತಿ ಇರುವುದಾದರೆ, ನಿಮಗೆ ನಾನು ಶ್ಲಾಘನೀಯನಾದರೆ, ನಿಮ್ಮ ಬಂಧುಗಳಲ್ಲೊಬ್ಬನೆಂದು ನನ್ನನ್ನು ತಿಳಿಯಿರಿ. ನಾನು ದೇವನೂ ಅಲ್ಲ, ಗಂಧರ್ವನೂ ಅಲ್ಲ, ಯಕ್ಷನೂ ಅಲ್ಲ, ದಾನವನೂ ಅಲ್ಲ! ನಾನು ನಿಮ್ಮ ಬಾಂಧವನಾಗಿದ್ದೇನೆ. ಇದಕ್ಕಿಂತ ಬೇರೆಯಾಗಿ ನೀವು ಏನೆಂದೂ ತಿಳಿಯಬಾರದು" ಎಂದು ಹೇಳಿದನು (11-12). ಶ್ರೀಹರಿಯ ಈ ಮಾತುಗಳನ್ನು ಕೇಳಿ ಗೋಪಾಲರು ಸುಮ್ಮನಾದರು. ಮಹಾಭಾಗ-ಮೈತ್ರೇಯ, ಆತನು (ಪ್ರಣಯ) ಕುಪಿತನಾಗಿರುವುದನ್ನು ಕಂಡು ಅವರೆಲ್ಲರೂ ತೆಪ್ಪಗೆ ವನಕ್ಕೆ ಹೊರಟುಹೋದರು (13). (ಹೀಗಿರಲಾಗಿ ಒಂದು ಸಲ) ಗಗನವು ವಿಮಲವಾಗಿತ್ತು. ಶರಚ್ಚಂದ್ರನ ಬೆಳದಿಂಗಳು ಹರಡಿತ್ತು. ನೈದಿಲೆಯು ಅರಳಿತ್ತು. ಅದರ ಪರಿಮಳವು ದಿಗಂತದಲ್ಲಿ ಹರಡಿತ್ತು. ದುಂಬಿಗಳ ಗುಂಜಾರವದಿಂದ ವನರಾಜಿ ಮನೋಹರವಾಗಿತ್ತು. ಅದನ್ನು ನೋಡಿ ಶ್ರೀಕೃಷ್ಣನಿಗೆ ಗೋಪಿಯರೊಡನೆ

**ವಿನಾ ರಾಮೇಣ ಮಧುರಮತೀವ ವನಿತಾಪ್ರಿಯಮ್।**
**ಜಗೌ ಕಲಪದಂ ಶೌರಿಸ್ತಾರಮಂದ್ರಕೃತಕ್ರಮಮ್॥** 16

**ರಮ್ಯಂ ಗೀತಧ್ವನಿಂ ಶ್ರುತ್ವಾ ಸಂತ್ಯಜ್ಯಾವಸಥಾಂಸ್ತದಾ।**
**ಆಜಗ್ಮುಸ್ತ್ವರಿತಾ ಗೋಪ್ಯೋ ಯತ್ರಾಸ್ತೇ ಮಧುಸೂದನಃ॥** 17

**ಶನೈಶ್ಶನೈರ್ಜಗೌ ಗೋಪೀ ಕಾಚಿತ್ತಸ್ಯ ಲಯಾನುಗಮ್।**
**ದತ್ತಾವಧಾನಾ ಕಾಚ್ಚಿಚ್ಚ ತಮೇವ ಮನಸಾಸ್ಮರತ್॥** 18

**ಕಾಚಿತ್ ಕೃಷ್ಣೇತಿ ಕೃಷ್ಣೇತಿ ಪ್ರೋಚ್ಯ ಲಜ್ಜಾಮುಪಾಯಯೌ।**
**ಯಯೌ ಚ ಕಾಚಿತ್ ಪ್ರೇಮಾಂಧಾ ತತ್ಪಾರ್ಶ್ವಮವಿಲಮ್ಬಿತಮ್॥** 19

**ಕಾಚಿಚ್ಚಾವಸಥಸ್ಯಾನ್ತೇ ಸ್ಥಿತ್ವಾ ದೃಷ್ಟ್ವಾಬಹಿರ್ಗುರುಮ್।**
**ತನ್ಮಯತ್ವೇನ ಗೋವಿಂದಂ ದಧ್ಯೌ ಮೀಲಿತಲೋಚನಾ॥** 20

**ತಚ್ಚಿತ್ತವಿಮಲಾಹ್ಲಾದಕ್ಷೀಣಪುಣ್ಯಚಯಾ ತಥಾ।**
**ತದಪ್ರಾಪ್ತಿಮಹಾದುಃಖವಿಲೀನಾಶೇಷಪಾತಕಾ॥** 21

---

ಕ್ರೀಡಿಸಬೇಕೆಂದು ಮನಸ್ಸಾಯಿತು! (14-15). ಬಳಿಯಲ್ಲಿ ಬಲರಾಮನಿರಲಿಲ್ಲ. ವನಿತೆಯರಿಗೆ ವಿಶೇಷವಾಗಿ ಪ್ರಿಯವಾದ ಮಧುರ ಧ್ವನಿಯಲ್ಲಿ ತಾರ ಮಂದ್ರ ಸ್ವರಗಳನ್ನು ಕ್ರಮವಾಗಿ ಯೋಜಿಸಿ ಲಲಿತ ಪದಗಳನ್ನು ಬಳಸಿ ಶ್ರೀಕೃಷ್ಣನು ಹಾಡಲಾರಂಭಿಸಿದನು (16). ಆಗ ಇಂಪಾದ ಗೀತಧ್ವನಿಯನ್ನಾಲಿಸಿದ ಗೋಪಿಯರು ತಮ್ಮ ಮನೆಗಳನ್ನು ಬಿಟ್ಟು ಮಧುಸೂದನನಿದ್ದಲ್ಲಿಗೆ ತ್ವರೆಯಿಂದ ಬಂದರು. ಅವರಲ್ಲೊಬ್ಬ ಗೋಪಿಯು ಶ್ರೀಕೃಷ್ಣನ ಧ್ವನಿಯೊಂದಿಗೆ ತನ್ನ ಧ್ವನಿಯನ್ನು ಕೂಡಿಸಿ ಮೆಲ್ಲಮೆಲ್ಲಗೆ ಹಾಡಲಾರಂಭಿಸಿದಳು. ಇನ್ನೊಬ್ಬಳು ಹಾಡನ್ನಾಲಿಸುತ್ತ ಕೃಷ್ಣನನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಿದ್ದಳು (17-18). ಇನ್ನೊಬ್ಬಳು 'ಕೃಷ್ಣ! ಕೃಷ್ಣ!' ಎಂದು ಹೇಳುತ್ತ ನಾಚಿದಳು! ಪ್ರೇಮಾಂಧಳಾದ ಮತ್ತೊಬ್ಬಳು ಬೇಗ ಬೇಗನೆ ಆತನ ಬಳಿಗೆ ಹೋಗಿ ನಿಂತಳು. ಒಬ್ಬ ಗೋಪಿಯು ಮನೆಯ ಹೊರಗಡೆ ಗುರುಜನರಿದ್ದುದನ್ನು ಕಂಡು ಮನೆಯ ಬಳಿಯೇ ನಿಂತು ಕಣ್ಮುಚ್ಚಿ ಗೋವಿಂದನನ್ನೆ ತನ್ಮಯಳಾಗಿ ನೆನೆಯುತ್ತಿದ್ದಳು! (19-20). ಇನ್ನೊಬ್ಬ ಗೋಪಕನ್ಯೆ ಜಗತ್ಕಾರಣನೂ ಪರಬ್ರಹ್ಮಸ್ವರೂಪನೂ ಆದ ಶ್ರೀಕೃಷ್ಣನನ್ನೇ

**ಚಿಂತಯಂತೀ ಜಗತ್ಸೂತಿಂ ಪರಬ್ರಹ್ಮಸ್ವರೂಪಿಣಮ್ ।**
**ನಿರುಚ್ಛ್ವಾಸತಯಾ ಮುಕ್ತಿಂ ಗತಾನ್ಯಾ ಗೋಪಕನ್ಯಕಾ ॥ 22**

**ಗೋಪೀಪರಿವೃತೋ ರಾತ್ರಿಂ ಶರಚ್ಚಂದ್ರಮನೋರಮಾಮ್ ।**
**ಮಾನಯಾಮಾಸ ಗೋವಿಂದೋ ರಾಸಾರಂಭರಸೋತ್ಸುಕಃ ॥ 23**

**ಗೋಪ್ಯಶ್ಚ ವೃನ್ದಶಃ ಕೃಷ್ಣಚೇಷ್ಟಾಸ್ವಾಯತ್ತಮೂರ್ತ್ತಯಃ ।**
**ಅನ್ಯದೇಶಂ ಗತೇ ಕೃಷ್ಣೇ ಚೇರುರ್ವೃಂದಾವನಾಂತರಮ್ ॥ 24**

**ಕೃಷ್ಣೇ ನಿಬದ್ಧಹೃದಯಾ ಇದಮೂಚುಃ ಪರಸ್ಪರಮ್ ॥ 25**

---

ಧ್ಯಾನಿಸುತ್ತ ಪರಿಶುದ್ಧವಾದ ಪರಮಾನಂದವನ್ನು ಅನುಭವಿಸಿದ್ದರಿಂದ ಅವಳ ಪುಣ್ಯಸಂಚಯವೆಲ್ಲ ಕ್ಷೀಣಿಸಿತು. ಹಾಗೆಯೇ ಅವನು ದೊರಕಲಿಲ್ಲವೆಂಬ ಮಹಾ ದುಃಖವನ್ನನುಭವಿಸಿದ್ದರಿಂದ ಅವಳ ಪಾಪಸಂಚಯವೂ ಕ್ಷೀಣಿಸಿತ್ತು. ಏಕಾಗ್ರತೆ ಯಿಂದ ಚಿಂತಿಸುವಾಗ ಉಸಿರು ನಿಂತು ಹೋಗಲು ಆ ಗೋಪಕನ್ಯೆ ಮುಕ್ತಿಯನ್ನೈದಿದಳು!* (21-22). ರಾಸ*ಕ್ರೀಡೆಯನ್ನಾರಂಭಿಸಬೇಕೆಂದು ರಸಾಭಿರುಚಿಯುಳ್ಳ ಗೋವಿಂದನು ಗೋಪೀಜನ ಪರಿವೃತನಾಗಿ, ಶರಚ್ಚಂದ್ರಮ ನೋರಮವಾದ ಆ ರಾತ್ರಿ ಉತ್ತಮವೆಂದು ಭಾವಿಸಿದನು (23). ಗೋಪಿಯರು ಗುಂಪು ಗುಂಪಾಗಿ ಸೇರಿ ತಲ್ಲೀನರಾಗಿ ಶ್ರೀಕೃಷ್ಣನಂತೆ ಅಭಿನಯಿಸುತ್ತಿದ್ದರು. ಇದ್ದಕ್ಕಿದ್ದಂತೆ ಶ್ರೀಕೃಷ್ಣನು ಅವರಿಗೆ ಕಾಣದಂತೆ ಬೇರೆ ಕಡೆ ಹೊರಟು ಹೋದನು. ಆಗ ಗೋಪಿಯರು ಅವನನ್ನೇ ಹುಡುಕುತ್ತ ವೃಂದಾವನದೊಳಗೆ ಅಲೆಯ ತೊಡಗಿದರು (24). ಕೃಷ್ಣನಲ್ಲಿಯೇ ನೆಟ್ಟ ಹೃದಯವಿದ್ದ ಅವರು ಅನ್ಯೋನ್ಯವಾಗಿ ಹೀಗೆ ಮಾತಾಡತೊಡಗಿದರು: "ನಾನು ಕೃಷ್ಣ! ಎಷ್ಟು ಚೆಲುವಾಗಿ ನಡೆಯು

---

* ಪಾಪ ಪುಣ್ಯಗಳೆರಡೂ ಮುಕ್ತಿಗೆ ಅಡ್ಡಿಯಾಗಿರುತ್ತವೆ. ಅವುಗಳ ಫಲವನ್ನನು ಭವಿಸುವುದಕ್ಕಾಗಿ ದೇಹಪ್ರಾಪ್ತಿಯಾಗುತ್ತದೆ. ಅವೆರಡೂ ಕ್ಷಯಿಸಿದಾಗ ಮುಕ್ತಿಯೆಂದು ಶಾಸ್ತ್ರಸಿದ್ಧಾಂತವಿದೆ. ಈ ಎರಡು ಶ್ಲೋಕಗಳು ಕಾವ್ಯ ಪ್ರಕಾಶದಲ್ಲಿ ಉದಾಹೃತವಾಗಿವೆ. (ನೋಡಿ. ಉಲ್ಲಾಸ 4, ಶ್ಲೋ 81-82).

* ರಾಸಕ್ರೀಡೆ = ಸ್ತ್ರೀಪುರುಷರು ಅನ್ಯೋನ್ಯವಾಗಿ ಕೈಹಿಡಿದುಕೊಂಡು ಹಾಡುತ್ತ ಮಂಡಲಾಕಾರವಾಗಿ ಸುತ್ತುತ್ತ ಮಾಡುವ ನೃತ್ಯ. ಇದರಲ್ಲಿ ಒಟ್ಟು 64 ಜನರಿಗಿಂತ ಹೆಚ್ಚು ಮಂದಿ ಇರಬಾರದು.

**ಕೃಷ್ಣೋಽಹಮೇಷ ಲಲಿತಂ ವ್ರಜಾಮ್ಯಾಲೋಕ್ಯತಾಂ ಗತಿಃ।**
**ಅನ್ಯಾ ಬ್ರವೀತಿ ಕೃಷ್ಣಸ್ಯ ಮಮ ಗೀತಿರ್ನಿಶಮ್ಯತಾಮ್॥** 26

**ದುಷ್ಟಕಾಲಿಯ ತಿಷ್ಠಾತ್ರ ಕೃಷ್ಣೋಽಹಮಿತಿ ಚಾಪರಾ।**
**ಬಾಹುಮಾಸ್ಫೋಟ್ಯ ಕೃಷ್ಣಸ್ಯ ಲೀಲಯಾ ಸರ್ವಮಾದದೇ॥** 27

**ಅನ್ಯಾ ಬ್ರವೀತಿ ಭೋ ಗೋಪಾ ನಿಶ್ಶಂಕೈಃ ಸ್ಥೀಯತಾಮಿತಿ।**
**ಅಲಂ ವೃಷ್ಟಿಭಯೇನಾತ್ರ ಧೃತೋ ಗೋವರ್ಧನೋ ಮಯಾ॥** 28

**ಧೇನುಕೋಽಯಂ ಮಯಾ ಕ್ಷಿಪ್ತೋ ವಿಚರಂತು ಯಥೇಚ್ಛಯಾ।**
**ಗಾವೋ ಬ್ರವೀತಿ ಚೈವಾನ್ಯಾ ಕೃಷ್ಣಲೀಲಾನುಸಾರಿಣೀ॥** 29

**ಏವಂ ನಾನಾಪ್ರಕಾರಾಸು ಕೃಷ್ಣಚೇಷ್ಟಾಸು ತಾಸ್ತದಾ।**
**ಗೋಪ್ಯೋ ವ್ಯಗ್ರಾಃ ಸಮಂ ಚೇರೂ ರಮ್ಯಂ**
**ವೃಂದಾವನಾಂತರಮ್॥** 30

---

ತ್ತೇನೆ, ನನ್ನ ನಡಿಗೆಯನ್ನು ನೋಡು!" ಎಂದು ಒಬ್ಬ ಗೋಪಿ ಹೇಳಿದಳು. ಇನ್ನೊಬ್ಬಳು "ನಾನು ಕೃಷ್ಣ! ಹೇಗೆ ಹಾಡುತ್ತೇನೆ, ಕೇಳು! ಎಂದಳು (25-26). ಮತ್ತೊಬ್ಬಳು "ಎಲೈ ದುಷ್ಟ, ಕಾಳಿಯ ಸರ್ಪ! ನಿಲ್ಲು! ಇದೊ ನಾನು ಕೃಷ್ಣ ಬಂದಿದ್ದೇನೆ!" ಎಂದು ಹೇಳಿ ಭುಜವನ್ನು ಚಪ್ಪರಿಸಿ ಕೃಷ್ಣನ ಕಾಳಿಯ ದಮನಲೀಲೆಯನ್ನು ಅನುಕರಿಸುತ್ತಿದ್ದಳು (27). ಇನ್ನೊಬ್ಬಳು "ಎಲೈ ಗೋಪರೆ, ಗೋವರ್ಧನ ಪರ್ವತವನ್ನು ಎತ್ತಿ ಹಿಡಿದಿದ್ದೇನೆ! ಇಲ್ಲಿಗೆ ಬಂದು ನಿರ್ಭಯವಾಗಿ ನಿಂತುಕೊಳ್ಳಿರಿ. ಬಿರುಮಳೆಯ ಭೀತಿ ಬೇಡ!" ಎನ್ನುತ್ತಿದ್ದಳು (28). ಮಗದೊಬ್ಬ ಗೋಪಿಯು ಕೃಷ್ಣಲೀಲೆಯನ್ನನುಕರಿಸುತ್ತ "ಇದೋ! ಧೇನುಕಾಸುರನನ್ನು ಸಂಹರಿಸಿದ್ದೇನೆ! ಗೋವುಗಳು ಯಥೇಚ್ಛವಾಗಿ ತಿರುಗಾಡಲಿ" ಎಂದಳು (29). ಹೀಗೆ ಶ್ರೀಕೃಷ್ಣನ ನಾನಾ ಪ್ರಕಾರವಾದ ಲೀಲೆಗಳ ಅನುಕರಣದಲ್ಲಿ ಮೈಮರೆತು ಮಗ್ನರಾದ ಆ ಗೋಪಿಯರು ರಮ್ಯವಾದ ವೃಂದಾವನದೊಳಗೆ ಜೊತೆ ಜೊತೆಯಾಗಿ ಅಲೆದಾಡತೊಡಗಿದರು (30). ಸುಂದರಿಯಾದ ಒಬ್ಬ ಗೋಪಾಂಗನೆಯು ನೆಲವನ್ನು ದಿಟ್ಟಿಸಿನೋಡಿ ರೋಮಾಂಚಿತಗಾತ್ರಳಾಗಿ ತನ್ನ

**ವಿಲೋಕ್ಯೈಕಾ ಭುವಂ ಪ್ರಾಹ ಗೋಪೀ ಗೋಪವರಾಂಗನಾ।**
**ಪುಲಕಾಂಚಿತಸರ್ವಾಂಗೀ ವಿಕಾಸಿನಯನೋತ್ಪಲಾ॥** 31

**ಧ್ವಜವಜ್ರಾಂಕುಶಾಬ್ಜಾಂಕರೇಖಾವಂತ್ಯಾಲಿ ಪಶ್ಯತ।**
**ಪದಾನ್ಯೇತಾನಿ ಕೃಷ್ಣಸ್ಯ ಲೀಲಾಲಲಿತಗಾಮಿನಃ॥** 32

**ಕಾಪಿ ತೇನ ಸಮಾಯಾತಾ ಕೃತಪುಣ್ಯಾ ಮದಾಲಸಾ।**
**ಪದಾನಿ ತಸ್ಯಾಶ್ಚೈತಾನಿ ಘನಾನ್ಯಲ್ಪತನೂನಿ ಚ॥** 33

**ಪುಷ್ಪಾಪಚಯಮತ್ರೋಚ್ಚೈಶ್ಚಕ್ರೇ ದಾಮೋದರೋ ಧ್ರುವಮ್।**
**ಯೇನಾಗ್ರಾಕ್ರಾಂತಮಾತ್ರಾಣಿ ಪದಾನ್ಯತ್ರ ಮಹಾತ್ಮನಃ॥** 34

**ಅತ್ರೋಪವಿಶ್ಯ ವೈ ತೇನ ಕಾಚಿತ್ಪುಷ್ಪೈರಲಂಕೃತಾ।**
**ಅನ್ಯಜನ್ಮನಿ ಸರ್ವಾತ್ಮಾ ವಿಷ್ಣುರಭ್ಯರ್ಚಿತಸ್ತಯಾ॥** 35

**ಪುಷ್ಪಬಂಧನಸಮ್ಮಾನಕೃತಮಾನಾಮಪಾಸ್ಯತಾಮ್।**
**ನಂದಗೋಪಸುತೋ ಯಾತೋ ಮಾರ್ಗೇಣಾನೇನ ಪಶ್ಯತ॥** 36

---

ಇಂದೀವರನೇತ್ರಗಳನ್ನರಳಿಸಿ "ಗೆಳತಿಯರೆ* ಇಲ್ಲಿ ನೋಡಿರಿ! ಧ್ವಜ, ವಜ್ರ, ಅಂಕುಶ, ಕಮಲ ರೇಖೆಗಳಿರುವ ಹೆಜ್ಜೆಯ ಗುರುತುಗಳು! ಲೀಲಾಲಲಿತಗಾಮಿಯಾದ ಕೃಷ್ಣನ ಹೆಜ್ಜೆಗಳಿವು!" ಎಂದಳು (31-32). ಮದಾಲಸೆಯಾದ ಒಬ್ಬ ಯುವತಿ ಅವನೊಡನೆ ಬಂದಿದ್ದಾಳೆ. ಪುಣ್ಯಶಾಲಿನಿ ಅವಳು! ಆಕೆಯ ಹೆಜ್ಜೆಗಳಿಲ್ಲಿವೆ. ಚಿಕ್ಕವಾದರೂ ಚೊಕ್ಕವಾಗಿ ಮೂಡಿವೆ! ನಿಶ್ಚಯವಾಗಿಯೂ ಇಲ್ಲಿ ದಾಮೋದರನು ಎತ್ತರದ ಬಳ್ಳಿಗಳಿಂದ ಹೂಗಳನ್ನು ಬಿಡಿಸಿದ್ದಾನೆ! ಇದೋ ತುದಿಗಾಲಲ್ಲಿ ನಿಂತ ಆತನ ಹೆಜ್ಜೆಯ ಗುರುತುಗಳು! (33-34). (ಹಾಂ, ಇಲ್ಲಿ ನೋಡಿರಿ!) ಅವನು ಇಲ್ಲಿ ಕುಳಿತು ಯಾವಳೊ ಒಬ್ಬಳನ್ನು ಹೂಗಳಿಂದ ಅಲಂಕರಿಸಿದ್ದಾನೆ! ಪೂರ್ವಜನ್ಮದಲ್ಲಿ ಆಕೆ ಸರ್ವಾತ್ಮನಾದ ವಿಷ್ಣುವನ್ನು ಅರ್ಚಿಸಿರಬೇಕು! ಇದೋ, ಹೂಗಳನ್ನು ಮುಡಿಸಿ ಆದರಿಸಿದ ಮೇಲೆ ಅವಳು ಪ್ರಣಯ ಕುಪಿತಳಾಗಿರಬೇಕು! ಅವಳನ್ನು ಬಿಟ್ಟು ನಂದಗೋಪಸುತನು ಈ ದಾರಿಯಲ್ಲಿ

---

* ಮೂಲ ಶ್ಲೋಕದಲ್ಲಿ 'ಆಲಿ' ಎಂದು ಏಕವಚನವಿದೆ. ಬಹುವಚನಾರ್ಥದಲ್ಲಿ ಇದು ಆರ್ಷಪ್ರಯೋಗ.

**ಅನುಯಾತ್ಯೈನಮತ್ರಾನ್ಯಾ ನಿತಂಬಭರಮಂಥರಾ।**
**ಯಾ ಗಂತವ್ಯೇ ದ್ರುತಂ ಯಾತಿ ನಿಮ್ನಪಾದಾಗ್ರಸಂಸ್ಥಿತಿಃ॥ 37**

**ಹಸ್ತನ್ಯಸ್ತಾಗ್ರಹಸ್ತೇಯಂ ತೇನ ಯಾತಿ ತಥಾ ಸಖೀ।**
**ಅನಾಯತ್ತಪದನ್ಯಾಸಾ ಲಕ್ಷ್ಯತೇ ಪದಪದ್ಧತಿಃ॥ 38**

**ಹಸ್ತಸಂಸ್ಪರ್ಶಮಾತ್ರೇಣ ಧೂರ್ತೇನೈಷಾ ವಿಮಾನಿತಾ।**
**ನೈರಾಶ್ಯಾನ್ಮಂದಗಾಮಿನ್ಯಾ ನಿವೃತ್ತಂ ಲಕ್ಷ್ಯತೇ ಪದಮ್॥ 39**

**ನೂನಮುಕ್ತಾ ತ್ವರಾಮೀತಿ ಪುನರೇಷ್ಯಾಮಿ ತೇಽನ್ತಿಕಮ್।**
**ತೇನ ಕೃಷ್ಣೇನ ಯೇನೈಷಾ ತ್ವರಿತಾ ಪದಪದ್ಧತಿಃ॥ 40**

**ಪ್ರವಿಷ್ಟೋ ಗಹನಂ ಕೃಷ್ಣಃ ಪದಮತ್ರ ನ ಲಕ್ಷ್ಯತೇ।**
**ನಿವರ್ತಧ್ವಂ ಶಶಾಂಕಸ್ಯ ನೈತದ್ದೀಧಿತಿಗೋಚರೇ॥ 41**

---

ಹೋಗಿದ್ದಾನೆ, ನೋಡಿರಿ! (35-36). (ಗೆಳತಿಯರೆ, ಇತ್ತ ನೋಡಿರಿ) ಇನ್ನೊಬ್ಬಳು ನಿತಂಬಭಾರದಿಂದ ನಡಿಗೆ ಮೆಲ್ಲಗಾದರೂ ಬೇಗಬೇಗನೆ ಕೃಷ್ಣನ ಹಿಂದೆ ಹೋಗಲು ಯತ್ನಿಸಿದ್ದಾಳೆ! ಅವಳ ಪಾದಾಗ್ರವು ಆಳವಾಗಿ ನೆಲದಲ್ಲೂರಿದ ಗುರುತಿದೆ! (37). ಆಹಾ! ಅವನ ಈ ಗೆಳತಿ ಆತನ ಹಸ್ತದಲ್ಲಿ ತನ್ನ ಪಾಣಿಯನ್ನಿಟ್ಟು (ತೇಲುಗಾಲಿನಲ್ಲಿ) ಹೋಗಿದ್ದಾಳೆ! ಆದ್ದರಿಂದಲೇ ಎಳೆದು ಕೊಂಡು ಹೋದವರಂತೆ ಇವಳ ಹೆಜ್ಜೆಯ ಗುರುತಿದೆ! (38). ಇಲ್ಲಿ ನೋಡಿರಿ! ಆ ಮಂದಗಾಮಿನಿ ನಿರಾಸೆಯಿಂದ ಹಿಂದಿರುಗಿ ಹೋದುದಕ್ಕೆ ಇಲ್ಲಿ ಗುರುತಿದೆ! ಆ ಧೂರ್ತನು ಕೇವಲ ಹಸ್ತ ಸ್ಪರ್ಶ ಮಾಡಿದ್ದರಿಂದ ಅವಳು ವಿಮಾನಿತಳಾಗಿ ನಿರಾಸೆಗೊಂಡಿದ್ದಾಳೆ! (39). ಓಹೋ! (ಇಲ್ಲೊಬ್ಬಳು ಕುಳಿತಿದ್ದುದಕ್ಕೆ ಚಿಹ್ನೆ ಇದೆ). ಕೃಷ್ಣನು ಅವಳಿಗೆ "ನೀನು ಇಲ್ಲಿ ಕುಳಿತಿರು! ಬೇಗನೆ ಬಂದು ಬಿಡುತ್ತೇನೆ!" ಎಂದು ಹೇಳಿ ಎಲ್ಲಿಗೋ ಧಾವಿಸಿದ್ದಾನೆ. ಅವನು ಬೇಗಬೇಗನೆ ಹೋದದ್ದರ ಹೆಜ್ಜೆಯ ಗುರುತು ಇಲ್ಲಿದೆ! (40). ಇಲ್ಲಿ ಕೃಷ್ಣನು ಕಾಡಿನೊಳಗೆ ಹೋಗಿ ಬಿಟ್ಟಿದ್ದಾನೆ. ಹೆಜ್ಜೆಯ ಗುರುತು ಕಾಣಿಸುವುದಿಲ್ಲ. ಈ ಸ್ಥಳದಲ್ಲಿ ಚಂದ್ರನ ಬೆಳಕು ಇಲ್ಲ. ಗೆಳತಿಯರೆ, ಇನ್ನು ಹಿಂದಿರುಗಿರಿ" ಎಂದು ಬಡಬಡಿಸುತ್ತ ಮಾತಾಡಿದರು. ಅನಂತರ ಗೋಪಿಯರು ಕೃಷ್ಣದರ್ಶನವಾಗಲಿಲ್ಲವೆಂದು

**ನಿವೃತ್ತಾಸ್ತಾಸ್ತದಾ ಗೋಪ್ಯೋ ನಿರಾಶಾಃ ಕೃಷ್ಣದರ್ಶನೇ ।**
**ಯಮುನಾತೀರಮಾಸಾದ್ಯ ಜಗುಸ್ತಚ್ಚರಿತಂ ತಥಾ ॥** 42

**ತತೋ ದದೃಶುರಾಯಾಂತಂ ವಿಕಾಸಿಮುಖಪಂಕಜಮ್ ।**
**ಗೋಪ್ಯಸ್ತ್ರೈಲೋಕ್ಯಗೋಪ್ತಾರಂ ಕೃಷ್ಣಮಕ್ಲಿಷ್ಟಚೇಷ್ಟಿತಮ್ ॥** 43

**ಕಾಚಿದಾಲೋಕ್ಯ ಗೋವಿಂದಮಾಯಾಂತಮತಿಹರ್ಷಿತಾ ।**
**ಕೃಷ್ಣ ಕೃಷ್ಣೇತಿ ಕೃಷ್ಣೇತಿ ಪ್ರಾಹ ನಾನ್ಯದುದೀರಯತ್ ॥** 44

**ಕಾಚಿದ್ಭ್ರೂಭಂಗುರಂ ಕೃತ್ವಾ ಲಲಾಟಫಲಕಂ ಹರಿಮ್ ।**
**ವಿಲೋಕ್ಯ ನೇತ್ರಭೃಂಗಾಭ್ಯಾಂ ಪಪೌ ತನ್ಮುಖಪಂಕಜಮ್ ॥** 45

**ಕಾಚಿದಾಲೋಕ್ಯ ಗೋವಿಂದಂ ನಿಮೀಲಿತವಿಲೋಚನಾ ।**
**ತಸ್ಯೈವ ರೂಪಂ ಧ್ಯಾಯಂತೀ ಯೋಗಾರೂಢೇವ ಸಾ ಬಭೌ ॥** 46

**ತತಃ ಕಾಂಚಿತ್ಪ್ರಿಯಾಲಾಪೈಃ ಕಾಂಚಿದ್ಭ್ರೂಭಂಗವೀಕ್ಷಿತೈಃ ।**
**ನಿನ್ಯೇಽನುನಯಮನ್ಯಾಂ ಚ ಕರಸ್ಪರ್ಶೇನ ಮಾಧವಃ ॥** 47

---

ನಿರಾಶರಾಗಿ ಹಿಂದಿರುಗಿ ಯಮುನಾ ತೀರಕ್ಕೆ ಬಂದರು. ಅಲ್ಲಿ ಕೃಷ್ಣಚರಿತೆಯನ್ನು ಹಾಡಲಾರಂಭಿಸಿದರು (41-42). ಆಗ ಲೋಕತ್ರಯ ಸಂರಕ್ಷಕನೂ ಲೀಲಾಚೇಷ್ಟಿತನೂ ಆದ ಶ್ರೀಕೃಷ್ಣನು ಅರಳಿದ ಮುಖಪದ್ಮವುಳ್ಳವನಾಗಿ ಬರುತ್ತಿರುವುದನ್ನು ಗೋಪಿಯರು ಕಂಡರು! ಅವರಲ್ಲೊಬ್ಬ ಗೋಪಿಯು ಬರುತ್ತಿರುವ ಗೋವಿಂದನನ್ನು ನೋಡಿ ಹರ್ಷಾತಿರೇಕದಿಂದ 'ಕೃಷ್ಣ, ಕೃಷ್ಣ, ಕೃಷ್ಣ' ಎಂದು ಉದ್ಗರಿಸಿದಳು. ಅವಳ ಬಾಯಿಂದ ಇನ್ನಾವ ಮಾತೂ ಹೊರಡಲಿಲ್ಲ! (43-44). ಇನ್ನೊಬ್ಬಳು ತನ್ನ ವಿಶಾಲವಾದ ಹಣೆಯನ್ನು (ಪ್ರಣಯಕೋಪವಶ ಳಾಗಿ) ಹುಬ್ಬುಗಳಿಂದ ಡೊಂಕಿಸಿ ಶ್ರೀಹರಿಯನ್ನು ನೋಡುತ್ತ ನಯನ ಭೃಂಗ ಗಳಿಂದ ಆತನ ಮುಖಕಮಲದ ಸವಿಯನ್ನು ಹೀರುತ್ತಿದ್ದಳು (45). ಮತ್ತೊಬ್ಬಳು ಗೋವಿಂದನನ್ನು ಆಲೋಕಿಸಿ ಕಣ್ಣು ಮುಚ್ಚಿ ಆತನ ರೂಪವನ್ನೇ ಧ್ಯಾನಿಸುತ್ತ ಯೋಗಾರೂಢಳೋ ಎಂಬಂತೆ ಕಾಣಿಸಿದಳು! (46). ಅನಂತರ ಮಾಧವನು ಒಬ್ಬಳನ್ನು ಪ್ರಿಯಾಲಾಪಗಳಿಂದಲೂ ಇನ್ನೊಬ್ಬಳನ್ನು ಓರೆನೋಟಗಳಿಂದ ನೋಡುತ್ತಲೂ ಮಗದೊಬ್ಬಳನ್ನು ಕೈಯಿಂದ ಮುಟ್ಟಿಯೂ ಸಂತೈಸಿದನು.

**ತಾಭಿಃ ಪ್ರಸನ್ನಚಿತ್ತಾಭಿರ್ಗೋಪೀಭಿಸ್ಸಹ ಸಾದರಮ್ ।**
**ರರಾಸ ರಾಸಗೋಷ್ಠೀಭಿರುದಾರಚರಿತೋ ಹರಿಃ ॥** 48

**ರಾಸಮಂಡಲಬಂಧೋಽಪಿ ಕೃಷ್ಣಪಾರ್ಶ್ವಮನುಜ್ಝತಾ ।**
**ಗೋಪೀಜನೇನ ನೈವಾಭೂದೇಕಸ್ಥಾನಸ್ಥಿರಾತ್ಮನಾ ॥** 49

**ಹಸ್ತೇನ ಗೃಹ್ಯ ಚೈಕೈಕಾಂ ಗೋಪೀನಾಂ ರಾಸಮಂಡಲಮ್ ।**
**ಚಕಾರ ತತ್ಕರಸ್ಪರ್ಶನಿಮೀಲಿತದೃಶಂ ಹರಿಃ ॥** 50

**ತತಃ ಪ್ರವವೃತೇ ರಾಸಶ್ಚಲದ್ವಲಯನಿಸ್ವನಃ ।**
**ಅನುಯಾತಶರತ್ಕಾವ್ಯಗೇಯಗೀತಿರನುಕ್ರಮಾತ್ ॥** 51

---

ಆಮೇಲೆ ಅವರೆಲ್ಲರೂ ಪ್ರಸನ್ನಚಿತ್ತರಾಗಲು ಉದಾರಚರಿತನಾದ ಶ್ರೀಕೃಷ್ಣನು ಆದರದಿಂದ ಗೋಪಿಯರೊಡನೆ ರಾಸಕ್ರೀಡೆಗಳಿಂದ ರಮಿಸಿದನು (47-48). ಆ ಸಮಯದಲ್ಲಿ ಯಾವ ಗೋಪಿಯೂ ಕೃಷ್ಣನ ಪಾರ್ಶ್ವವನ್ನು ಬಿಟ್ಟು ಚಲಿಸಲು ಒಪ್ಪಲಿಲ್ಲ. ಎಲ್ಲರೂ ಆತನ ಬಳಿಯೇ ಸ್ಥಿರವಾಗಿ ನಿಂತುದರಿಂದ ರಾಸಮಂಡಲ ವನ್ನು ರಚಿಸಲಿಕ್ಕಾಗಲಿಲ್ಲ. ಆಗ ಕೃಷ್ಣನು ಗೋಪಿಯರಲ್ಲಿ ಒಬ್ಬೊಬ್ಬಳ ಕೈಯನ್ನೂ ಹಿಡಿದುಕೊಂಡು ರಾಸ ಮಂಡಲವನ್ನು ರಚಿಸಿದನು. ಹೇಗೆಂದರೆ, ಕೃಷ್ಣನು ಕೈ ಹಿಡಿದಾಗ ಒಬ್ಬೊಬ್ಬಳೂ ಆನಂದಪರವಶಳಾಗಿ ಕಣ್ಣು ಮುಚ್ಚಿಕೊಂಡು ಬಿಡುತ್ತಿದ್ದಳು! ಅವಳ ಕೈಯನ್ನು ಇನ್ನೊಬ್ಬಳ ಕೈಗೆ ಕೊಟ್ಟಾಗ, ಅವಳು ಕೃಷ್ಣನೆಂದೇ ತಿಳಿದು ಆ ಗೋಪಿಯು ಆನಂದದಿಂದ ಕಣ್ಣುಮುಚ್ಚಿಕೊಂಡೇ ಇರುತ್ತಿದ್ದಳು!* (49-50). ಅನಂತರ ರಾಸಕ್ರೀಡೆ ಪ್ರಾರಂಭವಾಯಿತು. ಅಲ್ಲಾಡುವ ಕೈ ಬಳೆಗಳ ಇಂಚರ ಹರಡಿತು. ಶರತ್ಕಾಲದ ವರ್ಣನೆಯಿರುವ ಕಾವ್ಯಗೇಯದ ಗೀತಧ್ವನಿ ಕ್ರಮವಾಗಿ ಹಿಂಬಾಲಿಸಿತು! ಕೃಷ್ಣನು ಶರತ್ಕಾಲದ ಚಂದ್ರನನ್ನೂ ಬೆಳದಿಂಗಳನ್ನೂ ಕುಮುದವನ್ನೂ ಬಣ್ಣಿಸುವ ಹಾಡನ್ನು ಹಾಡಲಾರಂಭಿಸಿದನು! ಗೋಪಿಯ

---

* ಮೂಲದ ತಾತ್ಪರ್ಯವನ್ನು ಇಲ್ಲಿ ವಿವರಿಸಿ ಬರೆಯಲಾಗಿದೆ. ಶ್ರೀಧರೀಯ ವ್ಯಾಖ್ಯಾನದಲ್ಲಿ ಇದು ಸ್ಪಷ್ಟವಾಗಿದೆ.

**ಕೃಷ್ಣಶ್ಶರಚ್ಚಂದ್ರಮಸಂ ಕೌಮುದೀಂ ಕುಮುದಾಕರಮ್ ।**
**ಜಗೌ ಗೋಪೀಜನಸ್ತ್ವೇಕಂ ಕೃಷ್ಣನಾಮ ಪುನಃ ಪುನಃ ॥ 52**

**ಪರಿವೃತ್ತಿಶ್ರಮೇಣೈಕಾ ಚಲದ್ವಲಯಲಾಪಿನೀಮ್ ।**
**ದದೌ ಬಾಹುಲತಾಂ ಸ್ಕಂಧೇ ಗೋಪೀ ಮಧುನಿಘಾತಿನಃ ॥ 53**

**ಕಾಚಿತ್ ಪ್ರವಿಲಸದ್ಬಾಹುಃ ಪರಿರಭ್ಯ ಚುಚುಂಬ ತಮ್ ।**
**ಗೋಪೀ ಗೀತಸ್ತುತಿವ್ಯಾಜಾನ್ನಿಪುಣಾ ಮಧುಸೂದನಮ್ ॥ 54**

**ಗೋಪೀಕಪೋಲಸಂಶ್ಲೇಷಮಭಿಗಮ್ಯ ಹರೇರ್ಭುಜೌ ।**
**ಪುಲಕೋದ್ಗಮಸಸ್ಯಾಯ ಸ್ವೇದಾಂಬುಘನತಾಂ ಗತೌ ॥ 55**

**ರಾಸಗೇಯಂ ಜಗೌ ಕೃಷ್ಣೋ ಯಾವತ್ತಾರತರಧ್ವನಿಃ ।**
**ಸಾಧು ಕೃಷ್ಣೇತಿ ಕೃಷ್ಣೇತಿ ತಾವತ್ತಾ ದ್ವಿಗುಣಂ ಜಗುಃ ॥ 56**

---

ರಾದರೋ 'ಕೃಷ್ಣ, ಕೃಷ್ಣ!' ಎಂದು ಅವನ ನಾಮವನ್ನೇ ಮತ್ತೆ ಮತ್ತೆ ಹಾಡುತ್ತಿದ್ದರು! (51-52). ಒಬ್ಬಳು ರಾಸಮಂಡಲದಲ್ಲಿ ಸುತ್ತಿ ಆಯಾಸಗೊಂಡು ಬಳೆಗಳು ಝಣಝಣ ಎನ್ನುತ್ತಿರುವ ಬಾಹುಲತೆಯನ್ನು ಕೃಷ್ಣನ ಹೆಗಲ ಮೇಲಿರಿಸಿದಳು. ಇನ್ನೊಬ್ಬ ಚತುರೆಯಾದ ಗೋಪಿಯು ಮಧುಸೂದನನ ಸಂಗೀತವನ್ನು ಹೊಗಳುವ ನೆವದಿಂದ ತೋಳಿನಿಂದ ಬಾಚಿ ಅಪ್ಪಿಕೊಂಡು ಅವನನ್ನು ಚುಂಬಿಸಿದಳು! (53-54). ಶ್ರೀಹರಿಯ ಭುಜಗಳು ಗೋಪಿಯರ ಕಪೋಲಗಳನ್ನು ತಾಕಿ ಸಾತ್ತ್ವಿಕಭಾವದಿಂದ ಬೆವರಿದವು. ಗೋಪಿಯರ ಕಪೋಲಗಳಲ್ಲಿ ಪುಲಕಾವಲಿಗಳೆಂಬ ಸಸ್ಯಗಳು ಮೊಳೆಯಲು ಈತನ ಭುಜಗಳು ನೀರು ಸುರಿಸುವ ಮೋಡದಂತಾದವು! (55). ಕೃಷ್ಣನು ರಾಸಲೀಲೋಚಿತವಾದ ಗೀತವನ್ನು ಗಟ್ಟಿಯಾಗಿ ಹಾಡಲಾರಂಭಿಸಲು, ಗೋಪಿಯರು "ಭೇಷ್, ಕೃಷ್ಣ! ಆ ಆ ಕೃಷ್ಣ!" ಎಂದು ಎರಡರಷ್ಟು ಗಟ್ಟಿಯಾಗಿ ಧ್ವನಿಮಾಡುತ್ತಿದ್ದರು! ಕೃಷ್ಣನು ಮುಂದೆ ಮುಂದೆ ಹೋದಾಗ ಗೋಪಾಂಗನೆಯರು ಅವನ ಹಿಂದೆ ಹಿಂದೆ ಹೋಗುತ್ತಿದ್ದರು. ಅವನು ತಿರುಗಿ ಹೊರಟಾಗ ಆತನ ಮುಂದೆ ಮುಂದೆ

**ಗತೇಽನುಗಮನಂ ಚಕ್ರುರ್ವಲನೇ ಸಮ್ಮುಖಂ ಯಯುಃ।**
**ಪ್ರತಿಲೋಮಾನುಲೋಮಾಭ್ಯಾಂ ಭೇಜುರ್ಗೋಪಾಂಗನಾ**
**ಹರಿಮ್॥** 57

**ಸ ತಥಾ ಸಹ ಗೋಪೀಭೀ ರರಾಸ ಮಧುಸೂದನಃ।**
**ಯಥಾಬ್ದಕೋಟಿಪ್ರತಿಮಃ ಕ್ಷಣಸ್ತೇನ ವಿನಾಽಭವತ್॥** 58

**ತಾ ವಾರ್ಯಮಾಣಾಃ ಪತಿಭಿಃ ಪಿತೃಭಿರ್ಭ್ರಾತೃಭಿಸ್ತಥಾ।**
**ಕೃಷ್ಣಂ ಗೋಪಾಂಗನಾ ರಾತ್ರೌ ರಮಯಂತಿ ರತಿಪ್ರಿಯಾಃ॥** 59

**ಸೋಽಪಿ ಕೈಶೋರಕವಯೋ ಮಾನಯನ್ ಮಧುಸೂದನಃ।**
**ರೇಮೇ ತಾಭಿರಮೇಯಾತ್ಮಾ ಕ್ಷಪಾಸು ಕ್ಷಪಿತಾಹಿತಃ॥** 60

**ತದ್ಭರ್ತೃಷು ತಥಾ ತಾಸು ಸರ್ವಭೂತೇಷು ಚೇಶ್ವರಃ।**
**ಆತ್ಮಸ್ವರೂಪರೂಪೋಽಸೌ ವ್ಯಾಪೀ ವಾಯುರಿವ ಸ್ಥಿತಃ॥** 61

---

ಚಲಿಸುತ್ತಿದ್ದರು. ಹೀಗೆ ಅನುಲೋಮ-ಪ್ರತಿಲೋಮಗಳಿಂದ ಹರಿಯೊಡನೆ ನರ್ತನಮಾಡಿದರು (56-57). ಶ್ರೀ ಕೃಷ್ಣನು ಗೋಪಿಯರೊಡನೆ ಹೇಗೆ ರಾಸಕ್ರೀಡೆಯಾಡಿದನೆಂದರೆ, ಅವನಿಲ್ಲದಿದ್ದರೆ ಗೋಪಿಯರಿಗೆ ಒಂದು ಕ್ಷಣವೂ ಕೋಟಿವರ್ಷಗಳಿಗೆ ಸಮವಾಗಿ ಕಾಣಿಸಬೇಕು, ಹಾಗೆ ಕ್ರೀಡಿಸಿದನು! (58). ತಮ್ಮ ಪತಿಗಳೂ, ತಂದೆತಾಯಂದಿರೂ ಸೋದರರೂ ಬೇಡವೆಂದರೂ ಸಹ ಆ ಗೋಪಾಂಗನೆಯರು ಕ್ರೀಡಾಲೋಲುಪರಾಗಿ ರಾತ್ರಿಯ ಹೊತ್ತು ಕೃಷ್ಣನೊಡನೆ ವಿಹರಿಸತೊಡಗಿದರು. ಶತ್ರುವಿಧ್ವಂಸಕನೂ ಅಚಿಂತ್ಯಮಹಿಮನೂ ಆದ ಮಧುಸೂದನನೂ ಸಹ ತನ್ನ ಕಿಶೋರ ವಯಸ್ಸಿನ ಚಾಪಲ್ಯವನ್ನು ಮೆರೆಸುತ್ತ ಅವರೊಡನೆ ವಿಹರಿಸುತ್ತಿದ್ದನು (59-60). ಈಶ್ವರನೂ ಪರಮಾತ್ಮಸ್ವರೂಪನೂ ವಿಭುವೂ ಆದ ಶ್ರೀ ಕೃಷ್ಣನು ಗೋಪಿಯರಲ್ಲಿಯೂ ಅವರ ಗಂಡಂದಿರಲ್ಲಿಯೂ, ಅಷ್ಟೇಕೆ, ಸರ್ವಭೂತಗಳಲ್ಲಿಯೂ ವಾಯುವಿನಂತೆ ವ್ಯಾಪಕನಾಗಿರತಕ್ಕವನು (61). ಯಾವ ರೀತಿಯಲ್ಲಿ ಆಕಾಶ, ಅಗ್ನಿ, ಪೃಥ್ವಿ,

**ಯಥಾ ಸಮಸ್ತಭೂತೇಷು ನಭೋಽಗ್ನಿಃ ಪೃಥಿವೀ ಜಲಮ್।**
**ವಾಯುಶ್ಚಾತ್ಮಾ ತಥೈವಾಸೌ ವ್ಯಾಪ್ಯ ಸರ್ವಮವಸ್ಥಿತಃ॥** 62

**ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ತ್ರಯೋದಶೋಽಧ್ಯಾಯಃ**

---

ಜಲ, ವಾಯು ಮತ್ತು ಆತ್ಮನು ಸಮಸ್ತ ಚರಾಚರ ವಸ್ತುಗಳಲ್ಲಿಯೂ ವ್ಯಾಪಿಸಿ ಕೊಂಡಿರುತ್ತವೋ ಹಾಗೆ ಶ್ರೀಕೃಷ್ಣನು ಸಕಲ ಪದಾರ್ಥಗಳನ್ನು ವ್ಯಾಪಿಸಿ ಕೊಂಡಿರುತ್ತಾನೆ* (62).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಹದಿಮೂರನೆಯ ಅಧ್ಯಾಯ ಮುಗಿಯಿತು.



---

* ಭಗವಂತನು ಸರ್ವವ್ಯಾಪಿಯಾದ್ದರಿಂದ ಪರಸ್ತ್ರೀಸ್ಪರ್ಶದೋಷವಿಲ್ಲ. ಭಕ್ತರ ಪಾಪವನ್ನು ಪರಿಹರಿಸಬಲ್ಲವನಾದ್ದರಿಂದ ಗೋಪಿಯರಿಗೂ ಪಾಪದ ಲೇಪವಿಲ್ಲ—ಎಂದು ಅಭಿಪ್ರಾಯ.

## ಚತುರ್ದಶೋಽಧ್ಯಾಯಃ

ಪ್ರದೋಷಾಗ್ರೇ ಕದಾಚಿತ್ತು ರಾಸಾಸಕ್ತೇ ಜನಾರ್ದನೇ।
ತ್ರಾಸಯನ್ ಸಮದೋ ಗೋಷ್ಠಮರಿಷ್ಟಸ್ಸಮುಪಾಗಮತ್॥ 1

ಸ ತೋಯತೋಯದಚ್ಛಾಯಸ್ತೀಕ್ಷ್ಣಶೃಂಗೋಽರ್ಕಲೋಚನಃ।
ಖುರಾಗ್ರಪಾತೈರತ್ಯರ್ಥಂ ದಾರಯನ್ ಧರಣೀತಲಮ್॥ 2

ಲೇಲಿಹಾನಸ್ಸನಿಷ್ಪೇಷಂ ಜಿಹ್ವಯೋಷ್ಠೌ ಪುನಃ ಪುನಃ।
ಸಂರಂಭಾವಿದ್ಧಲಾಂಗೂಲಃ ಕಠಿನಸ್ಕಂಧಬಂಧನಃ॥ 3

ಉದಗ್ರಕಕುದಾಭೋಗಪ್ರಮಾಣೋ ದುರತಿಕ್ರಮಃ।
ವಿಣ್ಮೂತ್ರಲಿಪ್ತಪೃಷ್ಠಾಂಗೋ ಗವಾಮುದ್ವೇಗಕಾರಕಃ॥ 4

---

## ಅಧ್ಯಾಯ 14

ಶ್ರೀಕೃಷ್ಣನಿಂದ ವೃಷಭಾಸುರನ ವಧೆ.

ಪರಾಶರಮುನಿಗಳು ಹೇಳಿದರು: ಒಂದು ದಿನ ಸಾಯಂಕಾಲ ಕಳೆದ ಮೇಲೆ ಜನಾರ್ದನನು ರಾಸಲೀಲೆಯಲ್ಲಿ ಮಗ್ನನಾಗಿರುವಾಗ, ಅರಿಷ್ಟನೆಂಬ ಮದೋನ್ಮತ್ತನಾದ ಅಸುರನು (ವೃಷಭರೂಪವನ್ನು ಧರಿಸಿ) ಜನರನ್ನು ಹೆದರಿಸಿ ಕಂಗಾಲುಗೊಳಿಸುತ್ತ ವ್ರಜವನ್ನು ಪ್ರವೇಶಿಸಿದನು (1). ಆತನ ದೇಹಕಾಂತಿಯು ಸಜಲ ಜಲಧರನಂತೆ ಕಪ್ಪಾಗಿತ್ತು. ಕೊಂಬುಗಳು ಚೂಪಾಗಿದ್ದವು. ಸೂರ್ಯ ಮಂಡಲದಂತೆ ಕಣ್ಣುಗಳು ಹೊಳೆಯುತ್ತಿದ್ದವು. ಖುರಾಗ್ರಗಳಿಂದ ನೆಲವನ್ನು ಸೀಳುತ್ತ ಆ ಹೋರಿಯು ನುಗ್ಗಿತು (2). ಅದು ನಾಲಗೆಯಿಂದ ತುಟಿಗಳನ್ನು ಸಿಳ್ಳನೆ ಮತ್ತೆ ಮತ್ತೆ ಚಪ್ಪರಿಸುತ್ತಲಿತ್ತು. ಸಿಟ್ಟಿನಿಂದ ಬಾಲವನ್ನು ನಿಮಿರಿಸಿದ ಆ ವೃಷಭದ ಭುಜಾಗ್ರಗಳು ಗಟ್ಟಿ ಮುಟ್ಟಿಯಾಗಿ ಪೆಡಸಾಗಿದ್ದವು. ವಿಶಾಲವಾದ ಮುಡದಿಂದ (ಹಿಳಲು) ಕೂಡಿದ ಆ ಎತ್ತು ಬಹಳ ಎತ್ತರವಾಗಿತ್ತು. ಅದರ ಪೃಷ್ಠ ಭಾಗವು ಸಗಣಿ ಮೂತ್ರಗಳಿಂದ ಲಿಪ್ತವಾಗಿದ್ದು, ಹಸುಗಳಿಗೆ ಹೆದರಿಕೆಯುಂಟು ಮಾಡುವ ಕ್ರೂರಾಕೃತಿಯಿಂದ ವೃಷಭವು ಕೂಡಿತ್ತು (3-4). ನೀಳವಾದ ಕತ್ತು,

ಪ್ರಲಂಬಕಂಠೋಽತಿಮುಖಸ್ತರುಖಾತಾಂಕಿತಾನನಃ।
ಪಾತಯನ್ ಸ ಗವಾಂ ಗರ್ಭಾನ್ ದೈತ್ಯೋ ವೃಷಭ ರೂಪಧೃಕ್॥ 5
ಸೂದಯಂಸ್ತಾಪಸಾನುಗ್ರೋ ವನಾನಟತಿ ಯಸ್ಸದಾ॥ 6

ತತಸ್ತಮತಿಘೋರಾಕ್ಷಮವೇಕ್ಷ್ಯಾತಿಭಯಾತುರಾಃ।
ಗೋಪಾ ಗೋಪಸ್ತ್ರಿಯಶ್ಚೈವ ಕೃಷ್ಣ ಕೃಷ್ಣೇತಿ ಚುಕ್ರುಶುಃ॥ 7

ಸಿಂಹನಾದಂ ತತಶ್ಚಕ್ರೇ ತಲಶಬ್ದಂ ಚ ಕೇಶವಃ।
ತಚ್ಛಬ್ದಶ್ರವಣಾಚ್ಚಾಸೌ ದಾಮೋದರಮುಖಾಯಯೌ॥ 8

ಅಗ್ರನ್ಯಸ್ತವಿಷಾಣಾಗ್ರಃ ಕೃಷ್ಣಕುಕ್ಷಿಕೃತೇಕ್ಷಣಃ।
ಅಭ್ಯಧಾವತ ದುಷ್ಟಾತ್ಮಾ ಕೃಷ್ಣಂ ವೃಷಭದಾನವಃ॥ 9

ಆಯಾಂತಂ ದೈತ್ಯವೃಷಭಂ ದೃಷ್ಟ್ವಾ ಕೃಷ್ಣೋ ಮಹಾಬಲಃ।
ನ ಚಚಾಲ ತದಾ ಸ್ಥಾನಾದವಜ್ಞಾಸ್ಮಿತಲೀಲಯಾ॥ 10

---

ದೊಡ್ಡ ಬಾಯಿಗಳಿಂದ ಕೂಡಿದ ಆ ಹೋರಿಯ ಮುಖದ ಮೇಲೆ ಮರವನ್ನು ತಿಕ್ಕಿ ತೀಡಿದ ಗುರುತುಗಳಿದ್ದವು. ವೃಷಭವೇಷದಲ್ಲಿದ್ದ ಆ ದೈತ್ಯನು ಗೋವುಗಳಿಗೆ ಗರ್ಭಸ್ರಾವವಾಗುವಂತೆ ಗುಟರುಹಾಕುತ್ತಿದ್ದನು. ಸದಾ ಅರಣ್ಯದಲ್ಲಿ ಅಲೆಯುತ್ತ ತಪಸ್ವಿಗಳನ್ನು ಕೊಂದು ಹಾಕುತ್ತಿದ್ದ ಆತನು ವೃಷಭಾಕೃತಿಯನ್ನು ಧರಿಸಿ ವ್ರಜದೊಳಗೆ ನುಗ್ಗಿದನು (5-6). ಅತಿ ಘೋರವಾದ ಕೆಂಗಣ್ಣಿನ ಆ ಹೋರಿಯನ್ನು ನೋಡಿ ಗೋಪ ಗೋಪಿಯರು ದಿಗಿಲಿನಿಂದ ಕಂಗೆಟ್ಟು 'ಕೃಷ್ಣ, ಕೃಷ್ಣ' ಎಂದು ಕೂಗಿಕೊಂಡರು. ಆಗ ಶ್ರೀಕೃಷ್ಣನು ಸಿಂಹನಾದವನ್ನು ಮಾಡಿ ಚಪ್ಪಾಳೆ ಹಾಕಿದನು. ಆ ಶಬ್ದವನ್ನು ಕೇಳಿದೊಡನೆ ವೃಷಭವು ದಾಮೋದರನೆಡೆಗೆ ಧಾವಿಸಿತು (7-8). ದುಷ್ಟಾತ್ಮನಾದ ವೃಷಭ ದೈತ್ಯನು ಕೊಂಬುಗಳನ್ನು ಮುಂದೆ ಚಾಚಿಕೊಂಡು ಕೃಷ್ಣನ ಹೊಟ್ಟೆಯನ್ನೇ ಗುರಿಯಿಟ್ಟು ನೋಡುತ್ತ ಆತನಿದ್ದೆಡೆಗೆ ಧಾವಿಸಿ ಬಂದನು. ಧಾವಿಸಿ ಬರುತ್ತಿದ್ದ ದೈತ್ಯ ವೃಷಭವನ್ನು ನೋಡಿ ಬಲಾಢ್ಯನಾದ ಶ್ರೀಕೃಷ್ಣನು ತಿರಸ್ಕಾರದಿಂದ ಮುಗುಳ್ನಗೆ ಬೀರುತ್ತ ನಿಂತಲ್ಲಿಯೇ ನಿಂತಿದ್ದನು, ಸ್ವಲ್ಪವೂ ಚಲಿಸಲಿಲ್ಲ (9-10). ಹತ್ತಿರ ಬಂದೊಡನೆ

ಆಸನ್ನಂ ಚೈವ ಜಗ್ರಾಹ ಗ್ರಾಹವನ್ಮಧುಸೂದನಃ।
ಜಘಾನ ಜಾನುನಾ ಕುಕ್ಷೌ ವಿಷಾಣಗ್ರಹಣಾಚಲಮ್॥ 11

ತಸ್ಯ ದರ್ಪಬಲಂ ಭಂಕ್ತ್ವಾ ಗೃಹೀತಸ್ಯ ವಿಷಾಣಯೋಃ।
ಅಪೀಡಯದರಿಷ್ಟಸ್ಯ ಕಂಠಂ ಕ್ಲಿನ್ನಮಿವಾಂಬರಮ್॥ 12

ಉತ್ಪಾಟ್ಯ ಶೃಂಗಮೇಕಂ ತು ತೇನೈವಾತಾಡಯತ್ತತಃ।
ಮಮಾರ ಸ ಮಹಾದೈತ್ಯೋ ಮುಖಾಚ್ಛೋಣಿತಮುದ್ವಮನ್॥ 13

ತುಷ್ಟುವುರ್ನಿಹತೇ ತಸ್ಮಿನ್ ದೈತ್ಯೇ ಗೋಪಾ ಜನಾರ್ದನಮ್।
ಜಂಭೇ ಹತೇ ಸಹಸ್ರಾಕ್ಷಂ ಪುರಾ ದೇವಗಣಾ ಯಥಾ॥ 14

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಚತುರ್ದಶೋऽಧ್ಯಾಯಃ

---

ಮಧುಸೂದನನು ಮೊಸಳೆಯಂತೆ ಹೋರಿಯ ಕೊಂಬುಗಳನ್ನು ಗಪ್ಪನೆ ಹಿಡಿದನು. ತಿಣುಕಾಡಲಾರದೆ ನಿಂತಿದ್ದ ಅದರ ಹೊಟ್ಟೆಗೆ ಮೊಳಕಾಲಿಂದ ಒದ್ದನು. ಹೀಗೆ ಕೊಂಬುಗಳನ್ನು ಹಿಡಿದು ನಿಲ್ಲಿಸಿ ಅರಿಷ್ಟಾಸುರನ ದರ್ಪಬಲ ಗಳನ್ನು ನುಚ್ಚುನೂರು ಮಾಡಿದ ಮೇಲೆ, ಶ್ರೀ ಕೃಷ್ಣನು ಆತನ ಕತ್ತನ್ನು, ಒದ್ದೆ ಬಟ್ಟೆಯನ್ನು ಹಿಂಡುವಂತೆ ಹಿಂಡಿಬಿಟ್ಟನು! (11-12). ವೃಷಭದ ಒಂದು ಕೊಂಬನ್ನು ಮುರಿದು ಕಿತ್ತು ಅದರಿಂದಲೇ ಬಡಿಯಲಾಗಿ ಆ ಮಹಾದೈತ್ಯನು ಬಾಯಿಂದ ನೆತ್ತರನ್ನು ಕಕ್ಕುತ್ತ ಸತ್ತುಬಿದ್ದನು. ಆ ದೈತ್ಯನು ಈ ರೀತಿಯಲ್ಲಿ ಸಾಯಲಾಗಿ ಗೋಪಾಲರು ಜನಾರ್ದನನನ್ನು, ಹಿಂದೆ ಜಂಭಾಸುರನು ಹತನಾದಾಗ ದೇವಗಣಗಳು ದೇವೇಂದ್ರನನ್ನು ಸ್ತುತಿಸಿದಂತೆ ಸ್ತುತಿಸಿದರು (13-14).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.



## ಪಂಚದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಕಕುದ್ಮತಿ ಹತೇಽರಿಷ್ಟೇ ಧೇನುಕೇ ವಿನಿಪಾತಿತೇ।**
**ಪ್ರಲಂಬೇ ನಿಧನಂ ನೀತೇ ಧೃತೇ ಗೋವರ್ಧನಾಚಲೇ॥** 1

**ದಮಿತೇ ಕಾಲಿಯೇ ನಾಗೇ ಭಗ್ನೇ ತುಂಗದ್ರುಮದ್ವಯೇ।**
**ಹತಾಯಾಂ ಪೂತನಾಯಾಂ ಚ ಶಕಟೇ ಪರಿವರ್ತಿತೇ॥** 2

**ಕಂಸಾಯ ನಾರದಃ ಪ್ರಾಹ ಯಥಾವೃತ್ತಮನುಕ್ರಮಾತ್।**
**ಯಶೋದಾದೇವಕೀಗರ್ಭಪರಿವೃತ್ತ್ಯಾದ್ಯಶೇಷತಃ॥** 3

**ಶ್ರುತ್ವಾ ತತ್ಸಕಲಂ ಕಂಸೋ ನಾರದಾದ್ದೇವದರ್ಶನಾತ್।**
**ವಸುದೇವಂ ಪ್ರತಿ ತದಾ ಕೋಪಂ ಚಕ್ರೇ ಸುದುರ್ಮತಿಃ॥** 4

---

## ಅಧ್ಯಾಯ 15

ಬಲರಾಮ ಕೃಷ್ಣರನ್ನು ಮಧುರೆಗೆ ಕರೆತರುವುದಕ್ಕಾಗಿ
ಕಂಸನು ಅಕ್ರೂರನನ್ನು ಕಳಿಸುವುದು.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಈ ಪ್ರಕಾರವಾಗಿ ವೃಷಭವೇಷವನ್ನು ಧರಿಸಿ ಬಂದ ಅರಿಷ್ಟಾಸುರನ ವಧೆಯಾಯಿತು. ಧೇನುಕಾಸುರನ ಹನನವಾಯಿತು. ಪ್ರಲಂಬದೈತ್ಯನನ್ನು ಕೊಲ್ಲಲಾಯಿತು. ಗೋವರ್ಧನವನ್ನು ಎತ್ತಲಾಯಿತು (1). ಕಾಲಿಯ ಸರ್ಪವನ್ನು ದಮನಗೊಳಿಸಲಾಯಿತು. ಉನ್ನತವಾದ ವೃಕ್ಷದ್ವಯಗಳನ್ನು ಉರುಳಿಸಲಾಯಿತು. ಪೂತನೆ ಸತ್ತಳು. ಶಕಟಾಸುರನು ಉರುಳಿದನು (2). ಇವೆಲ್ಲವನ್ನೂ ನಾರದರು ಹೋಗಿ ಕಂಸನಿಗೆ ಅನುಕ್ರಮವಾಗಿ ತಿಳಿಸಿದರು! ಯಶೋದಾ ದೇವಕಿಯರ ಗರ್ಭದಲ್ಲಿ ಜನಿಸಿದ ಶಿಶುಗಳ ಪರಿವರ್ತನೆ ನಡೆದಿದೆಯೆಂಬುದನ್ನು ಹಿಡಿದು ಸರ್ವವನ್ನೂ ಕಂಸನಿಗೆ ಹೇಳಿದರು! (3). ದಿವ್ಯಚಕ್ಷುನಿಗಳಾದ ನಾರದರ ಬಾಯಿಂದ ಸಕಲ ವೃತ್ತಾಂತವನ್ನೂ ತಿಳಿದು ದುರುಳನಾದ ಕಂಸನು ವಸುದೇವನ ಮೇಲೆ ಸಿಡಿದು ಬಿದ್ದನು.

**ಸೋಽತಿಕೋಪಾದುಪಾಲಭ್ಯ ಸರ್ವಯಾದವಸಂಸದಿ।**
**ಜಗರ್ಹ ಯಾದವಾಂಶ್ಚೈವ ಕಾರ್ಯಂ ಚೈತದಚಿಂತಯತ್॥** 5

**ಯಾವನ್ನ ಬಲಮಾರೂಢೌ ರಾಮಕೃಷ್ಣೌ ಸುಬಾಲಕೌ।**
**ತಾವದೇವ ಮಯಾ ವಧ್ಯಾವಸಾಧ್ಯೌ ರೂಢಯೌವನೌ॥** 6

**ಚಾಣೂರೋಽತ್ರ ಮಹಾವೀರ್ಯೋ ಮುಷ್ಟಿಕಶ್ಚ ಮಹಾಬಲಃ।**
**ಏತಾಭ್ಯಾಂ ಮಲ್ಲಯುದ್ಧೇನ ಮಾರಯಿಷ್ಯಾಮಿ ದುರ್ಮತೀ॥** 7

**ಧನುರ್ಮಹಮಹಾಯೋಗವ್ಯಾಜೇನಾನೀಯ ತೌ ವ್ರಜಾತ್।**
**ತಥಾ ತಥಾ ಯತಿಷ್ಯಾಮಿ ಯಾಸ್ಯೇತೇ ಸಂಕ್ಷಯಂ ಯಥಾ॥** 8

**ಶ್ವಫಲ್ಕತನಯಂ ಶೂರಮಕ್ರೂರಂ ಯದುಪುಂಗವಮ್।**
**ತಯೋರಾನಯನಾರ್ಥಾಯ ಪ್ರೇಷಯಿಷ್ಯಾಮಿ ಗೋಕುಲಮ್॥** 9

**ವೃಂದಾವನಚರಂ ಘೋರಮಾದೇಕ್ಷ್ಯಾಮಿ ಚ ಕೇಶಿನಮ್।**
**ತತ್ರೈವಾಸಾವತಿಬಲಸ್ತಾವುಭೌ ಘಾತಯಿಷ್ಯತಿ॥** 10

---

ಅವನು ರೋಷಾವೇಷದಿಂದ ಸಕಲ ಯಾದವರೆದುರಿಗೆ ವಸುದೇವನನ್ನೂ ಯಾದವರನ್ನೂ ಮನಬಂದಂತೆ ಬಯ್ದು ಮುಂದಿನ ಕೃತ್ಯವನ್ನಿಂತು ಚಿಂತಿಸಿದನು (4-5): "ರಾಮಕೃಷ್ಣರು ಇನ್ನೂ ಚಿಕ್ಕ ಬಾಲಕರು, ಬಲಾಢ್ಯರಾಗುವುದರೊಳಗೆ ಅವರನ್ನು ನಾನು ಮುಗಿಸಿಬಿಡಬೇಕು. ಅವರು ಯುವಕರಾದಮೇಲೆ ಅಸಾಧ್ಯ ರಾಗುವರು. ನಮ್ಮ ಚಾಣೂರನು ಮಹಾವೀರ, ಮುಷ್ಟಿಕನೂ ಅತ್ಯಂತ ಬಲಶಾಲಿ. ಇವರಿಬ್ಬರೊಡನೆ ಮಲ್ಲಯುದ್ಧವನ್ನು ಯೋಜಿಸಿ, ತುಂಟರಾದ ರಾಮಕೃಷ್ಣರನ್ನು ಕೊಲ್ಲಿಸುವೆನು! (6-7). ಈಗ ಧನುರ್ಯಜ್ಞವೆಂಬ ದೊಡ್ಡ ಹಬ್ಬದ ಯೋಗ ಒದಗಿದೆ. ಇದರ ನೆವದಲ್ಲಿ ಅವರಿಬ್ಬರನ್ನೂ ವ್ರಜದಿಂದ ಕರೆಸುವೆನು. ಅವರು ನಾಶವಾಗಲು ಏನೇನು ಮಾಡಬೇಕೋ ಅದೆಲ್ಲವನ್ನೂ ಮಾಡಲು ಯತ್ನಿಸುವೆನು (8). ಶ್ವಫಲ್ಕನ ಮಗನಾದ ಅಕ್ರೂರನು ಶೂರನೆಂದೂ ಯದುಶ್ರೇಷ್ಠನೆಂದೂ ಖ್ಯಾತನಾಗಿದ್ದಾನೆ. ಅವರಿಬ್ಬರನ್ನು ಕರೆತರುವಂತೆ ಈತನನ್ನು ಗೋಕುಲಕ್ಕೆ ಕಳಿಸುವೆನು. ಅಲ್ಲದೆ ಘೋರನಾದ ಕೇಶಿರಾಕ್ಷಸನು ವೃಂದಾವನದ ಬಳಿ ತಿರುಗುತ್ತಿದ್ದಾನೆ. ಅಲ್ಲಿಯೇ ಅವರಿಬ್ಬರನ್ನು ಕೊಂದುಬಿಡಬೇಕೆಂದು ಆತನಿಗೆ ಆದೇಶವನ್ನು ಕೊಡುತ್ತೇನೆ (9-10). ಮತ್ತು ಕುವಲಯಾ

**ಗಜಃ ಕುವಲಯಾಪೀಡೋ ಮತ್ಸಕಾಶಮಿಹಾಗತೌ।**
**ಘಾತಯಿಷ್ಯತಿ ವಾ ಗೋಪೌ ವಸುದೇವಸುತಾವುಭೌ॥** 11

*ಶ್ರೀಪರಾಶರ ಉವಾಚ:*

**ಇತ್ಯಾಲೋಚ್ಯ ಸ ದುಷ್ಟಾತ್ಮಾ ಕಂಸೋ ರಾಮಜನಾರ್ದನೌ।**
**ಹಂತುಂ ಕೃತಮತಿರ್ವೀರಾವಕ್ರೂರಂ ವಾಕ್ಯಮಬ್ರವೀತ್॥** 12

*ಕಂಸ ಉವಾಚ:*

**ಭೋ ಭೋ ದಾನಪತೇ ವಾಕ್ಯಂ ಕ್ರಿಯತಾಂ ಪ್ರೀತಯೇ ಮಮ।**
**ಇತಃ ಸ್ಯಂದನಮಾರುಹ್ಯ ಗಮ್ಯತಾಂ ನಂದಗೋಕುಲಮ್॥** 13

**ವಸುದೇವಸುತೌ ತತ್ರ ವಿಷ್ಣೋರಂಶಸಮುದ್ಭವೌ।**
**ನಾಶಾಯ ಕಿಲ ಸಂಭೂತೌ ಮಮ ದುಷ್ಟೌ ಪ್ರವರ್ಧತಃ॥** 14

**ಧನುರ್ಮಹೋ ಮಮಾಪ್ಯತ್ರ ಚತುರ್ದಶ್ಯಾಂ ಭವಿಷ್ಯತಿ।**
**ಆನೇಯೌ ಭವತಾ ಗತ್ವಾ ಮಲ್ಲಯುದ್ಧಾಯ ತತ್ರ ತೌ॥** 15

---

ಪೀಡವೆಂಬ ಮದ್ದಾನೆ ಇದೆಯಷ್ಟೆ. ವಸುದೇವನ ಮಕ್ಕಳಾದ ಆ ಗೊಲ್ಲರ ಹುಡುಗರು ನನ್ನ ಬಳಿಗೆ ಬಂದಾಗ, ಈ ಆನೆ ಅವರನ್ನು ಕೊಂದು ಬಿಸಾಡುವುದು!" ಎಂದು ಆಲೋಚಿಸಿದನು (11). ಈ ರೀತಿಯಾಗಿ ದುಷ್ಟನಾದ ಕಂಸನು ವೀರರಾದ ಬಲರಾಮಕೃಷ್ಣರನ್ನು ಕೊಲ್ಲಬೇಕೆಂಬ ನಿಶ್ಚಯದಿಂದ ಆಲೋಚಿಸಿ ಅಕ್ರೂರನನ್ನು ಕರೆದು ಹೀಗೆಂದನು: "ಹೇ ದಾನಪತಿ,* ಅಕ್ರೂರ, ನನ್ನ ಸಂತೋಷಕ್ಕಾಗಿ ಒಂದು ಮಾತನ್ನು ನಡೆಸಿಕೊಡು. ರಥವನ್ನೇರಿ ನೀನು ನಂದ ಗೋಕುಲಕ್ಕೆ ಹೋಗಬೇಕು (12-13). ಅಲ್ಲಿ ವಸುದೇವನ ಇಬ್ಬರು ಮಕ್ಕಳಿದ್ದಾರೆ. ಅವರು ವಿಷ್ಣುವಿನ ಅಂಶದಿಂದ ಹುಟ್ಟಿದ್ದಾರಂತೆ! ಆ ದುಷ್ಟರು ನನ್ನನ್ನು ನಾಶಮಾಡುವುದಕ್ಕಾಗಿ ಜನಿಸಿ ಅಲ್ಲಿ ಬೆಳೆಯುತ್ತಿದ್ದಾರಂತೆ! ನನ್ನ ಧನುರ್ಯಜ್ಞವು ಈ ಮಧುರೆಯಲ್ಲಿ ಮುಂದಿನ ಚತುರ್ದಶಿಯ ದಿನ ನಡೆಯಲಿದೆ. ಆ ಸಮಯದಲ್ಲಿ ನಡೆಯುವ ಜಟ್ಟಿಕಾಳಗಕ್ಕಾಗಿ ಅವರಿಬ್ಬರನ್ನು ನೀನು ಕರೆತರಬೇಕು

---

* ಅಕ್ರೂರನು ಸ್ಯಮಂತಕಮಣಿಯ ನೆರವಿನಿಂದ ಬಹಳ ದಾನಧರ್ಮಗಳನ್ನು ಮಾಡುತ್ತಿದ್ದನು. ಆದ್ದರಿಂದ ದಾನಪತಿಯೆಂದು ವಿಖ್ಯಾತನಾದನು.

**ಚಾಣೂರಮುಷ್ಟಿಕೌ ಮಲ್ಲೌ ನಿಯುದ್ಧಕುಶಲೌ ಮಮ।**
**ತಾಭ್ಯಾಂ ಸಹಾನಯೋರ್ಯುದ್ಧಂ ಸರ್ವಲೋಕೋಽತ್ರ ಪಶ್ಯತು॥ 16**

**ಗಜಃ ಕುವಲಯಾಪೀಡೋ ಮಹಾಮಾತ್ರಪ್ರಚೋದಿತಃ।**
**ಸ ವಾ ಹನಿಷ್ಯತೇ ಪಾಪೌ ವಸುದೇವಾತ್ಮಜೌ ಶಿಶೂ॥ 17**

**ತೌ ಹತ್ವಾ ವಸುದೇವಂ ಚ ನಂದಗೋಪಂ ಚ ದುರ್ಮತಿಮ್।**
**ಹನಿಷ್ಯೇ ಪಿತರಂ ಚೈನಮುಗ್ರಸೇನಂ ಸುದುರ್ಮತಿಮ್॥ 18**

**ತತಸ್ಸಮಸ್ತಗೋಪಾನಾಂ ಗೋಧನಾನ್ಯಖಿಲಾನ್ಯಹಮ್।**
**ವಿತ್ತಂ ಚಾಪಹರಿಷ್ಯಾಮಿ ದುಷ್ಟಾನಾಂ ಮದ್ವಧೈಷಿಣಾಮ್॥ 19**

**ತ್ವಾಮೃತೇ ಯಾದವಾಶ್ಚೈತೇ ದ್ವಿಷೋ ದಾನಪತೇ ಮಮ।**
**ಏತೇಷಾಂ ಚ ವಧಾಯಾಹಂ ಯತಿಷ್ಯೇಽನುಕ್ರಮಾತ್ತತಃ॥ 20**

---

(14-15). ನನ್ನ ಜಟ್ಟಿಗಳಾದ ಚಾಣೂರ ಮುಷ್ಟಿಕರು ಕುಸ್ತಿಯಲ್ಲಿ ಕುಶಲರು. ಅವರಿಬ್ಬರೊಡನೆ ವಸುದೇವನ ಪುತ್ರರು ಮಲ್ಲಯುದ್ದವನ್ನು ಮಾಡತಕ್ಕದ್ದು. ನೆರೆದಿರುವ ಸಮಸ್ತ ಜನರೂ ಅದನ್ನು ನೋಡಲಿ (16). ಅಥವಾ ಮುಖ್ಯನಾದ ಮಾವುತನು ಕುವಲಯಾಪೀಡನೆಂಬ ಗಜರಾಜನನ್ನು ನುಗ್ಗಿಸುತ್ತಾನೆ. ವಸುದೇವನ ಮಕ್ಕಳಾದ ಆ ಪಾಪಿಷ್ಠ ಬಾಲಕರನ್ನು ಕುವಲಯಾಪೀಡವಾದರೂ ಕೊಲ್ಲುವುದು. ಅವರಿಬ್ಬರನ್ನು ಕೊಂದಮೇಲೆ, ದುರ್ಬುದ್ಧಿಯಾದ ಈ ವಸುದೇವನನ್ನೂ ನಂದಗೋಪನನ್ನೂ, ನನ್ನ ತಂದೆಯೆನಿಸಿಕೊಂಡಿರುವ ಪರಮ ದುಷ್ಟನಾದ ಉಗ್ರಸೇನನನ್ನೂ ವಧಿಸುವೆನು! (17-18). ಅನಂತರ ನನ್ನ ಸಾವಿಗಾಗಿ ಹವಣಿಸುತ್ತಿರುವ ಎಲ್ಲ ಗೊಲ್ಲರ ಸಮಸ್ತ ಗೋಧನಗಳನ್ನೂ ವಶಪಡಿಸಿಕೊಂಡು ಅವರಲ್ಲಿರುವ ಹಣವನ್ನೆಲ್ಲ ಕಿತ್ತುಕೊಳ್ಳುವೆನು. ಓ ದಾನಪತಿ, ನಿನ್ನೊಬ್ಬನನ್ನು ಬಿಟ್ಟರೆ ಈ ಯಾದವರೆಲ್ಲರೂ ನನಗೆ ಶತ್ರುಗಳಾಗಿದ್ದಾರೆ. ಆಮೇಲೆ ಕ್ರಮವಾಗಿ ಇವರೆಲ್ಲರನ್ನೂ ಸಂಹರಿಸುವುದಕ್ಕೆ ಪ್ರಯತ್ನಿಸುವೆನು (19-20). ಯಾದವರು ನಿರ್ಮೂಲರಾದ ಮೇಲೆ ನಿಷ್ಕಂಟಕ

**ತದಾ ನಿಷ್ಕಂಟಕಂ ಸರ್ವಂ ರಾಜ್ಯಮೇತದಯಾದವಮ್।**
**ಪ್ರಸಾಧಿಷ್ಯೇ ತ್ವಯಾ ತಸ್ಮಾನ್ಮತ್ಪ್ರೀತ್ಯೈ ವೀರ ಗಮ್ಯತಾಮ್॥ 21**

**ಯಥಾ ಚ ಮಾಹಿಷಂ ಸರ್ಪಿರ್ದಧಿ ಚಾಪ್ಯುಪಹಾರ್ಯ ವೈ।**
**ಗೋಪಾಸ್ಸಮಾನಯಂತ್ವಾಶು ತಥಾ ವಾಚ್ಯಾಸ್ತ್ವಯಾ ಚ ತೇ॥ 22**

*ಶ್ರೀಪರಾಶರ ಉವಾಚ:*

**ಇತ್ಯಾಜ್ಞಪ್ತಸ್ತದಾಕ್ರೂರೋ ಮಹಾಭಾಗವತೋ ದ್ವಿಜ।**
**ಪ್ರೀತಿಮಾನಭವತ್ಕೃಷ್ಣಂ ಶ್ವೋ ದ್ರಕ್ಷ್ಯಾಮೀತಿ ಸತ್ವರಃ॥ 23**

**ತಥೇತ್ಯುಕ್ತ್ವಾ ಚ ರಾಜಾನಾಂ ರಥಮಾರುಹ್ಯ ಶೋಭನಮ್।**
**ನಿಶ್ಚಕ್ರಾಮ ತತಃ ಪುರ್ಯಾ ಮಥುರಾಯಾ ಮಧುಪ್ರಿಯಃ॥ 24**

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಪಂಚದಶೋಽಧ್ಯಾಯಃ

---

ವಾದ ಈ ಸಮಸ್ತರಾಜ್ಯವನ್ನೂ, ಓ ಅಕ್ರೂರ, ನಿನ್ನೊಂದಿಗೆ ಅನುಭವಿಸುವೆನು. ಎಲೈ ವೀರನೆ, ನನ್ನ ಸಂತೋಷಕ್ಕಾಗಿ ನೀನು ಪ್ರಯಾಣಮಾಡು. ಅಲ್ಲದೆ ಆ ಗೊಲ್ಲರನ್ನು ಕುರಿತು ಎಮ್ಮೆಯ ತುಪ್ಪ, ಮೊಸರು—ಮೊದಲಾದ ಕಾಣಿಕೆಗಳನ್ನು ಕೂಡಲೇ ತಂದು ಒಪ್ಪಿಸಬೇಕೆಂದು ಹೇಳಿ ನಿರ್ದೇಶಿಸು" ಎಂದನು (21-22). ಮೈತ್ರೇಯ, ಹೀಗೆ ಕಂಸನಿಂದ ಆಜ್ಞಪ್ತನಾದ ಅಕ್ರೂರನು ಮಹಾ ಭಗವದ್ಭಕ್ತನಾದ್ದರಿಂದ "ನಾಳೆ ತ್ವರೆಯಿಂದ ಹೋಗಿ ಶ್ರೀಕೃಷ್ಣನನ್ನು ಸಂದರ್ಶಿಸಲು ಸಾಧ್ಯವಾಗುವುದೆಂದು" ಸಂತುಷ್ಟನಾದನು. ಹಾಗೆಯೇ ಆಗಲೆಂದು ರಾಜನಾದ ಕಂಸನಿಗೆ ತಿಳಿಸಿ ಮಧುವಂಶೀಯರಾದ ಯಾದವರಿಗೆ ಪ್ರಿಯನಾದ ಅಕ್ರೂರನು ಸುಂದರವಾದ ರಥವನ್ನೇರಿ ಮಧುರಾನಗರಿಯಿಂದ ಹೊರಟನು (23-24).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಹದಿನೈದನೆಯ ಅಧ್ಯಾಯ ಮುಗಿಯಿತು.



## ಷೋಡಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಕೇಶೀ ಚಾಪಿ ಬಲೋದಗ್ರಃ ಕಂಸದೂತಪ್ರಚೋದಿತಃ।**
**ಕೃಷ್ಣಸ್ಯ ನಿಧನಾಕಾಂಕ್ಷೀ ವೃಂದಾವನಮುಪಾಗಮತ್॥** 1

**ಸ ಖುರಕ್ಷತಭೂಪೃಷ್ಠಸ್ಸಟಾಕ್ಷೇಪಧುತಾಂಬುದಃ।**
**ದ್ರುತವಿಕ್ರಾಂತಚಂದ್ರಾರ್ಕಮಾರ್ಗೋ ಗೋಪಾನುಪಾದ್ರವತ್॥** 2

**ತಸ್ಯ ಹೇಷಿತಶಬ್ದೇನ ಗೋಪಾಲಾ ದೈತ್ಯವಾಜಿನಃ।**
**ಗೋಪ್ಯಶ್ಚ ಭಯಸಂವಿಗ್ನಾ ಗೋವಿಂದಂ ಶರಣಂ ಯಯುಃ॥** 3

**ತ್ರಾಹಿ ತ್ರಾಹೀತಿ ಗೋವಿಂದಃ ಶ್ರುತ್ವಾ ತೇಷಾಂ ತತೋ ವಚಃ।**
**ಸ ತೋಯಜಲದಧ್ವಾನಗಂಭೀರಮಿದಮುಕ್ತವಾನ್॥** 4

---

## ಅಧ್ಯಾಯ 16

ಕುದುರೆಯ ರೂಪವನ್ನು ಧರಿಸಿಬಂದ ಕೇಶಿದಾನವನನ್ನು
ಶ್ರೀಕೃಷ್ಣನು ಸಂಹರಿಸುವುದು.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಇತ್ತಲಾಗಿ ಕಂಸನು ಕಳಿಸಿದ ದೂತನಿಂದ ಪ್ರೇರಿತನೂ ಬಲೋದಗ್ರನೂ ಆಗ ಕೇಶಿದಾನವನು ಅಶ್ವದ ವೇಷವನ್ನು ಧರಿಸಿ ಶ್ರೀಕೃಷ್ಣನನ್ನು ಕೊಲ್ಲುವ ಉದ್ದೇಶದಿಂದ ವೃಂದಾವನಕ್ಕೆ ಬಂದನು (1). ತನ್ನ ಖುರಪುಟಗಳಿಂದ ನೆಲವನ್ನು ಸೀಳುತ್ತ , ಕತ್ತಿನ ಮೇಲಿನ ಕೇಸರಗಳಿಂದ ಮೋಡಗಳನ್ನು ಈಡಾಡುತ್ತ , ನೆಗೆತಗಳಿಂದ ಚಂದ್ರಸೂರ್ಯರ ಮಾರ್ಗಗಳನ್ನು ಮೀರುತ್ತ ಅಶ್ವವು ಬಂದಿತು. ಆ ದೈತ್ಯಾಶ್ವವು ಕೆನೆಯುವ ಶಬ್ದಕ್ಕೆ ಅಂಜಿದ ಗೋಪ ಗೋಪಿಯರು ಗೋವಿಂದನಿಗೆ ಶರಣಾದರು (2-3). "ತ್ರಾಹಿ, ತ್ರಾಹಿ" ಎನ್ನುವ ಗುಲ್ಲನ್ನು ಕೇಳಿ ಶ್ರೀಕೃಷ್ಣನು ಜಲಪೂರ್ಣ ಜಲದದ ಗುಡುಗಿನಂತೆ ಗಂಭೀರಧ್ವನಿಯಿಂದ "ಗೋಪಾಲರೆ, (ಅಶ್ವ ವೇಷಧಾರಿಯಾದ) ಈ

**ಅಲಂ ತ್ರಾಸೇನ ಗೋಪಾಲಾಃ ಕೇಶಿನಃ ಕಿಂ ಭಯಾತುರೈಃ।**
**ಭವದ್ಭಿರ್ಗೋಪಜಾತೀಯೈರ್ವೀರವೀರ್ಯಂ ವಿಲೋಪ್ಯತೇ॥** 5

**ಕಿಮನೇನಾಲ್ಪಸಾರೇಣ ಹೇಷಿತಾಟೋಪಕಾರಿಣಾ।**
**ದೈತೇಯಬಲವಾಹ್ಯೇನ ವಲ್ಗತಾ ದುಷ್ಟವಾಜಿನಾ॥** 6

**ಏಹ್ಯೇಹಿ ದುಷ್ಟ ಕೃಷ್ಣೋಽಹಂ ಪೂಷ್ಣಸ್ತ್ವಿವ ಪಿನಾಕಧೃಕ್।**
**ಪಾತಯಿಷ್ಯಾಮಿ ದಶನಾನ್ ವದನಾದಖಿಲಾಂಸ್ತವ॥** 7

**ಇತ್ಯುಕ್ತ್ವಾಸ್ಫೋಟ್ಯ ಗೋವಿಂದಃ ಕೇಶಿನಸ್ಸಮ್ಮುಖಂ ಯಯೌ।**
**ವಿವೃತಾಸ್ಯಶ್ಚ ಸೋಽಪ್ಯೇನಂ ದೈತೇಯಶ್ಚ ಉಪಾದ್ರವತ್॥** 8

**ಬಾಹುಮಾಭೋಗಿನಂ ಕೃತ್ವಾ ಮುಖೇ ತಸ್ಯ ಜನಾರ್ದನಃ।**
**ಪ್ರವೇಶಯಾಮಾಸ ತದಾ ಕೇಶಿನೋ ದುಷ್ಟವಾಜಿನಃ॥** 9

---

ಕೇಶಿದಾನವನಿಗೆ ಹೆದರಬೇಡಿರಿ. ಗೋಪಜಾತೀಯರಾದ ನೀವು ಭಯದಿಂದ ಕಾತರರಾಗುವುದು ಸಲ್ಲದು. ವೀರೋಚಿತವಾದ ವೀರ್ಯವನ್ನು ಮಾಚುವಿರಾ? (4-5). ದುರ್ಬಲವಾದ ಈ ಕುದುರೆ ಏನು ಮಾಡೀತು? ಕೆನೆಯುವ ಆಡಂಬರವೊಂದೇ ಇದರದು! ದೈತ್ಯರ ವಾಹನ ಇದು! ಕುಣಿದಾಡುವ ಈ ಕುದುರೆಯಿಂದ ಏನಾಗುವುದು?" ಎಂದು ನುಡಿದನು (6). ಅನಂತರ ಕೇಶಿದಾನವನ ಕಡೆಗೆ ತಿರುಗಿ "ಬಾ, ಇತ್ತಬಾ! ಎಲಾ ದುರುಳ; ಕೃಷ್ಣನೆಂದರೆ ನಾನೆ! ಪಿನಾಕಧಾರಿಯಾದ ವೀರಭದ್ರನು ಪೂಷನ* ಹಲ್ಲುಗಳನ್ನು ಮುರಿದಂತೆ, ನಿನ್ನ ಎಲ್ಲ ಹಲ್ಲುಗಳನ್ನು ಮುರಿದು ಬಾಯಿಯಿಂದ ಉದುರಿಸುವೆನು!" ಎಂದು ಹೇಳಿ ಸೆಡ್ಡುಹೊಡೆದು ಗೋವಿಂದನು ಕೇಶಿಯ ಎದುರಿಗೆ ನಡೆದನು. ಆ ದೈತ್ಯಾಶ್ವವು ಬಾಯ್ದೆರೆದು ಕೃಷ್ಣನ ಕಡೆಗೆ ಧಾವಿಸಿ ಬಂದಿತು (7-8). ಒಡನೆಯೇ ಶ್ರೀಕೃಷ್ಣನು ತನ್ನ ತೋಳನ್ನು ದಪ್ಪವಾಗಿ ಹಿಗ್ಗಿಸಿ ಆ ದುಷ್ಟಾಶ್ವದ ಬಾಯೊಳಗೆ ರಪ್ಪನೆ ತುರುಕಿದನು! ಅದರ ಬಾಯೊಳಗೆ ನುಗ್ಗಿದ ಕೃಷ್ಣಬಾಹುವಿನ ರಭಸಕ್ಕೆ ಕೇಶಿಯ

---

* ದ್ವಾದಶಾದಿತ್ಯರಲ್ಲೊಬ್ಬನಾದ ಪೂಷನ ಹಲ್ಲುಗಳನ್ನು ವೀರಭದ್ರನು ದಕ್ಷಯಜ್ಞಧ್ವಂಸದ ಕಾಲದಲ್ಲಿ ಮುರಿದನೆಂದು ಪುರಾಣ ಕಥೆ ಇದೆ.

**ಕೇಶಿನೋ ವದನೇ ತೇನ ವಿಶತಾ ಕೃಷ್ಣಬಾಹುನಾ।**
**ಶಾತಿತಾ ದಶನಾಃ ಪೇತುಃ ಸಿತಾಭ್ರಾವಯವಾ ಇವ॥** 10

**ಕೃಷ್ಣಸ್ಯ ವವೃಧೇ ಬಾಹುಃ ಕೇಶಿದೇಹಗತೋ ದ್ವಿಜ।**
**ವಿನಾಶಾಯ ಯಥಾ ವ್ಯಾಧಿರಾಸಂಭೂತೇರುಪೇಕ್ಷಿತಃ॥** 11

**ವಿಪಾಟಿತೋಷ್ಠೋ ಬಹುಲಂ ಸಫೇನಂ ರುಧಿರಂ ವಮನ್।**
**ಸೋಽಕ್ಷಿಣೀ ವಿವೃತೇ ಚಕ್ರೇ ವಿಶಿಷ್ಟೇ ಮುಕ್ತಬಂಧನೇ॥** 12

**ಜಘಾನ ಧರಣೀಂ ಪಾದೈಶ್ಶಕೃನ್ಮೂತ್ರಂ ಸಮುತ್ಸೃಜನ್।**
**ಸ್ವೇದಾರ್ದ್ರಗಾತ್ರಶ್ಶ್ರಾಂತಶ್ಚ ನಿರ್ಯತ್ನಸ್ಸೋಽಭವತ್ತದಾ॥** 13

**ವ್ಯಾದಿತಾಸ್ಯಮಹಾರಂಧ್ರಸ್ಸೋಽಸುರಃ ಕೃಷ್ಣಬಾಹುನಾ।**
**ನಿಪಾತಿತೋ ದ್ವಿಧಾ ಭೂಮೌ ವೈದ್ಯುತೇನ ಯಥಾ ದ್ರುಮಃ॥** 14

**ದ್ವಿಪಾದೇ ಪೃಷ್ಠಪುಚ್ಛಾರ್ಧೇ ಶ್ರವಣೈಕಾಕ್ಷಿನಾಸಿಕೇ।**
**ಕೇಶಿನಸ್ತೇ ದ್ವಿಧಾಭೂತೇ ಶಕಲೇ ದ್ವೇ ವಿರೇಜತುಃ॥** 15

---

ಹಲ್ಲುಗಳೆಲ್ಲ ಮುರಿದು ಬಿಳಿಯ ಮೇಘಖಂಡಗಳೋ ಎಂಬಂತೆ ಉದುರಿದವು! (9-10). ಮೈತ್ರೇಯ, ಉತ್ಪತ್ತಿ ಮೊದಲ್ಗೊಂಡು ಉಪೇಕ್ಷಿತವಾದ ಉಗ್ರವ್ಯಾಧಿಯು ಆತಂಕಕಾರಿಯಾಗಿ ದೇಹದಲ್ಲಿ ಬೆಳೆಯುವ ಹಾಗೆ, ಕೇಶಿ ದಾನವನ ದೇಹದೊಳಗೆ ನುಗ್ಗಿದ ಕೃಷ್ಣಬಾಹು ಕ್ರಮವಾಗಿ ವರ್ಧಿಸಿತು! (11). ಅಶ್ವದ ತುಟಿಗಳು ಹರಿದವು. ನೊರೆನೊರೆಯಾಗಿ ರಕ್ತವು ಕಕ್ಕಿತು. ಕಣ್ಣು ಗುಡ್ಡೆಗಳು ಹಿಗ್ಗಿ ಸ್ನಾಯು ಬಂಧನದಿಂದ ಸಡಿಲವಾದವು. ಅಶ್ವವು ಲದ್ದಿ ಹಾಕಿ ಉಚ್ಚೆ ಹೊಯ್ದುಕೊಂಡು ಕಾಲುಗಳಿಂದ ನೆಲವನ್ನು ಕುಟ್ಟುತ್ತ ಒದ್ದಾಡಿತು. ಮೈಯೆಲ್ಲ ಬೆವತುಕೊಂಡಿತು. ಕುದುರೆಯ ಚೇಷ್ಟೆಯೆಲ್ಲ ಉಡುಗಿ ಕಡೆಗೆ ಶಾಂತವಾಯಿತು (12-13). ಈ ಪ್ರಕಾರದಲ್ಲಿ ಕೃಷ್ಣಬಾಹುವಿನಿಂದ ಮಹಾರಂಧ್ರವುಳ್ಳ ಬಾಯಿ ಬಿರಿದು ಎರಡು ಸೀಳಾಗಲು, ಸಿಡಿಲು ಹೊಡೆದ ಮರದಂತೆ ದೈತ್ಯಾಶ್ವದ ದೇಹವು ಎರಡು ಸೀಳಾಗಿ ನೆಲದ ಮೇಲೆ ಬಿದ್ದಿತು (14). ಎರಡು ಸೀಳಾದ ದೈತ್ಯಾಶ್ವದ ಒಂದೊಂದು ದೇಹಖಂಡದಲ್ಲಿ ಎರಡು ಕಾಲುಗಳು ಅರ್ಧಪೃಷ್ಠ, ಸೀಳಿದ ಬಾಲ, ಒಂದು ಕಿವಿ, ಒಂದು ಕಣ್ಣು, ಒಂದು ಮೂಗಿನ ಸೊಳ್ಳೆ ಕಾಣಿಸಿದವು! (15). ಹೀಗೆ ಕೇಶಿದಾನವನನ್ನು ಕೊಂದು ಹಾಕಲಾಗಿ

**ಹತ್ವಾ ತು ಕೇಶಿನಂ ಕೃಷ್ಣೋ ಗೋಪಾಲೈರ್ಮುದಿತೈರ್ವೃತಃ।**
**ಅನಾಯಸ್ತತನುಸ್ಸ್ವಸ್ಥೋ ಹಸಂಸ್ತತ್ರೈವ ತಸ್ಥಿವಾನ್॥** 16

**ತತೋ ಗೋಪ್ಯಶ್ಚ ಗೋಪಾಶ್ಚ ಹತೇ ಕೇಶಿನಿ ವಿಸ್ಮಿತಾಃ।**
**ತುಷ್ಟುವುಃ ಪುಂಡರೀಕಾಕ್ಷಮನುರಾಗಮನೋರಮಮ್॥** 17

**ಅಥಾಹಾಂತರ್ಹಿತೋ ವಿಪ್ರ ನಾರದೋ ಜಲದೇ ಸ್ಥಿತಃ।**
**ಕೇಶಿನಂ ನಿಹತಂ ದೃಷ್ಟ್ವಾ ಹರ್ಷನಿರ್ಭರಮಾನಸಃ॥** 18

**ಸಾಧು ಸಾಧು ಜಗನ್ನಾಥ ಲೀಲಯೈವ ಯದಚ್ಯುತ।**
**ನಿಹತೋಽಯಂ ತ್ವಯಾ ಕೇಶೀ ಕ್ಲೇಶದಸ್ತ್ರಿದಿವೌಕಸಾಮ್॥** 19

**ಯುದ್ಧೋತ್ಸುಕೋಽಹಮತ್ಯರ್ಥಂ ನರವಾಜಿಮಹಾಹವಮ್।**
**ಅಭೂತಪೂರ್ವಮನ್ಯತ್ರ ದ್ರಷ್ಟುಂ ಸ್ವರ್ಗಾದಿಹಾಗತಃ॥** 20

**ಕರ್ಮಾಣ್ಯತ್ರಾವತಾರೇ ತೇ ಕೃತಾನಿ ಮಧುಸೂದನ।**
**ಯಾನಿ ತೈರ್ವಿಸ್ಮಿತಂ ಚೇತಸ್ತೋಷಮೇತೇನ ಮೇ ಗತಮ್॥** 21

---

ಸಂಪ್ರೀತರಾದ ಗೋಪಾಲರು ಶ್ರೀಕೃಷ್ಣನ ಸುತ್ತಲೂ ಮುತ್ತಿಕೊಂಡರು. ಯಾವ ದೇಹಾಯಾಸವೂ ಇಲ್ಲದೆ ಸ್ವಸ್ಥಚಿತ್ತನಾದ ಶ್ರೀಕೃಷ್ಣನು ನಗುತ್ತ ಅಲ್ಲಿಯೇ ನಿಂತಿದ್ದನು (16). ಕೇಶಿಯು ಹತನಾದ್ದರಿಂದ ವಿಸ್ಮಿತರಾದ ಗೋಪಗೋಪಿಯರು ಆ ಪುಂಡರೀಕಾಕ್ಷನನ್ನು ಉಲ್ಲಾಸದಿಂದ ಹೊಗಳಿ ಹಾಡಿದರು. ಮೈತ್ರೇಯ, ಕೇಶಿಯು ಮೃತನಾದುದನ್ನು ನೋಡಿ ಪರಮಪ್ರೀತರಾದ ನಾರದ ಮುನಿಗಳು ಆಕಾಶದಲ್ಲಿ ಯಾರಿಗೂ ಕಾಣದಂತೆ ಮೇಘದ ಮರೆಯಲ್ಲಿ ನಿಂತು ಶ್ರೀಕೃಷ್ಣನನ್ನು ಕುರಿತು ಇಂತೆಂದರು (17-18):“ಜಗನ್ನಾಥ, ಸಾಧು ಸಾಧು! ದೇವತೆಗಳ ಕ್ಲೇಶಕ್ಕೆ ಕಾರಣನಾದ ಕೇಶಿಯನ್ನು, ಅಚ್ಯುತ, ಲೀಲೆಯೆಂದು ಸಂಹರಿಸಿದೆಯಲ್ಲವೆ! ಯಾವಾಗಲೂ ಯುದ್ಧವನ್ನು ನೋಡಲು ನನಗೆ ಬಹಳ ಕುತೂಹಲ! ಕುದುರೆಗೂ ಮಾನವನಿಗೂ ನಡೆಯುವ ಈ ಮಹಾಯುದ್ಧವನ್ನು ವೀಕ್ಷಿಸುವುದ ಕ್ಕಾಗಿ ನಾನು ಸ್ವರ್ಗದಿಂದಿಲ್ಲಿಗೆ ಬಂದೆನು! (19-20). ಹೇ ಮಧುಸೂದನ, ಈ ಮನುಷ್ಯಾವತಾರದಲ್ಲಿ ಯಾವ ಯಾವ ಕಾರ್ಯಗಳನ್ನು ನೀನು ಮಾಡಿದೆಯೋ ಅವುಗಳಿಂದ ನನ್ನ ಮನಸ್ಸು ವಿಸ್ಮಿತವಾಗಿತ್ತು. ಈಗ ಮಾಡಿದ ಕಾರ್ಯದಿಂದ

**ತುರಂಗಸ್ಯಾಸ್ಯ ಶಕ್ರೋऽಪಿ ಕೃಷ್ಣ ದೇವಾಶ್ಚ ಬಿಭ್ಯತಿ।**
**ಧುತಕೇಸರಜಾಲಸ್ಯ ಹೇಷತೋऽಭ್ರಾವಲೋಕಿನಃ॥ 22**

**ಯಸ್ಮಾತ್ತ್ವಯ್ಯೈಷ ದುಷ್ಟಾತ್ಮಾ ಹತಃ ಕೇಶೀ ಜನಾರ್ದನ।**
**ತಸ್ಮಾತ್ ಕೇಶವನಾಮ್ನಾ ತ್ವಂ ಲೋಕೇ ಖ್ಯಾತೋ ಭವಿಷ್ಯಸಿ॥ 23**

**ಸ್ವಸ್ತ್ಯಸ್ತು ತೇ ಗಮಿಷ್ಯಾಮಿ ಕಂಸಯುದ್ಧೇऽಧುನಾ ಪುನಃ।**
**ಪರಶ್ವೋऽಹಂ ಸಮೇಷ್ಯಾಮಿ ತ್ವಯಾ ಕೇಶಿನಿಷೂದನ॥ 24**

**ಉಗ್ರಸೇನಸುತೇ ಕಂಸೇ ಸಾನುಗೇ ವಿನಿಪಾತಿತೇ।**
**ಭಾರಾವತಾರಕರ್ತಾ ತ್ವಂ ಪೃಥಿವ್ಯಾಃ ಪೃಥಿವೀಧರ॥ 25**

**ತತ್ರಾನೇಕಪ್ರಕಾರಾಣಿ ಯುದ್ಧಾನಿ ಪೃಥಿವೀಕ್ಷಿತಾಮ್।**
**ದ್ರಷ್ಟವ್ಯಾನಿ ಮಯಾ ಯುಷ್ಮತ್ಪ್ರಣೀತಾನಿ ಜನಾರ್ದನ॥ 26**

**ಸೋऽಹಂ ಯಾಸ್ಯಾಮಿ ಗೋವಿಂದ ದೇವಕಾರ್ಯಂ ಮಹತ್ಕೃತಮ್।**
**ತ್ವಯ್ಯೈವ ವಿದಿತಂ ಸರ್ವಂ ಸ್ವಸ್ತಿ ತೇऽಸ್ತು ವ್ರಜಾಮ್ಯಹಮ್॥ 27**

---

ಸಂತುಷ್ಟವಾಯಿತು (21). ಕೇಸರ ಜಾಲವನ್ನು ಧರಿಸಿದ ಈ ಅಶ್ವವು ಗಗನವನ್ನು ನೋಡುತ್ತಾ ಕೆನೆಯುತ್ತಿದ್ದರೆ, ಕೃಷ್ಣ, ದೇವತೆಗಳಿರಲಿ ಇಂದ್ರನೂ ಕೂಡ ಹೆದರುತ್ತಿದ್ದನು. ಹೇ ಜನಾರ್ದನ, ಇಂತಹ ಈ ದುಷ್ಟಾತ್ಮನಾದ ಕೇಶಿಯನ್ನು ವಧಿಸಿದ್ದರಿಂದ ನೀನು 'ಕೇಶವ' ಎಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧ ನಾಗುವೆ! (22-23). ಕೇಶಿನಿಷೂದನ, ನಿನಗೆ ಶುಭವಾಗಲಿ! ನಾನಿನ್ನು ಹೊರಡುವೆನು. ನಾಡಿದ್ದು ಕಂಸಯುದ್ಧದ ಸಂದರ್ಭದಲ್ಲಿ ಮತ್ತೆ ಬರುವೆನು! ಉಗ್ರಸೇನಸುತನಾದ ಕಂಸನನ್ನು ಅವನ ಪರಿವಾರ ಸಹಿತವಾಗಿ ವಿಧ್ವಂಸ ಗೊಳಿಸಿದ ಮೇಲೆ, ಹೇ ಪೃಥ್ವೀಧರ, ನೀನು ಪೃಥ್ವಿಯ ಭಾರವನ್ನಿಳಿಸಿದಂತಾಗು ತ್ತದೆ (24-25). ಈ ಕಾರ್ಯದಲ್ಲಿ ಹಲವಾರು ರಾಜರೊಡನೆ ನಡೆಸಬೇಕಾದ ಬೇಕಾದಷ್ಟು ಯುದ್ಧಗಳು ಇನ್ನೂ ಇವೆ. ಆಯುಷ್ಮಂತನಾದ ನೀನು ನಡೆಸುವ ಯುದ್ಧಗಳನ್ನೆಲ್ಲ ನಾನು ನೋಡಬೇಕಾಗಿದೆ! ಜನಾರ್ದನ, ಗೋವಿಂದ, ಮಹತ್ತರವಾದ ದೇವಕಾರ್ಯವನ್ನೆಸಗಿದ್ದೀಯೆ. ನಾನಿನ್ನು ಹೋಗುವೆನು. ಎಲ್ಲವನ್ನೂ ನೀನೇ ಬಲ್ಲೆ. ಶುಭವಾಗಲಿ. ನಾನು ಹೊರಡುತ್ತೇನೆ!" ಎಂದು

**ನಾರದೇ ತು ಗತೇ ಕೃಷ್ಣಸ್ಸಹ ಗೋಪೈಸ್ಸಭಾಜಿತಃ।**
**ವಿವೇಶ ಗೋಕುಲಂ ಗೋಪೀನೇತ್ರಪಾನೈಕಭಾಜನಮ್॥** 28

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಷೋಡಶೋऽಧ್ಯಾಯಃ

---

ನುಡಿದರು (26-27). ಹೀಗೆ ನುಡಿದು ನಾರದರು ಹೊರಟುಹೋಗಲಾಗಿ, ಗೋಪಾಲರಿಂದ ಪೂಜಿತನಾದ ಶ್ರೀಕೃಷ್ಣನು ಗೋಪೀನಯನಪಾನಭಾಜನನಾಗಿ* ಗೋಕುಲವನ್ನು ಪ್ರವೇಶಿಸಿದನು (28).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಹದಿನಾರನೆಯ ಅಧ್ಯಾಯ ಮುಗಿಯಿತು.



---

* ಪ್ರೀತಿ ಪುರಸ್ಸರವಾಗಿ ಗೋಪಿಯರು ನೆಟ್ಟದೃಷ್ಟಿಯಿಂದ ನೋಡುತ್ತಿರಲಾಗಿ ಎಂದರ್ಥ.

## ಸಪ್ತದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಅಕ್ರೂರೋಽಪಿ ವಿನಿಷ್ಕ್ರಮ್ಯ ಸ್ಯಂದನೇನಾಶುಗಾಮಿನಾ।**
**ಕೃಷ್ಣಸಂದರ್ಶನಾಕಾಂಕ್ಷೀ ಪ್ರಯಯೌ ನಂದಗೋಕುಲಮ್॥** 1

**ಚಿಂತಯಾಮಾಸ ಚಾಕ್ರೂರೋ ನಾಸ್ತಿ ಧನ್ಯತರೋ ಮಯಾ।**
**ಯೋಽಹಮಂಶಾವತೀರ್ಣಸ್ಯ ಮುಖಂ ದ್ರಕ್ಷ್ಯಾಮಿ ಚಕ್ರಿಣಃ॥** 2

**ಅದ್ಯ ಮೇ ಸಫಲಂ ಜನ್ಮ ಸುಪ್ರಭಾತಾಽಭವನ್ನಿಶಾ।**
**ಯದುನ್ನಿದ್ರಾಬ್ಜಪತ್ರಾಕ್ಷಂ ವಿಷ್ಣೋರ್ದ್ರಕ್ಷ್ಯಾಮ್ಯಹಂ ಮುಖಮ್॥** 3

**ಪಾಪಂ ಹರತಿ ಯತ್ಪುಂಸಾಂ ಸ್ಮೃತಂ ಸಂಕಲ್ಪನಾಮಯಮ್।**
**ತತ್ಪುಂಡರೀಕನಯನಂ ವಿಷ್ಣೋರ್ದ್ರಕ್ಷ್ಯಾಮ್ಯಹಂ ಮುಖಮ್॥** 4

---

## ಅಧ್ಯಾಯ 17

ಗೋಕುಲಕ್ಕೆ ಅಕ್ರೂರನ ಪ್ರಯಾಣ;
ಬಲರಾಮ ಕೃಷ್ಣರನ್ನು ನೋಡಿ ಅಕ್ರೂರನ ಆನಂದ.

ಪರಾಶರಮಹರ್ಷಿಗಳು ಹೇಳಿದರು: ಮೈತ್ರೇಯ, ಇತ್ತ ಅಕ್ರೂರನಾದರೋ ಶ್ರೀಕೃಷ್ಣನ ಸಂದರ್ಶನ ಲಾಲಸೆಯಿಂದ ಶೀಘ್ರಗಾಮಿಯಾದ ರಥವನ್ನೇರಿ ನಂದಗೋಕುಲಕ್ಕೆ ಪ್ರಯಾಣ ಮಾಡಿದನು. ಅವನು ತನ್ನಲ್ಲಿ "ಆಹಾ! ನನಗಿಂತ ಧನ್ಯನು ಇನ್ನೊಬ್ಬನಿಲ್ಲ. ಅಂಶಾವತಾರಿಯಾದ ಚಕ್ರಧಾರಿ ಭಗವಂತನ ಮುಖವನ್ನಿಂದು ನೋಡುವೆನು! (1-2). ಈಗ ನನ್ನ ಜನ್ಮ ಸಫಲವಾಯಿತು. ರಾತ್ರಿ ಕಳೆದು ಸುಪ್ರಭಾತವಾಯಿತು! ಏಕೆಂದರೆ, ಅರಳಿದ ತಾವರೆಯ ಎಸಳಿನಂತೆ ಕಣ್ಣುಳ್ಳ ವಿಷ್ಣುವಿನ ಮುಖವನ್ನು ನೋಡುವೆನು! ಕೇವಲ ಸಂಕಲ್ಪಾತ್ಮಕವಾಗಿ ಸ್ಮರಿಸಿಕೊಂಡುದರಿಂದಲೇ ಯಾವ ಮುಖವು ಜನರ ಪಾಪವನ್ನು ಪರಿಹರಿಸುವುದೋ ಅಂತಹ ವಿಷ್ಣುವಿನ ಪುಂಡರೀಕನಯನವುಳ್ಳ ಮುಖವನ್ನು ಸಾಕ್ಷಾತ್ತಾಗಿ ಕಾಣುವೆನು! (3-4). ಯಾವ ಮುಖದಿಂದ

ವಿನಿರ್ಜಗ್ಮುರ್ಯತೋ ವೇದಾ ವೇದಾಂಗಾನ್ಯಖಿಲಾನಿ ಚ।
ದ್ರಕ್ಷ್ಯಾಮಿ ತತ್ಪರಂ ಧಾಮ ಧಾಮ್ನಾಂ ಭಗವತೋ ಮುಖಮ್॥ 5

ಯಜ್ಞೇಷು ಯಜ್ಞಪುರುಷಃ ಪುರುಷೈಃ ಪುರುಷೋತ್ತಮಃ।
ಇಜ್ಯತೇ ಯೋಽಖಿಲಾಧಾರಸ್ತಂ ದ್ರಕ್ಷ್ಯಾಮಿ ಜಗತ್ಪತಿಮ್॥ 6

ಇಷ್ಟ್ವಾ ಯಮಿಂದ್ರೋ ಯಜ್ಞಾನಾಂ ಶತೇನಾಮರರಾಜತಾಮ್।
ಅವಾಪ ತಮನಂತಾದಿಮಹಂ ದ್ರಕ್ಷ್ಯಾಮಿ ಕೇಶವಮ್॥ 7

ನ ಬ್ರಹ್ಮಾ ನೇಂದ್ರರುದ್ರಾಶ್ವಿವಸ್ವಾದಿತ್ಯಮರುದ್ಗಣಾಃ।
ಯಸ್ಯ ಸ್ವರೂಪಂ ಜಾನಂತಿ ಪ್ರತ್ಯಕ್ಷಂ ಯಾತಿ ಮೇ ಹರಿಃ॥ 8

ಸರ್ವಾತ್ಮಾ ಸರ್ವವಿತ್ಸರ್ವಸ್ಸರ್ವಭೂತೇಷ್ವವಸ್ಥಿತಃ।
ಯೋ ಹ್ಯಚಿಂತ್ಯೋಽವ್ಯಯೋ ವ್ಯಾಪೀ ಸ ವಕ್ಷ್ಯತಿ ಮಯಾ ಸಹ॥ 9

ಮತ್ಸ್ಯಕೂರ್ಮವರಾಹಾಶ್ವಸಿಂಹರೂಪಾದಿಭಿಃ ಸ್ಥಿತಿಮ್।
ಚಕಾರ ಜಗತೋ ಯೋಽಜಃ ಸೋಽದ್ಯ ಮಾಂ ಪ್ರಲಪಿಷ್ಯತಿ॥ 10

---

ವೇದಗಳೂ ಸಮಸ್ತ ವೇದಾಂಗಗಳೂ ಪ್ರಕಟವಾದವೋ, ತೇಜಸ್ಸುಗಳಿಗೆ ಪರಮ ತೇಜಸ್ಸಿನ ನೆಲೆಯಾದ ಭಗವಂತನ ಆ ಮುಖವನ್ನು ನಾನು ವೀಕ್ಷಿಸುವೆನು! (5). ಅಖಿಲಾಧಾರನಾದ ಯಾವ ಪುರುಷೋತ್ತಮನು ಯಜ್ಞಗಳಲ್ಲಿ ಯಜ್ಞಪುರುಷನಾಗಿ ಋತ್ವಿಜ ಜನರಿಂದ ಅರ್ಚಿಸಲ್ಪಡುತ್ತಾನೋ ಆ ಜಗದೀಶ್ವರನನ್ನು ಸಂದರ್ಶಿಸುವೆನು! ನೂರು ಯಜ್ಞಗಳಿಂದ ಯಾರನ್ನು ಆರಾಧಿಸಿ ಇಂದ್ರನು ದೇವೇಶ್ವರನೆನಿಸಿದನೋ ಅಂತಹ ಅನಂತನೂ ಅನಾದಿಯೂ ಆದ ಕೇಶವನನ್ನು ನಾನು ನೋಡುವೆನು! (6-7). ಬ್ರಹ್ಮ, ಇಂದ್ರ, ರುದ್ರರು, ಅಶ್ವಿನೀ ದೇವತೆಗಳು, ವಸುಗಳು, ಆದಿತ್ಯರು, ಮರುದ್ಗಣಗಳೂ ಸಹ ಯಾರ ಸ್ವರೂಪವನ್ನರಿಯರೋ ಅಂತಹ ಶ್ರೀಹರಿಯು ನನಗೆ ಪ್ರತ್ಯಕ್ಷನಾಗುತ್ತಾನೆ! ಸರ್ವಾತ್ಮನೂ ಸರ್ವಜ್ಞನೂ ಸರ್ವನೂ ಸರ್ವಭೂತಗಳಲ್ಲಿ ನೆಲೆಸಿದವನೂ ಅಚಿಂತ್ಯನೂ ಅವ್ಯಯನೂ ವಿಭುವೂ ಆದ ಮಹಾತ್ಮನು ನನ್ನೊಡನೆ ಸಂಭಾಷಿಸುತ್ತಾನೆ! (8-9). ಮತ್ಸ್ಯಕೂರ್ಮವರಾಹ ಹಯಗ್ರೀವ ನರಸಿಂಹಾದಿ ರೂಪಗಳಿಂದ ಯಾವಾತನು ಜಗತ್ತಿನ ಸಂರಕ್ಷಣೆಯನ್ನು ಮಾಡಿದನೋ ಅಂತಹ

**ಸಾಂಪ್ರತಂ ಚ ಜಗತ್ಸ್ವಾಮೀ ಕಾರ್ಯಮಾತ್ಮಹೃದಿ ಸ್ಥಿತಿಮ್।**
**ಕರ್ತುಂ ಮನುಷ್ಯತಾಂ ಪ್ರಾಪ್ತಸ್ಸ್ವೇಚ್ಛಾದೇಹಧೃಗವ್ಯಯಃ॥** 11

**ಯೋಽನಂತಃ ಪೃಥಿವೀಂ ಧತ್ತೇ ಶೇಖರಸ್ಥಿತಿಸಂಸ್ಥಿತಾಮ್।**
**ಸೋಽವತೀರ್ಣೋ ಜಗತ್ಯರ್ಥೇ ಮಾಮಕ್ರೂರೇತಿ ವಕ್ಷ್ಯತಿ॥** 12

**ಪಿತೃಪುತ್ರಸುಹೃದ್‌ಭ್ರಾತೃಮಾತೃಬಂಧುಮಯೀಮಿಮಾಮ್।**
**ಯನ್ಮಾಯಾಂ ನಾಲಮುತ್ತರ್ತುಂ ಜಗತ್ತಸ್ಮೈ ನಮೋ ನಮಃ॥** 13

**ತರತ್ಯವಿದ್ಯಾಂ ವಿತತಾಂ ಹೃದಿ ಯಸ್ಮಿನ್ನಿವೇಶಿತೇ।**
**ಯೋಗಮಾಯಾಮಮೇಯಾಯ ತಸ್ಮೈ ವಿದ್ಯಾತ್ಮನೇ ನಮಃ॥** 14

**ಯಜ್ಞಭಿರ್ಯಜ್ಞಪುರುಷೋ ವಾಸುದೇವಶ್ಚ ಸಾತ್ವತೈಃ।**
**ವೇದಾಂತವೇದಿಭಿರ್ವಿಷ್ಣುಃ ಪ್ರೋಚ್ಯತೇ ಯೋ ನತೋಽಸ್ಮಿ ತಮ್॥** 15

---

ಅನಾದಿಪುರುಷನು ಇಂದು ನನ್ನೊಡನೆ ಮಾತಾಡುತ್ತಾನೆ! ಅವ್ಯಯನಾದ ಆ ಜಗದೀಶ್ವರನು ತನ್ನ ಮನಸ್ಸಿನಲ್ಲಿ ಚಿಂತಿಸಿದ ಕಾರ್ಯವನ್ನು ನೆರವೇರಿಸುವುದಕ್ಕಾಗಿ ಪ್ರಕೃತದಲ್ಲಿ ಇಚ್ಛಾನುಸಾರವಾಗಿ ಮನುಷ್ಯದೇಹವನ್ನು ಧರಿಸಿದ್ದಾನೆ (10-11). ಯಾವ ಅನಂತನು (ಶೇಷರೂಪದಿಂದ) ತನ್ನ ಮಸ್ತಕದಲ್ಲಿ ಕ್ಷೇಮವಾಗಿ ಇರಿಸಲ್ಪಟ್ಟ ಪೃಥ್ವಿಯನ್ನು ಧರಿಸಿರುತ್ತಾನೋ, ಜಗದ್ಧಿತಕ್ಕಾಗಿ ಅವತರಿಸಿದ ಆ ಭಗವಂತನು ನನ್ನನ್ನು ನೋಡಿ 'ಅಕ್ರೂರ' ಎಂದು ಸಂಬೋಧಿಸುವನು! (12). ತಂದೆ, ಮಗ, ಸ್ನೇಹಿತ, ಸೋದರ, ತಾಯಿ, ಬಂಧುಬಳಗ ರೂಪದಲ್ಲಿ ಮೆರೆಯುವ ಯಾವಾತನ ಮಾಯೆಯನ್ನು ಜಗತ್ತು ಉಲ್ಲಂಘಿಸಲು ಅಶಕ್ತವಾಗಿದೆಯೋ ಆ ಮಹಾಮಹಿಮನಿಗೆ ನಮೋ ನಮಃ (13). ಯಾವಾತನನ್ನು ಹೃದಯದಲ್ಲಿ ನೆಲೆಗೊಳಿಸಿದರೆ ಯೋಗಮಾಯಾರೂಪವಾದ ಅವಿದ್ಯೆಯನ್ನೂ ಮಾನವನು ದಾಟಬಲ್ಲನೋ ಅಂತಹ ಅಮೇಯನೂ ವಿದ್ಯಾಸ್ವರೂಪನೂ ಆದ ಶ್ರೀಹರಿಗೆ ನಮಸ್ಕಾರ! (14). ಯಾಜ್ಞಿಕರು ಯಜ್ಞಪುರುಷನೆಂದೂ ಭಾಗವತರು ವಾಸುದೇವನೆಂದೂ ವೇದಾಂತಿಗಳು ವಿಷ್ಣುವೆಂದೂ ಯಾರನ್ನು ಕರೆಯುತ್ತಾರೋ ಆತನಿಗೆ ಶರಣಾಗಿದ್ದೇನೆ. ಜಗದಾಧಾರವೂ ವಿಧಾತೃವೂ ಆದ ಯಾವ ಸತ್ಯದಲ್ಲಿ ಸದಸದ್ರೂಪವಾದ (ಕಾರ್ಯಕಾರಣಾತ್ಮಕ

**ಯಥಾ ಯತ್ರ ಜಗದ್ಧಾಮ್ನಿ ಧಾತರ್ಯೇತತ್ ಪ್ರತಿಷ್ಠಿತಮ್।**
**ಸದಸತ್ತೇನ ಸತ್ಯೇನ ಮಯ್ಯಸೌ ಯಾತು ಸೌಮ್ಯತಾಮ್॥** 16

**ಸ್ಮೃತೇ ಸಕಲಕಲ್ಯಾಣಭಾಜನಂ ಯತ್ರ ಜಾಯತೇ।**
**ಪುರುಷಸ್ತಮಜಂ ನಿತ್ಯಂ ವ್ರಜಾಮಿ ಶರಣಂ ಹರಿಮ್॥** 17

*ಶ್ರೀಪರಾಶರ ಉವಾಚ:*

**ಇತ್ಥಂ ಸಂಚಿಂತಯನ್ ವಿಷ್ಣುಂ ಭಕ್ತಿನಮ್ರಾತ್ಮಮಾನಸಃ।**
**ಅಕ್ರೂರೋ ಗೋಕುಲಂ ಪ್ರಾಪ್ತಃ ಕಿಂಚಿತ್ಸೂರ್ಯೇ ವಿರಾಜತಿ॥** 18

**ಸ ದದರ್ಶ ತದಾ ಕೃಷ್ಣಮಾದಾವಾದೋಹನೇ ಗವಾಮ್।**
**ವತ್ಸಮಧ್ಯಗತಂ ಫುಲ್ಲನೀಲೋತ್ಪಲದಲಚ್ಛವಿಮ್॥** 19

**ಪ್ರಫುಲ್ಲಪದ್ಮಪತ್ರಾಕ್ಷಂ ಶ್ರೀವತ್ಸಾಂಕಿತವಕ್ಷಸಮ್।**
**ಪ್ರಲಂಬಬಾಹುಮಾಯಾಮತುಂಗೋರಃಸ್ಥಲಮುನ್ನಸಮ್॥** 20

---

ವಾದ) ಈ ಜಗತ್ತು ಪ್ರತಿಷ್ಠಿತವಾಗಿದೆಯೋ ಆ ಸತ್ಯಬಲದಿಂದ-ಸರ್ವ ಸಾಕ್ಷಿತೆಯಿಂದ ಭಗವಂತನು ನನ್ನಲ್ಲಿ ಪ್ರಸನ್ನನಾಗಲಿ! (15-16). ಯಾರ ಸ್ಮರಣ ಮಾತ್ರದಿಂದ ಮಾನವನು ಸಕಲಕಲ್ಯಾಣಗಳಿಗೆ ಪಾತ್ರನಾಗುತ್ತಾನೋ ಅಂತಹ ಅಜನೂ ನಿತ್ಯನೂ ಪುರುಷೋತ್ತಮನೂ ಆದ ಶ್ರೀಹರಿಗೆ ಶರಣಾಗಿದ್ದೇನೆ" ಎಂದುಕೊಳ್ಳುತ್ತಿದ್ದನು (17). ಈ ಪ್ರಕಾರದಲ್ಲಿ ಅಕ್ರೂರನು ಭಕ್ತಿಯಿಂದ ನಮ್ರ ಚಿತ್ತನಾಗಿ ಆಲೋಚಿಸುತ್ತ ಇನ್ನೂ ಸೂರ್ಯನು ಸ್ವಲ್ಪ ಪ್ರಕಾಶಿಸುತ್ತಿರುವಾಗ ಗೋಕುಲವನ್ನು ಸೇರಿದನು. ಗೋಕುಲದಲ್ಲಿ ಅಕ್ರೂರನು ಹಸುಗಳ ಹಾಲು ಹಿಂಡುವ ಸ್ಥಳದಲ್ಲಿ ಕರುಗಳ ನಡುವೆ ನಿಂತಿದ್ದ ನೀಲೋತ್ಪಲದಳಶ್ಯಾಮಲನಾದ ಶ್ರೀಕೃಷ್ಣನನ್ನು ಕಂಡನು! (18-19). ಶ್ರೀಕೃಷ್ಣನು ಪ್ರಫುಲ್ಲಪದ್ಮದಳಾಯತಾಕ್ಷನೂ ಶ್ರೀವತ್ಸಾಂಕಿತವಕ್ಷಃಸ್ಥಳನೂ ದೀರ್ಘಬಾಹುವೂ ವಿಶಾಲೋನ್ನತವಾದ ಎದೆ ಯುಳ್ಳವನೂ ನೀಳವಾದ ನಾಸಿಕೆಯುಳ್ಳವನೂ ಆಗಿದ್ದನು (20). ಅವನ

**ಸವಿಲಾಸಸ್ಮಿತಾಧಾರಂ ಬಿಭ್ರಾಣಂ ಮುಖಪಂಕಜಮ್ ।**
**ತುಂಗರಕ್ತನಖಂ ಪದ್ಭ್ಯಾಂ ಧರಣ್ಯಾಂ ಸುಪ್ರತಿಷ್ಠಿತಮ್ ॥** 21

**ಬಿಭ್ರಾಣಂ ವಾಸಸೀ ಪೀತೇ ವನ್ಯಪುಷ್ಪವಿಭೂಷಿತಮ್ ।**
**ಸೇಂದುನೀಲಾಚಲಾಭಂ ತಂ ಸಿತಾಂಭೋಜಾವತಂಸಕಮ್ ॥** 22

**ಹಂಸಕುಂದೇಂದುಧವಲಂ ನೀಲಾಂಬರಧರಂ ದ್ವಿಜ ।**
**ತಸ್ಯಾನು ಬಲಭದ್ರಂ ಚ ದದರ್ಶ ಯದುನಂದನಮ್ ॥** 23

**ಪ್ರಾಂಶುಮುತ್ತುಂಗಬಾಹ್ವಂಸಂ ವಿಕಾಸಿಮುಖಪಂಕಜಮ್ ।**
**ಮೇಘಮಾಲಾಪರಿವೃತಂ ಕೈಲಾಸಾದ್ರಿಮಿವಾಪರಮ್ ॥** 24

**ತೌ ದೃಷ್ಟ್ವಾ ವಿಕಸದ್ವಕ್ತ್ರಸರೋಜಃ ಸ ಮಹಾಮತಿಃ ।**
**ಪುಲಕಾಂಚಿತಸರ್ವಾಂಗಸ್ತದಾಕ್ರೂರೋಽಭವನ್ ಮುನೇ ॥** 25

---

ಮುಖಕಮಲದಲ್ಲಿ ವಿಲಾಸಪೂರ್ವಕವಾದ ಮುಗುಳ್ನಗೆ ಮಿನುಗುತ್ತಿತ್ತು. ಅವನ ಉಗುರುಗಳು ಸ್ಫುಟವಾಗಿ ಕಾಣಿಸುತ್ತ ಕೆಂಪಾಗಿದ್ದವು. ಆತನು ಬರಿಗಾಲುಗಳಿಂದ ನೆಲದ ಮೇಲೆ ನಿಂತುಕೊಂಡಿದ್ದನು (21). ಶ್ರೀಕೃಷ್ಣನು ಎರಡು ಪೀತಾಂಬರ ಗಳನ್ನೂ ಧರಿಸಿ ಕಾಡುಹೂಗಳಿಂದ ಅಲಂಕೃತನಾಗಿದ್ದನು. ಇಂದ್ರನೀಲಾ ಚಲದಂತೆ ಎತ್ತರವಾಗಿ ಶ್ಯಾಮಲವರ್ಣನಾಗಿದ್ದ ಆತನು ಒಂದು ಬಿಳಿಯತಾವರೆ ಯನ್ನು ತಲೆಯಲ್ಲಿ ಮುಡಿದುಕೊಂಡಿದ್ದನು (22). ಮೈತ್ರೇಯ, ಶ್ರೀಕೃಷ್ಣನ ಬಳಿಯಲ್ಲಿದ್ದ ಯದುನಂದನನಾದ ಬಲಭದ್ರನನ್ನೂ ಅಕ್ರೂರನು ನೋಡಿದನು. ಬಲಭದ್ರನು ಹಂಸದಂತೆಯೂ ಮಾಗಿಮಲ್ಲಿಗೆಯಂತೆಯೂ ಚಂದ್ರನಂತೆಯೂ ಧವಳಾಂಗನಾಗಿ ನೀಲಾಂಬರವನ್ನು ಧರಿಸಿದ್ದನು (23). ಆತನದು ಎತ್ತರವಾದ ನಿಲುವು. ಪುಷ್ಟವಾದ ತೋಳು. ಉತ್ತುಂಗವಾದ ಹೆಗಲು. (ಬಿಳಿಯ ಬಣ್ಣದವ ನಾಗಿ ಕೃಷ್ಣಾಂಬರವನ್ನು ಧರಿಸಿದ್ದ) ಬಲಭದ್ರನು ಮೇಘಮಾಲಾಪರಿವೃತನಾದ ರಜತಾಚಲದಂತೆ ಕಂಗೊಳಿಸುತ್ತಿದ್ದನು (24). ಮೈತ್ರೇಯ, ಆ ಬಾಲಕರನ್ನು ನೋಡಿದೊಡನೆ ಪ್ರಾಜ್ಞನಾದ ಅಕ್ರೂರನ ಮುಖಕಮಲವರಳಿತು. ಸರ್ವಾಂಗ ಗಳಲ್ಲಿಯೂ ರೋಮಾಂಚವಾಯಿತು. ಅವನು ತನ್ನಲ್ಲಿ ಹೀಗೆಂದುಕೊಂಡನು:

**ತದೇತತ್ಪರಮಂ ಧಾಮ ತದೇತತ್ಪರಮಂ ಪದಮ್ ।**
**ಭಗವದ್ವಾಸುದೇವಾಂಶೋ ದ್ವಿಧಾ ಯೋಽಯಂ ವ್ಯವಸ್ಥಿತಃ ॥** 26

**ಸಾಫಲ್ಯಮಕ್ಷ್ಣೋರ್ಯುಗಮೇತದತ್ರ**
**ದೃಷ್ಟೇ ಜಗದ್ಧಾತರಿ ಯಾತಮುಚ್ಚೈಃ ।**
**ಅಪ್ಯಂಗಮೇತದ್ಭಗವತ್ಪ್ರಸಾದಾತ್**
**ತದಂಗಸಂಗೀ ಫಲವನ್ಮಮ ಸ್ಯಾತ್ ॥** 27

**ಅಪ್ಯೇಷ ಪೃಷ್ಠೇ ಮಮ ಹಸ್ತಪದ್ಮಂ**
**ಕರಿಷ್ಯತಿ ಶ್ರೀಮದನಂತಮೂರ್ತಿಃ ।**
**ಯಸ್ಯಾಂಗುಲಿಸ್ಪರ್ಶಹತಾಖಿಲಾಘೈ-**
**ರವಾಪ್ಯತೇ ಸಿದ್ಧಿರಪಾಸ್ತದೋಷಾ ॥** 28

**ಯೇನಾಗ್ನಿವಿದ್ಯುದ್ರವಿರಶ್ಮಿಮಾಲಾ-**
**ಕರಾಲಮತ್ಯುಗ್ರಮಪಾಸ್ಯ ಚಕ್ರಮ್ ।**
**ಚಕ್ರಂ ಘ್ನತಾ ದೈತ್ಯಪತೇರ್ಹೃತಾನಿ**
**ದೈತ್ಯಾಂಗನಾನಾಂ ನಯನಾಂಜನಾನಿ ॥** 29

---

“ಆ ಪರಮಧಾಮವೇ ಇದು. ಆ ಪರಮ ಪದವೇ ಇದು. ಭಗವಾನ್ ವಾಸುದೇವನ ಅಂಶವು ಎರಡು ರೂಪಗಳನ್ನು ಧರಿಸಿ ನಿಂತಿದೆ! (25-26). ವಿಶ್ವವಿಧಾತೃವಾದ ಈ ಪರವಸ್ತುವನ್ನು ನೋಡಿದ್ದರಿಂದ ನನ್ನ ನೇತ್ರಗಳು ಸಫಲವಾದವು! ನಾನು ಬಂದದ್ದು ಸಾರ್ಥಕವಾಯಿತು! ಭಗವಂತನ ಅನುಗ್ರಹದಿಂದ ಆತನ ಅಂಗಸಂಗವಾಗಿ ನನ್ನ ಈ ಅಂಗವೂ ಸಫಲವಾದೀತೇ? (27). ಈ ಅನಂತಮೂರ್ತಿಯು ನನ್ನ ಬೆನ್ನ ಮೇಲೆ ತನ್ನ ಶ್ರೀಮತ್ತಾದ ಕರಕಮಲವನ್ನು ಇಡುವನೆ? ಈ ಕರಕಮಲದ ಬೆರಳುಗಳ ಸ್ಪರ್ಶಮಾತ್ರದಿಂದ ಮಾನವರ ಸಮಸ್ತಪಾಪಗಳೂ ಶಮಿಸಿ ನಿರ್ದೋಷವಾದ ಕೈವಲ್ಯಸಿದ್ಧಿ ಲಭಿಸುತ್ತದೆ (28). ಈ ಕರವು ವಹ್ನಿ ವಿದ್ಯುದಾದಿತ್ಯರ ಕಿರಣಗಳಂತೆ ಉಗ್ರವಾದ ಕಿರಣಮಾಲಾಕರಾಳವಾದ ಚಕ್ರವನ್ನೆಸೆದು, ರಾಕ್ಷಸಾಧಿಪತಿಯಾದ ಕಾಲನೇಮಿ ಮೊದಲಾದವರ ಸೇನಾಚಕ್ರವನ್ನು ಧ್ವಂಸಮಾಡಿ ರಾಕ್ಷಸಾಂಗನೆಯರ ನಯನಗಳ

**ಯತ್ರಾಂಬು ವಿನ್ಯಸ್ಯ ಬಲಿರ್ಮನೋಜ್ಞಾ-**
**ನವಾಪ ಭೋಗಾನ್ ವಸುಧಾತಲಸ್ಥಃ।**
**ತಥಾऽಮರತ್ವಂ ತ್ರಿದಶಾಧಿಪತ್ಯಂ**
**ಮನ್ವಂತರಂ ಪೂರ್ಣಮಪೇತಶತ್ರುಮ್॥** 30

**ಅಪ್ಯೇಷ ಮಾಂ ಕಂಸಪರಿಗ್ರಹೇಣ**
**ದೋಷಾಸ್ಪದೀಭೂತಮದೋಷದುಷ್ಟಮ್।**
**ಕರ್ತಾವಮಾನೋಪಹತಂ ಧಿಗಸ್ತು**
**ತಜ್ಜನ್ಮ ಯತ್ಸಾಧುಬಹಿಷ್ಕೃತಸ್ಯ॥** 31

**ಜ್ಞಾನಾತ್ಮಕಸ್ಯಾಮಲಸತ್ತ್ವರಾಶೇ-**
**ರಪೇತದೋಷಸ್ಯ ಸದಾ ಸ್ಫುಟಸ್ಯ।**
**ಕಿಂ ವಾ ಜಗತ್ಯತ್ರ ಸಮಸ್ತಪುಂಸಾ-**
**ಮಜ್ಞಾತಮಸ್ಯಾಸ್ತಿ ಹೃದಿ ಸ್ಥಿತಸ್ಯ॥** 32

---

ಕಾಡಿಗೆಯನ್ನು ಒರಿಸಿಹಾಕಿದೆ*! ಈ ಕರದಲ್ಲಿ ಬಲಿಚಕ್ರವರ್ತಿಯು ಒಂದು ತೊಟ್ಟು ನೀರನ್ನು ಬಿಟ್ಟು, ಭೂಮಿಯ ಕೆಳಗೆ ಪಾತಾಳದಲ್ಲಿದ್ದು ಉತ್ತಮವಾದ ಭೋಗಗಳನ್ನೂ ಅಮರತ್ವವನ್ನೂ ಒಂದು ಮನ್ವಂತರ ಪೂರ್ತಿಯಾಗುವವರೆಗೆ ಶತ್ರುರಹಿತವಾದ ದೇವೇಂದ್ರ ಪದವಿಯನ್ನೂ ಪಡೆದನು! (29-30). ಕಂಸನನ್ನಾಶ್ರಯಿಸಿದ್ದರಿಂದ ದೋಷಯುಕ್ತನಾದ ನನ್ನನ್ನು ಶ್ರೀಕೃಷ್ಣನು ಪರಿಶುದ್ಧನನ್ನಾಗಿ ಮಾಡುವನೆ? ಸಾಧು ಬಹಿಷ್ಕೃತನಾದ ನನ್ನ ಅವಮಾನದೂಷಿತವಾದ ಜನ್ಮಕ್ಕೆ ಧಿಕ್ಕಾರವಿರಲಿ! (31). ಅಥವಾ ಜ್ಞಾನಸ್ವರೂಪನೂ ಶುದ್ಧಸತ್ತ್ವರಾಶಿಯೂ ದೋಷಹೀನನೂ ನಿತ್ಯಪ್ರಕಾಶನೂ ಸರ್ವಭೂತಹೃದಯಸ್ಥಿತನೂ ಆದ ಪ್ರಭುವಿಗೆ ಈ ಜಗತ್ತಿನಲ್ಲಿ ಗೊತ್ತಿಲ್ಲವಾದದ್ದು ಯಾವುದಿದೆ? (32). ಆದ್ದರಿಂದ

---

* ರಾಕ್ಷಸರು ಸತ್ತುಹೋದ್ದರಿಂದ ಅವರ ಮಡದಿಯರು ಕಣ್ಣಿಗೆ ಕಾಡಿಗೆ ಹಚ್ಚುವುದನ್ನು ಬಿಟ್ಟರು ಎಂದು ಅಭಿಪ್ರಾಯ.

**ತಸ್ಮಾದಹಂ ಭಕ್ತಿವಿನಮ್ರಚೇತಾ**
**ವ್ರಜಾಮಿ ಸರ್ವೇಶ್ವರಮೀಶ್ವರಾಣಾಮ್ ।**
**ಅಂಶಾವತಾರಂ ಪುರುಷೋತ್ತಮಸ್ಯ**
**ಹ್ಯನಾದಿಮಧ್ಯಾಂತಮಜಸ್ಯ ವಿಷ್ಣೋಃ ॥** 33

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಸಪ್ತದಶೋಽಧ್ಯಾಯಃ

---

ನಾನು ಅನಾದಿಯೂ ಪುರುಷೋತ್ತಮನೂ ಆದ ವಿಷ್ಣುವಿನ ಅಂಶಾವತಾರನೂ ಈಶ್ವರರಿಗೆ ಸರ್ವೇಶ್ವರನೂ ಆದಿಮಧ್ಯಾಂತರಹಿತನೂ ಆದ ಶ್ರೀಕೃಷ್ಣನ ಸಮೀಪಕ್ಕೆ ಭಕ್ತಿನಮ್ರನಾಗಿ ಹೋಗುವೆನು" ಎಂದು ಆಲೋಚಿಸಿದನು (33).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಹದಿನೇಳನೆಯ ಅಧ್ಯಾಯ ಮುಗಿಯಿತು.



## ಅಷ್ಟಾದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಚಿಂತಯನ್ನಿತಿ ಗೋವಿಂದಮುಪಗಮ್ಯ ಸ ಯಾದವಃ।**
**ಅಕ್ರೂರೋಽಸ್ಮೀತಿ ಚರಣೌ ನನಾಮ ಶಿರಸಾ ಹರೇಃ॥** 1

**ಸೋಽಪ್ಯೇನಂ ಧ್ವಜವಜ್ರಾಬ್ಜಕೃತಚಿಹ್ನೇನ ಪಾಣಿನಾ।**
**ಸಂಸ್ಪೃಶ್ಯಾಕೃಷ್ಯ ಚ ಪ್ರೀತ್ಯಾ ಸುಗಾಢಂ ಪರಿಷಸ್ವಜೇ॥** 2

**ಕೃತಸಂವಂದನೌ ತೇನ ಯಥಾವದ್ಬಲಕೇಶವೌ।**
**ತತಃ ಪ್ರವಿಷ್ಟೌ ಸಂಹೃಷ್ಟೌ ತಮಾದಾಯಾತ್ಮಮಂದಿರಮ್॥** 3

**ಸಹ ತಾಭ್ಯಾಂ ತದಾಽಕ್ರೂರಃ ಕೃತಸಂವಂದನಾದಿಕಃ।**
**ಭುಕ್ತಭೋಜ್ಯೋ ಯಥಾನ್ಯಾಯಮಾಚಚಕ್ಷೇ ತತಸ್ತಯೋಃ॥** 4

---

## ಅಧ್ಯಾಯ 18

ಶ್ರೀಕೃಷ್ಣನು ಬಲರಾಮನೊಡನೆ ಮಧುರೆಗೆ ಹೊರಡುವುದು.
ಗೋಪಿಯರ ವಿರಹತಾಪ. ಯಮುನಾನದಿಯಲ್ಲಿ ಅದ್ಭುತ ದೃಶ್ಯವನ್ನು ಕಂಡ
ಅಕ್ರೂರನು ವಿಸ್ಮಿತನಾಗಿ ಭಗವಂತನನ್ನು ಸ್ತುತಿಸುವುದು.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಈ ಪ್ರಕಾರವಾಗಿ ಆ ಯದುವಂಶೀಯನು ಆಲೋಚಿಸುತ್ತ ಗೋವಿಂದನ ಬಳಿಗೆ ಹೋಗಿ ತಲೆ ಬಾಗಿ "ನಾನು ಅಕ್ರೂರ" ಎಂದು ಹೇಳುತ್ತ ಶ್ರೀಹರಿಯ ಚರಣಗಳಿಗೆ ವಂದಿಸಿದನು (1). ಶ್ರೀಕೃಷ್ಣನು ತನ್ನ ಧ್ವಜವಜ್ರಪದ್ಮಚಿಹ್ನಾಂಕಿತವಾದ ಪಾಣಿಯಿಂದ ಅವನನ್ನು ಸ್ಪರ್ಶಿಸಿ ಎಳೆದುಕೊಂಡು ಪ್ರೀತಿಯಿಂದ ಗಾಢವಾಗಿ ಅಪ್ಪಿಕೊಂಡನು. ಆಮೇಲೆ ಬಲರಾಮನಿಗೂ ಶ್ರೀಕೃಷ್ಣನಿಗೂ ಕ್ರಮವಾಗಿ ನಮಿಸಿದ ಅಕ್ರೂರನನ್ನು ಅವರೀರ್ವರೂ ಸಂಪ್ರೀತರಾಗಿ ತಮ್ಮ ಮನೆಗೆ ಕರೆದುಕೊಂಡು ಹೋದರು (2-3). ಅಲ್ಲಿ ಬಲರಾಮಕೃಷ್ಣರು ಅಕ್ರೂರನಿಗೆ ವಂದನಾಪೂರ್ವಕವಾಗಿ ಸತ್ಕರಿಸಿ ಭೋಜನ ಮಾಡಿಸಿದರು. ಅನಂತರ ಅಕ್ರೂರನು ಅವರಿಬ್ಬರಿಗೆ ಪೂರ್ಣ

**ಯಥಾ ನಿರ್ಭರ್ತ್ಸಿತಸ್ತೇನ ಕಂಸೇನಾನಕದುಂದುಭಿಃ।**
**ಯಥಾ ಚ ದೇವಕೀ ದೇವೀ ದಾನವೇನ ದುರಾತ್ಮನಾ॥** 5

**ಉಗ್ರಸೇನೇ ಯಥಾ ಕಂಸಸ್ಸ ದುರಾತ್ಮಾ ಚ ವರ್ತತೇ।**
**ಯಂ ಚೈವಾರ್ಥಂ ಸಮುದ್ದಿಶ್ಯ ಕಂಸೇನ ತು ವಿಸರ್ಜಿತಃ॥** 6

**ತತ್ಸರ್ವಂ ವಿಸ್ತರಾತ್ ಶ್ರುತ್ವಾ ಭಗವಾನ್ ದೇವಕೀಸುತಃ।**
**ಉವಾಚಾಖಿಲಮಪ್ಯೇತಜ್ಜ್ಞಾತಂ ದಾನಪತೇ ಮಯಾ॥** 7

**ಕರಿಷ್ಯೇ ತನ್ಮಹಾಭಾಗ ಯದತ್ರೌಪಯಿಕಂ ಮತಮ್।**
**ವಿಚಿಂತ್ಯಂ ನಾನ್ಯಥೈತತ್ತೇ ವಿದ್ಧಿ ಕಂಸಂ ಹತಂ ಮಯಾ॥** 8

**ಅಹಂ ರಾಮಶ್ಚ ಮಥುರಾಂ ಶ್ವೋ ಯಾಸ್ಯಾವಸ್ಸಹ ತ್ವಯಾ।**
**ಗೋಪವೃದ್ಧಾಶ್ಚ ಯಾಸ್ಯಂತಿ ಹ್ಯಾದಾಯೋಪಾಯನಂ ಬಹು॥** 9

**ನಿಶೇಯಂ ನೀಯತಾಂ ವೀರ ನ ಚಿಂತಾಂ ಕರ್ತುಮರ್ಹಸಿ।**
**ತ್ರಿರಾತ್ರಾಭ್ಯಂತರೇ ಕಂಸಂ ನಿಹನಿಷ್ಯಾಮಿ ಸಾನುಗಮ್॥** 10

---

ವೃತ್ತಾಂತವನ್ನು ನಡೆದಂತೆ ಹೇಳಲುಪಕ್ರಮಿಸಿದನು. ದುರಾತ್ಮನೂ ದಾನವನೂ ಆದ ಕಂಸನು ವಸುದೇವನನ್ನು ಗದರಿಸಿದ್ದು, ದೇವಕೀದೇವಿಯನ್ನು ನಿಂದಿಸಿದ್ದು, (ತಂದೆಯಾದ) ಉಗ್ರಸೇನನ ವಿಷಯದಲ್ಲಿ ಅವನ ವರ್ತನೆ—ಇವುಗಳನ್ನೂ, ಯಾವ ಉದ್ದೇಶದಿಂದ ಕಂಸನು ತನ್ನನ್ನು ಕಳಿಸಿದ್ದಾನೆಯೆಂಬುದನ್ನೂ ತಿಳಿಸಿದನು (4-6). ಅದೆಲ್ಲವನ್ನೂ ವಿವರವಾಗಿ ಕೇಳಿದ ಮೇಲೆ ಭಗವಾನ್ ದೇವಕೀಸುತನು "ಹೇ ದಾನಪತಿ, ಇವೆಲ್ಲವೂ ನನಗೆ ಗೊತ್ತಾಯಿತು. ಹೇ ಮಹಾಭಾಗ, ಈ ವಿಷಯದಲ್ಲಿ ನನಗೆ ಯುಕ್ತವಾಗಿ ತೋರಿದ್ದನ್ನು ಮಾಡುವೆನು. ಅನ್ಯಥಾ ಭಾವಿಸಬಾರದು. ಕಂಸನು ನನ್ನಿಂದ ಹತನಾದನೆಂದು ತಿಳಿ! (7-8). ನಾನೂ ಬಲರಾಮನೂ ನಾಳೆ ನಿನ್ನೊಡನೆ ಮಧುರೆಗೆ ಬರುತ್ತೇವೆ. ಹಿರಿಯರಾದ ಗೋಪಾಲರು ಯಥೇಚ್ಛವಾಗಿ ಕಾಣಿಕೆಗಳನ್ನು ತೆಗೆದುಕೊಂಡು ಬರುತ್ತಾರೆ. ಓ ವೀರ, ಈ ರಾತ್ರಿಯನ್ನು ಕಳೆ. ನೀನು ಚಿಂತಿಸಬೇಕಾದ್ದಿಲ್ಲ. ಇನ್ನು ಮೂರು ರಾತ್ರಿಗಳೊಳಗೆ ಕಂಸನನ್ನು ಅವನ ಪರಿವಾರ ಸಮೇತವಾಗಿ ಸಂಹರಿಸುವೆನು" ಎಂದು ನುಡಿದನು (9-10). ಅನಂತರ ಅಕ್ರೂರನೂ ಕೇಶವಬಲಭದ್ರರೂ

*ಶ್ರೀಪರಾಶರ ಉವಾಚ:*

**ಸಮಾದಿಶ್ಯ ತತೋ ಗೋಪಾನಕ್ರೂರೋಽಪಿ ಚ ಕೇಶವಃ।**
**ಸುಷ್ವಾಪ ಬಲಭದ್ರಶ್ಚ ನಂದಗೋಪಗೃಹೇ ತತಃ॥** 11

**ತತಃ ಪ್ರಭಾತೇ ವಿಮಲೇ ಕೃಷ್ಣರಾಮೌ ಮಹಾದ್ಯುತೀ।**
**ಅಕ್ರೂರೇಣ ಸಮಂ ಗಂತುಮುದ್ಯತೌ ಮಥುರಾಂ ಪುರೀಮ್॥** 12

**ದೃಷ್ಟ್ವಾ ಗೋಪೀಜನಸ್ಸಾಸ್ರಃ ಶ್ಲಥದ್ವಲಯಬಾಹುಕಃ।**
**ನಿಃಶಶ್ವಾಸಾತಿದುಃಖಾರ್ತಃ ಪ್ರಾಹ ಚೇದಂ ಪರಸ್ಪರಮ್॥** 13

**ಮಥುರಾಂ ಪ್ರಾಪ್ಯ ಗೋವಿಂದಃ ಕಥಂ ಗೋಕುಲಮೇಷ್ಯತಿ।**
**ನಗರಸ್ತ್ರೀಕಲಾಲಾಪಮಧು ಶ್ರೋತ್ರೇಣ ಪಾಸ್ಯತಿ॥** 14

**ವಿಲಾಸವಾಕ್ಯಪಾನೇಷು ನಾಗರೀಣಾಂ ಕೃತಾಸ್ಪದಮ್।**
**ಚಿತ್ತಮಸ್ಯ ಕಥಂ ಭೂಯೋ ಗ್ರಾಮ್ಯಗೋಪೀಷು ಯಾಸ್ಯತಿ॥** 15

---

ಗೋಕುಲದಲ್ಲಿದ್ದ ಸಮಸ್ತ ಗೋಪಾಲರಿಗೂ ಕಂಸನ ಸಂದೇಶವನ್ನು ತಿಳಿಯಪಡಿಸಿ ನಂದಗೋಪನ ಗೃಹದಲ್ಲಿ ಮಲಗಿ ನಿದ್ರಿಸಿದರು (11). ತರುವಾಯ ಸ್ವಚ್ಛವಾಗಿ ಬೆಳಗಾದ ಮೇಲೆ ಮಹಾತೇಜಸ್ವಿಗಳಾದ ಬಲರಾಮಕೃಷ್ಣರು ಅಕ್ರೂರನೊಡನೆ ಮಧುರಾನಗರಿಗೆ ಹೊರಡಲು ಸಿದ್ಧರಾದರು. ಅದನ್ನು ನೋಡಿದ ಗೋಪಿಯರ ಕೈಬಳೆಗಳು ತೋಳುಗಳಿಂದ ಸಡಿಲವಾಗಿ ಜಾರುತ್ತಿರಲು ಕಣ್ಣೀರು ತುಂಬಿಕೊಂಡು ನಿಟ್ಟುಸಿರು ಬಿಡುತ್ತ ದುಃಖಾರ್ತರಾಗಿ ಅವರು ತಮ್ಮಲ್ಲಿ ಈ ರೀತಿ ಮಾತಾಡಿಕೊಳ್ಳುತ್ತಿದ್ದರು (12-13). ಏನೆಂದರೆ, "ಗೋವಿಂದನು ಮಧುರೆಗೆ ಹೋದಮೇಲೆ ತಿರುಗಿ ಗೋಕುಲಕ್ಕೆ ಹೇಗೆ ಬಂದಾನು? ನಗರಸ್ತ್ರೀಯರ ಮಂಜುಭಾಷಿತದ ಮಧುವನ್ನು ಕಿವಿಯಿಂದ ಕುಡಿಯುತ್ತ ಇರುವನು! ನಾಗರೀಜನರ ವಿಲಾಸವಚನಗಳನ್ನು ಕೇಳಿ ಪರಿಚಯವಾದಮೇಲೆ ಇವನ ಚಿತ್ತವು ಹಳ್ಳಿಯ ಗೊಲ್ಲತಿಯರ ಕಡೆಗೆ ಎಂದಾದರೂ ಹರಿದೀತೇ? (14-15). ಸಮಸ್ತ ಗೋಕುಲದಲ್ಲಿ ಸಾರಭೂತನಾದವನೆಂದರೆ ಕೃಷ್ಣ! ವಿಧಾತನು ಅವನನ್ನು

**ಸಾರಂ ಸಮಸ್ತಗೋಪ್ಯಸ್ಯ ವಿಧಿನಾ ಹರತಾ ಹರಿಮ್।**
**ಪ್ರಹೃತಂ ಗೋಪಯೋಷಿತ್ಸು ನಿರ್ಘೃಣೇನ ದುರಾತ್ಮನಾ॥ 16**

**ಭಾವಗರ್ಭಸ್ಥಿತಂ ವಾಕ್ಯಂ ವಿಲಾಸಲಲಿತಾ ಗತಿಃ।**
**ನಾಗರೀಣಾಮತೀವೈತತ್ಕಟಾಕ್ಷೇಕ್ಷಿತಮೇವ ಚ॥ 17**

**ಗ್ರಾಮ್ಯೋ ಹರಿರಯಂ ತಾಸಾಂ ವಿಲಾಸನಿಗಡೈರ್ಯುತಃ।**
**ಭವತೀನಾಂ ಪುನಃ ಪಾರ್ಶ್ವಂ ಕಯಾ ಯುಕ್ತ್ಯಾ ಸಮೇಷ್ಯತಿ॥ 18**

**ಏಷ್ಯೈಷ ರಥಮಾರುಹ್ಯ ಮಥುರಾಂ ಯಾತಿ ಕೇಶವಃ।**
**ಕ್ರೂರೇಣಾಕ್ರೂರಕೇಣಾತ್ರ ನಿರ್ಘೃಣೇನ ಪ್ರತಾರಿತಃ॥ 19**

**ಕಿಂ ನ ವೇತ್ತಿ ನೃಶಂಸೋಽಯಮನುರಾಗಪರಂ ಜನಮ್।**
**ಯೇನೈವಮಕ್ಷ್ಣೋರಾಹ್ಲಾದಂ ನಯತ್ಯನ್ಯತ್ರ ನೋ ಹರಿಮ್॥ 20**

**ಏಷ ರಾಮೇಣ ಸಹಿತಃ ಪ್ರಯಾತ್ಯತ್ಯಂತನಿರ್ಘೃಣಃ।**
**ರಥಮಾರುಹ್ಯ ಗೋವಿಂದಸ್ತ್ವರ್ಯತಾಮಸ್ಯ ವಾರಣೇ॥ 21**

---

ಇನ್ನೊಂದೆಡೆಗೆ ಕರೆದೊಯ್ಯುತ್ತಿದ್ದಾನೆ. ನಿರ್ದಯನೂ ದುರಾತ್ಮನೂ ಆದ ವಿಧಾತನು ಗೋಪೀಜನರಿಗೆ ಬಲವಾದ ಪೆಟ್ಟು ಕೊಟ್ಟನು! (16). ನಗರ ವಾಸಿಗಳಾದ ಯುವತಿಯರಾದರೋ ಭಾವಗರ್ಭಿತವಾಗಿ ಮುಗುಳ್ನಗೆ ಬೀರುತ್ತ ಮಾತನ್ನಾಡುತ್ತಾರೆ! ಅವರ ನಡಿಗೆಯ ವಿಲಾಸ ಮನೋಜ್ಞವಾದುದು. ಬಹು ಸೊಗಸಾದ ಓರೆಗಣ್ಣಿನ ನೋಟ! ಗ್ರಾಮದಲ್ಲಿ ಬೆಳೆದ ಕೃಷ್ಣನು ಅವರ ಲೀಲೆಗಳೆಂಬ ಸಂಕೋಲೆಗಳಿಗೆ ಸಿಕ್ಕಿಕೊಂಡುಬಿಡುತ್ತಾನೆ! ನಿಮ್ಮ ಬಳಿಗೆ ಯಾವ ಕಾರಣದಿಂದ ಬಂದಾನು? (17-18). ಇದೋ ಇದೋ! ಕೃಷ್ಣನು ರಥವೇರಿ ಮಧುರೆಗೆ ಹೊರಟಿದ್ದಾನೆ. ದಯಾಹೀನನಾದ ಅಕ್ರೂರನೆಂಬ ಕ್ರೂರನಿಂದ ಮೋಸಹೋಗಿದ್ದಾನೆ! ನಾವು ಕೃಷ್ಣನಲ್ಲಿ ಎಷ್ಟು ಅನುರಕ್ತರಾಗಿದ್ದೇವೆಂಬುದು ಈ ಘಾತುಕನಾದ ಅಕ್ರೂರನಿಗೆ ಗೊತ್ತಿಲ್ಲವೆ? ನಮ್ಮ ನಯನಗಳಿಗೆ ಆನಂದವರ್ಧನ ನಾದ ನಂದನಂದನನನ್ನು ಅನ್ಯತ್ರ ಕರೆದೊಯ್ಯುತ್ತಿರುವನಲ್ಲ! (19-20). ಈ ಗೋವಿಂದನೂ ಅತ್ಯಂತ ನಿರ್ಘೃಣ! ಆಗಲೇ ರಾಮನೊಡನೆ ರಥವೇರಿ ಹೊರಟುಬಿಟ್ಟಿದ್ದಾನೆ. ಬೇಗ ಹೋಗಿ ಅವನನ್ನು ತಡೆಯಿರಿ! ಹೇ ಗೋಪಿ, ಗುರುಜನರೆದುರಿಗೆ ಹಾಗೆ ಹೋಗಿ ಹೇಳಲು ನಮಗೆ ಶಕ್ಯವಿಲ್ಲ , ಎನ್ನುವೆಯಾ?

**ಗುರೂಣಾಮಗ್ರತೋ ವಕ್ತುಂ ಕಿಂ ಬ್ರವೀಷಿ ನ ನಃ ಕ್ಷಮಮ್ ।**
**ಗುರವಃ ಕಿಂ ಕರಿಷ್ಯಂತಿ ದಗ್ಧಾನಾಂ ವಿರಹಾಗ್ನಿನಾ ॥ 22**

**ನಂದಗೋಪಮುಖಾ ಗೋಪಾ ಗಂತುಮೇತೇ ಸಮುದ್ಯತಾಃ ।**
**ನೋದ್ಯಮಂ ಕುರುತೇ ಕಶ್ಚಿದ್ಗೋವಿಂದವಿನಿವರ್ತನೇ ॥ 23**

**ಸುಪ್ರಭಾತಾದ್ಯ ರಜನೀ ಮಥುರಾವಾಸಿಯೋಷಿತಾಮ್ ।**
**ಪಾಸ್ಯಂತ್ಯಚ್ಯುತವಕ್ತ್ರಾಬ್ಜಂ ಯಾಸಾಂ ನೇತ್ರಾಲಿಪಂಕ್ತಯಃ ॥ 24**

**ಧನ್ಯಾಸ್ತೇ ಪಥಿ ಯೇ ಕೃಷ್ಣಮಿತೋ ಯಾಂತ್ಯನಿವಾರಿತಾಃ ।**
**ಉದ್ವಹಿಷ್ಯಂತಿ ಪಶ್ಯಂತಸ್ಸ್ವದೇಹಂ ಪುಲಕಾಂಚಿತಮ್ ॥ 25**

**ಮಥುರಾನಗರೀಪೌರನಯನಾನಾಂ ಮಹೋತ್ಸವಃ ।**
**ಗೋವಿಂದಾವಯವೈರ್ದೃಷ್ಟೈರತೀವಾದ್ಯ ಭವಿಷ್ಯತಿ ॥ 26**

**ಕೋ ನು ಸ್ವಪ್ನಃ ಸಭಾಗ್ಯಾಭಿರ್ದೃಷ್ಟಸ್ತಾಭಿರಧೋಕ್ಷಜಮ್ ।**
**ವಿಸ್ತಾರಿಕಾಂತಿನಯನಾ ಯಾ ದ್ರಕ್ಷ್ಯಂತ್ಯನಿವಾರಿತಾಃ ॥ 27**

---

ಭಲಾ, ವಿರಹಾಗ್ನಿಯಿಂದ ನಾವು ಸುಟ್ಟು ಬೂದಿಯಾಗುತ್ತಿದ್ದೇವಲ್ಲ , ಅದಕ್ಕೆ ಗುರುಜನರು ಯಾವ ಪರಿಹಾರ ಮಾಡುವರು? (21-22). ಓಹೋ! ನಂದ ಗೋಪನೇ ಮೊದಲಾದ ಗೋಪಾಲರೂ ಸಹ ಮಥುರೆಗೆ ಹೋಗಲು ಸಜ್ಜಾಗುತ್ತಿದ್ದಾರೆ! ಗೋವಿಂದನನ್ನು ತಡೆಯಲು ಯಾವನೂ ಯತ್ನಿಸುವುದೇ ಇಲ್ಲ! ಮಥುರೆಯಲ್ಲಿರುವ ಮಾನಿನಿಯರಿಗೆ ಇಂದು ರಾತ್ರಿ ಕಳೆದು ಸುಪ್ರಭಾತ ವಾಯಿತು! ಅವರ ನಯನಪಂಕ್ತಿಗಳು ದುಂಬಿಗಳಂತೆ ಕೃಷ್ಣನ ಮುಖಕಮಲವನ್ನು ಹೀರುವುವು! (23-24). ಯಾರ ತಡೆಯೂ ಇಲ್ಲದೆ ಇಲ್ಲಿಂದ ಕೃಷ್ಣನ ಜೊತೆಗೆ ಹೋಗತಕ್ಕವರೆ ಧನ್ಯರು. ಅವರು ದಾರಿಯಲ್ಲಿ ಕೃಷ್ಣನನ್ನು ನೋಡುತ್ತ ರೋಮಾಂಚಿತ ಗಾತ್ರರಾಗುವರು, ಧನ್ಯರವರು (25). ಈ ದಿನ ಕೃಷ್ಣನ ಸುಂದರಾಂಗಗಳನ್ನು ನೋಡುವ ಮಥುರಾನಗರದ ಪೌರರ ಕಣ್ಣುಗಳಿಗೆ ದೊಡ್ಡ ಹಬ್ಬವಾಗುವುದು! ಭಾಗ್ಯಶಾಲಿನಿಯರಾದ ನಗರಾಂಗನೆಯರು ಶುಭಕರವಾದ ಯಾವ ಸ್ವಪ್ನವನ್ನು ಕಂಡಿರಬಹುದು! ಅವರು ಯಾವ ಅಡ್ಡಿಯೂ ಇಲ್ಲದೆ ಕಾಂತಿಮಯವಿಶಾಲನಯನೆಯರಾಗಿ ಕೃಷ್ಣನನ್ನು ನೋಡುವರು! (26-27).

**ಅಹೋ ಗೋಪೀಜನಸ್ಯಾಸ್ಯ ದರ್ಶಯಿತ್ವಾ ಮಹಾನಿಧಿಮ್ ।**
**ಉತ್ಕೃತ್ತಾನ್ಯದ್ಯ ನೇತ್ರಾಣಿ ವಿಧಿನಾಽಕರುಣಾತ್ಮನಾ ॥** 28

**ಅನುರಾಗೇಣ ಶೈಥಿಲ್ಯಮಸ್ಮಾಸು ವ್ರಜಿತೇ ಹರೌ ।**
**ಶೈಥಿಲ್ಯಮುಪಯಾಂತ್ಯಾಶು ಕರೇಷು ವಲಯಾನ್ಯಪಿ ॥** 29

**ಅಕ್ರೂರಃ ಕ್ರೂರಹೃದಯಶ್ಶೀಘ್ರಂ ಪ್ರೇರಯತೇ ಹಯಾನ್**
**ಏವಮಾರ್ತಾಸು ಯೋಷಿತ್ಸು ಕೃಪಾ ಕಸ್ಯ ನ ಜಾಯತೇ ॥** 30

**ಏಷ ಕೃಷ್ಣರಥಸ್ಯೋಚ್ಚೈಶ್ಚಕ್ರರೇಣುರ್ನಿರೀಕ್ಷ್ಯತಾಮ್ ।**
**ದೂರೀಭೂತೋ ಹರಿರ್ಯೇನ ಸೋಽಪಿ ರೇಣುರ್ನ ಲಕ್ಷ್ಯತೇ ॥** 31

*ಶ್ರೀಪರಾಶರ ಉವಾಚ:*

**ಇತ್ಯೇವಮತಿಹಾರ್ದೇನ ಗೋಪೀಜನನಿರೀಕ್ಷಿತಃ ।**
**ತತ್ಯಾಜ ವ್ರಜಭೂಭಾಗಂ ಸಹ ರಾಮೇಣ ಕೇಶವಃ ॥** 32

---

ಅಯ್ಯೋ! ವಿಧಿಗೆ ಕರುಣೆಯಿಲ್ಲ. ಗೋಪಿಯರಾದ ನಮಗೆ ಒಂದು ಮಹಾನಿಧಿಯನ್ನು ತೋರಿಸಿ, ಆಮೇಲೆ ನಮ್ಮ ಕಣ್ಣುಗಳನ್ನೇ ಕಿತ್ತುಹಾಕಿದನು! ಹರಿಯು ಹೊರಟಮೇಲೆ ನಮ್ಮ ವಿಷಯದಲ್ಲಿ ಅವನ ಅನುರಾಗ ಸಡಿಲಿತು. (ನೋಡಿರಿ!) ಒಡನೆಯೇ ನಮ್ಮ ಕೈಗಳಲ್ಲಿರುವ ಬಳೆಗಳೂ ಸಡಿಲವಾದವು! (28-29). ಅದೋ, ಕ್ರೂರಹೃದಯನಾದ ಅಕ್ರೂರನು ರಥಾಶ್ವಗಳನ್ನು ದೌಡಾಯಿಸುತ್ತಿದ್ದಾನೆ! ಈ ಪ್ರಕಾರವಾಗಿ ನೊಂದು ಬೆಂದಿರುವ ಅಬಲೆಯರಲ್ಲಿ ಬೇರೆ ಯಾವನಿಗೆ ಮರುಕ ಹುಟ್ಟದೆ ಇದ್ದೀತು? ಅಲ್ಲಿ ನೋಡಿರಿ, ಕೃಷ್ಣನ ರಥದ ಗಾಲಿಗಳಿಂದೆದ್ದ ಧೂಳಿ ಮೇಲೆ ಕಾಣಿಸುತ್ತಿದೆ. ಅಯ್ಯೋ! ಕೃಷ್ಣನು ದೂರವಾದನು! ಈಗ ಧೂಳಿಯೂ ಕಾಣುವುದಿಲ್ಲ!" (30-31). ಈ ರೀತಿಯಲ್ಲಿ ತೀವ್ರಾನುರಾಗವಿದ್ದ ಗೋಪಿಯರಿಂದ ವೀಕ್ಷಿತನಾದ ಶ್ರೀಕೃಷ್ಣನು ಬಲರಾಮ ನೊಡನೆ ವ್ರಜಭೂಮಿಯನ್ನು ತ್ಯಜಿಸಿದನು. ಶೀಘ್ರಗಾಮಿಗಳಾದ ಅಶ್ವಗಳನ್ನು

**ಗಚ್ಛಂತೌ ಜವನಾಶ್ವೇನ ರಥೇನ ಯಮುನಾತಟಮ್ ।**
**ಪ್ರಾಪ್ತಾ ಮಧ್ಯಾಹ್ನಸಮಯೇ ರಾಮಾಕ್ರೂರಜನಾರ್ದನಾಃ ॥ 33**

**ಅಥಾಹ ಕೃಷ್ಣಮಕ್ರೂರೋ ಭವದ್ಭ್ಯಾಂ ತಾವದಾಸ್ಯತಾಮ್ ।**
**ಯಾವತ್ಕರೋಮಿ ಕಾಲಿಂದ್ಯಾ ಆಹ್ನಿಕಾರ್ಹಣಮಂಭಸಿ ॥ 34**

*ಶ್ರೀಪರಾಶರ ಉವಾಚ:*

**ತಥೇತ್ಯುಕ್ತಸ್ತತಸ್ನಾತಸ್ಸ್ವಾಚಾಂತಸ್ಸ ಮಹಾಮತಿಃ ।**
**ದಧ್ಯೌ ಬ್ರಹ್ಮಪರಂ ವಿಪ್ರ ಪ್ರವಿಷ್ಟೋ ಯಮುನಾಜಲೇ ॥ 35**

**ಫಣಾಸಹಸ್ರಮಾಲಾಢ್ಯಂ ಬಲಭದ್ರಂ ದದರ್ಶ ಸಃ ।**
**ಕುಂದಮಾಲಾಂಗಮುನ್ನಿದ್ರಪದ್ಮಪತ್ರಾಯತೇಕ್ಷಣಮ್ ॥ 36**

**ವೃತಂ ವಾಸುಕಿರಂಭಾದ್ಯೈರ್ಮಹದ್ಭಿಃ ಪವನಾಶಿಭಿಃ ।**
**ಸಂಸ್ತೂಯಮಾನಮುದ್ಗಂಧಿವನಮಾಲಾವಿಭೂಷಿತಮ್ ॥ 37**

---

ಹೂಡಿದ್ದ ರಥದಲ್ಲಿ ಪ್ರಯಾಣ ಮಾಡುತ್ತ ರಾಮ, ಕೃಷ್ಣ, ಅಕ್ರೂರರು ಮಧ್ಯಾಹ್ನದ ಹೊತ್ತಿಗೆ ಯಮುನಾ ತೀರವನ್ನು ಸೇರಿದರು (32-33). ಆಗ ಅಕ್ರೂರನು ಶ್ರೀಕೃಷ್ಣನನ್ನು ಕುರಿತು "ನೀವಿಬ್ಬರೂ ಇಲ್ಲೇ ಕುಳಿತಿರಿ. ನಾನು ಯಮುನಾಜಲದಲ್ಲಿ ಮಾಧ್ಯಾಹ್ನಿಕವನ್ನು ಮುಗಿಸಿ ಬರುವೆನು" ಎಂದನು. 'ಆಗಲಿ' ಎಂದು ಕೃಷ್ಣನು ಹೇಳಲಾಗಿ, ಪ್ರಾಜ್ಞನಾದ ಅಕ್ರೂರನು ಸ್ನಾನಾಚಮನ ಗಳನ್ನು ಮಾಡಿ ಯಮುನಾಜಲದಲ್ಲಿ ನಿಂತು, ಮೈತ್ರೇಯ, ಪರಬ್ರಹ್ಮವಸ್ತುವನ್ನು ಧ್ಯಾನಿಸತೊಡಗಿದನು (34-35). ಆಗ ಅಕ್ರೂರನು ಸಾವಿರ ಹೆಡೆಗಳ ಸಾಲಿ ನಿಂದ ವಿರಾಜಿಸತಕ್ಕವನೂ ಕುಂದಕುಸುಮದ ಮಾಲೆಯಂತೆ ಶುಭ್ರಾಂಗನೂ ಅರಳಿದ ಪದ್ಮಪತ್ರದಂತೆ ವಿಶಾಲ ನೇತ್ರವುಳ್ಳವನೂ ಆದ ಬಲಭದ್ರನನ್ನು ಕಂಡನು! (36). ಆ ಬಲಭದ್ರನು ವಾಸುಕಿ, ರಂಭ—ಮೊದಲಾದ ಮಹಾಸರ್ಪ ಗಳಿಂದ ಪರಿವೃತ್ತನಾಗಿ ಸ್ತುತಿಸಲ್ಪಡುತ್ತ, ಪರಿಮಳವನ್ನು ಬೀರುವ ವನಮಾಲೆ ಯಿಂದ ವಿಭೂಷಿತನಾಗಿದ್ದನು. ಅಲ್ಲದೆ ಶ್ಯಾಮವರ್ಣದ ಎರಡು ವಸ್ತ್ರಗಳನ್ನು ಧರಿಸಿ ಸುಂದರವಾದ ಪದ್ಮಮಾಲೆಯನ್ನು ಶಿರಸ್ಸಿನಲ್ಲಿ ಮುಡಿದಿದ್ದನು.

**ದಧಾನಮಸಿತೇ ವಸ್ತ್ರೇ ಚಾರುಪದ್ಮಾವಸಂತಕಮ್।**
**ಚಾರುಕುಂಡಲಿನಂ ಭ್ರಾಂತಮಂತರ್ಜಲತಲೇ ಸ್ಥಿತಮ್॥** 38

**ತಸ್ಯೋತ್ಸಂಗೇ ಘನಶ್ಯಾಮಮಾತಾಮ್ರಾಯತಲೋಚನಮ್।**
**ಚತುರ್ಬಾಹುಮುದಾರಾಂಗಂ ಚಕ್ರಾದ್ಯಾಯುಧಭೂಷಣಮ್॥** 39

**ಪೀತೇ ವಸಾನಂ ವಸನೇ ಚಿತ್ರಮಾಲ್ಯೋಪಶೋಭಿತಮ್।**
**ಶಕ್ರಚಾಪತಡಿನ್ಮಾಲಾವಿಚಿತ್ರಮಿವ ತೋಯದಮ್॥** 40

**ಶ್ರೀವತ್ಸವಕ್ಷಸಂ ಚಾರುಕೇಯೂರಮುಕುಟೋಜ್ವಲಮ್।**
**ದದರ್ಶ ಕೃಷ್ಣಮಕ್ಲಿಷ್ಟಪುಂಡರೀಕಾವತಂಸಕಮ್॥** 41

**ಸನಂದನಾದ್ಯೈರ್ಮುನಿಭಿಸ್ಸಿದ್ಧಯೋಗೈರಕಲ್ಮಷೈಃ।**
**ಸಂಚಿಂತ್ಯಮಾನಂ ತತ್ರಸ್ಥೈರ್ನಾಸಾಗ್ರನ್ಯಸ್ತಲೋಚನೈಃ॥** 42

**ಬಲಕೃಷ್ಣೌ ತಥಾಕ್ರೂರಃ ಪ್ರತ್ಯಭಿಜ್ಞಾಯ ವಿಸ್ಮಿತಃ।**
**ಅಚಿಂತಯದ್ರಥಾಚ್ಛೀಘ್ರಂ ಕಥಮತ್ರಾಗತಾವಿತಿ॥** 43

---

ಮನೋಹರವಾದ ಕುಂಡಲಗಳಿಂದ ಅಲಂಕೃತನಾಗಿ ನೀರಿನ ತಳದಲ್ಲಿ ವಿರಾಜಿಸುತ್ತಿದ್ದನು (37-38). ಬಲಭದ್ರನ ಉತ್ಸಂಗದಲ್ಲಿ ಮೇಘಶ್ಯಾಮನೂ ಸ್ವಲ್ಪ ಕೆಂಪಾದ ವಿಶಾಲನೇತ್ರವುಳ್ಳವನೂ ಚತುರ್ಭುಜನೂ ಮನೋಜ್ಞಶರೀರನೂ ಶಂಖಚಕ್ರಾದ್ಯಾಯುಧಗಳಿಂದ ಪೀತಾಂಬರಧಾರಿಯೂ ನಾನಾ ಬಣ್ಣದ ಹೂಮಾಲೆಗಳಿಂದ ಶೋಭಿತನೂ ಆದ ಶ್ರೀಕೃಷ್ಣನು ಕಾಮನಬಿಲ್ಲು ಮತ್ತು ಮಿಂಚಿನ ಗೊಂಚಲುಗಳಿಂದ ಪ್ರಕಾಶಿಸುವ ಮೇಘದಂತೆ ವಿರಾಜಮಾನನಾಗಿದ್ದನು (40). ವಕ್ಷಃಸ್ಥಳದಲ್ಲಿ ಶ್ರೀವತ್ಸಚಿಹ್ನಾಂಕಿತನೂ ಸುಂದರವಾದ ಕೇಯೂರಗಳನ್ನು ಧರಿಸಿ ಕಿರೀಟದಿಂದ ದೇದೀಪ್ಯಮಾನನೂ ಅರಳಿದ ಬಿಳಿದಾವರೆಯನ್ನು ಶಿರಸ್ಸಿನಲ್ಲಿ ಮುಡಿದವನೂ ಆದ ಶ್ರೀಕೃಷ್ಣನನ್ನು ಅಕ್ರೂರನು ನೋಡಿದನು (41). ಬಳಿಯಲ್ಲಿದ್ದ ಯೋಗಸಿದ್ಧರೂ ಶುದ್ಧಾತ್ಮರೂ ಆದ ಸನಂದನಾದಿಮುನಿಗಳು ನಾಸಾಗ್ರದೃಷ್ಟಿಯುಳ್ಳವರಾಗಿ ಶ್ರೀಕೃಷ್ಣನನ್ನು ಧ್ಯಾನಿಸುತ್ತಿದ್ದರು. ಅಕ್ರೂರನು ಅವರೇ ಬಲಭದ್ರ ಶ್ರೀಕೃಷ್ಣರೆಂದು ಗುರುತು ಹಿಡಿದು ವಿಸ್ಮಿತನಾಗಿ 'ರಥದಲ್ಲಿದ್ದವರು ಇಷ್ಟುಬೇಗನೆ ಇಲ್ಲಿಗೆ ಹೇಗೆ ಬಂದರು?' ಎಂದು

**ವಿವಕ್ಷೋಃ ಸ್ತಂಭಯಾಮಾಸ ವಾಚಂ ತಸ್ಯ ಜನಾರ್ದನಃ।**
**ತತೋ ನಿಷ್ಕ್ರಮ್ಯ ಸಲಿಲಾದ್ರಥಮಭ್ಯಾಗತಃ ಪುನಃ॥ 44**

**ದದರ್ಶ ತತ್ರ ಚೈವೋಭೌ ರಥಸ್ಯೋಪರಿ ನಿಷ್ಠಿತೌ।**
**ರಾಮಕೃಷ್ಣೌ ಯಥಾಪೂರ್ವಂ ಮನುಷ್ಯವಪುಷಾನ್ವಿತೌ॥ 45**

**ನಿಮಗ್ನಶ್ಚ ಪುನಸ್ತೋಯೇ ದದರ್ಶ ಚ ತಥೈವ ತೌ।**
**ಸಂಸ್ತೂಯಮಾನೌ ಗಂಧರ್ವೈರ್ಮುನಿಸಿದ್ಧಮಹೋರಗೈಃ॥ 46**

**ತತೋ ವಿಜ್ಞಾತಸದ್ಭಾವಸ್ಸ ತು ದಾನಪತಿಸ್ತದಾ।**
**ತುಷ್ಟಾವ ಸರ್ವವಿಜ್ಞಾನಮಯಮಚ್ಯುತಮೀಶ್ವರಮ್॥ 47**

*ಅಕ್ರೂರ ಉವಾಚ:*

**ಸನ್ಮಾತ್ರರೂಪಿಣೇऽಚಿಂತ್ಯಮಹಿಮ್ನೇ ಪರಮಾತ್ಮನೇ।**
**ವ್ಯಾಪಿನೇ ನೈಕರೂಪೈಕಸ್ವರೂಪಾಯ ನಮೋ ನಮಃ॥ 48**

---

ಚಿಂತೆಗೊಳಗಾದನು (42-43). ಏನನ್ನೋ ಹೇಳಬೇಕೆಂದು ಅಕ್ರೂರನು ಉದ್ದೇಶಿಸಿದಾಗ ಜನಾರ್ದನನು ಅವನಿಂದ ಮಾತು ಹೊರಡದಂತೆ ತಡೆದನು! ಅನಂತರ ಅಕ್ರೂರನು ಯಮುನಾ ಜಲದಿಂದ ಈಚೆಗೆ ಬಂದು ರಥದ ಬಳಿಗೆ ಹೋಗಿ, ಅಲ್ಲಿ ಮೊದಲಿನಂತೆ ರಥದಲ್ಲಿಯೇ ಅವರಿಬ್ಬರೂ ಮನುಷ್ಯಾಕೃತಿಯಲ್ಲಿ ಕುಳಿತಿರುವುದನ್ನು ನೋಡಿದನು! (44-45). ಮತ್ತೆ ಹಿಂದಕ್ಕೆ ಹೋಗಿ ಯಮುನಾಜಲದಲ್ಲಿಳಿದಾಗ ಹಿಂದಿನಂತೆ ಅವರಿಬ್ಬರೂ ಜಲದಲ್ಲಿ ಕಾಣಿಸಿದರು! ಗಂಧರ್ವರೂ ಮುನಿಗಳೂ ಸಿದ್ಧರೂ ಮಹಾಸರ್ಪಗಳೂ ಸ್ತೋತ್ರ ಮಾಡುತ್ತಿರುವುದನ್ನು ಕಂಡನು! ಆಗ ವಾಸ್ತವಿಕವಾದ ಸತ್ಯವೇನೆಂಬುದು ದಾನಪತಿಗೆ ಹೊಳೆಯಿತು. ಸರ್ವವಿಜ್ಞಾನಮಯನೂ ಲೋಕೇಶ್ವರನೂ ಆದ ಅಚ್ಯುತನನ್ನು ಈ ಪ್ರಕಾರ ಸ್ತೋತ್ರಮಾಡುವುದಕ್ಕೆ ಆರಂಭಿಸಿದನು (46-47): "ಸತ್ತಾಮಾತ್ರಸ್ವರೂಪನೂ ಅಚಿಂತ್ಯಮಹಿಮನೂ ಆದ ಪರಮಾತ್ಮನಿಗೆ ನಮಸ್ಕಾರ. (ಕಾರ್ಯರೂಪದಿಂದ) ಅನೇಕನೂ (ಕಾರಣರೂಪದಿಂದ) ಏಕನೂ ಆದ ವಿಭುವಿಗೆ

**ಸರ್ವರೂಪಾಯ ತೇಽಚಿಂತ್ಯಾ ಹವಿರ್ಭೂತಾಯ ತೇ ನಮಃ।**
**ನಮೋಽವಿಜ್ಞಾತಪಾರಾಯ ಪರಾಯ ಪ್ರಕೃತೇಃ ಪ್ರಭೋ॥** 49

**ಭೂತಾತ್ಮಾ ಚೇಂದ್ರಿಯಾತ್ಮಾ ಚ ಪ್ರಧಾನಾತ್ಮಾ ತಥಾ ಭವಾನ್।**
**ಆತ್ಮಾ ಚ ಪರಮಾತ್ಮಾ ಚ ತ್ವಮೇಕಃ ಪಂಚಧಾ ಸ್ಥಿತಃ॥** 50

**ಪ್ರಸೀದ ಸರ್ವ ಸರ್ವಾತ್ಮನ್ ಕ್ಷರಾಕ್ಷರಮಯೇಶ್ವರ।**
**ಬ್ರಹ್ಮವಿಷ್ಣುಶಿವಾಖ್ಯಾಭಿಃ ಕಲ್ಪನಾಭಿರುದೀರಿತಃ॥** 51

**ಅನಾಖ್ಯೇಯಸ್ವರೂಪಾತ್ಮನ್ನನಾಖ್ಯೇಯಪ್ರಯೋಜನ।**
**ಅನಾಖ್ಯೇಯಾಭಿಧಾನಂ ತ್ವಾಂ ನತೋಽಸ್ಮಿ ಪರಮೇಶ್ವರ॥** 52

**ನ ಯತ್ರ ನಾಥ ವಿದ್ಯಂತೇ ನಾಮಜಾತ್ಯಾದಿಕಲ್ಪನಾಃ।**
**ತದ್‌ಬ್ರಹ್ಮ ಪರಮಂ ನಿತ್ಯಮವಿಕಾರಿ ಭವಾನಜಃ॥** 53

---

ನಮಸ್ಕಾರ (48). ಹೇ ಅಚಿಂತನೀಯ ಪ್ರಭುವೆ, ಸರ್ವರೂಪನೂ ಹವಿಃ ಸ್ವರೂಪನೂ* ಆದ ನಿನಗೆ ನಮಸ್ಕಾರ. ಪ್ರಕೃತಿಯ ಆಚೆಗಿರುವ ನಿನ್ನ ಸ್ವರೂಪವನ್ನು ತಿಳಿಯಲು ಶಕ್ಯವಿಲ್ಲ. ಪಂಚಭೂತ, ಇಂದ್ರಿಯ ಪ್ರಕೃತಿ, ಜೀವಾತ್ಮ, ಪರಮಾತ್ಮ—ಹೀಗೆ ಐದು ಪ್ರಕಾರವಾಗಿ ನಿನೊಬ್ಬನೇ ವ್ಯವಸ್ಥಿತ ನಾಗಿದ್ದೀಯೆ (49-50). ಹೇ ಸರ್ವ, ಸರ್ವಾತ್ಮ, ಕ್ಷರಾಕ್ಷರಮಯ, ಈಶ್ವರ, ಪ್ರಸನ್ನನಾಗು. ಬ್ರಹ್ಮ, ವಿಷ್ಣು , ಶಿವ—ಎಂಬ ಸಂಜ್ಞಾಕಲ್ಪನೆಗಳಿಂದ ನೀನೇ ವರ್ಣಿಸಲ್ಪಟ್ಟಿದ್ದೀಯೆ. ಹೇ ಪರಮೇಶ್ವರ, ನಿನ್ನ ಸ್ವರೂಪವು ಅನಿರ್ವಚನೀಯ ವಾದುದು. (ಸೃಷ್ಟಿಯೇ ಮೊದಲಾದವುಗಳಲ್ಲಿ ) ನಿನ್ನ ಉದ್ದೇಶವೂ ಅನಿರ್ವಾಚ್ಯ ವಾದುದು. ನಿನ್ನ ನಾಮಧೇಯವೂ § ಅನಿರ್ವಾಚ್ಯವೇ ಸರಿ. ನಿನಗೆ ನಮಸ್ಕರಿಸಿದ್ದೇನೆ (51-52). ಹೇ ಸ್ವಾಮಿ, ನಾಮ ಜಾತಿ (ಗುಣ, ಕ್ರಿಯೆ)—ಎಂಬ ಯಾವ ಕಲ್ಪನೆಗೂ ಅತೀತವಾದ ಅವಿಕಾರಿಯೂ ನಿತ್ಯವೂ ಆದ

---

* ಯತ್ಪುರುಷೇಣ ಹವಿಷಾ (ಪುರುಷಸೂಕ್ತ).

§ ಭಗವಂತನ ನಾಮಾವಳಿ ಅನಂತವಾದ್ದರಿಂದ ಎಣಿಸಲು ಸಾಧ್ಯವಿಲ್ಲವೆಂದು ಅಭಿಪ್ರಾಯ. ಅಥವಾ ಯಾವ ನಾಮವೂ ಅವನನ್ನು ಗುರುತಿಸಿ ಹೇಳಲು ಅಸಮರ್ಥ ವಾದ್ದರಿಂದ ಸಮರ್ಥವಾದ ಯಾವ ನಾಮಧೇಯವೂ ಇಲ್ಲವೆಂಬುದು ಅಭಿಪ್ರಾಯ.

ನ ಕಲ್ಪನಾಮೃತೇಽರ್ಥಸ್ಯ ಸರ್ವಸ್ಯಾಧಿಗಮೋ ಯತಃ।
ತತಃ ಕೃಷ್ಣಾಚ್ಯುತಾನಂತವಿಷ್ಣುಸಂಜ್ಞಾಭಿರೀಡ್ಯತೇ॥ 54

ಸರ್ವಾರ್ಥಾಸ್ತ್ವಮಜ ವಿಕಲ್ಪನಾಭಿರೇತೈ-
ರ್ದೇವಾದ್ಯೈರ್ಭವತಿ ಹಿ ಯೈರನಂತವಿಶ್ವಮ್।
ವಿಶ್ವಾತ್ಮಾ ತ್ವಮಿತಿ ವಿಕಾರಹೀನಮೇತ-
ತ್ಸರ್ವಸ್ಮಿನ್ನ ಹಿ ಭವತೋಽಸ್ತಿ ಕಿಂಚಿದನ್ಯತ್॥ 55

ತ್ವಂ ಬ್ರಹ್ಮಾ ಪಶುಪತಿರರ್ಯಮಾ ವಿಧಾತಾ।
ಧಾತಾ ತ್ವಂ ತ್ರಿದಶಪತಿಸ್ಸಮೀರಣೋಽಗ್ನಿಃ।
ತೋಯೇಶೋ ಧನಪತಿರಂತಕಸ್ತ್ವಮೇಕೋ
ಭಿನ್ನಾರ್ಥೈರ್ಜಗದಭಿಪಾಸಿ ಶಕ್ತಿಭೇದೈಃ॥ 56

ವಿಶ್ವಂ ಭವಾನ್ ಸೃಜತಿ ಸೂರ್ಯಗಭಸ್ತಿರೂಪೋ
ವಿಶ್ವೇಶ ತೇ ಗುಣಮಯೋಽಯಮತಃ ಪ್ರಪಂಚಃ।

---

ಪರಬ್ರಹ್ಮ ನೀನು. ಜನ್ಮರಹಿತನು ನೀನು. ಆದರೆ ಯಾವುದಾದರೊಂದು ಕಲ್ಪನೆಯಿಲ್ಲದಿದ್ದರೆ ಸರ್ವಾತ್ಮನಾದ ನಿನ್ನ ಸಾಮಾನ್ಯಜ್ಞಾನವಾಗುವುದಿಲ್ಲವಾದ ಕಾರಣ, ಕೃಷ್ಣ ಅಚ್ಯುತ ಅನಂತ ವಿಷ್ಣು—ಇತ್ಯಾದಿ ನಾಮಗಳಿಂದ ನೀನು ಸ್ತುತನಾಗಿದ್ದೀಯೆ (53-54). ಹೇ ಅಜ, ಸರ್ವಪದಾರ್ಥಗಳೂ ನೀನೇ. ದೇವತೆ, (ರಾಕ್ಷಸ, ಮನುಷ್ಯ ಪಶು)—ಇತ್ಯಾದಿ ಕಲ್ಪನಾಮಯ ಪದಾರ್ಥಗಳಿಂದ ಈ ಅನಂತ ವಿಶ್ವವಾಗಿರುತ್ತದೆಯಲ್ಲವೆ? ಆದ್ದರಿಂದಲೇ ನೀನು ವಿಶ್ವಾತ್ಮ. ಸರ್ವಪದಾರ್ಥಗಳಲ್ಲಿಯೂ ವಿಕಾರಹೀನವಾದ ಈ ಬ್ರಹ್ಮವಸ್ತುವೊಂದೇ ಇದೆ. ನಿನ್ನ ಹೊರತಾಗಿ ಇನ್ನು ಏನೇನೂ ಇಲ್ಲ (55). ನೀನೇ ಬ್ರಹ್ಮ, ಶಿವ, ಸೂರ್ಯ, ವಿಧಾತ, ಧಾತ, ಇಂದ್ರ, ವಾಯು, ಅಗ್ನಿ. ನೀನೇ ವರುಣ, ಕುಬೇರ ಮತ್ತು ಯಮ. ನೀನೊಬ್ಬನೇ ಶಕ್ತಿಭೇದಗಳಿಂದ ನಾನಾ ವ್ಯಕ್ತಿರೂಪನಾಗಿ ಜಗತ್ತನ್ನು ಪಾಲಿಸುತ್ತಿದ್ದೀಯೆ (56). ಹೇ ವಿಶ್ವೇಶ, ನೀನು ಸೂರ್ಯಕಿರಣರೂಪನಾಗಿ ವಿಶ್ವವನ್ನು ಸೃಜಿಸುತ್ತೀಯೆ. ಆದ್ದರಿಂದ ಈ ಗುಣಮಯ ಪ್ರಪಂಚವು ನಿನ್ನ

**ರೂಪಂ ಪರಂ ಸದಿತಿ ವಾಚಕಮಕ್ಷರಂ ಯ-**
**ಜ್ಜ್ಞಾನಾತ್ಮನೇ ಸದಸತೇ ಪ್ರಣತೋಽಸ್ಮಿ ತಸ್ಮೈ॥** 57

**ಓಂ ನಮೋ ವಾಸುದೇವಾಯ ನಮಸ್ಸಂಕರ್ಷಣಾಯ ಚ।**
**ಪ್ರದ್ಯುಮ್ನಾಯ ನಮಸ್ತುಭ್ಯಮನಿರುದ್ಧಾಯ ತೇ ನಮಃ॥** 58

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಅಷ್ಟಾದಶೋಽಧ್ಯಾಯಃ

---

ಇನ್ನೊಂದು ರೂಪವೇ ಆಗಿದೆ. ಬ್ರಹ್ಮವಾಚಕವಾದ 'ಸತ್' ಎಂಬ ಯಾವ ಅಕ್ಷರ ಉಂಟೋ ಆ ಅಕ್ಷರ ಸ್ವರೂಪನೂ ಸದಸದ್ರೂಪನೂ ಜ್ಞಾನಾತ್ಮನೂ ಆದ ನಿನಗೆ ಶರಣಾಗಿದ್ದೇನೆ (57). ಓಂ ನಮೋ ವಾಸುದೇವಾಯ; ಓಂ ನಮಃ ಸಂಕರ್ಷಣಾಯ; ಓಂ ನಮಃ ಪ್ರದ್ಯುಮ್ನಾಯ; ಅನಿರುದ್ಧನೂ* ಆದ ನಿನಗೆ ನಮೋ ನಮಃ" ಎಂದು ಸ್ತುತಿಸಿದನು (58).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಹದಿನೆಂಟನೆಯ ಅಧ್ಯಾಯ ಮುಗಿಯಿತು.



---

* ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ—ಎಂಬವು ಭಗವಂತನ ಚತುರ್ವ್ಯೂಹಗಳು.

## ಏಕೋನವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಏವಮಂತರ್ಜಲೇ ವಿಷ್ಣುಮಭಿಷ್ಟೂಯ ಸ ಯಾದವಃ।**
**ಅರ್ಚಯಾಮಾಸ ಸರ್ವೇಶಂ ಧೂಪಪುಷ್ಪೈರ್ಮನೋಮಯೈಃ॥** 1

**ಪರಿತ್ಯಕ್ತಾನ್ಯವಿಷಯೋ ಮನಸ್ತತ್ರ ನಿವೇಶ್ಯ ಸಃ।**
**ಬ್ರಹ್ಮಭೂತೇ ಚಿರಂ ಸ್ಥಿತ್ವಾ ವಿರರಾಮ ಸಮಾಧಿತಃ॥** 2

**ಕೃತಕೃತ್ಯಮಿವಾತ್ಮಾನಂ ಮನ್ಯಮಾನೋ ಮಹಾಮತಿಃ।**
**ಆಜಗಾಮ ರಥಂ ಭೂಯೋ ನಿರ್ಗಮ್ಯ ಯಮುನಾಂಭಸಃ॥** 3

**ದದರ್ಶ ರಾಮಕೃಷ್ಣೌ ಚ ಯಥಾಪೂರ್ವಮವಸ್ಥಿತೌ।**
**ವಿಸ್ಮಿತಾಕ್ಷಸ್ತದಾಕ್ರೂರಸ್ತಂ ಚ ಕೃಷ್ಣೋಽಭ್ಯಭಾಷತ॥** 4

---

## ಅಧ್ಯಾಯ 19

ಶ್ರೀಕೃಷ್ಣನು ಬಲರಾಮನೊಡನೆ ಮಧುರೆಯನ್ನು ಪ್ರವೇಶಿಸುವುದು;
ರಜಕನ ವಧೆ, ಮಾಲಾಕಾರನ ವಿಷಯದಲ್ಲಿ ಕೃಪೆ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಯಾದವನಾದ ಅಕ್ರೂರನು ಈ ಪ್ರಕಾರವಾಗಿ ಜಲಮಧ್ಯದಲ್ಲಿ ನಿಂತು ವಿಷ್ಣುವನ್ನು ಸ್ತುತಿಸಿ, ಆ ಸರ್ವೇಶ್ವರನನ್ನು ಮನಃಕಲ್ಪಿತವಾದ ಧೂಪ ಪುಷ್ಪಾದಿಗಳಿಂದ ಅರ್ಚಿಸಿದನು. ಎಲ್ಲ ವಿಷಯಗಳನ್ನೂ ಮನಸ್ಸಿನಿಂದ ದೂರವಿಟ್ಟು ಬ್ರಹ್ಮವಸ್ತುವಿನಲ್ಲಿ ಬಹುಕಾಲ ಮನಸ್ಸನ್ನು ನಿಲ್ಲಿಸಿ ಸಮಾಧಿಯಿಂದ ಎಚ್ಚೆತ್ತನು (1-2). ಆ ಪ್ರಜ್ಞಾವಂತನು ತಾನು ಕೃತಕೃತ್ಯನಾದೆನೆಂದು ಭಾವಿಸಿಕೊಳ್ಳುತ್ತ ಯಮುನಾ ಜಲದಿಂದ ಹೊರಗೆ ಬಂದು ರಥದ ಕಡೆಗೆ ಮತ್ತೆ ನಡೆದನು. ಅಲ್ಲಿ ಯಥಾಪೂರ್ವದಂತೆ ಬಲರಾಮ ಕೃಷ್ಣರು ಕುಳಿತಿರುವುದನ್ನು ಅಕ್ರೂರನು ವಿಸ್ಮಿತ ನೇತ್ರನಾಗಿ ನೋಡುತ್ತಿರಲಾಗಿ, ಶ್ರೀಕೃಷ್ಣನು "ಅಕ್ರೂರ, ಯಮುನಾ ಜಲದಲ್ಲಿ ನೀನು ಏನೋ ಒಂದು ಆಶ್ಚರ್ಯವನ್ನು

*ಶ್ರೀಕೃಷ್ಣ ಉವಾಚ:*

**ನೂನಂ ತೇ ದೃಷ್ಟಮಾಶ್ಚರ್ಯಮಕ್ರೂರ ಯಮುನಾಜಲೇ।**
**ವಿಸ್ಮಯೋತ್ಫುಲ್ಲನಯನೋ ಭವಾನ್ ಸಂಲಕ್ಷ್ಯತೇ ಯತಃ॥** 5

*ಅಕ್ರೂರ ಉವಾಚ:*

**ಅಂತರ್ಜಲೇ ಯದಾಶ್ಚರ್ಯಂ ದೃಷ್ಟಂ ತತ್ರ ಮಯಾಚ್ಯುತ।**
**ತದತ್ರಾಪಿ ಹಿ ಪಶ್ಯಾಮಿ ಮೂರ್ತಿಮತ್ಪುರತಃ ಸ್ಥಿತಮ್॥** 6

**ಜಗದೇತನ್ಮಹಾಶ್ಚರ್ಯರೂಪಂ ಯಸ್ಯ ಮಹಾತ್ಮನಃ।**
**ತೇನಾಶ್ಚರ್ಯಪರೇಣಾಹಂ ಭವತಾ ಕೃಷ್ಣ ಸಂಗತಃ॥** 7

**ತತ್ಕಿಮೇತೇನ ಮಥುರಾಂ ಯಾಸ್ಯಾಮೋ ಮಧುಸೂದನ।**
**ಬಿಭೇಮಿ ಕಂಸಾದ್ಧಿಗ್ಜನ್ಮ ಪರಪಿಂಡೋಪಜೀವಿನಾಮ್॥** 8

**ಇತ್ಯುಕ್ತ್ವಾ ಚೋದಯಾಮಾಸ ಸ ಹಯಾನ್ ವಾತರಂಹಸಃ।**
**ಸಂಪ್ರಾಪ್ತಶ್ಚಾಪಿ ಸಾಯಾಹ್ನೇ ಸೋಽಕ್ರೂರೋ ಮಥುರಾಂ ಪುರೀಮ್॥** 9

---

ಕಂಡಿರಬೇಕು! ಏಕೆಂದರೆ ನಿನ್ನ ಕಣ್ಣುಗಳು ಆಶ್ಚರ್ಯಚಕಿತವಾಗಿವೆಯೆಂಬುದು ಕಂಡುಬರುತ್ತಿದೆ!" ಎಂದನು (3-5). ಅದಕ್ಕೆ ಅಕ್ರೂರನು "ಅಚ್ಯುತ, ನೀರಿನೊಳಗೆ ನಾನು ಯಾವ ಆಶ್ಚರ್ಯವನ್ನು ಕಂಡೆನೋ ಅದೇ ಆಶ್ಚರ್ಯವು ಈಗ ನನ್ನೆದುರಿಗೆ ಮೂರ್ತಿಮತ್ತಾಗಿರುವುದನ್ನು ನೋಡುತ್ತಿದ್ದೇನೆ! (6). ಮಹಾಶ್ಚರ್ಯರೂಪವಾದ ಈ ಜಗತ್ತು ಯಾವ ಮಹಾತ್ಮನ ಸ್ವರೂಪ ವಾಗಿದೆಯೋ ಅಂತಹ ಆಶ್ಚರ್ಯಸ್ವರೂಪವಾದ ನಿನ್ನೊಡನೆ, ಕೃಷ್ಣ , ನನಗೆ ಸಮಾಗಮ ಒದಗಿತು! ಮಧುಸೂದನ, ಈ ಆಶ್ಚರ್ಯದ ವಿಚಾರದಿಂದ ಈಗ ಆಗಬೇಕಾದ್ದೇನು? ಈಗ ಮಧುರೆಗೆ ಹೋಗೋಣ. ಕಂಸನಿಗೆ ನಾನು ಹೆದರು ತ್ತಿದ್ದೇನೆ. ಪರಾನ್ನದಿಂದ ಜೀವಿಸತಕ್ಕ ಜನರ ಜನ್ಮಕ್ಕೆ ಧಿಕ್ಕಾರ!" (7-8). ಹೀಗೆ ಹೇಳಿ ಅಕ್ರೂರನು ವಾಯುವೇಗಶಾಲಿಗಳಾದ ರಥಾಶ್ವಗಳನ್ನು ದೌಡಾಯಿಸಿ, ಸಾಯಂಕಾಲದ ವೇಳೆಗೆ ಮಧುರಾನಗರಕ್ಕೆ ಬಂದು ಸೇರಿದನು. ಆತನು ಮಧುರೆಯ ಕಡೆಗೆ ನೋಡುತ್ತ ಬಲರಾಮ ಕೃಷ್ಣರನ್ನು ಕುರಿತು "ನೀವಿಬ್ಬರೂ

ವಿಲೋಕ್ಯ ಮಥುರಾಂ ಕೃಷ್ಣಂ ರಾಮಂ ಚಾಹ ಸ ಯಾದವಃ।
ಪದ್ಭ್ಯಾಂ ಯಾತಂ ಮಹಾವೀರೌ ರಥೇನೈಕೋ ವಿಶಾಮ್ಯಹಮ್॥ 10

ಗಂತವ್ಯಂ ವಸುದೇವಸ್ಯ ನೋ ಭವದ್ಭ್ಯಾಂ ತಥಾ ಗೃಹಮ್।
ಯುವಯೋರ್ಹಿ ಕೃತೇ ವೃದ್ಧಸ್ಸ ಕಂಸೇನ ನಿರಸ್ಯತೇ॥ 11

*ಶ್ರೀಪರಾಶರ ಉವಾಚ:*

ಇತ್ಯುಕ್ತ್ವಾ ಪ್ರವಿವೇಶಾಥ ಸೋಽಕ್ರೂರೋ ಮಥುರಾಂ ಪುರೀಮ್।
ಪ್ರವಿಷ್ಟೌ ರಾಮಕೃಷ್ಣೌ ಚ ರಾಜಮಾರ್ಗಮುಪಾಗತೌ॥ 12

ಸ್ತ್ರೀಭಿರ್ನರೈಶ್ಚ ಸಾನಂದಂ ಲೋಚನೈರಭಿವೀಕ್ಷಿತೌ।
ಜಗ್ಮತುರ್ಲೀಲಯಾ ವೀರೌ ಮತ್ತೌ ಬಾಲಗಜಾವಿವ॥ 13

ಭ್ರಮಮಾಣೌ ತತೋ ದೃಷ್ಟ್ವಾಂ ರಜಕಂ ರಂಗಕಾರಮ್।
ಅಯಾಚೇತಾಂ ಸುರೂಪಾಣಿ ವಾಸಾಂಸಿ ರುಚಿರಾಣಿ ತೌ॥ 14

---

ಪಾದಚಾರಿಗಳಾಗಿ ಮುಂದೆ ಹೋಗಿರಿ. ನಾನೊಬ್ಬನೇ ರಥದಲ್ಲಿ ನಗರವನ್ನು ಪ್ರವೇಶಿಸುವೆನು (9-10). ನೀವು ವಸುದೇವನ ಮನೆಗೆ ಹೋಗಬಾರದು! ನಿಮ್ಮಿಬ್ಬರ ನಿಮಿತ್ತದಿಂದಲೇ ಆ ವೃದ್ಧನನ್ನು ಕಂಸನು ದೂರೀಕರಿಸಿದ್ದಾನೆ" ಎಂದನು (11). ಹೀಗೆ ಹೇಳಿ ಆ ಅಕ್ರೂರನು ಮಧುರಾಪುರದೊಳಗೆ ನಡೆದನು. ರಾಮಕೃಷ್ಣರು ಕಾಲ್ನಡಿಗೆಯಿಂದ ನಗರವನ್ನು ಪ್ರವೇಶಿಸಿ ರಾಜಮಾರ್ಗವನ್ನು ಸೇರಿದರು. ಅಲ್ಲಿ ಪೌರನಾರಿಯರೂ ಪುರುಷರೂ ಆನಂದದಿಂದ ಕಣ್ಣರಳಿಸಿ ನೋಡುತ್ತಿರಲಾಗಿ, ಈ ವೀರರು ಮದಿಸಿದ ಬಾಲಗಜಗಳಂತೆ ಗಂಭೀರವಾಗಿ ಲೀಲೆಯಿಂದ ರಾಜಮಾರ್ಗದಲ್ಲಿ ಸಾಗುತ್ತಿದ್ದರು (12-13). ಹೀಗೆ ಹೋಗುತ್ತಿರುವಾಗ ಬಟ್ಟೆಗಳಿಗೆ ಬಣ್ಣಹಾಕುವ ಒಬ್ಬ ರಜಕನನ್ನು* ನೋಡಿ ತಮಗೆ ಬೇಕಾದ ಕೆಲವು ಸುಂದರ ವಸ್ತ್ರಗಳನ್ನು ಯಾಚಿಸಿದರು. ಆ ರಜಕನು ಕಂಸನ ಅರಮನೆಗೆ ಸಂಬಂಧಿಸಿದವನು. ರಾಜಾನುಗ್ರಹವಿದೆಯೆಂದು ದುರಹಂಕಾರಿಯಾದವನು.

---

* ರಜಕ = ಬಟ್ಟೆಗಳನ್ನೊಗೆದು ಬಣ್ಣ ಹಾಕತಕ್ಕವನು; ಅಗಸ.

**ಕಂಸಸ್ಯ ರಜಕಃ ಸೋಽಥ ಪ್ರಸಾದಾರೂಢವಿಸ್ಮಯಃ।**
**ಬಹೂನ್ಯಾಕ್ಷೇಪವಾಕ್ಯಾನಿ ಪ್ರಾಹೋಚ್ಚೈ ರಾಮಕೇಶವೌ॥** 15

**ತತಸ್ತಲಪ್ರಹಾರೇಣ ಕೃಷ್ಣಸ್ತಸ್ಯ ದುರಾತ್ಮನಃ।**
**ಪಾತಯಾಮಾಸ ರೋಷೇಣ ರಜಕಸ್ಯ ಶಿರೋ ಭುವಿ॥** 16

**ಹತ್ವಾಽಽದಾಯ ಚ ವಸ್ತ್ರಾಣಿ ಪೀತನೀಲಾಂಬರೌ ತತಃ।**
**ಕೃಷ್ಣರಾಮೌ ಮುದಾ ಯುಕ್ತೌ ಮಾಲಾಕಾರಗೃಹಂ ಗತೌ॥** 17

**ವಿಕಾಸಿನೇತ್ರಯುಗಲೋ ಮಾಲಾಕಾರೋಽತಿವಿಸ್ಮಿತಃ।**
**ಏತೌ ಕಸ್ಯ ಸುತೌ ಯಾತೌ ಮೈತ್ರೇಯಾಚಿಂತಯತ್ತದಾ॥** 18

**ಪೀತನೀಲಾಂಬರಧರೌ ತೌ ದೃಷ್ಟ್ವಾಽತಿಮನೋಹರೌ।**
**ಸ ತರ್ಕಯಾಮಾಸ ತದಾ ಭುವಂ ದೇವಾವುಪಾಗತೌ॥** 20

---

ಅವನು ಗಟ್ಟಿಯಾಗಿ ಬಹಳ ಕೆಟ್ಟ ಮಾತುಗಳನ್ನಾಡಿ ರಾಮಕೃಷ್ಣರನ್ನು ಹಂಗಿಸಿದನು (14-15). ಆಗ ಶ್ರೀಕೃಷ್ಣನು ಕ್ರುದ್ಧನಾಗಿ ದುರಾತ್ಮನಾದ ಆ ರಜಕನ ಶಿರಸ್ಸನ್ನು ಕರತಳ ಪ್ರಹಾರದಿಂದ ನೆಲಕ್ಕುರುಳಿಸಿದನು. ರಜಕನನ್ನು ಹೊಡೆದು ಹಾಕಿ ತಮಗೆ ಬೇಕಾದ ವಸ್ತ್ರಗಳನ್ನು ತೆಗೆದುಕೊಂಡು, ಶ್ರೀಕೃಷ್ಣನು ಪೀತಾಂಬರ ಧಾರಿಯಾಗಿಯೂ ಬಲರಾಮನು ನೀಲಾಂಬರಧಾರಿಯಾಗಿಯೂ, ಸಂತೋಷ ದಿಂದ ಮುಂದೆ ನಡೆದರು. ಹೋಗುತ್ತ ಒಬ್ಬ ಹೂವಾಡಿಗನ ಮನೆಗೆ ಬಂದರು (16-17). ಮೈತ್ರೇಯ, ಆ ಮಾಲಾಕಾರನು ಅತ್ಯಂತ ವಿಸ್ಮಯದಿಂದ ಕಣ್ಣರಳಿಸಿ ಅವರನ್ನು ನೋಡುತ್ತ ಇವರು ಯಾರ ಮಕ್ಕಳಿರಬಹುದು? ಎಂದು ಚಿಂತಿ ಸಿದನು. ಅತ್ಯಂತ ಸುಂದರರೂ ಪೀತಾಂಬರ ನೀಲಾಂಬರಧಾರಿಗಳೂ ಆದ ಶ್ರೀಕೃಷ್ಣ ಬಲರಾಮರನ್ನು ನೋಡುತ್ತ "ಇವರು ಧರೆಗಿಳಿದು ಬಂದ ದೇವತೆಗಳು" ಎಂದು ತರ್ಕಿಸಿದನು (18-19). ಅವರಿಬ್ಬರೂ ಅರಳಿದ ಮುಖಪದ್ಮಗಳಿಂದ ಹೂಗಳನ್ನು ಯಾಚಿಸಲಾಗಿ ಹೂವಾಡಿಗನು ಎರಡೂ ಕೈಗಳನ್ನೂ ನೆಲದ ಮೇಲೂರಿ ತಲೆಯನ್ನು ಭೂಮಿಗೆ ಮುಟ್ಟಿಸಿ ನಮಸ್ಕರಿಸಿ "ಸ್ವಾಮಿಯವರು ನನ್ನ ಮನೆಗೆ ಬಂದದ್ದು ಪರಮಾನುಗ್ರಹವಾಯಿತು. ನಾನು ಧನ್ಯನಾದೆ. ನಿಮ್ಮನ್ನು

ವಿಕಾಸಿಮುಖಪದ್ಮಾಭ್ಯಾಂ ತಾಭ್ಯಾಂ ಪುಷ್ಪಾಣಿ ಯಾಚಿತಃ।
ಭುವಂ ವಿಷ್ಟಭ್ಯ ಹಸ್ತಾಭ್ಯಾಂ ಪಸ್ಪರ್ಶ ಶಿರಸಾ ಮಹೀಮ್॥ 21

ಪ್ರಸಾದಪರಮೌ ನಾಥೌ ಮಮ ಗೇಹಮುಪಾಗತೌ।
ಧನ್ಯೋಽಹಮರ್ಚಯಿಷ್ಯಾಮೀತ್ಯಾಹ ತೌ ಮಾಲ್ಯಜೀವನಃ॥ 21

ತತಃ ಪ್ರಹೃಷ್ಟವದನಸ್ತಯೋಃ ಪುಷ್ಪಾಣಿ ಕಾಮತಃ।
ಚಾರೂಣ್ಯೇತಾನ್ಯಥೈತಾನಿ ಪ್ರದದೌ ಸ ಪ್ರಲೋಭಯನ್॥ 22

ಪುನಃ ಪುನಃ ಪ್ರಣಮ್ಯೋಭೌ ಮಾಲಾಕಾರೋ ನರೋತ್ತಮೌ।
ದದೌ ಪುಷ್ಪಾಣಿ ಚಾರೂಣಿ ಗಂಧವಂತ್ಯಮಲಾನಿ ಚ॥ 23

ಮಾಲಾಕಾರಾಯ ಕೃಷ್ಣೋಽಪಿ ಪ್ರಸನ್ನಃ ಪ್ರದದೌ ವರಾನ್।
ಶ್ರೀಸ್ತ್ವಾಂ ಮತ್ಸಂಶ್ರಯಾ ಭದ್ರ ನ ಕದಾಚಿತ್ತ್ಯಜಿಷ್ಯತಿ॥ 24

ಬಲಹಾನಿರ್ನ ತೇ ಸೌಮ್ಯ ಧನಹಾನಿರಥಾಽಪಿ ವಾ।
ಯಾವದ್ದಿನಾನಿ ತಾವಚ್ಚ ನ ನಶಿಷ್ಯತಿ ಸಂತತಿಃ॥ 25

ಭುಕ್ತ್ವಾ ಚ ವಿಪುಲಾನ್ ಭೋಗಾಂಸ್ತ್ವಮಂತೇ ಮತ್ಪ್ರಸಾದತಃ।
ಮಮಾನುಸ್ಮರಣಂ ಪ್ರಾಪ್ಯ ದಿವ್ಯಂ ಲೋಕಮವಾಪ್ಸ್ಯಸಿ॥ 26

---

ಪೂಜಿಸಲು ನನಗೆ ಶಕ್ಯವಾಯಿತು” ಎಂದು ನುಡಿದನು (20-21). ಅನಂತರ ಹರ್ಷದಿಂದ ಬೇಕುಬೇಕಾದ ಹೂಗಳನ್ನು ತೋರಿಸುತ್ತ “ಇವು ಚೆನ್ನಾಗಿವೆ. ಇವು ನಿಮಗೆ ಒಪ್ಪುತ್ತವೆ” ಎಂದು ಹೇಳಿ ಒತ್ತಾಯಿಸಿ, ಮತ್ತೆ ಮತ್ತೆ ಕೈ ಮುಗಿದು, ಪರಿಮಳಭರಿತವಾಗಿ ನಳನಳಿಸುವ ಸುಂದರ ಪುಷ್ಪಗಳನ್ನು ರಾಮಕೃಷ್ಣರಿಗೆ ಕೊಟ್ಟನು (22-23). ಆಗ ಶ್ರೀಕೃಷ್ಣನು ಪ್ರಸನ್ನನಾಗಿ ಹೂವಾಡಿಗನಿಗೆ ವರಗಳ ನ್ನಿತ್ತನು: “ಸೌಮ್ಯ, ನನ್ನನ್ನಾಶ್ರಯಿಸಿದ ಲಕ್ಷ್ಮಿಯು ನಿನ್ನನ್ನೆಂದೂ ತೊರೆಯದಿರಲಿ. ನಿನಗೆ ಬಲಹಾನಿಯೂ ಧನಹಾನಿಯೂ ಎಂದೆಂದಿಗೂ ಆಗುವುದಿಲ್ಲ. ಎಲ್ಲಿಯವರೆಗೆ ಹಗಲುಗಳಾಗುತ್ತಿರುವುವೋ ಅಲ್ಲಿಯವರೆಗೆ ನಿನ್ನ ಸಂತತಿಯು ನಶಿಸದೆ ನಡೆಯುತ್ತ ಹೋಗುವುದು! (24-25). ಈ ಲೋಕದಲ್ಲಿ ಪುಷ್ಕಳ ಭೋಗಗಳನ್ನನುಭವಿಸಿದ ಮೇಲೆ ಕಡೆಯ ಕಾಲದಲ್ಲಿ ನನ್ನ ಅನುಗ್ರಹದಿಂದ ನಿನಗೆ

**ಧರ್ಮೇ ಮನಶ್ಚ ತೇ ಭದ್ರ ಸರ್ವಕಾಲಂ ಭವಿಷ್ಯತಿ।**
**ಯುಷ್ಮತ್ಸಂತತಿಜಾತಾನಾಂ ದೀರ್ಘಮಾಯುರ್ಭವಿಷ್ಯತಿ॥** 27

**ನೋಪಸರ್ಗಾದಿಕಂ ದೋಷಂ ಯುಷ್ಮತ್ಸಂತತಿಸಂಭವಃ।**
**ಅವಾಪ್ಸ್ಯತಿ ಮಹಾಭಾಗ ಯಾವತ್ಸೂರ್ಯೋ ಭವಿಷ್ಯತಿ॥** 28

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾ ತದ್‌ಗೃಹಾತ್ ಕೃಷ್ಣೋ ಬಲದೇವಸಹಾಯವಾನ್।**
**ನಿರ್ಜಗಾಮ ಮುನಿಶ್ರೇಷ್ಠ ಮಾಲಾಕಾರೇಣ ಪೂಜಿತಃ॥** 29

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಏಕೋನವಿಂಶೋಽಧ್ಯಾಯಃ

---

ನನ್ನ ಸ್ಮರಣೆಯುಂಟಾಗುವುದಲ್ಲದೆ ದಿವ್ಯಲೋಕವನ್ನು ಪಡೆಯುವೆ. ಹೇ ಸೌಮ್ಯ, ಸರ್ವಕಾಲದಲ್ಲಿಯೂ ನಿನಗೆ ಧರ್ಮದಲ್ಲಿ ಸ್ಥಿರವಾಗಿ ಮನಸ್ಸು ನೆಟ್ಟಿರುವುದು. ನಿನ್ನ ಸಂತತಿಯಲ್ಲಿ ಜನಿಸಿದವರಿಗೆ ದೀರ್ಘಾಯುಸ್ಸು ಲಭಿಸುವುದು (26-27). ಹೇ ಮಹಾಭಾಗ, ಸೂರ್ಯನಿರುವವರೆಗೆ ನಿನ್ನ ವಂಶದಲ್ಲಿ ಜನಿಸಿದ ಯಾರಿಗೂ ವಿಪತ್ಕಾರಿಯಾದ ರೋಗಾದಿಗಳ ಬಾಧೆಯುಂಟಾಗದಿರಲಿ" ಎಂದು ನುಡಿದನು. ಮೈತ್ರೇಯ, ಶ್ರೀಕೃಷ್ಣನು ಈ ಪ್ರಕಾರವಾಗಿ ನುಡಿದು ಮಾಲಾಕಾರನಿಂದ ಪೂಜಿತನಾಗಿ ಬಲದೇವನೊಡನೆ ಅಲ್ಲಿಂದ ಹೊರಟನು (28-29).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.



## ವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ರಾಜಮಾರ್ಗೇ ತತಃ ಕೃಷ್ಣಾಸ್ಸಾನುಲೇಪನಭಾಜನಾಮ್।**
**ದದರ್ಶ ಕುಬ್ಜಾಮಾಯಾಂತೀಂ ನವಯೌವನಗೋಚರಾಮ್॥** 1

**ತಾಮಾಹ ಲಲಿತಂ ಕೃಷ್ಣಃ ಕಸ್ಯೇದಮನುಲೇಪನಮ್।**
**ಭವತ್ಯಾ ನೀಯತೇ ಸತ್ಯಂ ವದೇಂದೀವರಲೋಚನೇ॥** 2

**ಸಕಾಮೇನೇವ ಸಾ ಪ್ರೋಕ್ತಾ ಸಾನುರಾಗಾ ಹರಿಂ ಪ್ರತಿ।**
**ಪ್ರಾಹ ಸಾ ಲಲಿತಂ ಕುಬ್ಜಾ ತದ್ದರ್ಶನಬಲಾತ್ಕೃತಾ॥** 3

**ಕಾಂತ ಕಸ್ಮಾನ್ನ ಜಾನಾಸಿ ಕಂಸೇನ ವಿನಿಯೋಜಿತಾಮ್।**
**ನೈಕವಕ್ರೇತಿ ವಿಖ್ಯಾತಾಮನುಲೇಪನಕರ್ಮಣಿ॥** 4

---

## ಅಧ್ಯಾಯ 20

ಕುಬ್ಜೆಯಲ್ಲಿ ಕಾರುಣ್ಯ, ಧನುರ್ಭಂಗ, ಕುವಲಯಾಪೀಡವೆಂಬ ಆನೆ ಮತ್ತು ಚಾಣೂರಾದಿ ಮಲ್ಲರ ಸಂಹಾರ; ಕಂಸವಧೆ.

ಪರಾಶರಮಹರ್ಷಿಗಳು ನುಡಿದರು: ಮೈತ್ರೇಯ, ಅನಂತರ ರಾಜ ಮಾರ್ಗದಲ್ಲಿ ಚಂದನವೇ ಮೊದಲಾದ ಅನುಲೇಪನಪಾತ್ರೆಯನ್ನು ಹಿಡಿದು ಕೊಂಡು ಬರುತ್ತಿದ್ದ ನವಯೌವನಶಾಲಿನಿಯಾದ ಒಬ್ಬ ಕುಬ್ಜ ಸ್ತ್ರೀಯನ್ನು ಶ್ರೀಕೃಷ್ಣನು ಕಂಡನು (1). ಅವಳನ್ನು ಕುರಿತು ಮೃದುವಾಗಿ "ಎಲೌ ಇಂದೀವರ ಲೋಚನೆ! ಈ ಅನುಲೇಪನವನ್ನು ಯಾರಿಗಾಗಿ ಒಯ್ಯುತ್ತಿದ್ದೀಯೇ? ಸತ್ಯವಾಗಿ ಹೇಳು!" ಎಂದು ಕೇಳಿದನು. ಕಾಮುಕನಂತೆ ಕೃಷ್ಣನು ಹೀಗೆ ಕೇಳಿದಾಗ, ಅವನ ದರ್ಶನದಿಂದ ಪರವಶಳಾದ ಕುಬ್ಜೆಯು ಶ್ರೀಕೃಷ್ಣನಲ್ಲಿ ಅನುರಾಗವನ್ನು ತಳೆದು ಮೃದುವಾಗಿ "ಓ ಕಾಂತ! ನಾನು ಯಾರೆಂದು ಗೊತ್ತಿಲ್ಲವೆ? ಕಂಸಮಹಾ ರಾಜನಿಂದ ಅನುಲೇಪನಕಾರ್ಯದಲ್ಲಿ ನಿಯುಕ್ತಳಾದವಳು ನಾನು! ಅನೇಕ ವಕ್ರೆ—ಕುಬ್ಜೆ ಎಂದು ವಿಖ್ಯಾತಳಾಗಿದ್ದೇನೆ! (2-4). ನಾನಲ್ಲದೆ ಇನ್ನೊಬ್ಬರು

**ನಾನ್ಯಪಿಷ್ಟಂ ಹಿ ಕಂಸಸ್ಯ ಪ್ರೀತಯೇ ಹ್ಯನುಲೇಪನಮ್।**
**ಭವಾಮ್ಯಹಮತೀವಾಸ್ಯ ಪ್ರಸಾದಘನಭಾಜನಮ್॥** 5

*ಶ್ರೀಕೃಷ್ಣ ಉವಾಚ:*

**ಸುಗಂಧಮೇತದ್ರಾಜಾರ್ಹಂ ರುಚಿರಂ ರುಚಿರಾನನೇ।**
**ಆವಯೋರ್ಗಾತ್ರಸದೃಶಂ ದೀಯತಾಮನುಲೇಪನಮ್॥** 6

*ಶ್ರೀಪರಾಶರ ಉವಾಚ:*

**ಶ್ರುತ್ವೈತದಾಹ ಸಾ ಕುಬ್ಜಾ ಗೃಹ್ಯತಾಮಿತಿ ಸಾದರಮ್।**
**ಅನುಲೇಪನಂ ಚ ಪ್ರದದೌ ಗಾತ್ರಯೋಗ್ಯಮಥೋಭಯೋಃ॥** 7

**ಭಕ್ತಿಚ್ಛೇದಾನುಲಿಪ್ತಾಂಗೌ ತತಸ್ತೌ ಪುರುಷರ್ಷಭೌ।**
**ಸೇಂದ್ರಚಾಪೌ ವ್ಯರಾಜೇತಾಂ ಸಿತಕೃಷ್ಣಾವಿವಾಂಬುದೌ॥** 8

**ತತಸ್ತಾಂ ಚಿಬುಕೇ ಶೌರಿರುಲ್ಲಾಪನವಿಧಾನವಿತ್।**
**ಉತ್ಪಾಟ್ಯ ತೋಲಯಾಮಾಸ ದ್ವ್ಯಂಗುಲೇನಾಗ್ರಪಾಣಿನಾ॥** 9

---

ತಯಾರಿಸಿದ ಅನುಲೇಪನವು ಕಂಸಮಹಾರಾಜನಿಗೆ ಪ್ರಿಯವಾಗದು! ಅವನ ಅತ್ಯಂತ ಕೃಪೆಗೆ ಪಾತ್ರಳಾಗಿಬಿಟ್ಟಿದ್ದೇನೆ!" ಎಂದಳು. ಆಗ ಶ್ರೀಕೃಷ್ಣನು "ಸುಂದರಿ, ರಾಜಾರ್ಹವಾದ ಈ ಸುಗಂಧದ್ರವ್ಯವು ಬಹಳ ಚೆನ್ನಾಗಿರುತ್ತದೆ. ನಮ್ಮಿಬ್ಬರ ದೇಹಕ್ಕೆ ಯೋಗ್ಯವೆನಿಸುವ ಅನುಲೇಪನವನ್ನು ಕೊಡು!" ಎಂದನು (5-6). ಆ ಮಾತನ್ನು ಕೇಳಿ ಕುಬ್ಜೆಯು "ಓಹೊ! ತೆಗೆದುಕೊಳ್ಳೋಣವಾಗಲಿ!" ಎಂದು ನುಡಿದು ಅವರಿಬ್ಬರಿಗೂ ದೇಹಯೋಗ್ಯವಾದ ಅನುಲೇಪನವನ್ನು ಕೊಟ್ಟಳು. ಆ ಪುರುಷಶ್ರೇಷ್ಠರು ಯೋಗ್ಯವಾದ ಸುಗಂಧದ್ರವ್ಯವನ್ನು ತೆಗೆದುಕೊಂಡು, ಕಪೋಲಾದ್ಯಂಗಗಳಿಗೆ ವಿಭಿನ್ನರೀತಿಯಲ್ಲಿ ಬಳಿದುಕೊಂಡು, ಇಂದ್ರಚಾಪದಿಂದ ವಿರಾಜಿಸುವ ಬಿಳಿಯ ಮೋಡದಂತೆಯೂ ಕಪ್ಪು ಮೋಡದಂತೆಯೂ ಶೋಭಿಸಿದರು (7-8). ಆಮೇಲೆ ದೇಹದ ಸೊಟ್ಟನ್ನು ನೇರವಾಗಿ ಮಾಡುವ ವಿಧಾನವನ್ನರಿತಿದ್ದ ಶ್ರೀಕೃಷ್ಣನು ತನ್ನ ಕೈಯ ಎರಡು ಬೆರಳುಗಳಿಂದ ಕುಬ್ಜೆಯ

**ಚಕರ್ಷ ಪದ್ಭ್ಯಾಂ ಚ ತದಾ ಋಜುತ್ವಂ ಕೇಶವೋಽನಯತ್।**
**ತತಸ್ಸಾ ಋಜುತಾಂ ಪ್ರಾಪ್ತಾ ಯೋಷಿತಾಮಭವದ್ವರಾ॥ 10**

**ವಿಲಾಸಲಲಿತಂ ಪ್ರಾಹ ಪ್ರೇಮಗರ್ಭಭರಾಲಸಮ್।**
**ವಸ್ತ್ರೇ ಪ್ರಗೃಹ್ಯ ಗೋವಿಂದಂ ಮಮ ಗೇಹಂ ವ್ರಜೇತಿ ವೈ॥ 11**

**ಏವಮುಕ್ತಸ್ತಯಾ ಶೌರೀ ರಾಮಸ್ಯಾಲೋಕ್ಯ ಚಾನನಮ್।**
**ಪ್ರಹಸ್ಯ ಕುಬ್ಜಾಂ ತಾಮಾಹ ನೈಕವಕ್ರಾಮನಿಂದಿತಾಮ್॥ 12**

**ಆಯಾಸ್ಯೇ ಭವತೀಗೇಹಮಿತಿ ತಾಂ ಪ್ರಹಸನ್ ಹರಿಃ।**
**ವಿಸಸರ್ಜ ಜಹಾಸೋಚ್ಚೈ ರಾಮಸ್ಯಾಲೋಕ್ಯ ಚಾನನಮ್॥ 13**

**ಭಕ್ತಿಭೇದಾನುಲಿಪ್ತಾಂಗೌ ನೀಲಪೀತಾಂಬರೌ ತು ತೌ।**
**ಧನುಶ್ಶಾಲಾಂ ತತೋ ಯಾತೌ ಚಿತ್ರಮಾಲ್ಯೋಪಶೋಭಿತೌ॥ 14**

---

ಗಲ್ಲವನ್ನಲುಗಿಸಿ ಅವಳನ್ನು ಎತ್ತಿಹಿಡಿದು ತೂಗಾಡಿಸಿ, ಕಾಲುಗಳನ್ನು ಕೆಳಗೆ ಜಗ್ಗಿದನು! ಹೀಗೆ ಅವಳ ಡೊಂಕನ್ನು ತಿದ್ದಿದನು! ಆಗ ಅವಳು ಸ್ತ್ರೀಯರಲ್ಲೊಬ್ಬ ಸುಂದರಿಯಾದ ತರುಣಿಯಾದಳು! (9-10). ಅನಂತರ ಕುಬ್ಜೆಯು ಶ್ರೀಕೃಷ್ಣನ ವಸ್ತ್ರವನ್ನು ಹಿಡಿದು ಪ್ರೇಮಭರದಿಂದ ವಿಲಾಸಯುಕ್ತವಾಗಿ "ನನ್ನ ಮನೆಗೆ ಬಾ!" ಎಂದಳು. ಶ್ರೀಕೃಷ್ಣನು ಬಲರಾಮನ ಮುಖವನ್ನು ನೋಡಿ ನಗುತ್ತ , ಸುಂದರಾಕೃತಿಯನ್ನು ಪಡೆದಿದ್ದ ಕುಬ್ಜೆಗೆ "ಆಗಲಿ, ನಿನ್ನ ಮನೆಗೆ ಇನ್ನೊಮ್ಮೆ ಬರುವೆನು!" ಎಂದು ಹೇಳಿ ಅವಳನ್ನು ಕಳಿಸಿದನು. ಆಮೇಲೆ ಬಲರಾಮನ ಮುಖವನ್ನು ನೋಡಿ ಗಟ್ಟಿಯಾಗಿ ನಗತೊಡಗಿದನು (11-13). ಅನಂತರ ಸುಗಂಧದ್ರವ್ಯಗಳಿಂದ ಅನುಲಿಪ್ತಾಂಗರೂ* ನೀಲಪೀತಾಂಬರಧಾರಿಗಳೂ ವಿಚಿತ್ರಾಕಾರದ ಪುಷ್ಪಮಾಲೆಗಳಿಂದ ಭೂಷಿತರೂ ಆದ ರಾಮಕೃಷ್ಣರು ಧನುಃಶಾಲೆಗೆ ಹೋದರು

---

* ಭಕ್ತಿ ಭೇದ ವಿಧಿಯಿಂದ ಅನುಲಿಪ್ತಾಂಗರಾಗಿದ್ದರು. ಭಕ್ತಿ ಭೇದ = ಕುಂಕುಮ ಕಸ್ತೂರೀ ಮೊದಲಾದವುಗಳಿಂದ ಕಪೋಲ, ವೃಕ್ಷಸ್ಥಳ, ಭುಜಾದಿಗಳಲ್ಲಿ ಚಿತ್ರಿಸಿಕೊಳ್ಳುವುದು.

**ಆಯಾಗಂ ತದ್ಧನೂರತ್ನಂ ತಾಭ್ಯಾಂ ಪೃಷ್ಟೈಸ್ತು ರಕ್ಷಿಭಿಃ।**
**ಆಖ್ಯಾತೇ ಸಹಸಾ ಕೃಷ್ಣೋ ಗೃಹೀತ್ವಾಪೂರಯದ್ಧನುಃ॥** 15

**ತತಃ ಪೂರಯತಾ ತೇನ ಭಜ್ಯಮಾನಂ ಬಲಾದ್ಧನುಃ।**
**ಚಕಾರ ಸುಮಹಚ್ಛಬ್ದಂ ಮಥುರಾ ಯೇನ ಪೂರಿತಾ॥** 16

**ಅನುಯುಕ್ತೌ ತತಸ್ತೌ ತು ಭಗ್ನೇ ಧನುಷಿ ರಕ್ಷಿಭಿಃ।**
**ರಕ್ಷಿಸೈನ್ಯಂ ನಿಹತ್ಯೋಭೌ ನಿಷ್ಕ್ರಾಂತೌ ಕಾರ್ಮುಕಾಲಯಾತ್॥** 17

**ಅಕ್ರೂರಾಗಮವೃತ್ತಾಂತಮುಪಲಭ್ಯ ಮಹದ್ಧನುಃ।**
**ಭಗ್ನಂ ಶ್ರುತ್ವಾ ಚ ಕಂಸೋಽಪಿ ಪ್ರಾಹ ಚಾಣೂರಮುಷ್ಟಿಕೌ॥** 18

*ಕಂಸ ಉವಾಚ:*

**ಗೋಪಾಲದಾರಕೌ ಪ್ರಾಪ್ತೌ ಭವದ್ಭ್ಯಾಂ ತು ಮಮಾಗ್ರತಃ।**
**ಮಲ್ಲಯುದ್ಧೇನ ಹಂತವ್ಯೌ ಮಮ ಪ್ರಾಣಹರೌ ಹಿ ತೌ॥** 19

---

(14). ಅಲ್ಲಿ ಬಿಲ್ಲುಹಬ್ಬಕ್ಕಾಗಿ ಗೊತ್ತಾದ ಶ್ರೇಷ್ಠ ಧನುಸ್ಸು ಯಾವುದೆಂದು ಕಾವಲುಗಾರರನ್ನು ಕೇಳಿ ತಿಳಿದುಕೊಂಡು ಶ್ರೀಕೃಷ್ಣನು ಆ ಧನುಸ್ಸನ್ನೆತ್ತಿ ಹೆದೆಯೇರಿಸತೊಡಗಿದನು. ಬಲಾತ್ಕಾರವಾಗಿ ಹೆದೆಯನ್ನೆಳೆದು ಜಗ್ಗಲಾಗಿ ಧನುಸ್ಸು ಧಡಾರನೆ ಮುರಿದು ಭಯಂಕರವಾದ ಶಬ್ದವಾಯಿತು. ಆ ಶಬ್ದದಿಂದ ಮಧುರಾ ನಗರವೇ ಮೊಳಗಿ ಹೋಯಿತು! (15-16). ಧನುಸ್ಸನ್ನು ಮುರಿದದ್ದರಿಂದ ಕಾವಲುಗಾರರು ರಾಮಕೃಷ್ಣರನ್ನು ಹಿಡಿಯಲು ಆಕ್ರಮಣ ಮಾಡಿದರು. ಇವರಿಬ್ಬರು ಆ ಕಾವಲುಗಾರರ ಪಡೆಯನ್ನು ಧ್ವಂಸಗೊಳಿಸಿ ಧನುರ್ಗೃಹದಿಂದ ಹೊರಟುಹೋದರು (17). ಕಂಸನಿಗೆ ಅಕ್ರೂರನು ಹಿಂದಿರುಗಿ ಬಂದ ವೃತ್ತಾಂತದ ವಿವರ ದೊರೆಯಿತು. ಮಹತ್ತರವಾದ ಧನುಸ್ಸನ್ನು ಮುರಿದು ಹಾಕಿದ ಸುದ್ದಿಯೂ ತಲುಪಿತು. ಆಗ ಕಂಸನು ಚಾಣೂರ ಮುಷ್ಟಿಕರನ್ನು ಕರೆಸಿ ಹೀಗೆಂದನು (18): "ಗೊಲ್ಲರ ಬಾಲಕರು ಬಂದಿದ್ದಾರೆ. ಅವರಿಬ್ಬರು ನನ್ನ ಪ್ರಾಣವನ್ನು ತೆಗೆಯಬೇಕೆಂದಿದ್ದಾರೆ! ನೀವಿಬ್ಬರೂ ಮಲ್ಲಯುದ್ಧದಲ್ಲಿ ಅವರನ್ನು ನನ್ನೆದುರಿಗೆ ಕೊಂದು ಹಾಕತಕ್ಕದ್ದು. ಮಲ್ಲಯುದ್ಧದಲ್ಲಿ ನೀವು ಅವರನ್ನು ಕೊಂದು

ನಿಯುದ್ಧೇ ತದ್ವಿನಾಶೇನ ಭವದ್ಭ್ಯಾಂ ತೋಷಿತೋ ಹ್ಯಹಮ್।
ದಾಸ್ಯಾಮ್ಯಭಿಮತಾನ್ ಕಾಮಾನ್ನಾನ್ಯಥೈತೌ ಮಹಾಬಲೌ॥ 20

ನ್ಯಾಯತೋಽನ್ಯಾಯತೋ ವಾಪಿ ಭವದ್ಭ್ಯಾಂ ತೌ ಮಮಾಹಿತೌ।
ಹಂತವ್ಯೌ ತದ್ವಧಾದ್ರಾಜ್ಯಂ ಸಾಮಾನ್ಯಂ ವಾಂ ಭವಿಷ್ಯತಿ॥ 21

ಇತ್ಯಾದಿಶ್ಯ ಸ ತೌ ಮಲ್ಲೌ ತತಶ್ಚಾಹೂಯ ಹಸ್ತಿಪಮ್।
ಪ್ರೋವಾಚೋಚ್ಚೈಸ್ತ್ವಯಾ ಮಲ್ಲಸಮಾಜದ್ವಾರಿ ಕುಂಜರಃ॥ 22

ಸ್ಥಾಪ್ಯಃ ಕುವಲಯಾಪೀಡಸ್ತೇನ ತೌ ಗೋಪದಾರಕೌ।
ಘಾತನೀಯೌ ನಿಯುದ್ಧಾಯ ರಂಗದ್ವಾರಮುಪಾಗತೌ॥ 23

ತಮಪ್ಯಾಜ್ಞಾಪ್ಯ ದೃಷ್ಟ್ವಾ ಚ ಸರ್ವಾನ್ ಮಂಚಾನುಪಾಕೃತಾನ್।
ಆಸನ್ನಮರಣಃ ಕಂಸಃ ಸೂರ್ಯೋದಯಮುದೈಕ್ಷತ॥ 24

---

ಹಾಕಿ ನನಗೆ ಸಂತೋಷವನ್ನುಂಟುಮಾಡಿದರೆ, ನಿಮ್ಮ ಇಷ್ಟಾರ್ಥಗಳನ್ನು ನಡೆಸಿಕೊಡುವೆನು. ಅನ್ಯಥಾ ತಿಳಿಯಬೇಡಿರಿ, ಆ ಬಾಲಕರು ಬಲಾಢ್ಯರು (19-20). ಯುದ್ಧಸಮಯದಲ್ಲಿ ನ್ಯಾಯವೋ ಅನ್ಯಾಯವೋ—ಯಾವುದೋ ಒಂದು ವಿಧಾನದಿಂದ ನನ್ನ ಆ ವೈರಿಗಳನ್ನು ವಧಿಸಬೇಕು. ಅವರನ್ನು ವಧಿಸಿದರೆ ಈ ರಾಜ್ಯವು ನನಗೂ ನಿಮಗೂ ಸಮಾನವಾಗಿ ಸೇರಿದ್ದೆಂದು ಭಾವಿಸುತ್ತೇನೆ!" (21) ಎಂದು ಆ ಜಟ್ಟಿಗಳಿಗೆ ಆಜ್ಞೆ ಮಾಡಿದನು. ಆಮೇಲೆ ಮಾವುತನನ್ನು ಬರಮಾಡಿಕೊಂಡು "ಎಲೈ, ಜಟ್ಟಿಕಾಳಗ ನಡೆಯುವ ರಂಗಮಂದಿರ ಉಂಟಷ್ಟೆ. ಅದರ ದ್ವಾರದೇಶದಲ್ಲಿ ನೀನು ಕುವಲಯಾಪೀಡವೆಂಬ ಉನ್ನತವಾದ ಮಹಾಗಜವನ್ನು ನಿಲ್ಲಿಸಿಕೊಂಡಿರತಕ್ಕದ್ದು. ಆ ಇಬ್ಬರು ಗೊಲ್ಲರ ಹುಡುಗರು ಜಟ್ಟಿಕಾಳಗಕ್ಕಾಗಿ ರಂಗಮಂಟಪದ ದ್ವಾರದ ಬಳಿ ಬಂದಾಗ ಆನೆಯನ್ನು ನುಗ್ಗಿಸಿ ಆ ಹುಡುಗರನ್ನು ಕೊಂದುಬಿಡು" ಎಂದು ಆದೇಶವಿತ್ತನು (22-23). ಹೀಗೆ ಮಾವುತನಿಗೆ ಆಜ್ಞಾಪಿಸಿ, ರಂಗಮಂಟಪದಲ್ಲಿ ಸ್ಥಾಪಿಸಿದ ಪೀಠೋಪಕರಣಗಳನ್ನೆಲ್ಲಾ ಪರೀಕ್ಷಿಸಿ, ಮೃತ್ಯು ಸಮೀಪಿಸಿದ್ದ ಕಂಸನು ಬೆಳಗಾಗುವುದನ್ನೇ ನಿರೀಕ್ಷಿಸುತ್ತಿದ್ದನು (24). ಬೆಳಗಾಯಿತು. ಸಮಸ್ತ ಪೌರಜನರೂ ಬಂದು ತಮ್ಮ ಪೀಠಗಳಲ್ಲಿ

**ತತಃ ಸಮಸ್ತಮಂಚೇಷು ನಾಗರಸ್ಸ ತದಾ ಜನಃ।**
**ರಾಜಮಂಚೇಷು ಚಾರೂಢಾಸ್ಸಹ ಭೃತ್ಯೈರ್ನರಾಧಿಪಾಃ॥** 25

**ಮಲ್ಲಪ್ರಾಶ್ನಿಕವರ್ಗಶ್ಚ ರಂಗಮಧ್ಯಸಮೀಪಗಃ।**
**ಕೃತಃ ಕಂಸೇನ ಕಂಸೋಽಪಿ ತುಂಗಮಂಚೇ ವ್ಯವಸ್ಥಿತಃ॥** 26

**ಅಂತಃಪುರಾಣಾಂ ಮಂಚಾಶ್ಚ ತಥಾನ್ಯೇ ಪರಿಕಲ್ಪಿತಾಃ।**
**ಅನ್ಯೇ ಚ ವಾರಮುಖ್ಯಾನಾಮನ್ಯೇ ನಾಗರಯೋಷಿತಾಮ್॥** 27

**ನಂದಗೋಪಾದಯೋ ಗೋಪಾ ಮಂಚೇಷ್ವನ್ಯೇಷ್ವವಸ್ಥಿತಾಃ।**
**ಅಕ್ರೂರವಸುದೇವೌ ಚ ಮಂಚಪ್ರಾಂತೇ ವ್ಯವಸ್ಥಿತೌ॥** 28

**ನಾಗರೀಯೋಷಿತಾಂ ಮಧ್ಯೇ ದೇವಕೀ ಪುತ್ರಗರ್ಧಿನೀ।**
**ಅಂತಕಾಲೇಽಪಿ ಪುತ್ರಸ್ಯ ದ್ರಕ್ಷ್ಯಾಮೀತಿ ಮುಖಂ ಸ್ಥಿತಾ॥** 29

**ವಾದ್ಯಮಾನೇಷು ತೂರ್ಯೇಷು ಚಾಣೂರೋ ಚಾಪಿ ವಲ್ಗತಿ।**
**ಹಾಹಾಕಾರಪರೇ ಲೋಕೇ ಹ್ಯಾಸ್ಫೋಟಯತಿ ಮುಷ್ಟಿಕೇ॥** 30

---

ಕುಳಿತರು. ರಾಜರು ತಮ್ಮ ಭೃತ್ಯರೊಡನೆ ಆಗಮಿಸಿ ಗೊತ್ತಾಗಿದ್ದ ರಾಜಪೀಠಗಳಲ್ಲಿ ಮಂಡಿಸಿದರು. ಮಲ್ಲಯುದ್ಧದಲ್ಲಿ ಯುಕ್ತಾಯುಕ್ತವನ್ನು ಪರೀಕ್ಷಿಸಿ ಹೇಳುವ ತೀರ್ಪುಗಾರರು ರಂಗಮಧ್ಯಕ್ಕೆ ಸಮೀಪದಲ್ಲಿ ಬಂದು ಕುಳಿತುಕೊಳ್ಳುವಂತೆ ಕಂಸನು ಸೂಚನೆಯಿತ್ತನು. ಮತ್ತು ತಾನು ಎತ್ತರದಲ್ಲಿ ಉನ್ನತ ಸಿಂಹಾಸನದಲ್ಲಿ ಕುಳಿತನು (25-26). ಅಂತಃಪುರದ ಸ್ತ್ರೀಯರಿಗಾಗಿ ಬೇರೆ ಪೀಠಗಳು ವ್ಯವಸ್ಥಿತವಾಗಿದ್ದವು. ಹಾಗೆಯೇ ವೇಶ್ಯಾಸ್ತ್ರೀಯರೂ ಪೌರಸ್ತ್ರೀಯರೂ ಕುಳಿತುಕೊಳ್ಳುವುದಕ್ಕಾಗಿ ಬೇರೆ ಬೇರೆ ಮಂಚಗಳನ್ನು ಗೊತ್ತು ಮಾಡಲಾಗಿತ್ತು (27). ನಂದಗೋಪನೆ ಮೊದಲಾದ ಗೋಪಾಲರು ಬಂದು ಒಂದು ಕಡೆ ಪೀಠಗಳಲ್ಲಿ ಕುಳಿತಿದ್ದರು. ಅವರ ಪೀಠಗಳ ಬಳಿಯಲ್ಲಿಯೇ ಅಕ್ರೂರ ವಸುದೇವರು ಕುಳಿತಿದ್ದರು. ದೇವಕಿಯು ಪುತ್ರದರ್ಶನಲಾಲಸೆಯಿಂದ 'ಕಡೆಯಲ್ಲಾದರೂ ಮಗನ ಮುಖವನ್ನೊಮ್ಮೆ ನೋಡುವೆನು!' ಎಂದುಕೊಂಡು ನಗರ ಸ್ತ್ರೀಯರ ನಡುವೆ ಕುಳಿತಿದ್ದಳು (28-29). ವಾದ್ಯಗಳು ಮೊಳಗಲಾರಂಭಿಸಿದವು. ಚಾಣೂರನು ರಂಗಸ್ಥಳಕ್ಕೆ ಬಂದು ಹೂಂಕರಿಸಿದನು. ಮುಷ್ಟಿಕನು ಸೆಡ್ಡುಹೊಡೆದು ನಿಂತನು. ಜನರ ನಡುವೆ ಗದ್ದಲವೆದ್ದಿತು (30). ಗೋಪವೇಷ

**ಈಷದ್ಧಸಂತೌ ತೌ ವೀರೌ ಬಲಭದ್ರಜನಾರ್ದನೌ।**
**ಗೋಪವೇಷಧರೌ ಬಾಲೌ ರಂಗದ್ವಾರಮುಪಾಗತೌ॥** 31

**ತತಃ ಕುವಲಯಾಪೀಡೋ ಮಹಾಮಾತ್ರಪ್ರಚೋದಿತಃ।**
**ಅಭ್ಯಧಾವತ ವೇಗೇನ ಹಂತುಂ ಗೋಪಕುಮಾರಕೌ॥** 32

**ಹಾಹಾಕಾರೋ ಮಹಾಂಜಜ್ಞೇ ರಂಗಮಧ್ಯೇ ದ್ವಿಜೋತ್ತಮ।**
**ಬಲದೇವೋಽನುಜಂ ದೃಷ್ಟ್ವಾ ವಚನಂ ಚೇದಮಬ್ರವೀತ್॥** 33

**ಹಂತವ್ಯೋ ಹಿ ಮಹಾಭಾಗ ನಾಗೋಽಯಂ ಶತ್ರುಚೋದಿತಃ॥** 34

**ಇತ್ಯುಕ್ತಸ್ಸೋಽಗ್ರಜೇನಾಥ ಬಲದೇವೇನ ವೈ ದ್ವಿಜ।**
**ಸಿಂಹನಾದಂ ತತಶ್ಚಕ್ರೇ ಮಾಧವಃ ಪರವೀರಹಾ॥** 35

**ಕರೇಣ ಕರಮಾಕೃಷ್ಯ ತಸ್ಯ ಕೇಶಿನಿಷೂದನಃ।**
**ಭ್ರಾಮಯಾಮಾಸ ತಂ ಶೌರಿರೈರಾವತಸಮಂ ಬಲೇ॥** 36

**ಈಶೋಽಪಿ ಸರ್ವಜಗತಾಂ ಬಾಲಲೀಲಾನುಸಾರತಃ।**
**ಕ್ರೀಡಿತ್ವಾ ಸುಚಿರಂ ಕೃಷ್ಣಃ ಕರಿದಂತಪದಾಂತರೇ॥** 37

---

ಧಾರಿಗಳೂ ವೀರಬಾಲಕರೂ ಆದ ಬಲಭದ್ರಶ್ರೀಕೃಷ್ಣರು ಮುಗುಳ್ನಗೆ ಬೀರುತ್ತಾ ರಂಗಮಂಟಪದ ಬಾಗಿಲ ಬಳಿ ಬಂದರು. ಒಡನೆಯೇ ಮಾವುತನು ಕುವಲಯಾಪೀಡವನ್ನು ತಿವಿದು ದೌಡಾಯಿಸಿದನು. ಅದು ಈ ಗೋಪಬಾಲಕರನ್ನು ಕೊಲ್ಲುವುದಕ್ಕಾಗಿ ನುಗ್ಗಿ ಬಂದಿತು (31-32). ಮೈತ್ರೇಯ, ರಂಗಮಂಟಪದಲ್ಲಿ ಮಹತ್ತರವಾದ ಹಾಹಾಕಾರವೆದ್ದಿತು. ಬಲರಾಮನು ತಮ್ಮನನ್ನು ಕುರಿತು "ಕೃಷ್ಣ, ಶತ್ರು ಪ್ರೇರಣೆಯಿಂದ ಈ ಆನೆ ನುಗ್ಗಿ ಬರುತ್ತಿದೆ, ಇದನ್ನು ಕೊಲ್ಲಬೇಕು" ಎಂದನು. ಅಣ್ಣನ ಮಾತಿನಂತೆ ಪರಂತಪನಾದ ಶ್ರೀಕೃಷ್ಣನು ಸಿಂಹನಾದಮಾಡಿ ಸಿದ್ಧನಾದನು (33-35). ಆನೆ ಹತ್ತಿರ ಬಂದೊಡನೆ ಕೇಶಿನಿಷೂದನನಾದ ಕೃಷ್ಣನು ಕೈಯಿಂದ ಅದರ ಸೊಂಡಿಲನ್ನು ಹಿಡಿದು ಜಗ್ಗಿ, ಐರಾವತದಂತೆ ಬಲಶಾಲಿಯಾಗಿದ್ದ ಕುವಲಯಾಪೀಡವನ್ನು ಗಿರ್ರನೆ ತಿರುಗಿಸಿದನು (36). ಆತನು ಸಮಸ್ತ ಜಗತ್ತುಗಳಿಗೆ ಒಡೆಯನಾಗಿದ್ದರೂ ಸಹ ಬಾಲಲೀಲೆಯನ್ನನುಸರಿಸಿ ಬಹಳ

**ಉತ್ಪಾಟ್ಯ ವಾಮದಂತಂ ತು ದಕ್ಷಿಣೇನೈವ ಪಾಣಿನಾ।**
**ತಾಡಯಾಮಾಸ ಯನ್ತಾರಂ ತಸ್ಯಾಸೀಚ್ಛತಧಾ ಶಿರಃ॥** 38

**ದಕ್ಷಿಣಂ ದಂತಮುತ್ಪಾಟ್ಯ ಬಲಭದ್ರೋಽಪಿ ತತ್ಕ್ಷಣಾತ್।**
**ಸರೋಷಸ್ತೇನ ಪಾರ್ಶ್ವಸ್ಥಾನ್ ಗಜಪಾಲಾನಪೋಥಯತ್॥** 39

**ತತಸ್ಸೂತ್ಪುತ್ಯ ವೇಗೇನ ರೌಹಿಣೇಯೋ ಮಹಾಬಲಃ।**
**ಜಘಾನ ವಾಮಪಾದೇನ ಮಸ್ತಕೇ ಹಸ್ತಿನಂ ರುಷಾ॥** 40

**ಸ ಪಪಾತ ಹತಸ್ತೇನ ಬಲಭದ್ರೇಣ ಲೀಲಯಾ।**
**ಸಹಸ್ರಾಕ್ಷೇಣ ವಜ್ರೇಣ ತಾಡಿತಃ ಪರ್ವತೋ ಯಥಾ॥** 41

**ಹತ್ವಾ ಕುವಲಯಾಪೀಡಂ ಹಸ್ತ್ಯಾರೋಹಪ್ರಚೋದಿತಮ್।**
**ಮದಾಸೃಗನುಲಿಪ್ತಾಂಗೌ ಹಸ್ತಿದಂತವರಾಯುಧೌ॥** 42

---

ಹೊತ್ತು ಕುವಲಯಾಪೀಡದ ಕೋರೆಹಲ್ಲು-ಪಾದಗಳ ನಡುವೆ ಕ್ರೀಡಿಸಿ, ಅನಂತರ ಅದರ ಎಡಕೊರೆಯನ್ನು ಬಲಗೈಯಿಂದ ಕಿತ್ತು ಅದರಿಂದ ಮಾವಟಿಗನ ತಲೆಗೆ ಬಡಿದನು! ತಲೆ ನೂರು ಚೂರಾಯಿತು! (37-38). ಕ್ರುದ್ಧನಾದ ಬಲರಾಮನು ಆನೆಯ ಬಲಗಡೆಯ ದಂತವನ್ನು ಒಡನೆಯೇ ಕಿತ್ತು ಹತ್ತಿರದಲ್ಲಿದ್ದ ಇತರ ಮಾವುತರನ್ನು ಬಡಿದು ಕೊಂದನು. ಅನಂತರ ಮಹಾಬಲಾಢ್ಯನಾದ ರೌಹಿಣೇಯನು ರೋಷಾವಿಷ್ಟನಾಗಿ ರಭಸದಿಂದ ನೆಗೆದು ಮತಂಗಜದ ಮಸ್ತಕವನ್ನು ಎಡಗಾಲಿನಿಂದ ಒದ್ದನು (39-40). ಸಹಸ್ರಾಕ್ಷನಾದ ದೇವೇಂದ್ರನ ವಜ್ರಾಯುಧದ ಹೊಡೆತಕ್ಕೆ ಸಿಕ್ಕಿ ಪರ್ವತವು ಉರುಳಿದಂತೆ, ಬಲಭದ್ರನ ಲೀಲಾಘಾತಕ್ಕೆ ಸಿಕ್ಕಿದ ಕುವಲಯಾಪೀಡವು ಸತ್ತು ಉರುಳಿಬಿತ್ತು (41). ಈ ಪ್ರಕಾರವಾಗಿ ಮಾವಟಿಗನಿಂದ ಪ್ರೇರಿತವಾದ ಕುವಲಯಾ ಪೀಡವನ್ನು ಕೊಂದು ಹಾಕಿ, ಅದರ ಮದೋದಕದಿಂದಲೂ ನೆತ್ತರಿಂದಲೂ ಲಿಪ್ತಗಾತ್ರರಾಗಿ, ಅದರ ದಂತಗಳನ್ನೇ ಆಯುಧಗಳಂತೆ ಕೈಯಲ್ಲಿ ಹಿಡಿದು, ಮೃಗಗಳ ಮಧ್ಯದಲ್ಲಿ ಗಂಭೀರಲೀಲೆಯಿಂದ ಸುತ್ತಲೂ ನೋಡುವ ಗರ್ವಿತ

**ಮೃಗಮಧ್ಯೇ ಯಥಾ ಸಿಂಹೌ ಗರ್ವಲೀಲಾವಲೋಕಿನೌ।**
**ಪ್ರವಿಷ್ಟೌ ಸುಮಹಾರಂಗಂ ಬಲಭದ್ರಜನಾರ್ದನೌ॥ 43**

**ಹಾಹಾಕಾರೋ ಮಹಾಂಜಜ್ಞೇ ಮಹಾರಂಗೇ ತ್ವನಂತರಮ್।**
**ಕೃಷ್ಣೋಽಯಂ ಬಲಭದ್ರೋಽಯಮಿತಿ ಲೋಕಸ್ಯ ವಿಸ್ಮಯಃ॥ 44**

**ಸೋಽಯಂ ಯೇನ ಹತಾ ಘೋರಾ ಪೂತನಾ ಬಾಲಘಾತಿನೀ।**
**ಕ್ಷಿಪ್ತಂ ತು ಶಕಟಂ ಯೇನ ಭಗ್ನೌ ತು ಯಮಲಾರ್ಜುನೌ॥ 45**

**ಸೋಽಯಂ ಯಃ ಕಾಲಿಯಂ ನಾಗಂ ಮಮರ್ದಾರುಹ್ಯ ಬಾಲಕಃ।**
**ಧೃತೋ ಗೋವರ್ಧನೋ ಯೇನ ಸಪ್ತರಾತ್ರಂ ಮಹಾಗಿರಿಃ॥ 46**

**ಅರಿಷ್ಟೋ ಧೇನುಕಃ ಕೇಶೀ ಲೀಲಯೈವ ಮಹಾತ್ಮನಾ।**
**ನಿಹತಾ ಯೇನ ದುರ್ವೃತ್ತಾ ದೃಶ್ಯತಾಮೇಷ ಸೋಽಚ್ಯುತಃ॥ 47**

**ಅಯಂ ಚಾಸ್ಯ ಮಹಾಬಾಹುರ್ಬಲಭದ್ರೋಽಗ್ರತೋಽಗ್ರಜಃ।**
**ಪ್ರಯಾತಿ ಲೀಲಯಾ ಯೋಷಿನ್ಮನೋನಯನನಂದನಃ॥ 48**

---

ಸಿಂಹಗಳಂತೆ ನೋಡುತ್ತ, ಬಲಭದ್ರನೂ ಶ್ರೀಕೃಷ್ಣನೂ ವಿಶಾಲವಾದ ರಂಗಮಂಟಪವನ್ನು ಪ್ರವೇಶಿಸಿದರು (42-43). ಒಡನೆಯೇ ರಂಗಮಂಟಪದಲ್ಲಿ 'ಇವನು ಕೃಷ್ಣ! ಇವನು ಬಲಭದ್ರ!' ಎಂದು ಭಾರಿ ಗದ್ದಲವೆದ್ದಿತು. "ಬಾಲಘಾತಿನಿಯಾದ ಘೋರಪೂತನೆಯನ್ನು ಕೊಂದವನಿವನು! ಶಕಟನನ್ನು ಒದ್ದು ಹಾರಿಸಿದವನು ಈತ! ಜೋಡಿ ಮತ್ತಿಮರಗಳನ್ನು ಇವನೇ ಮುರಿದು ಕೆಡವಿದವನು! (44-45). ಕಾಳಿಯನಾಗವನ್ನು ಹತ್ತಿನಿಂತು ಅದನ್ನು ಮರ್ದಿಸಿದ ನಲ್ಲ, ಆ ಹುಡುಗ ಈತನೇ! ಗೋವರ್ಧನಮಹಾಗಿರಿಯನ್ನು ಏಳು ರಾತ್ರಿಗಳ ವರೆಗೆ ಎತ್ತಿ ಹಿಡಿದಿದ್ದನಲ್ಲ, ಆ ಹುಡುಗ ಇವನು! ಅರಿಷ್ಟ, ಧೇನುಕ, ಕೇಶಿ— ಎಂಬ ದುಷ್ಟರನ್ನು ಯಾವ ಮಹಾತ್ಮನು ಲೀಲೆಯಿಂದಲೇ ಕೊಂದುಹಾಕಿದನೋ ಆ ಅಚ್ಯುತನೆಂಬವನು ಈತನೇ, ನೋಡಿರಿ! (46-47). ಇವನ ಮುಂದೆ ಇರತಕ್ಕವನು ಇವನ ಅಣ್ಣನಾದ ಬಲಭದ್ರ; ಆಜಾನುಬಾಹು. ತರುಣಿಯರ ಮನೋನಯನಗಳನ್ನು ರಂಜಿಸುತ್ತ ಎಷ್ಟು ಲೀಲೆಯಿಂದ ನಡೆದುಹೋಗು ತ್ತಿದ್ದಾನೆ! (48). ಕೆಳಗೆ ಬಿದ್ದ ಯಾದವವಂಶವನ್ನು ಗೋಪಾಲನೊಬ್ಬನು

**ಅಯಂ ಸ ಕಥ್ಯತೇ ಪ್ರಾಜ್ಞೈಃ ಪುರಾಣಾರ್ಥವಿಶಾರದೈಃ।**
**ಗೋಪಾಲೋ ಯಾದವಂ ವಂಶಂ ಮಗ್ನಮಭ್ಯುದ್ಧರಿಷ್ಯತಿ॥ 49**

**ಅಯಂ ಹಿ ಸರ್ವಲೋಕಸ್ಯ ವಿಷ್ಣೋರಖಿಲಜನ್ಮನಃ।**
**ಅವತೀರ್ಣೋ ಮಹೀಮಂಶೋ ನೂನಂ ಭಾರಹರೋ ಭುವಃ॥ 50**

**ಇತ್ಯೇವಂ ವರ್ಣಿತೇ ಪೌರೈ ರಾಮೇ ಕೃಷ್ಣೇ ಚ ತತ್ಕ್ಷಣಾತ್।**
**ಉರಸ್ತತಾಪ ದೇವಕ್ಯಾಃ ಸ್ನೇಹಸ್ರುತಪಯೋಧರಮ್॥ 51**

**ಮಹೋತ್ಸವಮಿವಾಸಾದ್ಯ ಪುತ್ರಾನನವಿಲೋಕನಾತ್।**
**ಯುವೇವ ವಸುದೇವೋऽಭೂದ್ವಿಹಾಯಾಭ್ಯಾಗತಾಂ ಜರಾಮ್॥ 52**

**ವಿಸ್ತಾರಿತಾಕ್ಷಿಯುಗಲೋ ರಾಜಾಂತಃಪುರಯೋಷಿತಾಮ್।**
**ನಾಗರಸ್ತ್ರೀಸಮೂಹಶ್ಚ ದ್ರಷ್ಟುಂ ನ ವಿರರಾಮ ತಮ್॥ 53**

**ಸಖ್ಯಃ ಪಶ್ಯತ ಕೃಷ್ಣಸ್ಯ ಮುಖಮತ್ಯರುಣೇಕ್ಷಣಮ್।**
**ಗಜಯುದ್ಧಕೃತಾಯಾಸಸ್ವೇದಾಂಬುಕಣಿಕಾಚಿತಮ್॥ 54**

---

ಉದ್ಧರಿಸುವನೆಂದು ಪುರಾಣಾರ್ಥವಿಶಾರದರಾದ ಪ್ರಾಜ್ಞರು ಹೇಳುತ್ತಿದ್ದಾರಲ್ಲ, ಆತನೇ ಇವನು! ಇವನು ಸರ್ವಲೋಕಮಯನೂ ಸರ್ವಕಾರಣನೂ ಆದ ಭಗವಾನ್ ವಿಷ್ಣುವಿನ ಅಂಶವಾಗಿ ಭೂಮಿಯಲ್ಲಿ ಅವತರಿಸಿರಬೇಕು. ನಿಜವಾಗಿಯೂ ಭೂಮಿಯ ಹೊರೆಯನ್ನು ಇಳಿಸಲು ಬಂದಿರಬೇಕು!" (49-50). ಈ ರೀತಿಯಲ್ಲಿ ಬಲರಾಮನನ್ನೂ ಶ್ರೀಕೃಷ್ಣನನ್ನೂ ವರ್ಣಿಸಿ ಪೌರಜನರು ಮಾತಾಡಿಕೊಳ್ಳುತ್ತಿರುವಾಗ, ಪುತ್ರವಾತ್ಸಲ್ಯದಿಂದ ದೇವಕಿಯ ಸ್ತನ್ಯವು ಸುರಿದು ಎದೆ ಒದ್ದೆಯಾಯಿತು. ಅನುತಾಪದಿಂದ ಬೆಂದುಹೋಯಿತು (51). ವಸುದೇವನು ಪುತ್ರರ ಮುಖಾವಲೋಕನದಿಂದ ಅತ್ಯಂತ ಉಲ್ಲಸಿತ ನಾದನು. ಮುಪ್ಪುಕಳೆದುಹೋಗಿ ಮತ್ತೆ ಯುವಕನಂತಾದನು! ರಾಜಾಂತಃಪುರದ ಸುಂದರಿಯರೂ ಪೌರಸ್ತ್ರೀಯರೂ ಕಣ್ಣುಗಳನ್ನು ಹಿಗ್ಗಿಸಿ ಹಿಗ್ಗಿಸಿ ಶ್ರೀಕೃಷ್ಣನನ್ನು ನೋಡುತ್ತಲೇ ಇದ್ದರು. ನೋಡಿ ತಣಿಯಲೇ ಇಲ್ಲ! (52-53). ಅವರು ಹೀಗೆ ಮಾತಾಡಿಕೊಳ್ಳುತ್ತಿದ್ದರು: "ಗೆಳತಿಯರೆ, ಅರುಣನಯನಮನೋಹರವಾದ ಕೃಷ್ಣನ ಮುಖವನ್ನು ನೋಡಿರಿ! ಗಜಯುದ್ಧದ ಆಯಾಸದಿಂದ ಬೆವರಿನ ಹನಿ

**ವಿಕಾಸಿಶರದಂಭೋಜಮವಶ್ಯಾಯಜಲೋಕ್ಷಿತಮ್ ।**
**ಪರಿಭೂಯ ಸ್ಥಿತಂ ಜನ್ಮ ಸಫಲಂ ಕ್ರಿಯತಾಂ ದೃಶಃ ॥ 55**

**ಶ್ರೀವತ್ಸಾಂಕಂ ಮಹದ್ಧಾಮ ಬಾಲಸ್ಯೈತದ್ವಿಲೋಕ್ಯತಾಮ್ ।**
**ವಿಪಕ್ಷಕ್ಷಪಣಂ ವಕ್ಷೋ ಭುಜಯುಗ್ಮಂ ಚ ಭಾಮಿನಿ ॥ 56**

**ಕಿಂ ನ ಪಶ್ಯಸಿ ದುಗ್ಧೇಂದುಮೃಣಾಲಧವಲಾಕೃತಿಮ್ ।**
**ಬಲಭದ್ರಮಿಮಂ ನೀಲಪರಿಧಾನಮುಪಾಗತಮ್ ॥ 57**

**ವಲ್ಗತಾ ಮುಷ್ಟಿಕೇನೈವ ಚಾಣೂರೇಣ ತಥಾ ಸಖಿ ।**
**ಕ್ರೀಡತೋ ಬಲಭದ್ರಸ್ಯ ಹರೇರ್ಹಾಸ್ಯಂ ವಿಲೋಕ್ಯತಾಮ್ ॥ 58**

**ಸಖ್ಯಃ ಪಶ್ಯತ ಚಾಣೂರಂ ನಿಯುದ್ಧಾರ್ಥಮಯಂ ಹರಿಃ ।**
**ಸಮುಪೈತಿ ನ ಸಂತ್ಯತ್ರ ಕಿಂ ವೃದ್ಧಾ ಮುಕ್ತಕಾರಿಣಃ ॥ 59**

---

ಮುಖದಲ್ಲಿ ಮಿನುಗುತ್ತಿದೆ (54). ಮಂಜಿನಹನಿ ಮುಸುಕಿದ, ಶರತ್ಕಾಲ ದಲ್ಲರಳಿದ ತಾವರೆಯ ಹೂವನ್ನು ನಾಚಿಸುತ್ತದೆ ಈ ಮುಖ! ಇದನ್ನು ನೋಡಿ ನಿಮಗೆ ಕಣ್ಣಿರುವುದನ್ನು ಸಾರ್ಥಕಪಡಿಸಿಕೊಳ್ಳಿರಿ? (55). (ಒಬ್ಬಳು ಹೇಳಿದಳು) ಹೇ ಭಾಮಿನಿ, ಈ ಬಾಲಕನ ಶ್ರೀವತ್ಸಾಂಕಯುಕ್ತವೂ ಪರಮತೇಜಸ್ವಿಯೂ ಆದ ಎದೆಯನ್ನು ನೋಡು! ವೈರಿವಿಧ್ವಂಸಕವಾದ ಭುಜಯುಗಳವನ್ನು ನೋಡು! (56). (ಇನ್ನೊಬ್ಬಳು ಹೇಳಿದಳು) ಏನೆ! ಹಾಲಿನಂತೆ ಚಂದ್ರನಂತೆ ತಾವರೆಯ ದಂಟಿನಂತೆ ಬೆಳ್ಳಗಿರುವ ಆ ಹುಡುಗನನ್ನು ನೋಡಬಾರದೆ? ನೀಲವಸ್ತ್ರವನ್ನುಟ್ಟಿದ್ದಾನೆ! ಅವನೇ ಬಲಭದ್ರ (57). (ಮತ್ತೊಬ್ಬಳು ನುಡಿದಳು) ಸಖಿ, ಮುಷ್ಟಿಕನೂ ಚಾಣೂರನೂ ಮೈಮೇಲೆ ಎರಗಿ ಬೀಳುತ್ತಿರುವಾಗ ಅವರೊಡನೆ ಕ್ರೀಡಿಸುವ ಬಲಭದ್ರನನ್ನು ನೋಡಿ ಕೃಷ್ಣನು ಹೇಗೆ ನಗುತ್ತಿದ್ದಾನೆ, ನೋಡು! (58). (ಮಗದೊಬ್ಬಳು ಎಂದಳು) ಅಯ್ಯೊ ಸಖಿಯರೆ, ನೋಡಿರಿ. ಚಾಣೂರನೊಡನೆ ಕುಸ್ತಿಯಾಡುವುದಕ್ಕೆ ಕೃಷ್ಣನು ಬರುತ್ತಿದ್ದಾನೆ. ಇದನ್ನು ತಡೆಯುವ ಹಿರಿಯರು ಯಾರೂ ಇಲ್ಲಿಲ್ಲವೆ? (59). ಈಗಷ್ಟೇ ಯೌವನಕ್ಕೆ ಕಾಲಿಡುತ್ತಿರುವ ಸುಕುಮಾರ

ಕ್ವ ಯೌವನೋನ್ಮುಖೀಭೂತಸುಕುಮಾರತನುರ್ಹರಿಃ।
ಕ್ವ ವಜ್ರಕಠಿನಾಭೋಗಶರೀರೋಽಯಂ ಮಹಾಸುರಃ॥ 60

ಇಮೌ ಸುಲಲಿತೈರಂಗೈರ್ವರ್ತೇತೇ ನವಯೌವನೌ।
ದೈತೇಯಮಲ್ಲಾಶ್ಚಾಣೂರಪ್ರಮುಖಾಸ್ತ್ವತಿದಾರುಣಾಃ॥ 61

ನಿಯುದ್ಧಪ್ರಾಶ್ನಿಕಾನಾಂ ತು ಮಹಾನೇಷ ವ್ಯತಿಕ್ರಮಃ।
ಯದ್ಬಾಲಬಲಿನೋರ್ಯುದ್ಧಂ ಮಧ್ಯಸ್ಥೈಃ ಸಮುಪೇಕ್ಷ್ಯತೇ॥ 62

*ಶ್ರೀಪರಾಶರ ಉವಾಚ:*

ಇತ್ಥಂ ಪುರಸ್ತ್ರೀಲೋಕಸ್ಯ ವದತಶ್ಚಾಲಯನ್ ಭುವಮ್।
ವವಲ್ಗ ಬದ್ಧಕಕ್ಷ್ಯೋಽನ್ತರ್ಜನಸ್ಯ ಭಗವಾನ್ ಹರಿಃ॥ 63

ಬಲಭದ್ರೋಽಪಿ ಚಾಸ್ಫೋಟ್ಯ ವವಲ್ಗ ಲಲಿತಂ ತಥಾ।
ಪದೇ ಪದೇ ತಥಾ ಭೂಮಿರ್ಯನ್ನ ಶೀರ್ಣಾ ತದದ್ಭುತಮ್॥ 64

---

ಶರೀರನಾದ ಕೃಷ್ಣನೆಲ್ಲಿ? ವಜ್ರದಂತೆ ಕಠೋರವಾದ ಮಹಾಶರೀರವುಳ್ಳ ಆ ದೊಡ್ಡ ರಾಕ್ಷಸನೆಲ್ಲಿ? (60). ಇವರಾದರೋ ಕೋಮಲಾಂಗದ ನವಯುವಕರು! ಚಾಣೂರನೇ ಮೊದಲಾದವರು ಬಹುಭಯಂಕರರಾದ ದೈತ್ಯಜಟ್ಟಿಗಳು! ಕುಸ್ತಿ ಕಾಳಗದಲ್ಲಿ ಮಧ್ಯಸ್ಥರಾದವರು ಬಹಳ ದೊಡ್ಡ ತಪ್ಪು ಮಾಡಿದ್ದಾರೆ. ಬಾಲಕರಿಗೂ ಬಲಿಷ್ಠರಿಗೂ ಕುಸ್ತಿ ಸರಿಯಲ್ಲವೆಂಬುದನ್ನು ಉಪೇಕ್ಷಿಸಿದ್ದಾರೆ" (61-62). ಹೀಗೆ ಪುರಸ್ತ್ರೀಯರು ಮಾತಾಡಿಕೊಳ್ಳುತ್ತಿರುವಾಗಲೇ ಶ್ರೀಕೃಷ್ಣನು ಸೊಂಟದಪಟ್ಟಿಯನ್ನು ಬಿಗಿದುಕಟ್ಟಿ ನೆಲವನ್ನದುರಿಸುತ್ತ ಪ್ರೇಕ್ಷಕರೆದುರಿಗೆ ರಂಗಸ್ಥಳಕ್ಕೆ ನೆಗೆದನು. ಬಲಭದ್ರನೂ ಸಹ ಭುಜವನ್ನು ಚಪ್ಪರಿಸಿ ಮನೋಜ್ಞವಾದ ರೀತಿಯಿಂದ ರಂಗಸ್ಥಳದಲ್ಲಿ ಸುಳಿದಾಡಿದನು. ಅವನ ಒಂದೊಂದು ಹೆಜ್ಜೆಗೂ ನೆಲವು ಸೀಳಿಹೋಗದಿದ್ದುದೇ ಆಶ್ಚರ್ಯ! (63-64). ಅನಂತರ ಅಮಿತ ಪರಾಕ್ರಮಿಯಾದ ಶ್ರೀಕೃಷ್ಣನು ಚಾಣೂರನೊಡನೆ ಕುಸ್ತಿಯ

ಚಾಣೂರೇಣ ತತಃ ಕೃಷ್ಣೋ ಯುಯುಧೇಽಮಿತವಿಕ್ರಮಃ।
ನಿಯುದ್ಧಕುಶಲೋ ದೈತ್ಯೋ ಬಲಭದ್ರೇಣ ಮುಷ್ಟಿಕಃ॥ 65

ಸನ್ನಿಪಾತಾವಧೂತೈಸ್ತು ಚಾಣೂರೇಣ ಸಮಂ ಹರಿಃ।
ಪ್ರಕ್ಷೇಪಣೈರ್ಮುಷ್ಟಿಭಿಶ್ಚ ಕೀಲವಜ್ರನಿಪಾತನೈಃ॥ 66

ಪಾದೋದ್ಧೂತೈಃ ಪ್ರಮೃಷ್ಟೈಶ್ಚ ತಯೋರ್ಯುದ್ಧಮಭೂನ್ಮಹತ್॥ 67

ಅಶಸ್ತ್ರಮತಿಘೋರಂ ತತ್ತಯೋರ್ಯುದ್ಧಂ ಸುದಾರುಣಮ್।
ಬಲಪ್ರಾಣವಿನಿಷ್ಪಾದ್ಯಂ ಸಮಾಜೋತ್ಸವಸನ್ನಿಧೌ॥ 68

ಯಾವದ್ಯಾವಚ್ಚ ಚಾಣೂರೋ ಯುಯುಧೇ ಹರಿಣಾ ಸಹ।
ಪ್ರಾಣಹಾನಿಮವಾಪಾಗ್ರ್ಯಾಂ ತಾವತ್ತಾವಲ್ಲವಾಲ್ಲವಮ್॥ 69

ಕೃಷ್ಣೋಽಪಿ ಯುಯುಧೇ ತೇನ ಲೀಲಯೈವ ಜಗನ್ಮಯಃ।
ಖೇದಾಚ್ಚಾಲಯತಾ ಕೋಪಾನ್ನಿಜಶೇಖರಕೇಸರಮ್॥ 70

---

ನ್ನಾರಂಭಿಸಿದನು. ಕುಸ್ತಿಯಲ್ಲಿ ಪಟುವಾಗಿದ್ದ ದೈತ್ಯಾಕೃತಿಯ ಮುಷ್ಟಿಕನು ಬಲಭದ್ರನೊಡನೆ ಕುಸ್ತಿಯಲ್ಲಿ ತೊಡಗಿದನು (65). ಶ್ರೀಕೃಷ್ಣನು ಚಾಣೂರನೊಡನೆ ಪರಸ್ಪರ ಹಸ್ತ ಸಂಘಟ್ಟನ ಹಸ್ತಗಳನ್ನು ಕೊಡಹುವುದು, ಜಗ್ಗಿ ಎಳೆದು ತಳ್ಳುವುದು, ಮುಷ್ಟಿಗಳಿಂದ ಗುದ್ದುವುದು, ಮೊಳಕೈಕೀಲಿನಿಂದ ಚಚ್ಚುವುದು, ಎರಡು ಮೊಳಕೈಗಳಿಂದಲೂ ಇಡಿಯುವುದು, ಕಾಲಿನಿಂದ ಎತ್ತಿ ಎಸೆಯುವುದು, ಹಿಡಿದು ಅಮುಕುವುದು—ಈ ಪ್ರಕಾರಗಳಿಂದ ಮಹತ್ತರವಾದ ಕುಸ್ತಿ ಕಾಳಗವನ್ನು ನಡೆಸಿದನು (66-67). ಅವರಿಬ್ಬರ ಕುಸ್ತಿಯು ಆಯುಧವಿಲ್ಲದ ಅತಿ ಘೋರವೂ ಭೀಕರವೂ ಆದ ಯುದ್ಧವೇ ಆಯಿತು. ಜನಸಮಾಜದ ಉತ್ಸವ ಸಮಯದಲ್ಲಿ ಪರಾಕ್ರಮದಿಂದಲೂ ದೇಹಶಕ್ತಿಯಿಂದಲೂ ನಡೆಸುವ ಹೊಡೆದಾಟವಾಯಿತು (68). ಚಾಣೂರನು ಶ್ರೀಕೃಷ್ಣನೊಡನೆ ಮಲ್ಲಯುದ್ಧ ಮಾಡುತ್ತ ಮಾಡುತ್ತ (ತನ್ನ ಜೀವನದಲ್ಲಿ ) ಮೊದಲನೆಯ ಬಾರಿಗೆ ಕ್ಷಣ ಕ್ಷಣಕ್ಕೂ ಬಲಗುಂದುತ್ತ ಹೋದನು. ಆಯಾಸದಿಂದಲೂ ಕ್ರೋಧದಿಂದಲೂ ತನ್ನ ಶಿರೋಭೂಷಣವಾದ ಕೇಸರವನ್ನು ಅಲ್ಲಾಡಿಸುತ್ತಿದ್ದ ಚಾಣೂರನೊಡನೆ ಜಗನ್ಮಯನಾದ ಶ್ರೀಕೃಷ್ಣನು ಲೀಲೆಯಿಂದಲೇ ಹೋರಾಡುತ್ತಿದ್ದನು (69-70).

**ಬಲಕ್ಷಯಂ ವಿವೃದ್ಧಿಂ ಚ ದೃಷ್ಟ್ವಾ ಚಾಣೂರಕೃಷ್ಣಯೋಃ।**
**ವಾರಯಾಮಾಸ ತೂರ್ಯಾಣಿ ಕಂಸಃ ಕೋಪಪರಾಯಣಃ॥ 71**

**ಮೃದಂಗಾದಿಷು ತೂರ್ಯೇಷು ಪ್ರತಿಷಿದ್ಧೇಷು ತತ್‌ಕ್ಷಣಾತ್।**
**ಖೇ ಸಂಗತಾನ್ಯವಾದ್ಯಂತ ದೇವತೂರ್ಯಾಣ್ಯನೇಕಶಃ॥ 72**

**ಜಯ ಗೋವಿಂದ ಚಾಣೂರಂ ಜಹಿ ಕೇಶವ ದಾನವಮ್।**
**ಅಂತರ್ದ್ಧಾನಗತಾ ದೇವಾಸ್ತಮೂಚುರತಿಹರ್ಷಿತಾಃ॥ 73**

**ಚಾಣೂರೇಣ ಚಿರಂ ಕಾಲಂ ಕ್ರೀಡಿತ್ವಾ ಮಧುಸೂದನಃ।**
**ಉತ್ಥಾಪ್ಯ ಭ್ರಾಮಯಾಮಾಸ ತದ್ವಧಾಯ ಕೃತೋದ್ಯಮಃ॥ 74**

**ಭ್ರಾಮಯಿತ್ವಾ ಶತಗುಣಂ ದೈತ್ಯಮಲ್ಲಮಮಿತ್ರಜಿತ್।**
**ಭೂಮಾವಾಸ್ಫೋಟಯಾಮಾಸ ಗಗನೇ ಗತಜೀವಿತಮ್॥ 75**

**ಭೂಮಾವಾಸ್ಫೋಟಿತಸ್ತೇನ ಚಾಣೂರಃ ಶತಧಾಽಭವತ್।**
**ರಕ್ತಸ್ರಾವಮಹಾಪಂಕಾಂ ಚಕಾರ ಚ ತದಾ ಭುವಮ್॥ 76**

---

ಚಾಣೂರನು ಬಲದಲ್ಲಿ ಕುಗ್ಗುತ್ತಿರುವುದನ್ನೂ ಶ್ರೀಕೃಷ್ಣನ ಕೈ ಮೇಲಾಗುತ್ತಿರುವುದನ್ನೂ ನೋಡಿದ ಕಂಸನು ಕ್ರುದ್ಧನಾಗಿ ಉತ್ಸವದ ವಾದ್ಯಗಳನ್ನು ನಿಲ್ಲಿಸಬೇಕೆಂದು ಆಜ್ಞಾಪಿಸಿದನು! ಮೃದಂಗಾದಿ ವಾದ್ಯಗಳು ನಿಂತುಹೋಗಲು, ಒಡನೆಯೇ ಆಕಾಶದಲ್ಲಿ ನೆರೆದಿದ್ದ ನಾನಾ ವಿಧ ದೇವವಾದ್ಯಗಳು ಮೊಳಗಲಾರಂಭಿಸಿದವು! (71-72). "ಜಯ ಗೋವಿಂದ! ಜಯ ಕೇಶವ! ಚಾಣೂರದಾನವನನ್ನು ಕೊಂದುಹಾಕು!" ಎಂಬುದಾಗಿ ಅಂತರ್ಧಾನದಿಂದ ಉಪಸ್ಥಿತರಾಗಿದ್ದ ದೇವತೆಗಳು ಆನಂದಾತಿರೇಕದಿಂದ ಉಗ್ಗಡಿಸಿದರು (73). ಶ್ರೀಕೃಷ್ಣನು ಚಾಣೂರನೊಡನೆ ಹೀಗೆ ಬಹಳ ಹೊತ್ತು ಮಲ್ಲಯುದ್ಧವೆಂಬ ಕ್ರೀಡೆಯನ್ನಾಡಿದ ಮೇಲೆ ಅವನನ್ನು ಕೊಲ್ಲಬೇಕೆಂದು ನಿಶ್ಚಯಿಸಿದನು. ಆ ಶತ್ರುವಿಧ್ವಂಸಿಯು ದೈತ್ಯಮಲ್ಲನಾದ ಚಾಣೂರನನ್ನು ಗಪ್ಪನೆ ಹಿಡಿದೆತ್ತಿ ಒಂದುನೂರು ಸುತ್ತು ಗಗನದಲ್ಲಿ ಗಿರ್ರೆಂದು ತಿರುಗಿಸಲು ಚಾಣೂರನ ಪ್ರಾಣ ಹೋಯಿತು. ಅವನ ದೇಹವನ್ನು ದೊಪ್ಪನೆ ನೆಲದ ಮೇಲೆ ಬಡಿದನು (74-75). ನೆಲದಮೇಲೆ ಸಿಡಿದ ಚಾಣೂರನ ದೇಹವು ನೂರಾರು ಸೀಳಾಯಿತು. ನೆತ್ತರು ಹರಿದು ನೆಲವೆಲ್ಲ

**ಬಲದೇವೋಽಪಿ ತತ್ಕಾಲಂ ಮುಷ್ಟಿಕೇನ ಮಹಾಬಲಃ।**
**ಯುಯುಧೇ ದೈತ್ಯಮಲ್ಲೇನ ಚಾಣೂರೇಣ ಯಥಾ ಹರಿಃ॥ 77**

**ಸೋಽಪ್ಯೇನಂ ಮುಷ್ಟಿನಾ ಮೂರ್ಧ್ನಿ ವಕ್ಷಸ್ಯಾಹತ್ಯ ಜಾನುನಾ।**
**ಪಾತಯಿತ್ವಾ ಧರಾಪೃಷ್ಠೇ ನಿಷ್ಪಿಪೇಷ ಗತಾಯುಷಮ್॥ 78**

**ಕೃಷ್ಣಸ್ತೋಶಲಕಂ ಭೂಯೋ ಮಲ್ಲರಾಜಂ ಮಹಾಬಲಮ್।**
**ವಾಮಮುಷ್ಟಿಪ್ರಹಾರೇಣ ಪಾತಯಾಮಾಸ ಭೂತಲೇ॥ 79**

**ಚಾಣೂರೇ ನಿಹತೇ ಮಲ್ಲೇ ಮುಷ್ಟಿಕೇ ವಿನಿಪಾತಿತೇ।**
**ನೀತೇ ಕ್ಷಯಂ ತೋಶಲಕೇ ಸರ್ವೇ ಮಲ್ಲಾಃ ಪ್ರದುದ್ರುವುಃ॥ 80**

**ವವಲ್ಗತುಸ್ತತೋ ರಂಗೇ ಕೃಷ್ಣಸಂಕರ್ಷಣಾವುಭೌ।**
**ಸಮಾನವಯಸೋ ಗೋಪಾನ್ ಬಲಾದಾಕೃಷ್ಯ ಹರ್ಷಿತೌ॥ 81**

**ಕಂಸೋಽಪಿ ಕೋಪರಕ್ತಾಕ್ಷಃ ಪ್ರಾಹೋಚ್ಚೈರ್ವ್ಯಾಯತಾನ್ನರಾನ್।**
**ಗೋಪಾವೇತೌ ಸಮಾಜೌಘಾನ್ನಿಷ್ಕ್ರಾಮ್ಯೇತಾಂ ಬಲಾದಿತಃ॥ 82**

---

ಕೆಸರಾಯಿತು. ಶ್ರೀಕೃಷ್ಣನು ಚಾಣೂರನೊಡನೆ ಹೋರಾಡಿದಂತೆ ಅದೇ ಸಮಯದಲ್ಲಿ ಬಲಾಢ್ಯನಾದ ಬಲದೇವನು ದೈತ್ಯಮಲ್ಲನಾದ ಮುಷ್ಟಿಕನೊಡನೆ ಹೋರಾಡುತ್ತಿದ್ದನು (76-77). ಅವನೂ ಸಹ ಮುಷ್ಟಿಕನ ತಲೆಯನ್ನು ಮುಷ್ಟಿಯಿಂದ ಗುದ್ದಿ, ಎದೆಯನ್ನು ಮೊಳಕಾಲಿನಿಂದ ಒದ್ದು ನೆಲದ ಮೇಲುರುಳಿಸಿ ಸಾಯುವಂತೆ ಹಿಂಡಿ ಹಿಸುಕಿದನು. ಅನಂತರ ಶ್ರೀಕೃಷ್ಣನು ಮಲ್ಲರಾಜನೂ ಮಹಾಬಲನೂ ಆದ ತೋಶಲಕ ಎಂಬವನನ್ನು ಎಡಮುಷ್ಟಿಯಿಂದ ಗುದ್ದಿ ನೆಲಕ್ಕೆ ಬೀಳಿಸಿ ಕೊಂದನು (78-79). ಈ ಪ್ರಕಾರ ಚಾಣೂರ ಮಲ್ಲನು ಹತನಾಗಿ ಮುಷ್ಟಿಕನು ಸತ್ತು ತೋಶಲಕನು ಮೃತನಾಗಲು, ಉಳಿದೆಲ್ಲ ಜಟ್ಟಿಗಳೂ ಓಡಿಹೋದರು. ಅನಂತರ ಶ್ರೀಕೃಷ್ಣ ಬಲರಾಮರು ತಮಗೆ ಸಮಾನ ವಯಸ್ಕರಾದ ಗೋಪಾಲರನ್ನು ಒತ್ತಾಯದಿಂದ ರಂಗಮಂಟಪಕ್ಕೆ ಎಳೆದು ತಂದು ಅವರೊಡನೆ ಹರ್ಷದಿಂದ ಕುಣಿದಾಡಿದರು! (80-81). ಕಂಸನು ಕೋಪದಿಂದ ಕೆಂಪಡರಿದ ಕಣ್ಣುಳ್ಳವನಾಗಿ ಒತ್ತಟ್ಟಿಗೆ ನಿಂತಿದ್ದ ಜನರನ್ನು ಕುರಿತು "ಆ ಇಬ್ಬರು ಗೊಲ್ಲರನ್ನು ಬಲಾತ್ಕಾರವಾಗಿ ಸಭೆಯಿಂದ ಹೊರಗೆ ತಳ್ಳಿರಿ!"

ನಂದೋಽಪಿ ಗೃಹ್ಯತಾಂ ಪಾಪೋ ನಿರ್ಗಲೈರಾಯಸೈರಿಹ।
ಅವೃದ್ಧಾರ್ಹೇಣ ದಂಡೇನ ವಸುದೇವೋಽಪಿ ವಧ್ಯತಾಮ್॥ 83

ವಲ್ಗಂತಿ ಗೋಪಾಃ ಕೃಷ್ಣೇನ ಯೇ ಚೇಮೇ ಸಹಿತಾಃ ಪುರಃ।
ಗಾವೋ ನಿಗೃಹ್ಯತಾಮೇಷಾಂ ಯಚ್ಚಾಸ್ತಿ ವಸು ಕಿಂಚನ॥ 84

ಏವಮಾಜ್ಞಾಪಯಂತಂ ತು ಪ್ರಹಸ್ಯ ಮಧುಸೂದನಃ।
ಉತ್ಪುತ್ಯಾರುಹ್ಯ ತಂ ಮಂಚಂ ಕಂಸಂ ಜಗ್ರಾಹ ವೇಗತಃ॥ 85

ಕೇಶೇಷ್ವಾಕೃಷ್ಯ ವಿಗಲತ್ಕಿರೀಟಮವನೀತಲೇ।
ಸ ಕಂಸಂ ಪಾತಯಾಮಾಸ ತಸ್ಯೋಪರಿ ಪಪಾತ ಚ॥ 86

ಅಶೇಷಜಗದಾಧಾರಗುರುಣಾ ಪತತೋಪರಿ।
ಕೃಷ್ಣೇನ ತ್ಯಾಜಿತಃ ಪ್ರಾಣಾನುಗ್ರಸೇನಾತ್ಮಜೋ ನೃಪಃ॥ 87

ಮೃತಸ್ಯ ಕೇಶೇಷು ತದಾ ಗೃಹೀತ್ವಾ ಮಧುಸೂದನಃ।
ಚಕರ್ಷ ದೇಹಂ ಕಂಸಸ್ಯ ರಂಗಮಧ್ಯೇ ಮಹಾಬಲಃ॥ 88

---

ಎಂದು ಗಟ್ಟಿಯಾಗಿ ಅರಚಿದನು (82). ಅಲ್ಲದೆ "ಪಾಪಿಯಾದ ನಂದನನ್ನು ಕಬ್ಬಿಣದ ಸಂಕೋಲೆಗಳಿಂದ ಬಂಧಿಸಿರಿ! ವೃದ್ಧರಿಗೆ ಅನರ್ಹವಾದರೂ ಮರಣ ದಂಡನೆಯಿಂದ ವಸುದೇವನನ್ನು ಕೊಲ್ಲಿರಿ! ಕೃಷ್ಣನೊಡನೆ ಎದುರಿಗೆ ಕುಣಿಯುತ್ತಿರುವ ಗೊಲ್ಲರ ಗೋವುಗಳನ್ನೂ ಅವರ ಬಳಿ ಇರುವ ಎಲ್ಲ ಹಣವನ್ನೂ ಮುಟ್ಟುಗೋಲುಹಾಕಿಕೊಳ್ಳತಕ್ಕದ್ದು!" ಎಂದು ಆಜ್ಞಾಪಿಸುತ್ತಿದ್ದನು (83-84). ಹೀಗೆ ಆಜ್ಞಾಪಿಸುತ್ತಿದ್ದ ಕಂಸನನ್ನು ನೋಡಿ ಶ್ರೀಕೃಷ್ಣನು ನಕ್ಕನು. ಒಡನೆಯೇ ಉನ್ನತ ವೇದಿಕೆಯಲ್ಲಿದ್ದ ಸಿಂಹಾಸನದ ಕಡೆಗೆ ವೇಗದಿಂದ ನೆಗೆದು ಹತ್ತಿ, ಸಡಲಿದ ಕಿರೀಟವಿದ್ದ ಕಂಸನ ತಲೆಗೂದಲನ್ನು ಹಿಡಿದು ಜಗ್ಗಿ ಕೆಳಗಿನ ನೆಲದ ಮೇಲುರುಳಿಸಿ ಅವನ ದೇಹದ ಮೇಲೆ ತಾನೂ ಧುಮುಕಿದನು! (85-86). ಮೈತ್ರೇಯ, ಸಮಸ್ತ ಜಗತ್ತುಗಳನ್ನೇ ತನ್ನಲ್ಲಿ ತುಂಬಿಕೊಂಡಿರುವ ಶ್ರೀಕೃಷ್ಣನು ಮೈಮೇಲೆ ಧುಮುಕಲಾಗಿ, ಉಗ್ರಸೇನಪುತ್ರನಾದ ಕಂಸರಾಜನ ಪ್ರಾಣ ಹೋಯಿತು. ಮಹಾಬಲನಾದ ಮಧುಸೂದನನು ಮೃತನಾದ ಕಂಸನ ಕೇಶಗಳನ್ನು ಹಿಡಿದು ಕಳೇಬರವನ್ನು ರಂಗಮಧ್ಯದಲ್ಲಿ ಎಳೆದಾಡಿದನು (87-88).

**ಗೌರವೇಣಾತಿಮಹತಾ ಪರಿಖಾ ತೇನ ಕೃಷ್ಯತಾ।**
**ಕೃತಾ ಕಂಸಸ್ಯ ದೇಹೇನ ವೇಗೇನೇವ ಮಹಾಂಭಸಃ॥** 89

**ಕಂಸೇ ಗೃಹೀತೇ ಕೃಷ್ಣೇನ ತದ್‌ಭ್ರಾತಾಽಭ್ಯಾಗತೋ ರುಷಾ।**
**ಸುಮಾಲೀ ಬಲಭದ್ರೇಣ ಲೀಲಯೈವ ನಿಪಾತಿತಃ॥** 90

**ತತೋ ಹಾಹಾಕೃತಂ ಸರ್ವಮಾಸೀತ್ತದ್ರಂಗಮಂಡಲಮ್।**
**ಅವಜ್ಞಯಾ ಹತಂ ದೃಷ್ಟ್ವಾ ಕೃಷ್ಣೇನ ಮಥುರೇಶ್ವರಮ್॥** 91

**ಕೃಷ್ಣೋಽಪಿ ವಸುದೇವಸ್ಯ ಪಾದೌ ಜಗ್ರಾಹ ಸತ್ವರಃ।**
**ದೇವಕ್ಯಾಶ್ಚ ಮಹಾಬಾಹುರ್ಬಲದೇವಸಹಾಯವಾನ್॥** 92

**ಉತ್ಥಾಪ್ಯ ವಸುದೇವಸ್ತಂ ದೇವಕೀ ಚ ಜನಾರ್ದನಮ್।**
**ಸ್ಮೃತಜನ್ಮೋಕ್ತವಚನೌ ತಾವೇವ ಪ್ರಣತೌ ಸ್ಥಿತೌ॥** 93

*ಶ್ರೀವಸುದೇವ ಉವಾಚ:*

**ಪ್ರಸೀದ ಸೀದತಾಂ ದತ್ತೋ ದೇವಾನಾಂ ಯೋ ವರಃ ಪ್ರಭೋ।**
**ತಥಾಽಽವಯೋಃ ಪ್ರಸಾದೇನ ಕೃತೋದ್ಧಾರಸ್ಯ ಕೇಶವ॥** 94

---

ಭಾರಿ ತೂಕವಿದ್ದ ಕಂಸನ ದೇಹವನ್ನು ಹಾಗೆ ಎಳೆದಾಡಲಾಗಿ, ಜಲಪ್ರವಾಹದ ವೇಗದಿಂದ ನೆಲದಲ್ಲಿ ಕೊರಕಲು ಬೀಳುವಂತೆ ಆ ಸ್ಥಳದಲ್ಲಿ ಕೊರಕಲಾಯಿತು! ಶ್ರೀಕೃಷ್ಣನು ಕಂಸನನ್ನು, ಆಕ್ರಮಿಸಿ ಹಿಡಿದಾಗ ಅವನ ತಮ್ಮನಾದ ಸುಮಾಲಿ ಯೆಂಬುವನು ರೋಷದಿಂದ ನುಗ್ಗಿಬಂದನು. ಬಲಭದ್ರನು ಲೀಲೆಯಿಂದಲೇ ಆತನನ್ನು ಮುಗಿಸಿದನು (89-90). ಮಧುರೇಶ್ವರನಾದ ಕಂಸನನ್ನು ಕೃಷ್ಣನು ಲೆಕ್ಕವಿಡದೆ ಲೀಲೆಯಿಂದ ಕೊಲ್ಲಲಾಗಿ, ರಂಗಮಂಡಲದಲ್ಲಿ ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು (91). ಅನಂತರ ಬಲಾಢ್ಯನಾದ ಶ್ರೀಕೃಷ್ಣನು ತಡಮಾಡದೆ ಬಲರಾಮನೊಡನೆ ಹೋಗಿ ವಸುದೇವ ಮತ್ತು ದೇವಕಿಯರ ಪಾದಗಳಿಗೆ ವಂದಿಸಿದನು. ಕಾಲಿಗೆ ಬಿದ್ದ ಅವರಿಬ್ಬರನ್ನು ವಸುದೇವದೇವಕಿಯರು ಹಿಡಿದೆಬ್ಬಿಸಿದರು. ಜನ್ಮಕಾಲದಲ್ಲಿ ಜನಾರ್ದನನಾಡಿದ ವಚನಗಳ ಸ್ಮರಣೆಯಾಯಿತು. ಆಗ ವಸುದೇವದೇವಕೀಯರೇ ನಮ್ರಭಾವದಿಂದ ಕೈಮುಗಿದು ನಿಂತುಕೊಂಡರು (92-93). ವಸುದೇವನು ಹೇಳಿದನು: ಹೇ ಪ್ರಭು—ಕೇಶವ, ಕಷ್ಟಕ್ಕೊಳಗಾದ

**ಆರಾಧಿತೋ ಯದ್ಭಗವಾನವತೀರ್ಣೋ ಗೃಹೇ ಮಮ।**
**ದುರ್ವೃತ್ತನಿಧನಾರ್ಥಾಯ ತೇನ ನಃ ಪಾವಿತಂ ಕುಲಮ್॥** 95

**ತ್ವಮಂತಃ ಸರ್ವಭೂತಾನಾಂ ಸರ್ವಭೂತಮಯಃ ಸ್ಥಿತಃ।**
**ಪ್ರವರ್ತೇತೇ ಸಮಸ್ತಾತ್ಮಂಸ್ತ್ವತ್ತೋ ಭೂತಭವಿಷ್ಯತೀ॥** 96

**ಯಜ್ಞೈಸ್ತ್ವಮಿಜ್ಯಸೇಽಚಿಂತ್ಯ ಸರ್ವದೇವಮಯಾಚ್ಯುತ।**
**ತ್ವಮೇವ ಯಜ್ಞೋ ಯಷ್ಟಾ ಚ ಯಜ್ವನಾಂ ಪರಮೇಶ್ವರ॥** 97

**ಸಮುದ್ಭವಸ್ಸಮಸ್ತಸ್ಯ ಜಗತಸ್ತ್ವಂ ಜನಾರ್ದನ॥** 98

**ಸಾಪಹ್ನವಂ ಮಮ ಮನೋ ಯದೇತತ್ತ್ವಯಿ ಜಾಯತೇ।**
**ದೇವಕ್ಯಾಶ್ಚಾತ್ಮಜಪ್ರೀತ್ಯಾ ತದತ್ಯಂತವಿಡಂಬನಾ॥** 99

**ತ್ವಂ ಕರ್ತಾ ಸರ್ವಭೂತಾನಾಮನಾದಿನಿಧನೋ ಭವಾನ್।**
**ತ್ವಾಂ ಮನುಷ್ಯಸ್ಯ ಕಸ್ಯೈಷಾ ಜಿಹ್ವಾ ಪುತ್ರೇತಿ ವಕ್ಷ್ಯತಿ॥** 100

---

ದೇವತೆಗಳಿಗೆ ಯಾವ ವರವನ್ನಿತ್ತಿದ್ದೆಯೋ ಆ ವರವನ್ನು ನಮ್ಮಿಬ್ಬರಲ್ಲಿ ಅನುಗ್ರಹಿಸುವ ಮೂಲಕ ನಡೆಸಿಕೊಟ್ಟಿದ್ದೀಯೆ. ಹೇ ಭಗವನ್, ಆರಾಧನೆಗೆ ಪ್ರಸನ್ನನಾಗಿ ದುಷ್ಟದಮನೋದ್ದೇಶದಿಂದ ನನ್ನ ಮನೆಯಲ್ಲಿ ಅವತರಿಸಿದೆಯಲ್ಲ, ಅದರಿಂದ ನಮ್ಮ ವಂಶ ಪವಿತ್ರವಾಯಿತು (94-95). ಸರ್ವಭೂತಮಯನಾದ ನೀನು ಸರ್ವಭೂತಗಳ ಅಂತರಂಗದಲ್ಲಿ ಸ್ಥಿತನಾಗಿದ್ದೀಯೆ. ಹೇ ಸರ್ವಾತ್ಮ, ಭೂತಭವಿಷ್ಯತ್ತುಗಳು ಪ್ರವರ್ತಿಸುತ್ತವೆ. ಹೇ ಅಚ್ಯುತ, ಅಚಿಂತ್ಯ, ಸರ್ವ ದೇವಮಯ, ಸಮಸ್ತಯಜ್ಞಗಳಿಂದಲೂ ಅರ್ಚಿತನಾಗತಕ್ಕವನು ನೀನೇ. ಓ ಪರಮೇಶ್ವರ, ನೀನೇ ಯಜ್ಞಸ್ವರೂಪನಾಗಿದ್ದೀಯೆ. ಯಾಜಕರಿಗೆ ಯಾಜಕ ನಾಗಿದ್ದೀಯೆ (96-97). ಓ ಜನಾರ್ದನ, ಸಮಸ್ತ ಜಗತ್ತಿಗೂ ಉತ್ಪತ್ತಿ ಸ್ಥಾನ ನೀನು. ನನಗೂ ದೇವಕಿಗೂ ಭ್ರಾಂತಿಪೂರ್ವಕವಾಗಿ ನಿನ್ನಲ್ಲಿ ಯಾವ ಪುತ್ರ ವಾತ್ಸಲ್ಯವಾಗುತ್ತದೆಯೋ ಅದು ಹಾಸ್ಯಾಸ್ಪದವೇ ಸರಿ! ಆದ್ಯಂತವಿಲ್ಲದಿರುವ ನೀನು ಸರ್ವವಸ್ತುಗಳ ಸೃಷ್ಟಿಕರ್ತನಾಗಿದ್ದೀಯೆ. ಯಾವ ಮನುಷ್ಯನ ನಾಲಿಗೆ ನಿನ್ನನ್ನು 'ಪುತ್ರ' ಎಂದು ಕರೆದೀತು! (98-100). ಹೇ ಜಗನ್ನಾಥ, ಈ ಸಮಸ್ತ

**ಜಗದೇತಜ್ಜಗನ್ನಾಥ ಸಂಭೂತಮಖಿಲಂ ಯತಃ।**
**ಕಯಾ ಯುಕ್ತ್ಯಾ ವಿನಾ ಮಾಯಾಂ ಸೋಽಸ್ಮತ್ತಃ ಸಂಭವಿಷ್ಯತಿ॥ 101**

**ಯಸ್ಮಿನ್ ಪ್ರತಿಷ್ಠಿತಂ ಸರ್ವಂ ಜಗತ್‌ಸ್ಥಾವರಜಂಗಮಮ್।**
**ಸಕೋಷ್ಠೋತ್ಸಂಗಶಯನೋ ಮಾನುಷೋ ಜಾಯತೇ ಕಥಮ್॥ 102**

**ಸ ತ್ವಂ ಪ್ರಸೀದ ಪರಮೇಶ್ವರ ಪಾಹಿ ವಿಶ್ವ-**
**ಮಂಶಾವತಾರಕರಣೈರ್ನ ಮಮಾಸಿ ಪುತ್ರಃ।**
**ಆಬ್ರಹ್ಮಪಾದಪಮಿದಂ ಜಗದೇತದೀಶ**
**ತ್ವತ್ತೋ ವಿಮೋಹಯಸಿ ಕಿಂ ಪುರುಷೋತ್ತಮಾಸ್ಮಾನ್॥ 103**

**ಮಾಯಾವಿಮೋಹಿತದೃಶಾ ತನಯೋ ಮಮೇತಿ**
**ಕಂಸಾದ್ಭಯಂ ಕೃತಮಪಾಸ್ತಭಯಾತಿತೀವ್ರಮ್।**
**ನೀತೋಽಸಿ ಗೋಕುಲಮರಾತಿಭಯಾಕುಲೇನ**
**ವೃದ್ಧಿಂ ಗತೋಽಸಿ ಮಮ ನಾಸ್ತಿ ಮಮತ್ವಮೀಶ॥ 104**

---

ಜಗತ್ತು ಯಾರಿಂದ ಜನಿಸಿದೆಯೋ ಅಂಥವನು ಮಾಯಾಶಕ್ತಿಯಿಂದಲ್ಲದೆ ನಮ್ಮ ಮಗನಾಗಿ ಜನಿಸಿದನೆಂದು ಹೇಳಲು ಯಾವ ಯುಕ್ತಿ ಇದ್ದೀತು? ಯಾವಾತನಲ್ಲಿ ಸ್ಥಾವರಜಂಗಮಾತ್ಮಕವಾದ ಸಕಲ ವಿಶ್ವವೂ ಪ್ರತಿಷ್ಠಿತವಾಗಿದೆಯೋ ಆತನು ಗರ್ಭದಲ್ಲಿಯೂ ತೊಡೆಯ ಮೇಲೂ ಮಲಗುವ ಮನುಷ್ಯನಾದಾನೆ? (101-102). ಹೇ ಪರಮೇಶ್ವರ, ಪ್ರಸನ್ನನಾಗು. ಅಂಶಾವತಾರಗಳಿಂದ ಜಗತ್ತನ್ನು ಪಾಲಿಸುತ್ತಿರು. ನೀನು ನನ್ನ ಪುತ್ರನೆಂಬುದು ಸರಿಯಲ್ಲ. ಬ್ರಹ್ಮನಿಂದ ಹಿಡಿದು ಒಂದು ಮರದವರೆಗೂ ಈ ಜಗತ್ತು ನಿನ್ನಿಂದ ಹುಟ್ಟಿದೆ. ಈಶ್ವರ, ಪುರುಷೋತ್ತಮ, ನಮ್ಮನ್ನೇಕೆ ಹೀಗೆ ವ್ಯಾಮೋಹಗೊಳಿಸುತ್ತೀಯೆ? (103). ಹೇ ನಿರ್ಭಯ, 'ನೀನು ನನ್ನ ಪುತ್ರ' ಎಂಬ ಮಾಯಾಮೋಹಿತ ದೃಷ್ಟಿಯಿಂದ ನಾನು ಕಂಸನಿಂದಾಗುವ ಭಯವನ್ನು ಶಂಕಿಸಿ ಭಯಾಕುಲನಾಗಿ, ನಿನ್ನನ್ನು ಗೋಕುಲಕ್ಕೆ ಕರೆದೊಯ್ದೆನು. ಅಲ್ಲಿ ನೀನು ದೊಡ್ಡವನಾದೆ. ಆದ್ದರಿಂದ, ಈಶ್ವರ, ಮಮತೆಯ ಭ್ರಾಂತಿ ನನಗಿಲ್ಲ (104). ರುದ್ರರು, ಮರುತ್ತುಗಳು, ಅಶ್ವಿನೀ ದೇವತೆಗಳು,

**ಕರ್ಮಾಣಿ ರುದ್ರಮರುದಶ್ವಿಶತಕ್ರತೂನಾಂ**
**ಸಾಧ್ಯಾನಿ ಯಸ್ಯ ನ ಭವಂತಿ ನಿರೀಕ್ಷಿತಾನಿ।**
**ತ್ವಂ ವಿಷ್ಣುರೀಶ ಜಗತಾಮುಪಕಾರಹೇತೋಃ**
**ಪ್ರಾಪ್ತೋಽಸಿ ನಃ ಪರಿಗತೋ ವಿಗತೋ ಹಿ ಮೋಹಃ॥** 105

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ವಿಂಶೋಽಧ್ಯಾಯಃ

---

ದೇವೇಂದ್ರ—ಇವರಿಗೂ ಸಾಧ್ಯವಾಗದಂತಹ ನಿನ್ನ ಅದ್ಭುತ ಕೃತ್ಯಗಳನ್ನು ಕಂಡೆನು. ಜಗದೀಶ್ವರ, ನೀನು ಮಹಾವಿಷ್ಣುವಾಗಿದ್ದೀಯೆ. ಲೋಕೋಪಕಾರಕ್ಕಾಗಿ ನಮ್ಮ ಬಳಿಗೆ ಬಂದಿದ್ದೀಯೆ. ನಮ್ಮ ಅಜ್ಞಾನ ಹೋಯಿತು!" ಎಂದು ಸ್ತುತಿಸಿದನು (105).

ಇಲ್ಲಿಗೆ ವಿಷ್ಣುಪುರಾಣದ ಪಂಚಮಾಂಶದಲ್ಲಿ
ಇಪ್ಪತ್ತನೆಯ ಅಧ್ಯಾಯ ಮುಗಿಯಿತು.



## ಏಕವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ತೌ ಸಮುತ್ಪನ್ನವಿಜ್ಞಾನೌ ಭಗವತ್ಕರ್ಮದರ್ಶನಾತ್।**
**ದೇವಕೀವಸುದೇವೌ ತು ದೃಷ್ಟ್ವಾ ಮಾಯಾಂ ಪುನರ್ಹರಿಃ।**
**ಮೋಹಾಯ ಯದುಚಕ್ರಸ್ಯ ವಿತತಾನ ಸ ವೈಷ್ಣವೀಮ್॥ 1**

**ಉವಾಚ ಚಾಂಬ ಹೇ ತಾತ ಚಿರಾದುತ್ಕಂಠಿತೇನ ಮೇ।**
**ಭವಂತೌ ಕಂಸಭೀತೇನ ದೃಷ್ಟೌ ಸಂಕರ್ಷಣೇನ ಚ॥ 2**

**ಕುರ್ವತಾಂ ಯಾತಿ ಯಃ ಕಾಲೋ ಮಾತಾಪಿತ್ರೋರಪೂಜನಮ್।**
**ತತ್ ಖಂಡಮಾಯುಷೋ ವ್ಯರ್ಥಮಸಾಧೂನಾಂ ಹಿ ಜಾಯತೇ॥ 3**

---

## ಅಧ್ಯಾಯ 21

ಉಗ್ರಸೇನನಿಗೆ ರಾಜ್ಯಾಭಿಷೇಕ.
ಸಾಂದೀಪನಿಯ ಶಿಷ್ಯರಾಗಿ ಶ್ರೀಕೃಷ್ಣಬಲರಾಮರ ವಿದ್ಯಾಭ್ಯಾಸ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ತನ್ನ ಈಶ್ವರೀಯ ಕೃತ್ಯವನ್ನು ನೋಡಿದ್ದರಿಂದ ವಸುದೇವ ದೇವಕಿಯರಿಗೆ ಜ್ಞಾನೋದಯ ವಾಯಿತೆಂಬುದನ್ನರಿತು ಶ್ರೀಹರಿಯು ಯಾದವರನ್ನು ವಿಮೋಹ ಗೊಳಿಸುವುದಕ್ಕಾಗಿ ಮತ್ತೆ ವೈಷ್ಣವೀಮಾಯೆಯನ್ನು ಬೀಸಿದನು! (1). ಮತ್ತು ಹೀಗೆಂದನು: "ಅಮ್ಮ, ಅಪ್ಪ, ನಿಮ್ಮನ್ನು ನೋಡಬೇಕೆಂದು ಬಹಳ ದಿನಗಳಿಂದ ಹಂಬಲಿಸುತ್ತಿದ್ದೆವು. ಕಂಸನ ಭಯದಿಂದ ನೋಡಲು ಸಾಧ್ಯವಾಗಲಿಲ್ಲ! ಈಗ ನಾನೂ ಬಲರಾಮನೂ ನಿಮ್ಮಿರ್ವರನ್ನು ಕಂಡೆವು (2). ತಾಯಿ ತಂದೆಗಳ ಸೇವೆಯನ್ನು ಮಾಡದೆ ಕಾಲಕಳೆಯತಕ್ಕವರಿಗೆ ಅಷ್ಟು ಆಯುಸ್ಸಿನ ಭಾಗ ವ್ಯರ್ಥ ವಾದಂತೆಯೇ ಸರಿ. ಅಯೋಗ್ಯರಿಗೆ ಮಾತ್ರ ಇಂತಹ ಸಂದರ್ಭ ಘಟಿಸುತ್ತದೆ.

**ಗುರುದೇವದ್ವಿಜಾತೀನಾಂ ಮಾತಾಪಿತ್ರೋಶ್ಚ ಪೂಜನಮ್।**
**ಕುರ್ವತಾಂ ಸಫಲಃ ಕಾಲೋ ದೇಹಿನಾಂ ತಾತ ಜಾಯತೇ॥ 4**

**ತತ್‌ಕ್ಷಂತವ್ಯಮಿದಂ ಸರ್ವಮತಿಕ್ರಮಕೃತಂ ಪಿತಃ।**
**ಕಂಸವೀರ್ಯಪ್ರತಾಪಾಭ್ಯಾಮಾವಯೋಃ ಪರವಶ್ಯಯೋಃ॥ 5**

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾಽಥ ಪ್ರಣಮ್ಯೋಭೌ ಯದುವೃದ್ಧಾನನುಕ್ರಮಾತ್।**
**ಯಥಾವದಭಿಪೂಜ್ಯಾಥ ಚಕ್ರತುಃ ಪೌರಮಾನನಮ್॥ 6**

**ಕಂಸಪತ್ನ್ಯಸ್ತತಃ ಕಂಸಂ ಪರಿವಾರ್ಯ ಹತಂ ಭುವಿ।**
**ವಿಲೇಪುರ್ಮಾತರಶ್ಚಾಸ್ಯ ದುಃಖಶೋಕಪರಿಪ್ಲುತಾಃ॥ 7**

**ಬಹುಪ್ರಕಾರಮತ್ಯರ್ಥಂ ಪಶ್ಚಾತ್ತಾಪಾತುರೋ ಹರಿಃ।**
**ತಾಸ್ಸಮಾಶ್ವಾಸಯಾಮಾಸ ಸ್ವಯಮಸ್ರಾವಿಲೇಕ್ಷಣಃ॥ 8**

**ಉಗ್ರಸೇನಂ ತತೋ ಬಂಧಾನ್ಮುಮೋಚ ಮಧುಸೂದನಃ।**
**ಅಭ್ಯಷಿಂಚತ್ತದೈವೈನಂ ನಿಜರಾಜ್ಯೇ ಹತಾತ್ಮಜಮ್॥ 9**

---

ಓ ತಂದೆಯೆ, ಗುರು-ದೇವ-ಬ್ರಾಹ್ಮಣರ ಮತ್ತು ತಾಯಿತಂದೆಗಳ ಪೂಜೆಯನ್ನು ಮಾಡತಕ್ಕ ಮನುಷ್ಯರ ಸಮಯವು ಸಫಲವಾಗುತ್ತದೆ (3-4). ಆದ್ದರಿಂದ, ಓ ತಂದೆ, ನಾವು ಮಾಡಿದ ಅಪರಾಧವನ್ನು ಮನ್ನಿಸಬೇಕು. ಕಂಸನ ಪ್ರತಾಪ ಪರಾಕ್ರಮಗಳಿಗೆ ಅಂಜಿ ಪರವಶರಾದ ನಮ್ಮಿಂದ ಈ ತಪ್ಪು ನಡೆದು ಹೋಯಿತು!" ಎಂದನು (5). ಹೀಗೆ ನುಡಿದ ಮೇಲೆ ಶ್ರೀಕೃಷ್ಣನೂ ಬಲಭದ್ರನೂ ತಾಯಿತಂದೆಗಳಿಗೆ ನಮಸ್ಕರಿಸಿ ಹಿರಿಯರಾದ ಯದುವೃದ್ಧರಿಗೆ ಅನುಕ್ರಮದಿಂದ ವಿಧಿಪೂರ್ವಕವಾಗಿ ವಂದಿಸಿ, ಪೌರರನ್ನು ಸಂಮಾನಿಸಿದರು (6). ಇತ್ತಲಾಗಿ ಕಂಸನ ಪತ್ನಿಯರೂ ಅವನ ತಾಯಂದಿರೂ ದುಃಖಸಂತಾಪ ಗಳಿಂದ ತೊಳಲುತ್ತ , ನೆಲದ ಮೇಲೆ ಹತನಾಗಿ ಬಿದ್ದಿದ್ದ ಕಂಸನ ಸುತ್ತಲೂ ಮುತ್ತಿಕೊಂಡು ಅತ್ತರು. ಬಹುವಿಧದಲ್ಲಿ ಅವರು ಗೋಳಾಡುವುದನ್ನು ಕಂಡು ಸಂತಾಪದಿಂದ ಶ್ರೀಕೃಷ್ಣನು ವಿಹ್ವಲನಾದನು. ಕಂಬನಿ ತುಂಬಿತು. ತಾನೇ ಹೋಗಿ ಆ ಸ್ತ್ರೀಯರಿಗೆ ಸಮಾಧಾನ ಹೇಳಿದನು (7-8). ಅನಂತರ ಮಗನನ್ನು

**ರಾಜ್ಯೇऽಭಿಷಿಕ್ತಃ ಕೃಷ್ಣೇನ ಯದುಸಿಂಹಸ್ಸುತಸ್ಯ ಸಃ।**
**ಚಕಾರ ಪ್ರೇತಕಾರ್ಯಾಣಿ ಯೇ ಚಾನ್ಯೇ ತತ್ರ ಘಾತಿತಾಃ॥ 10**

**ಕೃತೌರ್ಧ್ವದೈಹಿಕಂ ಚೈನಂ ಸಿಂಹಾಸನಗತಂ ಹರಿಃ।**
**ಉವಾಚಾಜ್ಞಾಪಯ ವಿಭೋ ಯತ್ಕಾರ್ಯಮವಿಶಂಕಿತಃ॥ 11**

**ಯಯಾತಿಶಾಪಾದ್ವಂಶೋऽಯಮರಾಜ್ಯಾರ್ಹೋऽಪಿ ಸಾಮ್ಪ್ರತಮ್।**
**ಮಯಿ ಭೃತ್ಯೇ ಸ್ಥಿತೇ ದೇವಾನಾಜ್ಞಾಪಯತು ಕಿಂ ನೃಪೈಃ॥ 12**

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾ ಸೋऽಸ್ಮರದ್ವಾಯುಮಾಜಗಾಮ ಚ ತತ್ಕ್ಷಣಾತ್।**
**ಉವಾಚ ಚೈನಂ ಭಗವಾನ್ ಕೇಶವಃ ಕಾರ್ಯಮಾನುಷಃ॥ 13**

**ಗಚ್ಛೇದಂ ಬ್ರೂಹಿ ವಾಯೋ ತ್ವಮಲಂ ಗರ್ವೇಣ ವಾಸವ।**
**ದೀಯತಾಮುಗ್ರಸೇನಾಯ ಸುಧರ್ಮಾ ಭವತಾ ಸಭಾ॥ 14**

---

ಕಳೆದುಕೊಂಡ ಉಗ್ರಸೇನನನ್ನು ಸೆರೆಯಿಂದ ಬಿಡಿಸಿ ಅಂದೇ ತನ್ನ ರಾಜ್ಯದಲ್ಲಿ ರಾಜನೆಂದು ಅಭಿಷೇಕ ಮಾಡಿಸಿದನು. ಹೀಗೆ ರಾಜ್ಯಾಭಿಷಿಕ್ತನಾದ ಯದುಶ್ರೇಷ್ಠ ಉಗ್ರಸೇನನು ಹತನಾದ ತನ್ನ ಮಗ ಕಂಸನಿಗೂ ಹತರಾಗಿದ್ದ ಇತರರಿಗೂ ಪ್ರೇತಕಾರ್ಯಗಳನ್ನು ನಡೆಸಿದನು (9-10). ಹೀಗೆ ಅಪರ ಕ್ರಿಯೆಗಳನ್ನೆಲ್ಲ ನಡೆಸಿ ಸಿಂಹಾಸನಾರೂಢನಾದ ಉಗ್ರಸೇನನನ್ನು ಕುರಿತು ಶ್ರೀಕೃಷ್ಣನು "ಮಹಾರಾಜ, ಮುಂದಿನ ಕಾರ್ಯವೇನೆಂಬುದನ್ನು ನನಗೆ ಆಜ್ಞಾಪಿಸು. ಯಾವ ಶಂಕೆಯೂ ಬೇಡ. ಯಯಾತಿ ಶಾಪದಿಂದ ನಮ್ಮ ವಂಶವು ರಾಜ್ಯಾರ್ಹವಲ್ಲದಿದ್ದರೂ, ಪ್ರಕೃತದಲ್ಲಿ ಸೇವಕನಾದ ನಾನಿರುವಾಗ, ದೇವತೆಗಳಿಗೂ ನೀನು ಆಜ್ಞೆಯನ್ನೀಯ ಬಹುದು! ಇತರ ರಾಜರ ವಿಷಯವಂತಿರಲಿ!" ಎಂದು ಹೇಳಿದನು (11-12). ಕಾರ್ಯಾರ್ಥವಾಗಿ ಮಾನವದೇಹವನ್ನು ಧರಿಸಿದ್ದ ಭಗವಾನ್ ಕೇಶವನು ಹೀಗೆ ಹೇಳಿ, ವಾಯುದೇವನನ್ನು ಸ್ಮರಿಸಿಕೊಂಡನು. ಒಡನೆಯೇ ಅಲ್ಲಿ ಉಪಸ್ಥಿತನಾದ ವಾಯುವನ್ನು ಕುರಿತು "ಎಲೈ ವಾಯುವೆ, ಹೋಗಿ ದೇವೇಂದ್ರನಿಗೆ ಹೇಳು—ಇಂದ್ರ, ಗರ್ವ ಬೇಡ. ಉಗ್ರಸೇನನಿಗೆ ನೀನು ಸುಧರ್ಮ ಸಭೆಯನ್ನು ಕೊಟ್ಟುಬಿಡು! (13-14). ಕೃಷ್ಣನು ಹೇಳಿದ್ದಾನೆ—ಸುಧರ್ಮವೆಂಬ ಶ್ರೇಷ್ಠವಾದ

**ಕೃಷ್ಣೋ ಬ್ರವೀತಿ ರಾಜಾರ್ಹಮೇತದ್ರತ್ನಮನುತ್ತಮಮ್ ।**
**ಸುಧರ್ಮಾಖ್ಯಸಭಾ ಯುಕ್ತಮಸ್ಯಾಂ ಯದುಭಿರಾಸಿತುಮ್ ॥** 15

*ಶ್ರೀಪರಾಶರ ಉವಾಚ:*

**ಇತ್ಯುಕ್ತಃ ಪವನೋ ಗತ್ವಾ ಸರ್ವಮಾಹ ಶಚೀಪತಿಮ್ ।**
**ದದೌ ಸೋऽಪಿ ಸುಧರ್ಮಾಖ್ಯಾಂ ಸಭಾಂ ವಾಯೋಃ ಪುರಂದರಃ ॥** 16

**ವಾಯುನಾ ಚಾಹೃತಾಂ ದಿವ್ಯಾಂ ಸಭಾಂ ತೇ ಯದುಪುಂಗವಾಃ ।**
**ಬುಭುಜುಸ್ಸರ್ವರತ್ನಾಢ್ಯಾಂ ಗೋವಿಂದಭುಜಸಂಶ್ರಯಾಃ ॥** 17

**ವಿದಿತಾಖಿಲವಿಜ್ಞಾನೌ ಸರ್ವಜ್ಞಾನಮಯಾವಪಿ ।**
**ಶಿಷ್ಯಾಚಾರ್ಯಕ್ರಮಂ ವೀರೌ ಖ್ಯಾಪಯಂತೌ ಯದೂತ್ತಮೌ ॥** 18

**ತತಸ್ಸಾಂದೀಪನಿಂ ಕಾಶ್ಯಮವಂತಿಪುರವಾಸಿನಮ್ ।**
**ವಿದ್ಯಾರ್ಥಂ ಜಗ್ಮತುರ್ಬಾಲೌ ಕೃತೋಪನಯನಕ್ರಮೌ ॥** 19

---

ಸಭಾರತ್ನವು ರಾಜಾರ್ಹವಾದದ್ದು. ಯದುವಂಶೀಯರು ಅದರಲ್ಲಿ ವಿರಾಜಿಸುವುದು ಯುಕ್ತವಾಗಿದೆ—ಎಂದು ತಿಳಿಸು" ಎಂದು ಹೇಳಿದನು (15). ಶ್ರೀಕೃಷ್ಣನ ಮಾತಿನಂತೆ ವಾಯುದೇವನು ಹೋಗಿ ದೇವೇಂದ್ರನಿಗೆ ಎಲ್ಲವನ್ನೂ ತಿಳಿಸಲು, ಶಚೀಪತಿಯು ಸುಧರ್ಮಸಭೆಯನ್ನು* ಕೊಟ್ಟನು. ವಾಯುವು ಸರ್ವರತ್ನಾಢ್ಯವಾದ ಆ ದಿವ್ಯಸಭೆಯನ್ನು ತಂದು ಇರಿಸಲಾಗಿ, ಶ್ರೀಕೃಷ್ಣನ ಭುಜಬಲವನ್ನಾಶ್ರಯಿಸಿದ ಯದುಪುಂಗವರು ಆ ಸಭೆಯ ಭೋಗವನ್ನನುಭವಿಸುತ್ತಿದ್ದರು (16-17). ಮೈತ್ರೇಯ, ಯಾದವೋತ್ತಮರಾದ ಶ್ರೀಕೃಷ್ಣಬಲರಾಮರು ಸ್ವತಃ ಸರ್ವ ಜ್ಞಾನಮಯರೂ ಸಕಲಶಾಸ್ತ್ರಾರ್ಥವೇದಿಗಳೂ ಆಗಿದ್ದರೂ ಸಹ ಲೋಕದಲ್ಲಿ ಗುರುಶಿಷ್ಯ ಪರಂಪರೆಯನ್ನು ರಕ್ಷಿಸಬೇಕೆಂದು ಉದ್ದೇಶಿಸಿದರು. ಆದ್ದರಿಂದ ಉಪನಯನ ಸಂಸ್ಕಾರವನ್ನು ಪಡೆದಮೇಲೆ ಆ ಬಾಲಕರು ಕಾಶಿಯಲ್ಲಿ ಜನಿಸಿ ಅವಂತೀಪುರದಲ್ಲಿ ನೆಲೆಸಿದ್ದ ಸಾಂದೀಪನಿ ಎಂಬ ಆಚಾರ್ಯನ ಬಳಿಗೆ ವಿದ್ಯಾಭ್ಯಾಸಕ್ಕಾಗಿ ಹೋದರು (18-19). ಆ

* ಸಭೆ ಎಂದರೆ ಸಭಾಮಂಟಪವಿರಬಹುದು.

**ವೇದಾಭ್ಯಾಸಕೃತಪ್ರೀತೀ ಸಂಕರ್ಷಣಜನಾರ್ದನೌ।**
**ತಸ್ಯ ಶಿಷ್ಯತ್ವಮಭ್ಯೇತ್ಯ ಗುರುವೃತ್ತಿಪರೌ ಹಿ ತೌ॥ 20**

**ದರ್ಶಯಾಂಚಕ್ರತುರ್ವೀರಾವಾಚಾರಮಖಿಲೇ ಜನೇ।**
**ಸರಹಸ್ಯಂ ಧನುರ್ವೇದಂ ಸಸಂಗ್ರಹಮಧೀಯತಾಮ್॥ 21**

**ಅಹೋರಾತ್ರಚತುಷ್ಷಷ್ಟ್ಯಾ ತದದ್ಭುತಮಭೂದ್ದ್ವಿಜ।**
**ಸಾಂದೀಪನಿರಸಂಭಾವ್ಯಂ ತಯೋಃ ಕರ್ಮಾತಿಮಾನುಷಮ್॥ 22**

**ವಿಚಿಂತ್ಯ ತೌ ತದಾ ಮೇನೇ ಪ್ರಾಪ್ತೌ ಚಂದ್ರದಿವಾಕರೌ।**
**ಸಾಂಗಾಂಶ್ಚ ಚತುರೋ ವೇದಾನ್ ಸರ್ವಶಾಸ್ತ್ರಾಣಿ ಚೈವ ಹಿ॥ 23**

**ಅಸ್ತ್ರಗ್ರಾಮಮಶೇಷಂ ಚ ಪ್ರೋಕ್ತಮಾತ್ರಮವಾಪ್ಯ ತೌ।**
**ಊಚತುರ್ವ್ರಿಯತಾಂ ಯಾ ತೇ ದಾತವ್ಯಾ ಗುರುದಕ್ಷಿಣಾ॥ 24**

---

ಸಂಕರ್ಷಣನೂ ಜನಾರ್ದನನೂ ಸಾಂದೀಪನಿಯ ಶಿಷ್ಯತ್ವವನ್ನು ಸ್ವೀಕರಿಸಿ ಗುರು ಶುಶ್ರೂಷೆ ಮಾಡುತ್ತ ಪ್ರೀತಿಯಿಂದ ವೇದಾಭ್ಯಾಸದಲ್ಲಿ ತೊಡಗಿದರು. ಸಕಲ ಜನರಿಗೂ ಶಿಷ್ಟಾಚಾರವೇನೆಂಬುದನ್ನು ತೋರಿಸಿಕೊಟ್ಟರು. ಅಲ್ಲದೆ ಅಸ್ತ್ರಮಂತ್ರೋಪನಿಷತ್ ಸಹಿತವಾಗಿ ಧನುರ್ವೇದವನ್ನೂ ಅಸ್ತ್ರಪ್ರಯೋಗ ವಿಧಿಯನ್ನೂ ಕಲಿತರು (20-21). ಅರವತ್ತುನಾಲ್ಕು ಅಹೋರಾತ್ರಗಳಲ್ಲಿ (ದಿವಸ ಗಳಲ್ಲಿ) ಮೈತ್ರೇಯ, ಎಲ್ಲ ವಿದ್ಯೆಗಳನ್ನೂ ಕಲಿತರು! ಒಂದು ಅದ್ಭುತವೇ ನಡೆದು ಹೋಯಿತು! ಊಹಾತೀತವಾದ ಈ ಅಮಾನುಷ ಕಾರ್ಯವನ್ನಾಲೋಚಿಸುತ್ತ ಆಚಾರ್ಯ ಸಾಂದೀಪನಿಯು "ಚಂದ್ರ ಸೂರ್ಯರೇ ಈ ವೇಷದಲ್ಲಿ ಬಂದಿರ ಬೇಕು!" ಎಂದು ಭಾವಿಸಿದನು. ಆ ಬಾಲಕರು ನಾಲ್ಕು ವೇದಗಳನ್ನೂ ಷಡಂಗ ಗಳನ್ನೂ ಸರ್ವಶಾಸ್ತ್ರಗಳನ್ನೂ ಕಲಿತಿದ್ದರು (22-23). ಆಚಾರ್ಯನು ಒಂದು ಸಲ ಹೇಳಿದರೆ ಸಾಕು, ಆ ವಿದ್ಯೆ ಅವರಿಗೆ ಬಂದಂತೆಯೇ! ಈ ರೀತಿಯಲ್ಲಿ ಎಲ್ಲ ಅಸ್ತ್ರವಿದ್ಯೆಯನ್ನೂ ಕಲಿತಾದ ಮೇಲೆ ಅವರು ಗುರುವನ್ನು ಕುರಿತು "ತಮಗೆ ಯಾವ ಗುರುದಕ್ಷಿಣೆಯನ್ನು ಸಲ್ಲಿಸಬೇಕು? ಹೇಳೋಣವಾಗಲಿ" ಎಂದು ನುಡಿದರು (24). ಸಾಂದೀಪನಿಯ ಪುತ್ರನು ಹಿಂದೆ ಪ್ರಭಾಸ ಕ್ಷೇತ್ರದ ಬಳಿ

**ಸೋಽಪ್ಯತೀಂದ್ರಿಯಮಾಲೋಕ್ಯ ತಯೋಃ ಕರ್ಮ ಮಹಾಮತಿಃ।**
**ಅಯಾಚತ ಮೃತಂ ಪುತ್ರಂ ಪ್ರಭಾಸೇ ಲವಣಾರ್ಣವೇ॥ 25**

**ಗೃಹೀತಾಸ್ತ್ರೌ ತತಸ್ತೌ ತು ಸಾರ್ಘ್ಯಹಸ್ತೋ ಮಹೋದಧಿಃ।**
**ಉವಾಚ ನ ಮಯಾ ಪುತ್ರೋ ಹೃತಸ್ಸಾಂದೀಪನೇರಿತಿ॥ 26**

**ದೈತ್ಯಃ ಪಂಚಜನೋ ನಾಮ ಶಂಖರೂಪಸ್ಸ ಬಾಲಕಮ್।**
**ಜಗ್ರಾಹ ಯೋಽಸ್ತಿ ಸಲಿಲೇ ಮಮೈವಾಸುರಸೂದನ॥ 27**

*ಶ್ರೀಪರಾಶರ ಉವಾಚ:*

**ಇತ್ಯುಕ್ತೋಽಂತರ್ಜಲಂ ಗತ್ವಾ ಹತ್ವಾ ಪಂಚಜನಂ ಚ ತಮ್।**
**ಕೃಷ್ಣೋ ಜಗ್ರಾಹ ತಸ್ಯಾಸ್ಥಿಪ್ರಭವಂ ಶಂಖಮುತ್ತಮಮ್ 28**

**ಯಸ್ಯ ನಾದೇನ ದೈತ್ಯಾನಾಂ ಬಲಹಾನಿರಜಾಯತ।**
**ದೇವಾನಾಂ ವವೃಧೇ ತೇಜೋ ಯಾತ್ಯಧರ್ಮಶ್ಚ ಸಂಕ್ಷಯಮ್॥ 29**

**ತಂ ಪಾಂಚಜನ್ಯಮಾಪೂರ್ಯ ಗತ್ವಾ ಯಮಪುರಂ ಹರಿಃ।**
**ಬಲದೇವಶ್ಚ ಬಲವಾಂಜಿತ್ವಾ ವೈವಸ್ವತಂ ಯಮಮ್॥ 30**

---

ಸಮುದ್ರದಲ್ಲಿ ಸತ್ತುಹೋಗಿದ್ದನು. ಅದನ್ನು ಸ್ಮರಿಸಿಕೊಂಡ ಪ್ರಾಜ್ಞನಾದ ಆಚಾರ್ಯನು ಈ ಶಿಷ್ಯರ ಅತೀಂದ್ರಿಯವಾದ ಅದ್ಭುತ ಕಾರ್ಯವನ್ನು ಚಿಂತಿಸಿ, ಮೃತನಾದ ಪುತ್ರನನ್ನು ತಂದುಕೊಡಿರೆಂದು ಕೇಳಿದನು (25). ಆಗ ರಾಮಕೃಷ್ಣರು ಅಸ್ತ್ರಧಾರಿಗಳಾಗಿ ಸಮುದ್ರದ ಬಳಿಗೆ ಹೋದರು. ಸಮುದ್ರರಾಜನು ಅರ್ಘ್ಯಹಸ್ತ ನಾಗಿ ಸ್ವಾಗತಿಸಿ "ನಾನು ಸಾಂದೀಪನಿಯ ಪುತ್ರನನ್ನು ಕೊಲ್ಲಲಿಲ್ಲ. ಪಂಚಜನ ಎಂಬ ಒಬ್ಬ ದೈತ್ಯನು ಶಂಖರೂಪದಿಂದ ಬಂದು ಆ ಬಾಲಕನನ್ನು ಅಪಹರಿ ಸಿದ್ದಾನೆ. ಆ ದೈತ್ಯನು ನನ್ನ ಸಮುದ್ರದಲ್ಲಿ ಈಗ ಇದ್ದಾನೆ" ಎಂದು ಹೇಳಿದನು (26-27). ಆಗ ಶ್ರೀಕೃಷ್ಣನು ಸಮುದ್ರ ಜಲದೊಳಗೆ ಪ್ರವೇಶಿಸಿ ಪಂಚಜನ ದೈತ್ಯನನ್ನು ಸಂಹರಿಸಿ, ಅವನ ಅಸ್ಥಿಯಿಂದಾದ ಶಂಖೋತ್ತಮವನ್ನು ತೆಗೆದು ಕೊಂಡನು. ಆ ಪಾಂಚಜನ್ಯ ಶಂಖದ ನಾದಕ್ಕೆ ದೈತ್ಯರ ಬಲ ಹಾನಿಯಾಗುತ್ತದೆ. ದೇವತೆಗಳ ತೇಜಸ್ಸು ವರ್ಧಿಸುತ್ತದೆ. ಅಧರ್ಮವು ಕ್ಷಯಿಸುತ್ತದೆ (28-29). ಅನಂತರ ಬಲದೇವನೂ ಶ್ರೀಕೃಷ್ಣನೂ ಯಮ ನಗರಕ್ಕೆ ಹೋದರು. ಶ್ರೀಕೃಷ್ಣನು

**ತಂ ಬಾಲಂ ಯಾತನಾಸಂಸ್ಥಂ ಯಥಾಪೂರ್ವಶರೀರಿಣಮ್।**
**ಪಿತ್ರೇ ಪ್ರದತ್ತವಾನ್ ಕೃಷ್ಣೋ ಬಲಶ್ಚ ಬಲಿನಾಂ ವರಃ॥** 31

**ಮಥುರಾಂ ಚ ಪುನಃ ಪ್ರಾಪ್ತಾವುಗ್ರಸೇನೇನ ಪಾಲಿತಾಮ್।**
**ಪ್ರಹೃಷ್ಟಪುರುಷಸ್ತ್ರೀಕಾಮುಭೌ ರಾಮಜನಾರ್ದನೌ॥** 32

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಏಕವಿಂಶೋಽಧ್ಯಾಯಃ

---

ಪಾಂಚಜನ್ಯವನ್ನೂದಿದನು. ಅವರೀರ್ವರೂ ಯಮನನ್ನು ಜಯಿಸಿ, ನರಕ ಯಾತನೆಯನ್ನು ಅನುಭವಿಸುತ್ತಿದ್ದ ಆ ಬಾಲಕನಿಗೆ ಮೊದಲಿದ್ದ ಶರೀರಾ ಕೃತಿಯನ್ನೇ (ಮಾಯಾಶಕ್ತಿಯಿಂದ) ನಿರ್ಮಿಸಿಕೊಟ್ಟು, ಆತನ ತಂದೆಯಾದ ಸಾಂದೀಪನಿಗೆ ಒಪ್ಪಿಸಿದರು (30-31). ಆಮೇಲೆ ಬಲರಾಮಕೃಷ್ಣರು ಉಗ್ರಸೇನ ನಿಂದ ಪಾಲಿತವಾದ ಮಧುರಾನಗರಿಗೆ ಬಂದರು. ಅವರನ್ನು ನೋಡಿ ನಗರದ ಸ್ತ್ರೀಪುರುಷರು ಆನಂದಿಸಿದರು (32).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.



## ದ್ವಾವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಜರಾಸಂಧಸುತೇ ಕಂಸ ಉಪಯೇಮೇ ಮಹಾಬಲಃ।**
**ಅಸ್ತಿಂ ಪ್ರಾಪ್ತಿಂ ಚ ಮೈತ್ರೇಯ ತಯೋರ್ಭರ್ತೃಹಣಂ ಹರಿಮ್॥** 1

**ಮಹಾಬಲಪರೀವಾರೋ ಮಗಧಾಧಿಪತಿರ್ಬಲೀ।**
**ಹಂತುಮಭ್ಯಾಯಯೌ ಕೋಪಾಜ್ಜರಾಸಂಧಸ್ಸಯಾದವಮ್॥** 2

**ಉಪೇತ್ಯ ಮಥುರಾಂ ಸೋಽಥ ರುರೋಧ ಮಗಧೇಶ್ವರಃ।**
**ಅಕ್ಷೌಹಿಣೀಭಿಸ್ಸೈನ್ಯಸ್ಯ ತ್ರಯೋವಿಂಶತಿಭಿರ್ವೃತಃ॥** 3

**ನಿಷ್ಕ್ರಮ್ಯಾಲ್ಪಪರೀವಾರಾವುಭೌ ರಾಮಜನಾರ್ದನೌ।**
**ಯುಯುಧಾತೇ ಸಮಂ ತಸ್ಯ ಬಲಿನೌ ಬಲಿಸೈನಿಕೈಃ॥** 4

---

## ಅಧ್ಯಾಯ 22

ಜರಾಸಂಧನು ಯುದ್ಧಕ್ಕೆ ಬರುವುದು; ಹದಿನೆಂಟು ಸಲ ಅವನ ಪರಾಜಯ.

ಪರಾಶರರು ಹೇಳಿದರು: ಮೈತ್ರೇಯ, ಮಹಾಬಲನಾದ ಕಂಸನು ಜರಾಸಂಧನ ಪುತ್ರಿಯರಾದ ಅಸ್ತಿ, ಪ್ರಾಪ್ತಿ—ಎಂಬಿಬ್ಬರನ್ನು ಮದುವೆಯಾಗಿದ್ದನು. ಮಗಧಾಧಿಪತಿಯೂ ಬಲಿಷ್ಠನೂ ಆದ ಜರಾಸಂಧನು ತನ್ನ ಪುತ್ರಿಯರ ಪತಿಯು ಹತನಾದುದನ್ನು ಕೇಳಿ ಕೋಪಾವಿಷ್ಟನಾಗಿ, ಕಂಸನನ್ನು ವಧಿಸಿದ ಶ್ರೀಕೃಷ್ಣನನ್ನೂ ಯಾದವರನ್ನೂ ಸಂಹರಿಸಬೇಕೆಂದು ದೊಡ್ಡ ಸೈನ್ಯದೊಡನೆ ದಂಡೆತ್ತಿ ಬಂದನು (1-2). ಆ ಮಗಧೇಶ್ವರನು ಇಪ್ಪತ್ತುಮೂರು ಅಕ್ಷೌಹಿಣೀ ಸೇನೆಯೊಡನೆ ಬಂದು ಮಧುರಾನಗರಕ್ಕೆ ಮುತ್ತಿಗೆ ಹಾಕಿದನು. ಆಗ ಬಲಿಷ್ಠರಾದ ಬಲರಾಮಕೃಷ್ಣರು ಕೆಲವೇ ಸೈನಿಕರೊಂದಿಗೆ ನಗರದಿಂದ ಹೊರಗೆ ಬಂದು ಬಲಿಷ್ಠನಾದ ಜರಾಸಂಧನ ಸೈನಿಕರೊಡನೆ ಯುದ್ಧವನ್ನಾರಂಭಿಸಿದರು

**ತತೋ ರಾಮಶ್ಚ ಕೃಷ್ಣಶ್ಚ ಮತಿಂ ಚಕ್ರತುರಂಜಸಾ।**
**ಆಯುಧಾನಾಂ ಪುರಾಣಾನಾಮಾದಾನೇ ಮುನಿಸತ್ತಮ॥** 5

**ಅನಂತರಂ ಹರೇಶ್ಶಾರ್ಙ್ಗಂ ತೂಣೌ ಚಾಕ್ಷಯಸಾಯಕೌ।**
**ಆಕಾಶಾದಾಗತೌ ವಿಪ್ರ ತಥಾ ಕೌಮೋದಕೀ ಗದಾ॥** 6

**ಹಲಂ ಚ ಬಲಭದ್ರಸ್ಯ ಗಗನಾದಾಗತಂ ಮಹತ್।**
**ಮನಸೋಽಭಿಮತಂ ವಿಪ್ರ ಸುನಂದಂ ಮುಸಲಂ ತಥಾ॥** 7

**ತತೋ ಯುದ್ಧೇ ಪರಾಜಿತ್ಯ ಸಸೈನ್ಯಂ ಮಗಧಾಧಿಪಮ್।**
**ಪುರೀಂ ವಿವಿಶತುರ್ವೀರಾವುಭೌ ರಾಮಜನಾರ್ದನೌ॥** 8

**ಜಿತೇ ತಸ್ಮಿನ್ ಸುದುರ್ವೃತ್ತೇ ಜರಾಸಂಧೇ ಮಹಾಮುನೇ।**
**ಜೀವಮಾನೇ ಗತೇ ಕೃಷ್ಣಸ್ತೇನಾಮನ್ಯತ ನಾಜಿತಮ್॥** 9

**ಪುನರಪ್ಯಾಜಗಾಮಾಥ ಜರಾಸಂಧೋ ಬಲಾನ್ವಿತಃ।**
**ಜಿತಶ್ಚ ರಾಮಕೃಷ್ಣಾಭ್ಯಾಮಪಕ್ರಾಂತೋ ದ್ವಿಜೋತ್ತಮ॥** 10

---

(3-4). ಮೈತ್ರೇಯ, ಆ ಸಮಯದಲ್ಲಿ ರಾಮಕೃಷ್ಣರು ತಮ್ಮ ಪುರಾತನ ಆಯುಧಗಳನ್ನು ಬಳಸುವುದು ಯುಕ್ತವೆಂದು ನಿರ್ಣಯಿಸಿದರು. ಆ ಕ್ಷಣದಲ್ಲಿ ವಿಷ್ಣುವಿನ ಶಾರ್ಙ ಧನುಸ್ಸು, ಅಕ್ಷಯ ಬಾಣಗಳಿಂದ ತುಂಬಿದ ಎರಡು ಬತ್ತಳಿಕೆಗಳು, ಮತ್ತು ಕೌಮೋದಕಿಯೆಂಬ ಗದೆ—ಇವು ಗಗನ ಮಾರ್ಗದಿಂದ ಬಂದವು! (5-6). ಬಲಭದ್ರನಿಗೆ ಮನೋವಾಂಛಿತವಾದ ಮಹತ್ತರ ಹಲಾಯುಧವೂ ಸುನಂದವೆಂಬ ಮುಸಲಾಯುಧವೂ ಉಪಸ್ಥಿತವಾದುವು! ಅನಂತರ ನಡೆದ ಯುದ್ಧದಲ್ಲಿ ವೀರರಾದ ಬಲರಾಮ ಜನಾರ್ದನರು ಮಗಧೇಶ್ವರನನ್ನು ಸೈನ್ಯ ಸಮೇತನಾಗಿ ಸೋಲಿಸಿ ಓಡಿಸಿ ತಮ್ಮ ನಗರವನ್ನು ಪ್ರವೇಶಿಸಿದರು (7-8). ಅತ್ಯಂತ ದುರಾತ್ಮನಾದ ಜರಾಸಂಧನು ಪರಾಜಿತನಾಗಿ ಓಡಿ ಹೋದರೂ, ಜೀವಸಹಿತನಾಗಿ ಹೋದನೆಂಬ ಕಾರಣದಿಂದ ಆತನು ಪರಾಜಿತನಾದನೆಂದು ಶ್ರೀಕೃಷ್ಣನು ಭಾವಿಸಲಿಲ್ಲ! ಮೈತ್ರೇಯ, ಮತ್ತೆ ಜರಾಸಂಧನು ಸೇನಾಸಮೇತನಾಗಿ ಯುದ್ಧಕ್ಕೆ ಬಂದನು. ಮತ್ತೆ ಬಲರಾಮ ಕೃಷ್ಣರಿಂದ ಸೋತು ಓಡಿಹೋದನು! (9-10). ಈ ಪ್ರಕಾರವಾಗಿ ಅತ್ಯಂತ

**ದಶ ಚಾಷ್ಟೌ ಚ ಸಂಗ್ರಾಮಾನೇವಮತ್ಯಂತದುರ್ಮದಃ।**
**ಯದುಭಿರ್ಮಾಗಧೋ ರಾಜಾ ಚಕ್ರೇ ಕೃಷ್ಣಪುರೋಗಮೈಃ॥ 11**

**ಸರ್ವೇಷ್ವೇತೇಷು ಯುದ್ಧೇಷು ಯಾದವೈಸ್ಸ ಪರಾಜಿತಃ।**
**ಅಪಕ್ರಾಂತೋ ಜರಾಸಂಧಸ್ಸ್ವಲ್ಪಸೈನ್ಯೈರ್ಬಲಾಧಿಕಃ॥ 12**

**ನ ತದ್ಬಲಂ ಯಾದವಾನಾಂ ವಿಜಿತಂ ಯದನೇಕಶಃ।**
**ತತ್ತು ಸನ್ನಿಧಿಮಾಹಾತ್ಮ್ಯಂ ವಿಷ್ಣೋರಂಶಸ್ಯ ಚಕ್ರಿಣಃ॥ 13**

**ಮನುಷ್ಯಧರ್ಮಶೀಲಸ್ಯ ಲೀಲಾ ಸಾ ಜಗತೀಪತೇಃ।**
**ಅಸ್ತ್ರಾಣ್ಯನೇಕರೂಪಾಣಿ ಯದರಾತಿಷು ಮುಂಚತಿ॥ 14**

**ಮನಸೈವ ಜಗತ್ಸೃಷ್ಟಿಂ ಸಂಹಾರಂ ಚ ಕರೋತಿ ಯಃ।**
**ತಸ್ಯಾರಿಪಕ್ಷಕ್ಷಪಣೇ ಕಿಯಾನುದ್ಯಮವಿಸ್ತರಃ॥ 15**

**ತಥಾಽಪಿ ಯೋ ಮನುಷ್ಯಾಣಾಂ ಧರ್ಮಸ್ತಮನುವರ್ತತೇ।**
**ಕುರ್ವನ್ ಬಲವತಾ ಸಂಧಿಂ ಹೀನೈರ್ಯುದ್ಧಂ ಕರೋತ್ಯಸೌ॥ 16**

---

ಮದಾಂಧನಾದ ಜರಾಸಂಧನು ಶ್ರೀಕೃಷ್ಣನೇ ಮೊದಲಾದ ಯಾದವರೊಡನೆ ಹದಿನೆಂಟು ಸಲ ಸಂಗ್ರಾಮಗಳನ್ನು ಹೂಡಿದನು! ಅಧಿಕ ಸೇನಾಸಮೇತನಾಗಿ ಬಂದರೂ ಆ ಮಾಗಧನು ಅಲ್ಪ ಸಂಖ್ಯೆಯ ಯಾದವರಿಂದ ಪ್ರತಿಯೊಂದು ಸಂಗ್ರಾಮದಲ್ಲಿಯೂ ಸೋತು ಹೋದನು (11-12). ಹೀಗೆ ಹಲವು ಬಾರಿ ಯುದ್ಧ ನಡೆದರೂ ಯಾದವರ ಸೈನ್ಯವು ಸೋಲಲಿಲ್ಲವೆಂಬುದೇನುಂಟು, ಅದು ವಿಷ್ಣುವಿನ ಅಂಶಾವತಾರಿಯಾದ ಶ್ರೀಕೃಷ್ಣನ ಸಾಂನಿಧ್ಯದ ಮಹಿಮೆಯೇ ಸರಿ. ಶತ್ರುಗಳ ಮೇಲೆ ಅನೇಕ ಬಗೆಯ ಅಸ್ತ್ರಗಳನ್ನು ಶ್ರೀಕೃಷ್ಣನು ಪ್ರಯೋಗಿಸುತ್ತಿದ್ದುದೂ ಸಹ ಮನುಷ್ಯಧರ್ಮವನ್ನು ಸ್ವೀಕರಿಸಿದ ಆ ಜಗದೀಶ್ವರನ ಲೀಲೆಯೇ (13-14). ಏಕೆಂದರೆ, ಮನಸ್ಸಿನಿಂದಲೇ ಯಾವಾತನು ಜಗತ್ತನ್ನು ಸೃಷ್ಟಿಸಬಲ್ಲನೋ, ಸಂಹರಿಸಬಲ್ಲನೋ ಆತನಿಗೆ ಶತ್ರು ಪಕ್ಷವನ್ನು ಧ್ವಂಸ ಮಾಡಲು ಆ ಪರಿಯಲ್ಲಿ ಉದ್ಯಮಿಸುವ ಆವಶ್ಯಕತೆಯುಂಟೇ? ಆದರೂ ಮನುಷ್ಯ ಧರ್ಮವನ್ನು ಅವಲಂಬಿಸಿರುವುದರಿಂದ ಅವನು ಬಲಾಢ್ಯರೊಡನೆ ಸಂಧಿಯನ್ನೂ ಬಲಹೀನರೊಡನೆ ಯುದ್ಧವನ್ನೂ ಮಾಡುತ್ತಾ ಇರುವನು (15-16).

**ಸಾಮ ಚೋಪಪ್ರದಾನಂ ಚ ತಥಾ ಭೇದಂ ಚ ದರ್ಶಯನ್।**
**ಕರೋತಿ ದಂಡಪಾತಂ ಚ ಕ್ವಚಿದೇವ ಪಲಾಯನಮ್॥** 17

**ಮನುಷ್ಯದೇಹಿನಾಂ ಚೇಷ್ಟಾಮಿತ್ಯೇವಮನುವರ್ತತೇ।**
**ಲೀಲಾಜಗತ್ಪತೇಸ್ತಸ್ಯಚ್ಛಂದತಃ ಪರಿವರ್ತತೇ॥** 18

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ದ್ವಾವಿಂಶೋಽಧ್ಯಾಯಃ

---

ಕೆಲವೆಡೆ ಸಾಮ, ಕೆಲವೆಡೆ ದಾನ, ಕೆಲವೆಡೆ ಭೇದ—ಎಂಬ ಉಪಾಯಗಳನ್ನು ಅವಲಂಬಿಸುವನು. ಕೆಲವು ಸಲ ದಂಡೋಪಾಯವನ್ನು ಕೈಗೊಳ್ಳುವನು. ಎಲ್ಲಾದರೊಮ್ಮೆ ಪಲಾಯನ ಮಾಡುವುದೂ ಉಂಟು! (17). ಈ ಪ್ರಕಾರ ಮಾನವೋಚಿತವಾದ ಕೃತ್ಯವನ್ನು ಪಾಲಿಸತಕ್ಕ ಜಗದೀಶ್ವರನ ಲೀಲೆಯು ಆತನ ಇಚ್ಛಾನುಸಾರ ನಡೆಯುತ್ತ ಹೋಗುವುದು (18).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.



## ತ್ರಯೋವಿಂಶೋऽಧ್ಯಾಯಃ

*ಶ್ರೀಪರಾಶರ ಉವಾಚ:*

**ಗಾರ್ಗ್ಯಂ ಗೋಷ್ಠ್ಯಾಂ ದ್ವಿಜಂ ಶ್ಯಾಲಷ್ಷಂಡ ಇತ್ಯುಕ್ತವಾನ್ ದ್ವಿಜ।**
**ಯದೂನಾಂ ಸನ್ನಿಧೌ ಸರ್ವೇ ಜಹಸುರ್ಯಾದವಾಸ್ತದಾ॥** 1

**ತತಃ ಕೋಪಪರೀತಾತ್ಮಾ ದಕ್ಷಿಣಾಪಥಮೇತ್ಯ ಸಃ।**
**ಸುತಮಿಚ್ಛಂಸ್ತಪಸ್ತೇಪೇ ಯದುಚಕ್ರಭಯಾವಹಮ್॥** 2

**ಆರಾಧಯನ್ಮಹಾದೇವಂ ಲೋಹಚೂರ್ಣಮಭಕ್ಷಯತ್।**
**ದದೌ ವರಂ ಚ ತುಷ್ಟೋऽಸ್ಮೈ ವರ್ಷೇ ತು ದ್ವಾದಶೇ ಹರಃ॥** 3

---

## ಅಧ್ಯಾಯ 23

ಕಾಲಯವನನ ಉತ್ಪತ್ತಿ ; ದ್ವಾರಕೆಯ ನಿರ್ಮಾಣ;
ಕಾಲಯವನನು ಮುಚುಕುಂದನ ನೋಟದಿಂದ ಭಸ್ಮವಾಗುವುದು;
ಮುಚುಕುಂದನಿಂದ ಭಗವಂತನ ಸ್ತುತಿ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಒಂದು ಸಲ ಯಾದವರ ಸಭೆಯಲ್ಲಿ ಗಾರ್ಗ್ಯನೆಂಬ ಬ್ರಾಹ್ಮಣನನ್ನು ಅವನ ಶ್ಯಾಲನು* 'ಷಂಡ' ಎಂದು ಮೂದಲಿಸಿದನು! ಆಗ ಯಾದವರೆಲ್ಲರೂ ನಕ್ಕರು (1). ಇದರಿಂದ ಕೋಪಾವಿಷ್ಟನಾದ ಗಾರ್ಗ್ಯನು ದಕ್ಷಿಣಾಪಥಕ್ಕೆ ಹೋಗಿ ಯಾದವಭಯಂಕರನಾದ ಪುತ್ರನು ಬೇಕೆಂಬ ಉದ್ದೇಶದಿಂದ ಮಹಾದೇವನನ್ನು ಕುರಿತು ತಪಸ್ಸು ಮಾಡಿದನು. ತಪಸ್ಸನ್ನಾಚರಿಸುವಾಗ (ವ್ರತಾಂಗವಾಗಿ) ಕಬ್ಬಿಣದ ಪುಡಿಯನ್ನು ಮಾತ್ರ ಗಾರ್ಗ್ಯನು ತಿನ್ನುತ್ತಿದ್ದನು. ಹನ್ನೆರಡನೆಯ ವರ್ಷದಲ್ಲಿ ಹರನು ಪ್ರಸನ್ನನಾಗಿ ಗಾರ್ಗ್ಯನಿಗೆ ಅಭೀಷ್ಟವಾದ ವರವನ್ನಿತ್ತನು (2-3). ಅನಂತರ ಏನಾಯಿತೆಂದರೆ,

* ಶ್ಯಾಲ = ಹೆಂಡತಿಯ ಸೋದರ. ಗಾರ್ಗ್ಯನಿಗೆ ಮಕ್ಕಳಿರಲಿಲ್ಲವಾದ್ದರಿಂದ ಈ ಮೂದಲಿಕೆ.

**ಸಂತೋಷಯಾಮಾಸ ಚ ತಂ ಯವನೇಶೋ ಹ್ಯನಾತ್ಮಜಃ।**
**ತದ್ಯೋಷಿತ್ಸಂಗಮಾಚ್ಚಾಸ್ಯ ಪುತ್ರೋಽಭೂದಲಿಸನ್ನಿಭಃ॥** 4

**ತಂ ಕಾಲಯವನಂ ನಾಮ ರಾಜ್ಯೇ ಸ್ವೇ ಯವನೇಶ್ವರಃ।**
**ಅಭಿಷಿಚ್ಯ ವನಂ ಯಾತೋ ವಜ್ರಾಗ್ರಕಠಿನೋರಸಮ್॥** 5

**ಸ ತು ವೀರ್ಯಮದೋನ್ಮತ್ತಃ ಪೃಥಿವ್ಯಾಂ ಬಲಿನೋ ನೃಪಾನ್।**
**ಅಪೃಚ್ಛನ್ನಾರದಸ್ತಸ್ಮೈ ಕಥಯಾಮಾಸ ಯಾದವಾನ್॥** 6

**ಮ್ಲೇಚ್ಛಕೋಟಿಸಹಸ್ರಾಣಾಂ ಸಹಸ್ರೈಸ್ಸೋಽಭಿಸಂವೃತಃ।**
**ಗಜಾಶ್ವರಥಸಂಪನ್ನೈಶ್ಚಕಾರ ಪರಮೋದ್ಯಮಮ್॥** 7

**ಪ್ರಯಯೌ ಸೋಽವ್ಯವಚ್ಛಿನ್ನಂ ಛಿನ್ನಯಾನೋ ದಿನೇ ದಿನೇ।**
**ಯಾದವಾನ್ ಪ್ರತಿ ಸಾಮರ್ಷೋ ಮೈತ್ರೇಯ ಮಥುರಾಂ ಪುರೀಮ್॥**

---

ಪುತ್ರಹೀನನಾದ ಒಬ್ಬ ಯವನ ರಾಜನು (ಪುತ್ರಾರ್ಥಿಯಾಗಿ) ಗಾರ್ಗ್ಯನನ್ನು ಸೇವಿಸಿ ಸಂತೋಷಪಡಿಸಿದ್ದನು. ಅದರ ಪರಿಣಾಮವಾಗಿ ಯವನರಾಜನ ಮಡದಿಯೊಂದಿಗೆ ಗಾರ್ಗ್ಯನು ಸಂಗಮಿಸಿದ್ದರಿಂದ ಒಬ್ಬ ಪುತ್ರನು ಜನಿಸಿದನು. ಅವನು ದುಂಬಿಯಂತೆ ಕಪ್ಪು ಬಣ್ಣದವನು (4). ಅವನಿಗೆ 'ಕಾಲಯವನ' ಎಂದು ಹೆಸರಿಟ್ಟು ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿ (ತಪಸ್ಸಿಗಾಗಿ) ಯವನೇಶ್ವರನು ವನಕ್ಕೆ ಹೊರಟುಹೋದನು. ಕಾಲಯವನನ ಎದೆ ವಜ್ರಾಯುಧಕ್ಕಿಂತಲೂ ಕಠೋರವಾಗಿತ್ತು (5). ವೀರ್ಯಮದೋನ್ಮತ್ತನಾದ ಆತನು ಒಂದು ಸಲ ನಾರದಮುನಿಗಳನ್ನು ಕುರಿತು, "ನಾರದರೆ, ಈ ಜಗತ್ತಿನಲ್ಲಿ ಅತ್ಯಂತ ಬಲಿಷ್ಠರಾದ ನರಾಧಿಪತಿಗಳು ಯಾರು?" ಎಂದು ಪ್ರಶ್ನೆ ಮಾಡಿದನು. ಅದಕ್ಕೆ ನಾರದರು "ಯಾದವರು" ಎಂದು ಉತ್ತರಿಸಿದರು! (6). ಸರಿ; ಕಾಲಯವನನು ಗಜಾಶ್ವರಥಗಳಿಂದ ಸಂಪನ್ನವಾದ, ಸಾವಿರಾರು ಕೋಟಿ ಮ್ಲೇಚ್ಛ ಸೈನಿಕರಿರುವ ದೊಡ್ಡ ಸೇನೆವನ್ನು ಸಜ್ಜುಗೊಳಿಸಿದನು. ಮೈತ್ರೇಯ, ಅನಂತರ ಆ ಸೇನಾ ಬಲದೊಡನೆ ಮಧುರಾ ನಗರದ ಕಡೆಗೆ ದಂಡಯಾತ್ರೆ ಮಾಡಿದನು. ಯಾದವರ ಬಲಾಢ್ಯತೆಯನ್ನು ಸಹಿಸಲಾರದಿದ್ದ ಆತನ ಪ್ರಯಾಣ ನಿರಂತರ ವಾಗಿ ಸಾಗಿತು. ತನ್ನ ವಾಹನವು ಬಳಲಿದೊಡನೆ ಕಾಲಯವನನು ಇನ್ನೊಂದು ವಾಹನವನ್ನೇರಿ ಪ್ರಯಾಣವನ್ನು ಮುಂದುವರಿಸುತ್ತಿದ್ದನು (7-8). ಇತ್ತ ಶ್ರೀಕೃಷ್ಣನು

**ಕೃಷ್ಣೋಽಪಿ ಚಿಂತಯಾಮಾಸ ಕ್ಷಪಿತಂ ಯಾದವಂ ಬಲಮ್।**
**ಯವನೇನ ರಣೇ ಗಮ್ಯಂ ಮಾಗಧಸ್ಯ ಭವಿಷ್ಯತಿ॥** 9

**ಮಾಗಧಸ್ಯ ಬಲಂ ಕ್ಷೀಣಂ ಸ ಕಾಲಯವನೋ ಬಲೀ।**
**ಹಂತೈತದೇವಮಾಯಾತಂ ಯದೂನಾಂ ವ್ಯಸನಂ ದ್ವಿಧಾ॥** 10

**ತಸ್ಮಾದ್ ದುರ್ಗಂ ಕರಿಷ್ಯಾಮಿ ಯದೂನಾಮರಿದುರ್ಜಯಮ್।**
**ಸ್ತ್ರಿಯೋಽಪಿ ಯತ್ರ ಯುಧ್ಯೇಯುಃ ಕಿಂ ಪುನರ್ವೃಷ್ಣಿಪುಂಗವಾಃ॥** 11

**ಮಯಿ ಮತ್ತೇ ಪ್ರಮತ್ತೇ ವಾ ಸುಪ್ತೇ ಪ್ರವಸಿತೇಽಪಿ ವಾ।**
**ಯಾದವಾಭಿಭವಂ ದುಷ್ಟಾ ಮಾ ಕುರ್ವನ್ ತ್ವರಯೋಽಧಿಕಾಃ॥** 12

**ಇತಿ ಸಂಚಿಂತ್ಯ ಗೋವಿಂದೋ ಯೋಜನಾನಾಂ ಮಹೋದಧಿಮ್।**
**ಯಯಾಚೇ ದ್ವಾದಶಪುರೀಂ ದ್ವಾರಕಾಂ ತತ್ರ ನಿರ್ಮಮೇ॥** 13

**ಮಹೋದ್ಯಾನಾಂ ಮಹಾವಪ್ರಾಂ ತಟಾಕಶತಶೋಭಿತಾಮ್।**
**ಪ್ರಾಸಾದಗೃಹಸಂಬಾಧಾಮಿಂದ್ರಸ್ಯೇವಾಮರಾವತೀಮ್॥** 14

---

ಹೀಗೆ ಆಲೋಚಿಸಿದನು: "ಯವನನಿಂದ ಯಾದವ ಸೇನೆಯ ಬಹುಭಾಗ ನಷ್ಟವಾದಲ್ಲಿ , ಜರಾಸಂಧನಿಗೆ ಮತ್ತೆ ಆಕ್ರಮಣವು ಸುಲಭಸಾಧ್ಯವಾಗುವುದು. ಈಗ ಮಾಗಧನ ಸೈನ್ಯ ಕ್ಷೀಣವಾಗಿದ್ದರೂ ಕಾಲಯವನನ ಬಳಿ ಭಾರಿ ಸೈನ್ಯ ಇದೆ! ಅಹೋ, ಯಾದವರಿಗೆ ಎರಡು ಬಗೆಯಲ್ಲಿ ವಿಪತ್ತು ಬಂದಿತು (9-10). ಆದ್ದರಿಂದ ಶತ್ರುಗಳಿಗೆ ದುರ್ಜಯವಾದ ಒಂದು ಕೋಟೆಯನ್ನು ಯಾದವರಿಗಾಗಿ ರಚಿಸುವೆನು. ಅದನ್ನಾಶ್ರಯಿಸಿಕೊಂಡು ಯದುವೀರರ ಮಾತಂತಿರಲಿ— ಹೆಂಗಸರೂ ಸಹ ವೈರಿಗಳನ್ನೆದುರಿಸುವಂತಿರಬೇಕು! (11). ನಾನು ಯಾವಾಗಲಾದರೂ ಮತ್ತನಾದಾಗ, ಸಾವಧಾನತೆಯಿಂದ ಇಲ್ಲದಿದ್ದಾಗ, ನಿದ್ರಿಸಿದಾಗ ಅಥವಾ ಪರಸ್ಥಳಕ್ಕೆ ಹೋಗಿದ್ದಾಗ ದುಷ್ಟರಾದ ವೈರಿಗಳು ಅಧಿಕಸಂಖ್ಯೆಯಲ್ಲಿ ಬಂದು ಯಾದವರಿಗೆ ಸೋಲನ್ನು ತಂದಾರು" (12). ಹೀಗೆ ಆಲೋಚಿಸಿದ ಗೋವಿಂದನು ತನಗೆ ಹನ್ನೆರಡು ಯೋಜನಗಳಷ್ಟು ನೆಲ ಬೇಕೆಂದು ಸಮುದ್ರ ರಾಜನನ್ನು ಬೇಡಿಕೊಂಡನು. (ಅಂತೆಯೇ ಅವನು ಬಿಟ್ಟುಕೊಟ್ಟ ಸ್ಥಳದಲ್ಲಿ) ದ್ವಾರಕಾಪುರಿಯನ್ನು ನಿರ್ಮಿಸಿದನು (13). ಆ ನಗರಿಯು ಸುತ್ತಲೂ ಉನ್ನತವಾದ ಪ್ರಾಕಾರದಿಂದ ಆವೃತವಾಗಿ, ದೊಡ್ಡ ಉದ್ಯಾನಗಳಿಂದಲೂ ನೂರಾರು

**ಮಥುರಾವಾಸಿನಂ ಲೋಕಂ ತತ್ರಾನೀಯ ಜನಾರ್ದನಃ।**
**ಆಸನ್ನೇ ಕಾಲಯವನೇ ಮಥುರಾಂ ಚ ಸ್ವಯಂ ಯಯೌ॥ 15**

**ಬಹಿರಾವಾಸಿತೇ ಸೈನ್ಯೇ ಮಥುರಾಯಾ ನಿರಾಯುಧಃ।**
**ನಿರ್ಜಗಾಮ ಚ ಗೋವಿಂದೋ ದದರ್ಶ ಯವನಶ್ಚ ತಮ್॥ 16**

**ಸ ಜ್ಞಾತ್ವಾ ವಾಸುದೇವಂ ತಂ ಬಾಹುಪ್ರಹರಣಂ ನೃಪಃ।**
**ಅನುಯಾತೋ ಮಹಾಯೋಗಿಚೇತೋಭಿಃ ಪ್ರಾಪ್ಯತೇ ನ ಯಃ॥ 17**

**ತೇನಾನುಯಾತಃ ಕೃಷ್ಣೋಽಪಿ ಪ್ರವಿವೇಶ ಮಹಾಗುಹಾಮ್।**
**ಯತ್ರ ಶೇತೇ ಮಹಾವೀರ್ಯೋ ಮುಚುಕುಂದೋ ನರೇಶ್ವರಃ॥ 18**

---

ಸರೋವರಗಳಿಂದಲೂ ಶೋಭಿತವಾಗಿ, ಸೌಧಗಳಿಂದಲೂ ಗೃಹಗಳಿಂದಲೂ ತುಂಬಿ ದೇವೇಂದ್ರನ ಅಮರಾವತಿಯಂತೆ ವಿರಾಜಿಸುತ್ತಿತ್ತು (14). ಅನಂತರ ಮಧುರಾವಾಸಿಗಳಾದ ಪ್ರಜೆಗಳನ್ನು ದ್ವಾರಕೆಗೆ ಕರೆತಂದನು. ಇತ್ತ ಕಾಲಯವನನು ಮಧುರೆಗೆ ಸಮೀಪಕ್ಕೆ ಬರುತ್ತಿರುವಾಗ ಶ್ರೀಕೃಷ್ಣನು ಮಧುರೆಯೊಳಗೆ ಹೋಗಿ ಸೇರಿಕೊಂಡನು! ಯವನಸೇನೆಯು ಮಧುರೆಯನ್ನು ಸುತ್ತುಗಟ್ಟಲು, ಗೋವಿಂದನು ನಿರಾಯುಧನಾಗಿ ಹೊರಗೆ ಬಂದನು, ಹಾಗೆ ಬಂದುದನ್ನು ಕಾಲಯವನನು ಕಂಡನು (15-16). ಬಾಹುವೇ ಪ್ರಹರಣವಾಗಿದ್ದ (ನಿರಾಯುಧನಾಗಿದ್ದ) ಆತನು ವಸುದೇವಪುತ್ರನಾದ ಕೃಷ್ಣನೆಂದರಿತು ಕಾಲಯವನನು ಅವನ ಬೆನ್ನಟ್ಟಿದನು (ಶ್ರೀಕೃಷ್ಣನು ಓಡಲಾರಂಭಿಸಿದನು*). ಮಹಾಯೋಗಿಗಳ ಮನಸ್ಸಿಗೂ ಸಹ ಯಾವಾತನು ಗಮ್ಯನಲ್ಲವೋ ಆತನನ್ನು ಹಿಡಿಯಬೇಕೆಂದು ಕಾಲಯವನನು ಹಿಂಬಾಲಿಸಿ ಹೋದನು (17). ಹೀಗೆ ಹಿಂಬಾಲಿಸಲ್ಪಟ್ಟ ಶ್ರೀಕೃಷ್ಣನು ಓಡುತ್ತ ಓಡುತ್ತ ಒಂದು ಮಹಾಗುಹೆಯನ್ನು ಪ್ರವೇಶಿಸಿಬಿಟ್ಟನು. ಅಲ್ಲಿಯೇ ಮಹಾಪರಾಕ್ರಮಿಯಾದ ಮುಚುಕುಂದನೆಂಬ ನರೇಶ್ವರನು ಮಲಗಿ ನಿದ್ರಿಸುತ್ತಿದ್ದುದು (18). ಹಿಂಬಾಲಿಸಿ ಬಂದ

* ಹಿಂದಿನ ಅಧ್ಯಾಯದ ಕಡೆಯಲ್ಲಿ ಶ್ರೀಕೃಷ್ಣನು ಪಲಾಯನವನ್ನೂ ಮಾಡುವುದುಂಟು—ಎಂದು ಹೇಳಿದೆ. ಅದಕ್ಕೆ ಇದು ಉದಾಹರಣೆ.

**ಸೋಽಪಿ ಪ್ರವಿಷ್ಟೋ ಯವನೋ ದೃಷ್ಟ್ವಾ ಶಯ್ಯಾಗತಂ ನೃಪಮ್।**
**ಪಾದೇನ ತಾಡಯಾಮಾಸ ಮತ್ವಾ ಕೃಷ್ಣಂ ಸುದುರ್ಮತಿಃ॥ 19**

**ಉತ್ಥಾಯ ಮುಚುಕುಂದೋಽಪಿ ದದರ್ಶ ಯವನಂ ನೃಪ॥ 20**

**ದೃಷ್ಟಮಾತ್ರಶ್ಚ ತೇನಾಸೌ ಜಜ್ವಾಲ ಯವನೋಽಗ್ನಿನಾ।**
**ತತ್ ಕ್ರೋಧಜೇನ ಮೈತ್ರೇಯ ಭಸ್ಮೀಭೂತಶ್ಚ ತತ್ ಕ್ಷಣಾತ್॥ 21**

**ಸ ಹಿ ದೇವಾಸುರೇ ಯುದ್ಧೇ ಗತೋ ಹತ್ವಾ ಮಹಾಸುರಾನ್।**
**ನಿದ್ರಾರ್ತಸ್ಸುಮಹಾಕಾಲಂ ನಿದ್ರಾಂ ವವ್ರೇ ವರಂ ಸುರಾನ್॥ 22**

**ಪ್ರೋಕ್ತಶ್ಚ ದೇವೈಸ್ಸಂಸುಪ್ತಂ ಯಸ್ತ್ವಾಮುತ್ಥಾಪಯಿಷ್ಯತಿ।**
**ದೇಹಜೇನಾಗ್ನಿನಾ ಸದ್ಯಸ್ಸ ತು ಭಸ್ಮೀಭವಿಷ್ಯತಿ॥ 23**

**ಏವಂ ದಗ್ಧ್ವಾ ಸ ತಂ ಪಾಪಂ ದೃಷ್ಟ್ವಾ ಚ ಮಧುಸೂದನಮ್।**
**ಕಸ್ತ್ವಮಿತ್ಯಾಹ ಸೋಽಪ್ಯಾಹ ಜಾತೋಽಹಂ ಶಶಿನಃ ಕುಲೇ॥ 24**

---

ಕಾಲಯವನನೂ ಆ ಗುಹೆಯನ್ನು ಪ್ರವೇಶಿಸಿದನು. ಅಲ್ಲಿ ಮಲಗಿದ್ದ ಮುಚುಕುಂದನನ್ನು ನೋಡಿ, ಆತನೇ ಕೃಷ್ಣನೆಂದೂಹಿಸಿದ ಆ ದುರುಳನು ಮುಚುಕುಂದನನ್ನು ಕಾಲಿನಿಂದ ಒದ್ದನು! (19) ಆಗ ಎಚ್ಚೆತ್ತ ಮುಚುಕುಂದನು ಕಾಲಯವನನನ್ನು ಕಣ್ಣುಬಿಟ್ಟು ನೋಡಿದನು. ನೋಡಿದ ಕೂಡಲೆ, ಮೈತ್ರೇಯ, ಆತನ ಕ್ರೋಧದಿಂದುಂಟಾದ ಅಗ್ನಿಯಿಂದ ಕಾಲಯವನನು ಆ ಕ್ಷಣದಲ್ಲಿಯೇ ಸುಟ್ಟು ಬೂದಿಯಾದನು! (20-21). ಮುಚುಕುಂದನು ಹಿಂದೆ ದೇವಾಸುರ ಸಂಗ್ರಾಮದಲ್ಲಿ ಬಲಶಾಲಿಗಳಾದ ಅಸುರರನ್ನು ಕೊಂದು ಬಳಲಿ ನಿದ್ರೆಗಾಗಿ ಹಂಬಲಿಸುತ್ತ, ದೀರ್ಘಕಾಲದವರೆಗೆ ತನಗೆ ನಿದ್ರೆ ಬೇಕೆಂದು ದೇವತೆಗಳಲ್ಲಿ ವರವನ್ನು ಕೇಳಿಕೊಂಡಿದ್ದನು (22). ಆಗ ದೇವತೆಗಳು ಅವನಿಗೆ ನಿದ್ರೆಯ ವರವನ್ನಿತ್ತು, "ನೀನು ನಿದ್ರಿಸುವಾಗ ಯಾವಾತನು ನಿನ್ನನ್ನೆಬ್ಬಿಸುವನೋ ಆತನು ತನ್ನ ದೇಹದಿಂದಲೇ ಹುಟ್ಟಿದ ಅಗ್ನಿಯಿಂದ ಕೂಡಲೇ ಸುಟ್ಟು ಬೂದಿಯಾಗುವನು!" ಎಂದು ಹೇಳಿದ್ದರು (23). ಹೀಗೆ ಮುಚುಕುಂದನು ಪಾಪಿಯಾದ ಕಾಲಯವನನ್ನು ಸುಟ್ಟುಹಾಕಿದ ಮೇಲೆ ಶ್ರೀಕೃಷ್ಣನನ್ನು ಕಂಡು

**ವಸುದೇವಸ್ಯ ತನಯೋ ಯದೋರ್ವಂಶಸಮುದ್ಭವಃ।**
**ಮುಚುಕುಂದೋಽಪಿ ತತ್ರಾಸೌ ವೃದ್ಧಗಾರ್ಗ್ಯವಚೋಽಸ್ಮರತ್॥ 25**

**ಸಂಸ್ಮೃತ್ಯ ಪ್ರಣಿಪತ್ಯೈನಂ ಸರ್ವಂ ಸರ್ವೇಶ್ವರಂ ಹರಿಮ್।**
**ಪ್ರಾಹ ಜ್ಞಾತೋ ಭವಾನ್ ವಿಷ್ಣೋರಂಶಸ್ತ್ವಂ ಪರಮೇಶ್ವರ॥ 26**

**ಪುರಾ ಗಾರ್ಗ್ಯೇಣ ಕಥಿತಮಷ್ಟಾವಿಂಶತಿಮೇ ಯುಗೇ।**
**ದ್ವಾಪರಾಂತೇ ಹರೇರ್ಜನ್ಮ ಯದುವಂಶೇ ಭವಿಷ್ಯತಿ॥ 27**

**ಸ ತ್ವಂ ಪ್ರಾಪ್ತೋ ನ ಸಂದೇಹೋ ಮರ್ತ್ಯಾನಾಮುಪಕಾರಕೃತ್।**
**ತಥಾಪಿ ಸುಮಹತ್ತೇಜೋ ನಾಲಂ ಸೋಢುಮಹಂ ತವ॥ 28**

**ತಥಾ ಹಿ ಸಜಲಾಂಭೋದನಾದಧೀರತರಂ ತವ।**
**ವಾಕ್ಯಂ ನಮತಿ ಚೈವೋರ್ವೀ ಯುಷ್ಮತ್ಪಾದಪ್ರಪೀಡಿತಾ॥ 29**

---

"ಯಾರು ನೀನು?" ಎಂದು ಕೇಳಿದನು. ಅದಕ್ಕೆ ಶ್ರೀಕೃಷ್ಣನು "ನಾನು ಚಂದ್ರ ವಂಶಕ್ಕೆ ಸೇರಿದ ಯದುಕುಲದಲ್ಲಿ ಹುಟ್ಟಿದವನು; ವಸುದೇವನ ಮಗ" ಎಂದು ತಿಳಿಸಿದನು. ಆಗ ಮುಚುಕುಂದನಿಗೆ ವೃದ್ಧಗಾರ್ಗ್ಯನು* ಹೇಳಿದ್ದ ವಚನವು ಸ್ಮರಣೆಗೆ ಬಂದಿತು (24-25). ಅದು ನೆನಪಾದೊಡನೆ ಆತನು ಸರ್ವೇಶ್ವರನಾದ ಶ್ರೀಹರಿಗೆ ನಮಸ್ಕರಿಸಿ ಹೀಗೆಂದನು: ನೀನು ಯಾರೆಂಬುದು ತಿಳಿಯಿತು. ಹೇ ಪರಮೇಶ್ವರ, ನೀನು ವಿಷ್ಣುವಿನ ಅಂಶಾವತಾರವಾಗಿದ್ದೀಯೆ, ಹಿಂದೆ ವೃದ್ಧ ಗಾರ್ಗ್ಯನು "ಇಪ್ಪತ್ತೆಂಟನೆಯ ದ್ವಾಪರ ಯುಗದ ಕಡೆಯಲ್ಲಿ ಶ್ರೀಹರಿಯ ಅವತಾರ ಯದುವಂಶದಲ್ಲಾಗುವುದು" ಎಂದು ಹೇಳಿದ್ದನು (26-27). ಆತನೇ ನೀನು. ಇಲ್ಲಿಗೆ ಬಂದಿದ್ದೀಯೆ. ಸಂದೇಹವಿಲ್ಲ. ಮಾನವರ ಉಪಕಾರಕ್ಕಾಗಿ ಅವತರಿಸಿದ್ದೀಯೆ, ಆದ್ದರಿಂದಲೇ ನಿನ್ನ ತೇಜಸ್ಸನ್ನು ತಡೆದುಕೊಳ್ಳಲು ನನಗೆ ಸಾಮರ್ಥ್ಯವಿಲ್ಲ. ನಿನ್ನ ಮಾತು ಸಜಲಜಲಧರ ಗಂಭೀರವಾಗಿದೆ. ನಿನ್ನ ಒಂದೊಂದು ಹೆಜ್ಜೆಯ ಭಾರಕ್ಕೆ ಭೂಮಿ ಕುಸಿಯುವಂತೆ ಕಾಣುತ್ತದೆ (28-29).

---

* ಇವನು ಹಿಂದೆ ಹೇಳಿದ ಗಾರ್ಗ್ಯನಲ್ಲ.

**ದೇವಾಸುರಮಹಾಯುದ್ಧೇ ದೈತ್ಯಸೈನ್ಯಮಹಾಭಟಾಃ।**
**ನ ಸೇಹುರ್ಮಮ ತೇಜಸ್ತೇ ತ್ವತ್ತೇಜೋ ನ ಸಹಾಮ್ಯಹಮ್॥ 30**

**ಸಂಸಾರಪತಿತಸ್ಯೈಕೋ ಜಂತೋಸ್ತ್ವಂ ಶರಣಮ್ ಪರಮ್।**
**ಪ್ರಸೀದ ತ್ವಂ ಪ್ರಪನ್ನಾರ್ತಿಹರ ನಾಶಾಯ ಮೇಽಶುಭಮ್॥ 31**

**ತ್ವಂ ಪಯೋನಿಧಯಶ್ಶೈಲಸರಿತಸ್ತ್ವಂ ವನಾನಿ ಚ।**
**ಮೇದಿನೀ ಗಗನಂ ವಾಯುರಾಪೋಽಗ್ನಿಸ್ತ್ವಂ ತಥಾ ಮನಃ॥ 32**

**ಬುದ್ಧಿರವ್ಯಾಕೃತಪ್ರಾಣಾಃ ಪ್ರಾಣೇಶಸ್ತ್ವಂ ತಥಾ ಪುಮಾನ್।**
**ಪುಂಸಃ ಪರತರಂ ಯಚ್ಚ ವ್ಯಾಪ್ಯಜನ್ಮವಿಕಾರವತ್॥ 33**

**ಶಬ್ದಾದಿಹೀನಮಜರಮಮೇಯಂ ಕ್ಷಯವರ್ಜಿತಮ್।**
**ಅವೃದ್ಧಿನಾಶಂ ತದ್ ಬ್ರಹ್ಮ ತ್ವಮಾದ್ಯಂತವಿವರ್ಜಿತಮ್॥ 34**

**ತ್ವತ್ತೋಽಮರಾಸ್ಸಪಿತರೋ ಯಕ್ಷಗಂಧರ್ವಕಿನ್ನರಾಃ।**
**ಸಿದ್ಧಾಶ್ಚಾಪ್ಸರಸಸ್ತ್ವತ್ತೋ ಮನುಷ್ಯಾಃ ಪಶವಃ ಖಗಾಃ॥ 35**

---

ದೇವಾಸುರ ಸಂಗ್ರಾಮದಲ್ಲಿ ದೈತ್ಯಸೈನ್ಯದಲ್ಲಿದ್ದ ಮಹಾಭಟರು ನನ್ನ ತೇಜಸ್ಸನ್ನು ತಡೆದುಕೊಳ್ಳಲಾರದೆ ಹೋದರು. ಅಂತಹ ನಾನು ನಿನ್ನ ತೇಜಸ್ಸನ್ನು ತಡೆದು ಕೊಳ್ಳಲಾರದೆ ಹೋಗಿದ್ದೇನೆ! (30). ಹೇ ಸ್ವಾಮಿ, ಸಂಸಾರದಲ್ಲಿ ಬಿದ್ದಿರುವ ಜಂತುವಿಗೆ ನೀನೊಬ್ಬನೇ ಶ್ರೇಷ್ಠವಾದ ಶರಣಸ್ಥಾನ. ಶರಣಾಗತರ ಕಷ್ಟವನ್ನು ಪರಿಹರಿಸುವ ಪ್ರಭುವೆ, ಪ್ರಸನ್ನನಾಗು. ನನ್ನ ಅಮಂಗಳವು ನಷ್ಟವಾಗಲಿ (31). ಸಮಸ್ತ ಸಮುದ್ರಗಳೂ ನಗನದಿಗಳೂ ನೀನೇ. ವನ, ಅವನಿ, ಗಗನ, ವಾಯು, ವಾರಿ, ವಹ್ನಿ, ಮನಸ್ಸು—ಎಲ್ಲವೂ ನೀನೇ (31-32). ಬುದ್ಧಿ, ಅವ್ಯಾಕೃತ, ಪ್ರಾಣ, ಪ್ರಾಣಧಾರಿಯಾದ ಜೀವ, ಜೀವನಿಗಿಂತ ಪರತರವಾದ ವಿಭುವೂ ಜನ್ಮವಿಕಾರ ಶೂನ್ಯವೂ ಆದ ತತ್ತ್ವ ನೀನೇ ಆಗಿದ್ದೀಯೇ. ಶಬ್ದಸ್ಪರ್ಶಾದಿ ರಹಿತವೂ ಜರಾವರ್ಜಿತವೂ ಅಜ್ಞೇಯವೂ ಕ್ಷಯರಹಿತವೂ ವೃದ್ಧಿನಾಶ ಗಳಿಲ್ಲದ್ದೂ ಆದ್ಯಂತರಹಿತವೂ ಆದ ಬ್ರಹ್ಮವಸ್ತು ನೀನು (33-34). ದೇವತೆಗಳು, ಪಿತೃಗಳು, ಯಕ್ಷಗಂಧರ್ವ ಕಿನ್ನರರು, ಸಿದ್ಧರು, ಅಪ್ಸರೆಯರು, ಮನುಷ್ಯ,

ಸರೀಸೃಪಾ ಮೃಗಾಸ್ಸರ್ವೇ ತ್ವತ್ತಸ್ಸರ್ವೇ ಮಹೀರುಹಾಃ।
ಯಚ್ಚ ಭೂತಂ ಭವಿಷ್ಯಂ ಚ ಕಿಂಚಿದತ್ರ ಚರಾಚರಮ್॥ 36

ಮೂರ್ತಾಮೂರ್ತಂ ತಥಾ ಚಾಪಿ ಸ್ಥೂಲಂ ಸೂಕ್ಷ್ಮತರಂ ತಥಾ।
ತತ್ಸರ್ವಂ ತ್ವಂ ಜಗತ್ಕರ್ತಾ ನಾಸ್ತಿ ಕಿಂಚಿತ್ತ್ವಯಾ ವಿನಾ॥ 37

ಮಯಾ ಸಂಸಾರಚಕ್ರೇಽಸ್ಮಿನ್ ಭ್ರಮತಾ ಭಗವನ್ ಸದಾ।
ತಾಪತ್ರಯಾಭಿಭೂತೇನ ನ ಪ್ರಾಪ್ತಾ ನಿರ್ವೃತಿಃ ಕ್ವಚಿತ್॥ 38

ದುಃಖಾನ್ಯೇವ ಸುಖಾನೀತಿ ಮೃಗತೃಷ್ಣಾ ಜಲಾಶಯಾ।
ಮಯಾ ನಾಥ ಗೃಹೀತಾನಿ ತಾನಿ ತಾಪಾಯ ಮೇಽಭವನ್॥ 39

ರಾಜ್ಯಮುರ್ವೀ ಬಲಂ ಕೋಶೋ ಮಿತ್ರಪಕ್ಷಸ್ತಥಾತ್ಮಜಾಃ।
ಭಾರ್ಯಾ ಭೃತ್ಯಜನೋ ಯೇ ಚ ಶಬ್ದಾದ್ಯಾ ವಿಷಯಾಃ ಪ್ರಭೋ॥ 40

ಸುಖಬುದ್ಧ್ಯಾ ಮಯಾ ಸರ್ವಂ ಗೃಹೀತಮಿದಮವ್ಯಯಮ್।
ಪರಿಣಾಮೇ ತದೇವೇಶ ತಾಪಾತ್ಮಕಮಭೂನ್ಮಮ॥ 41

---

ಪಶುಪಕ್ಷಿಗಳು—ಎಲ್ಲವೂ ನಿನ್ನಿಂದ ಹುಟ್ಟಿವೆ. ಹರಿದಾಡುವ ಸರ್ಪಾದಿ ಜಂತುಗಳು, ಸಕಲ ಮೃಗಗಳು, ಸಕಲ ವೃಕ್ಷಗಳು, ಹಿಂದೆ ಇದ್ದದ್ದು, ಮುಂದೆ ಆಗತಕ್ಕದ್ದು, ಸಕಲ ಚರಾಚರಗಳೂ ನಿನ್ನಿಂದ ಜನಿಸಿವೆ (35-36). ಹೇ ಸ್ವಾಮಿ, ಮೂರ್ತವೂ ಅಮೂರ್ತವೂ ಸ್ಥೂಲವೂ ಸೂಕ್ಷ್ಮವೂ ಎಲ್ಲವೂ ನೀನೇ. ನೀನೇ ಜಗತ್ತಿನ ಕರ್ತ. ನೀನಲ್ಲದೆ ಇನ್ನೊಂದು ವಸ್ತುವಿಲ್ಲ (37). ಹೇ ಭಗವನ್, ತಾಪತ್ರಯಗಳಿಂದ ಬಳಲುತ್ತ ಸಂಸಾರ ಚಕ್ರದಲ್ಲಿ ತೊಳಲುತ್ತಿರುವ ನನಗೆ ಎಲ್ಲೆಲ್ಲಿಯೂ ಮನಃಶಾಂತಿ ದೊರಕಲಿಲ್ಲ. ಹೇ ಸ್ವಾಮಿ, ದುಃಖಗಳನ್ನೇ ಸುಖಗಳೆಂದು ತಿಳಿದು ಬರಮಾಡಿಕೊಂಡೆನು. ಜಲಾಪೇಕ್ಷೆಯಿಂದ ಬಿಸಿಲ್ಗುದುರೆಯನ್ನು ಕುಡಿದೆನು! ಅವೆಲ್ಲವೂ ನನ್ನ ಸಂತಾಪಕ್ಕೆ ಕಾರಣವಾದವು (38-39). ರಾಜ್ಯಾಧಿಕಾರ, ಪೃಥ್ವಿ, ಸೈನ್ಯ, ಭಂಡಾರ, ಮಿತ್ರರು, ಮಕ್ಕಳು, ಮಡದಿಯರು, ಭೃತ್ಯರು, ಶಬ್ದಸ್ಪರ್ಶಾದಿ ವಿಷಯಗಳು—ಇವೆಲ್ಲವೂ ಅವಿನಾಶಿಯೆಂದೂ ಸುಖಕರವೆಂದೂ ಗ್ರಹಿಸಿದೆನು. ಓ ಪರಮೇಶ್ವರ, ಕಡೆಯಲ್ಲಿ ಅದೆಲ್ಲವೂ ನನಗೆ ದುಃಖಕರವಾಗಿ ಪರಿಣಮಿಸಿತು! (40-41). ಹೇ ಪ್ರಭು, (ಪುಣ್ಯವಶದಿಂದ)

**ದೇವಲೋಕಗತಿಂ ಪ್ರಾಪ್ತೋ ನಾಥ ದೇವಗಣೋಽಪಿ ಹಿ।**
**ಮತ್ತಸ್ಸಾಹಾಯ್ಯಕಾಮೋಽಭೂತ್ ಶಾಶ್ವತೀ ಕುತ್ರ ನಿರ್ವೃತಿಃ॥** 42

**ತ್ವಾಮನಾರಾಧ್ಯ ಜಗತಾಂ ಸರ್ವೇಷಾಂ ಪ್ರಭವಾಸ್ಪದಮ್।**
**ಶಾಶ್ವತೀ ಪ್ರಾಪ್ಯತೇ ಕೇನ ಪರಮೇಶ್ವರ ನಿರ್ವೃತಿಃ॥** 43

**ತ್ವನ್ಮಾಯಾಮೂಢಮನಸೋ ಜನ್ಮಮೃತ್ಯುಜರಾದಿಕಾನ್।**
**ಅವಾಪ್ಯ ತಾಪಾನ್ ಪಶ್ಯಂತಿ ಪ್ರೇತರಾಜಮನಂತರಮ್॥** 44

**ತತೋ ನಿಜಕ್ರಿಯಾಸೂತಿ ನರಕೇಷ್ವತಿದಾರುಣಮ್।**
**ಪ್ರಾಪ್ನುವಂತಿ ನರಾ ದುಃಖಮಸ್ವರೂಪವಿದಸ್ತವ॥** 45

**ಅಹಮತ್ಯಂತವಿಷಯೀ ಮೋಹಿತಸ್ತವ ಮಾಯಯಾ।**
**ಮಮತ್ವಗರ್ವಗರ್ತಾಂತರ್ಭ್ರಮಾಮಿ ಪರಮೇಶ್ವರ॥** 46

---

ಸ್ವರ್ಗಲೋಕವನ್ನಡರಿದ ದೇವತೆಗಳೂ, ಸಹ ನನ್ನ ಸಹಾಯವನ್ನು ಬಯಸಿದರು—ನನ್ನ ಸಹಾಯ ಬೇಕಾಯಿತು—ಎಂದ ಮೇಲೆ ಶಾಶ್ವತವಾದ ಸುಖ (ಈ ಸಂಸಾರದಲ್ಲಿ) ಎಲ್ಲಿದೆ? (42). ಸಮಸ್ತ ಜಗತ್ತುಗಳಿಗೂ ಆದಿಸ್ಥಾನ ವಾಗಿರುವ ನಿನ್ನನ್ನು ಆರಾಧಿಸದೆ, ಓ ಪರಮೇಶ್ವರ, ಯಾರಿಗೆ ತಾನೇ ಶಾಶ್ವತ ಸುಖ ದೊರಕೀತು? ನಿನ್ನ ಮಾಯೆಯಿಂದ ಮೂಢಚಿತ್ತರಾದ ಜನರು ಹುಟ್ಟು, ಸಾವು, ಮುಪ್ಪು—ಮುಂತಾದ ತಾಪಗಳನ್ನು ಅನುಭವಿಸಿ ಅನುಭವಿಸಿ ಕಡೆಯಲ್ಲಿ ಯಮರಾಜನ ಭೇಟಿಮಾಡುತ್ತಾರೆ! (43-44). ಅನಂತರ ತಾವು ಮಾಡಿದ ಕರ್ಮಗಳಿಗೆ ಫಲವಾಗಿ ನರಕಗಳಲ್ಲಿ ಅತಿದಾರುಣವಾದ ದುಃಖವನ್ನು ಅನುಭವಿಸುತ್ತಾರೆ. ಅವರೆಲ್ಲರೂ ನಿನ್ನ ಸ್ವರೂಪಜ್ಞಾನವನ್ನು ಪಡೆಯದ ಅಜ್ಞರು. ಪರಮೇಶ್ವರ, ನಾನೂ ಸಹ ನಿನ್ನ ಮಾಯೆಯಿಂದ ಮೋಹಿತನಾಗಿ ಅತ್ಯಂತ ವಿಷಯಸುಖಾಸಕ್ತನಾದೆನು. ಮಮತ್ವವೆಂಬ ಗರ್ವದ ಕೊರಕಲು ಗುಂಡಿಯಲ್ಲಿ ತೊಳಲಾಡುತ್ತಿದ್ದೇನೆ (45-46). ಅಂತಹ ನಾನು, ಭಗವಂತ, ಅಪಾರನೂ

**ಸೋಽಹಂ ತ್ವಾಂ ಶರಣಮಪಾರಮಪ್ರಮೇಯಂ**
**ಸಂಪ್ರಾಪ್ತಃ ಪರಮಪದಂ ಯತೋ ನ ಕಿಂಚಿತ್।**
**ಸಂಸಾರಭ್ರಮಪರಿತಾಪತಪ್ತಚೇತಾ**
**ನಿರ್ವಾಣೇ ಪರಿಣತಧಾಮ್ನಿ ಸಾಭಿಲಾಷಃ॥** 47

ಇತಿ ಶ್ರೀ ವಿಷ್ಣುಪುರಾಣೇ ಪಂಚಮಾಂಶೇ ತ್ರಯೋವಿಂಶೋಽಧ್ಯಾಯಃ

---

ಅಪ್ರಮೇಯನೂ ಯಾರಿಗಿಂತ ಭಿನ್ನವಾದ ಇನ್ನೊಂದಿಲ್ಲವೋ ಅಂತಹ ಪರಮಪದ ಸ್ವರೂಪನಾದ ನಿನಗೆ ಶರಣಾಗಿದ್ದೇನೆ. ಸಂಸಾರದಲ್ಲಿ ಅಲೆದು ಖೇದದಿಂದ ಸಂತಪ್ತಚಿತ್ತನಾಗಿದ್ದೇನೆ. ಪರಿಪಕ್ವಯೋಗಿಗಳಿಗೆ ಆಶ್ರಯವಾದ ಮೋಕ್ಷದಲ್ಲಿ ಅಭಿಲಾಷೆಯುಳ್ಳವನಾಗಿದ್ದೇನೆ" ಎಂದು ನುಡಿದನು (47).

ಇಲ್ಲಿಗೆ ಶ್ರೀವಿಷ್ಣುಪುರಾಣದಲ್ಲಿನ ಪಂಚಮಾಂಶದಲ್ಲಿ
ಇಪ್ಪತ್ತಮೂರನೆಯ ಅಧ್ಯಾಯ ಮುಗಿಯಿತು.



## ಚತುರ್ವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಇತ್ಥಂ ಸ್ತುತಸ್ತದಾ ತೇನ ಮುಚುಕುಂದೇನ ಧೀಮತಾ।**
**ಪ್ರಾಹೇಶಃ ಸರ್ವಭೂತಾನಾಮನಾದಿನಿಧನೋ ಹರಿಃ॥** 1

*ಶ್ರೀಭಗವಾನುವಾಚ:*

**ಯಥಾಭಿವಾಂಛಿತಾನ್ ದಿವ್ಯಾನ್ ಗಚ್ಛ ಲೋಕಾನ್ನರಾಧಿಪ।**
**ಅವ್ಯಾಹತಪರೈಶ್ವರ್ಯೋ ಮತ್ಪ್ರಸಾದೋಪಬೃಂಹಿತಃ॥** 2

**ಭುಕ್ತ್ವಾ ದಿವ್ಯಾನ್ಮಹಾಭೋಗಾನ್ ಭವಿಷ್ಯಸಿ ಮಹಾಕುಲೇ।**
**ಜಾತಿಸ್ಮರೋ ಮತ್ಪ್ರಸಾದಾತ್ತತೋ ಮೋಕ್ಷಮವಾಪ್ಸ್ಯಸಿ॥** 3

---

## ಅಧ್ಯಾಯ 24

ಭಗವಂತನ ಅನುಗ್ರಹವನ್ನು ಪಡೆದ ಮುಚುಕುಂದನು ತಪಸ್ಸಿಗಾಗಿ ಹೋಗುವುದು. ಬಲರಾಮನ ವ್ರಜಯಾತ್ರೆ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಸರ್ವಭೂತೇಶ್ವರನೂ ಅನಾದಿನಿಧನನೂ ಆದ ಶ್ರೀಹರಿಯು ಧೀಮಂತನಾದ ಮುಚುಕುಂದನಿಂದ ಈ ಪ್ರಕಾರ ಸ್ತುತಿಸಲ್ಪಟ್ಟವನಾಗಿ, "ಮಹಾರಾಜ–ಮುಚುಕುಂದ, ನಿನಗೆ ಅಭಿಲಷಿತ ವಾದ ದಿವ್ಯಲೋಕವನ್ನು ಪಡೆ. ನನ್ನ ಪ್ರಸಾದದಿಂದ ನಿನಗೆ ಅವ್ಯಾಹತವಾದ ಪರಮೈಶ್ವರ್ಯವು ಪ್ರಾಪ್ತವಾಗುವುದು (1-2). ದಿವ್ಯವಾದ ಮಹಾಭೋಗ ಗಳನ್ನನುಭವಿಸಿದ ಮೇಲೆ ಒಂದು ಮಹಾವಂಶದಲ್ಲಿ ಜನಿಸುವೆ. ಆಗ ನನ್ನ ಅನುಗ್ರಹದಿಂದ ನಿನಗೆ ಜನ್ಮಾಂತರ ಸ್ಮರಣೆ ಇರುವುದು. ಅನಂತರ ಮೋಕ್ಷವನ್ನು* ಪಡೆಯುವೆ" ಎಂದನು (3). ಆಗ ಮುಚುಕುಂದನು ಜಗದೀಶ್ವರ

* ಮೊದಲು ಪುಣ್ಯದ ಫಲವನ್ನನನುಭವಿಸಲಿ. ಅನಂತರ ಚಿತ್ತಶುದ್ಧಿ ದ್ವಾರಾ ಬ್ರಹ್ಮಜ್ಞಾನವಾದಮೇಲೆ ಮೋಕ್ಷ ದೊರೆಯುವುದು—ಎಂದು ಅಭಿಪ್ರಾಯ. ಚಿತ್ತಶುದ್ಧಿ ಗಾಗಿ ಮುಚುಕುಂದನು ತಪಸ್ಸಿಗೆ ಹೋಗುತ್ತಾನೆ.

*ಶ್ರೀಪರಾಶರ ಉವಾಚ:*

**ಇತ್ಯುಕ್ತಃ ಪ್ರಣಿಪತ್ಯೇಶಂ ಜಗತಾಮಚ್ಯುತಂ ನೃಪಃ।**
**ಗುಹಾಮುಖಾದ್ವಿನಿಷ್ಕ್ರಾಂತಸ್ಸ ದದರ್ಶಾಲ್ಪಕಾನ್ನರಾನ್॥** 4

**ತತಃ ಕಲಿಯುಗಂ ಮತ್ವಾ ಪ್ರಾಪ್ತಂ ತಪ್ತುಂ ನೃಪಸ್ತಪಃ।**
**ನರನಾರಾಯಣಸ್ಥಾನಂ ಪ್ರಯಯೌ ಗಂಧಮಾದನಮ್॥** 5

**ಕೃಷ್ಣೋಽಪಿ ಘಾತಯಿತ್ವಾರಿಮುಪಾಯೇನ ಹಿ ತದ್ಬಲಮ್।**
**ಜಗ್ರಾಹ ಮಥುರಾಮೇತ್ಯ ಹಸ್ತ್ಯಶ್ವಸ್ಯಂದನೋಜ್ಜ್ವಲಮ್॥** 6

**ಆನೀಯ ಚೋಗ್ರಸೇನಾಯ ದ್ವಾರವತ್ಯಾಂ ನ್ಯವೇದಯತ್।**
**ಪರಾಭಿಭವನಿಶ್ಶಂಕಂ ಬಭೂವ ಚ ಯದೋಃ ಕುಲಮ್॥** 7

**ಬಲದೇವೋಽಪಿ ಮೈತ್ರೇಯ ಪ್ರಶಾಂತಾಖಿಲವಿಗ್ರಹಃ।**
**ಜ್ಞಾತಿದರ್ಶನಸೋತ್ಕಂಠಃ ಪ್ರಯಯೌ ನಂದಗೋಕುಲಮ್॥** 8

**ತತೋ ಗೋಪಾಂಶ್ಚ ಗೋಪೀಶ್ಚ ಯಥಾ ಪೂರ್ವಮಮಿತ್ರಜಿತ್।**
**ತಥೈವಾಭ್ಯವದತ್ ಪ್ರೇಮ್ಣಾ ಬಹುಮಾನಪುರಸ್ಸರಮ್॥** 9

---

ನಾದ ಅಚ್ಯುತನಿಗೆ ನಮಸ್ಕರಿಸಿ ಗುಹೆಯಿಂದ ಹೊರಗೆ ಬಂದನು. ಅಲ್ಲಿ ಚಿಕ್ಕ ಚಿಕ್ಕ ಆಕಾರದ ಮನುಷ್ಯರನ್ನು ನೋಡಿ 'ಓಹೊ! ಕಲಿಯುಗ ಪ್ರಾಪ್ತವಾಗಿದೆ!' ಎಂದುಕೊಂಡು ನರನಾರಾಯಣರ ಆಶ್ರಮವಿದ್ದ ಗಂಧಮಾದನಗಿರಿಯನ್ನು ಕುರಿತು ತಪಸ್ಸಿಗಾಗಿ ಹೊರಟುಹೋದನು (4-5). ಹೀಗೆ ಶ್ರೀಕೃಷ್ಣನು ವೈರಿಯಾದ ಕಾಲಯವನನನ್ನು ಉಪಾಯದಿಂದ ಕೊಲ್ಲಿಸಿ ಮಥುರೆಗೆ ಬಂದು ಹಸ್ತಿವಾಜಿ ರಥಗಳಿಂದ ಉಜ್ವಲವಾಗಿದ್ದ ವೈರಿಸೈನ್ಯವನ್ನು ಸೆರೆಹಿಡಿದು ದ್ವಾರಕೆಗೆ ತಂದು ಉಗ್ರಸೇನನಿಗೆ ಒಪ್ಪಿಸಿದನು. ಇದರಿಂದ ಯಾದವರಿಗೆ ಶತ್ರುಗಳ ಆಕ್ರಮಣ ಭಯವು ತಪ್ಪಿತು (6-7). ಮೈತ್ರೇಯ, ಎಲ್ಲ ಕಲಹಗಳೂ ಶಾಂತವಾದ್ದರಿಂದ ಬಲರಾಮನೂ ಸಹ ತನ್ನ ಬಂಧುಗಳನ್ನು ನೋಡಬೇಕೆಂಬ ಆಸೆಯಿಂದ ನಂದ ಗೋಕುಲಕ್ಕೆ ಹೋದನು. ಶತ್ರುವಿಧ್ವಂಸಕನಾದ ಆತನು ಗೋಕುಲದಲ್ಲಿ ಗೋಪರನ್ನೂ ಗೋಪಿಯರನ್ನೂ ಕಂಡು, ಹಿಂದಿನಂತೆಯೇ ಪ್ರೇಮಾದರಗಳಿಂದ ವಂದಿಸಿ ಸಂಭಾಷಿಸಿದನು (8-9). ಕೆಲವರಿಂದ ಆಲಿಂಗಿತನಾಗಿ ಕೆಲವರನ್ನು

**ಸ ಕೈಶ್ಚಿತ್ಸಂಪರಿಷ್ವಕ್ತಃ ಕಾಂಶ್ಚಿಚ್ಚ ಪರಿಷಸ್ವಜೇ।**
**ಹಾಸ್ಯಂ ಚಕ್ರೇ ಸಮಂ ಕೈಶ್ಚಿದ್ಗೋಪೈರ್ಗೋಪೀಜನೈಸ್ತಥಾ॥ 10**

**ಪ್ರಿಯಾಣ್ಯನೇಕಾನ್ಯವದನ್ ಗೋಪಾಸ್ತತ್ರ ಹಲಾಯುಧಮ್।**
**ಗೋಪ್ಯಶ್ಚ ಪ್ರೇಮಕುಪಿತಾಃ ಪ್ರೋಚುಸ್ಸೇರ್ಷ್ಯಮಥಾಪರಾಃ॥ 11**

**ಗೋಪ್ಯಃ ಪಪ್ರಚ್ಛುರಪರಾ ನಾಗರೀಜನವಲ್ಲಭಃ।**
**ಕಚ್ಚಿದಾಸ್ತೇ ಸುಖಂ ಕೃಷ್ಣಶ್ಚಲಪ್ರೇಮಲವಾತ್ಮಕಃ॥ 12**

**ಅಸ್ಮಚ್ಚೇಷ್ಟಾಮಪಹಸನ್ನ ಕಚ್ಚಿತ್ಪುರಯೋಷಿತಾಮ್।**
**ಸೌಭಾಗ್ಯಮಾನಮಧಿಕಂ ಕರೋತಿ ಕ್ಷಣಸೌಹೃದಃ॥ 13**

**ಕಚ್ಚಿತ್ ಸ್ಮರತಿ ನಃ ಕೃಷ್ಣೋ ಗೀತಾನುಗಮನಂ ಕಲಮ್।**
**ಅಪ್ಯಸೌ ಮಾತರಂ ದ್ರಷ್ಟುಂ ಸಕೃದಪ್ಯಾಗಮಿಷ್ಯತಿ॥ 14**

**ಅಥವಾ ಕಿಂ ತದಾಲಾಪೈಃ ಕ್ರಿಯಂತಾಮಪರಾಃ ಕಥಾಃ।**
**ಯಸ್ಯಾಸ್ಮಾಭಿರ್ವಿನಾ ತೇನ ವಿನಾಸ್ಮಾಕಂ ಭವಿಷ್ಯತಿ॥ 15**

---

ತಾನೇ ಆಲಂಗಿಸುತ್ತ ಕೆಲವು ಗೋಪಗೋಪಿಯರೊಡನೆ ಹಾಸ್ಯಮಾಡುತ್ತ ಮಾತಾಡಿದನು. ಗೋಪರು ಬಲರಾಮನೊಡನೆ ನಾನಾ ಬಗೆಯ ಪ್ರಿಯವಾಕ್ಯಗಳನ್ನಾಡಿದರು. ಹಾಗೆಯೇ ಗೋಪಿಯರೂ ಸಂಭಾಷಿಸಿದರು. ಅನಂತರ ಕೆಲವು ಗೋಪಿಯರು ಪ್ರಣಯಕುಪಿತರಾಗಿ ಬಲರಾಮನಿಗೆ ಇಂತು ಕೇಳಿದರು (10-11): "ನಾಗರೀಜನವಲ್ಲಭನಾದ ಕೃಷ್ಣನು ಸುಖವಾಗಿರುವನೆ! ಅವನ ಪ್ರೇಮ ಎಷ್ಟು ಚಂಚಲವಾದದು! ಕ್ಷಣಿಕ ಸ್ನೇಹವುಳ್ಳ ಆತನು ನಮ್ಮ ಚೇಷ್ಟೆಗಳನ್ನು ಅಣಕಿಸುತ್ತ , ನಗರದ ತರುಣಿಯರಿಗೆ ತಮ್ಮ ಸೌಭಾಗ್ಯ ಅಧಿಕವೆಂಬ ಜಂಬವನ್ನು ಬೆಳಸುತ್ತಿರಬಹುದಲ್ಲವೆ! (12-13). ಅವನ ಗೀತವನ್ನನುಸರಿಸಿ ನಾವು ಇಂಪಾಗಿ ಹಾಡುತ್ತಿದ್ದುದನ್ನೇನಾದರೂ ಕೃಷ್ಣನು ಸ್ಮರಿಸಿಕೊಳ್ಳುತ್ತಾನೊ? ತನ್ನ ತಾಯಿಯನ್ನು ನೋಡುವುದಕ್ಕಾದರೂ ಒಮ್ಮೆ ಇತ್ತ ಬರುವನೆ? ಅಥವಾ ಆ ಮಾತುಗಳೇಕೆ, ಬೇರೆ ಯಾವುದಾದರೂ ಮಾತುಗಳನ್ನಾಡೋಣ. ನಾವಿಲ್ಲದೆ ಅವನ ಮಾರ್ಗ ನಡೆಯುವುದಾದಮೇಲೆ, ಅವನಿಲ್ಲದೆಯೂ ನಮ್ಮ ಕಥೆಯು ಹೇಗೋ ನಡೆಯುವುದು! (14-15). ತಂದೆ, ತಾಯಿ, ಅಣ್ಣ, ಗಂಡ, ಬಾಂಧವರು—ಎಲ್ಲರನ್ನೂ

**ಪಿತಾ ಮಾತಾ ತಥಾ ಭ್ರಾತಾ ಭರ್ತಾ ಬಂಧುಜನಶ್ಚ ಕಿಮ್।**
**ಸಂತ್ಯಕ್ತಸ್ತತ್ ಕೃತೇಽಸ್ಮಾಭಿರಕೃತಜ್ಞಧ್ವಜೋ ಹಿ ಸಃ॥** 16

**ತಥಾಪಿ ಕಚ್ಚಿದಾಲಾಪಮಿಹಾಗಮನಸಂಶ್ರಯಮ್।**
**ಕರೋತಿ ಕೃಷ್ಣೋ ವಕ್ತವ್ಯಂ ಭವತಾ ರಾಮ ನಾನೃತಮ್॥** 17

**ದಾಮೋದರೋಽಸೌ ಗೋವಿಂದಃ ಪುರಸ್ತ್ರೀಸಕ್ತಮಾನಸಃ।**
**ಅಪೇತಪ್ರೀತಿರಸ್ಮಾಸು ದುರ್ದರ್ಶಃ ಪ್ರತಿಭಾತಿ ನಃ॥** 18

*ಶ್ರೀಪರಾಶರ ಉವಾಚ:*

**ಆಮಂತ್ರಿತಶ್ಚ ಕೃಷ್ಣೇತಿ ಪುನರ್ದಾಮೋದರೇತಿ ಚ।**
**ಜಹಸುಸ್ಸಸ್ವರಂ ಗೋಪ್ಯೋ ಹರಿಣಾ ಹೃತಚೇತಸಃ॥** 19

**ಸಂದೇಶೈಸ್ಸಾಮಮಧುರೈಃ ಪ್ರೇಮಗರ್ಭೈರಗರ್ವಿತೈಃ।**
**ರಾಮೇಣಾಶ್ವಾಸಿತಾ ಗೋಪ್ಯಃ ಕೃಷ್ಣಸ್ಯಾತಿಮನೋಹರೈಃ॥** 20

---

ಅವನಿಗಾಗಿ ನಾವು ದೂರಮಾಡಿದ್ದೆವು. ಅಬ್ಬಾ! ಕೃತಘ್ನತೆಯೇ ಅವನ ಬಾವುಟ! ಇರಲಿ, ಆದರೂ ಇಲ್ಲಿಗೆ ಬರುವ ವಿಷಯವಾಗಿ ಕೃಷ್ಣನು ಏನಾದರೂ ಹೇಳು ತ್ತಾನೆಯೆ? ರಾಮ, ಸತ್ಯವನ್ನು ಹೇಳು, ಸುಳ್ಳು ಹೇಳಬೇಡ! (16-17). ಆ ದಾಮೋದರನಿಗೆ–ಆ ಗೋವಿಂದನಿಗೆ ಪುರಸ್ತ್ರೀಯರಲ್ಲಿ ಮನಸ್ಸು ನೆಟ್ಟುಹೋಗಿರ ಬೇಕು, ನಮ್ಮಲ್ಲಿ ಪ್ರೀತಿ ಅಳಿಸಿಹೋಗಿದೆ. ಇನ್ನೆಂದಿಗೂ ಅವನನ್ನು ನಾವು ನೋಡಲಾರೆವೆಂದು ತೋರುತ್ತದೆ!" ಎಂದು ಹಲವು ಬಗೆಯಲ್ಲಿ ಹೇಳಿ ಕೊಂಡರು (18). ಮೈತ್ರೇಯ, ಆ ಗೋಪಿಯರ ಹೃದಯವು ಶ್ರೀಕೃಷ್ಣನಿಂದ ಸಂಪೂರ್ಣವಾಗಿ ಅಪಹೃತವಾಗಿತ್ತು. ಅವರು "ಕೃಷ್ಣ! ದಾಮೋದರ!" ಎಂದು ಮತ್ತೆ ಮತ್ತೆ ಒಬ್ಬರನ್ನೊಬ್ಬರು ಸಂಬೋಧಿಸುತ್ತ ಗಟ್ಟಿಯಾಗಿ ನಗತೊಡಗಿದರು (19). ಆಗ ಬಲಭದ್ರನು ಮಧುರವೂ ಪ್ರೇಮಗರ್ಭವೂ ವಿನಯಪೂರ್ಣವೂ ಅತಿ ಮನೋಹರವೂ ಆದ ಶ್ರೀಕೃಷ್ಣನ ಸಂದೇಶವನ್ನು ನಾನಾ ಪ್ರಕಾರದಲ್ಲಿ ಅವರಿಗೆ ತಿಳಿಸಿ ಸಂತೈಸಿದನು. ಅನಂತರ ಗೋಪರೊಡನೆ ಸೇರಿ ನಾನಾ

**ಗೋಪೈಶ್ಚ ಪೂರ್ವವದ್ರಾಮಃ ಪರಿಹಾಸಮನೋಹರಾಃ।**
**ಕಥಾಶ್ಚಕಾರ ರೇಮೇ ಚ ಸಹ ತೈರ್ವ್ರಜಭೂಮಿಷು॥** 21

ಇತಿ ವಿಷ್ಣುಪುರಾಣೇ ಪಂಚಮಾಂಶೇ ಚತುರ್ವಿಂಶೋಽಧ್ಯಾಯಃ

---

ಪರಿಹಾಸ ಕಥೆಗಳನ್ನಾಡುತ್ತ ಅವರೊಡನೆ ವ್ರಜಭೂಮಿಗಳಲ್ಲಿ ವಿಹರಿಸಿದನು (20-21).

ಇಲ್ಲಿಗೆ ಶ್ರೀವಿಷ್ಣುಪುರಾಣದಲ್ಲಿನ ಪಂಚಮಾಂಶದಲ್ಲಿ
ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿಯಿತು.



## ಪಂಚವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ವನೇ ವಿಚರತಸ್ತಸ್ಯ ಸಹ ಗೋಪೈರ್ಮಹಾತ್ಮನಃ।**
**ಮಾನುಷಚ್ಛದ್ಮರೂಪಸ್ಯ ಶೇಷಸ್ಯ ಧರಣೀಧೃತಃ॥** 1

**ನಿಷ್ಪಾದಿತೋರುಕಾರ್ಯಸ್ಯ ಕಾರ್ಯೇಣೋರ್ವೀಪ್ರಚಾರಿಣಃ।**
**ಉಪಭೋಗಾರ್ಥಮತ್ಯರ್ಥಂ ವರುಣಃ ಪ್ರಾಹ ವಾರುಣೀಮ್॥** 2

**ಅಭೀಷ್ಟಾ ಸರ್ವದಾ ಯಸ್ಯ ಮದಿರೇ ತ್ವಂ ಮಹೌಜಸಃ।**
**ಅನಂತಸ್ಯೋಪಭೋಗಾಯಾ ತಸ್ಯ ಗಚ್ಛ ಮುದೇ ಶುಭೇ॥** 3

**ಇತ್ಯುಕ್ತಾ ವಾರುಣೀ ತೇನ ಸನ್ನಿಧಾನಮಥಾಕರೋತ್।**
**ವೃಂದಾವನಸಮುತ್ಪನ್ನಕದಂಬತರುಕೋಟರೇ॥** 4

---

## ಅಧ್ಯಾಯ 25

ಬಲರಾಮನ ವ್ರಜವಿಹಾರ; ಯಮುನಾನದಿಯನ್ನು ಸೆಳೆಯುವುದು.

ಪರಾಶರಮುನಿಗಳು ನುಡಿದರು: ಮೈತ್ರೇಯ, ಮಹಾತ್ಮನಾದ ಬಲರಾಮನು ಮಾಯಾಮಾನುಷನಾದ ಆದಿಶೇಷನು. ಧರಣೀಧರನಾದ ಆತನು ಮಹತ್ತರ ಕಾರ್ಯಗಳನ್ನು ನಡೆಸಿ ಕಾರ್ಯಾರ್ಥವಾಗಿ ಭೂಮಿಯಲ್ಲಿ ಸಂಚರಿಸುತ್ತಿದ್ದನು. ಆತನು ಗೋಪರೊಡನೆ ವನದಲ್ಲಿ ವಿಹರಿಸುತ್ತಿರುವಾಗ ಆತನ ವಿಶೇಷವಾದ ಉಪಭೋಗಕ್ಕಾಗಿ ವರುಣನು ವಾರುಣಿ*ಯನ್ನು ಕುರಿತು ಇಂತೆಂದನು (1-2): "ಹೇ ಮದಿರೆ, ಮಹಾತೇಜಸ್ವಿಯಾದ ಅನಂತನಿಗೆ (ಶೇಷ) ನೀನು ಸದಾ ಪ್ರಿಯಳಾದವಳು. ಶೋಭನೆ, ಆತನ ಭೋಗಕ್ಕಾಗಿ–ಆತನನ್ನು ಸಂತೋಷಪಡಿಸುವುದಕ್ಕಾಗಿ ನೀನೇ ಹೋಗು!" ವರುಣನು ಹೀಗೆ ಹೇಳಲು ವಾರುಣಿಯು ವೃಂದಾವನದಲ್ಲಿದ್ದ ಈಚಲು ಮರಗಳ ಪೊಟರೆಗಳಲ್ಲಿ ಸಂನಿಹಿತ ಳಾದಳು! (3-4). ಸುಂದರಾಂಗನಾದ ಬಲದೇವನು ವೃಂದಾವನದಲ್ಲಿ ಸಂಚರಿ

* ವಾರುಣಿ = ಮದ್ಯದ ಅಧಿದೇವತೆ, ಮದಿರೆ.

ವಿಚರನ್ ಬಲದೇವೋಽಪಿ ಮದಿರಾಗಂಧಮುತ್ತಮಮ್ ।
ಆಘ್ರಾಯ ಮದಿರಾತರ್ಷಮವಾಪಾಥ ವರಾನನಃ ॥ 5
ತತಃ ಕದಂಬಾತ್ ಸಹಸಾ ಮದ್ಯಧಾರಾಂ ಸ ಲಾಂಗಲೀ ।
ಪತಂತೀಂ ವೀಕ್ಷ್ಯ ಮೈತ್ರೇಯ ಪ್ರಯಯೌ ಪರಮಾಂ ಮುದಮ್ ॥ 6
ಪಪೌ ಚ ಗೋಪಗೋಪೀಭಿಸ್ಸಮುಪೇತೋ ಮುದಾನ್ವಿತಃ ।
ಪ್ರಗೀಯಮಾನೋ ಲಲಿತಂ ಗೀತವಾದ್ಯವಿಶಾರದೈಃ ॥ 7
ಸ ಮತ್ತೋಽತ್ಯಂತಘರ್ಮಾಂಭಃ ಕಣಿಕಾಮೌಕ್ತಿಕೋಜ್ಜ್ವಲಃ ।
ಆಗಚ್ಛ ಯಮುನೇ ಸ್ನಾತುಮಿಚ್ಛಾಮೀತ್ಯಾಹ ವಿಹ್ವಲಃ ॥ 8
ತಸ್ಯ ವಾಚಂ ನದೀ ಸಾ ತು ಮತ್ತೋಕ್ತಾಮವಮತ್ಯ ವೈ ।
ನಾಜಗಾಮ ತತಃ ಕ್ರುದ್ಧೋ ಹಲಂ ಜಗ್ರಾಹ ಲಾಂಗಲೀ ॥ 9
ಗೃಹೀತ್ವಾ ತಾಂ ಹಲಾಂತೇನ ಚಕರ್ಷ ಮದವಿಹ್ವಲಃ ।
ಪಾಪೇ ನಾಯಾಸಿ ನಾಯಾಸಿ ಗಮ್ಯತಾಮಿಚ್ಛಯಾನ್ಯತಃ ॥ 10

---

ಸುತ್ತ ಸೊಗಸಾದ ಮದ್ಯಗಂಧವನ್ನಾಘ್ರಾಣಿಸಿ ಮದ್ಯವನ್ನು ಕುಡಿಯಲು ಉತ್ಸುಕನಾದನು. ಮೈತ್ರೇಯ, ಲಾಂಗಲಾಯುಧನಾಗಿದ್ದ ಬಲಭದ್ರನಿಗೆ ಇದ್ದಕ್ಕಿದ್ದಂತೆ ಕದಂಬ (ಈಚಲು) ವೃಕ್ಷದಿಂದ ಮದ್ಯಧಾರೆ ಸುರಿಯುತ್ತಿರುವುದನ್ನು ಕಂಡು ಪರಮಾನಂದವಾಯಿತು! (5-6). ಆಗ ಗೋಪಗೋಪಿಯರೊಡನೆ ಆನಂದದಿಂದ ಮದ್ಯವನ್ನು ಯಥೇಷ್ಟವಾಗಿ ಕುಡಿದನು. ಆ ಸಮಯದಲ್ಲಿ ಗೀತಾವಾದ್ಯ ವಿಶಾರದರು ಆತನ ವಿಷಯವಾಗಿ ಹಾಡು ಕಟ್ಟಿ ಹಾಡುತ್ತಾ ವಾದ್ಯವನ್ನು ನುಡಿಸುತ್ತಾ ಇದ್ದರು (7). ಬಲಭದ್ರನಿಗೆ ಬಲವಾಗಿ ಮದವೇರಿತು. ಮುಖದ ಮೇಲೆ ಮುತ್ತುಗಳಂತೆ ಬೆವರಿನ ಹನಿಗಳು ಬೆಳಗಿದವು. ಅವನು ಅವಶನಾಗಿ 'ಏ ಯಮುನೆ, ಸ್ನಾನಮಾಡಬೇಕಾಗಿದೆ, ಇತ್ತಬಾ!' ಎಂದು ಯಮುನಾನದಿಯನ್ನು ಕರೆದನು (8). ಆ ನದಿಯಾದರೋ ಮದ್ಯಪಾನಮತ್ತನ ಆ ಮಾತನ್ನು ಉಪೇಕ್ಷಿಸಿದಳು, ಬರಲಿಲ್ಲ! ಮದವಿಹ್ವಲನಾದ ಬಲರಾಮನು ಕ್ರುದ್ಧನಾಗಿ ಹಲಾಯುಧವನ್ನೆತ್ತಿ ಅದರ ತುದಿಯಿಂದ ಯಮುನೆಯನ್ನು ಹಿಡಿದು "ಪಾಪಿಷ್ಠೆ! ನೀನು ಬರುವುದಿಲ್ಲ! ಬರುವುದಿಲ್ಲ! (ಶಕ್ತಿಯಿದ್ದರೆ) ಇಚ್ಛೆಯಿದ್ದಲ್ಲಿಗೆ ಹೋಗು!" ಎನ್ನುತ್ತ ತನ್ನೆಡೆಗೆ ಸೆಳೆದನು (9-10). ಹೀಗೆ ಬಲಾತ್ಕಾರವಾಗಿ ಬಲರಾಮನು

**ಸಾಕೃಷ್ಟಾ ಸಹಸಾ ತೇನ ಮಾರ್ಗಂ ಸಂತ್ಯಜ್ಯ ನಿಮ್ನಗಾ।**
**ಯತ್ರಾಸ್ತೇ ಬಲಭದ್ರೋಽಸೌ ಪ್ಲಾವಯಾಮಾಸ ತದ್ವನಮ್॥ 11**

**ಶರೀರಿಣೀ ತದಾಭ್ಯೇತ್ಯ ತ್ರಾಸವಿಹ್ವಲಲೋಚನಾ।**
**ಪ್ರಸೀದೇತ್ಯಬ್ರವೀದ್ರಾಮಂ ಮುಂಚ ಮಾಂ ಮುಸಲಾಯುಧ॥ 12**

**ತತಸ್ತಸ್ಯಾಃ ಸುವಚನಮಾಕರ್ಣ್ಯ ಸ ಹಲಾಯುಧಃ।**
**ಅಬ್ರವೀದವಜಾನಾಸಿ ಮಮ ಶೌರ್ಯಬಲೇ ನದಿ।**
**ಸೋಽಹಂ ತ್ವಾಂ ಹಲಪಾತೇನ ನಯಿಷ್ಯಾಮಿ ಸಹಸ್ರಧಾ॥ 13**

*ಶ್ರೀಪರಾಶರ ಉವಾಚ:*

**ಇತ್ಯುಕ್ತಯಾತಿಸಂತ್ರಾಸಾತ್ತಯಾ ನದ್ಯಾ ಪ್ರಸಾದಿತಃ।**
**ಭೂಭಾಗೇ ಪ್ಲಾವಿತೇ ತಸ್ಮಿನ್ ಮುಮೋಚ ಯಮುನಾಂ ಬಲಃ॥ 14**

**ತತಸ್ಸ್ನಾತಸ್ಯ ವೈ ಕಾಂತಿರಜಾಯತ ಮಹಾತ್ಮನಃ।**
**ಅವತಂಸೋತ್ಪಲಂ ಚಾರು ಗೃಹೀತ್ವೈಕಂ ಚ ಕುಂಡಲಮ್॥ 15**

---

ಸೆಳೆಯಲು, ಯಮುನಾನದಿಯು ಬಲಭದ್ರನಿದ್ದೆಡೆಗೆ ನುಗ್ಗಿ ಹರಿದು ವನವನ್ನು ನೀರಿನಿಂದ ಮುಳುಗಿಸಿಬಿಟ್ಟಿತು. ಯಮುನೆಯು ಶರೀರಧಾರಿಣಿಯಾಗಿ ಪ್ರತ್ಯಕ್ಷಳಾದಳು. ಹೆದರಿಕೆಯಿಂದ ಕಣ್ಣುಗಳು ನಡುಗುತ್ತಿರಲು, ಅವಳು ಬಲರಾಮನನ್ನು ಸಮೀಪಿಸಿ "ಓ ಮುಸಲಾಯುಧ, ಪ್ರಸನ್ನನಾಗು. ನನ್ನನ್ನು ಬಿಡು" ಎಂದು ಬೇಡಿಕೊಂಡಳು (11-12). ವಿನಯಪೂರ್ವಕವಾದ ಅವಳ ಮಾತನ್ನು ಕೇಳಿ ಬಲರಾಮನು "ಎಲೌ ಯಮುನೆ, ನನ್ನ ಬಲಶೌರ್ಯಗಳನ್ನು ಲೆಕ್ಕವಿಡದೆ ಅಸಡ್ಡೆಮಾಡುವೆಯಾ? ಈ ಹಲದಿಂದ ಹೊಡೆದು ನಿನ್ನನ್ನು ಸಾವಿರ ಹೋಳಾಗಿ ಸೀಳಿಬಿಟ್ಟೇನು!" ಎಂದನು (13). ಹೀಗೆ ಅಬ್ಬರಿಸಲು ಅತ್ಯಂತ ಭೀತಳಾದ ಯಮುನೆಯು ತನ್ನ ಪ್ರವಾಹವನ್ನು ಬಲರಾಮನಿದ್ದ ಭೂಭಾಗದಲ್ಲಿ ಹರಿಸತೊಡಗಿದಳು. ಅವಳ ಪ್ರಾರ್ಥನೆಯಂತೆ ಪ್ರಸನ್ನನಾಗಿ ಬಲರಾಮನು ಯಮುನೆಯನ್ನು ಬಿಟ್ಟನು (14). ಆಮೇಲೆ ಯಮುನಾಜಲದಲ್ಲಿ ಅವನು ಸ್ನಾನ ಮಾಡಲಾಗಿ ದೇಹಕಾಂತಿ ಉಜ್ವಲಿಸಿತು. ಲಕ್ಷ್ಮೀದೇವಿಯು (ಪ್ರತ್ಯಕ್ಷಳಾಗಿ ಬಂದು) ಮಹಾತ್ಮನಾದ ಬಲರಾಮನ ಒಂದು ಕಿವಿಗೆ ಆಭರಣವಾಗಿ

**ವರುಣಪ್ರಹಿತಾಂ ಚಾಸ್ಮೈ ಮಾಲಾಮಮ್ಲಾನಪಂಕಜಾಮ್।**
**ಸಮುದ್ರಾಭೇ ತಥಾ ವಸ್ತ್ರೇ ನೀಲೇ ಲಕ್ಷ್ಮೀರಯಚ್ಛತ॥ 16**

**ಕೃತಾವತಂಸಸ್ಸ ತದಾ ಚಾರುಕುಂಡಲಭೂಷಿತಃ।**
**ನೀಲಾಮ್ಬರಧರಸ್ಸ್ರಗ್ವೀ ಶುಶುಭೇ ಕಾಂತಿಸಂಯುತಃ॥ 17**

**ಇತ್ಥಂ ವಿಭೂಷಿತೋ ರೇಮೇ ತತ್ರ ರಾಮಸ್ತಥಾ ವ್ರಜೇ।**
**ಮಾಸದ್ವಯೇನ ಯಾತಶ್ಚ ಸ ಪುನರ್ದ್ವಾರಕಾಂ ಪುರೀಮ್॥ 18**

**ರೇವತೀಂ ನಾಮ ತನಯಾಂ ರೈವತಸ್ಯ ಮಹೀಪತೇಃ।**
**ಉಪಯೇಮೇ ಬಲಸ್ತಸ್ಯಾಂ ಜಜ್ಞಾತೇ ನಿಶಠೋಲ್ಮುಕೌ॥ 19**

ಇತಿ ಶ್ರೀ ವಿಷ್ಣುಪುರಾಣೇ ಪಂಚಮಾಂಶೇ ಪಂಚವಿಂಶೋಽಧ್ಯಾಯಃ

---

ಸುಂದರವಾದ ಒಂದು ನೈದಿಲೆಹೂವನ್ನೂ ಇನ್ನೊಂದು ಕಿವಿಗೆ ಒಂದು ಕುಂಡಲವನ್ನೂ ಕೊಟ್ಟಳು. ಅಲ್ಲದೆ ವರುಣನು ಕಳಿಸಿದ ನಳನಳಿಸುವ ಪದ್ಮಮಾಲೆಯನ್ನು ಸಮುದ್ರದಂತೆ ನೀಲವರ್ಣವಿದ್ದ ಎರಡು ವಸ್ತ್ರಗಳನ್ನೂ ಅರ್ಪಿಸಿದಳು (15-16). ಅನಂತರ ಬಲಭದ್ರನು ನೈದಿಲೆಯನ್ನು ಕಿವಿಗೆ ಮುಡಿದು ಕುಂಡಲವನ್ನು ಧರಿಸಿ ಪದ್ಮಮಾಲೆಯನ್ನು ಕೊರಳಿಗೆ ಹಾಕಿಕೊಂಡು ನೀಲವಸ್ತ್ರಗಳನ್ನುಟ್ಟು ಕಾಂತಿಯುತನಾಗಿ ಶೋಭಿಸಿದನು. ಹೀಗೆ ಅಲಂಕೃತನಾದ ಬಲರಾಮನು ವ್ರಜದಲ್ಲಿ ಎರಡು ತಿಂಗಳ ಕಾಲ ವಿಹರಿಸಿ, ಅನಂತರ ದ್ವಾರಕಾನಗರಿಗೆ ತೆರಳಿದನು (17-18). ಆಮೇಲೆ ಬಲಭದ್ರನು ರೇವತನೆಂಬ ರಾಜನ ಮಗಳಾದ ರೇವತಿಯೆಂಬ ಕನ್ಯೆಯನ್ನು ಮದುವೆಯಾದನು. ಅವಳಲ್ಲಿ ಆತನಿಗೆ ನಿಶಠ, ಉಲ್ಮುಕ ಎಂಬ ಇಬ್ಬರು ಪುತ್ರರು ಜನಿಸಿದರು (19).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.



## ಷಡ್ವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಭೀಷ್ಮಕಃ ಕುಂಡಿನೇ ರಾಜಾ ವಿದರ್ಭವಿಷಯೇಽಭವತ್।**
**ರುಕ್ಮೀ ತಸ್ಯಾಭವತ್ಪುತ್ರೋ ರುಕ್ಮಿಣೀ ಚ ವರಾನನಾ॥** 1

**ರುಕ್ಮಿಣೀಂ ಚಕಮೇ ಕೃಷ್ಣಸ್ಸಾ ಚ ತಂ ಚಾರುಹಾಸಿನೀ।**
**ನ ದದೌ ಯಾಚತೇ ಚೈನಾಂ ರುಕ್ಮೀ ದ್ವೇಷೇಣ ಚಕ್ರಿಣೇ॥** 2

**ದದೌ ಚ ಶಿಶುಪಾಲಾಯ ಜರಾಸಂಧಪ್ರಚೋದಿತಃ।**
**ಭೀಷ್ಮಕೋ ರುಕ್ಮಿಣಾ ಸಾರ್ಧಂ ರುಕ್ಮಿಣೀಮುರುವಿಕ್ರಮಃ॥** 3

**ವಿವಾಹಾರ್ಥಂ ತತಃ ಸರ್ವೇ ಜರಾಸಂಧಮುಖಾ ನೃಪಾಃ।**
**ಭೀಷ್ಮಕಸ್ಯ ಪುರಂ ಜಗ್ಮುಶ್ಶಿಶುಪಾಲಪ್ರಿಯೈಷಿಣಃ॥** 4

---

## ಅಧ್ಯಾಯ 26

### ರುಕ್ಮಿಣೀಹರಣ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ವಿದರ್ಭರಾಜ್ಯದ ಕುಂಡಿನಪುರದಲ್ಲಿ ಭೀಷ್ಮಕನೆಂಬ ರಾಜನಿದ್ದನು. ಆತನಿಗೆ ರುಕ್ಮಿಯೆಂಬ ಮಗನೂ ಸುಂದರಿಯಾದ ರುಕ್ಮಿಣಿಯೆಂಬ ಮಗಳೂ ಇದ್ದರು (1). ಶ್ರೀಕೃಷ್ಣನು ರುಕ್ಮಿಣಿಯನ್ನೂ ಮಧುರಸ್ಮಿತೆಯಾದ ರುಕ್ಮಿಣಿಯು ಶ್ರೀಕೃಷ್ಣನನ್ನೂ ಪ್ರೇಮಿಸಿದರು. ಶ್ರೀಕೃಷ್ಣನು ರುಕ್ಮಿಣಿಯನ್ನು ಯಾಚಿಸಿದರೂ ರುಕ್ಮಿಯು ಅವನ ಮೇಲಿನ ದ್ವೇಷದಿಂದ ಅವಳನ್ನು ಮದುವೆಮಾಡಿಕೊಡಲು ಒಪ್ಪಲಿಲ್ಲ (2). ಜರಾಸಂಧನ ಮತ್ತು ರುಕ್ಮಿಯ ಪ್ರೇರಣೆಗೆ ಒಳಗಾಗಿ ಪರಾಕ್ರಮಿಯಾದ ಭೀಷ್ಮಕನು ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ವಿವಾಹಮಾಡಬೇಕೆಂದು ಉದ್ದೇಶಿಸಿದನು. ಆಗ ಶಿಶುಪಾಲನ ಹಿತೈಷಿಗಳಾದ ಜರಾಸಂಧನೇ ಮೊದಲಾದ ನೃಪಾಲರು ವಿವಾಹಕ್ಕೋಸ್ಕರ ಭೀಷ್ಮಕನ ಕುಂಡಿನಪುರಕ್ಕೆ ಹೋದರು (3-4). ಶ್ರೀಕೃಷ್ಣನೂ

**ಕೃಷ್ಣೋಽಪಿ ಬಲಭದ್ರಾದ್ಯೈರ್ಯದುಭಿಃ ಪರಿವಾರಿತಃ।**
**ಪ್ರಯಯೌ ಕುಂಡಿನಂ ದ್ರಷ್ಟುಂ ವಿವಾಹಂ ಚೈದ್ಯಭೂಭೃತಃ॥** 5

**ಶ್ವೋಭಾವಿನಿ ವಿವಾಹೇ ತು ತಾಂ ಕನ್ಯಾಂ ಹೃತವಾನ್ ಹರಿಃ।**
**ವಿಪಕ್ಷಭಾರಮಾಸಜ್ಯ ರಾಮದಿಷ್ವಥ ಬಂಧುಷು॥** 6

**ತತಶ್ಚ ಪೌಂಡ್ರಕಶ್ರೀಮಾನ್ ದಂತವಕ್ತ್ರೋ ವಿದೂರಥಃ।**
**ಶಿಶುಪಾಲಜರಾಸಂಧಸಾಲ್ವಾದ್ಯಾಶ್ಚ ಮಹೀಭೃತಃ॥** 7

**ಕುಪಿತಾಸ್ತೇ ಹರಿಂ ಹಂತುಂ ಚಕ್ರುರುದ್ಯೋಗಮುತ್ತಮಮ್।**
**ನಿರ್ಜಿತಾಶ್ಚ ಸಮಾಗಮ್ಯ ರಾಮಾದ್ಯೈರ್ಯದುಪುಂಗವೈಃ॥** 8

**ಕುಂಡಿನಂ ನ ಪ್ರವೇಕ್ಷ್ಯಾಮಿ ಹ್ಯಹತ್ವಾ ಯುಧಿ ಕೇಶವಮ್।**
**ಕೃತ್ವಾ ಪ್ರತಿಜ್ಞಾಂ ರುಕ್ಮೀ ಚ ಹಂತುಂ ಕೃಷ್ಣಮನುದ್ರುತಃ॥** 9

---

ಬಲಭದ್ರನೇ ಮೊದಲಾದ ಯಾದವರಿಂದ ಪರಿವೃತನಾಗಿ, ಚೈದ್ಯರಾಜನಾದ ಶಿಶುಪಾಲನ ವಿವಾಹ ಮಹೋತ್ಸವವನ್ನು ನೋಡೋಣವೆಂದು ಕುಂಡಿನಪುರಕ್ಕೆ ಪ್ರಯಾಣಮಾಡಿದನು! (5). ಅನಂತರ ನಾಳೆ ವಿವಾಹವೆಂದಿರುವಾಗ, ವೈರಿಗಳ ನ್ನೆದುರಿಸುವ ಭಾರವನ್ನು ಬಲಭದ್ರಾದಿ ಯದುಬಂಧುಗಳಿಗೆ ವಹಿಸಿ, ಶ್ರೀಕೃಷ್ಣನು ಆ ಕನ್ಯೆಯನ್ನು ಅಪಹರಿಸಿಕೊಂಡು ಹೋದನು! ಆಗ ಪೌಂಡ್ರಕ, ದಂತವಕ್ತ್ರ, ವಿದೂರಥ, ಶಿಶುಪಾಲ, ಜರಾಸಂಧ, ಸಾಲ್ವ—ಮೊದಲಾದ ನೃಪಾಲರು ಕುಪಿತರಾಗಿ ಶ್ರೀಕೃಷ್ಣನನ್ನು ಕೊಲ್ಲಬೇಕೆಂದು ಮಹತ್ತರವಾದ ಪ್ರಯತ್ನವನ್ನು ನಡೆಸಿದರು. ಆದರೆ ಬಲರಾಮನೇ ಮೊದಲಾದ ಯದುಪುಂಗವರೊಡನೆ ಕಾಳಗದಲ್ಲಿ ಸೋತುಹೋದರು (6-8). ಆಗ ರುಕ್ಮಿಯು "ಕೇಶವನನ್ನು ಸಂಹರಿಸದೆ ಕುಂಡಿನಪುರವನ್ನು ಪ್ರವೇಶಿಸುವುದಿಲ್ಲ" ಎಂದು ಪ್ರತಿಜ್ಞೆ ಮಾಡಿ, ಶ್ರೀಕೃಷ್ಣನನ್ನು ಕೊಲ್ಲುವೆನೆಂದು ಆತನ ಬೆನ್ನಟ್ಟಿಹೋದನು. ಶ್ರೀಕೃಷ್ಣನು ಆತನ ಗಜಾಶ್ವರಥಪದಾತಿಸಂಕುಲವಾದ ಸೇನೆಯನ್ನು ಲೀಲೆಯಿಂದ ಸಂಹರಿಸಿ,

**ಹತ್ವಾ ಬಲಂ ಸನಾಗಾಶ್ವಂ ಪತ್ತಿಸ್ಯಂದನಸಂಕುಲಮ್ ।**
**ನಿರ್ಜಿತಃ ಪಾತಿತಶ್ಚೋರ್ವ್ಯಾಂ ಲೀಲಯೈವ ಸ ಚಕ್ರಿಣಾ ॥** 10

**ನಿರ್ಜಿತ್ಯ ರುಕ್ಮಿಣಂ ಸಮ್ಯಗುಪಯೇಮೇ ಚ ರುಕ್ಮಿಣೀಮ್ ।**
**ರಾಕ್ಷಸೇನ ವಿವಾಹೇನ ಸಂಪ್ರಾಪ್ತಾಂ ಮಧುಸೂದನಃ ॥** 11

**ತಸ್ಯಾಂ ಜಜ್ಞೇ ಚ ಪ್ರದ್ಯುಮ್ನೋ ಮದನಾಂಶಸ್ಸವೀರ್ಯವಾನ್ ।**
**ಜಹಾರ ಶಂಬರೋ ಯಂ ವೈ ಯೋ ಜಘಾನ ಚ ಶಂಬರಮ್ ॥** 12

ಇತಿ ಶ್ರೀ ವಿಷ್ಣುಪುರಾಣೇ ಪಂಚಮಾಂಶೇ ಷಡ್‌ವಿಂಶೋಽಧ್ಯಾಯಃ

---

ರುಕ್ಮಿಯನ್ನು ಪರಾಜಯಗೊಳಿಸಿ ನೆಲದ ಮೇಲುರುಳಿಸಿದನು. (ರುಕ್ಮಿಣಿಯ ಸೋದರನೆಂದು ಮರುಕದಿಂದ ಅವನನ್ನು ಕೊಲ್ಲಲಿಲ್ಲ) (9-10). ಹೀಗೆ ರುಕ್ಮಿಯನ್ನು ಜಯಿಸಿ ಮಧುಸೂದನನು ರಾಕ್ಷಸವಿಧಾನದಿಂದ ಅಪಹರಿಸಿ ತಂದಿದ್ದ ರುಕ್ಮಿಣಿಯನ್ನು ಸರಿಯಾದ ರೀತಿಯಲ್ಲಿ (ಶಾಸ್ತ್ರಪೂರ್ವಕ) ಮದುವೆಯಾದನು. ಅವಳಲ್ಲಿ ಶ್ರೀಕೃಷ್ಣನಿಗೆ ಮನ್ಮಥಾಂಶದಿಂದ ಪ್ರದ್ಯುಮ್ನ ಎಂಬ ವೀರನಾದ ಪುತ್ರನು ಉದಿಸಿದನು. ಅವನನ್ನು ಒಮ್ಮೆ ಶಂಬರಾಸುರನು ಅಪಹರಿಸಲಾಗಿ, ಆತನನ್ನು ಪ್ರದ್ಯುಮ್ನನು ವಧಿಸಿದನು (11-12).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.



## ಸಪ್ತವಿಂಶೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಶಂಬರೇಣ ಹೃತೋ ವೀರಃ ಪ್ರದ್ಯುಮ್ನಃ ಸ ಕಥಂ ಮುನೇ।**
**ಶಂಬರಃ ಸ ಮಹಾವೀರ್ಯಃ ಪ್ರದ್ಯುಮ್ನೇನ ಕಥಂ ಹತಃ॥** 1

**ಯಸ್ತೇನಾಪಹೃತಃ ಪೂರ್ವಂ ಸ ಕಥಂ ವಿಜಘಾನ ತಮ್।**
**ಏತದ್ವಿಸ್ತರತಃ ಶ್ರೋತುಮಿಚ್ಛಾಮಿ ಸಕಲಂ ಗುರೋ॥** 2

*ಶ್ರೀಪರಾಶರ ಉವಾಚ:*

**ಷಷ್ಠೇಽಹ್ನಿ ಜಾತಮಾತ್ರಂ ತು ಪ್ರದ್ಯುಮ್ನಂ ಸೂತಿಕಾಗೃಹಾತ್।**
**ಮಮೈಷ ಹಂತೇತಿ ಮುನೇ ಹೃತವಾನ್ ಕಾಲಶಂಬರಃ॥** 3

---

## ಅಧ್ಯಾಯ 27

ಪ್ರದ್ಯುಮ್ನನನ್ನು ಶಂಬರನು ಅಪಹರಿಸಿದ್ದನ್ನೂ ಅವನನ್ನು ಪ್ರದ್ಯುಮ್ನನು ವಧಿಸಿದ ವೃತ್ತಾಂತವನ್ನೂ ವಿಸ್ತರಿಸಿ ಹೇಳುವುದು.

ಆಗ ಮೈತ್ರೇಯರು "ಮುನಿಗಳೆ, ವೀರನಾದ ಪ್ರದ್ಯುಮ್ನನನ್ನು ಶಂಬರಾಸುರನು ಅಪಹರಿಸಿದ್ದು ಹೇಗೆ? ಮಹಾವೀರನಾದ ಶಂಬರಾಸುರನನ್ನು ಈತನು ವಧಿಸಿದ್ದಾರೂ ಹೇಗೆ? ಮೊದಲು ಶಂಬರನಿಂದಲೇ ಅಪಹೃತನಾದವನು ಆತನನ್ನು ಕೊಲ್ಲುವುದಾದರೂ ಹೇಗೆ? ಗುರುಗಳೆ, ಇದೆಲ್ಲವನ್ನೂ ವಿಸ್ತಾರವಾಗಿ ಕೇಳಲು ಬಯಸುತ್ತೇನೆ" ಎಂದರು (1-2). ಅದಕ್ಕೆ ಪರಾಶರ ಮುನಿಗಳು ನುಡಿದರು: ಮೈತ್ರೇಯ, ಪ್ರದ್ಯುಮ್ನನು ಹುಟ್ಟಿ ಆರು ದಿನವಾಗಿತ್ತು. 'ಈತನು ನನ್ನನ್ನು ಕೊಲ್ಲತಕ್ಕವನು' ಎಂದರಿತು ಯಮಸ್ವರೂಪನಾದ ಶಂಬರಾಸುರನು ಆ ಮಗುವನ್ನು ಬಾಣಂತಿ ಮನೆಯಿಂದಲೇ ಅಪಹರಿಸಿಬಿಟ್ಟನು (3). ಅಪಹರಿಸಿ

ಹೃತ್ವಾ ಚಿಕ್ಷೇಪ ಚೈವೈನಂ ಗ್ರಾಹೋಗ್ರೇ ಲವಣಾರ್ಣವೇ।
ಕಲ್ಲೋಲಜನಿತಾವರ್ತ್ತೇ ಸುಘೋರೇ ಮಕರಾಲಯೇ॥ 4

ಪಾತಿತಂ ತತ್ರ ಚೈವೈಕೋ ಮತ್ಸ್ಯೋ ಜಗ್ರಾಹ ಬಾಲಕಮ್।
ನ ಮಮಾರ ಚ ತಸ್ಯಾಪಿ ಜಠರಾಗ್ನಿಪ್ರದೀಪಿತಃ॥ 5

ಮತ್ಸ್ಯಬಂಧೈಶ್ಚ ಮತ್ಸ್ಯೋಽಸೌ ಮತ್ಸ್ಯೈರನ್ಯೈಸ್ಸಹ ದ್ವಿಜ।
ಘಾತಿತೋಽಸುರವರ್ಯಾಯ ಶಂಬರಾಯ ನಿವೇದಿತಃ॥ 6

ತಸ್ಯ ಮಾಯಾವತೀ ನಾಮ ಪತ್ನೀ ಸರ್ವಗೃಹೇಶ್ವರೀ।
ಕಾರಯಾಮಾಸ ಸೂದಾನಾಮಾಧಿಪತ್ಯಮನಿಂದಿತಾ॥ 7

ದಾರಿತೇ ಮತ್ಸ್ಯಜಠರೇ ಸಾ ದದರ್ಶಾತಿಶೋಭನಮ್।
ಕುಮಾರಂ ಮನ್ಮಥತರೋರ್ದಗ್ಧಸ್ಯ ಪ್ರಥಮಾಂಕುರಮ್॥ 8

ಕೋಽಯಂ ಕಥಮಯಂ ಮತ್ಸ್ಯಜಠರೇ ಪ್ರವಿವೇಶಿತಃ।
ಇತ್ಯೇವಂ ಕೌತುಕಾವಿಷ್ಟಾಂ ತನ್ವೀಂ ಪ್ರಾಹಾಥ ನಾರದಃ॥ 9

---

ಕೊಂಡು ಹೋಗಿ ಆ ಶಿಶುವನ್ನು ತರಂಗಮಾಲೆಗಳ ಆವರ್ತಗಳಿಂದ ಅತ್ಯಂತ ಘೋರವೂ ಮೊಸಳೆ ತಿಮಿಂಗಿಲಗಳಿಂದ ತುಂಬಿದ್ದೂ ಆದ ಸಮುದ್ರದಲ್ಲಿ ಎಸೆದನು! ಆ ಶಿಶುವನ್ನು ಒಂದು ಮೀನು ನುಂಗಿತು. ಅದರ ಜಠರಾಗ್ನಿಯಲ್ಲಿ ಸಿಕ್ಕಿದರೂ ಆ ಬಾಲಕನು ಸಾಯಲಿಲ್ಲ (4-5). ಮೀನುಗಾರನು ಆ ಮೀನನ್ನು ಇತರ ಮೀನುಗಳೊಡನೆ ಹಿಡಿದು ಶಂಬರಾಸುರನಿಗೆ (ಅಡಿಗೆಗಾಗಿ) ಒಪ್ಪಿಸಿದರು! ಶಂಬರನಿಗೆ ಮಾಯಾವತಿಯೆಂಬ ಪತ್ನಿಯಿದ್ದಳು. ಅಂತಃಪುರಕ್ಕೆ ಒಡತಿಯೂ ಲಕ್ಷಣಸಂಪನ್ನೆಯೂ ಆದ ಅವಳು ಅಡಿಗೆಯವರ ಮೇಲಿನ ಆಧಿಪತ್ಯವನ್ನು ವಹಿಸಿಕೊಂಡಿದ್ದಳು (6-7). ಆ ಮೀನಿನ ಹೊಟ್ಟೆಯನ್ನು ಸೀಳಿದಾಗ ಅತ್ಯಂತ ಸುಂದರಾಕೃತಿಯ ಬಾಲಕನು ಗೋಚರಿಸಿದನು! (ಹಿಂದೆ ರುದ್ರನ ಕೋಪಾಗ್ನಿಯಿಂದ) ದಗ್ಧನಾದ ಮನ್ಮಥನೆಂಬ ವೃಕ್ಷದ ಮೊದಲನೆಯ ಚಿಗುರು ಆ ಬಾಲಕ! (8). "ಎಲಾ! ಯಾರೀ ಬಾಲಕ! ಮೀನಿನ ಹೊಟ್ಟೆಯಲ್ಲಿ ಹೇಗೆ ಸೇರಿದ!" ಎಂದು ಮಾಯಾವತಿಯು ಆಶ್ಚರ್ಯಚಕಿತಳಾದಳು. ಆಗ

**ಅಯಂ ಸಮಸ್ತಜಗತಃ ಸ್ಥಿತಿಸಂಹಾರಕಾರಿಣಃ।**
**ಶಂಬರೇಣ ಹೃತೋ ವಿಷ್ಣೋಸ್ತನಯಃ ಸೂತಿಕಾಗೃಹಾತ್॥** 10

**ಕ್ಷಿಪ್ತಸ್ಸಮುದ್ರೇ ಮತ್ಸ್ಯೇನ ನಿಗೀರ್ಣಸ್ತೇ ಗೃಹಂ ಗತಃ।**
**ನರರತ್ನಮಿದಂ ಸುಭ್ರು ವಿಸ್ರಬ್ಧಾ ಪರಿಪಾಲಯ॥** 11

*ಶ್ರೀಪರಾಶರ ಉವಾಚ:*

**ನಾರದೇನೈವಮುಕ್ತಾ ಸಾ ಪಾಲಯಾಮಾಸ ತಂ ಶಿಶುಮ್।**
**ಬಾಲ್ಯಾದೇವಾತಿರಾಗೇಣ ರೂಪಾತಿಶಯಮೋಹಿತಾ॥** 12

**ಸ ಯದಾ ಯೌವನಾಭೋಗಭೂಷಿತೋಽಭೂನ್ಮಹಾಮತೇ।**
**ಸಾಭಿಲಾಷಾ ತದಾ ಸಾಪಿ ಬಭೂವ ಗಜಗಾಮಿನೀ॥** 13

**ಮಾಯಾವತೀ ದದೌ ತಸ್ಮೈ ಮಾಯಾಸ್ಸರ್ವಾ ಮಹಾಮುನೇ।**
**ಪ್ರದ್ಯುಮ್ನಾಯಾನುರಾಗಾಂಧಾ ತನ್ನ್ಯಸ್ತಹೃದಯೇಕ್ಷಣಾ॥** 14

---

ನಾರದಮುನಿಗಳು ಬಂದು "ಎಲೌ ಸುಭ್ರು, ಸಮಸ್ತ ಜಗತ್ತುಗಳ ಸ್ಥಿತಿಸಂಹಾರಗಳಿಗೆ ಕರ್ತನಾದ ವಿಷ್ಣುವಿನ ಪುತ್ರನಿವನು. ಶಂಬರನು ಇವನನ್ನು ಸೂತಿಕಾಗೃಹದಿಂದ ಅಪಹರಿಸಿ ಸಮುದ್ರದಲ್ಲಿ ಎಸೆದಿದ್ದನು (9-10). ಅಲ್ಲಿ ಮೀನು ನುಂಗಿದ್ದರಿಂದ ನಿನ್ನ ಮನೆಯನ್ನು ಸೇರಿದ್ದಾನೆ. ಈ ಬಾಲಕನೊಬ್ಬ ಪುರುಷರತ್ನವೆಂದು ತಿಳಿ. ರಹಸ್ಯವಾಗಿ ಇವನನ್ನು ಪರಿಪಾಲಿಸು" ಎಂದರು (11). ನಾರದರು ಹೇಳಿದಂತೆ ಮಾಯಾವತಿಯು ಆ ಶಿಶುವನ್ನು ಸಾಕಿದಳು. ಬಾಲ್ಯದಿಂದಲೇ ಅದರ ರೂಪಾತಿಶಯವನ್ನು ಕಂಡು ಅವಳು ಮುಗ್ಧಳಾಗಿದ್ದಳು. ಬಾಲಕನು ನವಯೌವನವನ್ನುಪಡೆದಮೇಲಂತೂ ಆ ಗಜಗಾಮಿನಿಯು ಅವನಲ್ಲಿ ಅನುರಾಗವನ್ನಿಟ್ಟಳು (12-13). ಪ್ರದ್ಯುಮ್ನನಲ್ಲಿ ಪ್ರೇಮಾಂಧಳಾದ ಮಾಯಾವತಿಯು ಆತನಿಗೆ ತನ್ನ ಹೃದಯವನ್ನೂ ಕಣ್ಣುಗಳನ್ನೂ ಅರ್ಪಿಸಿದ್ದಲ್ಲದೆ, ತನ್ನಲ್ಲಿದ್ದ ಸಕಲ ಮಾಯಾವಿದ್ಯೆಗಳನ್ನೂ ಅವನಿಗೆ ಕಲಿಸಿಕೊಟ್ಟಳು! ಅನುರಾಗದಿಂದ ಮುಂದುವರೆಯುತ್ತಿದ್ದ ಆ ಕಮಲೇಕ್ಷಣೆಯನ್ನು ನೋಡಿ ಒಂದು ದಿನ

**ಪ್ರಸಜ್ಜಂತೀಂ ತು ತಾಂ ಪ್ರಾಹ ಸ ಕಾರ್ಷ್ಣಿಃ ಕಮಲೇಕ್ಷಣಾಮ್।**
**ಮಾತೃತ್ವಮಪಹಾಯಾದ್ಯ ಕಿಮೇವಂ ವರ್ತಸೇಽನ್ಯಥಾ॥ 15**

**ಸಾ ತಸ್ಮೈ ಕಥಯಾಮಾಸ ನ ಪುತ್ರಸ್ತ್ವಂ ಮಮೇತಿ ವೈ।**
**ತನಯಂ ತ್ವಾಮಯಂ ವಿಷ್ಣೋರ್ಹೃತವಾನ್ ಕಾಲಶಂಬರಃ॥ 16**

**ಕ್ಷಿಪ್ತಃ ಸಮುದ್ರೇ ಮತ್ಸ್ಯಸ್ಯ ಸಂಪ್ರಾಪ್ತೋ ಜಠರಾನ್ಮಯಾ।**
**ಸಾ ಹಿ ರೋದಿತಿ ತೇ ಮಾತಾ ಕಾಂತಾದ್ಯಾಪ್ಯತಿವತ್ಸಲಾ॥ 17**

*ಶ್ರೀಪರಾಶರ ಉವಾಚ:*

**ಇತ್ಯುಕ್ತಶ್ಶಂಬರಂ ಯುದ್ಧೇ ಪ್ರದ್ಯುಮ್ನಃ ಸ ಸಮಾಹ್ವಯತ್।**
**ಕ್ರೋಧಾಕುಲೀಕೃತಮನಾ ಯುಯುಧೇ ಚ ಮಹಾಬಲಃ॥ 18**

**ಹತ್ವಾ ಸೈನ್ಯಮಶೇಷಂ ತು ತಸ್ಯ ದೈತ್ಯಸ್ಯ ಯಾದವಃ।**
**ಸಪ್ತ ಮಾಯಾ ವ್ಯತಿಕ್ರಮ್ಯ ಮಾಯಾಂ ಪ್ರಯುಯುಜೇಷ್ಟಮೀಮ್॥ 19**

---

ಶ್ರೀಕೃಷ್ಣನ ಪುತ್ರನಾದ ಪ್ರದ್ಯುಮ್ನನು "ನಿನ್ನ ತಾಯ್ತನವನ್ನು ತೊರೆದು ಇಂದು ಇದೇನು ಹೀಗೆ ಬೇರೆ ರೀತಿಯಲ್ಲಿ ವರ್ತಿಸುತ್ತಿರುವೆ?" ಎಂದು ಕೇಳಿದನು (14-15). ಆಗ ಮಾಯಾವತಿಯು "ನೀನು ನನ್ನ ಮಗನಲ್ಲ ; ಶ್ರೀಕೃಷ್ಣನ ಮಗ. ಈ ಕಾಳಶಂಬರನು ನಿನ್ನನ್ನು ಅಪಹರಿಸಿ ಸಮುದ್ರದಲ್ಲೆಸೆದನು. ಮೀನು ನುಂಗಿದ್ದರಿಂದ ಅದರ ಹೊಟ್ಟೆಯಲ್ಲಿದ್ದ ನೀನು ನನಗೆ ದೊರಕಿದೆ. ಹೇ ಕಾಂತ! ಅತ್ಯಂತ ವಾತ್ಸಲ್ಯವನ್ನಿಟ್ಟಿರುವ ನಿನ್ನ ತಾಯಿ ಈಗಲೂ ನಿನಗಾಗಿ ಅಳುತ್ತಿದ್ದಾಳೆ" ಎಂದಳು (16-17). ಈ ಮಾತನ್ನು ಕೇಳಿದ ಮೇಲೆ ಮಹಾಬಲನಾದ ಪ್ರದ್ಯುಮ್ನನು ಕ್ರೋಧಾಂಧನಾಗಿ ಶಂಬರಾಸುರನನ್ನು ಯುದ್ಧಕ್ಕೆ ಆಹ್ವಾನಿಸಿದನು. ಯುದ್ಧದಲ್ಲಿ ಆ ದೈತ್ಯನ ಸಮಸ್ತ ಸೈನ್ಯವನ್ನೂ ಸಂಹರಿಸಿ ಆತನ ಏಳು ಮಾಯಾವಿದ್ಯೆಗಳನ್ನು ಗೆದ್ದು ತನ್ನದೇ ಆದ ಎಂಟನೆಯ ಮಾಯಾವಿದ್ಯೆಯನ್ನು ಪ್ರಯೋಗಿಸಿದನು (18-19). ಆ ಮಾಯಾಶಕ್ತಿಯಿಂದ ಪ್ರದ್ಯುಮ್ನನು ಶಂಬರಾಸುರನನ್ನು ವಧಿಸಿ ಮಾಯಾವತಿಯೊಡನೆ ಗಗನಮಾರ್ಗಕ್ಕೆ ಹಾರಿ ಅವಳನ್ನು ಕರೆದುಕೊಂಡು ತನ್ನ

**ತಯಾ ಜಘಾನ ತಂ ದೈತ್ಯಂ ಮಾಯಯಾ ಕಾಲಶಂಬರಮ್।**
**ಉತ್ಪತ್ಯ ಚ ತಯಾ ಸಾರ್ಧಮಾಜಗಾಮ ಪಿತುಃ ಪುರಮ್॥** 20

**ಅಂತಃಪುರೇ ನಿಪತಿತಂ ಮಾಯಾವತ್ಯಾ ಸಮನ್ವಿತಮ್।**
**ತಂ ದೃಷ್ಟ್ವಾ ಕೃಷ್ಣಸಂಕಲ್ಪಾ ಬಭೂವುಃ ಕೃಷ್ಣಯೋಷಿತಃ॥** 21

**ರುಕ್ಮಿಣೀ ಸಾಽಭವತ್ ಪ್ರೇಮ್ಣಾ ಸಾಸ್ರದೃಷ್ಟಿರನಿಂದಿತಾ।**
**ಧನ್ಯಾಯಾಃ ಖಲ್ವಯಂ ಪುತ್ರೋ ವರ್ತತೇ ನವಯೌವನೇ॥** 22

**ಅಸ್ಮಿನ್ ವಯಸಿ ಪುತ್ರೋ ಮೇ ಪ್ರದ್ಯುಮ್ನೋ ಯದಿ ಜೀವತಿ।**
**ಸಭಾಗ್ಯಾ ಜನನೀ ವತ್ಸ ಸಾ ತ್ವಯಾ ಕಾ ವಿಭೂಷಿತಾ॥** 23

**ಅಥವಾ ಯಾದೃಶಃ ಸ್ನೇಹೋ ಮಮ ಯಾದೃಗ್ವಪುಸ್ತವ।**
**ಹರೇರಪತ್ಯಂ ಸುವ್ಯಕ್ತಂ ಭವಾನ್ ವತ್ಸ ಭವಿಷ್ಯತಿ॥** 24

*ಶ್ರೀಪರಾಶರ ಉವಾಚ:*

**ಏತಸ್ಮಿನ್ನಂತರೇ ಪ್ರಾಪ್ತಸ್ಸಹ ಕೃಷ್ಣೇನ ನಾರದಃ।**
**ಅಂತಃಪುರಚರಾಂ ದೇವೀಂ ರುಕ್ಮಿಣೀಂ ಪ್ರಾಹ ಹರ್ಷಯನ್॥** 25

---

ತಂದೆಯ ನಗರವಾದ ದ್ವಾರಕೆಗೆ ಬಂದನು (20). ಮಾಯಾವತಿಯೊಡನೆ ಅಂತಃಪುರಕ್ಕೆ ಬಂದಿಳಿದ ಪ್ರದ್ಯುಮ್ನನನ್ನು ನೋಡಿ ಶ್ರೀಕೃಷ್ಣನ ಅಂತಃಪುರ ಸ್ತ್ರೀಯರು ಶ್ರೀಕೃಷ್ಣನೆಂದೇ ಭ್ರಮಿಸಿದರು! ಆದರೆ ಸಾಧ್ವಿಯಾದ ರುಕ್ಮಿಣಿಯು ಆತನನ್ನು ನೋಡಿ ಕಣ್ಣಲ್ಲಿ ನೀರು ತುಂಬಿಕೊಂಡು "ಯಾವಳೋ ಪುಣ್ಯಾತ್ಮಳ ಪುತ್ರನಿವನು! ನವಯೌವನಕ್ಕೆ ಬಂದಿದ್ದಾನೆ. ನನ್ನ ಪುತ್ರನಾದ ಪ್ರದ್ಯುಮ್ನನು ಬದುಕಿದ್ದರೆ ಇಷ್ಟೇ ವಯಸ್ಸಾಗಿರುತ್ತದೆ!" ಎಂದುಕೊಂಡಳು (21-23).ಅನಂತರ "ವತ್ಸ, ನಿನ್ನ ತಾಯಿ ಭಾಗ್ಯಶಾಲಿನಿ. ನಿನ್ನಿಂದ ಭೂಷಿತಳಾದ ಆ ತಾಯಿ ಯಾರು? ನಿನ್ನಲ್ಲಿ ನನಗೆ ಹೊಮ್ಮುತ್ತಿರುವ ಸ್ನೇಹವನ್ನೂ ನಿನ್ನ ಆಕೃತಿಯನ್ನು ಕಂಡರೆ, ವತ್ಸ, ನಿಶ್ಚಯವಾಗಿ ಶ್ರೀಕೃಷ್ಣನ ಪುತ್ರನೇ ಹೌದು!" ಎಂದಳು (24). ಈ ಸಮಯಕ್ಕೆ ಸರಿಯಾಗಿ ಶ್ರೀಕೃಷ್ಣನೊಡನೆ ನಾರದರು ಆಗಮಿಸಿದರು! ಅಂತಃ ಪುರಸ್ತ್ರೀಯರೊಡನಿದ್ದ ರುಕ್ಮಿಣೀದೇವಿಗೆ ಹರ್ಷವಾಗುವಂತೆ ನಾರದರು "ಹೇ

**ಏಷ ತೇ ತನಯಃ ಸುಭ್ರು ಹತ್ವಾ ಶಂಬರಮಾಗತಃ।**
**ಹೃತೋ ಯೇನಾಭವದ್ಬಾಲೋ ಭವತ್ಯಾಸ್ಸೂತಿಕಾಗೃಹಾತ್॥ 26**

**ಇಯಂ ಮಾಯಾವತೀ ಭಾರ್ಯಾ ತನಯಸ್ಯಾಸ್ಯ ತೇ ಸತೀ।**
**ಶಂಬರಸ್ಯ ನ ಭಾರ್ಯೇಯಂ ಶ್ರೂಯತಾಮತ್ರ ಕಾರಣಮ್॥ 27**

**ಮನ್ಮಥೇ ತು ಗತೇ ನಾಶಂ ತದುದ್ಭವಪರಾಯಣಾ।**
**ಶಂಬರಂ ಮೋಹಯಾಮಾಸ ಮಾಯಾರೂಪೇಣ ರೂಪಿಣೀ॥ 28**

**ವಿಹಾರಾದ್ಯುಪಭೋಗೇಷು ರೂಪಂ ಮಾಯಾಮಯಂ ಶುಭಮ್।**
**ದರ್ಶಯಾಮಾಸ ದೈತ್ಯಸ್ಯ ಯಸ್ಯೇಯಂ ಮದಿರೇಕ್ಷಣಾ॥ 29**

**ಕಾಮೋಽವತೀರ್ಣಃ ಪುತ್ರಸ್ತೇ ತಸ್ಯೇಯಂ ದಯಿತಾ ರತಿಃ।**
**ವಿಶಂಕಾ ನಾತ್ರ ಕರ್ತವ್ಯಾ ಸ್ನುಷೇಯಂ ತವ ಶೋಭನೇ॥ 30**

---

ಸೌಮ್ಯೆ, ಈತನು ನಿನ್ನ ಪುತ್ರನೇ! ಶಂಬರಾಸುರನನ್ನು ಸಂಹರಿಸಿ ಬಂದಿದ್ದಾನೆ. ಆ ಅಸುರನು ನಿನ್ನ ಸೂತಿಕಾಗೃಹದಿಂದ ಶಿಶುವನ್ನು ಅಪಹರಿಸಿದ್ದನು (25-26). ಪತಿವ್ರತೆಯಾದ ಈ ಮಾಯಾವತಿ ನಿನ್ನ ಪುತ್ರನ ಮಡದಿಯೆಂದು ತಿಳಿ. ಇವಳು ಶಂಬರಾಸುರನ ಮಡದಿಯಲ್ಲ. ಕಾರಣವೇನೆಂಬುದನ್ನು ಕೇಳು. (ರುದ್ರನ ಕೋಪಾಗ್ನಿಯಿಂದ) ಮನ್ಮಥನು ನಾಶವಾದಮೇಲೆ, ಆತನ ಪುನರ್ಜನ್ಮವನ್ನು ಪ್ರತೀಕ್ಷಿಸುತ್ತಿದ್ದ ರತಿಯು* ಮಾಯಾಮಯವಾದ ರೂಪವನ್ನು ಧರಿಸಿ ಶಂಬರಾ ಸುರನನ್ನು ಮೋಹಗೊಳಿಸಿದಳು (27-28). ವಿಹಾರಾದಿ ಭೋಗಕಾಲಗಳಲ್ಲಿ ಈ ಮದಿರೇಕ್ಷಣೆಯು ಮಾಯಿಕವಾದ ರೂಪವನ್ನು ಧರಿಸಿ ಆ ದೈತ್ಯನಿಗೆ ಕಾಣಿಸಿ ಕೊಳ್ಳುತ್ತಿದ್ದಳು. ದೇವಿ, ಆ ಮನ್ಮಥನು ನಿನಗೆ ಪುತ್ರನಾಗಿ ಹುಟ್ಟಿದ್ದಾನೆ. ಅವನ ಕಾಂತೆಯಾದ ರತಿಯೇ ಈ ಮಾಯಾವತಿ. ಇದರಲ್ಲಿ ಯಾವ ಸಂದೇಹವೂ ಬೇಡ. ಇವಳನ್ನು ನಿನ್ನ ಸೊಸೆಯೆಂದು ತಿಳಿ" ಎಂದರು (29-30). ಆಗ

---

* ರತಿಯು ಶಂಬರಾಸುರನ ಬಳಿ ಮಾಯಾವತಿಯೆಂಬ ಹೆಸರಿನಿಂದ ಏಕೆ ಇದ್ದಳೆಂಬುದು ಎಲ್ಲಿಯೂ ಸ್ಪಷ್ಟವಾಗಿಲ್ಲ. ಪುತ್ರಹೀನೆಯಾಗಿದ್ದ ಮಾಯಾವತಿಗೆ ಪ್ರದ್ಯುಮ್ನನನ್ನು ಶಂಬರಾಸುರನೇ ತಂದುಕೊಟ್ಟು ಸಾಕುವಂತೆ ಹೇಳಿದುದಾಗಿ ಹರಿವಂಶ ದಲ್ಲಿದೆ. ಧರ್ಮಪುತ್ರನಾದ ಕಾಮನಿಗೆ ರತಿಯಲ್ಲಿ ಹರ್ಷನೆಂಬ ಮಗನು ಜನಿಸಿದನೆಂದು ಹಿಂದೆ ಹೇಳಿದೆ (ನೋಡಿ ವಿಷ್ಣು: 1-7-31).

**ತತೋ ಹರ್ಷಸಮಾವಿಷ್ಟೌ ರುಕ್ಮಿಣೀಕೇಶವೌ ತದಾ।**
**ನಗರೀ ಚ ಸಮಸ್ತಾ ಸಾ ಸಾಧು ಸಾಧ್ವಿತ್ಯಭಾಷತ॥** 31

**ಚಿರಂ ನಷ್ಟೇನ ಪುತ್ರೇಣ ಸಂಗತಾಂ ಪ್ರೇಕ್ಷ್ಯ ರುಕ್ಮಿಣೀಮ್।**
**ಅವಾಪ ವಿಸ್ಮಯಂ ಸರ್ವೋ ದ್ವಾರವತ್ಯಾಂ ತದಾ ಜನಃ॥** 32

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಸಪ್ತವಿಂಶೋऽಧ್ಯಾಯಃ

---

ರುಕ್ಮಿಣಿಯೂ ಶ್ರೀಕೃಷ್ಣನೂ ಆನಂದಪರವಶರಾದರು. ಈ ವಿಷಯವನ್ನು ತಿಳಿದು ಸಮಸ್ತ ಪೌರಜನರೂ 'ಸಾಧು, ಸಾಧು' ಎಂದು ಹರ್ಷೋದ್ಗಾರ ಮಾಡಿದರು. ಚಿರಕಾಲ ಕಣ್ಮರೆಯಾಗಿದ್ದ ಮಗನು ದೊರಕಿದ ಮೇಲೆ, ಪುತ್ರಸಮೇತಳಾದ ರುಕ್ಮಿಣಿಯನ್ನು ಕಂಡು ದ್ವಾರಕೆಯಲ್ಲಿದ್ದ ಸಮಸ್ತ ಜನರೂ ವಿಸ್ಮಿತರಾದರು (31-32).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.



## ಅಷ್ಟಾವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಚಾರುದೇಷ್ಣಂ ಸುದೇಷ್ಣಂ ಚ ಚಾರುದೇಹಂ ಚ ವೀರ್ಯವಾನ್।**
**ಸುಷೇಣಂ ಚಾರುಗುಪ್ತಂ ಚ ಭದ್ರಚಾರುಂ ತಥಾ ಪರಮ್॥** 1

**ಚಾರುವಿಂದಂ ಸುಚಾರುಂ ಚ ಚಾರುಂ ಚ ಬಲಿನಾಂ ವರಮ್।**
**ರುಕ್ಮಿಣ್ಯಜನಯತ್ಪುತ್ರಾನ್ ಕನ್ಯಾಂ ಚಾರುಮತೀಂ ತಥಾ॥** 2

**ಅನ್ಯಾಶ್ಚ ಭಾರ್ಯಾಃ ಕೃಷ್ಣಸ್ಯ ಬಭೂವುಃ ಸಪ್ತ ಶೋಭನಾಃ।**
**ಕಾಲಿಂದೀ ಮಿತ್ರವಿಂದಾ ಚ ಸತ್ಯಾ ನಾಗ್ನಜಿತೀ ತಥಾ॥** 3

---

## ಅಧ್ಯಾಯ 28

ಪ್ರದ್ಯುಮ್ನನ ಪುತ್ರನಾದ ಅನಿರುದ್ಧನಿಗೆ ರುಕ್ಮಿಯ ಪೌತ್ರಿಯೊಡನೆ ವಿವಾಹ;
ಬಲರಾಮನು ರುಕ್ಮಿಯನ್ನು ಕೊಲ್ಲುವುದು.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ರುಕ್ಮಿಣಿಗೆ ಪ್ರದ್ಯುಮ್ನನಲ್ಲದೆ ಚಾರುದೇಷ್ಣ, ಸುದೇಷ್ಣ, ವೀರನಾದ ಚಾರುದೇಹ, ಸುಷೇಣ, ಚಾರುಗುಪ್ತ, ಭದ್ರಚಾರು, ಚಾರುವಿಂದ, ಸುಚಾರು, ಬಲಿಷ್ಠನಾದ ಚಾರು—ಎಂಬ ಪುತ್ರರೂ ಚಾರುಮತಿಯೆಂಬ ಪುತ್ರಿಯೂ ಜನಿಸಿದರು (1-2). ಶ್ರೀಕೃಷ್ಣನಿಗೆ ರುಕ್ಮಿಣಿಯಲ್ಲದೆ, ಇನ್ನೂ ಏಳು* ಮಂದಿ ರಾಣಿಯರಿದ್ದರು. ಅವರು ಯಾರೆಂದರೆ—ಕಾಲಿಂದೀ, ಮಿತ್ರವಿಂದಾ, ನಗ್ನಜಿತ್ತಿನ ಮಗಳಾದ ಸತ್ಯಾ, ಜಾಂಬವತೀದೇವಿ, ಕಾಮರೂಪಿಣಿಯಾದ ರೋಹಿಣಿ, ಮದ್ರರಾಜಪುತ್ರಿಯೂ

* ಮುಂದೆ ಉಕ್ತರಾದವರು ಎಂಟು ಮಂದಿ! ಜಾಂಬವತಿಯೇ ರೋಹಿಣಿಯೆಂದೂ ಇಬ್ಬರಲ್ಲವೆಂದೂ ಹೇಳಿ ಕೆಲವರು ಈ ವಿರೋಧವನ್ನು ಪರಿಹರಿಸುತ್ತಾರೆ. ಆದರೆ 32 ನೇ ಅಧ್ಯಾಯದಲ್ಲಿ ಜಾಂಬವತಿಗಿಂತ ರೋಹಿಣಿ ಬೇರೆ ಎಂಬುದು ಸ್ಪಷ್ಟವಾಗಿದೆ. ರುಕ್ಮಿಣಿಯೂ ಸೇರಿ ಅಷ್ಟಮಹಿಷಿಯರೆಂದು ಪ್ರಸಿದ್ಧಿ. ಇವರಲ್ಲಿ ರೋಹಿಣಿ ಮಹಿಷಿಯಲ್ಲ. ಮಹಿಷಿಗೆ ಸಮಾನ ಎಂದು ಕೆಲವರ ಹೇಳಿಕೆ. ಚಾರುಹಾಸಿನೀ ಎಂಬುದು ರುಕ್ಮಿಣಿಯ ಇನ್ನೊಂದು ಹೆಸರಾಗಿರಬಹುದು (ನೋಡಿ: 4-15-35) ಇಲ್ಲಿ ಯಾವುದೋ ಪಾಠದೋಷ ಉಂಟು.

**ದೇವೀ ಜಾಂಬವತೀ ಚಾಪಿ ರೋಹಿಣೀ ಕಾಮರೂಪಿಣೀ।**
**ಮದ್ರರಾಜಸುತಾ ಚಾನ್ಯಾ ಸುಶೀಲಾ ಶೀಲಮಂಡನಾ॥** 4

**ಸಾತ್ರಾಜಿತೀ ಸತ್ಯಭಾಮಾ ಲಕ್ಷ್ಮಣಾ ಚಾರುಹಾಸಿನೀ।**
**ಷೋಡಶಾಸನ್ ಸಹಸ್ರಾಣಿ ಸ್ತ್ರೀಣಾಮನ್ಯಾನಿ ಚಕ್ರಿಣಃ॥** 5

**ಪ್ರದ್ಯುಮ್ನೋಽಪಿ ಮಹಾವೀರ್ಯೋ ರುಕ್ಮಿಣಸ್ತನಯಾಂ ಶುಭಾಮ್।**
**ಸ್ವಯಂವರೇ ತಾಂ ಜಗ್ರಾಹ ಸಾ ಚ ತಂ ತನಯಂ ಹರೇಃ॥** 6

**ತಸ್ಯಾಮಸ್ಯಾಭವತ್ಪುತ್ರೋ ಮಹಾಬಲಪರಾಕ್ರಮಃ।**
**ಅನಿರುದ್ಧೋ ರಣೇಽರುದ್ಧವೀರ್ಯೋದಧಿರರಿಂದಮಃ॥** 7

**ತಸ್ಯಾಪಿ ರುಕ್ಮಿಣಃ ಪೌತ್ರೀಂ ವರಯಾಮಾಸ ಕೇಶವಃ।**
**ದೌಹಿತ್ರಾಯ ದದೌ ರುಕ್ಮೀ ತಾಂ ಸ್ಪರ್ಧನ್ನಪಿ ಚಕ್ರಿಣಾ॥** 8

**ತಸ್ಯಾ ವಿವಾಹೇ ರಾಮಾದ್ಯಾ ಯಾದವಾ ಹರಿಣಾ ಸಹ।**
**ರುಕ್ಮಿಣೋ ನಗರಂ ಜಗ್ಮುರ್ನಾಮ್ನಾ ಭೋಜಕಟಂ ದ್ವಿಜ॥** 9

---

ಶೀಲವತಿಯೂ ಆದ ಸುಶೀಲಾ (ಭದ್ರಾ), ಸತ್ರಾಜಿತ್ತಿನ ಮಗಳಾದ ಸತ್ಯಭಾಮಾ ಮತ್ತು ಚಾರುಹಾಸಿನಿಯಾದ ಲಕ್ಷ್ಮಣಾ. ಇವರಲ್ಲದೆ ಶ್ರೀಕೃಷ್ಣನಿಗೆ ಹದಿನಾರು ಸಾವಿರ ಮಡದಿಯರಿದ್ದರು (3-5). ಮಹಾವೀರನಾದ ಪ್ರದ್ಯುಮ್ನನು ರುಕ್ಮಿಯ ಸುಂದರಿಯಾದ ಪುತ್ರಿಯನ್ನೂ ಅವಳು ಪ್ರದ್ಯುಮ್ನನನ್ನೂ ಸ್ವಯಂವರದಲ್ಲಿ ಪರಸ್ಪರ ವರಿಸಿ ಮದುವೆಯಾದರು. ಪ್ರದ್ಯುಮ್ನನಿಗೆ ಆ ಪತ್ನಿಯಲ್ಲಿ ಅತ್ಯಂತ ಬಲಿಷ್ಠನೂ ಸಂಗ್ರಾಮದಲ್ಲಿ ಎಣೆಯಿಲ್ಲದ ಸಾಮರ್ಥ್ಯಸಾಗರನೂ ವೈರಿ ವಿಧ್ವಂಸಕನೂ ಆದ ಅನಿರುದ್ಧನೆಂಬ ಪುತ್ರನು ಜನಿಸಿದನು (6-7). ಅನಿರುದ್ಧನಿಗೆ ರುಕ್ಮಿಯ ಪೌತ್ರಿಯನ್ನು ಮದುವೆ ಮಾಡಿಕೊಡಲೆಂದು ಶ್ರೀಕೃಷ್ಣನು ಬಯಸಿದನು. ಆಗ ಶ್ರೀಕೃಷ್ಣನೊಡನೆ ವೈರವಿದ್ದರೂ ಸಹ ತನ್ನ ಮಗಳ ಮಗನಾದ ಅನಿರುದ್ಧನಿಗೆ ತನ್ನ ಪೌತ್ರಿಯನ್ನು* ವಿವಾಹಮಾಡಿಕೊಡಲು ರುಕ್ಮಿಯು ಒಪ್ಪಿದನು (8-9).

* ರುಕ್ಮಿಯ ಮಗಳ ಹೆಸರು ರುಕ್ಮವತಿ. ಇವಳು ಪ್ರದ್ಯುಮ್ನನ ಹೆಂಡತಿ. ಅನಿರುದ್ಧನ ಹೆಂಡತಿಯ ಹೆಸರು ರೋಚನಾ ಎಂದು ಭಾಗವತದಲ್ಲಿದೆ (10-61-18, 25).

**ವಿವಾಹೇ ತತ್ರ ನಿರ್ವೃತ್ತೇ ಪ್ರಾದ್ಯುಮ್ನೇಸ್ತು ಮಹಾತ್ಮನಃ।**
**ಕಲಿಂಗರಾಜಪ್ರಮುಖಾ ರುಕ್ಮಿಣಂ ವಾಕ್ಯಮಬ್ರುವನ್॥ 10**

**ಅನಕ್ಷಜ್ಞೋ ಹಲೀ ದ್ಯೂತೇ ತಥಾಸ್ಯ ವ್ಯಸನಂ ಮಹತ್।**
**ನ ಜಯಾಮೋ ಬಲಂ ಕಸ್ಮಾದ್ ದ್ಯೂತೇನೈನಂ ಮಹಾಬಲಮ್॥ 11**

*ಶ್ರೀಪರಾಶರ ಉವಾಚ:*

**ತಥೇತಿ ತಾನಾಹ ನೃಪಾನ್ ರುಕ್ಮೀ ಬಲಮದಾನ್ವಿತಃ।**
**ಸಭಾಯಾಂ ಸಹ ರಾಮೇಣ ಚಕ್ರೇ ದ್ಯೂತಂ ಚ ವೈ ತದಾ॥ 12**

**ಸಹಸ್ರಮೇಕಂ ನಿಷ್ಕಾಣಾಂ ರುಕ್ಮಿಣಾ ವಿಜಿತೋ ಬಲಃ।**
**ದ್ವಿತೀಯೇಽಪಿ ಪಣೇ ಚಾನ್ಯತ್ಸಹಸ್ರಂ ರುಕ್ಮಿಣಾ ಜಿತಃ॥ 13**

**ತತೋ ದಶಸಹಸ್ರಾಣಿ ನಿಷ್ಕಾಣಾಂ ಪಣಮಾದದೇ।**
**ಬಲಭದ್ರೋಽಜಯತ್ತಾನಿ ರುಕ್ಮೀ ದ್ಯೂತವಿದಾಂ ವರಃ॥ 14**

---

ಮಹಾತ್ಮನೂ ಪ್ರದ್ಯುಮ್ನಪುತ್ರನೂ ಆದ ಅನಿರುದ್ಧನ ವಿವಾಹವು ನಡೆದಮೇಲೆ, ಸಭೆಯಲ್ಲಿ ನೆರೆದಿದ್ದ ಕಲಿಂಗರಾಜನೇ ಮೊದಲಾದ ಪ್ರಮುಖರು ರುಕ್ಮಿಯನ್ನು ಕುರಿತು "ಮಿತ್ರ, ಈ ಬಲರಾಮನಿಗೆ ದ್ಯೂತಕ್ರೀಡೆ ಏನೂ ಗೊತ್ತಿಲ್ಲ. ಆದರೆ ಅದರಲ್ಲಿ ಬಹಳ ಆಸಕ್ತಿ ಇವನಿಗಿದೆ! ಜೂಜಿನಲ್ಲಾದರೂ ನಾವು ಈತನನ್ನು ಏಕೆ ಗೆಲ್ಲಬಾರದು!" ಎಂದು ಹುರಿದುಂಬಿಸಿದರು (10-11). ಮದಾಂಧನಾದ ರುಕ್ಮಿಯು 'ಆಗಲಿ!' ಎಂದು ನುಡಿದು ಸಭೆಯಲ್ಲಿ ಬಲರಾಮನೊಂದಿಗೆ ಪಗಡೆಯ ಜೂಜನ್ನಾರಂಭಿಸಿದನು. ಒಂದು ಸಾವಿರ ನಿಷ್ಕಗಳನ್ನು (ಸುವರ್ಣ ನಾಣ್ಯಗಳನ್ನು) ಪಣವಾಗಿಟ್ಟು ಆಡಲಾಗಿ, ರುಕ್ಮಿಯು ಬಲರಾಮನನ್ನು ಸೋಲಿಸಿ ಆ ಹಣವನ್ನು ಗೆದ್ದುಕೊಂಡನು. ಎರಡನೆಯ ಆಟದಲ್ಲಿಯೂ ಬಲರಾಮನು ಒಂದು ಸಾವಿರ ನಿಷ್ಕಗಳನ್ನು ಪಣವಾಗಿಟ್ಟು ಸೋತನು (12-13). ಅನಂತರ ಬಲರಾಮನು ಹತ್ತುಸಾವಿರ ನಿಷ್ಕಗಳನ್ನು ಪಣವಾಗಿಟ್ಟನು. ದ್ಯೂತದಲ್ಲಿ ನಿಪುಣನಾದ ರುಕ್ಮಿಯು ಅದನ್ನೂ ಗೆದ್ದನು. ಮೈತ್ರೇಯ, ಆಗ ಕಳಿಂಗರಾಜನು ಹಲ್ಲುಕಿರಿದು ಗಟ್ಟಿಯಾಗಿ ನಕ್ಕನು. ಮೂಢನಾದ ರುಕ್ಮಿಯೂ ಸಹ ಮದೋದ್ಧತ

**ತತೋ ಜಹಾಸ ಸ್ವನವತ್ಕಲಿಂಗಾಧಿಪತಿರ್ದ್ವಿಜ।**
**ದಂತಾನ್ ವಿದರ್ಶಯನ್ ಮೂಢೋ ರುಕ್ಮೀ ಚಾಹ ಮದೋದ್ಧತಃ॥ 15**

**ಅವಿದ್ಯೋऽಯಂ ಮಯಾ ದ್ಯೂತೇ ಬಲಭದ್ರಃ ಪರಾಜಿತಃ।**
**ಮುಧೈವಾಕ್ಷಾವಲೇಪಾಂಧೋ ಯೋऽವಮೇನೇऽಕ್ಷಕೋವಿದಾನ್॥16**

**ದೃಷ್ಟ್ವಾ ಕಲಿಂಗರಾಜಂ ತಂ ಪ್ರಕಾಶದಶನಾನನಮ್।**
**ರುಕ್ಮಿಣಂ ಚಾಪಿ ದುರ್ವಾಕ್ಯಂ ಕೋಪಂ ಚಕ್ರೇ ಹಲಾಯುಧಃ॥ 17**

**ತತಃ ಕೋಪಪರೀತಾತ್ಮಾ ನಿಷ್ಕಕೋಟಿಂ ಸಮಾದದೇ।**
**ಗ್ಲಹಂ ಜಗ್ರಾಹ ರುಕ್ಮೀ ಚ ತದರ್ಥೇऽಕ್ಷಾನಪಾತಯತ್॥ 18**

**ಅಜಯದ್ಬಲದೇವಸ್ತಂ ಪ್ರಾಹೋಚ್ಚೈರ್ವಿಜಿತಂ ಮಯಾ।**
**ಮಯೇತಿ ರುಕ್ಮೀ ಪ್ರಾಹೋಚ್ಚೈರಲೀಕೋಕ್ತೇರಲಂ ಬಲ॥ 19**

**ತ್ವಯೋಕ್ತೋऽಯಂ ಗ್ಲಹಸ್ಸತ್ಯಂ ನ ಮಯ್ಯೈಷೋऽನುಮೋದಿತಃ।**
**ಏವಂ ತ್ವಯಾ ಚೇದ್ವಿಜಿತಂ ವಿಜಿತಂ ನ ಮಯಾ ಕಥಮ್॥ 20**

---

ನಾಗಿ ಹೇಳಿದನು (14-15): "ಈ ಬಲರಾಮನಿಗೆ ಪಗಡೆಯಾಟದ ಪರಿಚಯವೇ ಇಲ್ಲ! ಸೋತುಹೋದ! ತಾನು ಅಕ್ಷ ಕ್ರೀಡಾಕೋವಿದನೆಂದು ಸುಳ್ಳುಸುಳ್ಳಾಗಿ ಜಂಭ ಹೊಡೆಯುತ್ತ ಕುರುಡನಾಗಿದ್ದಾನೆ! ಅಕ್ಷನಿಪುಣರನ್ನು ಅವಮಾನದಿಂದ ಕಾಣುತ್ತಾನೆ!" ಎಂದು ಹಂಗಿಸಿ ಮಾತಾಡಿದನು (16). ಕಳಿಂಗರಾಜನು ಹಲ್ಲುತೋರಿಸಿ ಗಟ್ಟಿಯಾಗಿ ನಕ್ಕದ್ದನ್ನೂ ರುಕ್ಮಿಯು ಹಂಗಿಸಿ ದುರ್ವಚನಗಳನ್ನಾಡಿದ್ದನ್ನೂ ನೋಡಿ ಬಲರಾಮನು ಕ್ರುದ್ಧನಾದನು. ಅವನು ರೋಷಾವಿಷ್ಟನಾಗಿ ಒಂದು ಕೋಟಿ ಸುವರ್ಣನಾಣ್ಯಗಳನ್ನು ಪಣವಾಗಿ ಒಡ್ಡಿ ದಾಳವನ್ನು ಹಾಕಿದನು. ರುಕ್ಮಿಯೂ ದಾಳವನ್ನೆಸೆದು ಆಡಿದನು (17). ಅದರಲ್ಲಿ ಬಲರಾಮನಿಗೆ ಜಯವಾಯಿತು. ಅವನು "ನಾನು ಜಯಿಸಿದೆ" ಎಂದು ಗಟ್ಟಿಯಾಗಿ ಹೇಳಲು, ಅಷ್ಟೇ ಗಟ್ಟಿಯಾಗಿ ರುಕ್ಮಿಯೂ "ನಾನು ಜಯಿಸಿದೆ!" ಎಂದು ಕೂಗಿದನು. ಮತ್ತು "ಬಲರಾಮ, ಸುಳ್ಳುಹೇಳಬೇಡ. ಪಣವನ್ನು ನೀನು ಒಡ್ಡಿದುದು ಹೌದು, ಆದರೆ ನಾನು ಅದಕ್ಕೆ ಒಪ್ಪಿಕೊಳ್ಳಲಿಲ್ಲವಲ್ಲ! ಹೀಗಿರುವಾಗ ನೀನು ಜಯಿಸಿದ್ದು ಹೌದಾದರೆ, ನಾನು ಜಯಿಸಿದ್ದು ಏಕಲ್ಲ?" ಎಂದನು

*ಶ್ರೀಪರಾಶರ ಉವಾಚ:*

**ಅಥಾಂತರಿಕ್ಷೇ ವಾಗುಚ್ಚೈಃ ಪ್ರಾಹ ಗಂಭೀರನಾದಿನೀ।**
**ಬಲದೇವಸ್ಯ ತಂ ಕೋಪಂ ವರ್ದ್ಧಯಂತೀ ಮಹಾತ್ಮನಃ॥** 21

**ಜಿತಂ ಬಲೇನ ಧರ್ಮೇಣ ರುಕ್ಮಿಣಾ ಭಾಷಿತಂ ಮೃಷಾ।**
**ಅನುಕ್ತ್ವಾಪಿ ವಚಃ ಕಿಂಚಿತ್ಕೃತಂ ಭವತಿ ಕರ್ಮಣಾ॥** 22

**ತತೋ ಬಲಃ ಸಮುತ್ಥಾಯ ಕೋಪಸಂರಕ್ತಲೋಚನಃ।**
**ಜಘಾನಾಷ್ಟಾಪದೇನೈವ ರುಕ್ಮಿಣಂ ಸ ಮಹಾಬಲಃ॥** 23

**ಕಲಿಂಗರಾಜಂ ಚಾದಾಯಾ ವಿಸ್ಫುರಂತಂ ಬಲಾದ್ಬಲಃ।**
**ಬಭಂಜ ದಂತಾನ್ ಕುಪಿತೋ ಯೈಃ ಪ್ರಕಾಶಂ ಜಹಾಸ ಸಃ॥** 24

**ಆಕೃಷ್ಯ ಚ ಮಹಾಸ್ತಂಭಂ ಜಾತರೂಪಮಯಂ ಬಲಃ।**
**ಜಘಾನ ತಾನ್ಯೇ ತತ್ಪಕ್ಷೇ ಭೂಭೃತಃ ಕುಪಿತೋ ಭೃಶಮ್॥** 25

---

(18-20). ಆಗ ಬಲರಾಮನ ಕ್ರೋಧವನ್ನು ವರ್ಧಿಸುತ್ತ ಅಂತರಿಕ್ಷದಲ್ಲಿ ಗಂಭೀರಸ್ವರದಿಂದ "ನ್ಯಾಯವಾಗಿ ಬಲರಾಮನು ಜಯಿಸಿದ್ದಾನೆ. ರುಕ್ಮಿ ಹೇಳುವುದು ಸತ್ಯವಲ್ಲ. (ಪಣವನ್ನು ಒಪ್ಪಿಕೊಳ್ಳುವ ಮಾತನ್ನಾಡದಿದ್ದರೂ) ಅವನು (ದಾಳವನ್ನೆಸೆಯುವ) ಕ್ರಿಯೆಯಿಂದಲೇ ಒಪ್ಪಿಗೆಯನ್ನು ನೀಡಿದ್ದಾನೆ" ಎಂದು ಸ್ಪಷ್ಟವಾಗಿ ಅಶರೀರವಾಣಿಯಾಯಿತು (21-22). ಆಗ ಮಹಾಬಲನಾದ ಬಲಭದ್ರನು ರೇಗಿ ಕ್ರೋಧತಾಮ್ರಾಕ್ಷನಾಗಿ ಎದ್ದು ದ್ಯೂತದ ಮಣೆಯಿಂದಲೇ ರುಕ್ಮಿಯನ್ನು ಕುಟ್ಟಿ ಕೊಂದುಹಾಕಿದನು. ಎಗರಾಡುತ್ತಿದ್ದ ಕಳಿಂಗರಾಜನನ್ನು ಬಲಾತ್ಕಾರವಾಗಿ ಹಿಡಿದು, ನಗುವಾಗ ಯಾವ ಹಲ್ಲುಗಳನ್ನು ಕಿರಿದು ತೋರಿಸಿದ್ದನೋ ಆ ಹಲ್ಲುಗಳನ್ನು ಮುರಿದು ಹಾಕಿದನು! (23-24). ಅಲ್ಲದೆ ಬಲಭದ್ರನು ರೋಷಾವೇಶದಿಂದ ಸುವರ್ಣಮಯವಾದ ಒಂದು ಮಹಾ ಸ್ತಂಭವನ್ನೆತ್ತಿಕೊಂಡು ಅವರ ಪಕ್ಷಕ್ಕೆ ಸೇರಿದ್ದ ರಾಜರನ್ನು ಬಡಿದು ಕೊಂದನು. ಮೈತ್ರೇಯ, ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಬಲರಾಮನ ಕೋಪಾ

**ತತೋ ಹಾಹಾಕೃತಂ ಸರ್ವಂ ಪಲಾಯನಪರಂ ದ್ವಿಜ।**
**ತದ್ರಾಜಮಂಡಲಂ ಭೀತಂ ಬಭೂವ ಕುಪಿತೇ ಬಲೇ॥** 26

**ಬಲೇನ ನಿಹತಂ ದೃಷ್ಟ್ವಾ ರುಕ್ಮಿಣಂ ಮಧುಸೂದನಃ।**
**ನೋವಾಚ ಕಿಂಚಿನ್ಮೈತ್ರೇಯ ರುಕ್ಮಿಣೀಬಲಯೋರ್ಭಯಾತ್॥** 27

**ತತೋಽನಿರುದ್ಧಮಾದಾಯ ಕೃತದಾರಂ ದ್ವಿಜೋತ್ತಮ।**
**ದ್ವಾರಕಾಮಾಜಗಾಮಾಥ ಯದುಚಕ್ರಂ ಚ ಕೇಶವಃ॥** 28

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಅಷ್ಟಾವಿಂಶೋಽಧ್ಯಾಯಃ

---

ವೇಶವನ್ನು ಕಂಡು ಹೆದರಿ ಇತರ ರಾಜರು ಚೆಲ್ಲಾಪಿಲ್ಲಿಯಾಗಿ ಓಡಿಹೋದರು (25-26). ಹೀಗೆ ಬಲರಾಮನು ರುಕ್ಮಿಯನ್ನು ವಧಿಸಿದ ಮೇಲೆ ಶ್ರೀಕೃಷ್ಣನು ಯಾವ ಮಾತನ್ನೂ ಆಡಲಿಲ್ಲ. ಅತ್ತ ಬಲರಾಮನು ಏನು ಮಾಡುತ್ತಾನೋ ಇತ್ತ ರುಕ್ಮಿಣಿಯು ಏನು ಹೇಳುತ್ತಾಳೋ ಎಂಬ ಭಯದಿಂದ ಸುಮ್ಮನಾದನು. ಅನಂತರ ಪತ್ನೀಸಮೇತನಾದ ಅನಿರುದ್ಧನನ್ನು ಕರೆದುಕೊಂಡು ಶ್ರೀಕೃಷ್ಣನೂ ಯಾದವರೂ ದ್ವಾರಕೆಗೆ ಬಂದರು (27-28).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.



## ಏಕೋನತ್ರಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ದ್ವಾರವತ್ಯಾಂ ಸ್ಥಿತೇ ಕೃಷ್ಣೇ ಶಕ್ರಸ್ತ್ರಿಭುವನೇಶ್ವರಃ।**
**ಆಜಗಾಮಾಥ ಮೈತ್ರೇಯ ಮತ್ತೈರಾವತಪೃಷ್ಠಗಃ॥** 1

**ಪ್ರವಿಶ್ಯ ದ್ವಾರಕಾಂ ಸೋಽಥ ಸಮೇತ್ಯ ಹರಿಣಾ ತತಃ।**
**ಕಥಯಾಮಾಸ ದೈತ್ಯಸ್ಯ ನರಕಸ್ಯ ವಿಚೇಷ್ಟಿತಮ್॥** 2

**ತ್ವಯಾ ನಾಥೇನ ದೇವಾನಾಂ ಮನುಷ್ಯತ್ವೇಽಪಿ ತಿಷ್ಠತಾ।**
**ಪ್ರಶಮಂ ಸರ್ವದುಃಖಾನಿ ನೀತಾನಿ ಮಧುಸೂದನ॥** 3

**ತಪಸ್ವಿವ್ಯಸನಾರ್ಥಾಯ ಸೋಽರಿಷ್ಟೋ ಧೇನುಕಸ್ತಥಾ।**
**ಪ್ರವೃತ್ತೋ ಯಸ್ತಥಾ ಕೇಶೀ ತೇ ಸರ್ವೇ ನಿಹತಾಸ್ತ್ವಯಾ॥** 4

---

## ಅಧ್ಯಾಯ 29

ನರಕಾಸುರನನ್ನು ಸಂಹರಿಸಬೇಕೆಂದು ದೇವೇಂದ್ರನ ಪ್ರಾರ್ಥನೆ.
ಅದರಂತೆ ಶ್ರೀಕೃಷ್ಣನಿಂದ ನರಕಾಸುರನ ಸಂಹಾರ. ಭೂದೇವಿಯಿಂದ ಸ್ತುತಿ.
ನರಕನ ಅಂತಃಪುರದಲ್ಲಿದ್ದ ಕನ್ಯೆಯರನ್ನೂ ಅಲ್ಲದೆ ಗಜಾಶ್ವಾದಿಗಳನ್ನೂ
ದ್ವಾರಕೆಗೆ ಸಾಗಿಸುವುದು.

ಪರಾಶರಮುನಿಗಳು ನುಡಿದರು: ಮೈತ್ರೇಯ, ಶ್ರೀಕೃಷ್ಣನು ದ್ವಾರವತಿಯಲ್ಲಿ ವಾಸವಾಗಿರುವಾಗ ಒಂದು ಸಲ ತ್ರಿಭುವನೇಶ್ವರನಾದ ಇಂದ್ರನು ಮದಿಸಿದ ಐರಾವತವನ್ನೇರಿ ಅಲ್ಲಿಗೆ ಬಂದನು. ಅವನು ದ್ವಾರಕೆಯನ್ನು ಪ್ರವೇಶಿಸಿ ಶ್ರೀಕೃಷ್ಣನನ್ನು ಕಂಡು ನರಕಾಸುರನ ದುಶ್ಚೇಷ್ಟೆಗಳನ್ನು ತಿಳಿಸಿದನು (1-2): "ಶ್ರೀಕೃಷ್ಣ, ನಮ್ಮ ಸ್ವಾಮಿಯಾದ ನೀನು ಮನುಷ್ಯಜನ್ಮವನ್ನು ತಾಳಿದ್ದರೂ ದೇವತೆಗಳ ಸಕಲದುಃಖಗಳನ್ನೂ ಶಮನಗೊಳಿಸಿದ್ದೀಯೆ. ತಪಸ್ವಿಗಳ ಕಷ್ಟಕ್ಕೆ ಕಾರಣರಾದ ಅರಿಷ್ಟ, ಧೇನುಕ, ಕೇಶಿ—ಮೊದಲಾದವರೆಲ್ಲರೂ ನಿನ್ನಿಂದ ಹತರಾದರು (3-4). ಕಂಸ, ಕುವಲಯಾಪೀಡನೆಂಬ ಗಜ, ಬಾಲಘಾತಿನಿ

**ಕಂಸಃ ಕುವಲಯಾಪೀಡಃ ಪೂತನಾ ಬಾಲಘಾತಿನೀ।**
**ನಾಶಂ ನೀತಾಸ್ತ್ವಯಾ ಸರ್ವೇ ಯೇಽನ್ಯೇ ಜಗದುಪದ್ರವಾಃ॥** 5

**ಯುಷ್ಮದ್ದೋರ್ದಂಡಸಂಭೂತಿಪರಿತ್ರಾತೇ ಜಗತ್ರಯೇ।**
**ಯಜ್ವಯಜ್ಞಾಂಶಸಂಪ್ರಾಪ್ತ್ಯಾ ತೃಪ್ತಿಂ ಯಾಂತಿ ದಿವೌಕಸಃ॥** 6

**ಸೋಽಹಂ ಸಾಂಪ್ರತಮಾಯಾತೋ ಯನ್ನಿಮಿತ್ತಂ ಜನಾರ್ದನ।**
**ತಚ್ಛ್ರುತ್ವಾ ತತ್ಪ್ರತೀಕಾರಪ್ರಯತ್ನಂ ಕರ್ತುಮರ್ಹಸಿ॥** 7

**ಭೌಮೋಽಯಂ ನರಕೋ ನಾಮ ಪ್ರಾಗ್ಜ್ಯೋತಿಷಪುರೇಶ್ವರಃ।**
**ಕರೋತಿ ಸರ್ವಭೂತಾನಾಮುಪಘಾತಮರಿಂದಮ॥** 8

**ದೇವಸಿದ್ಧಾಸುರಾದೀನಾಂ ನೃಪಾಣಾಂ ಚ ಜನಾರ್ದನ।**
**ಹೃತ್ವಾ ತು ಸೋಽಸುರಃ ಕನ್ಯಾ ರುರುಧೇ ನಿಜಮಂದಿರೇ॥** 9

**ಛತ್ರಂ ಯತ್ಸಲಿಲಸ್ರಾವಿ ತಜ್ಜಹಾರ ಪ್ರಚೇತಸಃ।**
**ಮಂದರಸ್ಯ ತಥಾ ಶೃಂಗಂ ಹೃತವಾನ್ಮಣಿಪರ್ವತಮ್॥** 10

---

ಯಾದ ಪೂತನೆ ಮೊದಲಾಗಿ ಜಗದುಪದ್ರವಕಾರಿಗಳು ನಾಶವಾದರು. ನಿಮ್ಮ ದೋರ್ದಂಡಪರಾಕ್ರಮದಿಂದ ಜಗತ್ತ್ರಯವೂ ರಕ್ಷಿತವಾದ್ದರಿಂದ ಯಾಜಕರು ಯಜ್ಞದಲ್ಲಿ ಅರ್ಪಿಸುವ ಹವಿರ್ಭಾಗಗಳಿಂದ ದೇವತೆಗಳು ತೃಪ್ತರಾಗುತ್ತಿದ್ದಾರೆ (5-6). ಹೇ ಜನಾರ್ದನ, ನಾನಾದರೋ ಈಗ ಯಾವ ನಿಮಿತ್ತದಿಂದ ಇಲ್ಲಿಗೆ ಬಂದಿರುವೆನೆಂಬುದನ್ನಾಲಿಸಿ, ಅದಕ್ಕೆ ಪ್ರತಿಕಾರವೇನೆಂಬುದಕ್ಕೆ ನೀನು ಪ್ರಯತ್ನಿಸಬೇಕು. ಹೇ ಶತ್ರುಸೂದನ, ಭೂಮಿಪುತ್ರನೂ ಪ್ರಾಗ್ಜ್ಯೋತಿಷಪುರಕ್ಕೆ ಒಡೆಯನೂ ಆದ ನರಕನೆಂಬುವನು ಇದ್ದಾನಷ್ಟೆ. ಈತನು ಸರ್ವಜೀವಿಗಳಿಗೂ ಉಪದ್ರವವನ್ನು ಕೊಡುತ್ತಿದ್ದಾನೆ (7-8). ದೇವ, ಸಿದ್ಧ, ಅಸುರಾದಿಗಳ ಮತ್ತು ಭೂಲೋಕದ ರಾಜರ ಹೆಣ್ಣುಮಕ್ಕಳನ್ನಪಹರಿಸಿ ತನ್ನ ಅಂತಃಪುರದಲ್ಲಿ ಸೆರೆಯಿಟ್ಟಿದ್ದಾನೆ. ವರುಣನ ಜಲಸ್ರಾವಿಯಾದ ಛತ್ರವನ್ನೂ ಮಂದರಗಿರಿಯ ಶೃಂಗವಾದ ಮಣಿಪರ್ವತವನ್ನೂ ಕಿತ್ತುಕೊಂಡು ಹೋಗಿದ್ದಾನೆ (9-10).

**ಅಮೃತಸ್ರಾವಿಣೀ ದಿವ್ಯೇ ಮನ್ಮಾತುಃ ಕೃಷ್ಣ ಕುಂಡಲೇ।**
**ಜಹಾರ ಸೋಽಸುರೋಽದಿತ್ಯಾ ವಾಂಛತ್ಯೈರಾವತಂ ಗಜಮ್॥ 11**

**ದುರ್ನೀತಮೇತದ್ಗೋವಿಂದ ಮಯಾ ತಸ್ಯ ನಿವೇದಿತಮ್।**
**ಯದತ್ರ ಪ್ರತಿಕರ್ತವ್ಯಂ ತತ್ಸ್ವಯಂ ಪರಿಮೃಶ್ಯತಾಮ್॥ 12**

*ಶ್ರೀಪರಾಶರ ಉವಾಚ:*

**ಇತಿ ಶ್ರುತ್ವಾ ಸ್ಮಿತಂ ಕೃತ್ವಾ ಭಗವಾನ್ ದೇವಕೀಸುತಃ।**
**ಗೃಹೀತ್ವಾ ವಾಸವಂ ಹಸ್ತೇ ಸಮುತ್ತಸ್ಥೌ ವರಾಸನಾತ್॥ 13**

**ಸಂಚಿಂತ್ಯಾಗತಮಾರುಹ್ಯ ಗರುಡಂ ಗಗನೇಚರಮ್।**
**ಸತ್ಯಭಾಮಾಂ ಸಮಾರೋಪ್ಯ ಯಯೌ ಪ್ರಾಗ್ಜ್ಯೋತಿಷಂ ಪುರಮ್॥ 14**

---

ಶ್ರೀಕೃಷ್ಣ, ಅಲ್ಲದೆ ಈ ದೈತ್ಯನು ನನ್ನ ತಾಯಿಯಾದ ಅದಿತಿದೇವಿಯ ಅಮೃತಸ್ರಾವಿಗಳಾದ ದಿವ್ಯ ಕುಂಡಲಗಳನ್ನೂ ಅಪಹರಿಸಿದ್ದಾನೆ. ಈಗ ಐರಾವತಗಜವೂ ತನಗೆ ಬೇಕೆಂದು ಆಸೆಪಟ್ಟಿದ್ದಾನೆ. ಗೋವಿಂದ, ಈ ಅಸುರನ ದುಷ್ಕೃತ್ಯವನ್ನು ನಿನ್ನಲ್ಲಿ ಅರಿಕೆ ಮಾಡಿಕೊಂಡಿದ್ದೇನೆ. ಇದಕ್ಕೆ ಪ್ರತೀಕಾರವೇನೆಂಬು ದನ್ನು ನೀನೇ ಆಲೋಚಿಸು" ಎಂದು ನಿವೇದಿಸಿದನು (11-12). ಇಂದ್ರನ ನುಡಿಯನ್ನಾಲಿಸಿದ ಭಗವಾನ್ ದೇವಕೀಸುತನು ಮುಗುಳ್ನಗೆ ಬೀರಿ, ಇಂದ್ರನ ಕೈಯನ್ನು ಹಿಡಿದುಕೊಂಡು ತನ್ನ ಪೀಠದಿಂದ ಎದ್ದನು. ಗಗನಗಾಮಿಯಾದ ಗರುಡನನ್ನು ಸ್ಮರಿಸಿಕೊಳ್ಳಲು ಆತನು ಉಪಸ್ಥಿತನಾದನು. ಅನಂತರ ಸತ್ಯಭಾಮೆ ಯನ್ನು* ಗರುಡನ ಮೇಲೆ ಕುಳ್ಳಿರಿಸಿಕೊಂಡು ಶ್ರೀಕೃಷ್ಣನು ಪ್ರಾಗ್ಜ್ಯೋತಿಷ ಪುರಕ್ಕೆ ಅಭಿಮುಖವಾಗಿ ಹೊರಟನು (13-14). ಇಂದ್ರನು ಐರಾವತನ್ನೇರಿ

---

* ನಾರದರು ಇತ್ತ ಪಾರಿಜಾತಪುಷ್ಪವನ್ನು ಶ್ರೀಕೃಷ್ಣನು ರುಕ್ಮಿಣಿಗೆ ಕೊಡಲಾಗಿ ಸತ್ಯಭಾಮೆ ಕುಪಿತಳಾದಳು. ಅವಳಿಗೆ ಪಾರಿಜಾತ ವೃಕ್ಷವನ್ನೇ ತಂದುಕೊಂಡುವೆನೆಂದು ಶ್ರೀಕೃಷ್ಣನು ಮಾತುಕೊಟ್ಟಿದ್ದನು. ಅದನ್ನೀಗ ನೆರವೇರಿಸುವುದಕ್ಕಾಗಿ ಜೊತೆಯಲ್ಲಿ ಸತ್ಯಭಾಮೆಯನ್ನು ಕರೆದೊಯ್ದನೆಂದು ತಿಳಿಯಬೇಕು. ಈ ವೃತ್ತಾಂತ ಹರಿವಂಶದಲ್ಲಿದೆ.

**ಆರುಹ್ಯೈರಾವತಂ ನಾಗಂ ಶಕ್ರೋಽಪಿ ತ್ರಿದಿವಂ ಯಯೌ।**
**ತತೋ ಜಗಾಮ ಕೃಷ್ಣಶ್ಚ ಪಶ್ಯತಾಂ ದ್ವಾರಕೌಕಸಾಮ್॥** 15

**ಪ್ರಾಗ್ಜ್ಯೋತಿಷಪುರಸ್ಯಾಪಿ ಸಮಂತಾಚ್ಛತಯೋಜನಮ್।**
**ಆಚಿತಾ ಮೌರವೈಃ ಪಾಶೈಃ ಕ್ಷುರಾಂತೈರ್ಭೂರ್ದ್ವಿಜೋತ್ತಮ॥** 16

**ತಾಂಶ್ಚಿಚ್ಛೇದ ಹರಿಃ ಪಾಶಾನ್ ಕ್ಷಿಪ್ತ್ವಾ ಚಕ್ರಂ ಸುದರ್ಶನಮ್।**
**ತತೋ ಮುರಸ್ಸಮುತ್ತಸ್ಥೌ ತಂ ಜಘಾನ ಚ ಕೇಶವಃ॥** 17

**ಮುರಸ್ಯ ತನಯಾನ್ ಸಪ್ತ ಸಹಸ್ರಾಂಸ್ತಾಂಸ್ತತೋ ಹರಿಃ।**
**ಚಕ್ರಧಾರಾಗ್ನಿನಿರ್ದಗ್ಧಾಂಶ್ಚಕಾರ ಶಲಭಾನಿವ॥** 18

**ಹತ್ವಾ ಮುರಂ ಹಯಗ್ರೀವಂ ತಥಾ ಪಂಚಜನಂ ದ್ವಿಜ।**
**ಪ್ರಾಗ್ಜ್ಯೋತಿಷಪುರಂ ಧೀಮಾಂಸ್ತ್ವರಾವಾನ್ ಸಮುಪಾದ್ರವತ್॥** 19

**ನರಕೇಣಾಸ್ಯ ತತ್ರಾಭೂನ್ಮಹಾಸೈನ್ಯೇನ ಸಂಯುಗಮ್।**
**ಕೃಷ್ಣಸ್ಯ ಯತ್ರ ಗೋವಿಂದೋ ಜಘ್ನೇ ದೈತ್ಯಾನ್ ಸಹಸ್ರಶಃ॥** 20

---

ಸ್ವರ್ಗಲೋಕಕ್ಕೆ ತೆರಳಿದನು. ದ್ವಾರಕಾವಾಸಿಗಳಾದ ಪೌರರು ನೋಡನೋಡುತ್ತಿರುವಾಗಲೇ ಶ್ರೀಕೃಷ್ಣನು ಪ್ರಾಗ್‌ಜ್ಯೋತಿಷಪುರಕ್ಕೆ ಪ್ರಯಾಣ ಮಾಡಿದನು (15). ಮೈತ್ರೇಯ, ಮುರನೆಂಬ ದೈತ್ಯನು ಕ್ಷುರದಂತೆ ತೀಕ್ಷ್ಣಾಗ್ರವುಳ್ಳಪಾಶಗಳನ್ನು ಪ್ರಾಗ್‌ಜ್ಯೋತಿಷಪುರದ ಸುತ್ತಲೂ ಹರಡಿ ರಕ್ಷಣೆಯನ್ನೊದಗಿಸಿದ್ದನು. ಶ್ರೀಕೃಷ್ಣನು ಸುದರ್ಶನ ಚಕ್ರವನ್ನು ಬಿಟ್ಟು ಆ ಪಾಶಗಳನ್ನು ಕತ್ತರಿಸಿದನು. ಆಗ ಮುರನೇ ಸ್ವತಃ ಎದ್ದುಬರಲಾಗಿ ಕೇಶವನು ಅವನನ್ನು ವಧಿಸಿದನು (16-17). ಅನಂತರ ಮುರದೈತ್ಯನ ಏಳು ಸಾವಿರ ಮಕ್ಕಳು ಸುದರ್ಶನ ಚಕ್ರದ ಧಾರಾಗ್ನಿಯಲ್ಲಿ ದೀಪದ ಹುಳುಗಳಂತೆ ಬೆಂದುಹೋದರು. ಹೀಗೆ ಮುರ, ಹಯಗ್ರೀವ, ಪಂಚಜನರೆಂಬ ದೈತ್ಯರನ್ನು ಸಂಹರಿಸಿ, ಧೀಮಂತನಾದ ಶ್ರೀಹರಿಯು ತ್ವರೆಯಿಂದ ಪ್ರಾಗ್‌ಜ್ಯೋತಿಷಪುರವನ್ನಾಕ್ರಮಿಸಿದನು (18-19). ಆಗ ದೊಡ್ಡಸೇನೆಯಿಂದ ಪರಿವೃತನಾಗಿ ಬಂದ ನರಕಾಸುರನಿಗೂ ಗೋವಿಂದನಿಗೂ ಕಾಳಗ ನಡೆಯಿತು. ಸಾವಿರಗಟ್ಟಲೆ ರಾಕ್ಷಸರನ್ನು

**ಶಸ್ತ್ರಾಸ್ತ್ರವರ್ಷಂ ಮುಂಚಂತಂ ತಂ ಭೌಮಂ ನರಕಂ ಬಲೀ।**
**ಕ್ಷಿಪ್ತ್ವಾ ಚಕ್ರಂ ದ್ವಿಧಾ ಚಕ್ರೇ ಚಕ್ರೀ ದೈತೇಯಚಕ್ರಹಾ॥** 21

**ಹತೇ ತು ನರಕೇ ಭೂಮಿರ್ಗೃಹೀತ್ವಾದಿತಿಕುಂಡಲೇ।**
**ಉಪತಸ್ಥೇ ಜಗನ್ನಾಥಂ ವಾಕ್ಯಂ ಚೇದಮಥಾಬ್ರವೀತ್॥** 22

*ಪೃಥಿವ್ಯುವಾಚ:*

**ಯದಾಹಮುದ್ಧೃತಾ ನಾಥ ತ್ವಯಾ ಸೂಕರಮೂರ್ತಿನಾ।**
**ತ್ವತ್ ಸ್ಪರ್ಶಸಂಭವಃ ಪುತ್ರಸ್ತದಾಯಂ ಮಯ್ಯಜಾಯತ॥** 23

**ಸೋಽಯಂ ತ್ವಯೈವ ದತ್ತೋ ಮೇ ತ್ವಯೈವ ವಿನಿಪಾತಿತಃ।**
**ಗೃಹಾಣ ಕುಂಡಲೇ ಚೇಮೇ ಪಾಲಯಾಸ್ಯ ಚ ಸಂತತಿಮ್॥** 24

**ಭಾರಾವತರಣಾರ್ಥಾಯ ಮಮೈವ ಭಗವಾನಿಮಮ್।**
**ಅಂಶೇನ ಲೋಕಮಾಯಾತಃ ಪ್ರಸಾದಸುಮುಖಃ ಪ್ರಭೋ॥** 25

---

ಗೋವಿಂದನು ತರಿದೊಟ್ಟಿದನು. ಭೂಮಿಪುತ್ರನಾದ ನರಕಾಸುರನು ಶಸ್ತ್ರಾಸ್ತ್ರಗಳ ಮಳೆಯನ್ನೇ ಸುರಿಸಿದನು. ದೈತ್ಯಚಕ್ರವನ್ನು ವಿಧ್ವಂಸಗೊಳಿಸುವ ಬಲಾಢ್ಯನಾದ ಚಕ್ರಧರನು ಚಕ್ರಾಯುಧವನ್ನು ಪ್ರಯೋಗಿಸಿ ನರಕನನ್ನು ಕತ್ತರಿಸಿ ಎರಡು ತುಂಡುಮಾಡಿದನು (20-21). ಹೀಗೆ ನರಕಾಸುರನು ಹತನಾಗಲಾಗಿ ಭೂದೇವಿಯು ಅದಿತಿಯ ಎರಡು ದಿವ್ಯಕುಂಡಲಗಳನ್ನು ಕೈಯಲ್ಲಿ ತಂದು ಹಿಡಿದು ಜಗನ್ನಾಥನಾದ ಶ್ರೀಕೃಷ್ಣನನ್ನು ಕುರಿತು ಇಂತೆಂದಳು (22): "ಹೇ ಸ್ವಾಮಿ, ನೀನು ವರಾಹಾವತಾರವನ್ನು ತಾಳಿ ನನ್ನನ್ನು ಎತ್ತಿದಾಗ, ನಿನ್ನ ಸ್ಪರ್ಶದಿಂದ ಈ ಪುತ್ರನು (ನರಕಾಸುರ) ನನ್ನಲ್ಲಿ ಜನಿಸಿದ್ದನು. ನೀನೇ ಈತನನ್ನು ನನಗೆ ಕೊಟ್ಟೆ, ನೀನೇ ಕಿತ್ತುಕೊಂಡೆ! ಈ ಕುಂಡಲಗಳನ್ನು ಸ್ವೀಕರಿಸು. ಈ ನರಕನ ಸಂತತಿಯನ್ನು ಪಾಲಿಸು (23-24). ಹೇ ಪ್ರಭುವೇ, ನನ್ನ ಮೇಲಿದ್ದ ಭಾರವನ್ನಿಳಿಸುವದಕ್ಕಾಗಿ ಭಗವಂತನಾದ ನೀನು ಪ್ರಾರ್ಥನೆಗೆ ಪ್ರಸನ್ನನಾಗಿ ಅಂಶಾವತಾರದಿಂದ ಈ ಲೋಕಕ್ಕೆ ಬಂದಿದ್ದೀಯೇ. ನೀನು ಈ ಜಗತ್ತುಗಳ

**ತ್ವಂ ಕರ್ತಾ ಚ ವಿಕರ್ತಾ ಚ ಸಂಹರ್ತಾ ಪ್ರಭವೋಽಪ್ಯಯಃ।**
**ಜಗತಾಂ ತ್ವಂ ಜಗದ್ರೂಪಃ ಸ್ತೂಯತೇಽಚ್ಯುತ ಕಿಂ ತವ॥ 26**

**ವ್ಯಾಪೀ ವ್ಯಾಪ್ಯಂ ಕ್ರಿಯಾ ಕರ್ತಾ ಕಾರ್ಯಂ ಚ ಭಗವನ್ಯಥಾ।**
**ಸರ್ವಭೂತಾತ್ಮಭೂತಸ್ಯ ಸ್ತೂಯತೇ ತವ ಕಿಂ ತಥಾ॥ 27**

**ಪರಮಾತ್ಮಾ ಚ ಭೂತಾತ್ಮಾ ತ್ವಮಾತ್ಮಾ ಚಾವ್ಯಯೋ ಭವಾನ್।**
**ಯಥಾ ತಥಾ ಸ್ತುತಿರ್ನಾಥ ಕಿಮರ್ಥಂ ತೇ ಪ್ರವರ್ತತೇ॥ 28**

**ಪ್ರಸೀದ ಸರ್ವಭೂತಾತ್ಮನ್ನರಕೇಣ ತು ಯತ್ಕೃತಮ್।**
**ತತ್ ಕ್ಷಮ್ಯತಾಮದೋಷಾಯ ತ್ವತ್ಸುತಸ್ತ್ವನ್ನಿಪಾತಿತಃ॥ 29**

*ಶ್ರೀಪರಾಶರ ಉವಾಚ:*

**ತಥೇತಿ ಚೋಕ್ತ್ವಾ ಧರಣೀಂ ಭಗವಾನ್ ಭೂತಭಾವನಃ।**
**ರತ್ನಾನಿ ನರಕಾವಾಸಾಜ್ಜಗ್ರಾಹ ಮುನಿಸತ್ತಮ॥ 30**

---

ಕರ್ತ, ಪೋಷಕ, ಸಂಹರ್ತ. ಇವುಗಳಿಗೆ ನಿನ್ನಲ್ಲಿ ಜನ್ಮ, ನಿನ್ನಲ್ಲಿಯೇ ಲಯ. ಅಚ್ಯುತ, ಜಗದ್ರೂಪನೂ ನೀನೇ ಆಗಿರುವಾಗ ನಾವು ಯಾವ ರೀತಿ ನಿನ್ನನ್ನು ಸ್ತುತಿಸೋಣ? (25-26). ಹೇ ಭಗವನ್, ವ್ಯಾಪಿಯೂ ನೀನು, ವ್ಯಾಪ್ಯನೂ ನೀನು. ಕ್ರಿಯೆ, ಕರ್ತ, ಕ್ರಿಯಾಜನ್ಯ ಎಲ್ಲವೂ ನೀನೇ. ಸರ್ವಭೂತಗಳೂ ನಿನ್ನ ಆತ್ಮಸ್ವರೂಪವೇ ಆಗಿರುವಾಗ ಯಾವ ರೀತಿ ನಿನ್ನನ್ನು ಸ್ತುತಿಸಲಾದೀತು? ಅವ್ಯಯನಾದ ನೀನೇ ಪರಮಾತ್ಮನೂ ಪಂಚಭೂತಾತ್ಮನೂ ಜೀವಾತ್ಮನೂ ಆಗಿರುವಾಗ, ಹೇ ಸ್ವಾಮಿ, ಯಾವ ಅಂಶವನ್ನೆತ್ತಿಕೊಂಡು ನಿನ್ನನ್ನು ಸ್ತುತಿಸಲಾದೀತು? (27-28). ಹೇ ಸರ್ವಭೂತಗಳ ಆತ್ಮನೇ, ಪ್ರಸನ್ನನಾಗು. ನರಕನು ಮಾಡಿದ ಅಪರಾಧವನ್ನು ಕ್ಷಮಿಸು. ನಿನ್ನ ಪುತ್ರನನ್ನು ಆತನ ದೋಷವನ್ನು ಹೋಗಲಾಡಿಸುವುದಕ್ಕಾಗಿ ನೀನೇ ಸಂಹರಿಸಿದ್ದೀಯೆ" ಎಂದಳು (29). ಮುನಿಸತ್ತಮ ಮೈತ್ರೇಯ, ಭೂತಭಾವನನಾದ ಭಗವಂತನು 'ತಥಾಸ್ತು' ಎಂದು ಭೂದೇವಿಗೆ ಹೇಳಿ, ನರಕಾಸುರನ ಅರಮನೆಯಲ್ಲಿದ್ದ ನಾನಾ ರತ್ನಗಳನ್ನು

ಕನ್ಯಾಪುರೇ ಸ ಕನ್ಯಾನಾಂ ಷೋಡಶಾತುಲವಿಕ್ರಮಃ।
ಶತಾಧಿಕಾನಿ ದದೃಶೇ ಸಹಸ್ರಾಣಿ ಮಹಾಮುನೇ॥ 31

ಚತುರ್ದಂಷ್ಟ್ರಾನ್ ಗಜಾಂಶ್ಚಾಗ್ರ್ಯಾನ್ ಷಟ್‌ಸಹಸ್ರಾಂಶ್ಚ ದೃಷ್ಟವಾನ್।
ಕಾಮ್ಬೋಜಾನಾಂ ತಥಾಶ್ವಾನಾಂ ನಿಯುತಾನ್ಯೇಕವಿಂಶತಿಮ್॥ 32

ತಾಃ ಕನ್ಯಾಸ್ತಾಂಸ್ತಥಾ ನಾಗಾಂಸ್ತಾನಶ್ವಾನ್ ದ್ವಾರಕಾಂ ಪುರೀಮ್।
ಪ್ರಾಪಯಾಮಾಸ ಗೋವಿಂದಸ್ಸದ್ಯೋ ನರಕಕಿಂಕರೈಃ॥ 33

ದದೃಶೇ ವಾರುಣಂ ಛತ್ರಂ ತಥೈವ ಮಣಿಪರ್ವತಮ್।
ಆರೋಪಯಾಮಾಸ ಹರಿರ್ಗರುಡೇ ಪತಗೇಶ್ವರೇ॥ 34

ಆರುಹ್ಯ ಚ ಸ್ವಯಂ ಕೃಷ್ಣಸ್ಸತ್ಯಭಾಮಾಸಹಾಯವಾನ್।
ಅದಿತ್ಯಾಃ ಕುಂಡಲೇ ದಾತುಂ ಜಗಾಮ ತ್ರಿದಶಾಲಯಮ್॥ 35

ಇತಿ ಶ್ರೀ ವಿಷ್ಣುಪುರಾಣೇ ಪಂಚಮಾಂಶೇ ಏಕೋನತ್ರಿಂಶೋಽಧ್ಯಾಯಃ

---

ಸ್ವೀಕರಿಸಿದನು. ಆ ನಿರತಿಶಯ ಪರಾಕ್ರಮಿಯು ಕನ್ಯಾಂತಃಪುರಕ್ಕೆ ಹೋಗಿ (ಸೆರೆಯಲ್ಲಿದ್ದ) ಹದಿನಾರು ಸಾವಿರದ ಒಂದುನೂರು ಮಂದಿ ಕನ್ಯೆಯರನ್ನು ಕಂಡನು! (30-31). ನಾಲ್ಕುನಾಲ್ಕು ದಂತಗಳಿದ್ದ ಶ್ರೇಷ್ಠಜಾತಿಯ ಆರುಸಾವಿರ ಆನೆಗಳನ್ನೂ ಇಪ್ಪತ್ತೊಂದು ಲಕ್ಷ ಕಾಂಬೋಜದೇಶದ ಅಶ್ವಗಳನ್ನೂ ಕಂಡನು! ಒಡನೆಯೇ ಶ್ರೀಕೃಷ್ಣನು ಆ ಕನ್ಯೆಯರನ್ನೂ ಆನೆಗಳನ್ನೂ ಅಶ್ವಗಳನ್ನೂ ನರಕಾಸುರನ ಭೃತ್ಯರ ಮೂಲಕ ದ್ವಾರಕಾನಗರಕ್ಕೆ ಕಳಿಸಿದನು (32-33). ಅಲ್ಲದೆ ವರುಣನ ಛತ್ರವನ್ನೂ ಮಣಿಪರ್ವತವನ್ನೂ ನೋಡಿ, ಅವನ್ನು ಪಕ್ಷಿರಾಜನಾದ ಗರುಡನ ಮೇಲೆ ಹೇರಿ, ತಾನು ಸತ್ಯಭಾಮಾಸಮೇತನಾಗಿ ಕುಳಿತು, ಅದಿತಿಯ ಕುಂಡಲಗಳನ್ನು ಒಪ್ಪಿಸುವುದಕ್ಕಾಗಿ ಸ್ವರ್ಗಲೋಕಕ್ಕೆ ಪ್ರಯಾಣ ಮಾಡಿದನು (34-35).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.

---

## ತ್ರಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಗರುಡೋ ವಾರುಣಂ ಛತ್ರಂ ತಥೈವ ಮಣಿಪರ್ವತಮ್।**
**ಸಭಾರ್ಯಂ ಚ ಹೃಷೀಕೇಶಂ ಲೀಲಯೈವ ವಹನ್ಯಯೌ॥** 1

**ತತಶ್ಯಂಕಮುಪಾಧ್ಮಾಸೀತ್ ಸ್ವರ್ಗದ್ವಾರಗತೋ ಹರಿಃ।**
**ಉಪತಸ್ಥುಸ್ತಥಾ ದೇವಾಸ್ಸಾರ್ಘ್ಯಹಸ್ತಾ ಜನಾರ್ದನಮ್॥** 2

**ಸ ದೇವೈರರ್ಚಿತಃ ಕೃಷ್ಣೋ ದೇವಮಾತುರ್ನಿವೇಶನಮ್।**
**ಸಿತಾಭ್ರಶಿಖರಾಕಾರಂ ಪ್ರವಿಶ್ಯ ದದೃಶೇಽದಿತಿಮ್॥** 3

**ಸ ತಾಂ ಪ್ರಣಮ್ಯ ಶಕ್ರೇಣ ಸಹ ತೇ ಕುಂಡಲೋತ್ತಮೇ।**
**ದದೌ ನರಕನಾಶಂ ಚ ಶಶಂಸಾಸ್ಯೈ ಜನಾರ್ದನಃ॥** 4

---

## ಅಧ್ಯಾಯ 30

ಅದಿತಿಯಿಂದ ಭಗವಂತನ ಸ್ತುತಿ. ಪಾರಿಜಾತಹರಣ.
ಯುದ್ಧದಲ್ಲಿ ದೇವೇಂದ್ರನ ಪರಾಜಯ.

ಪರಾಶರ ಮುನಿಗಳು ಹೇಳಿದರು: ಮೈತ್ರೇಯ, ಗರುಡನು ವರುಣನ ಛತ್ರವನ್ನೂ ಮಣಿಪರ್ವತವನ್ನೂ ಭಾರ್ಯಾಸಮೇತನಾದ ಶ್ರೀಕೃಷ್ಣನನ್ನೂ ಹೊತ್ತುಕೊಂಡು ಲೀಲೆಯಿಂದಲೇ ಹಾರುತ್ತಾ ಸ್ವರ್ಗಲೋಕಕ್ಕೆ ಹೋದನು. ಶ್ರೀಹರಿಯು ಸ್ವರ್ಗದ್ವಾರದ ಬಳಿಯಲ್ಲಿ ಶಂಖವನ್ನೂದಿದನು. ಆಗ ದೇವತೆಗಳು ಪೂಜಾಸಾಮಗ್ರಿಗಳನ್ನು ಕೈಯಲ್ಲಿ ಹಿಡಿದು ಶ್ರೀಕೃಷ್ಣನನ್ನು ಸ್ವಾಗತಿಸಿದರು (1-2). ದೇವತೆಗಳಿಂದ ಪೂಜಿತನಾಗಿ ಶ್ರೀಕೃಷ್ಣನು ಬಿಳಿಯ ಮೋಡದ ಶೃಂಗದಂತಿದ್ದ ದೇವಮಾತೆಯ ಸೌಧವನ್ನು ಪ್ರವೇಶಿಸಿ ಅದಿತಿಯನ್ನು ಸಂದರ್ಶಿಸಿದನು. ಜನಾರ್ದನನು ದೇವೇಂದ್ರನೊಡನೆ ಅದಿತಿಗೆ ನಮಸ್ಕರಿಸಿ, ದಿವ್ಯಕುಂಡಲಗಳನ್ನು ಅರ್ಪಿಸಿ, ನರಕಾಸುರನ ಸಂಹಾರ ವೃತ್ತಾಂತವನ್ನು ನಿವೇದಿಸಿದನು (3-4).

**ತತಃ ಪ್ರೀತಾ ಜಗನ್ಮಾತಾ ಧಾತಾರಂ ಜಗತಾಂ ಹರಿಮ್।**
**ತುಷ್ಟಾವಾದಿತಿರವ್ಯಗ್ರಾ ಕೃತ್ವಾ ತತ್ ಪ್ರವಣಂ ಮನಃ॥ 5**

*ಅದಿತಿರುವಾಚ:*

**ನಮಸ್ತೇ ಪುಂಡರೀಕಾಕ್ಷ ಭಕ್ತಾನಾಮಭಯಂಕರ।**
**ಸನಾತನಾತ್ಮನ್ ಸರ್ವಾತ್ಮನ್ ಭೂತಾತ್ಮನ್ ಭೂತಭಾವನ॥ 6**

**ಪ್ರಣೇತರ್ಮನಸೋ ಬುದ್ಧೇರಿಂದ್ರಿಯಾಣಾಂ ಗುಣಾತ್ಮಕ।**
**ತ್ರಿಗುಣಾತೀತ ನಿರ್ದ್ವಂದ್ವಶುದ್ಧಸತ್ತ್ವ ಹೃದಿ ಸ್ಥಿತ॥ 7**

**ಸಿತದೀರ್ಘಾದಿನಿಶ್ಶೇಷಕಲ್ಪನಾಪರಿವರ್ಜಿತ**
**ಜನ್ಮಾದಿಭಿರಸಂಸ್ಪೃಷ್ಟ ಸ್ವಪ್ನಾದಿಪರಿವರ್ಜಿತ॥ 8**

**ಸಂಧ್ಯಾರಾತ್ರಿರಹೋ ಭೂಮಿರ್ಗಗನಂ ವಾಯುರಂಬು ಚ।**
**ಹುತಾಶನೋ ಮನೋ ಬುದ್ಧಿರ್ಭೂತಾದಿಸ್ತ್ವಂ ತಥಾಚ್ಯುತ॥ 9**

**ಸರ್ಗಸ್ಥಿತಿವಿನಾಶಾನಾಂ ಕರ್ತಾ ಕರ್ತೃಪತಿರ್ಭವಾನ್।**
**ಬ್ರಹ್ಮವಿಷ್ಣುಶಿವಾಖ್ಯಾಭಿರಾತ್ಮಮೂರ್ತಿಭಿರೀಶ್ವರ॥ 10**

---

ಜಗನ್ಮಾತೆಯಾದ ಅದಿತಿಯು ಸಂತುಷ್ಟಳಾಗಿ ಜಗದ್ರಕ್ಷಕನಾದ ಶ್ರೀಹರಿಯನ್ನು ಏಕಾಗ್ರಚಿತ್ತದಿಂದ ಈ ಪ್ರಕಾರ ಸ್ತುತಿಸಿದಳು (5): "ಹೇ ಪುಂಡರೀಕಾಕ್ಷ, ಭಕ್ತ ಭಯನಿವಾರಕ, ಸನಾತನ, ಸರ್ವಾತ್ಮ ಭೂತಾತ್ಮ ಭೂತಭಾವನ, ನಿನಗೆ ನಮಸ್ಕಾರ. ಹೇ ಗುಣಾತ್ಮಕ, (ಗುಣಾತ್ಮಕನಾಗಿ) ಮನೋಬುದ್ಧಿಗಳನ್ನೂ ಇಂದ್ರಿಯಗಳನ್ನೂ ನಿರ್ಮಿಸಿದವನೆ, (ವಸ್ತುತಸ್ತು) ತ್ರಿಗುಣಾತೀತ, ನಿರ್ದ್ವಂದ್ವ, ಶುದ್ಧಸತ್ತ್ವ, ಹೃದಯನಿವಾಸಿ, ನಿನಗೆ ನಮಸ್ಕಾರ (6-7). ಬಿಳುಪು, ದೀರ್ಘ—ಇತ್ಯಾದಿ ವರ್ಣಪ್ರಮಾಣ ಕಲ್ಪನಾಶೂನ್ಯನಾದವನು ನೀನು. ಜನ್ಮಾದಿವಿಕಾರ ರಹಿತ, ಸ್ವಪ್ನಾದ್ಯವಸ್ಥೆಗಳಿಂದ ಪರಿವರ್ಜಿತ, ನಿನಗೆ ನಮಸ್ಕಾರ. ಹೇ ಅಚ್ಯುತ, ಸಂಜೆ ರಾತ್ರಿ ಹಗಲು ಭೂಮಿ ಆಕಾಶ ವಾಯು ಜಲ ಅಗ್ನಿ ಮನಸ್ಸು ಬುದ್ಧಿ ಅಹಂಕಾರ—ಇವೆಲ್ಲವೂ ನೀನೇ (8-9). ಹೇ ಪರಮೇಶ್ವರ, ಬ್ರಹ್ಮವಿಷ್ಣು ಶಿವ ಎಂಬ ನಿನ್ನ ಆತ್ಮಮೂರ್ತಿಗಳಿಂದ ಕ್ರಮವಾಗಿ ಸೃಷ್ಟಿ ಸ್ಥಿತಿ ಪ್ರಳಯಗಳನ್ನು ಮಾಡತಕ್ಕವನು ನೀನು. ಅವಾಂತರ ಸೃಷ್ಟಿಕರ್ತರಾದ ದಕ್ಷಬ್ರಹ್ಮಾದಿಗಳಿಗೂ ಕರ್ತೃ

**ದೇವಾ ದೈತ್ಯಾಸ್ತಥಾ ಯಕ್ಷಾ ರಾಕ್ಷಸಾಸ್ಸಿದ್ಧಪನ್ನಗಾಃ।**
**ಕೂಷ್ಮಾಂಡಾಶ್ಚ ಪಿಶಾಚಾಶ್ಚ ಗಂಧರ್ವಾ ಮನುಜಾಸ್ತಥಾ॥** 11

**ಪಶವಶ್ಚ ಮೃಗಾಶ್ಚೈವ ಪತಂಗಾಶ್ಚ ಸರೀಸೃಪಾಃ।**
**ವೃಕ್ಷಗುಲ್ಮಲತಾ ಬಹ್ವ್ಯಃ ಸಮಸ್ತಾಸ್ತೃಣಜಾತಯಃ॥** 12

**ಸ್ಥೂಲಾ ಮಧ್ಯಾಸ್ತಥಾ ಸೂಕ್ಷ್ಮಾಸ್ಸೂಕ್ಷ್ಮಾತ್ಸೂಕ್ಷ್ಮತರಾಶ್ಚಯೇ।**
**ದೇಹಭೇದೋ ಭವಾನ್ ಸರ್ವೇ ಯೇ ಕೇಚಿತ್ಪುರ್ಗಲಾಶ್ರಯಾಃ॥** 13

**ಮಾಯಾ ತವೇಯಮಜ್ಞಾತಪರಮಾರ್ಥಾತಿಮೋಹಿನೀ।**
**ಅನಾತ್ಮನ್ಯಾತ್ಮವಿಜ್ಞಾನಂ ಯಯಾ ಮೂಢೋ ನಿರುದ್ಧ್ಯತೇ॥** 14

**ಅಸ್ವೇ ಸ್ವಮಿತಿ ಭಾವೋಽತ್ರ ಯತ್ಪುಂಸಾಮುಪಜಾಯತೇ।**
**ಅಹಂ ಮಮೇತಿ ಭಾವೋ ಯತ್ಪ್ರಾಯೇಣೈವಾಭಿಜಾಯತೇ।**
**ಸಂಸಾರಮಾತುರ್ಮಾಯಾಯಾಸ್ತವೈತನ್ನಾಥ ಚೇಷ್ಟಿತಮ್॥** 15

---

ನೀನು (10). ದೇವತೆಗಳು, ದೈತ್ಯರು, ಯಕ್ಷ ರಾಕ್ಷಸ ಸಿದ್ಧಪನ್ನಗರು, ಕೂಷ್ಮಾಂಡ* ಪಿಶಾಚಗಳು, ಗಂಧರ್ವರು, ಮಾನವರು, ಪಶು ಪಕ್ಷಿ ಮೃಗ ಸರೀಸೃಪಗಳು, ಬಹುವಿಧದ ವೃಕ್ಷಗುಲ್ಮಲತೆಗಳು, ಸಮಸ್ತ ತೃಣ ಜಾತಿಗಳು— ಸ್ಥೂಲ ಮಧ್ಯ ಸೂಕ್ಷ್ಮಗಳೂ ಸೂಕ್ಷ್ಮಾತ್ ಸೂಕ್ಷ್ಮತರಗಳೂ ಆಗಿ ಪುರ್ಗಲಾಶ್ರಯ ಗಳಾದ§ ಯಾವ ಯಾವ ದೇಹಭೇದಗಳಿವೆಯೋ ಅವೆಲ್ಲವೂ ನೀನೇ (11-13). ಪರಮಾರ್ಥ ತತ್ತ್ವವನ್ನರಿಯದ ಜೀವರಿಗೆ ಅತ್ಯಂತ ಮೋಹವನ್ನುಂಟುಮಾಡ ತಕ್ಕದ್ದು ನಿನ್ನ ಮಾಯೆ. ಇದು ಅನಾತ್ಮವಸ್ತುವಿನಲ್ಲಿ ಆತ್ಮವೆಂಬ ಭ್ರಾಂತಿ ಜ್ಞಾನವನ್ನುಂಟುಮಾಡುತ್ತದೆ. ಇದರಿಂದಲೇ ಜೀವನು ಸಂಸಾರಬಂಧನದಲ್ಲಿ ಸಿಕ್ಕಿಕೊಳ್ಳುತ್ತಾನೆ (14). ಹೇ ನಾಥ, ಜನರಿಗೆ ಅನಾತ್ಮದಲ್ಲಿ ಆತ್ಮಬುದ್ಧಿಯೂ 'ನಾನು-ನನ್ನದು' ಎಂಬ ಭಾವನೆಯೂ ವಿಶೇಷವಾಗಿ ಹುಟ್ಟುತ್ತದೆಯಲ್ಲ , ಇದು ಸಂಸಾರಮಾತೆಯಾದ ಮಾಯೆಯ ಚೇಷ್ಟಿತ! ಈ ಮಾಯೆ ನಿನ್ನದು (15). ಓ

---

* ಕೂಷ್ಮಾಂಡ = ಭೂತಗಣಗಳಲ್ಲೊಂದು.

§ ಪುರ್ಗಲ = ಪರಮಾಣು. ಇದನ್ನು ಜೈನದರ್ಶನದಲ್ಲಿ 'ಪುದ್ಗಲ' ಎನ್ನುತ್ತಾರೆ. 'ಪೂರಣಾದ್‌ಗಲನಾದ್ದೇಹೇ ಪುರ್ಗಲಾಃ ಪರಮಾಣವಃ'.

**ಯೈಃ ಸ್ವಧರ್ಮಪರೈರ್ನಾಥ ನರೈರಾರಾಧಿತೋ ಭವಾನ್।**
**ತೇ ತರಂತ್ಯಖಿಲಾಮೇತಾಂ ಮಾಯಾಮಾತ್ಮವಿಮುಕ್ತಯೇ॥** 16

**ಬ್ರಹ್ಮಾದ್ಯಾಸ್ಸಕಲಾ ದೇವಾ ಮನುಷ್ಯಾಃ ಪಶವಸ್ತಥಾ।**
**ವಿಷ್ಣುಮಾಯಾಮಹಾವರ್ತಮೋಹಾಂಧತಮಸಾವೃತಾಃ॥** 17

**ಆರಾಧ್ಯ ತ್ವಾಮಭೀಪ್ಸಂತೇ ಕಾಮಾನಾತ್ಮಭವಕ್ಷಯಮ್।**
**ಯದೇತೇ ಪುರುಷಾ ಮಾಯಾ ಸೈವೇಯಂ ಭಗವಂಸ್ತವ॥** 18

**ಮಯಾ ತ್ವಂ ಪುತ್ರಕಾಮಿನ್ಯಾ ವೈರಿಪಕ್ಷಜಯಾಯ ಚ।**
**ಆರಾಧಿತೋ ನ ಮೋಕ್ಷಾಯ ಮಾಯಾವಿಲಸಿತಂ ಹಿ ತತ್॥** 19

**ಕೌಪೀನಾಚ್ಛಾದನಪ್ರಾಯಾ ವಾಂಛಾ ಕಲ್ಪದ್ರುಮಾದಪಿ।**
**ಜಾಯತೇ ಯದಪುಣ್ಯಾನಾಂ ಸೋಽಪರಾಧಃ ಸ್ವದೋಷಜಃ॥** 20

---

ಸ್ವಾಮಿ, ಯಾರು ಸ್ವಧರ್ಮಪರಾಯಣರಾಗಿ ನಿನ್ನನ್ನು ಆರಾಧಿಸುತ್ತಾರೋ ಅವರು ತಮ್ಮ ಮೋಕ್ಷಕ್ಕಾಗಿ ಈ ಸಮಸ್ತ ಮಾಯೆಯನ್ನೂ ದಾಟುತ್ತಾರೆ. ಬ್ರಹ್ಮನಿಂದ ಹಿಡಿದು ಸಕಲ ದೇವತೆಗಳೂ ಮನುಷ್ಯರೂ ಪಶುಗಳೂ ವಿಷ್ಣುಮಾಯೆಯೆಂಬ ಮಹತ್ತರವಾದ ಸುಳಿಯಲ್ಲಿ ಸಿಕ್ಕಿ ಅಜ್ಞಾನವೆಂಬ ಗಾಢಾಂಧಕಾರದಿಂದ ಮುಚ್ಚಿ ಹೋಗಿದ್ದಾರೆ! (16-17). ಹೇ ಭಗವನ್, ತಮ್ಮ ಸಂಸಾರಬಂಧನವನ್ನು ನಾಶಗೊಳಿಸಬಲ್ಲ ನಿನ್ನನ್ನು ಆರಾಧಿಸಿಯೂ ಸಹ ಈ ಜನರು ನಾನಾ ಪ್ರಕಾರದ ತಮ್ಮ ಕಾಮನೆಗಳನ್ನೇ ಪ್ರಾರ್ಥಿಸಿಕೊಳ್ಳುತ್ತಾರಲ್ಲ. ಇದೂ ನಿನ್ನ ಮಾಯೆಯೇ ಸರಿ! (18). ನಾನೂ ಸಹ ಪುತ್ರರನ್ನು ಬಯಸಿ, ವೈರಿಗಳಿಗೆ ಸೋಲನ್ನು ಬಯಸಿ ನಿನ್ನನ್ನು ಆರಾಧಿಸಿದೆನೇ ಹೊರತು ಮೋಕ್ಷಕ್ಕಾಗಿ ಅಲ್ಲ, ಇದೂ ಮಾಯಾವಿಲಾಸವೇ ಸರಿ! ಕಲ್ಪವೃಕ್ಷದ ಬಳಿಗೆ ಹೋದರೂ ಮನುಷ್ಯರಿಗೆ ಕೌಪೀನದ ತುಂಡನ್ನು ಬೇಡುವ ಆಸೆಯಾಗುತ್ತದೆಯಲ್ಲ, ಈ ಭಾಗ್ಯಹೀನರು ತಾವೇ ಬುದ್ಧಿದೋಷದಿಂದ ಮಾಡಿಕೊಳ್ಳುವ ಅಪರಾಧವಿದು! (19-20). ಆದ್ದರಿಂದ, ಅಖಿಲ ಜಗತ್ತನ್ನೂ ಮಾಯೆಯಿಂದ ಮೋಹಗೊಳಿಸುವ

**ತತ್ಪ್ರಸೀದಾಖಿಲಜಗನ್ಮಾಯಾಮೋಹಕರಾವ್ಯಯ।**
**ಅಜ್ಞಾನಂ ಜ್ಞಾನಸದ್ಭಾವಭೂತಂ ಭೂತೇಶ ನಾಶಯ॥** 21

**ನಮಸ್ತೇ ಚಕ್ರಹಸ್ತಾಯ ಶಾರ್ಙ್ಗಹಸ್ತಾಯ ತೇ ನಮಃ।**
**ಗದಾಹಸ್ತಾಯ ತೇ ವಿಷ್ಣೋ ಶಂಖಹಸ್ತಾಯ ತೇ ನಮಃ॥** 22

**ಏತತ್ಪಶ್ಯಾಮಿ ತೇ ರೂಪಂ ಸ್ಥೂಲಚಿಹ್ನೋಪಲಕ್ಷಿತಮ್।**
**ನ ಜಾನಾಮಿ ಪರಂ ಯತ್ತೇ ಪ್ರಸೀದ ಪರಮೇಶ್ವರ॥** 23

*ಶ್ರೀಪರಾಶರ ಉವಾಚ:*

**ಅದಿತ್ಯೈವಂ ಸ್ತುತೋ ವಿಷ್ಣುಃ ಪ್ರಹಸ್ಯಾಹ ಸುರಾರಣಿಮ್।**
**ಮಾತಾ ದೇವಿ ತ್ವಮಸ್ಮಾಕಂ ಪ್ರಸೀದ ವರದಾ ಭವ॥** 24

*ಅದಿತಿರುವಾಚ:*

**ಏವಮಸ್ತು ಯಥೇಚ್ಛಾ ತೇ ತ್ವಮಶೇಷೈಸ್ಸುರಾಸುರೈಃ।**
**ಅಜೇಯಃ ಪುರುಷವ್ಯಾಘ್ರ ಮರ್ತ್ಯಲೋಕೇ ಭವಿಷ್ಯಸಿ॥** 25

---

ಪ್ರಭುವೆ, ಅವ್ಯಯನೆ, ಜ್ಞಾನವಿದೆಯೆಂಬ (ನಾನು ಜ್ಞಾನಿ ಎಂಬ) ದುರಭಿಮಾನದಿಂದುಂಟಾದ ಈ ಅಜ್ಞಾನವನ್ನು ಹೋಗಲಾಡಿಸು (21). ಚಕ್ರಪಾಣಿಯಾದ ನಿನಗೆ ನಮಸ್ಕಾರ. ಶಾರ್ಙ್ಗಪಾಣಿಯಾದ ನಿನಗೆ ನಮಸ್ಕಾರ. ಓ ಮಹಾವಿಷ್ಣುವೆ, ಗದಾಪಾಣಿಯಾದ ನಿನಗೆ ಶಂಖಪಾಣಿಯಾದ ನಿನಗೆ ನಮೋ ನಮಃ (22). ಸ್ಥೂಲಾಕೃತಿಯಲ್ಲಿ ಕಾಣುವ ಈ ನಿನ್ನ ರೂಪವನ್ನು ಮಾತ್ರ ನೋಡುತ್ತಿದ್ದೇನೆ. ನಿನ್ನ ಪರಸ್ವರೂಪವನ್ನು ನಾನರಿಯೆ. ಪರಮೇಶ್ವರ, ಪ್ರಸನ್ನನಾಗು" ಎಂದು ಸ್ತೋತ್ರಮಾಡಿದಳು (23). ಅದಿತಿಯು ಹೀಗೆ ಸ್ತುತಿಸಲಾಗಿ ಶ್ರೀಕೃಷ್ಣನು ನಕ್ಕು ಆ ದೇವಮಾತೆಯನ್ನು ಕುರಿತು, "ದೇವಿ, ನೀನು ನಮ್ಮೆಲ್ಲರಿಗೂ ತಾಯಿ. ವರದಾಯಿನಿಯಾಗಿರು!" ಎಂದನು. ಅದಿತಿಯು "ತಥಾಸ್ತು ; ಪುರುಷೋತ್ತಮ, ನಿನ್ನ ಇಚ್ಛೆ ನಡೆಯಲಿ. ಸಮಸ್ತಸುರಾಸುರರಿಗೂ ಅಜೇಯನಾಗಿ ಮರ್ತ್ಯಲೋಕದಲ್ಲಿ ವಿರಾಜಿಸು" ಎಂದಳು (24-25). ಆಮೇಲೆ

*ಶ್ರೀಪರಾಶರ ಉವಾಚ:*

**ತತಃ ಕೃಷ್ಣಸ್ಯ ಪತ್ನೀ ಚ ಶಕ್ರಪತ್ನ್ಯಾ ಸಹಾದಿತಿಮ್।**
**ಸತ್ಯಭಾಮಾ ಪ್ರಣಮ್ಯಾಹ ಪ್ರಸೀದೇತಿ ಪುನಃ ಪುನಃ॥** 26

*ಅದಿತಿರುವಾಚ:*

**ಮತ್ಪ್ರಸಾದಾನ್ನ ತೇ ಸುಭ್ರು ಜರಾ ವೈರೂಪ್ಯಮೇವ ವಾ।**
**ಭವಿಷ್ಯತ್ಯನವದ್ಯಾಂಗಿ ಸುಸ್ಥಿರಂ ನವಯೌವನಮ್॥** 27

*ಶ್ರೀಪರಾಶರ ಉವಾಚ:*

**ಅದಿತ್ಯಾ ತು ಕೃತಾನುಜ್ಞೋ ದೇವರಾಜೋ ಜನಾರ್ದನಮ್।**
**ಯಥಾವತ್ ಪೂಜಯಾಮಾಸ ಬಹುಮಾನಪುರಸ್ಸರಮ್॥** 28

**ಶಚೀ ಚ ಸತ್ಯಭಾಮಾಯೈ ಪಾರಿಜಾತಸ್ಯ ಪುಷ್ಪಕಮ್।**
**ನ ದದೌ ಮಾನುಷೀಂ ಮತ್ವಾ ಸ್ವಯಂ ಪುಷ್ಪೈರಲಂಕೃತಾ॥** 29

**ತತೋ ದದರ್ಶ ಕೃಷ್ಣೋಽಪಿ ಸತ್ಯಭಾಮಾಸಹಾಯವಾನ್।**
**ದೇವೋದ್ಯಾನಾನಿ ಹೃದ್ಯಾನಿ ನಂದನಾದೀನಿ ಸತ್ತಮ॥** 30

---

ಶ್ರೀಕೃಷ್ಣನ ಪತ್ನಿಯಾದ ಸತ್ಯಭಾಮೆಯು ಇಂದ್ರಪತ್ನಿಯಾದ ಶಚೀದೇವಿಯೊಡನೆ ಅದಿತಿಗೆ ನಮಸ್ಕರಿಸಿ "ತಾಯಿ, ಪ್ರಸನ್ನಳಾಗು" ಎಂದು ಮತ್ತೆ ಮತ್ತೆ ನುಡಿದಳು. ಅದಿತಿಯು "ಸೌಮ್ಯೆ, ನನ್ನ ಅನುಗ್ರಹದಿಂದ ಮುಪ್ಪಾಗಲಿ, ವಿರೂಪತೆಯಾಗಲಿ ಬಾರದಿರಲಿ. ಸುಂದರಿ, ನಿನಗೆ ನವಯೌವನವು ಸ್ಥಿರವಾಗಿರುವುದು" ಎಂದಳು (26-27). ಅನಂತರ ದೇವೇಂದ್ರನು ಅದಿತಿಯ ಅನುಜ್ಞೆಯಂತೆ ಶ್ರೀಕೃಷ್ಣನನ್ನು ಗೌರವಾದರಗಳಿಂದ ಅರ್ಚಿಸಿದನು. ಆದರೆ ಶಚಿಯು ಪಾರಿಜಾತ ಪುಷ್ಪಗಳಿಂದ ತಾನು ಅಲಂಕೃತಳಾಗಿದ್ದಳೇ ಹೊರತು ಸತ್ಯಭಾಮೆ ಒಬ್ಬ ಮಾನುಷಸ್ತ್ರೀಯೆಂದು ತಿಳಿದು ಅವಳಿಗೆ ಆ ಪುಷ್ಪವನ್ನು ಕೊಡಲಿಲ್ಲ! (28-29). ಮೈತ್ರೇಯ, ಶ್ರೀಕೃಷ್ಣನು ಸತ್ಯಭಾಮೆಯೊಡಗೂಡಿ ನಂದನವೇ ಮೊದಲಾದ ರಮ್ಯವಾದ ದೇವೋದ್ಯಾನ ಗಳನ್ನು ಸಂದರ್ಶಿಸಿದನು. ಅಲ್ಲಿ ಪರಿಮಳಪೂರ್ಣವೂ ಕುಸುಮಮಂಜರೀಪುಂಜ ರಂಜಿತವೂ ನಿತ್ಯನವಾನಂದದಾಯಿಯೂ ಆದ ಪಾರಿಜಾತ ವೃಕ್ಷವನ್ನು

**ದದರ್ಶ ಚ ಸುಗಂಧಾಢ್ಯಂ ಮಂಜರೀಪುಂಜಧಾರಿಣಮ್।**
**ನಿತ್ಯಾಹ್ಲಾದಕರಂ ತಾಮ್ರಬಾಲಪಲ್ಲವಶೋಭಿತಮ್॥** 31

**ಮಥ್ಯಮಾನೇಽಮೃತೇ ಜಾತಂ ಜಾತರೂಪೋಪಮತ್ವಚಮ್।**
**ಪಾರಿಜಾತಂ ಜಗನ್ನಾಥಃ ಕೇಶವಃ ಕೇಶಿಸೂದನಃ॥** 32

**ತುತೋಷ ಪರಮಪ್ರೀತ್ಯಾ ತರುರಾಜಮನುತ್ತಮಮ್।**
**ತಂ ದೃಷ್ಟ್ವಾ ಪ್ರಾಹ ಗೋವಿಂದಂ ಸತ್ಯಭಾಮಾ ದ್ವಿಜೋತ್ತಮ॥**
**ಕಸ್ಮಾನ್ನದ್ವಾರಕಾಮೇಷ ನೀಯತೇ ಕೃಷ್ಣ ಪಾದಪಃ॥** 33

**ಯದಿ ಚೇತ್ತ್ವದ್ವಚಃ ಸತ್ಯಂ ತ್ವಮತ್ಯರ್ಥಂ ಪ್ರಿಯೇತಿ ಮೇ।**
**ಮದ್ಗೇಹನಿಷ್ಕುಟಾರ್ಥಾಯ ತದಯಂ ನೀಯತಾಂ ತರುಃ॥** 34

**ನ ಮೇ ಜಾಂಬವತೀ ತಾದೃಗಭೀಷ್ಟಾ ನ ಚ ರುಕ್ಮಿಣೀ।**
**ಸತ್ಯೇ ಯಥಾ ತ್ವಮಿತ್ಯುಕ್ತಂ ತ್ವಯಾ ಕೃಷ್ಣಾಸಕೃತ್ಪ್ರಿಯಮ್॥** 35

**ಸತ್ಯಂ ತದ್ಯದಿ ಗೋವಿಂದ ನೋಪಚಾರಕೃತಂ ಮಮ।**
**ತದಸ್ತು ಪಾರಿಜಾತೋಽಯಂ ಮಮ ಗೇಹವಿಭೂಷಣಮ್॥** 36

---

ಕೇಶಿನಿಷೂದನನಾದ ಕೇಶವನು ಕಂಡನು. ಆ ಮರವು ಕೆಂಪಾದ ಎಳೆತಳಿರುಗಳಿಂದ ನಳನಳಿಸುತ್ತ ಬಂಗಾರದ ತಗಡಿನಂತಿರುವ ತೊಗಟೆಯಿಂದ ತಳತಳಿಸುತ್ತಿತ್ತು. ಕಡಲನ್ನು ಕಡೆಯುವಾಗ ಅಮೃತದೊಡನೆ ಅವಿರ್ಭವಿಸಿದ ಈ ವೃಕ್ಷವನ್ನು ಜಗನ್ನಾಥನು ನೋಡಿದನು (30-32). ತನಗೆ ಎಣೆಯಿಲ್ಲದ ಆ ಪಾರಿಜಾತತರುರಾಜನನ್ನು ನೋಡಿ ಪರಮಪ್ರೀತನಾಗಿ ನಲಿದನು. ಆ ವೃಕ್ಷವನ್ನು ವೀಕ್ಷಿಸಿ ಸತ್ಯಭಾಮೆಯು ಗೋವಿಂದನಿಗೆ ಹೀಗೆಂದಳು (33): "ಕಾಂತ, ಈ ತರುವನ್ನು ದ್ವಾರಕೆಗೆ ಏಕೆ ತೆಗೆದುಕೊಂಡು ಹೋಗಬಾರದು! 'ಸತ್ಯಭಾಮೆ, ನೀನು ನನಗೆ ಅತ್ಯಂತ ಪ್ರಿಯಳು' ಎಂದು ಹೇಳುತ್ತಿರುವೆಯಲ್ಲ, ಆ ಮಾತು ಸತ್ಯವಾದರೆ, ಈ ಪಾರಿಜಾತ ವೃಕ್ಷವನ್ನು ಒಯ್ದುಬಿಡು, ನನ್ನ ಮನೆಯ ಹೂದೋಟದಲ್ಲಿ ಇರಲಿ! (34). ಕೃಷ್ಣ, ನೀನು ಎಷ್ಟೋ ಸಲ ನನಗೆ ಪ್ರಿಯವಾದ ಮಾತನ್ನಾಡಿದ್ದೀಯೆ—'ಸತ್ಯೆ, ನನಗೆ ಜಾಂಬವತಿಯೂ ನಿನ್ನಷ್ಟು ಪ್ರಿಯಳಲ್ಲ, ರುಕ್ಮಿಣಿಯೂ ಅಲ್ಲ!' ಎಂದು (35). ಆ ಮಾತು ಹೃದಯಪೂರ್ವಕವಾದ ಸತ್ಯವಾದರೆ, ಉಪಚಾರಕ್ಕೆ ಹೇಳಿದ್ದಲ್ಲವಾದರೆ ಈ ಪಾರಿಜಾತವು ನನ್ನ ಗೃಹ

**ಬಿಭ್ರತೀ ಪಾರಿಜಾತಸ್ಯ ಕೇಶಪಕ್ಷೇಣ ಮಂಜರೀಮ್।**
**ಸಪತ್ನೀನಾಮಹಂ ಮಧ್ಯೇ ಶೋಭೇಯಮಿತಿ ಕಾಮಯೇ॥ 37**

*ಶ್ರೀಪರಾಶರ ಉವಾಚ:*

**ಇತ್ಯುಕ್ತಸ್ಸ ಪ್ರಹಸ್ಯೈನಾಂ ಪಾರಿಜಾತಂ ಗರುತ್ಮತಿ।**
**ಆರೋಪಯಾಮಾಸ ಹರಿಸ್ತಮೂಚುರ್ವನರಕ್ಷಿಣಃ॥ 38**

**ಭೋ ಶಚೀ ದೇವರಾಜಸ್ಯ ಮಹಿಷೀ ತತ್ಪರಿಗ್ರಹಮ್।**
**ಪಾರಿಜಾತಂ ನ ಗೋವಿಂದ ಹರ್ತುಮರ್ಹಸಿ ಪಾದಪಮ್॥ 39**

**ಉತ್ಪನ್ನೋ ದೇವರಾಜಾಯ ದತ್ತಸ್ಸೋಽಪಿ ದದೌ ಪುನಃ।**
**ಮಹಿಷ್ಯೈ ಸುಮಹಾಭಾಗ ದೇವ್ಯೈ ಶಚ್ಯೈ ಕುತೂಹಲಾತ್॥ 40**

**ಶಚೀವಿಭೂಷಣಾರ್ಥಾಯ ದೇವೈರಮೃತಮಂಥನೇ।**
**ಉತ್ಪಾದಿತೋಽಯಂ ನ ಕ್ಷೇಮೀ ಗೃಹೀತ್ವೈನಂ ಗಮಿಷ್ಯಸಿ॥ 41**

**ದೇವರಾಜೋ ಮುಖಪ್ರೇಕ್ಷೀ ಯಸ್ಯಾಸ್ತಸ್ಯಾಃ ಪರಿಗ್ರಹಮ್।**
**ಮೌಢ್ಯಾತ್ಪ್ರಾರ್ಥಯಸೇ ಕ್ಷೇಮೀ ಗೃಹೀತ್ವೈನಂ ಹಿ ಕೋ ವ್ರಜೇತ್॥ 42**

---

ಭೂಷಣವಾಗಲಿ. ಪಾರಿಜಾತದ ಪುಷ್ಪಮಂಜರಿಯನ್ನು ನನ್ನ ಕೇಶಪಾಶದಲ್ಲಿ ಮುಡಿದು, ಸವತಿಯರ ನಡುವೆ ಶೋಭಿಸಬೇಕೆಂಬುದು ನನ್ನ ಬಯಕೆ!" ಎಂದಳು (36-37). ಆಗ ಶ್ರೀಕೃಷ್ಣನು ನಗೆಯನ್ನು ಬೀರಿ ಪಾರಿಜಾತ ವೃಕ್ಷವನ್ನು ಗರುಡನ ಮೇಲೆ ಏರಿಸಿದನು. ಆಗ ವನಪಾಲಕರು ಬಂದು ಇಂತೆಂದರು: "ಅಯ್ಯಾ ಕೃಷ್ಣ, ಶಚೀದೇವಿಯು ದೇವರಾಜನ ರಾಣಿ. ಆಕೆಗೆ ಅತ್ಯಂತ ಪ್ರಿಯವಾದ ಈ ವೃಕ್ಷವನ್ನು ನೀನು ಒಯ್ಯುವುದಕ್ಕಾಗದು (38-39). ಕ್ಷೀರ ಸಾಗರದಲ್ಲಿ ಇದು ಉತ್ಪನ್ನವಾದಾಗ ದೇವೇಂದ್ರನಿಗೆ ಬಂದಿತು. ದೇವೇಂದ್ರನು ಕೌತುಕದಿಂದ ಇದನ್ನು ತನ್ನ ರಾಣಿಯಾದ ಶಚೀದೇವಿಗೆ ಅಲಂಕಾರಾರ್ಥವಾಗಿ ಕೊಟ್ಟಿದ್ದಾನೆ (40). ಹೇ ಮಹಾಭಾಗ, ದೇವತೆಗಳು ಅಮೃತಮಂಥನ ಮಾಡುವಾಗ ಉತ್ಪಾದಿತವಾದ ವೃಕ್ಷವಿದು. ಇದನ್ನು ನೀನು ತೆಗೆದುಕೊಂಡು ಕ್ಷೇಮವಾಗಿ ಹೋಗಲಾರೆ! ಯಾವಾಕೆಯ ವದನವನ್ನು ವೀಕ್ಷಿಸುವುದಕ್ಕೆ ದೇವೇಶ್ವರನು ಲಾಲಸನಾಗಿರುತ್ತಾನೋ ಆಕೆಯ ಪ್ರೀತಿಯ ಸ್ವತ್ತನ್ನು ನೀನು

**ಅವಶ್ಯಮಸ್ಯ ದೇವೇಂದ್ರೋ ನಿಷ್ಕೃತಿಂ ಕೃಷ್ಣ ಯಾಸ್ಯತಿ।**
**ವಜ್ರೋದ್ಯತಕರಂ ಶಕ್ರಮನುಯಾಸ್ಯಂತಿ ಚಾಮರಾಃ॥** 43

**ತದಲಂ ಸಕಲೈರ್ದೇವೈರ್ವಿಗ್ರಹೇಣ ತವಾಚ್ಯುತ।**
**ವಿಪಾಕಕಟು ಯತ್ಕರ್ಮ ತನ್ನ ಶಂಸಂತಿ ಪಂಡಿತಾಃ॥** 44

*ಶ್ರೀಪರಾಶರ ಉವಾಚ:*

**ಇತ್ಯುಕ್ತೇ ತೈರುವಾಚೈತಾನ್ ಸತ್ಯಭಾಮಾತಿಕೋಪಿನೀ।**
**ಕಾ ಶಚೀ ಪಾರಿಜಾತಸ್ಯ ಕೋ ವಾ ಶಕ್ರಸ್ಸುರಾಧಿಪಃ॥** 45

**ಸಾಮಾನ್ಯಸ್ಸರ್ವಲೋಕಸ್ಯ ಯದ್ಯೇಷೋಽಮೃತಮಂಥನೇ।**
**ಸಮುತ್ಪನ್ನಸ್ತರುಃ ಕಸ್ಮಾದೇಕೋ ಗೃಹ್ಣಾತಿ ವಾಸವಃ॥** 46

**ಯಥಾ ಸುರಾ ಯಥೈವೇಂದುರ್ಯಥಾ ಶ್ರೀರ್ವನರಕ್ಷಿಣಃ।**
**ಸಾಮಾನ್ಯಸ್ಸರ್ವಲೋಕಸ್ಯ ಪಾರಿಜಾತಸ್ತಥಾ ದ್ರುಮಃ॥** 47

---

ಬಯಸುವುದು ಮೌಢ್ಯವೇ ಸರಿ. ಈ ಪಾರಿಜಾತವನ್ನು ತೆಗೆದುಕೊಂಡು ಯಾವನು ಕ್ಷೇಮವಾಗಿ ಹೋದಾನು? (41-42). ಕೃಷ್ಣ, ದೇವೇಂದ್ರನು ಇದಕ್ಕೆ ಪ್ರತಿಕ್ರಿಯೆಯನ್ನೆಸಗುವುದು ನಿಶ್ಚಿತ. ವಜ್ರಧಾರಿಯಾದ ಇಂದ್ರನನ್ನು ದೇವತೆಗಳು ಹಿಂಬಾಲಿಸುವರು. ಆದ್ದರಿಂದ ಸಕಲದೇವತೆಗಳನ್ನೂ ಎದುರುಹಾಕಿಕೊಳ್ಳುವ ಕೆಲಸ ನಿನಗೆ ಬೇಡ. ಪರಿಣಾಮದಲ್ಲಿ ಕಟುಫಲವನ್ನೀಯುವ ಕೃತ್ಯವನ್ನು ಪಂಡಿತರು ಮೆಚ್ಚುವುದಿಲ್ಲ!" ಎಂದರು (43-44). ವನಪಾಲಕರ ಈ ನುಡಿಗಳನ್ನು ಕೇಳಿ ಸತ್ಯಭಾಮೆ ಅತ್ಯಂತ ಕ್ರುದ್ಧಳಾಗಿ ಈ ರೀತಿ ಉತ್ತರಕೊಟ್ಟಳು: "ಪಾರಿಜಾತದ ಮೇಲೆ ಅಧಿಕಾರ ನಡೆಸುವುದಕ್ಕೆ ಈ ಶಚಿ ಯಾರು? ದೇವರಾಜನಾದ ಇಂದ್ರ ಯಾರು? ಈ ವೃಕ್ಷವು ಅಮೃತಮಂಥನಕಾಲದಲ್ಲಿ ಹುಟ್ಟಿದ ಮೇಲೆ ಎಲ್ಲರಿಗೂ ಸೇರಿದ್ದು! ಇಂದ್ರನೊಬ್ಬನೇ ಇದನ್ನು ತೆಗೆದುಕೊಳ್ಳಲು ಕಾರಣವೇನು? (45-46). ಎಲೈ ವನರಕ್ಷಕರೆ, (ಅಮೃತಮಂಥನದಲ್ಲಿ ಹುಟ್ಟಿದ) ಮದಿರೆ, ಚಂದ್ರ, ಸಂಪತ್ತು—ಇವೆಲ್ಲವೂ ಹೇಗೆ ಸರ್ವಲೋಕಕ್ಕೆ ಸೇರಿದ ಸಾಮಾನ್ಯ ವಸ್ತುಗಳೋ ಹಾಗೆಯೇ ಈ ಪಾರಿಜಾತವೃಕ್ಷವೂ ಕೂಡ!

**ಭರ್ತೃಬಾಹುಮಹಾಗರ್ವಾದ್ರುಣದ್ಧ್ಯೇನಮಥೋ ಶಚೀ।**
**ತತ್ಕಥ್ಯತಾಮಲಂ ಕ್ಷಾಂತ್ಯಾ ಸತ್ಯಾ ಹಾರಯತಿ ದ್ರುಮಮ್॥ 48**

**ಕಥ್ಯತಾಂ ಚ ದ್ರುತಂ ಗತ್ವಾ ಪೌಲೋಮ್ಯಾ ವಚನಂ ಮಮ।**
**ಸತ್ಯಭಾಮಾ ವದತ್ಯೇತದಿತಿ ಗರ್ವೋದ್ಧತಾಕ್ಷರಮ್॥ 49**

**ಯದಿ ತ್ವಂ ದಯಿತಾ ಭರ್ತುರ್ಯದಿ ವಶ್ಯಃ ಪತಿಸ್ತವ।**
**ಮದ್ಭರ್ತುರ್ಹರತೋ ವೃಕ್ಷಂ ತತ್ಕಾರಯ ನಿವಾರಣಮ್॥ 50**

**ಜಾನಾಮಿ ತೇ ಪತಿಂ ಶಕ್ರಂ ಜಾನಾಮಿ ತ್ರಿದಶೇಶ್ವರಮ್।**
**ಪಾರಿಜಾತಂ ತಥಾಪ್ಯೇನಂ ಮಾನುಷೀ ಹಾರಯಾಮಿ ತೇ॥ 51**

*ಶ್ರೀಪರಾಶರ ಉವಾಚ:*

**ಇತ್ಯುಕ್ತಾ ರಕ್ಷಿಣೋ ಗತ್ವಾ ಶಚ್ಯಾಃ ಪ್ರೋಚುರ್ಯಥೋದಿತಮ್।**
**ಶ್ರುತ್ವಾ ಚೋತ್ಸಾಹಯಾಮಾಸ ಶಚೀ ಶಕ್ರಂ ಸುರಾಧಿಪಮ್॥ 52**

---

(47). ಆ ಶಚಿಯು ಗಂಡನ ಬಾಹುಬಲದ ಕೊಬ್ಬಿನಿಂದ ಇದನ್ನು ತಡೆಯುವುದಾದರೆ, ಸತ್ಯಭಾಮೆ ಈ ವೃಕ್ಷವನ್ನು ಹಾರಿಸಿಕೊಂಡು ಹೋಗುತ್ತಿದ್ದಾಳೆಂದು ಅವಳಿಗೆ ಹೇಳಿರಿ! ಕ್ಷಮಿಸಬೇಕಾದ್ದಿಲ್ಲವೆಂದೂ ತಿಳಿಸಿರಿ! (48). ಎಲೈ ಮಾಲಿಗಳೆ, ಬೇಗನೆ ಹೋಗಿ ಶಚಿಗೆ ನನ್ನ ಮಾತನ್ನು ತಿಳಿಸಿರಿ. ಸತ್ಯಭಾಮೆ ಗರ್ವೋದ್ಧತಳಾಗಿ ಈ ಮಾತನ್ನಾಡಿದ್ದಾಳೆಂದು ಹೇಳಿರಿ! ಏನೆಂದರೆ, ನಿನ್ನ ಗಂಡನಿಗೆ ನೀನು ಪ್ರಿಯಳಾಗಿರುವುದು ದಿಟವಾದರೆ, ಆತನು ನಿನಗೆ ವಶ್ಯನಾಗಿರುವುದು ದಿಟವಾದರೆ, ಇದೋ, ನನ್ನ ಗಂಡನು ಪಾರಿಜಾತವೃಕ್ಷವನ್ನು ಅಪಹರಿಸಿಕೊಂಡು ಹೋಗುತ್ತಿದ್ದಾನೆ, ತಡೆಯಬಹುದು! (49-50). ಎಲೌ ಶಚಿ, ನಿನ್ನ ಪತಿ ಇಂದ್ರನೆಂಬುದು ಗೊತ್ತಿದೆ. ಅವನು ತ್ರಿದಶೇಶ್ವರನೆಂಬುದೂ ಗೊತ್ತಿದೆ. ಆದರೂ ಸಹ ಮನುಷ್ಯಸ್ತ್ರೀಯಾದ ನಾನು ನಿನ್ನ ಪಾರಿಜಾತ ವೃಕ್ಷವನ್ನು ಹಾರಿಸಿಕೊಂಡು ಹೋಗುತ್ತಿದ್ದೇನೆ—ಎಂಬ ಈ ಮಾತನ್ನು ತಿಳಿಸಿರಿ!" ಎಂದಳು (51). ಆಗ ವನಪಾಲಕರು ಹೋಗಿ ಸತ್ಯಭಾಮೆ ಹೇಳಿದ್ದನ್ನು ಶಚಿಗೆ ತಿಳಿಸಿದರು. ಶಚಿಯು ಸುರಾಧಿಪನಾದ ಇಂದ್ರನನ್ನು ಪ್ರೋತ್ಸಾಹಿಸಿದಳು. ಮೈತ್ರೇಯ, ಇಂದ್ರನು

**ತತಸ್ಸಮಸ್ತದೇವಾನಾಂ ಸೈನ್ಯೈಃ ಪರಿವೃತೋ ಹರಿಮ್।**
**ಪ್ರಯಯೌ ಪಾರಿಜಾತಾರ್ಥಮಿಂದ್ರೋ ಯೋದ್ಧುಂ ದ್ವಿಜೋತ್ತಮ॥ 53**

**ತತಃ ಪರಿಘನಿಸ್ತ್ರಿಂಶಗದಾಶೂಲವರಾಯುಧಾಃ।**
**ಬಭೂವುಸ್ತ್ರಿದಶಾಸ್ಸಜ್ಜಾಃ ಶಕ್ರೇ ವಜ್ರಕರೇ ಸ್ಥಿತೇ॥ 54**

**ತತೋ ನಿರೀಕ್ಷ್ಯ ಗೋವಿಂದೋ ನಾಗರಾಜೋಪರಿ ಸ್ಥಿತಮ್।**
**ಶಕ್ರಂ ದೇವಪರೀವಾರಂ ಯುದ್ಧಾಯ ಸಮುಪಸ್ಥಿತಮ್॥ 55**

**ಚಕಾರ ಶಙ್ಖನಿರ್ಘೋಷಂ ದಿಶಶ್ಶಬ್ದೇನ ಪೂರಯನ್।**
**ಮುಮೋಚ ಶರಸಙ್ಘಾತಾನ್ ಸಹಸ್ರಾಯುತಶಶ್ಶಿತಾನ್॥ 56**

**ತತೋ ದಿಶೋ ನಭಶ್ಚೈವ ದೃಷ್ಟ್ವಾ ಶರಶತೈಶ್ಶಿತಮ್।**
**ಮುಮುಚುಸ್ತ್ರಿದಶಾಸ್ಸರ್ವೇ ಹ್ಯಸ್ತ್ರಶಸ್ತ್ರಾಣ್ಯನೇಕಶಃ॥ 57**

**ಏಕೈಕಮಸ್ತ್ರಂ ಶಸ್ತ್ರಂ ಚ ದೇವೈರ್ಮುಕ್ತಂ ಸಹಸ್ರಶಃ।**
**ಚಿಚ್ಛೇದ ಲೀಲಯೈವೇಶೋ ಜಗತಾಂ ಮಧುಸೂದನಃ॥ 58**

---

ದೇವಸೈನಿಕರಿಂದ ಪರಿವೃತನಾಗಿ ಪಾರಿಜಾತ ವೃಕ್ಷಕ್ಕೋಸ್ಕರ ಶ್ರೀಕೃಷ್ಣನೊಡನೆ ಹೋರಾಡಲು ಬಂದನು (52-53). ಇಂದ್ರನು ವಜ್ರಾಯುಧವನ್ನು ಹಿಡಿದು ನಿಲ್ಲಲಾಗಿ, ದೇವತೆಗಳು ಪರಿಘ ಖಡ್ಗ ಗದಾ ಶೂಲ—ಮೊದಲಾದ ನಿಶಿತಾಯುಧಗಳನ್ನು ಧರಿಸಿ ಸಜ್ಜಾದರು. ಹೀಗೆ ದೇವತೆಗಳಿಂದ ಪರಿವೃತನಾಗಿ ಐರಾವತವನ್ನೇರಿ ಎದುರಿಸುವುದಕ್ಕೆ ಬಂದ ಇಂದ್ರನನ್ನು ನೋಡಿ ಶ್ರೀಕೃಷ್ಣನು, ದಿಗ್ದಿಗಂತಗಳು ಮೊಳಗುವಂತೆ ಶಂಖವನ್ನೂದಿ ಸಾವಿರ ಲಕ್ಷಗಟ್ಟಲೆ ಕೂರ್ಗಣೆ ಗಳನ್ನು ಸುರಿಸಿದನು (54-56). ಸಕಲದಿಕ್ಕುಗಳೂ ಆಕಾಶವೂ ಆತನ ಕೂರ್ಗಣೆ ಗಳಿಂದ ವ್ಯಾಪಿಸಿಹೋದುದನ್ನು ನೋಡಿ ಸಕಲ ದೇವತೆಗಳೂ ಶಸ್ತ್ರಾಸ್ತ್ರಗಳನ್ನು ಯಥೇಚ್ಛವಾಗಿ ಪ್ರಯೋಗಿಸಿದರು. ದೇವತೆಗಳು ಪ್ರಯೋಗಿಸಿದ ಒಂದೊಂದು ಅಸ್ತ್ರವನ್ನೂ ಶಸ್ತ್ರವನ್ನೂ ಜಗದೀಶ್ವರನಾದ ಮಧುಸೂದನನು ಲೀಲೆಯಿಂದ ಸಾವಿರಾರು ಚೂರುಗಳನ್ನಾಗಿ ಕತ್ತರಿಸಿದನು (57-58). ಸರ್ಪಾಶನನಾದ

**ಪಾಶಂ ಸಲಿಲರಾಜಸ್ಯ ಸಮಾಕೃಷ್ಯೋರಗಾಶನಃ।**
**ಚಕಾರ ಖಂಡಶಶ್ಚಂಚ್ವಾ ಬಾಲಪನ್ನಗದೇಹವತ್॥** 59

**ಯಮೇನ ಪ್ರಹಿತಂ ದಂಡಂ ಗದಾವಿಕ್ಷೇಪಖಂಡಿತಮ್।**
**ಪೃಥಿವ್ಯಾಂ ಪಾತಯಾಮಾಸ ಭಗವಾನ್ ದೇವಕೀಸುತಃ॥** 60

**ಶಿಬಿಕಾಂ ಚ ಧನೇಶಸ್ಯ ಚಕ್ರೇಣ ತಿಲಶೋ ವಿಭುಃ।**
**ಚಕಾರ ಶೌರಿರರ್ಕಂ ಚ ದೃಷ್ಟಿದೃಷ್ಟಹತೌಜಸಮ್॥** 61

**ನೀತೋಽಗ್ನಿಶ್ಶೀತತಾಂ ಬಾಣೈರ್ದ್ರಾವಿತಾ ವಸವೋ ದಿಶಃ।**
**ಚಕ್ರವಿಚ್ಛಿನ್ನಶೂಲಾಗ್ರಾ ರುದ್ರಾ ಭುವಿ ನಿಪಾತಿತಾಃ॥** 62

**ಸಾಧ್ಯಾ ವಿಶ್ವೇಽಥ ಮರುತೋ ಗಂಧರ್ವಾಶ್ಚೈವ ಸಾಯಕೈಃ।**
**ಶಾರ್ಙ್ಗಿಣಾ ಪ್ರೇರಿತೈರಸ್ತಾ ವ್ಯೋಮ್ನಿ ಶಾಲ್ಮಲಿತೂಲವತ್॥** 63

**ಗರುತ್ಮಾನಪಿ ತುಂಡೇನ ಪಕ್ಷಾಭ್ಯಾಂ ಚ ನಖಾಂಕುರೈಃ।**
**ಭಕ್ಷಯಂಸ್ತಾಡಯನ್ ದೇವಾನ್ ದಾರಯಂಶ್ಚ ಚಚಾರವೈ॥** 64

---

ಗರುಡನು ಸಲಿಲರಾಜನಾದ ವರುಣನ ಪಾಶವನ್ನು ಸೆಳೆದು ಹಾವಿನ ಮರಿಯನ್ನು ಕುಕ್ಕುವಂತೆ ಕೊಕ್ಕಿನಿಂದ ಕುಕ್ಕಿ ತುಂಡು ತುಂಡು ಮಾಡಿದನು. ಯಮನು ಪ್ರಯೋಗಿಸಿದ ದಂಡಾಯುಧವನ್ನು ಭಗವಾನ್ ಶ್ರೀಕೃಷ್ಣನು ಗದೆಯಿಂದ ತುಂಡರಿಸಿ ನೆಲದಮೇಲೆ ಬೀಳಿಸಿದನು (59-60). ಕುಬೇರನ ವಿಮಾನವನ್ನು ಎಳ್ಳುಕಾಳಿನಂತೆ ಚಕ್ರದಿಂದ ಪುಡಿಮಾಡಿದನಲ್ಲದೆ, ಸೂರ್ಯನನ್ನು ತನ್ನ ತೇಜೋಮಯ ದೃಷ್ಟಿಯಿಂದಲೇ ನಿಸ್ತೇಜಗೊಳಿಸಿದನು. ಅಗ್ನಿಯು ತಣ್ಣಗಾದನು! ಶ್ರೀಕೃಷ್ಣನ ಬಾಣಗಳ ಹೊಡೆತಕ್ಕೆ ಸಿಕ್ಕಿ ವಸುಗಳು ದಿಕ್ಕುದಿಕ್ಕಿಗೆ ಓಡಿಹೋದರು. ಸುದರ್ಶನಚಕ್ರದ ರಭಸಕ್ಕೆ ರುದ್ರರ ತ್ರಿಶೂಲಗಳು ಮುರಿದು ಹೋಗಲು, ಅವರು ಉರುಳಿಬಿದ್ದರು (61-62). ಶ್ರೀಕೃಷ್ಣನು ಸೆಳೆದು ಬಿಟ್ಟ ಸಾಯಕಗಳ ರಭಸಕ್ಕೆ ಸಿಕ್ಕಿ ಸಾಧ್ಯರೂ ವಿಶ್ವೇದೇವತೆಗಳೂ ಮರುತ್ತುಗಳೂ ಗಂಧರ್ವರೂ ಬೂರುಗದ ಹತ್ತಿಯಂತೆ ಗಗನದಲ್ಲಿ ಹಾರಿಹೋದರು! ಗರುತ್ಮಂತನೂ ಸಹ ದೇವತೆಗಳನ್ನು ಕೊಕ್ಕಿನಿಂದ ಅಗಿಯುತ್ತ , ರೆಕ್ಕೆಗಳಿಂದ ಬಡಿಯುತ್ತ , ಉಗುರುಗಳಿಂದ ಸೀಳುತ್ತ ಹಾರಾಡಿದನು (63-64). ಅನಂತರ

ತತಶ್ಶರಸಹಸ್ರೇಣ ದೇವೇಂದ್ರಮಧುಸೂದನೌ।
ಪರಸ್ಪರಂ ವವರ್ಷಾತೇ ಧಾರಾಭಿರಿವ ತೋಯದೌ॥ 65

ಐರಾವತೇನ ಗರುಡೋ ಯುಯುಧೇ ತತ್ರ ಸಂಕುಲೇ।
ದೇವೈಸ್ಸಮಸ್ತೈರ್ಯುಯುಧೇ ಶಕ್ರೇಣ ಚ ಜನಾರ್ದನಃ॥ 66

ಭಿನ್ನೇಷ್ವಶೇಷಬಾಣೇಷು ಶಸ್ತ್ರೇಷ್ವಸ್ತ್ರೇಷು ಚ ತ್ವರನ್।
ಜಗ್ರಾಹ ವಾಸವೋ ವಜ್ರಂ ಕೃಷ್ಣಶ್ಚಕ್ರಂ ಸುದರ್ಶನಮ್॥ 67

ತತೋ ಹಾಹಾಕೃತಂ ಸರ್ವಂ ತ್ರೈಲೋಕ್ಯಂ ದ್ವಿಜಸತ್ತಮ।
ವಜ್ರಚಕ್ರಕರೌ ದೃಷ್ಟ್ವಾ ದೇವರಾಜಜನಾರ್ದನೌ॥ 68

ಕ್ಷಿಪ್ತಂ ವಜ್ರಮಥೇಂದ್ರೇಣ ಜಗ್ರಾಹ ಭಗವಾನ್ ಹರಿಃ।
ನ ಮುಮೋಚ ತದಾ ಚಕ್ರಂ ಶಕ್ರಂ ತಿಷ್ಠೇತಿ ಚಾಬ್ರವೀತ್॥ 69

ಪ್ರಣಷ್ಟವಜ್ರಂ ದೇವೇಂದ್ರಂ ಗರುಡಕ್ಷತವಾಹನಮ್।
ಸತ್ಯಭಾಮಾಬ್ರವೀದ್ವೀರಂ ಪಲಾಯನಪರಾಯಣಮ್॥ 70

---

ದೇವೇಂದ್ರನೂ ಮಧುಸೂದನನೂ ಎರಡು ಮೇಘಗಳು ಧಾರಾಕಾರವಾಗಿ ಮಳೆ ಸುರಿಸುವಂತೆ, ಸಾವಿರಾರು ಶರಗಳನ್ನು ಸುರಿಸುತ್ತ ಕಾದಾಡಿದರು. ಆ ಸಂಕುಲಯುದ್ಧದಲ್ಲಿ ಗರುಡನು ಐರಾವತದೊಡನೆಯೂ ಶ್ರೀಕೃಷ್ಣನು ಇಂದ್ರಾದಿ ದೇವತೆಗಳೊಡನೆಯೂ ಹೋರಾಡಿದರು. ತನ್ನ ಸಕಲಬಾಣಗಳೂ ಶಸ್ತ್ರಾಸ್ತ್ರಗಳೂ ಛಿನ್ನಭಿನ್ನವಾಗಲು ದೇವೇಂದ್ರನು ವಜ್ರಾಯುಧವನ್ನೆತ್ತಿಹಿಡಿದನು. ಶ್ರೀಕೃಷ್ಣನು ಸುದರ್ಶನ ಚಕ್ರವನ್ನು ಹಿರಿದನು (65-67). ಮೈತ್ರೇಯ, ಮೂರು ಲೋಕವೂ ತಲ್ಲಣಗೊಂಡಿತು. ದೇವೇಂದ್ರನು ವಜ್ರಾಯುಧವನ್ನೂ ಶ್ರೀಕೃಷ್ಣನು ಸುದರ್ಶನ ಚಕ್ರವನ್ನೂ ಹಿಡಿದು ನಿಂತಿದ್ದನ್ನು ಕಂಡು ಹಾಹಾಕಾರವೆದ್ದಿತು. ದೇವೇಂದ್ರನು ವಜ್ರಾಯುಧವನ್ನು ಪ್ರಯೋಗಿಸಿದನು. ಶ್ರೀಕೃಷ್ಣನು ಅದನ್ನು ತನ್ನ ಕೈಯಿಂದ ಹಿಡಿದುಬಿಟ್ಟನಲ್ಲದೆ, ಚಕ್ರಾಯುಧವನ್ನು ಪ್ರಯೋಗಿಸಲಿಲ್ಲ. ಇಂದ್ರನನ್ನು ಕುರಿತು 'ನಿಲ್ಲು'! ಎಂದು ಅಬ್ಬರಿಸಿದನು (68-69). ಇಂದ್ರನಿಗೆ ವಜ್ರಾಯುಧ ಕೈ ಬಿಟ್ಟಿತು. ವಾಹನವಾದ ಐರಾವತವನ್ನು ಗರುಡನು ವಿಪುಲವಾಗಿ ಗಾಯಗೊಳಿಸಿದ್ದನು. ಆಗ ಇಂದ್ರನು ಓಡಿಹೋಗಲು

**ತ್ರೈಲೋಕ್ಯೇಶ ನ ತೇ ಯುಕ್ತಂ ಶಚೀಭರ್ತುಃ ಪಲಾಯನಮ್।**
**ಪಾರಿಜಾತಸ್ರಗಾಭೋಗಾ ತ್ವಾಮುಪಸ್ಥಾಸ್ಯತೇ ಶಚೀ॥** 71

**ಕೀದೃಶಂ ದೇವರಾಜ್ಯಂ ತೇ ಪಾರಿಜಾತಸ್ರಗುಜ್ಜ್ವಲಾಮ್।**
**ಅಪಶ್ಯತೋ ಯಥಾಪೂರ್ವಂ ಪ್ರಣಯಾಭ್ಯಾಗತಾಂ ಶಚೀಮ್॥** 72

**ಅಲಂ ಶಕ್ರ ಪ್ರಯಾಸೇನ ನ ವ್ರೀಡಾಂ ಗಂತುಮರ್ಹಸಿ।**
**ನೀಯತಾಂ ಪಾರಿಜಾತೋಽಯಂ ದೇವಾಸ್ಸಂತು ಗತವ್ಯಥಾಃ॥** 73

**ಪತಿಗರ್ವಾವಲೇಪೇನ ಬಹುಮಾನಪುರಸ್ಸರಮ್।**
**ನ ದದರ್ಶ ಗೃಹಂ ಯಾತಾಮುಪಚಾರೇಣ ಮಾಂ ಶಚೀ॥** 74

**ಸ್ತ್ರೀತ್ವಾದಗುರುಚಿತ್ತಾಹಂ ಸ್ವಭರ್ತೃಶ್ಲಾಘನಾಪರಾ।**
**ತತಃ ಕೃತವತೀ ಶಕ್ರ ಭವತಾ ಸಹ ವಿಗ್ರಹಮ್॥** 75

---

ತೊಡಗಿದಾಗ ಸತ್ಯಭಾಮೆ ಇಂತೆಂದಳು (70): "ವೀರ–ತ್ರಿಲೋಕೇಶ್ವರ! ಶಚೀಪತಿಯಾದ ನಿನಗೆ ಪಲಾಯನವು ಯುಕ್ತವಲ್ಲ! ಶಚಿಯು ಪಾರಿಜಾತ ಪುಷ್ಪಮಾಲೆಯಿಂದ ಭೂಷಿತಳಾಗಿ ನಿನ್ನ ಬಳಿಗೆ ಬರುವಳು! ಪಾರಿಜಾತ ಮಾಲೆಯಿಂದ ಪರಮ ರಮಣೀಯಳಾಗಿ ಪ್ರಣಯದಿಂದ ಬಳಿಗೆ ಬರುವ ಶಚಿಯನ್ನು ಮೊದಲಿನಂತೆ ನೋಡದೆ ಹೋದರೆ ಅದೆಂತಹ ಸ್ವರ್ಗಾಧಿಪತ್ಯ ನಿನ್ನದು! (71-72). ಒಳ್ಳೆಯದು; ಇಂದ್ರ ಆಯಾಸಪಡಬೇಡ, ನಾಚಿಕೆ ಬೇಡ. ಇದೋ ಪಾರಿಜಾತವೃಕ್ಷವನ್ನು ತೆಗೆದುಕೋ. ದೇವತೆಗಳು ಖಿನ್ನರಾಗದಿರಲಿ. ಮನೆಗೆ ಬಂದ ನನ್ನನ್ನು ಶಚಿಯು ಉಪಚರಿಸಿ ಆದರದಿಂದ ಕಾಣಲಿಲ್ಲ. ತನ್ನ ಪತಿಯ ಬಾಹುಬಲದ ಕೊಬ್ಬು ಹಾಗೆ ಮಾಡಿಸಿತು! (73-74). ನಾನೂ ಹೆಂಗಸು; ಅವಳ ಅಸಡ್ಡೆಯನ್ನು ಗಂಭೀರಚಿತ್ತದಿಂದ ಹಗುರವಾಗಿ ಗ್ರಹಿಸದೆ ಹೋದೆನು. ನನ್ನ ಪತಿಯ ಪರಾಕ್ರಮವನ್ನು ಪ್ರಕಟಿಸಬೇಕೆಂದು, ಇಂದ್ರ, ನಿನ್ನೊಡನೆ ಯುದ್ಧವನ್ನು ಹೂಡಿದೆನು. ಈ ಪಾರಿಜಾತವೃಕ್ಷವೇನೂ ನನಗೆ ಬೇಕಾಗಿಲ್ಲ. ಪರರ ಸ್ವತ್ತು ನನಗೇಕೆ? ಅವಳು ಪತಿಯನ್ನು ನೆಚ್ಚಿ ಗರ್ವಿತ

**ತದಲಂ ಪಾರಿಜಾತೇನ ಪರಸ್ವೇನ ಹೃತೇನ ಮೇ।**
**ರೂಪೇಣ ಗರ್ವಿತಾ ಸಾ ತು ಭರ್ತ್ರಾ ಕಾ ಸ್ತ್ರೀ ನ ಗರ್ವಿತಾ॥** 76

*ಶ್ರೀಪರಾಶರ ಉವಾಚ:*

**ಇತ್ಯುಕ್ತೋ ವೈ ನಿವವೃತೇ ದೇವರಾಜಸ್ತಯಾ ದ್ವಿಜ।**
**ಪ್ರಾಹ ಚೈನಾಮಲಂ ಚಂಡಿ ಸಖ್ಯುಃ ಖೇದೋಕ್ತಿವಿಸ್ತರೈಃ॥** 77

**ನ ಚಾಪಿ ಸರ್ಗಸಂಹಾರಸ್ಥಿತಿಕರ್ತಾಖಿಲಸ್ಯ ಯಃ।**
**ಜಿತಸ್ಯ ತೇನ ಮೇ ವ್ರೀಡಾ ಜಾಯತೇ ವಿಶ್ವರೂಪಿಣಾ॥** 78

**ಯಸ್ಮಾಜ್ಜಗತ್ಸಕಲಮೇತದನಾದಿಮಧ್ಯಾ-**
**ದ್ಯಸ್ಮಿನ್ಯತಶ್ಚ ನ ಭವಿಷ್ಯತಿ ಸರ್ವಭೂತಾತ್।**
**ತೇನೋದ್ಭವಪ್ರಲಯಪಾಲನಕಾರಣೇನ**
**ವ್ರೀಡಾ ಕಥಂ ಭವತಿ ದೇವಿ ನಿರಾಕೃತಸ್ಯ॥** 79

---

ಳಾಗಿದ್ದಳು. ಪತಿಯ ಭಾಗ್ಯದಿಂದ ಯಾವ ಸ್ತ್ರೀ ಗರ್ವಿತಳಾಗುವುದಿಲ್ಲ!" ಎಂದಳು (75-76). ಮೈತ್ರೇಯ, ಆಗ ದೇವರಾಜನು ಹಿಂದಿರುಗಿ ಬಂದು ಸತ್ಯಭಾಮೆಯನ್ನು ಕುರಿತು "ದೇವಿ–ಕ್ರೋಧನೆ, ಮಿತ್ರನಿಗೆ ಇಷ್ಟು ಕಠೋರ ವಚನಗಳನ್ನಾಡಬೇಡ. ಜಗತ್ತಿನ ಸೃಷ್ಟಿಸ್ಥಿತಿಸಂಹಾರಕರ್ತನೂ ವಿಶ್ವರೂಪನೂ ಆದ ಪ್ರಭುವಿನಿಂದ ನನಗೆ ಸೋಲಾಯಿತೆಂದು ನಾಚಿಕೆ ಪಡಬೇಕಾದ್ದೇನೂ ಇಲ್ಲ (77-78). ದೇವಿ ಅನಾದಿಮಧ್ಯನೂ ಸರ್ವಭೂತಾತ್ಮಕನೂ ಆದ ಯಾವ ಪರಮಾತ್ಮನಿಂದ ಈ ಸಕಲ ವಿಶ್ವವೂ ಜನಿಸಿದೆಯೋ ಯಾರಲ್ಲಿ ನಿಂತಿದೆಯೋ ಯಾರಿಂದ ನಾಶವಾಗುತ್ತದೆಯೋ ಅಂತಹ ಸರ್ಗಸ್ಥಿತಿಲಯಕರ್ತನು ಪರಾಜಯ ಗೊಳಿಸಿದರೆ ಲಜ್ಜೆ ಹೇಗಾದೀತು? (79). ಸಕಲಭುವನಗಳಿಗೆ ಜನ್ಮವಿತ್ತಿರುವ ಸೂಕ್ಷ್ಮಾತಿಸೂಕ್ಷ್ಮವಾದ, ಯಾವಾತನ ನಿಜಮೂರ್ತಿಯು ಸಮಸ್ತ ವೇದ ಗಳನ್ನೂ ಬಲ್ಲ ಅನ್ಯರಿಂದ ತಿಳಿಯಲು ಅಶಕ್ಯವಾಗಿದೆಯೋ ಅಂತಹ ಅಜನೂ

**ಸಕಲಭುವನಸೂತಿರ್ಮೂರ್ತಿರಲ್ಪಾಲ್ಪಸೂಕ್ಷ್ಮಾ**
**ವಿದಿತಸಕಲವೇದ್ಯೈರ್ಜ್ಞಾಯತೇ ಯಸ್ಯ ನಾನ್ಯೈಃ।**
**ತಮಜಮಕೃತಮೀಶಂ ಶಾಶ್ವತಂ ಸ್ವೇಚ್ಛಯೈನಂ**
**ಜಗದುಪಕೃತಿಮರ್ತ್ಯಂ ಕೋ ವಿಜೇತುಂ ಸಮರ್ಥಃ॥** 80

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ತ್ರಿಂಶೋಽಧ್ಯಾಯಃ

---

ಸ್ವತಃಸಿದ್ಧ ಪರಮೇಶ್ವರನೂ ಶಾಶ್ವತನೂ ಸ್ವೇಚ್ಛೆಯಿಂದ ಜಗದುಪಕಾರಕ್ಕಾಗಿ ಮನುಷ್ಯರೂಪವನ್ನು ತಳೆದವನೂ ಆದ ಸ್ವಾಮಿಯನ್ನು ಜಯಿಸುವುದಕ್ಕೆ ಯಾವನು ಸಮರ್ಥನು?" ಎಂದು ಹೇಳಿದನು (80).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಮೂವತ್ತನೆಯ ಅಧ್ಯಾಯ ಮುಗಿಯಿತು.



## ಏಕತ್ರಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಸಂಸ್ತುತೋ ಭಗವಾನಿತ್ಥಂ ದೇವರಾಜೇನ ಕೇಶವಃ।**
**ಪ್ರಹಸ್ಯ ಭಾವಗಂಭೀರಮುವಾಚೇಂದ್ರಂ ದ್ವಿಜೋತ್ತಮ॥** 1

*ಶ್ರೀಕೃಷ್ಣ ಉವಾಚ:*

**ದೇವರಾಜೋ ಭವಾನಿಂದ್ರೋ ವಯಂ ಮರ್ತ್ಯಾ ಜಗತ್ಪತೇ।**
**ಕ್ಷಂತವ್ಯಂ ಭವತೈವೇದಮಪರಾಧಕೃತಂ ಮಮ॥** 2

**ಪಾರಿಜಾತತರುಶ್ಚಾಯಂ ನೀಯತಾಮುಚಿತಾಸ್ಪದಮ್।**
**ಗೃಹೀತೋಽಯಂ ಮಯಾ ಶಕ್ರ ಸತ್ಯಾವಚನಕಾರಣಾತ್॥** 3

**ವಜ್ರಂ ಚೇದಂ ಗೃಹಾಣ ತ್ವಂ ಯದತ್ರ ಪ್ರಹಿತಂ ತ್ವಯಾ।**
**ತವೈವೈತತ್ ಪ್ರಹರಣಂ ಶಕ್ರ ವೈರಿವಿದಾರಣಮ್॥** 4

---

### ಅಧ್ಯಾಯ 31

ಶ್ರೀಕೃಷ್ಣನು ಪಾರಿಜಾತ ವೃಕ್ಷದೊಂದಿಗೆ ದ್ವಾರಕಾನಗರಕ್ಕೆ ಬರುವುದು.
ಹದಿನಾರುಸಾವಿರದ ಒಂದು ನೂರು ಕನ್ಯೆಯರನ್ನು ಮದುವೆಯಾಗುವುದು.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ದೇವರಾಜನು ಈ ಪ್ರಕಾರ ಸ್ತುತಿಸಲಾಗಿ ಭಗವಾನ್ ಕೇಶವನು ನಕ್ಕು ಗಂಭೀರಭಾವದಿಂದ ಇಂತೆಂದನು: "ನೀನು ಜಗತ್ಪತಿಯಾದ ಇಂದ್ರ; ದೇವರಾಜ. ನಾವು ಮನುಷ್ಯರು! ನನ್ನ ಈ ಅಪರಾಧವನ್ನು ನೀನೇ ಮನ್ನಿಸಬೇಕು! (1-2). ಈ ಪಾರಿಜಾತತರುವನ್ನು ಅದಕ್ಕೆ ಯೋಗ್ಯವಾದ ನಂದನವನಕ್ಕೆ ತೆಗೆದುಕೊಂಡು ಹೋಗು. ದೇವೇಂದ್ರ, ಈ ಸತ್ಯೆ ಹೇಳಿದಳೆಂದು ಈ ವೃಕ್ಷವನ್ನು ನಾನು ವಶಪಡಿಸಿಕೊಂಡೆನು. ನೀನು ಪ್ರಯೋಗಿಸಿದ್ದ ಈ ವಜ್ರಾಯುಧವನ್ನೂ ತೆಗೆದುಕೊ. ಶಕ್ರ, ವೈರಿಗಳನ್ನು ಸೀಳಿಬಿಡುವ ಈ ಆಯುಧವು ನಿನ್ನದೇ" ಎಂದನು. (3-4). ಅದಕ್ಕೆ ದೇವೇಂದ್ರನು "ಹೇ ಸ್ವಾಮಿ, 'ನಾನು ಮನುಷ್ಯನು'

*ಇಂದ್ರ ಉವಾಚ:*

**ವಿಮೋಹಯಸಿ ಮಾಮೀಶ ಮರ್ತ್ಯೋಽಹಮಿತಿ ಕಿಂ ವದನ್।**
**ಜಾನೀಮಸ್ತ್ವಾಂ ಭಗವತೋ ನ ತು ಸೂಕ್ಷ್ಮವಿದೋ ವಯಮ್॥ 5**

**ಯೋಽಸಿ ಸೋಽಸಿ ಜಗತ್ತ್ರಾಣಪ್ರವೃತ್ತೌ ನಾಥ ಸಂಸ್ಥಿತಃ।**
**ಜಗತಶ್ಶಲ್ಯನಿಷ್ಕರ್ಷಂ ಕರೋಷ್ಯಸುರಸೂದನ॥ 6**

**ನೀಯತಾಂ ಪಾರಿಜಾತೋಽಯಂ ಕೃಷ್ಣ ದ್ವಾರವತೀಂ ಪುರೀಮ್।**
**ಮರ್ತ್ಯಲೋಕೇ ತ್ವಯಾ ತ್ಯಕ್ತೇ ನಾಯಂ ಸಂಸ್ಥಾಸ್ಯತೇ ಭುವಿ॥ 7**

**ದೇವದೇವ ಜಗನ್ನಾಥ ಕೃಷ್ಣ ವಿಷ್ಣೋ ಮಹಾಭುಜ।**
**ಶಂಖಚಕ್ರಗದಾಪಾಣೇ ಕ್ಷಮಸ್ವೈತದ್ವ್ಯತಿಕ್ರಮಮ್॥ 8**

*ಶ್ರೀಪರಾಶರ ಉವಾಚ:*

**ತಥೇತ್ಯುಕ್ತ್ವಾ ಚ ದೇವೇಂದ್ರಮಾಜಗಾಮ ಭುವಂ ಹರಿಃ।**
**ಪ್ರಸಕ್ತೈಃ ಸಿದ್ಧಗಂಧರ್ವೈಃ ಸ್ತೂಯಮಾನಃ ಸುರರ್ಷಿಭಿಃ॥ 9**

---

ಎಂದು ಹೇಳುತ್ತಾ ನನ್ನನ್ನೇಕೆ ಮೋಹಗೊಳಿಸುತ್ತೀಯೆ? ಭಗವಂತನಾದ ನಿನ್ನ ಈ ಸಗುಣರೂಪವನ್ನು ಮಾತ್ರ ನಾವು ಬಲ್ಲೆವು. ನಿನ್ನ ಸೂಕ್ಷ್ಮರೂಪವನ್ನು ನಾವರಿಯೆವು (5). ನೀನು ಯಾರಾಗಿದ್ದೀಯೋ ಅವನಾಗಿದ್ದೀಯೆ! ಜಗದ್ರಕ್ಷಣೆಯ ಕಾರ್ಯದಲ್ಲಿ ಉದ್ಯುಕ್ತನಾಗಿದ್ದೀಯೆ. ಹೇ ದೈತ್ಯದಳನ, ಲೋಕದಲ್ಲಿ ಸೇರಿರುವ ಮುಳ್ಳನ್ನು ಕಿತ್ತುಹಾಕುತ್ತಿದ್ದೀಯೆ. ಶ್ರೀಕೃಷ್ಣ, ಈ ಪಾರಿಜಾತ ವೃಕ್ಷವನ್ನು ದ್ವಾರವತೀ ನಗರಕ್ಕೆ ತೆಗೆದುಕೊಂಡು ಹೋಗು. ನೀನು ಮರ್ತ್ಯಲೋಕವನ್ನು ತ್ಯಜಿಸಿದಮೇಲೆ, ಇದು ಅಲ್ಲಿರುವುದಿಲ್ಲ. ದೇವದೇವ, ಜಗನ್ನಾಥ, ಕೃಷ್ಣ, ವಿಷ್ಣೋ, ಮಹಾಭುಜ, ಶಂಖಚಕ್ರಗದಾಪಾಣಿಯೆ, ನನ್ನ ತಪ್ಪನ್ನು ಮನ್ನಿಸು" ಎಂದನು (6-8). ಶ್ರೀಕೃಷ್ಣನು 'ಆಗಲಿ' ಎಂದು ನುಡಿದು, ನೆರೆದಿದ್ದ ಸಿದ್ಧಗಂಧರ್ವದೇವರ್ಷಿಗಳಿಂದ ಸ್ತುತಿಸಲ್ಪಡುತ್ತ ಭೂಲೋಕಕ್ಕೆ ಬಂದನು. ದ್ವಾರಕಾನಗರದ ಮೇಲ್ಗಡೆ ಬಂದು ಶಂಖವನ್ನೂದಿ ದ್ವಾರಕಾವಾಸಿಗಳಿಗೆ ಹರ್ಷವನ್ನುಂಟುಮಾಡಿದನು (9). ಅನಂತರ ಸತ್ಯಭಾಮೆಯೊಡಗೂಡಿ

**ತತಶ್ಶಂಖಮುಪಾಧ್ಮಾಯ ದ್ವಾರಕೋಪರಿ ಸಂಸ್ಥಿತಃ।**
**ಹರ್ಷಮುತ್ಪಾದಯಾಮಾಸ ದ್ವಾರಕಾವಾಸಿನಾಂ ದ್ವಿಜ॥** 10

**ಅವತೀರ್ಯಾಥ ಗರುಡಾತ್ಸತ್ಯಭಾಮಾಸಹಾಯವಾನ್**
**ನಿಷ್ಕುಟೇ ಸ್ಥಾಪಯಾಮಾಸ ಪಾರಿಜಾತಂ ಮಹಾತರುಮ್॥** 11

**ಯಮಭ್ಯೇತ್ಯ ಜನಸ್ಸರ್ವೋ ಜಾತಿಂ ಸ್ಮರತಿ ಪೌರ್ವಿಕೀಮ್।**
**ವಾಸ್ಯತೇ ಯಸ್ಯ ಪುಷ್ಪೋತ್ಥಗಂಧೇನೋರ್ವೀ ತ್ರಿಯೋಜನಮ್॥** 12

**ತತಸ್ತೇ ಯಾದವಾಸ್ಸರ್ವೇ ದೇಹಬಂಧಾನಮಾನುಷಾನ್।**
**ದದೃಶುಃ ಪಾದಪೇ ತಸ್ಮಿನ್ ಕುರ್ವಂತೋ ಮುಖದರ್ಶನಮ್॥** 13

**ಕಿಂಕರೈಸ್ಸಮುಪಾನೀತಂ ಹಸ್ತ್ಯಶ್ವಾದಿ ತತೋ ಧನಮ್।**
**ವಿಭಜ್ಯ ಪ್ರದದೌ ಕೃಷ್ಣೋ ಬಾಂಧವಾನಾಂ ಮಹಾಮತಿಃ॥** 14

**ಕನ್ಯಾಶ್ಚ ಕೃಷ್ಣೋ ಜಗ್ರಾಹ ನರಕಸ್ಯ ಪರಿಗ್ರಹಾನ್॥** 15

---

ಗರುಡನಿಂದಿಳಿದು ಬಂದು ಆಕೆಯ ಉದ್ಯಾನವನದಲ್ಲಿ ಪಾರಿಜಾತ ಮಹಾವೃಕ್ಷವನ್ನು ಸ್ಥಾಪಿಸಿದನು. ಮೈತ್ರೇಯ, ಆ ದೇವವೃಕ್ಷದ ಸಮೀಪಕ್ಕೆ ಬಂದವರೆಲ್ಲರಿಗೂ ಪೂರ್ವಜನ್ಮದ ಸ್ಮರಣೆಯಾಗುತ್ತಿತ್ತು! ಅದರ ಪುಷ್ಪದ ಸುಗಂಧವು ಪೃಥ್ವಿಯಲ್ಲಿ ಮೂರು ಯೋಜನದವರೆಗೆ ವ್ಯಾಪಿಸುತ್ತಿತ್ತು! (10-12). ಸಮಸ್ತ ಯಾದವರೂ ಆ ವೃಕ್ಷದ ಕೆಳಗೆ ಕುಳಿತು ಮುಖವನ್ನು ನೋಡಿಕೊಂಡಾಗ ತಮಗೆ ಅಮಾನುಷವಾದ ದಿವ್ಯಶರೀರವಿರುವುದು ಗೋಚರಿಸುತ್ತಿತ್ತು.* ಅನಂತರ ಧೀಮಂತನಾದ ಶ್ರೀಕೃಷ್ಣನು, ನರಕಾಸುರನ ಅರಮನೆಯಿಂದ ಭೃತ್ಯರು ತಂದಿದ್ದ ಅಶ್ವಗಜಾದಿ ಸಂಪತ್ತುಗಳನ್ನು ತನ್ನ ಬಂಧುಗಳಿಗೆ ಹಂಚಿಕೊಟ್ಟನು (13-14). ನರಕಾಸುರನು ನಾನಾ ದೇಶಗಳಿಂದ ಹಿಡಿದು ತಂದು ಸೆರೆಯಲ್ಲಿಟ್ಟಿದ್ದ ಕನ್ಯೆಯರನ್ನು ಶುಭ

---

* ಯಾದವರು ದೇವತೆಗಳಾದ್ದರಿಂದ ಜನ್ಮಾಂತರಸ್ಮರಣೆಯಾಗಿ ತಮ್ಮ ದಿವ್ಯದೇಹ ಕಾಣಿಸುತ್ತಿತ್ತು.

**ತತಃ ಕಾಲೇ ಶುಭೇ ಪ್ರಾಪ್ತೇ ಉಪಯೇಮೇ ಜನಾರ್ದನಃ।**
**ತಾಃ ಕನ್ಯಾ ನರಕೇಣಾಸನ್ ಸರ್ವತೋ ಯಾಸ್ಸಮಾಹೃತಾಃ॥** 16

**ಏಕಸ್ಮಿನ್ನೇವ ಗೋವಿಂದಃ ಕಾಲೇ ತಾಸಾಂ ಮಹಾಮುನೇ।**
**ಜಗ್ರಾಹ ವಿಧಿವತ್ಪಾಣೀನ್ ಪೃಥಗ್ಗೇಹೇಷು ಧರ್ಮತಃ॥** 17

**ಷೋಡಶಸ್ತ್ರೀಸಹಸ್ರಾಣಿ ಶತಮೇಕಂ ತತೋಽಧಿಕಮ್।**
**ತಾವಂತಿ ಚಕ್ರೇ ರೂಪಾಣಿ ಭಗವಾನ್ ಮಧುಸೂದನಃ** 18

**ಏಕೈಕಮೇವ ತಾಃ ಕನ್ಯಾ ಮೇನಿರೇ ಮಧುಸೂದನಃ।**
**ಮಮೈವ ಪಾಣಿಗ್ರಹಣಂ ಮೈತ್ರೇಯ ಕೃತವಾನಿತಿ॥** 19

**ನಿಶಾಸು ಚ ಜಗತ್ಸ್ರಷ್ಟಾ ತಾಸಾಂ ಗೇಹೇಷು ಕೇಶವಃ।**
**ಉವಾಸ ವಿಪ್ರ ಸರ್ವಾಸಾಂ ವಿಶ್ವರೂಪಧರೋ ಹರಿಃ॥** 20

ಇತಿ ಶ್ರೀ ವಿಷ್ಣುಪುರಾಣೇ ಪಂಚಮಾಂಶೇ ಏಕತ್ರಿಂಶೋಽಧ್ಯಾಯಃ

---

ಮುಹೂರ್ತದಲ್ಲಿ ತಾನು ಮದುವೆಯಾದನು. ಮೈತ್ರೇಯ, ಒಂದೇ ಮುಹೂರ್ತದಲ್ಲಿ ಆ ಎಲ್ಲ ಕನ್ಯೆಯರನ್ನೂ ಬೇರೆ ಬೇರೆ ಗೃಹಗಳಲ್ಲಿ ಗೋವಿಂದನು ಶಾಸ್ತ್ರೋಕ್ತವಿಧಿಯಿಂದ ವಿವಾಹವಾದನು! (15-17). ಆ ಕನ್ಯೆಯರು ಹದಿನಾರು ಸಾವಿರದ ಮೇಲೆ ಒಂದು ನೂರು ಮಂದಿಯಿದ್ದರು! ಭಗವಾನ್ ಮಧು ಸೂದನನು ಅಷ್ಟು ಸಂಖ್ಯೆಯಲ್ಲಿ ಬೇರೆ ಬೇರೆ ರೂಪಗಳನ್ನು ಧರಿಸಿದ್ದನು! (18). ಮೈತ್ರೇಯ, ಆ ಕನ್ಯೆಯರಾದರೋ 'ಶ್ರೀಕೃಷ್ಣನು ನನ್ನೊಬ್ಬಳನ್ನೇ ಮದುವೆ ಯಾದನು' ಎಂದು ತಿಳಿದುಕೊಂಡರು! ವಿಶ್ವಕರ್ತನೂ ವಿಶ್ವರೂಪಧರನೂ ಆದ ಶ್ರೀಹರಿಯು ರಾತ್ರಿಯ ಹೊತ್ತು ಎಲ್ಲ ಮಡದಿಯರ ಮಂದಿರಗಳಲ್ಲಿಯೂ ವಾಸವಾಗಿರುತ್ತಿದ್ದನು! (19-20).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.



## ದ್ವಾತ್ರಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಪ್ರದ್ಯುಮ್ನಾದ್ಯಾ ಹರೇಃ ಪುತ್ರಾ ರುಕ್ಮಿಣ್ಯಾಂ ಕಥಿತಾಸ್ತವ।**
**ಭಾನುಭೌಮೇರಿಕಾದ್ಯಾಂಶ್ಚ ಸತ್ಯಭಾಮಾ ವ್ಯಜಾಯತ॥** 1

**ದೀಪ್ತಿಮತ್ತಾಮ್ರಪಕ್ಷಾದ್ಯಾ ರೋಹಿಣ್ಯಾಂ ತನಯಾ ಹರೇಃ।**
**ಬಭೂವುರ್ಜಾಂಬವತ್ಯಾಂ ಚ ಸಾಂಬಾದ್ಯಾ ಬಲಶಾಲಿನಃ॥** 2

**ತನಯಾ ಭದ್ರವಿಂದಾದ್ಯಾ ನಾಗ್ನಜಿತ್ಯಾಂ ಮಹಾಬಲಾಃ।**
**ಸಂಗ್ರಾಮಜಿತ್‌ಪ್ರಧಾನಾಸ್ತು ಶೈಬ್ಯಾಯಾಂ ಚ ಹರೇಸ್ಸುತಾಃ॥** 3

---

## ಅಧ್ಯಾಯ 32

ಬಾಣಪುತ್ರಿಯಾದ ಉಷೆಗೆ ಸ್ವಪ್ನದಲ್ಲಿ ಭಾವಿಪತಿಯ ದರ್ಶನ,
ಸ್ವಪ್ನದಲ್ಲಿ ಗೋಚರಿಸಿದ ಆ ಪುರುಷನು ಅನಿರುದ್ಧನೆಂದು
ಚಿತ್ರಲೇಖೆಯು ಕಂಡುಹಿಡಿಯುವುದು.

ಪರಾಶರಮುನಿಗಳು ನುಡಿದರು: ಮೈತ್ರೇಯ, ಶ್ರೀಕೃಷ್ಣನಿಗೆ ರುಕ್ಮಿಣಿಯಲ್ಲಿ ಪ್ರದ್ಯುಮ್ನನೇ ಮೊದಲಾದ ಪುತ್ರರು ಜನಿಸಿದರೆಂಬುದನ್ನು ನಿನಗೆ ತಿಳಿಸಿದ್ದೇನೆ. ಸತ್ಯಭಾಮೆಯು ಭಾನು, ಭೈಮೇರಿಕ—ಮೊದಲಾದ ಪುತ್ರರನ್ನು ಹಡೆದಳು. ದೀಪ್ತಿಮಾನ್, ತಾಮ್ರಪಕ್ಷ—ಮೊದಲಾದವರು ಶ್ರೀಕೃಷ್ಣನಿಗೆ ರೋಹಿಣಿಯಲ್ಲಿ ಜನಿಸಿದ ಪುತ್ರರು. ಸಾಂಬನೇ ಮೊದಲಾದ ಬಲಶಾಲಿಗಳಾದ ಪುತ್ರರು ಜಾಂಬವತಿಯಲ್ಲಿ ಜನಿಸಿದರು (1-2). ನಗ್ನಜಿತ್ತಿನ ಮಗಳಾದ ಸತ್ಯೆಯಲ್ಲಿ ಮಹಾಬಲಶಾಲಿಗಳಾದ ಭದ್ರವಿಂದಾದಿಗಳು ಸುತರಾದರು. ಶೈಬ್ಯೆಯಲ್ಲಿ (ಮಿತ್ರವಿಂದೆಯಲ್ಲಿ) ಸಂಗ್ರಾಮಜಿತ್–ಮುಂತಾದವರು ಶ್ರೀಕೃಷ್ಣನ ಪುತ್ರರಾಗಿ ಜನಿಸಿದರು. ಮಾದ್ರಿಯಲ್ಲಿ (ಭದ್ರೆಯಲ್ಲಿ) ವೃಕ–ಮೊದಲಾದವರು ಹುಟ್ಟಿದರು.

**ವೃಕಾದ್ಯಾಶ್ಚ ಸುತಾ ಮಾದ್ರ್ಯಾಂ ಗಾತ್ರವತ್ಪ್ರಮುಖಾನ್ ಸುತಾನ್।**
**ಅವಾಪ ಲಕ್ಷ್ಮಣಾ ಪುತ್ರಾನ್ ಕಾಲಿಂದ್ಯಾಶ್ಚ ಶ್ರುತಾದಯಃ॥** 4

**ಅನ್ಯಾಸಾಂ ಚೈವ ಭಾರ್ಯಾಣಾಂ ಸಮುತ್ಪನ್ನಾನಿ ಚಕ್ರಿಣಃ।**
**ಅಷ್ಟಾಯುತಾನಿ ಪುತ್ರಾಣಾಂ ಸಹಸ್ರಾಣಿ ಶತಂ ತಥಾ॥** 5

**ಪ್ರದ್ಯುಮ್ನಃ ಪ್ರಥಮಸ್ತೇಷಾಂ ಸರ್ವೇಷಾಂ ರುಕ್ಮಿಣೀಸುತಃ।**
**ಪ್ರದ್ಯುಮ್ನಾದನಿರುದ್ಧೋಽಭೂದ್ವಜ್ರಸ್ತಸ್ಮಾದಜಾಯತ॥** 6

**ಅನಿರುದ್ಧೋ ರಣೇಽರುದ್ಧೋ ಬಲೇಃ ಪೌತ್ರೀಂ ಮಹಾಬಲಃ।**
**ಉಷಾಂ ಬಾಣಸ್ಯ ತನಯಾಮುಪಯೇಮೇ ದ್ವಿಜೋತ್ತಮ॥** 7

---

ಲಕ್ಷ್ಮಣೆಯು ಗಾತ್ರವಾನ್-ಇತ್ಯಾದಿಗಳನ್ನೂ ಕಾಲಿಂದಿಯು ಶ್ರುತ-ಮುಂತಾದವರನ್ನೂ ಪುತ್ರರನ್ನಾಗಿ ಪಡೆದರು* (3-4). ಹೀಗೆ ಇತರ ಪತ್ನಿಯರಲ್ಲಿಯೂ ಶ್ರೀಕೃಷ್ಣನಿಗೆ ಬಹುಮಂದಿ ಮಕ್ಕಳಾದರು. ಆತನಿಗೆ ಒಟ್ಟು ಒಂದು ಲಕ್ಷದ ಎಂಬತ್ತು ಸಾವಿರ (1,80,000) ಮಕ್ಕಳಿದ್ದರು.§ ಅವರಲ್ಲಿ ರುಕ್ಮಿಣೀಪುತ್ರನಾದ ಪ್ರದ್ಯುಮ್ನನು ಹಿರಿಯ ಮಗ. ಪ್ರದ್ಯುಮ್ನನಿಂದ ಅನುರುದ್ಧನೂ ಅನಿರುದ್ಧನಿಂದ ವಜ್ರನೂ ಜನಿಸಿದರು (5-6). ಬಲಿಷ್ಠನಾದ ಅನಿರುದ್ಧನು ಯುದ್ಧದಲ್ಲಿ ಯಾರಿಗೂ ಸೋಲದ ಯೋಧನಾಗಿದ್ದನು. ಅವನು ಬಲಿಚಕ್ರವರ್ತಿಯ ಮೊಮ್ಮಗಳೂ ಬಾಣಾಸುರನ ಮಗಳೂ ಆದ ಉಷೆಯನ್ನು ಮದುವೆಯಾದನು.

---

* ಭಾಗವತದ ಪ್ರಕಾರ ಭದ್ರೆ ಕೇಕಯರಾಜನ ಪುತ್ರಿ. ಲಕ್ಷ್ಮಣೆ ಮದ್ರರಾಜನ ಪುತ್ರಿ. ಮಿತ್ರವಿಂದೆ ಅವಂತೀರಾಜನ ಪುತ್ರಿ (ಭಾಗ. 10-58). ಒಬ್ಬೊಬ್ಬರಿಗೂ ಹತ್ತುಮಂದಿ ಪುತ್ರರು (ಭಾಗ. 10-61). ವಿಷ್ಣುಪುರಾಣದಲ್ಲಿ ಮಾದ್ರಿ ಮತ್ತು ಶೈಬ್ಯೆ ಇವರಿಬ್ಬರ ಅಂಕಿತನಾಮ ಇಲ್ಲ. ವ್ಯಾಖ್ಯಾನವನ್ನನುಸರಿಸಿ ಮೇಲ್ಕಂಡಂತೆ ಬರೆದಿದೆ.

§ ಮೂಲಶ್ಲೋಕದಲ್ಲಿ 'ಅಷ್ಟ ಅಯುತಾನಿ ಶತಂ ಸಹಸ್ರಾಣಿ' ಎಂದು ಅನ್ವಯ (ನೋಡಿ. 4-15-36). ವಿಷ್ಣುಚಿತ್ತೀಯ ವ್ಯಾಖ್ಯಾನದಲ್ಲಿ ಅಷ್ಟ ಶಬ್ದವನ್ನು ಅಯುತ, ಸಹಸ್ರ, ಶತಗಳಿಗೆ ಪ್ರತ್ಯೇಕವಾಗಿ ಅನ್ವಯಿಸಲಾಗಿದೆ. ಆಗ ಸಂಖ್ಯೆ 88,800 ಆಗುತ್ತದೆ. ಅದು ಪ್ರಾಮಾದಿಕ.

**ಯತ್ರ ಯುದ್ಧಮಭೂದ್‌ಘೋರಂ ಹರಿಶಂಕರಯೋರ್ಮಹತ್।**
**ಛಿನ್ನಂ ಸಹಸ್ರಂ ಬಾಹೂನಾಂ ಯತ್ರ ಬಾಣಸ್ಯ ಚಕ್ರಿಣಾ॥ 8**

*ಶ್ರೀಮೈತ್ರೇಯ ಉವಾಚ:*

**ಕಥಂ ಯುದ್ಧಮಭೂದ್‌ಬ್ರಹ್ಮನ್ನುಷಾರ್ಥೇ ಹರಕೃಷ್ಣಯೋಃ।**
**ಕಥಂ ಕ್ಷಯಂ ಚ ಬಾಣಸ್ಯ ಬಾಹೂನಾಂ ಕೃತವಾನ್ ಹರಿಃ॥ 9**

**ಏತತ್ಸರ್ವಂ ಮಹಾಭಾಗ ಮಮಾಖ್ಯಾತುಂ ತ್ವಮರ್ಹಸಿ।**
**ಮಹತ್ಕೌತೂಹಲಂ ಜಾತಂ ಕಥಾಂ ಶ್ರೋತುಮಿಮಾಂ ಹರೇಃ॥ 10**

*ಶ್ರೀಪರಾಶರ ಉವಾಚ:*

**ಉಷಾ ಬಾಣಸುತಾ ವಿಪ್ರ ಪಾರ್ವತೀಂ ಸಹ ಶಂಬುನಾ।**
**ಕ್ರೀಡಂತೀಮುಪಲಕ್ಷ್ಯೋಚ್ಚೈಃ ಸ್ಪೃಹಾಂ ಚಕ್ರೇ ತದಾಶ್ರಯಾಮ್॥ 11**

**ತತಸ್ಸಕಲಚಿತ್ತಜ್ಞಾ ಗೌರೀ ತಾಮಾಹ ಭಾಮಿನೀಮ್।**
**ಅಲಮತ್ಯರ್ಥತಾಪೇನ ಭರ್ತ್ರಾ ತ್ವಮಪಿ ರಂಸ್ಯಸೇ॥ 12**

---

ಆ ನಿಮಿತ್ತವಾಗಿ ಶ್ರೀಕೃಷ್ಣನಿಗೂ ಶಿವನಿಗೂ ಘೋರವಾದ ಸಂಗ್ರಾಮ ನಡೆಯಿತು. ಆ ಸಮಯದಲ್ಲಿ ಚಕ್ರಧರನಾದ ಶ್ರೀಕೃಷ್ಣನು ಬಾಣಾಸುರನ ಸಾವಿರ ತೋಳುಗಳನ್ನು ಕತ್ತರಿಸಿದನು" (7-8). ಆಗ ಮೈತ್ರೇಯರು ಪರಾಶರಮುನಿಗಳನ್ನು ಕುರಿತು "ಮುನಿಗಳೆ, ಉಷಾನಿಮಿತ್ತವಾಗಿ ಶಿವನಿಗೂ ಶ್ರೀಕೃಷ್ಣನಿಗೂ ಸಂಗ್ರಾಮವೇಕೆ ನಡೆಯಿತು? ಶ್ರೀಕೃಷ್ಣನು ಬಾಣಾಸುರನ ತೋಳುಗಳನ್ನೇಕೆ ಕತ್ತರಿಸಿದನು? ಇದೆಲ್ಲವನ್ನೂ ತಾವು ಹೇಳಬೇಕು. ನನಗೆ ದೊಡ್ಡ ಕುತೂಹಲ ಹುಟ್ಟಿಬಿಟ್ಟಿತು! ಈ ಕಥೆಯನ್ನು ಕೇಳಲಿಚ್ಛಿಸುತ್ತೇನೆ" ಎಂದರು (9-10). ಆಗ ಪರಾಶರಮುನಿಗಳು ಹೇಳಿದರು: ಮೈತ್ರೇಯ, ಪಾರ್ವತಿಯು ಶಿವನೊಡನೆ ವಿಹರಿಸುತ್ತಿರುವುದನ್ನು ಒಂದು ಸಲ ಬಾಣಪುತ್ರಿಯಾದ ಉಷೆ ನೋಡಿದಳು. ತಾನೂ ತನ್ನ ಪತಿಯೊಡನೆ ಹಾಗೆ ವಿಹರಿಸುತ್ತಿರಬೇಕೆಂದು ಉಷೆಗೆ ಆಸೆಯಾಯಿತು (11). ಸಕಲರ ಚಿತ್ತ ವೃತ್ತಿಯನ್ನೂ ತಿಳಿದಿರುವ (ಅಂತರ್ಯಾಮಿನಿಯಾದ) ಪಾರ್ವತೀದೇವಿಯು ಉಷೆಯನ್ನು ಕುರಿತು "ವತ್ಸೆ, ವಿಷಾದ

**ಇತ್ಯುಕ್ತಾ ಸಾ ತಯಾ ಚಕ್ರೇ ಕದೇತಿ ಮತಿಮಾತ್ಮನಃ।**
**ಕೋ ವಾ ಭರ್ತಾ ಮಮೇತ್ಯಾಹ ಪುನಸ್ತಾಮಾಹ ಪಾರ್ವತೀ॥** 13

*ಪಾರ್ವತ್ಯುವಾಚ:*

**ವೈಶಾಖಶುಕ್ಲದ್ವಾದಶ್ಯಾಂ ಸ್ವಪ್ನೇ ಯೋಽಭಿಭವಂ ತವ।**
**ಕರಿಷ್ಯತಿ ಸ ತೇ ಭರ್ತಾ ರಾಜಪುತ್ರಿ ಭವಿಷ್ಯತಿ॥** 14

*ಶ್ರೀಪರಾಶರ ಉವಾಚ:*

**ತಸ್ಯಾಂ ತಿಥಾವುಷಾಸ್ವಪ್ನೇ ಯಥಾ ದೇವ್ಯಾ ಸಮೀರಿತಮ್।**
**ತಥೈವಾಭಿಭವಂ ಚಕ್ರೇ ಕಶ್ಚಿದ್ರಾಗಂ ಚ ತತ್ರ ಸಾ॥** 15

**ತತಃ ಪ್ರಬುದ್ಧಾ ಪುರುಷಮಪಶ್ಯಂತೀ ಸಮುತ್ಸುಕಾ।**
**ಕ್ವ ಗತೋಽಸೀತಿ ನಿರ್ಲಜ್ಜಾ ಮೈತ್ರೇಯೋಕ್ತವತೀ ಸಖೀಮ್॥** 16

**ಬಾಣಸ್ಯ ಮಂತ್ರೀ ಕುಂಭಾಂಡಶ್ಚಿತ್ರಲೇಖಾ ಚ ತತ್ಸುತಾ।**
**ತಸ್ಯಾಃ ಸಖ್ಯಭವತ್ ಸಾ ಚ ಪ್ರಾಹ ಕೋಽಯಂ ತ್ವಯೋಚ್ಯತೇ॥** 17

---

ಪಡಬೇಡ. ನೀನೂ ಪತಿಯೊಡನೆ ವಿಹರಿಸುವೆ!" ಎಂದಳು. ಉಷೆಯು ತನ್ನ ಮನಸ್ಸಿನಲ್ಲಿಯೇ "ಯಾವಾಗ ವಿಹರಿಸುವೆನೊ! ನನ್ನ ಪತಿ ಯಾರಾಗ ಬಹುದೊ!" ಎಂದು ಚಿಂತಿಸಿದಳು (12-13). ಅದನ್ನರಿತ ಪಾರ್ವತಿಯು "ರಾಜಪುತ್ರಿ, ಮುಂದಿನ ವೈಶಾಖ ಶುಕ್ಲದ್ವಾದಶಿಯ ದಿನ ಸ್ವಪ್ನದಲ್ಲಿ ನಿನ್ನನ್ನು ಯಾವಾತನು ಭೋಗಿಸುವನೋ ಅವನು ನಿನ್ನ ಪತಿಯಾಗುವನು!" ಎಂದು ಬಿಟ್ಟಳು (14). ಅಂತೆಯೇ ವೈಶಾಖ ಶುಕ್ಲದ್ವಾದಶಿಯಂದು ದೇವಿಯು ಹೇಳಿದಂತೆ ಉಷೆಯ ಸ್ವಪ್ನದಲ್ಲೊಬ್ಬನು ಆಕೆಯನ್ನು ಭೋಗಿಸಿದಂತಾಯಿತು. ಉಷೆಯೂ ಆತನಲ್ಲಿ ಅನುರಾಗವನ್ನು ತಳೆದಳು. ನಿದ್ರೆಯಿಂದ ಎಚ್ಚರಾದ ಮೇಲೆ ಆತನನ್ನು ಕಾಣದೆ ಉತ್ಕಂಠಿತಳಾಗಿ ತನ್ನ ಸಖಿಯ ಕಡೆಗೆ ತಿರುಗಿ ನಿರ್ಲಜ್ಜೆಯಿಂದ "ಕಾಂತ, ಎಲ್ಲಿಗೆ ಹೋದೆ?" ಎಂದಳು! (15-16). ಮೈತ್ರೇಯ, ಬಾಣನ ಮಂತ್ರಿಯಾದ ಕುಂಭಾಂಡನಿಗೆ ಚಿತ್ರಲೇಖೆಯೆಂಬ ಮಗಳಿದ್ದಳು. ಅವಳೇ ಉಷೆಯ ಸಖಿ. ಆಗ ಚಿತ್ರಲೇಖೆಯು "ಉಷೆ, ಯಾರನ್ನು ನೀನು ಹೇಳುತ್ತಿರುವುದು?" ಎಂದು ಕೇಳಿದಳು (17). ಉಷೆಯು

**ಯದಾ ಲಜ್ಜಾಕುಲಾ ನಾಸ್ಯೈ ಕಥಯಾಮಾಸ ಸಾ ಸಖೀ।**
**ತದಾ ವಿಶ್ವಾಸಮಾನೀಯ ಸರ್ವಮೇವಾಭ್ಯವಾದಯತ್॥ 18**

**ವಿದಿತಾರ್ಥಾಂ ತು ತಾಮಾಹ ಪುನಶ್ಚೋಷಾ ಯಥೋದಿತಮ್।**
**ದೇವ್ಯಾ ತಥೈವ ತತ್ಪ್ರಾಪ್ತೌ ಯೋ ಹ್ಯುಪಾಯಃ ಕುರುಷ್ವತಮ್॥ 19**

*ಚಿತ್ರಲೇಖೋವಾಚ:*

**ದುರ್ವಿಜ್ಞೇಯಮಿದಂ ವಕ್ತುಂ ಪ್ರಾಪ್ತುಂ ವಾಪಿ ನ ಶಕ್ಯತೇ।**
**ತಥಾಪಿ ಕಿಂಚಿತ್ಕರ್ತವ್ಯಮುಪಕಾರಂ ಪ್ರಿಯೇ ತವ॥ 20**

**ಸಪ್ತಾಷ್ಟದಿನಪರ್ಯಂತಂ ತಾವತ್ಕಾಲಃ ಪ್ರತೀಕ್ಷ್ಯತಾಮ್।**
**ಇತ್ಯುಕ್ತ್ವಾಭ್ಯಂತರಂ ಗತ್ವಾ ಉಪಾಯಂ ತಮಥಾಕರೋತ್॥ 21**

*ಶ್ರೀಪರಾಶರ ಉವಾಚ:*

**ತತಃ ಪಟೇ ಸುರಾನ್ ದೈತ್ಯಾನ್ಗಂಧರ್ವಾಂಶ್ಚ ಪ್ರಧಾನತಃ।**
**ಮನುಷ್ಯಾಂಶ್ಚ ವಿಲಿಖ್ಯಾಸ್ಯೈ ಚಿತ್ರಲೇಖಾ ವ್ಯದರ್ಶಯತ್॥ 22**

---

ಲಜ್ಜಾಕುಲೆಯಾಗಿ ಏನನ್ನೂ ಹೇಳದಿದ್ದಾಗ, ಚಿತ್ರಲೇಖೆಯು ಸಂತೈಸಿ ತನ್ನ ವಿಶ್ವಾಸಕ್ಕೆ ತಂದುಕೊಂಡು ವಿಷಯವೇನೆಂಬುದನ್ನು ಬಾಯಿಬಿಡಿಸಿದಳು. ಸ್ವಪ್ನ ದಲ್ಲೊಬ್ಬ ಯುವಕನು ಕಂಡಿದ್ದನೆಂಬುದನ್ನು ಚಿತ್ರಲೇಖೆಗೆ ತಿಳಿಸಿದ ಮೇಲೆ, ಪಾರ್ವತೀ ದೇವಿಯು ಹೇಳಿದ್ದ ವಿಚಾರವನ್ನೂ ಅರುಹಿ, "ಆತನನ್ನು ಪಡೆಯುವ ಬಗೆ ಹೇಗೆ? ಉಪಾಯವನ್ನು ಮಾಡು' ಎಂದು ಉಷೆಯು ಸಖಿಗೆ ಹೇಳಿದಳು (18-19). ಆಗ ಚಿತ್ರಲೇಖೆಯು "ಗೆಳತಿ, ನೀನು ಸ್ವಪ್ನದಲ್ಲಿ ಕಂಡ ಪುರುಷನು ಯಾರೆಂಬುದನ್ನು ಗೊತ್ತುಮಾಡುವುದೇ ಕಷ್ಟ. ಇನ್ನು ಅವನನ್ನು ಪಡೆಯುವ ಬಗೆ ಎಂತು? ಆದರೂ ಈ ವಿಷಯದಲ್ಲಿ ನಿನಗೆ ಏನಾದರೂ ಉಪಕಾರವನ್ನು ಮಾಡಬೇಕು (20). ನನಗೆ ಏಳೆಂಟು ದಿನ ಅವಕಾಶ ಕೊಟ್ಟು ಕಾಯುತ್ತಿರು" ಎಂದು ಹೇಳಿ ತನ್ನ ಮನೆಗೆ ಹೋಗಿ ಉಪಾಯವೇನೆಂಬುದನ್ನು ಚಿಂತಿಸತೊಡ ಗಿದಳು. ಅನಂತರ ಚಿತ್ರಪಟದಲ್ಲಿ ಪ್ರಧಾನರಾದ ದೇವದೈತ್ಯಗಂಧರ್ವರ ಮತ್ತು ಮನುಷ್ಯರ ಚಿತ್ರಗಳನ್ನು ಬರೆದು ಉಷೆಗೆ ತೋರಿಸಿದಳು (21-22). ಉಷೆಯು

**ಅಪಾಸ್ಯ ಸಾ ತು ಗಂಧರ್ವಾಂಸ್ತಥೋರಗಸುರಾಸುರಾನ್।**
**ಮನುಷ್ಯೇಷು ದದೌ ದೃಷ್ಟಿಂ ತೇಷ್ವಪ್ಯಂಧಕವೃಷ್ಣಿಷು॥** 23

**ಕೃಷ್ಣರಾಮೌ ವಿಲೋಕ್ಯಾಸೀತ್ ಸುಭ್ರೂರ್ಲಜ್ಜಾಜಡೇವ ಸಾ।**
**ಪ್ರದ್ಯುಮ್ನದರ್ಶನೇ ವ್ರೀಡಾದೃಷ್ಟಿಂ ನಿನ್ಯೇಽನ್ಯತೋ ದ್ವಿಜ॥** 24

**ದೃಷ್ಟಮಾತ್ರೇ ತತಃ ಕಾಂತೇ ಪ್ರದ್ಯುಮ್ನತನಯೇ ದ್ವಿಜ।**
**ದೃಷ್ಟ್ವಾತ್ಯರ್ಥವಿಲಾಸಿನ್ಯಾ ಲಜ್ಜಾ ಕ್ವಾಪಿ ನಿರಾಕೃತಾ॥** 25

**ಸೋಽಯಂ ಸೋಽಯಮಿತೀತ್ಯುಕ್ತೇ ತಯಾ ಸಾ ಯೋಗಗಾಮಿನೀ।**
**ಚಿತ್ರಲೇಖಾಬ್ರವೀದೇನಾಮುಷಾಂ ಬಾಣಸುತಾಂ ತದಾ॥** 26

*ಚಿತ್ರಲೇಖೋವಾಚ:*

**ಅಯಂ ಕೃಷ್ಣಸ್ಯ ಪೌತ್ರಸ್ತೇ ಭರ್ತಾ ದೇವ್ಯಾ ಪ್ರಸಾದಿತಃ।**
**ಅನಿರುದ್ಧ ಇತಿಃ ಖ್ಯಾತಃ ಪ್ರಖ್ಯಾತಃ ಪ್ರಿಯದರ್ಶನಃ॥** 27

---

ದೇವಗಂಧರ್ವಾದಿಗಳ ಚಿತ್ರಗಳನ್ನು ಬದಿಗಿಟ್ಟು ಮನುಷ್ಯರ ಚಿತ್ರದ ಕಡೆಗೆ ದೃಷ್ಟಿ ಹಾಯಿಸಿದಳು. ವಿಶೇಷವಾಗಿ ಅಂಧಕವೃಷ್ಣಿವಂಶದ ಯಾದವರ ಚಿತ್ರಗಳನ್ನು ಗಮನಿಸತೊಡಗಿದಳು (23). ಅವರಲ್ಲಿ ಶ್ರೀಕೃಷ್ಣಬಲರಾಮರನ್ನು ನೋಡಿದಾಗ ಆ ಸುಂದರಿಯು ನಾಚಿಕೆಯಿಂದ ಜಡಳೋ ಎಂಬಂತಾದಳು. ಪ್ರದ್ಯುಮ್ನನ್ನು ಕಂಡಾಗ ಲಜ್ಜೆಯಿಂದ ದೃಷ್ಟಿಯನ್ನು ಬೇರೆ ಕಡೆಗೆ ತಿರುಗಿಸಿದಳು. ಅನಂತರ, ಮೈತ್ರೇಯ, ತನ್ನ ಕಾಂತನಾದ ಪ್ರದ್ಯುಮ್ನತನಯನನ್ನು ನೋಡಿದೊಡನೆ ಆ ವಿಲಾಸಿನಿಯ ಲಜ್ಜೆ ಎಲ್ಲಿಗೋ ಓಡಿಹೋಯಿತು! (24-25). 'ಅವನೇ ಇವನು! ಅವನೇ ಇವನು'! ಎಂದು ಉಷೆಯು ಉದ್ಗರಿಸಿದಳು. ಆಗ ಯೋಗಮಹಿಮೆಯಿಂದ ಸಂಚರಿಸಬಲ್ಲವಳಾದ ಚಿತ್ರಲೇಖೆಯು ಬಾಣಸುತೆಯಾದ ಉಷೆಯನ್ನು ಕುರಿತು "ಇವನು ಶ್ರೀಕೃಷ್ಣನ ಮೊಮ್ಮಗ. ಪಾರ್ವತೀದೇವಿಯು ನಿನ್ನ ಪತಿ ಇವನೆಂದು ಅನುಗ್ರಹಿಸಿದ್ದಾಳೆ. ಇವನ ಹೆಸರು ಅನಿರುದ್ಧ. ಈತನು ಬಹಳ ಸುಂದರನೆಂದು ಪ್ರಖ್ಯಾತನಾಗಿದ್ದಾನೆ (26-27). ಈತನು ನಿನಗೆ ಪತಿಯಾಗಿ

**ಪ್ರಾಪ್ನೋಽಪಿ ಯದಿ ಭರ್ತಾರಮಿಮಂ ಪ್ರಾಪ್ತಂ ತ್ವಯಾಖಿಲಮ್ ।**
**ದುಷ್ಪ್ರವೇಶಾ ಪುರೀ ಪೂರ್ವಂ ದ್ವಾರಕಾ ಕೃಷ್ಣಪಾಲಿತಾ ॥** 28

**ತಥಾಪಿ ಯತ್ನಾದ್ಭರ್ತಾರಮಾನಯಿಷ್ಯಾಮಿ ತೇ ಸಖಿ ।**
**ರಹಸ್ಯಮೇತದ್ವಕ್ತವ್ಯಂ ನ ಕಸ್ಯಚಿದಪಿ ತ್ವಯಾ ॥** 29

**ಅಚಿರಾದಾಗಮಿಷ್ಯಾಮಿ ಸಹಸ್ವ ವಿರಹಂ ಮಮ ।**
**ಯಯೌ ದ್ವಾರವತೀಂ ಚೋಷಾಂ ಸಮಾಶ್ವಾಸ್ಯ ತತಃ ಸಖೀಮ್ ॥** 30

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ದ್ವಾತ್ರಿಂಶೋಽಧ್ಯಾಯಃ

---

ಲಭಿಸಿದರೆ ಸಕಲ ಸೌಭಾಗ್ಯಗಳೂ ನಿನಗೆ ದೊರಕಿದಂತೆಯೇ. ಶ್ರೀಕೃಷ್ಣ ರಕ್ಷಿತವಾದ ದ್ವಾರಕಾಪುರಿಯನ್ನು ಪ್ರವೇಶಿಸುವುದೇ ಮೊದಲಿನ ಕಷ್ಟ! ಆದರೂ, ಸಖಿ, ಹೇಗಾದರೂ ಪ್ರಯತ್ನಿಸಿ ನಿನ್ನ ಕಾಂತನನ್ನು ಇಲ್ಲಿಗೆ ಕರೆತರುವೆನು. ಇದು ಬಹಳ ಗುಟ್ಟಿನ ವಿಚಾರ. ನೀನು ಯಾರಿಗೂ ಇದನ್ನು ಹೇಳಕೂಡದು (28-29). ಆದಷ್ಟು ಬೇಗನೆ ಬರುವೆನು. ಅಲ್ಲಿಯವರೆಗೆ ನನ್ನ ವಿರಹವನ್ನು ಸಹಿಸಿ ಕೊಂಡಿರು" ಎಂದಳು. ಈ ಪ್ರಕಾರ ತನ್ನ ಸಖಿಗೆ ಸಮಾಧಾನ ಹೇಳಿ ಚಿತ್ರಲೇಖೆಯು ದ್ವಾರಕೆಗೆ ಹೋದಳು (30).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.



## ತ್ರಯಸ್ತ್ರಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಬಾಣೋಽಪಿ ಪ್ರಣಿಪತ್ಯಾಗ್ರೇ ಮೈತ್ರೇಯಾಹ ತ್ರಿಲೋಚನಮ್ ।**
**ದೇವ ಬಾಹುಸಹಸ್ರೇಣ ನಿರ್ವಿಣ್ಣೋಽಸ್ಮ್ಯಾಹವಂ ವಿನಾ ॥** 1

**ಕಚ್ಚಿನ್ಮಮೈಷಾಂ ಬಾಹೂನಾಂ ಸಾಫಲ್ಯಜನಕೋ ರಣಃ ।**
**ಭವಿಷ್ಯತಿ ವಿನಾ ಯುದ್ಧಂ ಭಾರಾಯ ಮಮ ಕಿಂ ಭುಜೈಃ ॥** 2

*ಶ್ರೀಶಂಕರ ಉವಾಚ:*

**ಮಯೂರಧ್ವಜಭಂಗಸ್ತೇ ಯದಾ ಬಾಣ ಭವಿಷ್ಯತಿ ।**
**ಪಿಶಿತಾಶಿಜನಾನಂದಂ ಪ್ರಾಪ್ಸ್ಯಸೇ ತ್ವಂ ತದಾ ರಣಮ್ ॥** 3

---

### ಅಧ್ಯಾಯ 33

ಚಿತ್ರಲೇಖೆಯು ಅನಿರುದ್ಧನನ್ನು ಉಷೆಯ ಅಂತಃಪುರಕ್ಕೆ ಕರೆತರುವುದು. ಅನಿರುದ್ಧನ ಬಂಧನ. ಅನಿರುದ್ಧನನ್ನು ಬಿಡಿಸಲು ಶ್ರೀಕೃಷ್ಣನು ಬರುವುದು. ಶ್ರೀಕೃಷ್ಣ-ಬಾಣಾಸುರರ ಯುದ್ಧ. ಶಿವನ ಕೋರಿಕೆಯಂತೆ ಯುದ್ಧದ ನಿಲುಗಡೆ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಒಮ್ಮೆ ಬಾಣಾಸುರನು ತ್ರಿಲೋಚನನಾದ ಶಿವನಿಗೆ ನಮಸ್ಕರಿಸಿ "ದೇವ, ನನಗೆ ಸಾವಿರ ತೋಳುಗಳಿದ್ದರೂ ಸರಿಯಾದ ಯುದ್ಧವಿಲ್ಲದೆ ನಿರ್ವಿಣ್ಣನಾಗಿ ಹೋಗಿದ್ದೇನೆ! ಈ ತೋಳುಗಳಿಗೆ ಸಾಫಲ್ಯವನ್ನು ಕೊಡತಕ್ಕ ಸಂಗ್ರಾಮವೆಂದಾದರೂ ಸಂಭವಿಸೀತೇ? ಸಂಗ್ರಾಮವಿಲ್ಲದೆ ಹೋದರೆ ಭಾರಭೂತವಾದ ಈ ಭುಜಗಳಿಂದ ನನಗೆ ಏನು ಪ್ರಯೋಜನ?" ಎಂದು ಕೇಳಿದನು (1-2). ಆಗ ಶ್ರೀಶಂಕರನು "ನಿನ್ನ ಮಯೂರಧ್ವಜವು ಯಾವಾಗ ಮುರಿದು ಬೀಳುವುದೋ ಆಗ ಮಾಂಸಭೋಜಿಗಳಾದ ಪಿಶಾಚಾದಿಗಳಿಗೆ ಸಂತೃಪ್ತಿಯನ್ನೀಯುವ ಘೋರ ಸಂಗ್ರಾಮವು ನಿನಗೆ ಒದಗಿ ಬರುವುದು" ಎಂದು ತಿಳಿಸಿದನು (3). ಆಗ

*ಶ್ರೀಪರಾಶರ ಉವಾಚ:*

**ತತಃ ಪ್ರಣಮ್ಯ ವರದಂ ಶಂಭುಮಭ್ಯಾಗತೋ ಗೃಹಮ್।**
**ಸಭಗ್ನಂ ಧ್ವಜಮಾಲೋಕ್ಯ ಹೃಷ್ಟೋ ಹರ್ಷಂ ಪುನರ್ಯಯೌ॥ 4**

**ಏತಸ್ಮಿನ್ನೇವ ಕಾಲೇ ತು ಯೋಗವಿದ್ಯಾಬಲೇನ ತಮ್।**
**ಅನಿರುದ್ಧಮಥಾನಿನ್ಯೇ ಚಿತ್ರಲೇಖಾ ವರಾಪ್ಸರಾಃ॥ 5**

**ಕನ್ಯಾಂತಃಪುರಮಭ್ಯೇತ್ಯ ರಮಮಾಣಂ ಸಹೋಷಯಾ।**
**ವಿಜ್ಞಾಯ ರಕ್ಷಿಣೋ ಗತ್ವಾ ಶಶಂಸುರ್ದೈತ್ಯಭೂಪತೇಃ॥ 6**

**ವ್ಯಾದಿಷ್ಟಂ ಕಿಂಕರಾಣಾಂ ತು ಸೈನ್ಯಂ ತೇನ ಮಹಾತ್ಮನಾ।**
**ಜಘಾನ ಪರಿಘಂ ಘೋರಮಾದಾಯ ಪರವೀರಹಾ॥ 7**

**ಹತೇಷು ತೇಷು ಬಾಣೋಽಪಿ ರಥಸ್ಥಸ್ತದ್ವಧೋದ್ಯತಃ।**
**ಯುಧ್ಯಮಾನೋ ಯಥಾಶಕ್ತಿ ಯದುವೀರೇಣ ನಿರ್ಜಿತಃ॥ 8**

---

ಬಾಣಾಸುರನು ಶ್ರೀಶಂಕರನಿಗೆ ನಮಸ್ಕರಿಸಿ ತನ್ನ ಅರಮನೆಗೆ ಬಂದನು. ಹೀಗಿರುವ ಸಂದರ್ಭದಲ್ಲಿ ಒಂದು ಸಲ ತನ್ನ ಮಯೂರಧ್ವಜವು ಭಗ್ನವಾದ್ದನ್ನು ನೋಡಿ ಬಾಣಾಸುರನಿಗೆ ಆನಂದವಾಯಿತು! (4). ಈ ಸಮಯದಲ್ಲಿಯೇ ಅಪ್ಸರೆಯಾದ ಚಿತ್ರಲೇಖೆಯು ತನ್ನ ಯೋಗವಿದ್ಯಾಬಲದಿಂದ ಅನಿರುದ್ಧನನ್ನು ತಂದು ಉಷೆಯ ಅಂತಃಪುರಕ್ಕೆ ಸೇರಿಸಿದ್ದಳು. ಆತನು ಉಷೆಯೊಡನೆ ರಹಸ್ಯವಾಗಿ ವಿಹರಿಸುತ್ತಿರುವುದನ್ನು ಕಾವಲುಗಾರರು ಪತ್ತೆಹಚ್ಚಿ ದೈತ್ಯೇಶ್ವರನಿಗೆ ನಿವೇದಿಸಿದರು (5-6). ಅನಿರುದ್ಧನನ್ನು ಬಂಧಿಸುವಂತೆ ಬಾಣನು ಕಿಂಕರರ ಸೇನೆಗೆ ಆಜ್ಞಾಪಿಸಿದನು. ಪರಾಕ್ರಮಿಯಾದ ಅನಿರುದ್ಧನು ಘೋರವಾದ ಪರಿಘವನ್ನು ಹಿಡಿದು ಅವರನ್ನು ಕೊಂದು ಹಾಕಿದನು. ಆಗ ಬಾಣನೇ ರಥಾರೂಢನಾಗಿ ಬಂದು ಅನಿರುದ್ಧನನ್ನು ಸಂಹರಿಸಬೇಕೆಂದು ಹೋರಾಡಿದಾಗ ಯದುವೀರನಾದ ಅನಿರುದ್ಧನಿಂದ ಪರಾಜಿತನಾದನು (7-8). ಅನಂತರ

**ಮಾಯಯಾ ಯುಯುಧೇ ತೇನ ಸ ತದಾ ಮಂತ್ರಿಚೋದಿತಃ।**
**ತತಸ್ತಂ ಪನ್ನಗಾಸ್ತ್ರೇಣ ಬಬಂಧ ಯದುನಂದನಮ್॥** 9

**ದ್ವಾರವತ್ಯಾಂ ಕ್ವ ಯಾತೋಽಸಾವನಿರುದ್ಧೇತಿ ಜಲ್ಪತಾಮ್।**
**ಯದೂನಾಮಾಚಚಕ್ಷೇ ತಂ ಬದ್ಧಂ ಬಾಣೇನ ನಾರದಃ॥** 10

**ತಂ ಶೋಣಿತಪುರಂ ನೀತಂ ಶ್ರುತ್ವಾ ವಿದ್ಯಾವಿದಗ್ಧಯಾ।**
**ಯೋಷಿತಾ ಪ್ರತ್ಯಯಂ ಜಗ್ಮುರ್ಯಾದವಾ ನಾಮರೈರಿತಿ॥** 11

**ತತೋ ಗರುಡಮಾರುಹ್ಯ ಸ್ಮೃತಮಾತ್ರಾಗತಂ ಹರಿಃ।**
**ಬಲಪ್ರದ್ಯುಮ್ನಸಹಿತೋ ಬಾಣಸ್ಯ ಪ್ರಯಯೌ ಪುರಮ್॥** 12

**ಪುರಪ್ರವೇಶೇ ಪ್ರಮಥೈರ್ಯುದ್ಧಮಾಸೀನ್ಮಹಾತ್ಮನಃ।॥**
**ಯಯೌ ಬಾಣಪುರಾಭ್ಯಾಶಂ ನೀತ್ವಾ ತಾನ್ಸಂಕ್ಷಯಂ ಹರಿಃ॥** 13

---

ಮಂತ್ರಿಗಳ ಪ್ರೇರಣೆಯಂತೆ ಮಾಯಾಯುದ್ಧವನ್ನಾರಂಭಿಸಿ ಸರ್ಪಾಸ್ತ್ರದಿಂದ ಆ ಯದುವೀರನನ್ನು ಬಂಧಿಸಿದನು. ಇತ್ತ ದ್ವಾರಕೆಯಲ್ಲಿ ಅನಿರುದ್ಧನು ಎಲ್ಲಿ ಹೋದನೆಂದು ಗೊಂದಲವೆದ್ದಿತು. ಬಾಣಾಸುರನು ಆತನನ್ನು ಬಂಧನ ದಲ್ಲಿಟ್ಟಿದ್ದಾನೆಂದು ನಾರದರು ಹೇಳಿದರು (9-10). ಯೋಗವಿದ್ಯಾನಿಪುಣೆಯಾದ ಚಿತ್ರಲೇಖೆಯು ವಿದ್ಯಾಬಲದಿಂದ ಅನಿರುದ್ಧನನ್ನು ಬಾಣಾಸುರನ ಶೋಣಿತ ಪುರಕ್ಕೆ ಒಯ್ದಿದ್ದಾಳೆಂಬ ವೃತ್ತಾಂತವನ್ನೂ ತಿಳಿಸಿದರು. ಅದನ್ನು ಕೇಳಿ ಯಾದವರಿಗೆ ಅನಿರುದ್ಧನನ್ನು ದೇವತೆಗಳು ಅಪಹರಿಸಿಲ್ಲವೆಂದು ನಂಬಿಕೆ ಯಾಯಿತು* (11). ಸ್ಮರಣಮಾತ್ರದಿಂದ ಆಗಮಿಸಿದ ಗರುಡನನ್ನೇರಿ ಶ್ರೀಕೃಷ್ಣನು ಬಲರಾಮ ಮತ್ತು ಪ್ರದ್ಯುಮ್ನರೊಡನೆ ಬಾಣಾಸುರನ ಶೋಣಿತಪುರಕ್ಕೆ ಧಾವಿಸಿದನು (12). ನಗರ ಪ್ರವೇಶಕ್ಕೆ ಹೋದಾಗ ಅವರಿಗೂ ಪ್ರಮಥಗಣ ಗಳಿಗೂ§ ಯುದ್ಧ ನಡೆಯಿತು. ಶ್ರೀಕೃಷ್ಣನು ಅವರನ್ನು ಸೋಲಿಸಿ ಶೋಣಿತಪುರದ

---

* ಪಾರಿಜಾತಹರಣದಿಂದ ಕುಪಿತರಾದ ದೇವತೆಗಳು ಅನಿರುದ್ಧನನ್ನು ಸೇಡಿಗಾಗಿ ಅಪಹರಿಸಿದ್ದಾರೆಂದು ಯಾದವರು ಊಹಿಸಿದರು. ಈ ಪ್ರಕರಣದಲ್ಲಿ ಕಥಾನಿರೂಪಣೆ ಸಾವಶೇಷವೂ ಸಂಕ್ಷಿಪ್ತವೂ ಆಗಿದೆಯೆಂಬುದನ್ನು ಗಮನಿಸಬೇಕು.

§ ಅನುಬಂಧವನ್ನು ನೋಡಿ.

**ತತಸ್ತ್ರಿಪಾದಸ್ತ್ರಿಶಿರಾ ಜ್ವರೋ ಮಾಹೇಶ್ವರೋ ಮಹಾನ್।**
**ಬಾಣರಕ್ಷಾರ್ಥಮಭ್ಯೇತ್ಯ ಯುಯುಧೇ ಶಾರ್ಙ್ಗಧನ್ವನಾ॥ 14**

**ತದ್ಭಸ್ಮಸ್ಪರ್ಶಸಂಭೂತತಾಪಃ ಕೃಷ್ಣಾಂಗಸಂಗಮಾತ್।**
**ಅವಾಪ ಬಲದೇವೋಽಪಿ ಶಮಮಾಮೀಲಿತೇಕ್ಷಣಃ॥ 15**

**ತತಸ್ಸ ಯುದ್ಧ್ಯಮಾನಸ್ತು ಸಹ ದೇವೇನ ಶಾರ್ಙ್ಗಿಣಾ।**
**ವೈಷ್ಣವೇನ ಜ್ವರೇಣಾಶು ಕೃಷ್ಣದೇಹಾನ್ನಿರಾಕೃತಃ॥ 16**

**ನಾರಾಯಣಭುಜಾಘಾತಪರಿಪೀಡನವಿಹ್ವಲಮ್।**
**ತಂ ವೀಕ್ಷ್ಯ ಕ್ಷಮ್ಯತಾಮಸ್ಯೇತ್ಯಾಹ ದೇವಃ ಪಿತಾಮಹಃ॥ 17**

**ತತಶ್ಚ ಕ್ಷಾಂತಮೇವೇತಿ ಪ್ರೋಚ್ಯಂ ತಂ ವೈಷ್ಣವಂ ಜ್ವರಮ್।**
**ಆತ್ಮನ್ಯೇವ ಲಯಂ ನಿನ್ಯೇ ಭಗವಾನ್ಮಧುಸೂದನಃ॥ 18**

---

ಸಮೀಪಕ್ಕೆ ಹೋದನು. ಆಗ ತ್ರಿಪಾದನೂ ತ್ರಿಶಿರನೂ ಆದ ಮಾಹೇಶ್ವರ ಮಹಾಜ್ವರನು* ಬಾಣನ ರಕ್ಷಣೆಗಾಗಿ ಬಂದು ಶಾರ್ಙ್ಗಧನ್ವನೊಡನೆ ಯುದ್ಧ ಮಾಡಿದನು (13-14). ಆ ಮಹಾಜ್ವರನು ಎರಚಿದ ಭಸ್ಮವು ಮೈಗೆ ತಾಕಲಾಗಿ ಬಲರಾಮನೂ ಸಹ ಸಂತಪ್ತನಾಗಿ ಕಣ್ಣುಮುಚ್ಚಬೇಕಾಯಿತು. ಅನಂತರ ಶ್ರೀಕೃಷ್ಣನು ಅವನನ್ನು ಆಲಂಗಿಸಿಕೊಂಡಾಗ ತಾಪ ಇಳಿಯಿತು (15). ಅನಂತರ ಮಾಹೇಶ್ವರಜ್ವರವು ಶ್ರೀಕೃಷ್ಣನ ದೇಹವನ್ನು ಪ್ರವೇಶಿಸಿ ಹೋರಾಡುತ್ತಿರುವಾಗ ವೈಷ್ಣವಜ್ವರವು ಅದನ್ನು ಹೊರಗೆ ತಳ್ಳಿತು. ಅನಂತರ ಶ್ರೀಕೃಷ್ಣನ ಭುಜಾಘಾತ ಗಳಿಂದ ಪೀಡಿತನಾದ್ದರಿಂದ ವಿಹ್ವಲನಾದ ಮಾಹೇಶ್ವರಜ್ವರನನ್ನು ನೋಡಿ ಬ್ರಹ್ಮ ದೇವನು ಶ್ರೀ ಕೃಷ್ಣನಿಗೆ 'ಇವನನ್ನು ಕ್ಷಮಿಸು' ಎಂದು ಅರಿಕೆ ಮಾಡಿದನು (16-17). ಆಗ ಶ್ರೀಕೃಷ್ಣನು 'ಒಳ್ಳೆಯದು; ಕ್ಷಮಿಸಿದ್ದೇನೆ' ಎಂದು ನುಡಿದನಲ್ಲದೆ ತನ್ನ ದೇಹದಿಂದ ಹೊರಬಂದ ವೈಷ್ಣವಜ್ವರವನ್ನು ತನ್ನಲ್ಲಿಯೇ ಲೀನಗೊಳಿಸಿದನು

---

* ಇದರ ವಿಷಯವಾಗಿ 'ತ್ರಿಪಾದ್ ಭಸ್ಮಪ್ರಹರಣ ಸ್ತ್ರಿಶಿರಾ ರಕ್ತಲೋಚನಃ' ಎಂದು ಮಂತ್ರಲಿಂಗವಿದೆಯೆಂದು ಶ್ರೀಧರೀಯ ವ್ಯಾಖ್ಯಾನದಲ್ಲಿ ಬರೆದಿದೆ.

*ಜ್ವರ ಉವಾಚ:*

**ಮಮ ತ್ವಯಾ ಸಮಂ ಯುದ್ಧೇ ಯೇ ಸ್ಮರಿಷ್ಯಂತಿ ಮಾನವಾಃ।**
**ವಿಜ್ವರಾಸ್ತೇ ಭವಿಷ್ಯಂತೀತ್ಯುಕ್ತ್ವಾ ಚೈನಂ ಯಯೌ ಜ್ವರಃ॥** 19

**ತತೋಽಗ್ನೀನ್ಭಗವಾನ್ ಪಂಚ ಜಿತ್ವಾ ನೀತ್ವಾ ತಥಾ ಕ್ಷಯಮ್।**
**ದಾನವಾನಾಂ ಬಲಂ ಕೃಷ್ಣಶ್ಚೂರ್ಣಯಾಮಾಸ ಲೀಲಯಾ॥** 20

**ತತಸ್ಸಮಸ್ತಸೈನ್ಯೇನ ದೈತೇಯಾನಾಂ ಬಲೇಸ್ಸುತಃ।**
**ಯುಯುಧೇ ಶಂಕರಶ್ಚೈವ ಕಾರ್ತಿಕೇಯಶ್ಚ ಶೌರಿಣಾ॥** 21

**ಹರಿಶಂಕರಯೋರ್ಯುದ್ಧಮತೀವಾಸೀತ್ಸುದಾರುಣಮ್।**
**ಚುಕ್ಷುಭುಸ್ಸಕಲಾ ಲೋಕಾಃ ಶಸ್ತ್ರಾಸ್ತ್ರಾಂಶುಪ್ರತಾಪಿತಾಃ॥** 22

**ಪ್ರಲಯೋಽಯಮಶೇಷಸ್ಯ ಜಗತೋ ನೂನಮಾಗತಃ।**
**ಮೇನಿರೇ ತ್ರಿದಶಾಸ್ತತ್ರ ವರ್ತಮಾನೇ ಮಹಾರಣೇ॥** 23

---

(18). ಮಾಹೇಶ್ವರಜ್ವರವು ಶ್ರೀಕೃಷ್ಣನನ್ನು ಕುರಿತು "ನನಗೂ ನಿನಗೂ ನಡೆದ ಯುದ್ಧವನ್ನು ಯಾವ ಮಾನವರು ಸ್ಮರಿಸಿಕೊಳ್ಳುತ್ತಾರೋ ಅವರು ಜ್ವರದಿಂದ ಬಿಡುಗಡೆಹೊಂದುವರು" ಎಂದು ನುಡಿದು ಹೊರಟುಹೋಯಿತು (19). ಅನಂತರ ಭಗವಂತನು ಪಂಚಾಗ್ನಿ*ಗಳನ್ನು ಸೋಲಿಸಿ ದಾನವರ ಪಡೆಯನ್ನು ಲೀಲೆಯಿಂದ ನುಚ್ಚುನೂರು ಮಾಡಿದನು. ಆಮೇಲೆ ಬಲಿಪುತ್ರನಾದ ಬಾಣಾಸುರನು ಸಮಸ್ತದಾನವ ಬಲದೊಡನೆ ಯುದ್ಧಕ್ಕೆ ಬಂದನಲ್ಲದೆ, ಶಂಕರನೂ ಕಾರ್ತಿಕೇಯನೂ ಶ್ರೀಕೃಷ್ಣನ ಮೇಲೆ ಆಕ್ರಮಣ ಮಾಡಿದರು (20-21). ಶ್ರೀಹರಿಗೂ ಶ್ರೀಶಂಕರನಿಗೂ ನಡೆದ ಸಮರ ಅತಿಭೀಕರವಾಯಿತು. ಶಸ್ತ್ರಾಸ್ತ್ರಗಳ ಧಗೆಗೆ ಸಿಕ್ಕಿ ಸಮಸ್ತಲೋಕಗಳೂ ಕ್ಷುಬ್ಧವಾದವು. ಆ ಮಹಾ ಪ್ರಸಂಗವು ನಡೆಯುತ್ತಿರಲಾಗಿ "ಸಮಸ್ತ ಜಗತ್ತಿಗೂ ಪ್ರಳಯವೇ ಬಂದಿತು" ಎಂದು ದೇವತೆಗಳು ಭಾವಿಸಿದರು (22-23). ತರುವಾಯ ಗೋವಿಂದನು

---

* ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ, ಸಭ್ಯ, ಆವಸಥ್ಯ—ಇವು ಪಂಚಾಗ್ನಿಗಳು.

ಜೃಂಭಕಾಸ್ತ್ರೇಣ ಗೋವಿಂದೋ ಜೃಂಭಯಾಮಾಸ ಶಂಕರಮ್।
ತತಃ ಪ್ರಣೇಶುರ್ದೈತೇಯಾಃ ಪ್ರಮಥಾಶ್ಚ ಸಮಂತತಃ॥ 24

ಜೃಂಭಾಭಿಭೂತಸ್ತು ಹರೋ ರಥೋಪಸ್ಥ ಉಪಾವಿಶತ್।
ನ ಶಶಾಕ ತತೋ ಯೋದ್ಧುಂ ಕೃಷ್ಣೇನಾಕ್ಲಿಷ್ಟಕರ್ಮಣಾ॥ 25

ಗರುಡಕ್ಷತವಾಹಶ್ಚ ಪ್ರದ್ಯುಮ್ನಾಸ್ತ್ರೇಣ ಪೀಡಿತಃ।
ಕೃಷ್ಣಹುಂಕಾರನಿರ್ಧೂತಶಕ್ತಿಶ್ಚಾಪಯಯೌ ಗುಹಃ॥ 26

ಜೃಂಭಿತೇ ಶಂಕರೇ ನಷ್ಟೇ ದೈತ್ಯಸೈನ್ಯೇ ಗುಹೇ ಜಿತೇ।
ನೀತೇ ಪ್ರಮಥಸೈನ್ಯೇ ಚ ಸಂಕ್ಷಯಂ ಶಾರ್ಙ್ಗಧನ್ವನಾ॥ 27

ನಂದಿನಾ ಸಂಗೃಹೀತಾಶ್ವಮಧಿರೂಢೋ ಮಹಾರಥಮ್।
ಬಾಣಸ್ತತ್ರಾಯಯೌ ಯೋದ್ಧುಂ ಕೃಷ್ಣಕಾರ್ಷ್ಣಿಬಲೈಸ್ಸಹ॥ 28

ಬಲಭದ್ರೋ ಮಹಾವೀರ್ಯೋ ಬಾಣಸೈನ್ಯಮನೇಕಧಾ।
ವಿವ್ಯಾಧ ಬಾಣೈಃ ಪ್ರಭ್ರಶ್ಯ ಧರ್ಮತಶ್ಚ ಪಲಾಯತ॥ 29

---

ಜೃಂಭಕಾಸ್ತ್ರದಿಂದ ಶಿವನನ್ನು ಸ್ತಬ್ಧಗೊಳಿಸಲಾಗಿ, ದೈತ್ಯರೂ ಪ್ರಮಥಗಣಗಳೂ ದಿಕ್ಕುದಿಕ್ಕಿಗೆ ಓಡಿಹೋದರು. ಶಿವನು ಜೃಂಭಕಾಸ್ತ್ರದಿಂದ ನಿದ್ರಾಭಿಭೂತನಾಗಿ* ರಥದಲ್ಲಿ ಕುಳಿತಿದ್ದನೇ ಹೊರತು ಸುಲಭವಾಗಿ ಯುದ್ಧಮಾಡಬಲ್ಲ ಶ್ರೀಕೃಷ್ಣ ನೊಡನೆ ಹೋರಾಡಲು ಶಕ್ತನಾಗಲಿಲ್ಲ (24-25). ಕಾರ್ತಿಕೇಯನ ವಾಹನವು ಗರುಡನ ಆಘಾತಗಳಿಂದ ಗಾಯಗೊಂಡಿತು. ಕಾರ್ತಿಕೇಯನು ಪ್ರದ್ಯುಮ್ನನ ಅಸ್ತ್ರಗಳಿಂದ ಪೀಡಿತನಾಗಿ ಶ್ರೀಕೃಷ್ಣನ ಹುಂಕಾರದಿಂದ ಶಕ್ತಿಹೀನನಾಗಿ ಹೊರಟು ಹೋದನು (26). ಹೀಗೆ ಶ್ರೀಕೃಷ್ಣನ ಪರಾಕ್ರಮದಿಂದ ಶಿವಮ ಸ್ತಬ್ಧನಾಗಿ, ದೈತ್ಯ ಸೈನ್ಯವು ನಾಶವಾಗಿ, ಕಾರ್ತಿಕೇಯನು ಪರಾಜಿತನಾಗಿ, ಪ್ರಮಥಗಣವು ಕ್ಷಯಿಸ ಲಾಗಿ ಬಾಣಾಸುರನು ಶ್ರೀಕೃಷ್ಣನೊಡನೆಯುದ್ಧಕ್ಕೆ ಬಂದನು. ನಂದಿಕೇಶ್ವರನು ಹೂಡಿದ ಮಹಾರಥವನ್ನೇರಿದ್ದ ಬಾಣನು ಶ್ರೀಕೃಷ್ಣ, ಪ್ರದ್ಯುಮ್ನ ಮತ್ತು ಬಲಭದ್ರರನ್ನೆದುರಿಸಿದನು (27-28). ಮಹಾವೀರನಾದ ಬಲಭದ್ರನು ಬಾಣನ

---

* ಜೃಂಭಕಾಸ್ತ್ರದಿಂದ ಆಲಸ್ಯ, ಆಕಳಿಕೆಗಳುಂಟಾಗುತ್ತವೆಯೆಂದು ಹೇಳಲಾಗಿದೆ.

**ಆಕೃಷ್ಯ ಲಾಂಗಲಾಗ್ರೇಣ ಮುಸಲೇನಾಶು ತಾಡಿತಮ್।**
**ಬಲಂ ಬಲೇನ ದದೃಶೇ ಬಾಣೋ ಬಾಣೈಶ್ಚ ಚಕ್ರಿಣಾ॥** 30

**ತತಃ ಕೃಷ್ಣೇನ ಬಾಣಸ್ಯ ಯುದ್ಧಮಾಸೀತ್ಸುದಾರುಣಮ್।**
**ಸಮಸ್ಯತೋ ರಿಪೂಂದೀಪ್ತಾನ್ ಕಾಯತ್ರಾಣವಿಭೇದಿನಃ॥** 31

**ಕೃಷ್ಣಶ್ಚಿಚ್ಛೇದ ಬಾಣೈಸ್ತಾನ್ ಬಾಣೇನ ಪ್ರಹಿತಾನ್ ಶಿತಾನ್।**
**ವಿವ್ಯಾಧ ಕೇಶವಂ ಬಾಣೋ ಬಾಣಂ ವಿವ್ಯಾಧ ಚಕ್ರಧೃತ್॥** 32

**ಮುಮುಚಾತೇ ತಥಾಸ್ತ್ರಾಣಿ ಬಾಣಕೃಷ್ಣೌ ಜಿಗೀಷಯಾ।**
**ಪರಸ್ಪರಂ ಕ್ಷತಿಕರೌ ಲಾಘವಾದನಿಶಂ ದ್ವಿಜ॥** 33

**ಭಿದ್ಯಮಾನೇಷ್ವಶೇಷೇಷು ಶರೇಷ್ವಸ್ತ್ರೇ ಚ ಸೀದತಿ।**
**ಪ್ರಾಚುರ್ಯೇಣ ತತೋ ಬಾಣಂ ಹಂತುಂ ಚಕ್ರೇ ಹರಿರ್ಮನಃ॥** 34

---

ಸೇನೆಯನ್ನು ಶರಗಳಿಂದ ತಾಡಿಸಲಾಗಿ, ಆ ಸೇನೆಯು ಯುದ್ಧಧರ್ಮವನ್ನು ತ್ಯಜಿಸಿ ಪಲಾಯನ ಮಾಡಿತು. ಒಂದು ಕಡೆಯಲ್ಲಿ ಬಲಭದ್ರನು ಹಲಾಯುಧ ದಿಂದಲೂ ಮುಸಲಾಯುಧದಿಂದಲೂ ದೈತ್ಯಸೈನ್ಯವನ್ನು ಬಡಿಯುತ್ತಿರುವುದನ್ನೂ ಇನ್ನೊಂದೆಡೆಯಲ್ಲಿ ಶ್ರೀಕೃಷ್ಣನು ಬಾಣಗಳಿಂದ ತಾಡಿಸುತ್ತಿರುವುದನ್ನೂ ಬಾಣಾಸುರನು ವೀಕ್ಷಿಸಿದನು (29-30). ಅನಂತರ ಬಾಣಾಸುರನಿಗೂ ಶ್ರೀಕೃಷ್ಣನಿಗೂ ಘೋರವಾದ ಸಂಗ್ರಾಮ ತೊಡಗಿತು. ಈರ್ವರೂ ಕವಚಗಳನ್ನು ಭೇದಿಸತಕ್ಕ ನಿಶಿತಾಸ್ತ್ರಗಳನ್ನು ಪ್ರಯೋಗಿಸುತ್ತಿದ್ದರು. ಬಾಣನು ಬಿಟ್ಟ ಕೂರ್ಗಣೆ ಗಳನ್ನು ಕೇಶವನು ಕೊಚ್ಚಿಹಾಕುತ್ತಿದ್ದನು. ಕೇಶವನನ್ನು ಬಾಣನೂ, ಬಾಣನನ್ನು ಕೇಶವನೂ ಬಾಣಗಳಿಂದ ಬಾರಿಸಿದರು (31-32). ಮೈತ್ರೇಯ, ಬಾಣನೂ ಶ್ರೀಕೃಷ್ಣನೂ ಒಬ್ಬರನ್ನೊಬ್ಬರು ಜಯಿಸಬೇಕೆಂದು ಒಬ್ಬರನ್ನೊಬ್ಬರು ಗಾಯ ಗೊಳಿಸುತ್ತ ಅಸ್ತ್ರವಿದ್ಯಾನೈಪುಣ್ಯದಿಂದ ಸತತವಾಗಿ ಹೋರಾಡಿದರು. ಹೀಗೆ ಸಮಸ್ತಶರಗಳೂ ಛಿನ್ನಭಿನ್ನವಾಗುತ್ತಿರಲು, ವಿಶೇಷವಾಗಿ ಅಸ್ತ್ರವು ಕುಂಠಿತ ವಾಗುತ್ತಿರಲು, ಬಾಣನನ್ನು ಸಂಹರಿಸಬೇಕೆಂದು ಶ್ರೀಹರಿಯು ಮನಸ್ಸು ಮಾಡಿದನು (33-34). ಆಗ ನೂರಾರು ಸೂರ್ಯರ ಸಮುದಾಯವು

**ತತೋಽರ್ಕಶತಸಂಘಾತತೇಜಸಾ ಸದೃಶದ್ಯುತಿ।**
**ಜಗ್ರಾಹ ದೈತ್ಯಚಕ್ರಾರಿರ್ಹರಿಶ್ಚಕ್ರಂ ಸುದರ್ಶನಮ್॥ 35**

**ಮುಂಚತೋ ಬಾಣನಾಶಾಯ ತತಶ್ಚಕ್ರಂ ಮಧುದ್ವಿಷಃ।**
**ನಗ್ನಾ ದೈತೇಯವಿದ್ಯಾಭೂತ್ಕೋಟರೀ ಪುರತೋ ಹರೇಃ॥ 36**

**ತಾಮಗ್ರತೋ ಹರಿರ್ದೃಷ್ಟ್ವಾ ಮೀಲಿತಾಕ್ಷಸ್ಸುದರ್ಶನಮ್।**
**ಮುಮೋಚ ಬಾಣಮುದ್ದಿಶ್ಯಚ್ಛೇತ್ತುಂ ಬಾಹುವನಂ ರಿಪೋ॥ 37**

**ಕ್ರಮೇಣ ತತ್ತು ಬಾಹೂನಾಂ ಬಾಣಸ್ಯಾಚ್ಯುತಚೋದಿತಮ್।**
**ಛೇದಂ ಚಕ್ರೇಽಸುರಾಪಾಸ್ತಶಸ್ತ್ರೌಘಕ್ಷಪಣಾದೃತಮ್॥ 38**

**ಛಿನ್ನೇ ಬಾಹುವನೇ ತತ್ತು ಕರಸ್ಥಂ ಮಧುಸೂದನಃ।**
**ಮುಮುಕ್ಷುರ್ಬಾಣನಾಶಾಯ ವಿಜ್ಞಾತಸ್ತ್ರಿಪುರದ್ವಿಷಾ॥ 39**

**ಸಮುಪೇತ್ಯಾಹ ಗೋವಿಂದಂ ಸಾಮಪೂರ್ವಮುಮಾಪತಿಃ।**
**ವಿಲೋಕ್ಯ ಬಾಣಂ ದೋರ್ದಂಡಚ್ಛೇದಾಸೃಕ್‌ಸ್ರಾವವರ್ಷಿಣಮ್॥ 40**

---

ಸೇರಿದಂತೆ ತೇಜಸ್ಸಿನಿಂದ ಜಗಜಗಿಸುತ್ತಿದ್ದ ಸುದರ್ಶನ ಚಕ್ರವನ್ನು ದೈತ್ಯಚಕ್ರಾರಿಯಾದ ಹರಿಯು ಕರದಿಂದ ಹಿರಿದನು (35). ಬಾಣಸಂಹಾರಕ್ಕಾಗಿ ಮಧುಸೂದನನು ಚಕ್ರವನ್ನು ಧರಿಸಿದೊಡನೆ ದೈತ್ಯನ ಮಾಯಾವಿದ್ಯಾಧಿದೇವತೆಯಾದ ಕೋಟರಿಯು ಅವನೆದುರಿಗೆ ಬತ್ತಲೆಯಾಗಿ ಬಂದು ನಿಂತಳು! ಬತ್ತಲೆಯ ಹೆಂಗಸನ್ನು ಎದುರಿಗೆ ಕಂಡೊಡನೆ ಶ್ರೀಕೃಷ್ಣನು ಕಣ್ಣು ಮುಚ್ಚಿಕೊಂಡು ಬಾಣೋದ್ದಿಷ್ಟವಾದ ಚಕ್ರವನ್ನು ವೈರಿಯ ಬಾಹುವನ್ನು ಕತ್ತರಿಸುವಂತೆ ಪ್ರಯೋಗಿಸಿದನು (36-37). ಆ ಚಕ್ರವು ಬಾಣಾಸುರಪ್ರಯುಕ್ತವಾದ ಶಸ್ತ್ರಜಾಲವನ್ನು ಕೊಚ್ಚಿಹಾಕುತ್ತ ಕ್ರಮವಾಗಿ ಆತನ ಭುಜಗಳನ್ನು (ಎರಡು ಭುಜಗಳನ್ನು ಮಾತ್ರ ಬಿಟ್ಟು) ಕತ್ತರಿಸಿಹಾಕಿತು. ಮತ್ತೆ ಆ ಸುದರ್ಶನ ಚಕ್ರವು ಶ್ರೀಕೃಷ್ಣನ ಬಳಿಗೆ ಬರಲಾಗಿ, ಶ್ರೀಕೃಷ್ಣನು ಬಾಣನನ್ನು ವಧಿಸುವುದಕ್ಕಾಗಿ ಅದನ್ನು ಮತ್ತೆ ಕೈಯಲ್ಲಿ ಹಿಡಿದು ನಿಂತನು. ಅವನ ಉದ್ದೇಶವು ತ್ರಿಪುರಾರಿಯಾದ ಹರನಿಗೆ ತಿಳಿಯಿತು (38-39). ಬಾಹುಗಳು ವಿಚ್ಛಿನ್ನವಾಗಿ ರಕ್ತದ ಹೊಳೆಯನ್ನು ಹರಿಸುತ್ತ ನಿಂತಿದ್ದ ಬಾಣನನ್ನು ನೋಡಿದ ಪಾರ್ವತೀಪತಿಯು ಗೋವಿಂದನ ಬಳಿಗೆ ಬಂದು

*ಶ್ರೀಶಂಕರ ಉವಾಚ:*

**ಕೃಷ್ಣ ಕೃಷ್ಣ ಜಗನ್ನಾಥ ಜಾನೇ ತ್ವಾಂ ಪುರುಷೋತ್ತಮಮ್।**
**ಪರೇಶಂ ಪರಮಾತ್ಮಾನಮನಾದಿನಿಧನಂ ಹರಿಮ್॥ 41**

**ದೇವತಿರ್ಯಙ್ಮನುಷ್ಯೇಷು ಶರೀರಗ್ರಹಣಾತ್ಮಿಕಾ।**
**ಲೀಲೇಯಂ ಸರ್ವಭೂತಸ್ಯ ತವ ಚೇಷ್ಟೋಪಲಕ್ಷಣಾ॥ 42**

**ತತ್ಪ್ರಸೀದಾಭಯಂ ದತ್ತಂ ಬಾಣಸ್ಯಾಸ್ಯ ಮಯಾ ಪ್ರಭೋ।**
**ತತ್ತ್ವಯಾ ನಾನೃತಂ ಕಾರ್ಯಂ ಯನ್ಮಯಾ ವ್ಯಾಹೃತಂ ವಚಃ॥ 43**

**ಅಸ್ಮತ್ಸಂಶ್ರಯದೃಪ್ತೋಽಯಂ ನಾಪರಾಧೀ ತವಾವ್ಯಯ।**
**ಮಯಾ ದತ್ತವರೋ ದೈತ್ಯಸ್ತತಸ್ತ್ವಾಂ ಕ್ಷಮಯಾಮ್ಯಹಮ್॥ 44**

*ಶ್ರೀಪರಾಶರ ಉವಾಚ:*

**ಇತ್ಯುಕ್ತಃ ಪ್ರಾಹ ಗೋವಿಂದಃ ಶೂಲಪಾಣಿಮುಮಾಪತಿಮ್।**
**ಪ್ರಸನ್ನವದನೋ ಭೂತ್ವಾ ಗತಾಮರ್ಷೋಽಸುರಂ ಪ್ರತಿ॥ 45**

---

ಸಾಮಪೂರ್ವಕವಾಗಿ ಸಂತೈಸುತ್ತ ಇಂತೆಂದನು: "ಕೃಷ್ಣ, ಕೃಷ್ಣ, ಜಗನ್ನಾಥ, ನೀನು ಪುರುಷೋತ್ತಮನಾದ ಶ್ರೀಹರಿಯೆಂಬುದನ್ನು ಅರಿತಿದ್ದೇನೆ. ಪರಮೇಶ್ವರನೂ ಪರಮಾತ್ಮನೂ ಅನಾದಿನಿಧನನೂ ಆಗಿದ್ದೀಯೆ (40-41). ಸರ್ವಭೂತಾತ್ಮಕನಾದ ನಿನಗೆ ದೇವ, ತಿರ್ಯಕ್, ಮನುಷ್ಯಜನ್ಮಗಳಲ್ಲಿ ಆಯಾ ಶರೀರವನ್ನು ಧರಿಸಿ ಅದಕ್ಕೆ ಅನುರೂಪವಾದ ಚೇಷ್ಟೆಯನ್ನು ಮಾಡುವ ಒಂದು ಲೀಲೆ ಇದು. ಪ್ರಸನ್ನನಾಗು. ನಾನು ಬಾಣಾಸುರನಿಗೆ ಅಭಯವನ್ನಿತ್ತಿದ್ದೇನೆ. ಹೇ ಪ್ರಭು, ನಾನು ಹೇಳಿದ ಮಾತು ಸುಳ್ಳಾಗುವಂತೆ ನೀನು ಮಾಡಬಾರದು! (42-43). ಹೇ ಅವ್ಯಯ, ಈತನು ನನ್ನ ಆಶ್ರಯದಿಂದ ಉದ್ಧತನಾಗಿದ್ದಾನೆ. ಅಷ್ಟೇ ಹೊರತು ನಿನಗೆ ಯಾವ ಅಪರಾಧವನ್ನೂ ಮಾಡಿಲ್ಲ. ಆ ದೈತ್ಯನಿಗೆ ನಾನು ವರವನ್ನು ಕೊಟ್ಟಿರುವುದರಿಂದ ಅವನ ಪರವಾಗಿ ಕ್ಷಮೆಯನ್ನು ಕೇಳುತ್ತಿದ್ದೇನೆ" ಎಂದನು (44). ಆಗ ಗೋವಿಂದನು ಪ್ರಸನ್ನಮುಖನಾಗಿ ಬಾಣಾಸುರನ ವಿಷಯದಲ್ಲಿ ಕ್ರೋಧಭಾವವನ್ನು ತೊರೆದು ಪಾರ್ವತೀಪತಿಯೂ ಶೂಲಪಾಣಿಯೂ ಆದ

*ಶ್ರೀಭಗವಾನುವಾಚ:*

**ಯುಷ್ಮದ್ದತ್ತವರೋ ಬಾಣೋ ಜೀವತಾಮೇಷ ಶಂಕರ।**
**ತ್ವದ್ವಾಕ್ಯಗೌರವಾದೇತನ್ಮಯಾ ಚಕ್ರಂ ನಿವರ್ತಿತಮ್॥** 46

**ತ್ವಯಾ ಯದಭಯಂ ದತ್ತಂ ತದ್ದತ್ತಮಖಿಲಂ ಮಯಾ।**
**ಮತ್ತೋಽವಿಭಿನ್ನಮಾತ್ಮಾನಂ ದ್ರಷ್ಟುಮರ್ಹಸಿ ಶಂಕರ॥** 47

**ಯೋಽಹಂ ಸ ತ್ವಂ ಜಗಚ್ಚೇದಂ ಸದೇವಾಸುರಮಾನುಷಮ್।**
**ಮತ್ತೋ ನಾನ್ಯದಶೇಷಂ ಯತ್ತತ್ತ್ವಂ ಜ್ಞಾತುಮಿಹಾರ್ಹಸಿ॥** 48

**ಅವಿದ್ಯಾಮೋಹಿತಾತ್ಮಾನಃ ಪುರುಷಾ ಭಿನ್ನದರ್ಶಿನಃ।**
**ವದಂತಿ ಭೇದಂ ಪಶ್ಯಂತಿ ಚಾವಯೋರಂತರಂ ಹರ॥** 49

**ಪ್ರಸನ್ನೋಽಹಂ ಗಮಿಷ್ಯಾಮಿ ತ್ವಂ ಗಚ್ಛ ವೃಷಭಧ್ವಜ॥** 50

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾ ಪ್ರಯಯೌ ಕೃಷ್ಣಃ ಪ್ರಾದ್ಯುಮ್ನಿರ್ಯತ್ರ ತಿಷ್ಠತಿ।**
**ತದ್ಬಂಧಫಣಿನೋ ನೇಶುರ್ಗರುಡಾನಿಲಪೋಥಿತಾಃ॥** 51

---

ಶಿವನನ್ನು ಕುರಿತು ಹೀಗೆಂದನು: "ಹೇ ಶಂಕರ, ನಿನ್ನಿಂದ ವರವನ್ನು ಪಡೆದ ಈ ಬಾಣನು ಬದುಕಿಕೊಂಡಿರಲಿ! ನಿನ್ನ ವಾಕ್ಯಕ್ಕೆ ಗೌರವವನ್ನಿತ್ತು ಚಕ್ರವನ್ನು ಹಿಂತೆಗೆದುಕೊಂಡಿದ್ದೇನೆ (45-46). ನೀನು ಇತ್ತ ವರವೆಲ್ಲವೂ ನಾನು ಇತ್ತ ವರವೇ. ಶಂಕರ, ನೀನು ನನಗೆ ಅಭಿನ್ನನಾಗಿರುವೆಯೆಂದು ತಿಳಿ. ನಾನು ಯಾರಾಗಿದ್ದೇನೋ ನೀನೂ ಅವನೇ ಆಗಿದ್ದೀಯೆ! ದೇವಾಸುರಮಾನುಷಸಹಿತ ವಾದ ಜಗತ್ತು ನನಗಿಂತ ಭಿನ್ನವಾದ ಇನ್ನೊಂದಲ್ಲವೆಂದು ತಿಳಿದಿರು (47-48). ಅವಿದ್ಯೆಯಿಂದ ವ್ಯಾಮೋಹಿತಚಿತ್ತರಾದ ಜನರು ಭೇದದರ್ಶಿಗಳಾಗಿರುತ್ತಾರೆ. ಅವರು ಭೇದವನ್ನು ಹೇಳುತ್ತಾರಲ್ಲದೆ ನಮ್ಮಿಬ್ಬರಲ್ಲಿಯೂ ಭೇದವನ್ನು ಕಾಣುತ್ತಾರೆ. ಹೇ ವೃಷಭಧ್ವಜ, ಪ್ರಸನ್ನನಾಗಿದ್ದೇನೆ. ನಾನೀಗ ಹೋಗುವೆನು, ನೀನೂ ಹೋಗು" ಎಂದನು (49-50). ಹೀಗೆ ನುಡಿದು ಪ್ರದ್ಯುಮ್ನನ ಮಗನಾದ ಅನಿರುದ್ಧನಿದ್ದಲ್ಲಿಗೆ ತೆರಳಿದನು. ಗರುಡನ ವೇಗದಿಂದುಂಟಾದ ವಾಯುವಿನ ಹೊಡೆತದಿಂದಲೇ ಅನಿರುದ್ಧನನ್ನು ಬಂಧಿಸಿದ್ದ ನಾಗಪಾಶಗಳು ನಷ್ಟವಾದವು

**ತತೋಽನಿರುದ್ಧಮಾರೋಪ್ಯ ಸಪತ್ನೀಕಂ ಗರುತ್ಮತಿ।**
**ಆಜಗ್ಮುರ್ದ್ವಾರಕಾಂ ರಾಮಕಾರ್ಷ್ಣಿದಾಮೋದರಾಃ ಪುರೀಮ್॥** 52

**ಪುತ್ರಪೌತ್ರೈಃ ಪರಿವೃತಸ್ತತ್ರ ರೇಮೇ ಜನಾರ್ದನಃ।**
**ದೇವೀಭಿಸ್ಸತತಂ ವಿಪ್ರ ಭೂಭಾರತರಣೇಚ್ಛಯಾ॥** 53

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ತ್ರಯಸ್ತ್ರಿಂಶೋಽಧ್ಯಾಯಃ

---

(51). ಅನಂತರ ಪತ್ನೀಸಮೇತನಾದ ಅನಿರುದ್ಧನನ್ನು ಗರುಡನ ಮೇಲೆ ಕುಳ್ಳಿರಿಸಿ ಕೊಂಡು ಶ್ರೀಕೃಷ್ಣ ಬಲರಾಮರೂ ಪ್ರದ್ಯುಮ್ನನೂ ದ್ವಾರಕಾನಗರಿಗೆ ಮರಳಿದರು. ಮೈತ್ರೇಯ, ಅಲ್ಲಿ ಶ್ರೀಕೃಷ್ಣನು ಪುತ್ರಪೌತ್ರರಿಂದಲೂ ತನ್ನ ರಾಣಿಯರಿಂದಲೂ ಪರಿವೃತನಾಗಿ ಭೂಭಾರವನ್ನಿಳಿಸಬೇಕೆಂಬ ಆಕಾಂಕ್ಷೆಯಿಂದ ವಿಹರಿಸುತ್ತಿದ್ದನು (52-53).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಮೂವತ್ತುಮೂರನೆಯ ಅಧ್ಯಾಯ ಮುಗಿಯಿತು.



## ಚತುಸ್ತ್ರಿಂಶೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಚಕ್ರೇ ಕರ್ಮ ಮಹಚ್ಛೌರಿರ್ಬಿಭ್ರಾಣೋ ಮಾನುಷೀಂ ತನುಮ್।**
**ಜಿಗಾಯ ಶಕ್ರಂ ಶರ್ವಂ ಚ ಸರ್ವಾನ್ ದೇವಾಂಶ್ಚ ಲೀಲಯಾ॥** 1

**ಯಚ್ಚಾನ್ಯದಕರೋತ್ಕರ್ಮ ದಿವ್ಯಚೇಷ್ಟಾವಿಘಾತಕೃತ್।**
**ತತ್ಕಥ್ಯತಾಂ ಮಹಾಭಾಗ ಪರಂ ಕೌತೂಹಲಂ ಹಿ ಮೇ॥** 2

*ಶ್ರೀಪರಾಶರ ಉವಾಚ:*

**ಗದತೋ ಮಮ ವಿಪ್ರರ್ಷೇ ಶ್ರೂಯತಾಮಿದಮಾದರಾತ್।**
**ನರಾವತಾರೇ ಕೃಷ್ಣೇನ ದಗ್ಧಾ ವಾರಾಣಸೀ ಯಥಾ॥** 3

**ಪೌಂಡ್ರಕೋ ವಾಸುದೇವಸ್ತು ವಾಸುದೇವೋಽಭವದ್ಭುವಿ।**
**ಅವತೀರ್ಣಸ್ತ್ವಮಿತ್ಯುಕ್ತೋ ಜನೈರಜ್ಞಾನಮೋಹಿತೈಃ॥** 4

---

### ಅಧ್ಯಾಯ 34

ಪೌಂಡ್ರಕ ವಧೆ. ಕಾಶೀರಾಜನೊಡನೆ ಯುದ್ಧ. ಕಾಶೀದಹನ.

ಮೈತ್ರೇಯರು ಪರಾಶರರನ್ನು ಕುರಿತು, "ಮಹಾತ್ಮರೇ, ವಿಷ್ಣು ಭಗವಂತನು ನರಾಕೃತಿಯನ್ನು ಧರಿಸಿ ಇಂದ್ರನನ್ನೂ ಶಿವನನ್ನೂ ಸಕಲ ದೇವತೆಗಳನ್ನೂ ಸುಲಭವಾಗಿ ಜಯಿಸಿದನಷ್ಟೇ. ದೇವಲೋಕದವರ ಚೇಷ್ಟೆಗಳನ್ನು ವಿಘಾತಗೊಳಿಸುತ್ತಿದ್ದ ಆತನು ಇನ್ನೂ ಯಾವ ಮಹಾಕಾರ್ಯಗಳನ್ನೆಸಗಿದನು? ಅದನ್ನು ಹೇಳೋಣವಾಗಲಿ ಅದನ್ನು ಕೇಳಲು ನನಗೆ ಅತಿಶಯವಾದ ಕುತೂಹಲ ಉಂಟಾಗಿದೆ" ಎಂದರು (1-2). ಆಗ ಪರಾಶರಮುನಿಗಳು ಹೇಳಿದರು: ಮೈತ್ರೇಯ, ನರಾವತಾರದಲ್ಲಿ ಶ್ರೀಕೃಷ್ಣನು ಕಾಶೀನಗರವನ್ನು ಸುಟ್ಟುಹಾಕಿದನು. ಅದು ಹೇಗೆಂಬುದನ್ನು ಹೇಳುತ್ತೇನೆ, ಕೇಳು (3). ವಾಸುದೇವ ಎಂಬ ಹೆಸರಿನ ಪೌಂಡ್ರಕವಂಶೀಯರಾಜನೊಬ್ಬನಿದ್ದನು. ಅಜ್ಞಾನ ಮೋಹಿತರಾದ ಜನರು ಅವನಿಗೆ 'ನಿಜವಾಗಿ ನೀನೇ ವಾಸುದೇವ.

**ಸ ಮೇನೇ ವಾಸುದೇವೋऽಹಮವತೀರ್ಣೋ ಮಹೀತಲೇ।**
**ನಷ್ಟಸ್ಮೃತಿಸ್ತತಸ್ಸರ್ವಂ ವಿಷ್ಣುಚಿಹ್ನಮಚೀಕರತ್॥** 5

**ದೂತಂ ಚ ಪ್ರೇಷಯಾಮಾಸ ಕೃಷ್ಣಾಯ ಸುಮಹಾತ್ಮನೇ।**
**ತ್ಯಕ್ತ್ವಾ ಚಕ್ರಾದಿಕಂ ಚಿಹ್ನಂ ಮದೀಯಂ ನಾಮ ಚಾತ್ಮನಃ॥** 6

**ವಾಸುದೇವಾತ್ಮಕಂ ಮೂಢ ತ್ಯಕ್ತ್ವಾ ಸರ್ವಮಶೇಷತಃ।**
**ಆತ್ಮನೋ ಜೀವಿತಾರ್ಥಾಯ ತತೋ ಮೇ ಪ್ರಣತಿಂ ವ್ರಜ॥** 7

**ಇತ್ಯುಕ್ತಸ್ಸಂಪ್ರಹಸ್ಯೈನಂ ದೂತಂ ಪ್ರಾಹ ಜನಾರ್ದನಃ।**
**ನಿಜಚಿಹ್ನಮಹಂ ಚಕ್ರಂ ಸಮುತ್ಸ್ರಕ್ಷ್ಯೇ ತ್ವಯೀತಿ ವೈ॥** 8

**ವಾಚ್ಯಶ್ಚ ಪೌಂಡ್ರಕೋ ಗತ್ವಾ ತ್ವಯಾ ದೂತ ವಚೋ ಮಮ।**
**ಜ್ಞಾತಸ್ತ್ವದ್ವಾಕ್ಯಸದ್ಭಾವೋ ಯತ್ಕಾರ್ಯಂ ತದ್ವಿಧೀಯತಾಮ್॥** 9

**ಗೃಹೀತಚಿಹ್ನವೇಷೋऽಹಮಾಗಮಿಷ್ಯಾಮಿ ತೇ ಪುರಮ್।**
**ಉತ್ಸ್ರಕ್ಷ್ಯಾಮಿ ಚ ತಚ್ಚಕ್ರಂ ನಿಜಚಿಹ್ನಮಸಂಶಯಮ್॥** 10

---

ಭೂಮಿಯಲ್ಲಿ ಅವತರಿಸಿದ್ದೀಯೆ!' ಎಂದು ಹೇಳುತ್ತಿದ್ದರು (4). ಕಡೆಗೆ ಪೌಂಡ್ರಕನು ಬುದ್ಧಿಗೆಟ್ಟು 'ಹೌದು, ಭೂಮಿಯಲ್ಲವತರಿಸಿದ ವಾಸುದೇವನು ನಾನೇ' ಎಂದು ನಿರ್ಧರಿಸಿ, ವಿಷ್ಣುವಿನ ಚಿಹ್ನೆಗಳಾದ ಶಂಖಚಕ್ರಾದಿಗಳನ್ನು ಮಾಡಿಸಿ ಧರಿಸಿದನು. ಅಲ್ಲದೆ ಮಹಾತ್ಮನಾದ ಶ್ರೀಕೃಷ್ಣನ ಬಳಿಗೆ ಸಂದೇಶಹರನಾದ ದೂತನೊಬ್ಬನನ್ನು ಕಳಿಸಿದನು. ಸಂದೇಶವೇನೆಂದರೆ, "ಎಲೈ ಮೂಢ, ವಿಷ್ಣುಚಿಹ್ನೆಗಳಾದ ಚಕ್ರಾದಿಗಳು ನನ್ನವು! ವಾಸುದೇವನೆಂಬ ಹೆಸರೂ ನನ್ನದು! ನೀನು ಬದುಕಬೇಕೆಂದಿದ್ದರೆ ಅವೆಲ್ಲವನ್ನೂ ಬಿಡು ಮತ್ತು ನನಗೆ ಶರಣು ಬಾ" (5-7). ಈ ಸಂದೇಶವನ್ನು ಕೇಳಿ ಶ್ರೀಕೃಷ್ಣನು ಗಟ್ಟಿಯಾಗಿ ನಕ್ಕುಬಿಟ್ಟನು. ಅನಂತರ ದೂತನ ಕಡೆಗೆ ತಿರುಗಿ "ಎಲೈ ದೂತ, ನೀನು ಹೋಗಿ ನನ್ನ ಪ್ರತಿವಚನವನ್ನು ಪೌಂಡ್ರಕನಿಗೆ ತಿಳಿಸು. ಏನೆಂದರೆ, 'ಎಲೈ ಪೌಂಡ್ರಕ, ನಿನ್ನ ಸಂದೇಶದ ಸಾರಾಂಶ ತಿಳಿಯಿತು. ಮುಂದಿನ ಕರ್ತವ್ಯವೇನೆಂಬುದನ್ನು ಮಾಡಬಹುದು (8-9). ನನ್ನ ಈ ವೇಷ ಚಿಹ್ನೆಗಳೆಲ್ಲವನ್ನೂ ತೆಗೆದುಕೊಂಡು ನಿನ್ನ ಪಟ್ಟಣಕ್ಕೆ ಬರುತ್ತೇನೆ. ಸ್ವಚಿಹ್ನೆಯಾದ ಚಕ್ರವನ್ನು ನಿಃಸಂಶಯವಾಗಿ ಬಿಡುವೆನು! ಬಾ—ಎಂದು ಆಜ್ಞಾ

**ಆಜ್ಞಾಪೂರ್ವಂ ಚ ಯದಿದಮಾಗಚ್ಛೇತಿ ತ್ವಯೋದಿತಮ್।**
**ಸಂಪಾದಯಿಷ್ಯೇ ಶ್ವಸ್ತುಭ್ಯಂ ಸಮಾಗಮ್ಯಾವಿಲಂಬಿತಮ್॥ 11**

**ಶರಣಂ ತೇ ಸಮಭ್ಯೇತ್ಯ ಕರ್ತಾಸ್ಮಿ ನೃಪತೇ ತಥಾ।**
**ಯಥಾ ತ್ವತ್ತೋ ಭಯಂ ಭೂಯೋ ನ ಮೇ ಕಿಂಚಿದ್ಭವಿಷ್ಯತಿ॥ 12**

*ಶ್ರೀಪರಾಶರ ಉವಾಚ:*

**ಇತ್ಯುಕ್ತೇಽಪಗತೇ ದೂತೇ ಸಂಸ್ಮೃತ್ಯಾಭ್ಯಾಗತಂ ಹರಿಃ।**
**ಗರುತ್ಮಂತಮಥಾರುಹ್ಯ ತ್ವರಿತಸ್ತತ್ಪುರಂ ಯಯೌ॥ 13**

**ತತಸ್ತು ಕೇಶವೋದ್ಯೋಗಂ ಶ್ರುತ್ವಾ ಕಾಶಿಪತಿಸ್ತದಾ।**
**ಸರ್ವಸೈನ್ಯಪರೀವಾರ ಪಾರ್ಷ್ಣಿಗ್ರಾಹ ಉಪಾಯಯೌ॥ 14**

**ತತೋ ಬಲೇನ ಮಹತಾ ಕಾಶಿರಾಜಬಲೇನ ಚ।**
**ಪೌಂಡ್ರಕೋ ವಾಸುದೇವೋಽಸೌ ಕೇಶವಾಭಿಮುಖೋ ಯಯೌ॥ 15**

---

ಪೂರ್ವಕವಾಗಿ ನನಗೆ ಹೇಳಿಕಳಿಸಿದ್ದೀಯಷ್ಟೆ. ತಡವಿಲ್ಲದೆ ನಾಳೆಯೇ ಅದನ್ನು ಅನುಷ್ಠಾನಕ್ಕೆ ತರುವೆನು! (10-11). ರಾಜ, 'ಶರಣಂವ್ರಜ' ಎಂದು ನೀನು ಹೇಳಿರುವಂತೆ ನಿನ್ನ ಶರಣಕ್ಕೆ (ಗೃಹಕ್ಕೆ) ಬರುವೆನು. ಅಲ್ಲದೆ ನಿನ್ನಿಂದ ಮತ್ತೆ ಯಾವ ಭಯವೂ ಇಲ್ಲದಂತೆ ಮಾಡಿಕೊಳ್ಳುವೆನು!" ಎಂದನು (12). ಈ ಪ್ರತಿವಚನವನ್ನು ಪಡೆದು ದೂತನು ಹೊರಟುಹೋದನು. ಅನಂತರ ಶ್ರೀಹರಿಯು ಸ್ಮರಣಮಾತ್ರದಿಂದ ಉಪಸ್ಥಿತನಾದ ಗರುಡನನ್ನೇರಿ ಪೌಂಡ್ರಕನ ಪುರಕ್ಕೆ ಪ್ರಯಾಣ ಮಾಡಿದನು. ಕೇಶವನ ಸಮರೋದ್ಯೋಗದ ಸುದ್ದಿಯನ್ನು ತಿಳಿದು (ಪೌಂಡ್ರಕನ ಮಿತ್ರನಾದ) ಕಾಶೀರಾಜನು ಸಮಸ್ತ ಸೇನಾಪರಿವೃತನಾಗಿ ಪೌಂಡ್ರಕನ ಸಹಾಯಕ್ಕೆ ಆಗಮಿಸಿದನು (13-14). ಆಮೇಲೆ ಪೌಂಡ್ರಕ ವಾಸುದೇವನು ಪ್ರಬಲವಾದ ತನ್ನ ಸೇನೆಯಿಂದಲೂ ಕಾಶೀರಾಜನ ಸೇನೆ ಯಿಂದಲೂ ಪರಿವೃತನಾಗಿ ಕೇಶವನನ್ನು ಎದುರಿಸಿದನು. ಪೌಂಡ್ರಕನು ವಿಶಾಲ ವಾದ ರಥದಲ್ಲಿ ಮಂಡಿಸಿ ಚಕ್ರಹಸ್ತನಾಗಿ, ಗದೆ, ಶಾರ್ಙ್ಗ, ಧನುಸ್ಸು,

**ತಂ ದದರ್ಶ ಹರಿರ್ದೂರಾದುದಾರಸ್ಯಂದನೇ ಸ್ಥಿತಮ್।**
**ಚಕ್ರಹಸ್ತಂ ಗದಾಶಾರ್ಙ್ಗಬಾಹುಂ ಪಾಣಿಗತಾಂಬುಜಮ್॥** 16

**ಸ್ರಗ್ಧರಂ ಪೀತವಸನಂ ಸುಪರ್ಣರಚಿತಧ್ವಜಮ್।**
**ವಕ್ಷಃಸ್ಥಲೇ ಕೃತಂ ಚಾಸ್ಯ ಶ್ರೀವತ್ಸಂ ದದೃಶೇ ಹರಿಃ॥** 17

**ಕಿರೀಟಕುಂಡಲಧರಂ ನಾನಾರತ್ನೋಪಶೋಭಿತಮ್।**
**ತಂ ದೃಷ್ಟ್ವಾ ಭಾವಗಂಭೀರಂ ಜಹಾಸ ಗರುಡಧ್ವಜಃ॥** 18

**ಯುಯುಧೇ ಚ ಬಲೇನಾಸ್ಯ ಹಸ್ತ್ಯಶ್ವಬಲಿನಾ ದ್ವಿಜ।**
**ನಿಸ್ತ್ರಿಂಶಾಸಿಗದಾಶೂಲಶಕ್ತಿಕಾರ್ಮುಕಶಾಲಿನಾ॥** 19

**ಕ್ಷಣೇನ ಶಾರ್ಙ್ಗನಿರ್ಮುಕ್ತೈಶ್ಶರೈರರಿವಿದಾರಣೈಃ।**
**ಗದಾಚಕ್ರನಿಪಾತೈಶ್ಚ ಸೂದಯಾಮಾಸ ತದ್ಬಲಮ್॥** 20

**ಕಾಶೀರಾಜಬಲಂ ಚೈವಂ ಕ್ಷಯಂ ನೀತ್ವಾ ಜನಾರ್ದನಃ।**
**ಉವಾಚ ಪೌಂಡ್ರಕಂ ಮೂಢಮಾತ್ಮಚಿಹ್ನೋಪಲಕ್ಷಿತಮ್॥** 21

---

ಕಮಲಗಳನ್ನು ಧರಿಸಿರುವುದನ್ನು ಶ್ರೀಕೃಷ್ಣನು ದೂರದಲ್ಲಿ ಕಂಡನು (15-16). ಅಲ್ಲದೆ ಪೌಂಡ್ರಕನು ವೈಜಯಂತೀಮಾಲೆಯನ್ನು ಧರಿಸಿ ಪೀತಾಂಬರಧಾರಿ ಯಾಗಿದ್ದನು. ಅವನ ಧ್ವಜವು ಗರುಡಚಿಹ್ನೆಯಿಂದ ಅಂಕಿತವಾಗಿತ್ತು. ವಕ್ಷ ಸ್ಥಳದಲ್ಲಿ ಶ್ರೀವತ್ಸ ಚಿಹ್ನೆಯಿತ್ತು. ಕಿರೀಟಕುಂಡಲಧರನೂ ನಾನಾರತ್ನೋಪ ಶೋಭಿತನೂ ಆದ ಆ ಪೌಂಡ್ರಕ ವಾಸುದೇವನನ್ನು ನೋಡಿ ಶ್ರೀಕೃಷ್ಣನು ಗಂಭೀರಭಾವದಿಂದ ನಕ್ಕನು (17-18). ಮೈತ್ರೇಯ, ಅನಂತರ ಗಜಾಶ್ವಗಳಿಂದ ತುಂಬಿ ಬಲಾಢ್ಯವೂ ನಿಸ್ತ್ರಿಂಶ, ಖಡ್ಗ, ಗದೆ, ಶೂಲ, ಶಕ್ತಿ, ಧನುಸ್ಸು— ಮೊದಲಾದ ಆಯುಧಗಳನ್ನು ಹಿಡಿದುದೂ ಆದ ಆತನ ಸೈನ್ಯದೊಡನೆ ಯುದ್ಧ ವನ್ನಾರಂಭಿಸಿದನು (19). ಒಂದು ಕ್ಷಣದಲ್ಲಿ ಶ್ರೀಕೃಷ್ಣನು ತನ್ನ ಶಾರ್ಙ್ಗಧನುಸ್ಸಿ ನಿಂದ ಚಿಮ್ಮಿದ ವೈರಿನಿರ್ಭೇದಕ ಶರಗಳಿಂದಲೂ ಗದಾ ಚಕ್ರಗಳ ಆಘಾತ ಗಳಿಂದಲೂ ಪೌಂಡ್ರಕನ ಸೈನ್ಯವನ್ನು ಹುರಿದು ಮುಕ್ಕಿದನು. ಕಾಶೀರಾಜನ ಸೇನೆಯನ್ನೂ ನಾಶಗೊಳಿಸಿದನಲ್ಲದೆ, ಆತ್ಮಚಿಹ್ನೆಗಳಾದ ಚಕ್ರಾದಿಗಳಿಂದ ಭೂಷಿತನಾಗಿದ್ದ ಮೂಢನಾದ ಪೌಂಡ್ರಕನಿಗೆ ಇಂತೆಂದನು (20-21):

*ಶ್ರೀಭಗವಾನುವಾಚ:*

**ಪೌಂಡ್ರಕೋಕ್ತಂ ತ್ವಯಾ ಯತ್ತು ದೂತವಕ್ತ್ರೇಣ ಮಾಂ ಪ್ರತಿ।**
**ಸಮುತ್ಸೃಜೇತಿ ಚಿಹ್ನಾನಿ ತತ್ತೇ ಸಂಪಾದಯಾಮ್ಯಹಮ್॥ 22**

**ಚಕ್ರಮೇತತ್ಸಮುತ್ಸೃಷ್ಟಂ ಗದೇಯಂ ತೇ ವಿಸರ್ಜಿತಾ।**
**ಗರುತ್ಮಾನೇಷ ಚೋತ್ಸೃಷ್ಟಸ್ಸಮಾರೋಹತು ತೇ ಧ್ವಜಮ್॥ 23**

*ಶ್ರೀಪರಾಶರ ಉವಾಚ:*

**ಇತ್ಯುಚ್ಚಾರ್ಯ ವಿಮುಕ್ತೇನ ಚಕ್ರೇಣಾಸೌ ವಿದಾರಿತಃ।**
**ಪಾತಿತೋ ಗದಯಾ ಭಗ್ನೋ ಧ್ವಜಶ್ಚಾಸ್ಯ ಗರುತ್ಮತಾ॥ 24**

**ತತೋ ಹಾಹಾಕೃತೇ ಲೋಕೇ ಕಾಶೀಪುರ್ಯಧಿಪೋ ಬಲೀ।**
**ಯುಯುಧೇ ವಾಸುದೇವೇನ ಮಿತ್ರಸ್ಯಾಪಚಿತೌ ಸ್ಥಿತಃ॥ 25**

**ತತಶ್ಶಾರ್ಙ್ಗಧನುರ್ಮುಕ್ತೈಶ್ಛಿತ್ತ್ವಾ ತಸ್ಯ ಶಿರಶ್ಶರೈಃ।**
**ಕಾಶೀಪುರ್ಯಾಂ ಸ ಚಿಕ್ಷೇಪ ಕುರ್ವಂಲ್ಲೋಕಸ್ಯ ವಿಸ್ಮಯಮ್॥ 26**

---

"ಪೌಂಡ್ರಕ, ಆತ್ಮಚಿಹ್ನೆಗಳನ್ನು ಬಿಡಬೇಕೆಂದು ದೂತನ ಮೂಲಕ ನನಗೆ ಹೇಳಿ ಕಳಿಸಿದ್ದೆಯಲ್ಲವೆ? ಇದೋ, ಈ ಚಕ್ರವನ್ನೂ ಈ ಗದೆಯನ್ನೂ ಬಿಟ್ಟಿದ್ದೇನೆ! ಈ ಗರುಡನನ್ನೂ ಬಿಟ್ಟಿದ್ದೇನೆ, ಈತನು ನಿನ್ನ ಧ್ವಜವನ್ನಡರಲಿ!" ಎಂದನು (22-23). ಹೀಗೆ ಹೇಳಿ ಪ್ರಯೋಗಿಸಿದ ಚಕ್ರದಿಂದ ಪೌಂಡ್ರಕನನ್ನು ಸೀಳಿ ಗದೆಯಿಂದ ನೆಲಕ್ಕುರುಳಿಸಿದನು. ಗರುಡನು ಆತನ ಧ್ವಜಸ್ತಂಭವನ್ನಡರಿ ಅದನ್ನು ಮುರಿದು ಬೀಳಿಸಿದನು. ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಬಲಿಷ್ಠನಾದ ಕಾಶೀರಾಜನು ತನ್ನ ಮಿತ್ರನ ಪರವಾಗಿ ಸೇಡನ್ನು ತೀರಿಸಿಕೊಳ್ಳಲು ವಾಸುದೇವನೊಡನೆ ಯುದ್ಧಕ್ಕಿಳಿದನು (24-25). ಆಗ ವಾಸುದೇವನು ತನ್ನ ಶಾರ್ಙ್ಗ ಧನುಸ್ಸಿನಿಂದ ಸಿಡಿದ ಶರಗಳಿಂದ ಕಾಶೀರಾಜನ ಶಿರಸ್ಸನ್ನು ತರಿದನಲ್ಲದೆ, ಆ ಶಿರಸ್ಸು ಕಾಶಿಗೆ ಹೋಗಿ ಬೀಳುವಂತೆ ಹಾರಿಸಿದನು. ಲೋಕವು ವಿಸ್ಮಯಗೊಂಡಿತು (26). ಈ

**ಹತ್ವಾ ತಂ ಪೌಂಡ್ರಕಂ ಶೌರಿಃ ಕಾಶೀರಾಜಂ ಚ ಸಾನುಗಮ್।**
**ಪುನರ್ದ್ವಾರವತೀಂ ಪ್ರಾಪ್ತೋ ರೇಮೇ ಸ್ವರ್ಗಗತೋ ಯಥಾ॥** 27

**ತಚ್ಛಿರಃ ಪತಿತಂ ತತ್ರ ದೃಷ್ಟ್ವಾ ಕಾಶೀಪತೇಃ ಪುರೇ।**
**ಜನಃ ಕಿಮೇತದಿತ್ಯಾಹ ಛಿನ್ನಂ ಕೇನೇತಿ ವಿಸ್ಮಿತಃ॥** 28

**ಜ್ಞಾತ್ವಾ ತಂ ವಾಸುದೇವೇನ ಹತಂ ತಸ್ಯ ಸುತಸ್ತತಃ।**
**ಪುರೋಹಿತೇನ ಸಹಿತಸ್ತೋಷಯಾಮಾಸ ಶಂಕರಮ್॥** 29

**ಅವಿಮುಕ್ತೇ ಮಹಾಕ್ಷೇತ್ರೇ ತೋಷಿತಸ್ತೇನ ಶಂಕರಃ।**
**ವರಂ ವೃಣೀಷ್ವೇತಿ ತದಾ ತಂ ಪ್ರೋವಾಚ ನೃಪಾತ್ಮಜಮ್॥** 30

**ಸ ವವ್ರೇ ಭಗವನ್ ಕೃತ್ಯಾ ಪಿತೃಹಂತುರ್ವಧಾಯ ಮೇ।**
**ಸಮುತ್ತಿಷ್ಠತು ಕೃಷ್ಣಸ್ಯ ತ್ವತ್ಪ್ರಸಾದಾನ್ಮಹೇಶ್ವರ॥** 31

---

ಪ್ರಕಾರ ಶ್ರೀಕೃಷ್ಣನು ಪರಿವಾರ ಸಮೇತನಾದ ಪೌಂಡ್ರಕನನ್ನೂ ಕಾಶೀರಾಜನನ್ನೂ ಸಂಹರಿಸಿ ದ್ವಾರವತಿಗೆ ಹಿಂದಿರುಗಿ, ಸ್ವರ್ಗದಲ್ಲಿರುವಂತೆ ಆನಂದಪಡುತ್ತಿದ್ದನು (27). ಇತ್ತಲಾಗಿ ಕಾಶೀರಾಜನ ಶಿರಸ್ಸು ಕಾಶೀನಗರದಲ್ಲಿ ಬಿದ್ದುದನ್ನು ನೋಡಿ 'ಏನಿದು? ಯಾರು ಇದನ್ನು ಕತ್ತರಿಸಿದರು!' ಎಂದು ಜನರು ವಿಸ್ಮಿತರಾದರು. ವಾಸುದೇವನು ಕೊಂದಿದ್ದಾನೆಂಬುದು ಕಾಶೀರಾಜನ ಪುತ್ರನಿಗೆ ಗೊತ್ತಾಯಿತು. ಆತನು (ಪ್ರತೀಕಾರ ಮಾಡುವುದಕ್ಕಾಗಿ) ತನ್ನ ಪುರೋಹಿತನೊಡನೆ ಸಮಾಲೋಚಿಸಿ (ತಪಸ್ಸಿನಿಂದ) ಶಿವನನ್ನು ಮೆಚ್ಚಿಸಿದನು (28-29). ಅವಿಮುಕ್ತ ಮಹಾಕ್ಷೇತ್ರದಲ್ಲಿ ಪ್ರಸನ್ನನಾದ ಶಿವನು ಕಾಶೀರಾಜಪುತ್ರನನ್ನು ಕುರಿತು 'ವರವನ್ನು ಕೇಳಿಕೊ' ಎಂದನು. ಆಗ ರಾಜಪುತ್ರನು "ಭಗವನ್—ಮಹೇಶ್ವರ, ನನ್ನ ತಂದೆಯನ್ನು ಘಾತಿಸಿದ ಕೃಷ್ಣನ ವಧೆಗಾಗಿ ನಿನ್ನ ಅನುಗ್ರಹದಿಂದ ಕೃತ್ಯೆ ಉತ್ಪನ್ನಳಾಗಲಿ"* ಎಂದು ವರವನ್ನು ಬೇಡಿದನು (30-31). ಶಿವನು "ಹಾಗೇ

---

* ಶ್ಲೋಕದಲ್ಲಿರುವ ಪ್ರಕಾರ "ನನ್ನ ತಂದೆಯನ್ನು ಘಾತಿಸಿದ ಕೃಷ್ಣನೆದುರಿಗೆ ನನ್ನ ವಧೆಗಾಗಿ ಕೃತ್ಯೆ ಹೋಗಿ ನಿಲ್ಲುವಂತಾಗಲಿ!" ಎಂಬ ಇನ್ನೊಂದು ಅರ್ಥವೂ ಪ್ರತೀತ ವಾಗುತ್ತದೆ. ಕೃತ್ಯೆ ಹುಟ್ಟುವಳೆಂದು ಮಾತ್ರ ಶಿವನ ವರವೆಂದು ತಿಳಿಯಬೇಕು.

*ಶ್ರೀಪರಾಶರ ಉವಾಚ:*

**ಏವಂ ಭವಿಷ್ಯತೀತ್ಯುಕ್ತೇ ದಕ್ಷಿಣಾಗ್ನೇರನಂತರಮ್ ।**
**ಮಹಾಕೃತ್ಯಾ ಸಮುತ್ತಸ್ಥೌ ತಸ್ಯೈವಾಗ್ನೇರ್ವಿನಾಶಿನೀ ॥** 32

**ತತೋ ಜ್ವಾಲಾಕರಾಲಾಸ್ಯಾ ಜ್ವಲತ್ಕೇಶಕಪಾಲಿಕಾ ।**
**ಕೃಷ್ಣ ಕೃಷ್ಣೇತಿ ಕುಪಿತಾ ಕೃತ್ಯಾ ದ್ವಾರವತೀಂ ಯಯೌ ॥** 33

**ತಾಮವೇಕ್ಷ್ಯ ಜನಸ್ತ್ರಾಸಾದ್ವಿಚಲಲ್ಲೋಚನೋ ಮುನೇ ।**
**ಯಯೌ ಶರಣ್ಯಂ ಜಗತಾಂ ಶರಣಂ ಮಧುಸೂದನಮ್ ॥** 34

**ಕಾಶೀರಾಜಸುತೇನೇಯಮಾರಾಧ್ಯ ವೃಷಭಧ್ವಜಮ್ ।**
**ಉತ್ಪಾದಿತಾ ಮಹಾಕೃತ್ಯೇತ್ಯವಗಮ್ಯಾಥ ಚಕ್ರಿಣಾ ॥** 35

**ಜಹಿ ಕೃತ್ಯಾಮಿಮಾಮುಗ್ರಾಂ ವಹ್ನಿಜ್ವಾಲಾಜಟಾಲಕಾಮ್ ।**
**ಚಕ್ರಮುತ್ಸೃಷ್ಟಮಕ್ಷೇಷು ಕ್ರೀಡಾಸಕ್ತೇನ ಲೀಲಯಾ ॥** 36

---

ಆಗಲಿ (ಕೃತ್ಯೆ ಹುಟ್ಟುವಳು)" ಎಂದನು. ಅನಂತರ (ನಡೆದ ಅಭಿಚಾರ ಯಾಗದಲ್ಲಿ) ದಕ್ಷಿಣಾಗ್ನಿಯಿಂದ, ಆ ಅಗ್ನಿಯನ್ನೇ ಆರಿಸಿ ಬಿಡುವಂತೆ ಒಬ್ಬ ಮಹಾಕೃತ್ಯೆ ಆವಿರ್ಭವಿಸಿದಳು (32). ಜ್ವಾಲಾಮಾಲಾ ಕರಾಳಮುಖಿಯೂ ಪ್ರಜ್ವಲಿಸುವ ಮಸ್ತಕಕೇಶಿಯೂ ಆದ ಕೃತ್ಯೆಯು 'ಕೃಷ್ಣ! ಕೃಷ್ಣ!' ಎನ್ನುತ್ತ ದ್ವಾರಕೆಗೆ ಧಾವಿಸಿದಳು. ಮೈತ್ರೇಯ, ಕೃತ್ಯೆಯನ್ನು ಕಂಡ ಪ್ರಜೆಗಳು ಭಯವಿಚಲಿತ ನೇತ್ರರಾಗಿ ಜಗತ್ತುಗಳಿಗೆ ಶರಣ್ಯನಾದ ಮಧುಸೂದನನಿಗೆ ಶರಣಾದರು (33-34). 'ಕಾಶೀರಾಜನ ಮಗನು* ಶಿವನನ್ನು ಆರಾಧಿಸಿ ಉತ್ಪಾದಿಸಿದ ಮಹಾಕೃತ್ಯೆ ಇವಳು' ಎಂಬುದು ಶ್ರೀಕೃಷ್ಣನಿಗೆ ತಿಳಿಯಿತು. ಆ ಸಮಯದಲ್ಲಿ ಆತನು ಅಕ್ಷಕ್ರೀಡೆಯನ್ನಾಡುತ್ತ ವಿನೋದವಾಗಿ ಕುಳಿತಿದ್ದನು. ಒಡನೆಯೇ "ಉಗ್ರಳೂ ವಹ್ನಿಜ್ವಾಲಾ ಜಟಾಲೆಯೂ ಆದ ಈ ಕೃತ್ಯೆಯನ್ನು ಕೊಲ್ಲು" ಎಂದು ಆದೇಶಿಸಿ ಸುದರ್ಶನ ಚಕ್ರವನ್ನು ಬಿಟ್ಟನು (35-36). ಆ ವಿಷ್ಣುಚಕ್ರವು

---

* ಇವನ ಹೆಸರು ಸುದಕ್ಷಿಣನೆಂದು ಭಾಗವತದಲ್ಲಿದೆ (ಭಾಗ. 10-66-27).

**ತದಗ್ನಿಮಾಲಾಜಟಿಲಜ್ವಾಲೋದ್ಗಾರಾತಿಭೀಷಣಾಮ್ ।**
**ಕೃತ್ಯಾಮನುಜಗಾಮಾಶು ವಿಷ್ಣುಚಕ್ರಂ ಸುದರ್ಶನಮ್ ॥ 37**

**ಚಕ್ರಪ್ರತಾಪನಿರ್ದಗ್ಧಾ ಕೃತ್ಯಾ ಮಾಹೇಶ್ವರೀ ತದಾ ।**
**ನನಾಶ ವೇಗಿನೀ ವೇಗಾತ್ತದಪ್ಯನುಜಗಾಮ ತಾಮ್ ॥ 38**

**ಕೃತ್ಯಾ ವಾರಾಣಸೀಮೇವ ಪ್ರವಿವೇಶ ತ್ವರಾನ್ವಿತಾ ।**
**ವಿಷ್ಣುಚಕ್ರಪ್ರತಿಹತಪ್ರಭಾವಾ ಮುನಿಸತ್ತಮ ॥ 39**

**ತತಃ ಕಾಶೀಬಲಂ ಭೂರಿ ಪ್ರಮಥಾನಾಂ ತಥಾ ಬಲಮ್ ।**
**ಸಮಸ್ತಶಸ್ತ್ರಾಸ್ತ್ರಯುತಂ ಚಕ್ರಸ್ಯಾಭಿಮುಖಂ ಯಯೌ ॥ 40**

**ಶಸ್ತ್ರಾಸ್ತ್ರಮೋಕ್ಷಚತುರಂ ದಗ್ಧ್ವಾ ತದ್ಬಲಮೋಜಸಾ ।**
**ಕೃತ್ಯಾಗರ್ಭಾಮಶೇಷಾಂ ತಾಂ ತದಾ ವಾರಾಣಸೀಂ ಪುರೀಮ್ ॥ 41**

**ಸಭೂಭೃದ್‌ಭೃತ್ಯಪೌರಾಂ ತು ಸಾಶ್ವಮಾತಂಗಮಾನವಾಮ್ ।**
**ಅಶೇಷಗೋಷ್ಠಕೋಶಾಂ ತಾಂ ದುರ್ನಿರೀಕ್ಷ್ಯಾಂ ಸುರೈರಪಿ ॥ 42**

---

ಅಗ್ನಿಮಾಲಾ ಜಟಿಲಳೂ ಜ್ವಾಲೋದ್ಗಾರ ಭೀಷಣಳೂ ಆದ ಮಹಾಕೃತ್ಯೆಯನ್ನು ಶೀಘ್ರದಲ್ಲಿ ಬೆನ್ನಟ್ಟಿತು. ಚಕ್ರದ ಪ್ರತಾಪಾಗ್ನಿಯಿಂದ ಬೆಂದ ಮಾಹೇಶ್ವರಿ ಕೃತ್ಯೆಯು ಕಣ್ಣಿಗೆ ಕಾಣದಂತೆ ವೇಗವಾಗಿ ಓಡತೊಡಗಿದಳು. ಸುದರ್ಶನವೂ ವೇಗದಿಂದ ಹಿಂಬಾಲಿಸಿತು (37-38). ವಿಷ್ಣುಚಕ್ರದಿಂದ ತನ್ನ ಪ್ರಭಾವವು ಹತವಾಗಲು, ಆ ಕೃತ್ಯೆಯು ತ್ವರೆಯಿಂದ ಓಡುತ್ತ ಹಿಂದಿರುಗಿ ಕಾಶೀನಗರವನ್ನೇ ಪ್ರವೇಶಿಸಿದಳು. ಆಗ ಕಾಶೀರಾಜನ ಪುತ್ರನ ಸೇನೆಯೂ ಪ್ರಮಥಗಣಗಳ ಸೇನೆಯೂ ಸಮಸ್ತ ಶಸ್ತ್ರಾಸ್ತ್ರ ಸಹಿತವಾಗಿ ಸುದರ್ಶನ ಚಕ್ರವನ್ನೆದುರಿಸಿದವು (39-40). ಶಸ್ತ್ರಾಸ್ತ್ರಗಳನ್ನೂ ಕೌಶಲದಿಂದ ಪ್ರಯೋಗಿಸುತ್ತಿದ್ದ ಆ ಸೇನೆಯನ್ನೂ ಕೃತ್ಯಾಸಹಿತವಾಗಿ ನಿಖಿಲ ಕಾಶೀನಗರವನ್ನೂ ಚಕ್ರವು ತನ್ನ ತೇಜಸ್ಸಿನಿಂದ ದಹಿಸಿತು. ರಾಜ, ಸೇವಕ, ಪೌರರಿಂದಲೂ ಅಶ್ವಮಾತಂಗ ಮಾನವರಿಂದಲೂ ಗೋಷ್ಠಗಳಿಂದಲೂ ಭಂಡಾರಗಳಿಂದಲೂ ತುಂಬಿ, ದೇವತೆಗಳಿಗೂ ದುರ್ನಿರೀಕ್ಷ್ಯವಾಗಿದ್ದ ಆ ನಗರಿಯನ್ನು ಚಕ್ರವು ದಹಿಸಿತು (41-42). ಸಮಸ್ತ ಗೃಹಪ್ರಕಾರ, ಅಂಗಣಗಳಲ್ಲಿ

**ಜ್ವಾಲಾಪರಿಷ್ಕೃತಾಶೇಷಗೃಹಪ್ರಾಕಾರಚತ್ವರಾಮ್ ।**
**ದದಾಹ ತದ್ಧರೇಶ್ಚಕ್ರಂ ಸಕಲಾಮೇವ ತಾಂ ಪುರೀಮ್ ॥ 43**

**ಅಕ್ಷೀಣಾಮರ್ಷಮತ್ಯುಗ್ರಸಾಧ್ಯಸಾಧನಸಸ್ಪೃಹಮ್ ।**
**ತಚ್ಚಕ್ರಂ ಪ್ರಸ್ಫುರದ್ದೀಪ್ತಿ ವಿಷ್ಣೋರಭ್ಯಾಯಯೌ ಕರಮ್ ॥ 44**

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಚತುಸ್ತ್ರಿಂಶೋಽಧ್ಯಾಯಃ

---

ಜ್ವಾಲೆಯನ್ನು ಬೀರಿ ಆ ವಿಷ್ಣುಚಕ್ರವು ನಗರವೆಲ್ಲವನ್ನೂ ಸುಟ್ಟುಹಾಕಿತು. ಕಡೆಗೆ ತನ್ನ ಕ್ರೋಧವು ಇನ್ನೂ ಶಾಂತವಾಗದೇ ಹೋದ್ದರಿಂದ ಇನ್ನೂ ಕಾರ್ಯವನ್ನು ಸಾಧಿಸುವ ಕುತೂಹಲವುಳ್ಳದ್ದಾಗಿ ಸುತ್ತಲೂ ತನ್ನ ತೇಜಸ್ಸನ್ನು ಬೀರುತ್ತ ಆ ಸುದರ್ಶನ ಚಕ್ರವು ಶ್ರೀಕೃಷ್ಣನ ಕೈಗೆ ಬಂದು ಸೇರಿತು (43-44).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಮೂವತ್ತನಾಲ್ಕನೆಯ ಅಧ್ಯಾಯ ಮುಗಿಯಿತು.



## ಪಂಚತ್ರಿಂಶೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಭೂಯ ಏವಾಹಮಿಚ್ಛಾಮಿ ಬಲಭದ್ರಸ್ಯ ಧೀಮತಃ।**
**ಶ್ರೋತುಂ ಪರಾಕ್ರಮಂ ಬ್ರಹ್ಮನ್ ತನ್ಮಮಾಖ್ಯಾತುಮರ್ಹಸಿ॥** 1

**ಯಮುನಾಕರ್ಷಣಾದೀನಿ ಶ್ರುತಾನಿ ಭಗವನ್ಮಯಾ।**
**ತತ್ಕಥ್ಯತಾಂ ಮಹಾಭಾಗ ಯದನ್ಯತ್ಕೃತವಾನ್ ಬಲಃ॥** 2

*ಶ್ರೀಪರಾಶರ ಉವಾಚ:*

**ಮೈತ್ರೇಯ ಶ್ರೂಯತಾಂ ಕರ್ಮ ಯದ್ರಾಮೇಣಾಭವತ್ಕೃತಮ್।**
**ಅನಂತೇನಾಪ್ರಮೇಯೇನ ಶೇಷೇಣ ಧರಣೀಧೃತಾ॥** 3

---

## ಅಧ್ಯಾಯ 35

ದುರ್ಯೋಧನನ ಮಗಳನ್ನು ಸ್ವಯಂವರದಲ್ಲಿ ಸಾಂಬನು ಅಪಹರಿಸುವುದು.
ಅವನ ಬಂಧನ. ಬಲರಾಮನು ಹಲಾಯುಧದಿಂದ ಹಸ್ತಿನಾವತಿಯನ್ನು
ಸೆಳೆಯುವುದು. ಸಾಂಬನ ವಿವಾಹ.

ಮೈತ್ರೇಯರು ಪರಾಶರಮುನಿಗಳನ್ನು ಕುರಿತು, "ಬ್ರಹ್ಮರ್ಷಿಗಳೇ, ಧೀಮಂತನಾದ ಬಲರಾಮನ ಪರಾಕ್ರಮವೆಷ್ಟೆಂಬುದನ್ನು ಕೇಳಲಿಚ್ಛಿಸುತ್ತೇನೆ. ಅದನ್ನು ನನಗೆ ಹೇಳಬೇಕು. ಯಮುನಾನದಿಯನ್ನು ಸೆಳೆದದ್ದು—ಮೊದಲಾದ ಕೆಲವು ವೃತ್ತಾಂತಗಳನ್ನು ಕೇಳಿದ್ದೇನೆ. ಅವಲ್ಲದೆ ಬಲರಾಮನು ಇನ್ನಾವ ಕೃತ್ಯವನ್ನೆಸಗಿದನು?" ಎಂದು ಕೇಳಿದರು (1-2). ಪರಾಶರಮುನಿಗಳು ಇಂತೆಂದರು: ಮೈತ್ರೇಯ, ಅನಂತನೂ ಅಪ್ರಮೇಯನೂ ಧರಣೀಧಾರಿಯೂ ಆದ ಆದಿಶೇಷನ ಅವತಾರವಾದ ಬಲರಾಮನು ಏನು ಮಾಡಿದನೆಂಬುದನ್ನು ಹೇಳುವೆನು ಕೇಳು. ಜಾಂಬವತೀತನಯನೂ ವೀರನೂ ಆದ ಸಾಂಬನು

**ಸುಯೋಧನಸ್ಯ ತನಯಾಂ ಸ್ವಯಂವರಕೃತಕ್ಷಣಾಮ್ ।**
**ಬಲಾದಾದತ್ತವಾನ್ವೀರಸ್ಸಾಂಬೋ ಜಾಂಬವತೀಸುತಃ ॥** 4

**ತತಃ ಕ್ರುದ್ಧಾ ಮಹಾವೀರ್ಯಾಃ ಕರ್ಣದುರ್ಯೋಧನಾದಯಃ ।**
**ಭೀಷ್ಮದ್ರೋಣಾದಯಶ್ಚೈನಂ ಬಬಂಧುರ್ಯುಧಿ ನಿರ್ಜಿತಮ್ ॥** 5

**ತಚ್ಛ್ರುತ್ವಾ ಯಾದವಾಸ್ಸರ್ವೇ ಕ್ರೋಧಂ ದುರ್ಯೋಧನಾದಿಷು ।**
**ಮೈತ್ರೇಯ ಚಕ್ರುಃ ಕೃಷ್ಣಶ್ಚ ತಾನ್ನಿಹಂತುಂ ಮಹೋದ್ಯಮಮ್ ॥** 6

**ತಾನ್ನಿವಾರ್ಯ ಬಲಃ ಪ್ರಾಹ ಮದಲೋಲಕಲಾಕ್ಷರಮ್ ।**
**ಮೋಕ್ಷ್ಯಂತಿ ತೇ ಮದ್ವಚನಾದ್ಯಾಸ್ಯಾಮ್ಯೇಕೋ ಹಿ ಕೌರವಾನ್ ॥** 7

*ಶ್ರೀಪರಾಶರ ಉವಾಚ:*

**ಬಲದೇವಸ್ತತೋ ಗತ್ವಾ ನಗರಂ ನಾಗಸಾಹ್ವಯಮ್ ।**
**ಬಾಹ್ಯೋಪವನಮಧ್ಯೇಽಭೂನ್ನ ವಿವೇಶ ಚ ತತ್ಪುರಮ್ ॥** 8

---

ದುರ್ಯೋಧನನ ಪುತ್ರಿಯ* ಸ್ವಯಂವರದಲ್ಲಿ ಸಮಯವನ್ನು ಕಾದು ಅವಳನ್ನು ಬಲಾತ್ಕಾರವಾಗಿ ಅಪಹರಿಸಿದನು (3-4). ಆಗ ಮಹಾವೀರರಾದ ಕರ್ಣ, ದುರ್ಯೋಧನ, ಭೀಷ್ಮ, ದ್ರೋಣಾದಿಗಳು ಕ್ರುದ್ಧರಾಗಿ ಯುದ್ಧದಲ್ಲಿ ಸಾಂಬನನ್ನು ಪರಾಜಯಗೊಳಿಸಿ ಸೆರೆಹಿಡಿದರು. ಆ ವಾರ್ತೆಯನ್ನು ಕೇಳಿದ ಯಾದವರೂ ಶ್ರೀಕೃಷ್ಣನೂ ಕುಪಿತರಾಗಿ ಕರ್ಣಾದಿಗಳನ್ನು ಕೊಲ್ಲಬೇಕೆಂದು ಮಹತ್ತರವಾದ ಸಮರೋದ್ಯೋಗಕ್ಕೆ ಸಿದ್ಧರಾದರು (5-6). ಬಲಭದ್ರನು ಅವರೆಲ್ಲರನ್ನೂ ತಡೆದು ಮದಿರೆಯ ಮದದಿಂದ ತೊದಲುತ್ತ "ನಾನು ಹೇಳಿದರೆ ಸಾಂಬನ ಬಿಡುಗಡೆ ಮಾಡುತ್ತಾರೆ, ನಾನೊಬ್ಬನೇ ಕೌರವರ ಬಳಿಗೆ ಹೋಗುವೆನು" ಎಂದು ನುಡಿದನು (7). ಅನಂತರ ಬಲದೇವನು ಹಸ್ತಿನಾವತಿಗೆ ಪ್ರಯಾಣಮಾಡಿ ನಗರದ ಹೊರಗಡೆಯ ಉದ್ಯಾನವನದಲ್ಲಿ ಉಳಿದು

---

* ಇವಳ ಹೆಸರು ಲಕ್ಷ್ಮಣೆ ಅಥವಾ ಲಕ್ಷಣೆ ಎಂದು ಭಾಗವತದಲ್ಲಿದೆ (ಭಾಗ 10-61-1).

**ಬಲಮಾಗತಮಾಜ್ಞಾಯ ಭೂಪಾ ದುರ್ಯೋಧನಾದಯಃ।**
**ಗಾಮರ್ಘ್ಯಮುದಕಂ ಚೈವ ರಾಮಾಯ ಪ್ರತ್ಯವೇದಯನ್॥** 9

**ಗೃಹೀತ್ವಾ ವಿಧಿವತ್ಸರ್ವಂ ತತಸ್ತಾನಾಹ ಕೌರವಾನ್।**
**ಆಜ್ಞಾಪಯತ್ಯುಗ್ರಸೇನಸ್ಸಾಂಬಮಾಶು ವಿಮುಂಚತ॥** 10

**ತತಸ್ತದ್ವಚನಂ ಶ್ರುತ್ವಾ ಭೀಷ್ಮದ್ರೋಣಾದಯೋ ನೃಪಾಃ।**
**ಕರ್ಣದುರ್ಯೋಧನಾದ್ಯಾಶ್ಚ ಚುಕ್ಷುಭುರ್ದ್ವಿಜಸತ್ತಮ॥** 11

**ಊಚುಶ್ಚ ಕುಪಿತಾಸ್ಸರ್ವೇ ಬಾಹ್ಲಿಕಾದ್ಯಾಶ್ಚ ಕೌರವಾಃ।**
**ಅರಾಜ್ಯಾರ್ಹಂ ಯದೋರ್ವಂಶಮವೇಕ್ಷ್ಯ ಮುಸಲಾಯುಧಮ್॥** 12

**ಭೋ ಭೋ ಕಿಮೇತದ್ಭವತಾ ಬಲಭದ್ರೇರಿತಂ ವಚಃ।**
**ಆಜ್ಞಾಂ ಕುರುಕುಲೋತ್ಥಾನಾಂ ಯಾದವಃ ಕಃ ಪ್ರದಾಸ್ಯತಿ॥** 13

**ಉಗ್ರಸೇನೋಽಪಿ ಯದ್ಯಾಜ್ಞಾಂ ಕೌರವಾಣಾಂ ಪ್ರದಾಸ್ಯತಿ।**
**ತದಲಂ ಪಾಂಡುರೈಶ್ಛತ್ರೈರ್ನೃಪಯೋಗ್ಯೈರ್ವಿಡಂಬನೈಃ॥** 14

---

ಕೊಂಡನು. ನಗರದೊಳಗೆ ಹೋಗಲಿಲ್ಲ. ಬಲರಾಮನು ಬಂದಿರುವ ಸುದ್ದಿಯನ್ನು ಕೇಳಿ ದುರ್ಯೋಧನಾದಿಗಳು ಗೋವು, ಪೂಜಾಸಾಮಗ್ರಿ, ಜಲಗಳನ್ನು ತಂದು ಬಲರಾಮನಿಗೆ ನಿವೇದಿಸಿದರು (8-9). ಬಲರಾಮನು ಅವೆಲ್ಲವನ್ನೂ ವಿಧಿಪೂರ್ವಕವಾಗಿ ಸ್ವೀಕರಿಸಿ ಕೌರವರಿಗೆ "ಉಗ್ರಸೇನರಾಜನ ಆಜ್ಞೆಯಾಗಿದೆ. ಸಾಂಬನನ್ನು ಕೂಡಲೇ ಬಿಡುಗಡೆಮಾಡಿರಿ" ಎಂದನು. ಮೈತ್ರೇಯ, ಆ ನುಡಿಯನ್ನು ಕೇಳಿ ಭೀಷ್ಮದ್ರೋಣಾದಿಗಳೂ ಕರ್ಣದುರ್ಯೋಧನಾದಿಗಳೂ ಇತರ ರಾಜರೂ ಕ್ಷುಬ್ಧರಾದರು (10-11). 'ಯದುವಂಶವೇ ರಾಜ್ಯಕ್ಕೆ ಅನರ್ಹವಾದದ್ದು' ಎಂದು ತಿಳಿದ ಬಾಹ್ಲಿಕನೇ ಮೊದಲಾಗಿ ಸಮಸ್ತ ಕೌರವರೂ ಕುಪಿತರಾಗಿ ಬಲರಾಮನಿಗೆ ಹೀಗೆಂದರು (12): 'ಏನಯ್ಯಾ, ಬಲರಾಮ, ನೀನು ಹೇಳಿದ ಮಾತು ಏನಿದು? ಕುರುಕುಲೋದ್ಭವರಾದ ಚಕ್ರವರ್ತಿಗಳಿಗೆ ಆಜ್ಞೆಯನ್ನು ಕೊಡತಕ್ಕ ಯಾದವನು ಯಾವನವನು? ಉಗ್ರಸೇನನು ಸಹ ಕುರುವಂಶೋದ್ಭವರಿಗೆ ಆಜ್ಞೆಯನ್ನೀಯುವುದಾದರೆ, ರಾಜಯೋಗ್ಯವಾದ ಈ ಶ್ವೇತಚ್ಛತ್ರಗಳು ಹಾಸ್ಯಾಸ್ಪದಗಳೇ ಸರಿ; ಇವುಗಳೇಕಿರ

**ತದ್ಗಚ್ಛ ಬಲ ಮಾ ವಾ ತ್ವಂ ಸಾಂಬಮನ್ಯಾಯಚೇಷ್ಟಿತಮ್।**
**ವಿಮೋಕ್ಷ್ಯಾಮೋ ನ ಭವತಶ್ಚೋಗ್ರಸೇನಸ್ಯ ಶಾಸನಾತ್॥** 15

**ಪ್ರಣತಿರ್ಯಾ ಕೃತಾಽಸ್ಮಾಕಂ ಮಾನ್ಯಾನಾಂ ಕುಕುರಾಂಧಕೈಃ।**
**ನ ನಾಮ ಸಾ ಕೃತಾ ಕೇಯಮಾಜ್ಞಾ ಸ್ವಾಮಿನಿ ಭೃತ್ಯತಃ॥** 16

**ಗರ್ವಮಾರೋಪಿತಾ ಯೂಯಂ ಸಮಾನಾಸನಭೋಜನೈಃ।**
**ಕೋ ದೋಷೋ ಭವತಾಂ ನೀತಿರ್ಯತ್ ಪ್ರೀತ್ಯಾ ನಾವಲೋಕಿತಾ॥** 17

**ಅಸ್ಮಾಭಿರರ್ಘೋ ಭವತೋ ಯೋಽಯಂ ಬಲ ನಿವೇದಿತಃ।**
**ಪ್ರೇಮ್ಣೈತನ್ನೈತದಸ್ಮಾಕಂ ಕುಲಾದ್ಯುಷ್ಮತ್ ಕುಲೋಚಿತಮ್॥** 18

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾ ಕುರವಃ ಸಾಂಬಂ ಮುಞ್ಚಾಮೋ ನ ಹರೇಸ್ಸುತಮ್।**
**ಕೃತೈಕನಿಶ್ಚಯಾಸ್ತೂರ್ಣಂ ವಿವಿಶುರ್ಗಜಸಾಹ್ವಯಮ್॥** 19

**ಮತ್ತಃ ಕೋಪೇನ ಚಾಘೂರ್ಣಂಸ್ತತೋಽಧಿಕ್ಷೇಪಜನ್ಮನಾ।**
**ಉತ್ಥಾಯ ಪಾರ್ಷ್ಣ್ಯಾ ವಸುಧಾಂ ಜಘಾನ ಸ ಹಲಾಯುಧಃ॥** 20

---

ಬೇಕು? (13-14). ಬಲರಾಮ, ನೀನು ಹೋಗು ಅಥವಾ ಇರು, ಅಪರಾಧಿಯಾದ ಸಾಂಬನನ್ನು ನಾವು ಬಿಡತಕ್ಕವರಲ್ಲ. ನಿನ್ನ ಆಜ್ಞೆಯೂ ನಡೆಯದು, ಉಗ್ರಸೇನನ ಆಜ್ಞೆಯೂ ನಡೆಯದು. ಗೌರವಾರ್ಹರಾದ ನಮಗೆ ಕುಕುರಾಂಧಕ ವಂಶೀಯ ಯಾದವರು ವಿನಯದಿಂದ ನಮಸ್ಕರಿಸುತ್ತಿದ್ದರು. ಅದು ಹೋಗಲಿ, ಭೃತ್ಯರು ಸ್ವಾಮಿಗೆ ಆಜ್ಞೆಮಾಡುವುದೆಂದರೇನು? (15-16). ಸಮಾನವಾದ ಆಸನ ಭೋಜನಗಳನ್ನಿತ್ತು ನಿಮ್ಮೊಡನೆ ವ್ಯವಹರಿಸಿದ್ದರಿಂದ ನಿಮಗೆ ಗರ್ವ ತಲೆಗೇರಿದೆ. ಅಥವಾ ನಿಮ್ಮ ತಪ್ಪಾದರೂ ಏನು? ಪ್ರೀತಿವಶರಾಗಿ ನಾವು ರಾಜನೀತಿಯನ್ನು ಕುರಿತು ವಿಚಾರಮಾಡಲಿಲ್ಲ!" ಎಂದರು (17-18). 'ಒಟ್ಟಿನಲ್ಲಿ, ಕೃಷ್ಣನ ಮಗನಾದ ಸಾಂಬನನ್ನು ನಾವು ಬಿಡುವುದಿಲ್ಲ' ಎಂದು ನಿಶ್ಚಯಿಸಿ ಹೇಳಿ ಅವರೆಲ್ಲರೂ ಹಸ್ತಿನಾವತೀ ನಗರದೊಳಗೆ ಹೊರಟು ಹೋದರು. ಇತ್ತಲಾಗಿ ತನ್ನನ್ನು ತಿರಸ್ಕರಿಸಿದ್ದರಿಂದುಂಟಾದ ರೋಷದಿಂದ ಅಮಲೇರಿದ ಹಲಾಯುಧನು ಹಿಮ್ಮಡಿಯಿಂದ ನೆಲವನ್ನು ಒದ್ದನು! (19-20).

**ತತೋ ವಿದಾರಿತಾ ಪೃಥ್ವೀ ಪಾರ್ಷ್ಣಿಘಾತಾನ್ಮಹಾತ್ಮನಃ।**
**ಆಸ್ಫೋಟಯಾಮಾಸ ತದಾ ದಿಶಶ್ಶಬ್ದೇನ ಪೂರಯನ್॥ 21**

**ಉವಾಚ ಚಾತಿತಾಮ್ರಾಕ್ಷೋ ಭ್ರುಕುಟೀಕುಟಿಲಾನನಃ।**
**ಅಹೋ ಮದಾವಲೇಪೋಽಯಮಸಾರಾಣಾಂ ದುರಾತ್ಮನಾಮ್॥ 22**

**ಕೌರವಾಣಾಂ ಮಹೀಪತ್ವಮಸ್ಮಾಕಂ ಕಿಲ ಕಾಲಜಮ್।**
**ಉಗ್ರಸೇನಸ್ಯ ಯೇ ನಾಜ್ಞಾಂ ಮನ್ಯಂತೇಽದ್ಯಾಪಿ ಲಙ್ಘನಮ್॥ 23**

**ಉಗ್ರಸೇನಃ ಸಮಧ್ಯಾಸ್ತೇ ಸುಧರ್ಮಾಂ ನ ಶಚೀಪತಿಃ।**
**ಧಿಙ್ಮಾನುಷಶತೋಚ್ಛಿಷ್ಟೇ ತುಷ್ಟಿರೇಷಾಂ ನೃಪಾಸನೇ॥ 24**

**ಪಾರಿಜಾತತರೋಃ ಪುಷ್ಪಮಞ್ಜರೀರ್ವನಿತಾಜನಃ।**
**ಬಿಭರ್ತಿ ಯಸ್ಯ ಭೃತ್ಯಾನಾಂ ಸೋಽಪ್ಯೇಷಾಂ ನ ಮಹೀಪತಿಃ॥ 25**

---

ಆ ಮಹಾತ್ಮನ ಹಿಮ್ಮಡಿಯ ಒದೆತಕ್ಕೆ ಭೂಮಿಯು, ಸೀಳಿ ಆಸ್ಫೋಟಿಸಿ ದಿಕ್ಕುದಿಕ್ಕಿಗೆ ಶಬ್ದವು ಮೊಳಗಿತು! ಕೆಂಪಡರಿದ ಕಣ್ಣುಳ್ಳವನಾಗಿ ಹುಬ್ಬುಗಂಟಿಕ್ಕಿ ಇಂತೆಂದನು (21): "ಅಬ್ಬಾ! ನಿಃಸಾರರಾದ ಈ ದುರಾತ್ಮರ ಸೊಕ್ಕು ಎಷ್ಟು! ಕುರುವಂಶೀಯರಿಗೆ ಸ್ವತಃಸಿದ್ಧವಾದದ್ದು ಮಹಾರಾಜಪಟ್ಟ! ನಮಗೆ ಮಾತ್ರ (ಇವರ ಅನುಗ್ರಹದಿಂದ) ಪ್ರಸಂಗವಶವಾಗಿ ಬಂದದ್ದು, ಅಲ್ಲವೆ? ಈಗಲೂ* ಉಗ್ರಸೇನನ ಆಜ್ಞೆಯನ್ನಿವರು ಮನ್ನಿಸುವುದಿಲ್ಲ , ಉಲ್ಲಂಘಿಸುತ್ತಾರೆ (22-23). ಉಗ್ರಸೇನ ಮಹಾರಾಜನು ಸುಧರ್ಮಾಸಭೆಯಲ್ಲಿ ವಿರಾಜಮಾನನಾಗಿದ್ದಾನೆ, ಶಚೀಪತಿಯಾದ ದೇವೇಂದ್ರನಲ್ಲ! ನೂರಾರು ಮಾನುಷರು ಕುಳಿತು ಎಂಜಲಾಗಿರುವ ಸಿಂಹಾಸನದಲ್ಲಿ ಈ ಕೌರವರಿಗೆ ತೃಪ್ತಿಯಾಗಿದೆ. ಇವರಿಗೆ ಧಿಕ್ಕಾರ! (24). ಉಗ್ರಸೇನನ ಭೃತ್ಯರ ಹೆಂಡತಿಯರೂ ಸಹ ಪಾರಿಜಾತ ವೃಕ್ಷದ ಪುಷ್ಪಮಂಜರಿಗಳನ್ನು ಮುಡಿಯುತ್ತಿದ್ದಾರೆ; ಅದು ಇವರ ಮಹಾರಾಜನಿಗೂ ದೊರಕಿಲ್ಲ! ಉಗ್ರಸೇನನು ಸಮಸ್ತ ಭೂಪತಿಗಳಿಗೆ ಅಧಿಪತಿ! ಆದಿರಲಿ; ಈ

---

* ಇಂದ್ರಾದಿಗಳನ್ನು ಸಹ ನಾವು ಗೆದ್ದು ನಮ್ಮ ಯೋಗ್ಯತೆಯೇನೆಂಬುದನ್ನು ಪ್ರಕಟಿಸಿದ್ದರೂ ಸಹ—ಎಂದು ಅಭಿಪ್ರಾಯ.

**ಸಮಸ್ತಭೂಭೃತಾಂ ನಾಥ ಉಗ್ರಸೇನಸ್ಸ ತಿಷ್ಠತು।**
**ಅದ್ಯ ನಿಷ್ಕೌರವಾಮುರ್ವೀಂ ಕೃತ್ವಾ ಯಾಸ್ಯಾನಿ ತತ್ಪುರೀಮ್॥ 26**

**ಕರ್ಣಂ ದುರ್ಯೋಧನಂ ದ್ರೋಣಮದ್ಯ ಭೀಷ್ಮಂ ಸಬಾಹ್ಲಿಕಮ್।**
**ದುಶ್ಯಾಸನಾದೀನ್ ಭೂರಿಂ ಚ ಭೂರಿಶ್ರವಸಮೇವ ಚ॥ 27**

**ಸೋಮದತ್ತಂ ಶಲಂ ಚೈವ ಭೀಮಾರ್ಜುನಯುಧಿಷ್ಠಿರಾನ್।**
**ಯಮೌ ಚ ಕೌರವಾಂಶ್ಚಾನ್ಯಾನ್ ಹತ್ವಾ ಸಾಶ್ವರಥದ್ವಿಪಾನ್॥ 28**

**ವೀರಮಾದಾಯ ತಂ ಸಾಂಬಂ ಸಪತ್ನೀಕಂ ತತಃ ಪುರೀಮ್।**
**ದ್ವಾರಕಾಮುಗ್ರಸೇನಾದೀನ್ ಗತ್ವಾ ದ್ರಕ್ಷ್ಯಾಮಿ ಬಾಂಧವಾನ್॥ 29**

**ಅಥವಾ ಕೌರವಾವಾಸಂ ಸಮಸ್ತೈಃ ಕುರುಭಿಸ್ಸಹ।**
**ಭಾಗೀರಥ್ಯಾಂ ಕ್ಷಿಪಾಮ್ಯಾಶು ನಗರಂ ನಾಗಸಾಹ್ವಯಮ್॥ 30**

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾ ಮದರಕ್ತಾಕ್ಷಃ ಕರ್ಷಣಾಧೋಮುಖಂ ಹಲಮ್।**
**ಪ್ರಾಕಾರವಪ್ರೇ ವಿನ್ಯಸ್ಯ ಚಕರ್ಷ ಮುಸಲಾಯುಧಃ॥ 31**

---

ದಿನ ಪೃಥ್ವಿಯಲ್ಲಿ ಕುರುವಂಶದವರಿಲ್ಲದಂತೆ ತೊಡೆದುಹಾಕಿ ದ್ವಾರಕೆಗೆ ತೆರಳುವೆನು! (25-26). ಕರ್ಣ, ದುರ್ಯೋಧನ, ದ್ರೋಣ, ಭೀಷ್ಮ, ಬಾಹ್ಲಿಕ, ದುಃಶಾಸನ—ಮೊದಲಾದವರನ್ನೂ ಭೂರಿ, ಭೂರಿಶ್ರವಸರನ್ನೂ ಕೊಂದು ಹಾಕುವೆನು! ಸೋಮದತ್ತ, ಶಲ, ಭೀಮಾರ್ಜುನ, ಯುಧಿಷ್ಠಿರರು, ನಕುಲ ಸಹದೇವರನ್ನೂ ಎಲ್ಲ ಕುರುವಂಶೀಯರನ್ನೂ ಅವರ ಗಜಾಶ್ವರಥಸಹಿತವಾಗಿ ವಿಧ್ವಂಸಗೊಳಿಸುವೆನು (27-28). ವೀರನಾದ ಸಾಂಬಕುಮಾರನನ್ನು ಅವನ ಪತ್ನೀ ಸಹಿತವಾಗಿ ಕರೆದುಕೊಂಡೇ ದ್ವಾರಕಾನಗರಕ್ಕೆ ಹೋಗಿ ಉಗ್ರಸೇನಾದಿ ಬಾಂಧವರನ್ನು ಕಾಣುವೆನು! ಅಥವಾ ಕೌರವರು ನೆಲೆಸಿರುವ ಈ ಹಸ್ತಿನಾವತೀ ನಗರವನ್ನೇ ಈ ಕೌರವ ಸಮೇತವಾಗಿ ಗಂಗಾನದಿಯಲ್ಲೆಳೆದು ತಳ್ಳಿಬಿಡುವೆನು!" ಎಂದುಕೊಂಡನು (29-30). ಒಡನೆಯೇ ಮದದಿಂದ ರಕ್ತಾಕ್ಷನಾದ ಬಲಭದ್ರನು ಹಲಾಯುಧವನ್ನು ಕೆಳಮುಖವಾಗಿಸಿ ಅದರ ತುದಿಯನ್ನು ನಗರದ ಕೋಟೆಯ ಬುಡದಲ್ಲಿ ನೆಟ್ಟು ಬಲವಾಗಿ ಎಳೆದನು! (31). ಇಡೀ ನಗರವೇ ಅಲ್ಲಾಡಿತು.

**ಆಘೂರ್ಣಿತಂ ತತ್ಸಹಸಾ ತತೋ ವೈ ಹಾಸ್ತಿನಂ ಪುರಮ್।**
**ದೃಷ್ಟ್ವಾ ಸಂಕ್ಷುಬ್ಧಹೃದಯಾಶ್ಚುಕ್ಷುಭುಃ ಸರ್ವಕೌರವಾಃ॥** 32

**ರಾಮ ರಾಮ ಮಹಾಬಾಹೋ ಕ್ಷಮ್ಯತಾಂ ಕ್ಷಮ್ಯತಾಂ ತ್ವಯಾ।**
**ಉಪಸಂಹ್ರಿಯತಾಂ ಕೋಪಃ ಪ್ರಸೀದ ಮುಸಲಾಯುಧ॥** 33

**ಏಷ ಸಾಂಬಃಸಪತ್ನೀಕಸ್ತವ ನಿರ್ಯಾತಿತೋ ಬಲ।**
**ಅವಿಜ್ಞಾತಪ್ರಭಾವಾಣಾಂ ಕ್ಷಮ್ಯತಾಮಪರಾಧಿನಾಮ್॥** 34

*ಶ್ರೀಪರಾಶರ ಉವಾಚ:*

**ತತೋ ನಿರ್ಯಾತಯಾಮಾಸುಸ್ಸಾಂಬಂ ಪತ್ನೀಸಮನ್ವಿತಮ್।**
**ನಿಷ್ಕ್ರಮ್ಯ ಸ್ವಪುರಾತ್ತೂರ್ಣಂ ಕೌರವಾ ಮುನಿಪುಂಗವ॥** 35

**ಭೀಷ್ಮದ್ರೋಣಕೃಪಾದೀನಾಂ ಪ್ರಣಮ್ಯ ವದತಾಂ ಪ್ರಿಯಮ್।**
**ಕ್ಷಾಂತಮೇವ ಮಯೇತ್ಯಾಹ ಬಲೋ ಬಲವತಾಂ ವರಃ॥** 36

---

ಕ್ಷುಬ್ಧರಾದ ಕೌರವರೆಲ್ಲರೂ ಭಯದಿಂದ ತಳಮಳಗೊಂಡರು. (ಅವರು ಬಲರಾಮನ ಬಳಿಗೆ ಓಡಿಬಂದು) 'ರಾಮ, ರಾಮ, ಮಹಾಬಾಹು, ಕ್ಷಮಿಸಪ್ಪಾ, ಕ್ಷಮಿಸು! ಕೋಪವನ್ನು ಬಿಡು, ಪ್ರಸನ್ನನಾಗು (32-33). ಇದೋ ಪತ್ನೀಸಹಿತನಾದ ಸಾಂಬನನ್ನು ಒಪ್ಪಿಸುತ್ತಿದ್ದೇವೆ. ನಿನ್ನ ಮಹಿಮೆಯನ್ನರಿಯದೆ ಅಪರಾಧ ಮಾಡಿದೆವು, ನಮ್ಮನ್ನು ಮನ್ನಿಸು" ಎಂದು* ಬೇಡಿಕೊಂಡರು. ಹೀಗೆ ಹೇಳುತ್ತ ನಗರದಿಂದ ಹೊರಬಂದ ಕೌರವರು ಸಾಂಬನನ್ನೂ ಅವನ ಪತ್ನಿಯನ್ನೂ ಬಲಭದ್ರನಿಗೆ ಒಪ್ಪಿಸಿದರು (34-35). ಈ ಪ್ರಕಾರ ಕೈ ಮುಗಿದು ಪ್ರಿಯವಚನಗಳನ್ನಾಡುತ್ತಿದ್ದ ಭೀಷ್ಮದ್ರೋಣ ಕೃಪಾದಿಗಳೆದುರಿಗೆ ಬಲಿಷ್ಠನಾದ ಬಲಭದ್ರನು "ಒಳ್ಳೆಯದು; ಕ್ಷಮಿಸಿದ್ದೇನೆ!" ಎಂದನು. ಮೈತ್ರೇಯ, ಈಗಲೂ

---

* 33, 34 ನೆಯ ಶ್ಲೋಕಗಳು ಅಪೂರ್ಣವಾಗಿವೆ. ಒಂದೆರಡು ಸಾಲುಗಳು ಲುಪ್ತವಾಗಿರಬೇಕು.

**ಆದ್ಯಾಪ್ಯಾಘೂರ್ಣಿತಾಕಾರಂ ಲಕ್ಷ್ಯತೇ ತತ್ಪುರಂ ದ್ವಿಜ।**
**ಏಷ ಪ್ರಭಾವೋ ರಾಮಸ್ಯ ಬಲಶೌರ್ಯೋಪಲಕ್ಷಣಃ॥** 37

**ತತಸ್ತು ಕೌರವಾಸ್ಸಾಂಬಂ ಸಂಪೂಜ್ಯ ಹಲಿನಾ ಸಹ।**
**ಪ್ರೇಷಯಾಮಾಸುರುದ್ವಾಹಧನಭಾರ್ಯಾಸಮನ್ವಿತಮ್॥** 38

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಪಂಚತ್ರಿಂಶೋಽಧ್ಯಾಯಃ

---

ಸಹ ಹಸ್ತಿನಾಪುರವು ಗಂಗಾನದಿಯ ಕಡೆಗೆ ಸರಿದು ಓರೆಯಾಗಿ ನಿಂತಿರುವುದನ್ನು ಕಾಣಬಹುದು. ಬಲರಾಮನ ಬಲ ಶೌರ್ಯಗಳಿಂದ ಕೂಡಿದ ಪ್ರಭಾವ ಇಂತಹುದು (36-37). ಅನಂತರ ಕೌರವರು ಸಾಂಬನನ್ನು ಆದರಿಸಿ ವಿಪುಲವಾದ ಬಳುವಳಿಯನ್ನು ಕೊಟ್ಟು ಪತ್ನೀಸಹಿತನನ್ನಾಗಿ ಬಲರಾಮನೊಡನೆ ಕಳಿಸಿಕೊಟ್ಟರು (38).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಮೂವತ್ತೈದನೆಯ ಅಧ್ಯಾಯ ಮುಗಿಯಿತು.



## ಷಟ್ತ್ರಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಮೈತ್ರೇಯೈತದ್ಬಲಂ ತಸ್ಯ ಬಲಸ್ಯ ಬಲಶಾಲಿನಃ।**
**ಕೃತಂ ಯದನ್ಯತ್ತೇನಾಭೂತ್ತದಪಿ ಶ್ರೂಯತಾಂ ತ್ವಯಾ॥** 1

**ನರಕಸ್ಯಾಸುರೇಂದ್ರಸ್ಯ ದೇವಪಕ್ಷವಿರೋಧಿನಃ।**
**ಸಖಾಽಭವನ್ಮಹಾವೀರ್ಯೋ ದ್ವಿವಿದೋ ವಾನರರ್ಷಭಃ॥** 2

**ವೈರಾನುಬಂಧಂ ಬಲವಾನ್ ಸ ಚಕಾರ ಸುರಾನ್ ಪ್ರತಿ।**
**ನರಕಂ ಹತವಾನ್ ಕೃಷ್ಣೋ ದೇವರಾಜೇನ ಚೋದಿತಃ॥** 3

**ಕರಿಷ್ಯೇ ಸರ್ವದೇವಾನಾಂ ತಸ್ಮಾದೇತತ್ಪ್ರತಿಕ್ರಿಯಾಮ್।**
**ಯಜ್ಞವಿಧ್ವಂಸನಂ ಕುರ್ವನ್ ಮರ್ತ್ಯಲೋಕಕ್ಷಯಂ ತಥಾ॥** 4

---

### ಅಧ್ಯಾಯ 36

ಬಲರಾಮನಿಂದ ದ್ವಿವಿದನ ವಧೆ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಬಲಶಾಲಿಯಾದ ಬಲಭದ್ರನ ಬಲ ಈ ಬಗೆಯದಾಗಿತ್ತು. ಅವನು ಮಾಡಿದ ಇನ್ನೊಂದು ಕೃತ್ಯವನ್ನು ಹೇಳುವೆನು ಕೇಳು. ಮಹಾವೀರನೂ ವಾನರಶ್ರೇಷ್ಠನೂ ಆದ ದ್ವಿವಿದನೆಂಬವನು* ದೇವಪಕ್ಷವಿರೋಧಿಯಾದ ನರಕಾಸುರನ ಮಿತ್ರನಾಗಿದ್ದನು (1-2). ದೇವೇಂದ್ರನಿಂದ ಪ್ರೇರಿತನಾಗಿ ಶ್ರೀಕೃಷ್ಣನು ನರಕಾಸುರನನ್ನು ಕೊಂದನೆಂಬ ಕಾರಣದಿಂದ ಆತನಿಗೆ ದೇವತೆಗಳ ವಿಷಯದಲ್ಲಿ ದ್ವೇಷ ಉಂಟಾಗಿತ್ತು. ಆದ್ದರಿಂದ ಯಜ್ಞಗಳನ್ನು ವಿಧ್ವಂಸಗೊಳಿಸಿ ಮಾನವರನ್ನು ಕೊಂದುಹಾಕಿ ಸಮಸ್ತ ದೇವತೆಗಳಿಗೂ ಪ್ರತೀಕಾರಮಾಡಬೇಕೆಂದು ಬಗೆದನು. ಅನಂತರ ಅಜ್ಞಾನ

---

* ಈತನು ರಾಮಾಯಣದಲ್ಲಿ ಬರುವ ಮೈಂದದ್ವಿದವಿದರಲ್ಲೊಬ್ಬನೆಂದು ಭಾಗವತದಲ್ಲಿದೆ (ಭಾಗ 10-67-2).

7

ತತೋ ವಿಧ್ವಂಸಯಾಮಾಸ ಯಜ್ಞಾನಜ್ಞಾನಮೋಹಿತಃ।
ಬಿಭೇದ ಸಾಧುಮರ್ಯಾದಾಂ ಕ್ಷಯಂ ಚಕ್ರೇ ಚ ದೇಹಿನಾಮ್॥ 5

ದದಾಹ ಸವನಾನ್ ದೇಶಾನ್ ಪುರಗ್ರಾಮಾಂತರಾಣಿ ಚ।
ಕ್ವಚಿಚ್ಚ ಪರ್ವತಾಕ್ಷೇಪೈರ್ಗ್ರಾಮಾದೀನ್ ಸಮಚೂರ್ಣಯತ್॥ 6

ಶೈಲಾನುತ್ಪಾಟ್ಯ ತೋಯೇಷು ಮುಮೋಚಾಂಬುನಿಧೌ ತಥಾ।
ಪುನಶ್ಚಾರ್ಣವಮಧ್ಯಸ್ಥಃ ಕ್ಷೋಭಯಾಮಾಸ ಸಾಗರಮ್॥ 7

ತೇನ ವಿಕ್ಷೋಭಿತಶ್ಚಾಬ್ಧಿರುದ್ವೇಲೋ ದ್ವಿಜ ಜಾಯತೇ।
ಪ್ಲಾವಯಂಸ್ತೀರಜಾನ್ ಗ್ರಾಮಾನ್ ಪುರಾದೀನತಿವೇಗವಾನ್॥ 8

ಕಾಮರೂಪಿ ಮಹಾರೂಪಂ ಕೃತ್ವಾ ಸಸ್ಯಾನ್ಯಶೇಷತಃ।
ಲುಠನ್ ಭ್ರಮಣಸಮ್ಮರ್ದೈಸ್ಸಂಚೂರ್ಣಯತಿ ವಾನರಃ॥ 9

ತೇನ ವಿಪ್ರಕೃತಂ ಸರ್ವಂ ಜಗದೇತದ್‌ದುರಾತ್ಮನಾ।
ನಿಸ್ಸ್ವಾಧ್ಯಾಯವಷಟ್‌ಕಾರಂ ಮೈತ್ರೇಯಾಸೀತ್ ಸುದುಃಖಿತಮ್॥ 10

---

ಮೋಹಿತನಾದ ಆ ದ್ವಿವಿದನು ಯಜ್ಞಗಳನ್ನು ವಿಧ್ವಂಸಗೊಳಿಸುತ್ತ ಸಾಧು ಮರ್ಯಾದೆಯನ್ನುಲ್ಲಂಘಿಸಿ ಮಾನವರನ್ನು ಕೊಲ್ಲುವ ಉದ್ಯೋಗದಲ್ಲಿ ತೊಡಗಿದ್ದನು (3-5). ವನಪ್ರದೇಶಗಳಿಗೂ ಪುರಗ್ರಾಮಗಳಿಗೂ ಬೆಂಕಿಹಚ್ಚಿ ಸುಡುತ್ತಿದ್ದನು. ಕೆಲವು ವೇಳೆ ಬೆಟ್ಟಗಳನ್ನೆಸೆದು ಗ್ರಾಮಾದಿಗಳನ್ನು ಪುಡಿಪುಡಿ ಮಾಡುತ್ತಿದ್ದನು. ಶೈಲಗಳನ್ನು ಕಿತ್ತು ಸಮುದ್ರದ ನೀರಿಗೆ ತಳ್ಳಿ ತಾನು ಸಮುದ್ರ ದಲ್ಲಿಳಿದು ನೀರನ್ನು ಉಕ್ಕಿಸುತ್ತಿದ್ದನು. ಆದ್ದರಿಂದ ಸಮುದ್ರದ ಅಲೆಗಳು ಮೇರೆದಪ್ಪಿ ವೇಗದಿಂದ ನುಗ್ಗಿ ತೀರದಲ್ಲಿದ್ದ ಗ್ರಾಮನಗರಿಗಳನ್ನು ತೇಲಿಸಿಬಿಡು ತ್ತಿದ್ದವು (6-8). ಅಲ್ಲದೆ ಕಾಮರೂಪಿಯಾದ ಆ ವಾನರನು ಬೃಹದಾಕಾರವನ್ನು ತಳೆದು ಹೊಲಗದ್ದೆಗಳಲ್ಲಿ ಉರುಳಾಡಿ ಸಸ್ಯಸಂಪತ್ತನ್ನು ನಾಶಪಡಿಸುತ್ತಿದ್ದನು. ಮೈತ್ರೇಯ, ದುರಾತ್ಮನಾದ ಆ ಕಪಿಯ ಹಾವಳಿಯಿಂದ ಲೋಕದಲ್ಲಿ ವೇದಾಧ್ಯಯನ ವಷಟ್‌ಕಾರಗಳು ನಿಂತುಹೋದವು. ಪ್ರಜೆಗಳು ದುಃಖಿತ ರಾದರು (9-10). ಹೀಗಿರುವಾಗ ಒಂದು ಸಲ ಬಲಭದ್ರನು ರೈವತಪರ್ವತದ

**ಏಕದಾ ರೈವತೋದ್ಯಾನೇ ಪಪೌ ಪಾನಂ ಹಲಾಯುಧಃ।**
**ರೇವತೀ ಚ ಮಹಾಭಾಗಾ ತಥೈವಾನ್ಯಾ ವರಸ್ತ್ರಿಯಃ॥ 11**

**ಉದ್ಗೀಯಮಾನೋ ವಿಲಸಲ್ಲಲನಾಮೌಲಿಮಧ್ಯಗಃ।**
**ರೇಮೇ ಯದುಕುಲಶ್ರೇಷ್ಠಃ ಕುಬೇರ ಇವ ಮಂದರೇ॥ 12**

**ತತಸ್ಸ ವಾನರೋಽಭ್ಯೇತ್ಯ ಗೃಹೀತ್ವಾ ಸೀರಿಣೋ ಹಲಮ್।**
**ಮುಸಲಂ ಚ ಚಕಾರಾಸ್ಯ ಸಮ್ಮುಖಂ ಚ ವಿಡಂಬನಮ್॥ 13**

**ತಥೈವ ಯೋಷಿತಾಂ ತಾಸಾಂ ಜಹಾಸಾಭಿಮುಖಂ ಕಪಿಃ।**
**ಪಾನಪೂರ್ಣಾಂಶ್ಚ ಕರಕಾಂಚಿಕ್ಷೇಪಾಹತ್ಯ ವೈ ತದಾ॥ 14**

**ತತಃ ಕೋಪಪರೀತಾತ್ಮಾ ಭರ್ತ್ಸಯಾಮಾಸ ತಂ ಹಲೀ।**
**ತಥಾಽಪಿ ತಮವಜ್ಞಾಯ ಚಕ್ರೇ ಕಿಲಕಿಲಧ್ವನಿಮ್॥ 15**

**ತತಃ ಸ್ಮಯಿತ್ವಾ ಸ ಬಲೋ ಜಗ್ರಾಹ ಮುಸಲಂ ರುಷಾ।**
**ಸೋಽಪಿ ಶೈಲಶಿಲಾಂ ಭೀಮಾಂ ಜಗ್ರಾಹ ಪ್ಲವಗೋತ್ತಮಃ॥ 16**

---

ಉದ್ಯಾನವನದಲ್ಲಿ ಮದಿರೆಯನ್ನು ಕುಡಿದು ವಿಹರಿಸುತ್ತಿದ್ದನು. ಜೊತೆಯಲ್ಲಿ ಭಾಗ್ಯಶಾಲಿಯಾದ ರೇವತಿಯೂ ಮತ್ತಿತರ ಸುಂದರ ಸ್ತ್ರೀಯರೂ ಇದ್ದರು (11). ವಿಲಾಸಯುಕ್ತರಾದ ರಮಣಿಯರ ನಡುವೆ ಆ ಯದುಕುಲ ಶ್ರೇಷ್ಠನು ಹಾಡುಗಳಿಂದ ಹೊಗಳಲ್ಪಡುತ್ತ, ಮಂದರ ಗಿರಿಯಲ್ಲಿ ಕುಬೇರನಂತೆ ವಿಹರಿಸುತ್ತಿದ್ದನು. ಆ ಸಮಯದಲ್ಲಿ ದ್ವಿವಿದ ವಾನರನು ಬಂದು ಬಲಭದ್ರನ ಹಲಾಯುಧವನ್ನೂ ಮುಸಲಾಯುಧವನ್ನೂ ಅಪಹರಿಸಿ ಅವನೆದುರಿಗೆ ಮಂಗ ಚೇಷ್ಟೆಯನ್ನೆಸಗಿದನು (12-13). ಅಲ್ಲದೆ ಆ ವಾನರನು ಸ್ತ್ರೀಯರೆದುರಿಗೂ ಹಲ್ಲುಕಿರಿದು ನಕ್ಕು, ಪಾನದ್ರವ್ಯಗಳನ್ನು ತುಂಬಿದ ಪಾತ್ರಗಳನ್ನೊಡೆದು ಅತ್ತಿತ್ತ ಎಸೆದನು. ಆಗ ಬಲಭದ್ರನು ಸಿಟ್ಟಿನಿಂದ ದ್ವಿವಿದನನ್ನು ಗದರಿಸಿದರೂ ಅವನನ್ನು ಲೆಕ್ಕಿಸದೆ ಕಿಸ್ಸನೆ ಅಣಕಿಸಿದನು (14-15). ಬಲರಾಮನು ನಕ್ಕು ಅನಂತರ ಸಿಟ್ಟಿನಿಂದ ತನ್ನ ಮುಸಲಾಯುಧವನ್ನು ಕಿತ್ತುಕೊಳ್ಳಲಾಗಿ, ಆ ವಾನರವೀರನು ಭೀಕರವಾದ ಬಂಡೆಯೊಂದನ್ನೆತ್ತಿ ಬಲರಾಮನ ಮೇಲೆ ಬೀಸಿದನು.

ಚಿಕ್ಷೇಪ ಸ ಚ ತಾಂ ಕ್ಷಿಪ್ತಾಂ ಮುಸಲೇನ ಸಹಸ್ರಧಾ।
ಬಿಭೇದ ಯಾದವಶ್ರೇಷ್ಠಸ್ಸಾ ಪಪಾತ ಮಹೀತಲೇ॥ 17

ಅಥ ತನ್ಮುಸಲಂ ಚಾಸೌ ಸಮುಲ್ಲಂಘ್ಯ ಪ್ಲವಂಗಮಃ।
ವೇಗೇನಾಗತ್ಯ ರೋಷೇಣ ಕರೇಣೋರಸ್ಯತಾಡಯತ್॥ 18

ತತೋ ಬಲೇನ ಕೋಪೇನ ಮುಷ್ಟಿನಾ ಮೂರ್ಧ್ನಿ ತಾಡಿತಃ।
ಪಪಾತ ರುಧಿರೋದ್ಗಾರೀ ದ್ವಿವಿದಃ ಕ್ಷೀಣಜೀವಿತಃ॥ 19

ಪತತಾ ತಚ್ಛರೀರೇಣ ಗಿರೇಶ್ಶೃಂಗಮಶೀರ್ಯತ।
ಮೈತ್ರೇಯ ಶತಧಾ ವಜ್ರಿವಜ್ರೇಣೇವ ವಿದಾರಿತಮ್॥ 20

ಪುಷ್ಪವೃಷ್ಟಿಂ ತತೋ ದೇವಾ ರಾಮಸ್ಯೋಪರಿ ಚಿಕ್ಷಿಪುಃ।
ಪ್ರಶಶಂಸುಸ್ತತೋಽಭ್ಯೇತ್ಯ ಸಾಧ್ವೇತತ್ತೇ ಮಹತ್ಕೃತಮ್॥ 21

ಅನೇನ ದುಷ್ಟಕಪಿನಾ ದೈತ್ಯಪಕ್ಷೋಪಕಾರಿಣಾ।
ಜಗನ್ನಿರಾಕೃತಂ ವೀರ ದಿಷ್ಟ್ಯಾ ಸ ಕ್ಷಯಮಾಗತಃ॥ 22

---

ಬಲರಾಮನು ಮುಸಲದಿಂದ ಬಡಿದು ಬಂಡೆಯನ್ನೊಡೆದು ಸಾವಿರ ಚೂರಾಗಿ ಬೀಳಿಸಿದನು (16-17). ಅನಂತರ ಮುಸಲದ ಹೊಡೆತವನ್ನು ತಪ್ಪಿಸಿಕೊಂಡು ಆ ವಾನರನು ರೋಷಾವಿಷ್ಟನಾಗಿ ಹಾರಿಬಂದು ಬಲಭದ್ರನ ಎದೆಗೆ ಗುದ್ದಿದನು. ಆಗ ಬಲಭದ್ರನು ರುಷ್ಟನಾಗಿ ಮುಷ್ಟಿಯಿಂದ ತಲೆಯಮೇಲೆ ಕುಟ್ಟಲಾಗಿ, ದ್ವಿವಿದನು ನೆತ್ತರನ್ನು ಕಕ್ಕುತ್ತ ಸತ್ತುಬಿದ್ದನು (18-19). ಮೈತ್ರೇಯ, ದ್ವಿವಿದನ ಶರೀರವು ಉರುಳಿದಾಗ, ಇಂದ್ರನ ವಜ್ರಾಯುಧವು ಒಡೆಯಿತೋ ಎಂಬಂತೆ, ಗಿರಿಶೃಂಗವು ಒಡೆದು ಚೂರುಚೂರಾಯಿತು! ದೇವತೆಗಳು ಬಲರಾಮನ ಮೇಲೆ ಹೂಮಳೆಗರೆದರಲ್ಲದೆ ಹತ್ತಿರ ಬಂದು 'ಸಾಧು, ಬಹುದೊಡ್ಡ ಕಾರ್ಯವನ್ನೆಸಗಿದೆ' ಎಂದು ಬಲರಾಮನನ್ನು ಹೊಗಳಿದರು (20-21): "ಹೇ ವೀರ, ದೈತ್ಯರಿಗೆ ಉಪಕಾರ ಮಾಡುತ್ತಿದ್ದ ಈ ದುಷ್ಟವಾನರನು ಲೋಕವನ್ನೇ ಧಿಕ್ಕರಿಸಿದ್ದನು. ಭಾಗ್ಯವಶದಿಂದ ಇವನೀಗ ಅಸುನೀಗಿದನು" ಎಂದು ಹೇಳಿ

**ಇತ್ಯುಕ್ತ್ವಾ ದಿವಮಾಜಗ್ಮುರ್ದೇವಾ ಹೃಷ್ಟಾಸ್ಸಗುಹ್ಯಕಾಃ॥** **23**

*ಶ್ರೀಪರಾಶರ ಉವಾಚ:*

**ಏವಂ ವಿಧಾನ್ಯನೇಕಾನಿ ಬಲದೇವಸ್ಯ ಧೀಮತಃ।**
**ಕರ್ಮಾಣ್ಯಪರಿಮೇಯಾನಿ ಶೇಷಸ್ಯ ಧರಣೀಭೃತಃ॥** **24**

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಷಟ್ತ್ರಿಂಶೋಽಧ್ಯಾಯಃ

---

ದೇವತೆಗಳು ಹರ್ಷದಿಂದ ಗುಹ್ಯಕರೊಡನೆ ಸ್ವರ್ಗಕ್ಕೆ ತೆರಳಿದರು (22-23). ಮೈತ್ರೇಯ, ಧೀಮಂತನೂ ಧರಣೀಧರನೂ ಆದ ಆದಿಶೇಷನ ಅವತಾರಿಯಾದ ಬಲರಾಮನು ಇಂತಹ ಎಷ್ಟೋ ಕೃತ್ಯಗಳನ್ನೆಸಗಿದನು. ಅವು ಅಳತೆಗೆ ನಿಲುಕುವುದಿಲ್ಲ (24).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಮೂವತ್ತಾರನೆಯ ಅಧ್ಯಾಯ ಮುಗಿಯಿತು.



## ಸಪ್ತತ್ರಿಂಶೋಽಧ್ಯಾಯಃ

ಏವಂ ದೈತ್ಯವಧಂ ಕೃಷ್ಣೋ ಬಲದೇವಸಹಾಯವಾನ್।
ಚಕ್ರೇ ದುಷ್ಟಕ್ಷಿತೀಶಾನಾಂ ತಥೈವ ಜಗತಃ ಕೃತೇ॥ 1

ಕ್ಷಿತೇಶ್ಚ ಭಾರಂ ಭಗವಾನ್ ಫಾಲ್ಗುನೇನ ಸಮನ್ವಿತಃ।
ಅವತಾರಯಾಮಾಸ ವಿಭುಸ್ಸಮಸ್ತಾಕ್ಷೌಹಿಣೀವಧಾತ್॥ 2

ಕೃತ್ವಾ ಭಾರಾವತರಣಂ ಭುವೋ ಹತ್ವಾಽಖಿಲಾನ್ ನೃಪಾನ್।
ಶಾಪವ್ಯಾಜೇನ ವಿಪ್ರಾಣಾಮುಪಸಂಹೃತವಾನ್ ಕುಲಮ್॥ 3

ಉತ್ಸೃಜ್ಯ ದ್ವಾರಕಾಂ ಕೃಷ್ಣಸ್ತ್ಯಕ್ತ್ವಾ ಮಾನುಷ್ಯಮಾತ್ಮನಃ।
ಸಾಂಶೋ ವಿಷ್ಣುಮಯಂ ಸ್ಥಾನಂ ಪ್ರವಿವೇಶ ಮುನೇ ನಿಜಮ್॥ 4

---

## ಅಧ್ಯಾಯ 37

ಋಷಿಗಳಿಂದ ಯಾದವರಿಗೆ ಶಾಪ. ಪರಸ್ಪರ ಹೊಡೆದಾಡಿ ಯಾದವರ ನಾಶ.
ಭಗವಂತನು ತನ್ನ ನಿಜಧಾಮಕ್ಕೆ ತೆರಳುವುದು.

ಪರಾಶರಮುನಿಗಳು ಹೇಳಿದರು: "ಮೈತ್ರೇಯ, ಈ ಪ್ರಕಾರ ಶ್ರೀಕೃಷ್ಣನು ಬಲರಾಮಸಹಿತನಾಗಿ ಜಗತ್ತಿನ ಹಿತಕ್ಕೋಸ್ಕರ ದೈತ್ಯರನ್ನೂ ದುಷ್ಟ ಭೂಪಾಲರನ್ನೂ ಸಂಹರಿಸಿದನು. ಅಲ್ಲದೆ ಭಗವಂತನು ಅರ್ಜುನನ ಜೊತೆಗೂಡಿ ಸಮಸ್ತ (ಹದಿನೆಂಟು) ಅಕ್ಷೌಹಿಣೀ ಸೇನೆಯ ವಧೆಯಿಂದ ಭೂಭಾರವನ್ನಿಳುಹಿದನು (1-2). ಹೀಗೆ ಭೂಭಾರವನ್ನಿಳಿಸಿ, ಎಲ್ಲ ದುಷ್ಟರಾಜರನ್ನೂ ವಧಿಸಿ, ಬ್ರಾಹ್ಮಣ ಶಾಪವ್ಯಾಜದಿಂದ ಯದುಕುಲವನ್ನೂ ಮುಗಿಸಿಬಿಟ್ಟನು! ಮೈತ್ರೇಯ, ಅನಂತರ ಶ್ರೀಕೃಷ್ಣನು ದ್ವಾರಕೆಯನ್ನು ಬಿಟ್ಟು, ಮನುಷ್ಯಜನ್ಮವನ್ನು ತ್ಯಜಿಸಿ, ತನ್ನ (ಬಲರಾಮಾದಿ) ಅಂಶಗಳೊಡನೆ ನಿಜಧಾಮವನ್ನಡರಿದನು" (3-4). ಆಗ ಮೈತ್ರೇಯರು "ಮುನಿಗಳೆ, ಜನಾರ್ದನನು ಬ್ರಾಹ್ಮಣಶಾಪವ್ಯಾಜ

*ಶ್ರೀಮೈತ್ರೇಯ ಉವಾಚ:*

**ಸ ವಿಪ್ರಶಾಪವ್ಯಾಜೇನ ಸಂಜಹ್ರೇ ಸ್ವಕುಲಂ ಕಥಮ್।**
**ಕಥಂ ಚ ಮಾನುಷಂ ದೇಹಮುತ್ಸಸರ್ಜ ಜನಾರ್ದನಃ॥ 5**

*ಶ್ರೀಪರಾಶರ ಉವಾಚ:*

**ವಿಶ್ವಾಮಿತ್ರಸ್ತಥಾ ಕಣ್ವೋ ನಾರದಶ್ಚ ಮಹಾಮುನಿಃ।**
**ಪಿಂಡಾರಕೇ ಮಹಾತೀರ್ಥೇ ದೃಷ್ಟಾ ಯದುಕುಮಾರಕೈಃ॥ 6**

**ತತಸ್ತೇ ಯೌವನೋನ್ಮತ್ತಾ ಭಾವಿಕಾರ್ಯಪ್ರಚೋದಿತಾಃ।**
**ಸಾಂಬಂ ಜಾಂಬವತೀಪುತ್ರಂ ಭೂಷಯಿತ್ವಾ ಸ್ತ್ರಿಯಂ ಯಥಾ॥ 7**

**ಪ್ರಶ್ರಿತಾಸ್ತಾನ್ಮುನೀನೂಚುಃ ಪ್ರಣಿಪಾತಪುರಸ್ಸರಮ್।**
**ಇಯಂ ಸ್ತ್ರೀ ಪುತ್ರಕಾಮಾ ವೈ ಬ್ರೂತ ಕಿಂ ಜನಯಿಷ್ಯತಿ॥ 8**

---

ದಿಂದ ತನ್ನ ಯದುಕುಲವನ್ನೇ ಮುಗಿಸಿದ ಬಗೆ ಹೇಗೆ? ಮನುಷ್ಯಶರೀರವನ್ನು ತ್ಯಜಿಸದ ವಿಧಾನ ಯಾವುದು?" ಎಂದು ಕೇಳಿದರು. ಆದಕ್ಕೆ ಪರಾಶರ ಮುನಿಗಳು ಹೇಳಿದರು: ಮೈತ್ರೇಯ, ಒಂದುಸಲ ಪಿಂಡಾರಕವೆಂಬ* ಮಹಾಕ್ಷೇತ್ರದಲ್ಲಿ ಯದುಕುಮಾರರು ವಿಶ್ವಾಮಿತ್ರ, ಕಣ್ವ ಮತ್ತು ನಾರದಮುನಿಗಳನ್ನು ಕಂಡರು (5-6). ಯೌವನಮದವು ತಲೆಗೇರಿದ್ದ ಆ ಯದುಕುಮಾರರು ಭವಿಷ್ಯತ್ತಿನಲ್ಲಾಗಬೇಕಾದ ವಿಧಿಯಿಂದ ಪ್ರಚೋದಿತರಾಗಿ, ಜಾಂಬವತೀಪುತ್ರನಾದ ಸಾಂಬನಿಗೆ ಸ್ತ್ರೀವೇಷವನ್ನು ತೊಡಿಸಿ ಮುನಿಗಳ ಬಳಿಗೆ ಕರೆದೊಯ್ದರು. ಅವರಿಗೆ ವಿನಯದಿಂದ ನಮಸ್ಕರಿಸಿ "ಮಹರ್ಷಿಗಳೆ, ಈ ಸ್ತ್ರೀಯಳಿಗೆ ಪುತ್ರನನ್ನು ಪಡೆಯುವ ಬಯಕೆ ಇದೆ! ಯಾವ ಸಂತಾನವನ್ನು ಪಡೆಯುವಳು? ಹೇಳಿರಿ" ಎಂದು ಕೇಳಿದರು (7-8). ದಿವ್ಯಜ್ಞಾನ ಸಂಪನ್ನರಾದ ಆ ಮುನಿಗಳು

---

* ಈ ಹೆಸರಿನ ಕ್ಷೇತ್ರವು ಗುಜರಾತಿನ ವಾಯವ್ಯಭಾಗದಲ್ಲಿ ಈಗಲೂ ಇದೆಯೆಂದು ಹೆಚ್. ಹೆಚ್. ವಿಲ್ಸನ್ನರು ಸೂಚಿಸುತ್ತಾರೆ.

*ಶ್ರೀಪರಾಶರ ಉವಾಚ:*

**ದಿವ್ಯಜ್ಞಾನೋಪಪನ್ನಾಸ್ತೇ ವಿಪ್ರಲಬ್ಧಾಃ ಕುಮಾರಕೈಃ।**
**ಮುನಯಃ ಕುಪಿತಾ ಪ್ರೋಚುರ್ಮುಸಲಂ ಜನಯಿಷ್ಯತಿ॥** 9

**ಸರ್ವಯಾದವಸಂಹಾರಕಾರಣಂ ಭುವನೋತ್ತರಮ್।**
**ಯೇನಾಖಿಲಕುಲೋತ್ಸಾದೋ ಯಾದವಾನಾಂ ಭವಿಷ್ಯತಿ॥** 10

**ಇತ್ಯುಕ್ತಾಸ್ತೇ ಕುಮಾರಾಸ್ತು ಆಚಚಕ್ಷುರ್ಯಥಾತಥಮ್।**
**ಉಗ್ರಸೇನಾಯ ಮುಸಲಂ ಜಜ್ಞೇ ಸಾಂಬಸ್ಯ ಚೋದರಾತ್॥** 11

**ತದುಗ್ರಸೇನೋ ಮುಸಲಮಯಶ್ಚೂರ್ಣಮಕಾರಯತ್।**
**ಜಜ್ಞೇ ತದೇರಕಾಚೂರ್ಣಂ ಪ್ರಕ್ಷಿಪ್ತಂ ತೈರ್ಮಹೋದಧೌ॥** 12

**ಮುಸಲಸ್ಯಾಥ ಲೋಹಸ್ಯ ಚೂರ್ಣಿತಸ್ಯ ತು ಯಾದವೈಃ।**
**ಖಂಡಂ ಚೂರ್ಣಿತಶೇಷಂ ತು ತತೋ ಯತ್ತೋಮರಾಕೃತಿ॥** 13

---

ಯದುಕುಮಾರರ ಕುಚೇಷ್ಟೆಗೆ ಒಳಗಾದ್ದರಿಂದ ಕುಪಿತರಾಗಿ "ಲೋಕೋತ್ತರ ವಾದ ಮುಸಲವನ್ನು* ಹಡೆಯುವಳು!" ಎಂದು ಉತ್ತರಿಸಿದರು. ಅಲ್ಲದೆ "ಆ ಮುಸಲವು ಸರ್ವಯಾದವರ ಸಂಹಾರಕ್ಕೆ ಕಾರಣವಾಗುವುದು. ಸಮಸ್ತ ಯಾದವರ ಕುಲ ನಾಶವಾಗುವುದು" ಎಂದರು (9-10). ಮುನಿಗಳು ಹೀಗೆ ಹೇಳಲಾಗಿ ಆ ಕುಮಾರರು ಉಗ್ರಸೇನರಾಜನ ಬಳಿಗೆ ಹೋಗಿ ಈ ವೃತ್ತಾಂತ ವನ್ನು ನಡೆದಂತೆ ತಿಳಿಸಿದರು. ಅನಂತರ ಸಾಂಬನ ಉದರದಿಂದ ಮುಸಲವು ಜನಿಸಿತು. ಉಗ್ರಸೇನನು ಅದನ್ನು ಕುಟ್ಟಿ ಪುಡಿಮಾಡಿಸಿ ಸಮುದ್ರದಲ್ಲಿ ಎಸೆಯು ವಂತೆ ಮಾಡಿದನು. ಆ ಪುಡಿಯಿಂದ ಸಮುದ್ರತೀರದಲ್ಲಿ ಏರಕಾ ಎಂಬ ಹುಲ್ಲು ಬೆಳೆದವು (11-12). ಮುಸಲವನ್ನು ಪುಡಿಮಾಡಿದಾಗ ಈಟಿಯ ಆಕಾರದ ಒಂದು ಕಬ್ಬಿಣದ ತುಂಡು ಉಳಿದಿತ್ತು. ಅದನ್ನೂ ಸಮುದ್ರದಲ್ಲಿ ಎಸೆದಿದ್ದರು.

---

* ಮುಸಲ = ಒನಕೆಯ ಆಕಾರದ ಕಬ್ಬಿಣದ ಆಯುಧ.

**ತದಪ್ಯಂಬುನಿಧೌ ಕ್ಷಿಪ್ತಂ ಮತ್ಸ್ಯೋ ಜಗ್ರಾಹ ಜಾಲಿಭಿಃ।**
**ಘಾತಿತಸ್ಯೋದರಾತ್ತಸ್ಯ ಲುಬ್ಧೋ ಜಗ್ರಾಹ ತಜ್ಜರಾಃ॥** 14

**ವಿಜ್ಞಾತಪರಮಾರ್ಥೋಽಪಿ ಭಗವಾನ್ ಮಧುಸೂದನಃ।**
**ನೈಚ್ಛತ್ತದನ್ಯಥಾ ಕರ್ತುಂ ವಿಧಿನಾ ಯತ್ಸಮೀಹಿತಮ್॥** 15

**ದೇವೈಶ್ಚ ಪ್ರಹಿತೋ ವಾಯುಃ ಪ್ರಣಿಪತ್ಯಾಹ ಕೇಶವಮ್।**
**ರಹಸ್ಯೇವಮಹಂ ದೂತಃ ಪ್ರಹಿತೋ ಭಗವಾನ್ ಸುರೈಃ॥** 16

**ವಸ್ವಶ್ವಿಮರುದಾದಿತ್ಯರುದ್ರಸಾಧ್ಯಾದಿಭಿಸ್ಸಹ।**
**ವಿಜ್ಞಾಪಯತಿ ಶಕ್ರಸ್ತ್ವಾಂ ತದಿದಂ ಶ್ರೂಯತಾಂ ವಿಭೋ॥** 17

**ಭಾರಾವತರಣಾರ್ಥಾಯ ವರ್ಷಾಣಾಮಧಿಕಂ ಶತಮ್।**
**ಭಗವಾನವತೀರ್ಣೋಽತ್ರ ತ್ರಿದಶೈಸ್ಸಹ ಚೋದಿತಃ॥** 18

---

ಆ ತುಂಡನ್ನು ಒಂದು ಮೀನು ನುಂಗಿತು. ಬೆಸ್ತರು ಆ ಮೀನನ್ನು ಹಿಡಿದು ಸೀಳಿದಾಗ ಆ ತುಂಡು ಸಿಕ್ಕಿತು. ಅದನ್ನು ಜರಾ ಎಂಬ ವ್ಯಾಧನು ತೆಗೆದು ಕೊಂಡನು (13-14). ಇದೆಲ್ಲವೂ ಪೂರ್ಣವಾಗಿ ಭಗವಂತನಿಗೆ ತಿಳಿದಿತ್ತು. ಆದರೂ ವಿಧಿಯ ಉದ್ದೇಶವನ್ನು ಬದಲಾಯಿಸಲು ಆತನು ಇಚ್ಛಿಸಲಿಲ್ಲ (15). ಈ ಸಮಯದಲ್ಲಿ ದೇವತೆಗಳು ವಾಯುದೇವನನ್ನು ಶ್ರೀಕೃಷ್ಣನ ಬಳಿಗೆ ಕಳಿಸಿದರು; ಆತನು ಬಂದು ಶ್ರೀಕೃಷ್ಣನಿಗೆ ನಮಸ್ಕಾರ ಮಾಡಿ ಏಕಾಂತದಲ್ಲಿ ಹೀಗೆಂದನು: "ಹೇ ಭಗವನ್, ದೇವತೆಗಳಿಂದ ಕಳಿಸಲ್ಪಟ್ಟ ದೂತ ನಾನು. ವಸುಗಳು, ಅಶ್ವಿನೀದೇವತೆಗಳು, ಮರುತ್ತುಗಳು, ರುದ್ರರು, ಸಾಧ್ಯರು—ಮೊದಲಾದ ದೇವಗಣಗಳಿಂದ ಸಹಿತನಾಗಿ ದೇವೇಂದ್ರನು ವಿಜ್ಞಾಪಿಸುತ್ತಿದ್ದಾನೆ. ಹೇ ಸ್ವಾಮಿ, ಅವರ ಸಂದೇಶವನ್ನು ಕೇಳು (16-17): ಏನೆಂದರೆ, 'ದೇವತೆಗಳ ಪ್ರಾರ್ಥನೆಯಂತೆ ಅವರೊಡನೆ ಭೂಭಾರವನ್ನಿಳಿಸುವುದಕ್ಕಾಗಿ ಭಗವಂತನು ಅವತರಿಸಿ ನೂರು ವರ್ಷಗಳಿಗೂ ಮೇಲಾಯಿತು. ದುರಾತ್ಮರಾದ ದೈತ್ಯರನ್ನು ಸಂಹರಿಸಿದ್ದಾಯಿತು, ಭೂಭಾರವನ್ನಿಳಿಸಿದ್ದಾಯಿತು. ಇನ್ನು ದೇವತೆಗಳು

**ದುರ್ವೃತ್ತಾ ನಿಹತಾ ದೈತ್ಯಾ ಭುವೋ ಭಾರೋಽವತಾರಿತಃ।**
**ತ್ವಯಾ ಸನಾಥಾಸ್ತ್ರಿದಶಾ ಭವಂತು ತ್ರಿದಿವೇ ಸದಾ॥** 19

**ತದತೀತಂ ಜಗನ್ನಾಥ ವರ್ಷಾಣಾಮಧಿಕಂ ಶತಮ್।**
**ಇದಾನೀಂ ಗಮ್ಯತಾಂ ಸ್ವರ್ಗೋ ಭವತಾ ಯದಿ ರೋಚತೇ॥** 20

**ದೇವೈರ್ವಿಜ್ಞಾಪ್ಯತೇ ದೇವ ತಥಾತ್ರೈವ ರತಿಸ್ತವ।**
**ತತ್ಸ್ಥೀಯತಾಂ ಯಥಾಕಾಲಮಾಖ್ಯೇಯಮನುಜೀವಿಭಿಃ॥** 21

*ಶ್ರೀಭಗವಾನುವಾಚ:*

**ಯತ್ತ್ವಮಾತ್ಥಾಖಿಲಂ ದೂತ ವೇದ್ಮ್ಯೇತದಹಮಪ್ಯುತ।**
**ಪ್ರಾರಬ್ಧ ಏವ ಹಿ ಮಯಾ ಯಾದವಾನಾಂ ಪರಿಕ್ಷಯಃ॥** 22

**ಭುವೋ ನಾದ್ಯಾಪಿ ಭಾರೋಽಯಂ ಯಾದವೈರನಿಬರ್ಹಿತೈಃ।**
**ಅವತಾರ್ಯ ಕರೋಮ್ಯೇತತ್ ಸಪ್ತರಾತ್ರೇಣ ಸತ್ವರಃ॥** 23

---

ಸ್ವರ್ಗದಲ್ಲಿಯೇ ನಿನ್ನಿಂದ ಸನಾಥರಾಗಿರಲಿ* (18-19). ಜಗದೀಶ್ವರ, ನೂರು ವರ್ಷಗಳಿಗೂ ಅಧಿಕ ಸಮಯ ಸಂದಿತು. ನಿನಗೆ ರುಚಿಸುವುದಾದರೆ, ಇನ್ನು ಸ್ವರ್ಗಕ್ಕೆ ಪ್ರಯಾಣವಾಗಲಿ!' ದೇವ, ಈ ಪ್ರಕಾರ ದೇವತೆಗಳು ವಿಜ್ಞಾಪಿಸಿ ಕೊಳ್ಳುತ್ತಿದ್ದಾರೆ. ಒಂದು ವೇಳೆ ಭೂಲೋಕದಲ್ಲಿಯೇ ಇನ್ನೂ ಇರಬೇಕೆಂದು ಆಸಕ್ತಿಯಿದ್ದರೆ, ಇಲ್ಲಿಯೇ ಇರಬಹುದು. ಭೃತ್ಯರಾದವರು ತಮ್ಮ ಸ್ವಾಮಿಗೆ ಸಮಯವೇನೆಂಬುದನ್ನು ಅರಿಕೆಮಾಡಿಕೊಳ್ಳುವುದು ಕರ್ತವ್ಯ" ಎಂದನು (20-21). ಆಗ ಶ್ರೀಕೃಷ್ಣನು "ದೂತ ನೀನು ಹೇಳುವುದೆಲ್ಲವನ್ನೂ ನಾನು ಬಲ್ಲೆನು. ಈಗಲಾದರೋ ಯಾದವರ ನಾಶದ ಕಾರ್ಯ ಆರಂಭವಾಗಿಬಿಟ್ಟಿದೆ! ಈ ಯಾದವರನ್ನು ಕೊಂದ ಹೊರತು ಭೂಭಾರವನ್ನು ಈಗಲೂ ಇಳಿಸಿ ದಂತಾಗುವುದಿಲ್ಲ! ಇನ್ನು ಏಳು ರಾತ್ರಿಗಳೊಳಗೆ (ಒಂದು ವಾರದೊಳಗೆ) ಈ ಕಾರ್ಯವನ್ನು ಬೇಗನೆ ಮಾಡಿ ಮುಗಿಸಿ ಬಿಡುವೆನು! (22-23). ಸಮುದ್ರರಾಜ

---

* ಅವತಾರಕೃತ್ಯ ಮುಗಿಯಿತು. ಇನ್ನು ಸ್ವಧಾಮಕ್ಕೆ ಆಗಮಿಸಬೇಕು—ಎಂದು ಅಭಿಪ್ರಾಯ.

**ಯಥಾ ಗೃಹೀತಾಮಮ್ಭೋಧೇರ್ದತ್ತ್ವಾಽಹಂ ದ್ವಾರಕಾಭುವಮ್ ।**
**ಯಾದವಾನುಪಸಂಹೃತ್ಯ ಯಾಸ್ಯಾಮಿ ತ್ರಿದಶಾಲಯಮ್ ॥** 24

**ಮನುಷ್ಯದೇಹಮುತ್ಸೃಜ್ಯ ಸಂಕರ್ಷಣಸಹಾಯವಾನ್ ।**
**ಪ್ರಾಪ್ತ ಏವಾಸ್ಮಿ ಮಂತವ್ಯೋ ದೇವೇಂದ್ರೇಣ ತಥಾಮರೈಃ ॥** 25

**ಜರಾಸಂಧಾದಯೋ ಯೇಽನ್ಯೇ ನಿಹತಾ ಭಾರಹೇತವಃ ।**
**ಕ್ಷಿತೇಸ್ತೇಭ್ಯಃ ಕುಮಾರೋಽಪಿ ಯದೂನಾಂ ನಾಪಚೀಯತೇ ॥** 26

**ತದೇತಂ ಸುಮಹಾಭಾರಮವತಾರ್ಯ ಕ್ಷಿತೇರಹಮ್ ।**
**ಯಾಸ್ಯಾಮ್ಯಮರಲೋಕಸ್ಯ ಪಾಲನಾಯ ಬ್ರವೀಹಿ ತಾನ್ ॥** 27

*ಶ್ರೀಪರಾಶರ ಉವಾಚ:*

**ಇತ್ಯುಕ್ತೋ ವಾಸುದೇವೇನ ದೇವದೂತಃ ಪ್ರಣಮ್ಯ ತಮ್ ।**
**ಮೈತ್ರೇಯ ದಿವ್ಯಯಾ ಗತ್ಯಾ ದೇವರಾಜಾಂತಿಕಂ ಯಯೌ ॥** 28

---

ನಿಂದ ಪಡೆದಿರುವ ದ್ವಾರಕೆಯ ನೆಲವನ್ನು ಆತನಿಗೆ ವಾಪಸುಕೊಟ್ಟು ಈ ಯಾದವರನ್ನು ಮುಗಿಸಿ, ಆಮೇಲೆ ಸ್ವರ್ಗಲೋಕಕ್ಕೆ ಬರುವೆನು. ಈ ಮನುಷ್ಯ ದೇಹವನ್ನು ತ್ಯಜಿಸಿ ಬಲರಾಮಸಮೇತನಾಗಿ ನಾನು ಬಂದೆನೆಂದೇ ದೇವೇಂದ್ರನೂ ದೇವತೆಗಳೂ ತಿಳಿದುಕೊಳ್ಳಲಿ (24-25). ಭೂಭಾರಕಾರಿಗಳೆಂದು ಬಗೆದು ಜರಾಸಂಧಾದಿಗಳನ್ನು ಸಂಹರಿಸಿದ್ದಾಯಿತು. ಯಾದವರಲ್ಲಿ ಒಬ್ಬ ಬಾಲಕನೂ ಸಹ ಜರಾಸಂಧಾದಿಗಳಿಗಿಂತ ಕಡಿಮೆಯಲ್ಲ! ಆದ್ದರಿಂದ ಭೂಮಿಗೆ ಅತ್ಯಂತ ಭಾರಕಾರಿಗಳಾದ ಯಾದವರನ್ನು ನಾಶಪಡಿಸಿ ದೇವಲೋಕದ ಪಾಲನೆಗಾಗಿ ಬರುವೆನು. ಹೀಗೆಂದು ಅವರಿಗೆ ತಿಳಿಸು" ಎಂದನು (26-27). ಮೈತ್ರೇಯ, ವಾಸುದೇವನು ಈ ಪ್ರಕಾರವಾಗಿ ನುಡಿಯಲು ದೇವದೂತನಾಗಿ ಬಂದಿದ್ದ ವಾಯುವು ಆತನಿಗೆ ನಮಸ್ಕರಿಸಿ ದಿವ್ಯಗತಿಯಿಂದ ದೇವರಾಜನ ಬಳಿಗೆ ಹೋದನು. ಅನಂತರ ಭಗವಾನ್ ಶ್ರೀಕೃಷ್ಣನು ದ್ವಾರಕಾ

**ಭಗವಾನಪ್ಯಥೋತ್ಪಾತಾನ್ ದಿವ್ಯಭೌಮಾಂತರಿಕ್ಷಜಾನ್।**
**ದದರ್ಶ ದ್ವಾರಕಾಪುರ್ಯಾಂ ವಿನಾಶಾಯ ದಿವಾನಿಶಮ್॥** 29

**ತಾನ್ ದೃಷ್ಟ್ವಾ ಯಾದವಾನಾಹ ಪಶ್ಯಧ್ವಮತಿದಾರುಣಾನ್।**
**ಮಹೋತ್ಪಾತಾನ್ ಶಮಾಯೈಷಾಂ ಪ್ರಭಾಸಂ**
**ಯಾಮ ಮಾ ಚಿರಮ್॥** 30

*ಶ್ರೀಪರಾಶರ ಉವಾಚ:*

**ಏವಮುಕ್ತೇ ತು ಕೃಷ್ಣೇನ ಯಾದವಪ್ರವರಸ್ತತಃ।**
**ಮಹಾಭಾಗವತಃ ಪ್ರಾಹ ಪ್ರಣಿಪತ್ಯೋದ್ಧವೋ ಹರಿಮ್॥** 31

**ಭಗವನ್ ಯನ್ಮಯಾ ಕಾರ್ಯಂ ತದಾಜ್ಞಾಪಯ ಸಾಂಪ್ರತಮ್।**
**ಮನ್ಯೇ ಕುಲಮಿದಂ ಸರ್ವಂ ಭಗವಾನ್ ಸಂಹರಿಷ್ಯತಿ॥** 32

**ನಾಶಾಯಾಸ್ಯ ನಿಮಿತ್ತಾನಿ ಕುಲಸ್ಯಾಚ್ಯುತ ಲಕ್ಷಯೇ॥** 33

---

ನಗರದಲ್ಲಿ ಹಗಲು ರಾತ್ರಿಯೂ ವಿನಾಶಸೂಚಕವಾದ ದಿವ್ಯ-ಭೌಮ-ಅಂತರಿಕ್ಷ* ಸಂಬಂಧಿಗಳಾದ ಉತ್ಪಾತಗಳು ಸಂಭವಿಸುವುದನ್ನು ಗಮನಿಸಿದನು (28-29). ಈ ಉತ್ಪಾತಗಳನ್ನು ಗಮನಿಸಿ ಶ್ರೀಕೃಷ್ಣನು ಯಾದವರನ್ನು ಕುರಿತು "ಅತಿ ಭೀಕರವಾದ ಈ ಮಹೋತ್ಪಾತಗಳನ್ನು ನೋಡಿರಿ! ಇವುಗಳ ಶಾಂತಿಗಾಗಿ ಬೇಗನೆ ಪ್ರಭಾಸಕ್ಷೇತ್ರಕ್ಕೆ ಹೋಗೋಣ" ಎಂದನು (30). ಶ್ರೀಕೃಷ್ಣನು ಹೀಗೆ ನುಡಿಯಲಾಗಿ ಯಾದವೋತ್ತಮನೂ ಮಹಾಭಾಗವತನೂ ಆದ ಉದ್ಧವನು ಶ್ರೀಹರಿಗೆ ಪ್ರಣಾಮಗಳನ್ನರ್ಪಿಸಿ "ಭಗವನ್, ಈಗ ನಾನೇನು ಮಾಡಬೇಕೆಂಬುದನ್ನು ಆಜ್ಞಾಪಿಸು. ಈ ಯಾದವಕುಲವೆಲ್ಲವನ್ನೂ ಸಂಹರಿಸಲು ಉದ್ದೇಶಿಸಿದ್ದೀಯೆಂದು ನನಗೆ ತೋರುತ್ತಿದೆ. ಅಚ್ಯುತ, ಈ ಕುಲದ ನಾಶವನ್ನು ಸೂಚಿಸುವ ಲಕ್ಷಣಗಳನ್ನು ನಾನು ಕಾಣುತ್ತಿದ್ದೇನೆ" ಎಂದನು (31-33). ಆದಕ್ಕೆ ಭಗವಂತನು

---

* ಗ್ರಹಯುದ್ಧಾದಿಗಳು ದಿವ್ಯ ಉತ್ಪಾತ, ಭೂಕಂಪ ಮೊದಲಾದದ್ದು ಭೌಮ; ಉಲ್ಕಾಪಾತ ಮೊದಲಾದದ್ದು ಅಂತರಿಕ್ಷ ಸಂಬಂಧಿ.

*ಶ್ರೀಭಗವಾನುವಾಚ:*

**ಗಚ್ಛ ತ್ವಂ ದಿವ್ಯಯಾ ಗತ್ಯಾ ಮತ್‌ಪ್ರಸಾದಸಮುತ್ಥಯಾ।**
**ಯದ್‌ಬದರ್ಯಾಶ್ರಮಂ ಪುಣ್ಯಂ ಗಂಧಮಾದನಪರ್ವತೇ।**
**ನರನಾರಾಯಣಸ್ಥಾನೇ ತತ್ಪವಿತ್ರಂ ಮಹೀತಲೇ॥ 34**

**ಮನ್ಮನಾ ಮತ್ಪ್ರಸಾದೇನ ತತ್ರಸಿದ್ಧಿಮವಾಪ್ಸ್ಯಸಿ।**
**ಅಹಂ ಸ್ವರ್ಗಂ ಗಮಿಷ್ಯಾಮಿ ಹ್ಯುಪಸಂಹೃತ್ಯ ವೈ ಕುಲಮ್॥ 35**

**ದ್ವಾರಕಾಂ ಚ ಮಯಾ ತ್ಯಕ್ತಾಂ ಸಮುದ್ರಃ ಪ್ಲಾವಯಿಷ್ಯತಿ।**
**ಮದ್ವೇಶ್ಮ ಚೈಕಂ ಮುಕ್ತ್ವಾ ತು ಭಯಾನ್ಮತ್ತೋ ಜಲಾಶಯೇ।**
**ತತ್ರ ಸನ್ನಿಹಿತಶ್ಚಾಹಂ ಭಕ್ತಾನಾಂ ಹಿತಕಾಮ್ಯಯಾ॥ 36**

*ಶ್ರೀಪರಾಶರ ಉವಾಚ:*

**ಇತ್ಯುಕ್ತಃ ಪ್ರಣಿಪತ್ಯೈನಂ ಜಗಾಮಾಶು ತಪೋವನಮ್।**
**ನರನಾರಾಯಣಸ್ಥಾನಂ ಕೇಶವೇನಾನುಮೋದಿತಃ॥ 37**

---

"ಉದ್ಧವ, ನರ-ನಾರಾಯಣ ಸ್ಥಾನವಾದ ಗಂಧಮಾದನಪರ್ವತದಲ್ಲಿ ಪುಣ್ಯ ಕ್ಷೇತ್ರವಾದ ಬದರಿಕಾಶ್ರಮವಿದೆ. ಅದು ಭೂತಳದಲ್ಲಿ ಪವಿತ್ರವಾದದ್ದು. ನನ್ನ ಅನುಗ್ರಹದಿಂದ ಲಭಿಸುವ ದಿವ್ಯ ಗತಿಯಿಂದ ಅಲ್ಲಿಗೆ ಹೋಗು (34). ಅಲ್ಲಿ ನನ್ನನ್ನೇ ಧ್ಯಾನಿಸುತ್ತ ನನ್ನ ಪ್ರಸಾದದಿಂದ ಸಿದ್ಧಿಯನ್ನು ಪಡೆಯುತ್ತೀಯೆ. ನಾನು ಈ ಕುಲವನ್ನು ಉಪಸಂಹರಿಸಿ ಸ್ವರ್ಗಲೋಕಕ್ಕೆ ತೆರಳುವೆನು. ನಾನು ತ್ಯಜಿಸಿದ ದ್ವಾರಕೆಯನ್ನು ಸಮುದ್ರವು ತೇಲಿಸಿ ನೀರಲ್ಲಿ ಮುಳುಗಿಸಿಬಿಡುವುದು. ನನ್ನ ಭವನವನ್ನು ಮಾತ್ರ ನನ್ನ ಭಯದಿಂದ ಮುಟ್ಟುವುದಿಲ್ಲ. ಭಕ್ತರ ಹಿತಕ್ಕಾಗಿ ನಾನು ಅಲ್ಲಿ ಸಂನಿಹಿತನಾಗಿರುವೆನು" ಎಂದನು (35-36). ಹೀಗೆ ಹೇಳಿದೊಡನೆ ಉದ್ಧವನು ಭಗವಂತನಿಗೆ ನಮಸ್ಕರಿಸಿ ಆತನ ಅನುಮತಿಯನ್ನು ಪಡೆದು ನರ-ನಾರಾಯಣರ ನಿವಾಸಸ್ಥಾನವಾದ ತಪೋವನಕ್ಕೆ ತೆರಳಿದನು. ಮೈತ್ರೇಯ, ತರುವಾಯ ಸಮಸ್ತ ಯಾದವರೂ ಶೀಘ್ರಗಾಮಿಗಳಾದ ರಥಗಳನ್ನೇರಿ ಶ್ರೀಕೃಷ್ಣ

**ತತಸ್ತೇ ಯಾದವಾಸ್ಸರ್ವೇ ರಥಾನಾರುಹ್ಯ ಶೀಘ್ರಗಾನ್।**
**ಪ್ರಭಾಸಂ ಪ್ರಯಯುಸ್ಸಾರ್ಧಂ ಕೃಷ್ಣರಾಮಾದಿಭಿರ್ದ್ವಿಜ॥ 38**

**ಪ್ರಭಾಸಂ ಸಮನುಪ್ರಾಪ್ತಾಃ ಕುಕುರಾಂಧಕವೃಷ್ಣಯಃ।**
**ಚಕ್ರುಸ್ತತ್ರ ಮಹಾಪಾನಂ ವಾಸುದೇವೇನ ಚೋದಿತಾಃ॥ 39**

**ಪಿಬತಾಂ ತತ್ರ ಚೈತೇಷಾಂ ಸಂಘರ್ಷೇಣ ಪರಸ್ಪರಮ್।**
**ಅತಿವಾದೇಂಧನೋ ಜಜ್ಞೇ ಕಲಹಾಗ್ನಿಃ ಕ್ಷಯಾವಹಃ॥ 40**

*ಶ್ರೀಮೈತ್ರೇಯ ಉವಾಚ:*

**ಸ್ವಂ ಸ್ವಂ ವೈ ಭುಂಜತಾಂ ತೇಷಾಂ ಕಲಹಃ ಕಿನ್ನಿಮಿತ್ತಕಃ।**
**ಸಂಘರ್ಷೋ ವಾ ದ್ವಿಜಶ್ರೇಷ್ಠ ತನ್ಮಮಾಖ್ಯಾತುಮರ್ಹಸಿ॥ 41**

*ಶ್ರೀಪರಾಶರ ಉವಾಚ:*

**ಮೃಷ್ಟಂ ಮದೀಯಮನ್ನಂ ತೇ ನ ಮೃಷ್ಟಮಿತಿ ಜಲ್ಪತಾಮ್।**
**ಮೃಷ್ಟಾಮೃಷ್ಟಕಥಾ ಜಜ್ಞೇ ಸಂಘರ್ಷಕಲಹೌ ತತಃ॥ 42**

---

ಬಲರಾಮಾದಿಗಳೊಡನೆ ಪ್ರಭಾಸಕ್ಷೇತ್ರಕ್ಕೆ ಪ್ರಯಾಣಮಾಡಿದರು (37-38). ಪ್ರಭಾಸಕ್ಕೆ ಹೋದ ಮೇಲೆ ಕುಕುರಾಂಧಕವೃಷ್ಣಿ ವಂಶೀಯರಾದ ಯಾದವರು (ಭೋಜನ ಮಾಡುತ್ತ) ಶ್ರೀಕೃಷ್ಣನ ಪ್ರೇರಣೆಯಿಂದ ಯಥೇಚ್ಛವಾಗಿ ಮದ್ಯಪಾನ ಮಾಡಿದರು. ಮದ್ಯವನ್ನು ಕುಡಿಯುವಾಗ ಅವರಲ್ಲಿಯೇ ಸಂಘರ್ಷಗಳುಂಟಾಗಿ ಬೈಗಳೆಂಬ ಇಂಧನದಿಂದ ಕ್ಷಯಕಾರಿಯಾದ ಕಲಹಾಗ್ನಿಯು ಭುಗಿಲೆದ್ದಿತು (39-40). ಪರಾಶರರು ಹೀಗೆ ಹೇಳಿದಾಗ ಮೈತ್ರೇಯರು "ಮುನಿಗಳೇ, ತಮ್ಮ ತಮ್ಮದ್ದನ್ನು ತಾವು ತಿನ್ನುತ್ತಿರುವಾಗ ಜಗಳಕ್ಕೆ ನಿಮಿತ್ತವೇನು? ಅದನ್ನು ಹೇಳಬೇಕು" ಎಂದರು. ಆಗ ಪರಾಶರಮುನಿಗಳು ನುಡಿದರು: "ಮೈತ್ರೇಯ, ನನ್ನದು ಮೃಷ್ಟಾನ್ನ, ನಿನ್ನದು ಶುದ್ಧವಲ್ಲ' ಹೀಗೆಂದು ಅವರಲ್ಲಿ ಮೃಷ್ಟಾಮೃಷ್ಟ ಕಥೆ ಎದ್ದಿತು. ಅದರಿಂದ ಸಂಘರ್ಷಕಲಹಗಳುಂಟಾದವು* (41-42). ಅನಂತರ ಕೆಂಪಡರಿದ

---

* ಅನುಬಂಧವನ್ನು ನೋಡಿ.

ತತಶ್ಚಾನ್ಯೋನ್ಯಮಭ್ಯೇತ್ಯ ಕ್ರೋಧಸಂರಕ್ತಲೋಚನಾಃ।
ಜಘ್ನುಃ ಪರಸ್ಪರಂ ತೇ ತು ಶಸ್ತ್ರೈರ್ದೇವಬಲಾತ್ಕೃತಾಃ॥ 43

ಕ್ಷೀಣಶಸ್ತ್ರಾಶ್ಚ ಜಗೃಹುಃ ಪ್ರತ್ಯಾಸನ್ನಾಮಥೈರಕಾಮ್॥ 44

ಏರಕಾ ತು ಗೃಹೀತಾ ವೈ ವಜ್ರಭೂತೇವ ಲಕ್ಷ್ಯತೇ।
ತಯಾ ಪರಸ್ಪರಂ ಜಘ್ನುಸ್ಸಂಪ್ರಹಾರೇ ಸುದಾರುಣೇ॥ 45

ಪ್ರದ್ಯುಮ್ನಸಾಮ್ಬಪ್ರಮುಖಾಃ ಕೃತವರ್ಮಾಽಥ ಸಾತ್ಯಕಿಃ
ಅನಿರುದ್ಧಾದಯಶ್ಚಾನ್ಯೇ ಪೃಥುರ್ವಿಪೃಥುರೇವ ಚ॥ 46

ಚಾರುವರ್ಮಾ ಚಾರುಕಶ್ಚ ತಥಾಕ್ರೂರಾದಯೋ ದ್ವಿಜ।
ಏರಕಾರೂಪಿಭಿರ್ವಜ್ರೈಸ್ತೇ ನಿಜಘ್ನುಃ ಪರಸ್ಪರಮ್॥ 47

ನಿವಾರಯಾಮಾಸ ಹರಿರ್ಯಾದವಾಂಸ್ತೇ ಚ ಕೇಶವಮ್।
ಸಹಾಯಂ ಮೇನಿರೇಽರೀಣಾಂ ಪ್ರಾಪ್ತಂ ಜಘ್ನುಃ ಪರಸ್ಪರಮ್॥ 48

ಕೃಷ್ಣೋಽಪಿ ಕುಪಿತಸ್ತೇಷಾಮೇರಕಾಮುಷ್ಟಿಮಾದದೇ।
ವಧಾಯ ಸೋಽಪಿ ಮುಸಲಂ ಮುಷ್ಟಿರ್ಲೋಹಮಭೂತ್ತದಾ॥ 49

---

ಕಣ್ಣುಳ್ಳವರಾಗಿ ಒಬ್ಬರ ಮೇಲೊಬ್ಬರು ಎರಗಿ ಬೀಳುತ್ತ ಭವಿತವ್ಯದಿಂದ ವಿವಶರಾದ ಯಾದವರು ಶಸ್ತ್ರಗಳಿಂದ ಹೊಡೆದಾಡಿದರು. ಆಯುಧಗಳು ಮುಗಿದಮೇಲೆ ಹತ್ತಿರದಲ್ಲಿದ್ದ ಏರಕಾತೃಣವನ್ನು ಕಿತ್ತುಕೊಂಡರು (43-44). ಆ ತೃಣವಾದರೋ ವಜ್ರಾಯುಧದಂತೆ ಕಠೋರವಾಗಿತ್ತು. ಅದರಿಂದಲೇ ಭೀಕರವಾಗಿ ಹೊಡೆದಾಡಿ ಒಬ್ಬರನ್ನೊಬ್ಬರು ಕೊಂದರು. ಪ್ರದ್ಯುಮ್ನ, ಸಾಂಬ, ಕೃತವರ್ಮ, ಸಾತ್ಯಕಿ, ಅನಿರುದ್ಧ, ಪೃಥು, ವಿಪೃಥು, ಚಾರುವರ್ಮ, ಚಾರುಕ, ಅಕ್ರೂರ—ಮೊದಲಾದವರು ವಜ್ರಾಯುಧ ಸದೃಶಗಳಾದ ಏರಕಾತೃಣಗಳಿಂದ ಬಡಿದಾಡಿದರು (45-47). ಶ್ರೀಕೃಷ್ಣನು ಅವರನ್ನು ತಡೆಯಲು ಹೋದಾಗ ಈತನು ತಮ್ಮ ಪ್ರತಿಪಕ್ಷದವರಿಗೆ ಸಹಾಯಮಾಡುತ್ತಿದ್ದಾನೆಂದು ಭಾವಿಸಿ ಒಬ್ಬರನ್ನೊಬ್ಬರು ಬಡಿದು ಸಾಯಿಸುತ್ತಲೇ ಇದ್ದರು. ಆಗ ಶ್ರೀಕೃಷ್ಣನು ಕ್ರುದ್ಧನಾಗಿ ಒಂದು ಮುಷ್ಟಿ ಹುಲ್ಲನ್ನು ಕಿತ್ತುಕೊಂಡನು. ಅದು ಲೋಹಮಯವಾದ ಮುಸಲವಾಯಿತು! (48-49). ಅದರಿಂದ ಶ್ರೀಕೃಷ್ಣನು ಕೊಲೆಗಡುಕರಾದ ಯಾದವ

**ಜಘಾನ ತೇನ ನಿಶ್ಶೇಷಾನ್ ಯಾದವಾನಾತತಾಯಿನಃ।**
**ಜಘ್ನುಸ್ತೇ ಸಹಸಾಭ್ಯೇತ್ಯ ತಥಾನ್ಯೇಽಪಿ ಪರಸ್ಪರಮ್॥** 50

**ತತಶ್ಚಾರ್ಣವಮಧ್ಯೇನ ಜೈತ್ರೋಽಸೌ ಚಕ್ರಿಣೋ ರಥಃ।**
**ಪಶ್ಯತೋ ದಾರುಕಸ್ಯಾಥ ಪ್ರಾಯಾದಶ್ವೈರ್ಧೃತೋ ದ್ವಿಜ॥** 51

**ಚಕ್ರಂ ಗದಾ ತಥಾ ಶಾರ್ಙ್ಗಂ ತೂಣೀ ಶಂಖೋಽಸಿರೇವ ಚ।**
**ಪ್ರದಕ್ಷಿಣಂ ಹರಿಂ ಕೃತ್ವಾ ಜಗ್ಮುರಾದಿತ್ಯವರ್ತ್ಮನಾ॥** 52

**ಕ್ಷಣೇನ ನಾಭವತ್ಕಶ್ಚಿದ್ಯಾದವಾನಾಮಘಾತಿತಃ।**
**ಋತೇ ಕೃಷ್ಣಂ ಮಹಾತ್ಮಾನಂ ದಾರುಕಂ ಚ ಮಹಾಮುನೇ॥** 53

**ಚಙ್ಕ್ರಮ್ಯಮಾಣೌ ತೌ ರಾಮಂ ವೃಕ್ಷಮೂಲೇ ಕೃತಾಸನಮ್।**
**ದದೃಶಾತೇ ಮುಖಾಚ್ಚಾಸ್ಯ ನಿಷ್ಕ್ರಾಮಂತಂ ಮಹೋರಗಮ್॥** 54

**ನಿಷ್ಕ್ರಮ್ಯ ಸ ಮುಖಾತ್ತಸ್ಯ ಮಹಾಭೋಗೋ ಭುಜಙ್ಗಮಃ।**
**ಪ್ರಯಯಾವರ್ಣವಂ ಸಿದ್ಧೈಃ ಪೂಜ್ಯಮಾನಸ್ತಥೋರಗೈಃ॥** 55

---

ರೆಲ್ಲರನ್ನೂ ಬಡಿದು ಕೊಂದನು. ಹತಶೇಷರಾದವರೂ ತಮ್ಮಲ್ಲಿಯೇ ಹೊಡೆದಾಡಿ ಹತರಾದರು (50). ಅನಂತರ, ಮೈತ್ರೇಯ, ದಾರುಕನು ನೋಡ ನೋಡುತ್ತಿರುವಾಗಲೇ ಶ್ರೀಕೃಷ್ಣನ ಚೈತ್ರ ರಥವು, ಅಶ್ವಗಳಿಂದ ಎಳೆಯಲ್ಪಡುತ್ತ, ಸಮುದ್ರದ ನಡುವೆ ಹೊರಟುಹೋಯಿತು! ಚಕ್ರ, ಗದೆ, ಶಾರ್ಙ್ಗ, ಧನಸ್ಸು, ಬತ್ತಳಿಕೆ, ಶಂಖ, ಖಡ್ಗಗಳು ಶ್ರೀಕೃಷ್ಣನಿಗೆ ಪ್ರದಕ್ಷಿಣ ನಮಸ್ಕಾರಮಾಡಿ ಸೂರ್ಯ ಮಾರ್ಗದಲ್ಲಿ ತೆರಳಿದವು! (51-52). ಮೈತ್ರೇಯ, ಒಂದು ಕ್ಷಣದಲ್ಲಿ ಮಹಾತ್ಮ ನಾದ ಶ್ರೀಕೃಷ್ಣನನ್ನೂ ದಾರುಕನನ್ನೂ ಬಿಟ್ಟು ಯಾದವರಲ್ಲೊಬ್ಬನೂ ಬದುಕಿ ಉಳಿಯಲಿಲ್ಲ! ಅವರಿಬ್ಬರೂ ತಿರುಗಾಡುತ್ತ ಹೋದಾಗ ಒಂದು ವೃಕ್ಷದ ಕೆಳಗೆ ಬಲರಾಮನು ಕುಳಿತಿರುವುದನ್ನು ಕಂಡರು. ಆತನ ಬಾಯಿಯಿಂದ ಒಂದು ಮಹಾಸರ್ಪವು ಹೊರಬರುತ್ತಿತ್ತು (53-54). ಮಹಾಶರೀರವಿದ್ದ ಆ ಸರ್ಪವು ಆತನ ಬಾಯಿಯಿಂದ ಹೊರಟು ಸಿದ್ಧರಿಂದಲೂ ನಾಗರಿಂದಲೂ ಪೂಜಿಸ

ತತೋಽರ್ಘ್ಯಮಾದಾಯ ತದಾ ಜಲಧಿಸ್ಸಮ್ಮುಖಂ ಯಯೌ।
ಪ್ರವಿವೇಶ ತತಸ್ತೋಯಂ ಪೂಜಿತಃ ಪನ್ನಗೋತ್ತಮೈಃ॥ 56

ದೃಷ್ಟ್ವಾ ಬಲಸ್ಯ ನಿರ್ಯಾಣಂ ದಾರುಕಂ ಪ್ರಾಹ ಕೇಶವಃ।
ಇದಂ ಸರ್ವಂ ಸಮಾಚಕ್ಷ್ವ ವಸುದೇವೋಗ್ರಸೇನಯೋಃ॥ 57

ನಿರ್ಯಾಣಂ ಬಲಭದ್ರಸ್ಯ ಯಾದವಾನಾಂ ತಥಾಕ್ಷಯಮ್।
ಯೋಗೇ ಸ್ಥಿತ್ವಾಹಮಪ್ಯೇತತ್ಪರಿತ್ಯಕ್ಷ್ಯೇ ಕಲೇವರಮ್॥ 58

ವಾಚ್ಯಶ್ಚ ದ್ವಾರಕಾವಾಸೀ ಜನಸ್ಸರ್ವಸ್ತಥಾಹುಕಃ।
ಯಥೇಮಾಂ ನಗರೀಂ ಸರ್ವಾಂ ಸಮುದ್ರಃ ಪ್ಲಾವಯಿಷ್ಯತಿ॥ 59

ತಸ್ಮಾದ್ಭವದ್ಭಿಸ್ಸರ್ವೈಸ್ತು ಪ್ರತೀಕ್ಷ್ಯೋ ಹ್ಯರ್ಜುನಾಗಮಃ।
ನ ಸ್ಥೇಯಂ ದ್ವಾರಕಾಮಧ್ಯೇ ನಿಷ್ಕ್ರಾಂತೇ ತತ್ರ ಪಾಂಡವೇ॥ 60

ತೇನೈವ ಸಹ ಗಂತವ್ಯಂ ಯತ್ರ ಯಾತಿ ಸ ಕೌರವಃ॥ 61

---

ಲ್ಪಡುತ್ತ ಸಮುದ್ರವನ್ನು ಪ್ರವೇಶಿಸಿತು! ಆಗ ಸಮುದ್ರರಾಜನು ಅರ್ಘ್ಯವನ್ನು ಹಿಡಿದು ಎದುರುಗೊಂಡನು. ಪನ್ನಗೋತ್ತಮರಿಂದ ಪೂಜಿತವಾದ ಆ ಸರ್ಪವು ನೀರಿನೊಳಗೆ ಹೊರಟುಹೋಯಿತು (55-56). ಬಲರಾಮನ ನಿರ್ಯಾಣವನ್ನು ನೋಡಿ ಕೇಶವನು ದಾರುಕನನ್ನು ಕುರಿತು "ದಾರುಕ, ಈ ಎಲ್ಲ ವೃತ್ತಾಂತವನ್ನು ವಸುದೇವನಿಗೂ ಉಗ್ರಸೇನನಿಗೂ ಹೇಳು. ಬಲಭದ್ರನು ನಿರ್ಯಾಣ ಮಾಡಿದ ನೆಂದೂ ಯಾದವರು ನಾಶವಾದರೆಂದೂ ಹೇಳು. ನಾನೂ ಸಹ ಯೋಗಾ ರೂಢನಾಗಿ ಈ ಕಳೇವರವನ್ನು ತ್ಯಜಿಸುವೆನು (57-58). ದ್ವಾರಕಾವಾಸಿಗಳಾದ ಸಮಸ್ತ ಜನರಿಗೂ ಉಗ್ರಸೇನನಿಗೂ ಈ ಮಾತನ್ನು ತಿಳಿಸಬೇಕು. ಏನೆಂದರೆ 'ನಿಖಿಲದ್ವಾರಕಾನಗರವನ್ನು ಸಮುದ್ರವು ತೇಲಿಸಿಬಿಡುವುದು. ಆದ್ದರಿಂದ ನೀವೆಲ್ಲರೂ ಅರ್ಜುನನು ಬರುವವರೆಗೆ ಕಾಯುತ್ತಿರಿ. ಪಾಂಡುಪುತ್ರನಾದ ಅರ್ಜುನನು ದ್ವಾರಕೆಯಿಂದ ನಿರ್ಗಮಿಸಿದ ಮೇಲೆ ನೀವು ಯಾರೂ ನಗರದಲ್ಲಿರ ತಕ್ಕದ್ದಲ್ಲ (59-60). ಅರ್ಜುನನು ಎಲ್ಲಿಗೆ ಹೋಗುವನೋ ಅಲ್ಲಿಗೆ ಅವನೊಡನೆ ಹೊರಟುಹೋಗಬೇಕು' ಎಂದು. ಅಲ್ಲದೆ ನೀನು ಹೋಗಿ ಕೌಂತೇಯನಾದ

**ಗತ್ವಾ ಚ ಬ್ರೂಹಿ ಕೌಂತೇಯಮರ್ಜುನಂ ವಚನಾನ್ಮಮ।**
**ಪಾಲನೀಯಸ್ತ್ವಯಾ ಶಕ್ತ್ಯಾ ಜನೋಽಯಂ ಮತ್ಪರಿಗ್ರಹಃ॥** 62

**ತ್ವಮರ್ಜುನೇನ ಸಹಿತೋ ದ್ವಾರವತ್ಯಾಂ ತಥಾ ಜನಮ್।**
**ಗೃಹೀತ್ವಾ ಯಾಹಿ ವಜ್ರಶ್ಚ ಯದುರಾಜೋ ಭವಿಷ್ಯತಿ॥** 63

*ಶ್ರೀಪರಾಶರ ಉವಾಚ:*

**ಇತ್ಯುಕ್ತೋ ದಾರುಕಃ ಕೃಷ್ಣಂ ಪ್ರಣಿಪತ್ಯ ಪುನಃ ಪುನಃ।**
**ಪ್ರದಕ್ಷಿಣಂ ಚ ಬಹುಶಃ ಕೃತ್ವಾ ಪ್ರಾಯಾದ್ಯತೋದಿತಮ್॥** 64

**ಸ ಚ ಗತ್ವಾ ತದಾಚಷ್ಟ ದ್ವಾರಕಾಯಾಂ ತಥಾರ್ಜುನಮ್।**
**ಆನಿನಾಯ ಮಹಾಬುದ್ಧಿರ್ವಜ್ರಂ ಚಕ್ರೇ ತಥಾ ನೃಪಮ್॥** 65

**ಭಗವಾನಪಿ ಗೋವಿಂದೋ ವಾಸುದೇವಾತ್ಮಕಂ ಪರಮ್।**
**ಬ್ರಹ್ಮಾತ್ಮನಿ ಸಮಾರೋಪ್ಯ ಸರ್ವಭೂತೇಷ್ವಧಾರಯತ್॥** 66

---

ಅರ್ಜುನನಿಗೆ ನಾನು ಹೇಳಿದ್ದೇನೆಂದು ಈ ಮಾತನ್ನು ತಿಳಿಸು—'ಅರ್ಜುನ, ನನ್ನ ಪರಿವಾರದ ಜನರನ್ನು ಯಥಾಶಕ್ತಿಯಾಗಿ ನೀನು ಪಾಲಿಸಬೇಕು' ಎಂದು (61-62). ದಾರುಕ, ನೀನು ದ್ವಾರಕೆಯಲ್ಲಿರುವ ಜನರನ್ನು ಕರೆದುಕೊಂಡು ಅರ್ಜುನನೊಡನೆ ತೆರಳು. ಮುಂದೆ ವಜ್ರನು ಯದುರಾಜನಾಗಲಿ" ಎಂದನು. ಆಗ ದಾರುಕನು ಮತ್ತೆ ಮತ್ತೆ ಶ್ರೀಕೃಷ್ಣನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಅವನ ಆಜ್ಞೆಯಂತೆ ಹೊರಟು ಹೋದನು (63-64). ಪ್ರಾಜ್ಞನಾದ ಅವನು ದ್ವಾರಕೆಗೆ ಹೋಗಿ ವಸುದೇವಾದಿಗಳಿಗೆ ಈ ವೃತ್ತಾಂತವನ್ನು ತಿಳಿಸಿ, (ಹಸ್ತಿನಾವತಿಯಿಂದ) ಅರ್ಜುನನನ್ನು ಕರೆದುಕೊಂಡು ಬಂದನು. ಮತ್ತು ವಜ್ರನು ಯದುರಾಜನಾಗುವಂತೆ ಏರ್ಪಡಿಸಿದನು (65). ಇತ್ತ ಭಗವಾನ್ ಗೋವಿಂದನು ವಾಸುದೇವಾತ್ಮಕವಾದ ಪರಬ್ರಹ್ಮವನ್ನು ತನ್ನಲ್ಲಿ ಆರೋಪಿಸಿಕೊಂಡು—ತಾನೇ ಪರಬ್ರಹ್ಮವೆಂದು ಧ್ಯಾನಿಸಿ—ಸರ್ವಭೂತಗಳನ್ನೂ ತನ್ನಲ್ಲಿ ಧರಿಸಿದನು—ಸರ್ವಭೂತಗಳೂ ತಾನೇ ಎಂದು ಧ್ಯಾನಿಸಿದನು* (66). ಮೈತ್ರೇಯ, ಆ

* ಇದು ಬ್ರಹ್ಮಜ್ಞಾನಿಗೆ ಸಂಭವಿಸುತ್ತದೆ. ಶ್ರೀಕೃಷ್ಣನು ಹಾಗೆ ಮಾಡಿದ್ದು ಲೋಕ ಶಿಕ್ಷಣಕ್ಕಾಗಿ.

**ನಿಷ್ಪ್ರಪಂಚೇ ಮಹಾಭಾಗ ಸಂಯೋಜ್ಯಾತ್ಮಾನಮಾತ್ಮನಿ।**
**ತುರ್ಯಾವಸ್ಥಂ ಸಲೀಲಂ ಚ ಶೇತೇ ಸ್ಮ ಪುರುಷೋತ್ತಮಃ॥ 67**

**ಸಮ್ಮಾನಯನ್ ದ್ವಿಜವಚೋ ದುರ್ವಾಸಾ ಯದುವಾಚ ಹ।**
**ಯೋಗಯುಕ್ತೋಽಭವತ್ಪಾದಂ ಕೃತ್ವಾ ಜಾನುನಿ ಸತ್ತಮ॥ 68**

**ಆಯಯೌ ಚ ಜರಾ ನಾಮ ತದಾ ತತ್ರ ಸ ಲುಬ್ಧಕಃ।**
**ಮುಸಲಾವಶೇಷಲೋಹೈಕಸಾಯಕನ್ಯಸ್ತತೋಮರಃ॥ 69**

**ಸ ತತ್ಪಾದಂ ಮೃಗಾಕಾರಮವೇಕ್ಷ್ಯಾರಾದವಸ್ಥಿತಃ।**
**ತಲೇ ವಿವ್ಯಾಧ ತೇನೈವ ತೋಮರೇಣ ದ್ವಿಜೋತ್ತಮ॥ 70**

**ತತಶ್ಚ ದದೃಶೇ ತತ್ರ ಚತುರ್ಬಾಹುಧರಂ ನರಮ್।**
**ಪ್ರಣಿಪತ್ಯಾಹ ಚೈವೈನಂ ಪ್ರಸೀದೇತಿ ಪುನಃ ಪುನಃ॥ 71**

---

ಪುರುಷೋತ್ತಮನು ತನ್ನ ಆತ್ಮವನ್ನು ನಿರ್ವಿಶೇಷವಾದ ಆತ್ಮನಲ್ಲಿ ಲೀನಗೊಳಿಸಿ ತುರೀಯಾವಸ್ಥೆಯಲ್ಲಿ ಲೀಲೆಯಿಂದ ಮಲಗಿದನು. ದೂರ್ವಾಸನು ಆಡಿದಂತೆ ವಿಪ್ರವಾಕ್ಯವನ್ನು* ಮನ್ನಿಸಬೇಕೆಂದು ಉದ್ದೇಶಿಸಿ ತನ್ನ ಮೊಣಕಾಲ ಮೇಲೆ ಇನ್ನೊಂದು ಪಾದವನ್ನಿಟ್ಟು ಮಲಗಿದನು (67-68). (ಹಿಂದೆ ಸಾಂಬನ ಹೊಟ್ಟೆಯಿಂದ ಉತ್ಪನ್ನವಾದ) ಮುಸಲದ ಅವಶೇಷವಾದ ತೋಮರವನ್ನು ತನ್ನ ಬಾಣದ ತುದಿಗೆ ಅಳವಡಿಸಿಕೊಂಡಿದ್ದ ಜರಾ ಎಂಬ ಬೇಡನು ಆ ಸಮಯದಲ್ಲಿ ಆಗಮಿಸಿದನು. ದೂರದಲ್ಲಿದ್ದ ಬೇಡನಿಗೆ ಶ್ರೀಕೃಷ್ಣನ ಪಾದವು ಜಿಂಕೆಯ ಆಕಾರದಲ್ಲಿ ಗೋಚರಿಸಿತು. (ಜಿಂಕೆಯೆಂದು ಭ್ರಮಿಸಿ) ಆತನು ತೋಮರವಿದ್ದ ಬಾಣದಿಂದ ಹೊಡೆದು ಬಿಟ್ಟನು (69-70). ಅನಂತರ ಚತುರ್ಭುಜನಾದ ಮಾನವನೆಂಬುದು ಬೇಡನಿಗೆ ಗೊತ್ತಾಗಲು, ಆತನು ಬಂದು ನಮಸ್ಕರಿಸಿ 'ತನ್ನನ್ನು ಕ್ಷಮಿಸಬೇಕು, ಮನ್ನಿಸಬೇಕು' ಎಂದು ಮತ್ತೆ ಮತ್ತೆ ಬೇಡಿಕೊಂಡನು. "ನನಗೆ ಗೊತ್ತಾಗದೆ ಬಾಣವನ್ನು ಹೊಡೆದೆ. ಜಿಂಕೆಯೆಂದು ಭ್ರಾಂತನಾದೆನು.

---

* ಅನುಬಂಧವನ್ನು ನೋಡಿ.

**ಅಜಾನತಾ ಕೃತಮಿದಂ ಮಯಾ ಹರಿಣಶಂಕಯಾ।**
**ಕ್ಷಮ್ಯತಾಂ ಮಮ ಪಾಪೇನ ದಗ್ಧಂ ಮಾಂ ತ್ರಾತುಮರ್ಹಸಿ॥ 72**

*ಶ್ರೀಪರಾಶರ ಉವಾಚ:*

**ತತಸ್ತಂ ಭಗವಾನಾಹ ನ ತೇಽಸ್ತು ಭಯಮಣ್ವಪಿ।**
**ಗಚ್ಛ ತ್ವಂ ಮತ್ ಪ್ರಸಾದೇನ ಲುಬ್ಧ ಸ್ವರ್ಗಂ ಸುರಾಸ್ಪದಮ್॥ 73**

**ವಿಮಾನಮಾಗತಂ ಸದ್ಯಸ್ತದ್ವಾಕ್ಯಸಮನಂತರಮ್।**
**ಆರುಹ್ಯ ಪ್ರಯಯೌ ಸ್ವರ್ಗಂ ಲುಬ್ಧಕಸ್ತತ್ ಪ್ರಸಾದತಃ॥ 74**

**ಗತೇ ತಸ್ಮಿನ್ ಸ ಭಗವಾನ್ ಸಂಯೋಜ್ಯಾತ್ಮಾನಮಾತ್ಮನಿ।**
**ಬ್ರಹ್ಮಭೂತೇಽವ್ಯಯೇಽಚಿಂತ್ಯೇ ವಾಸುದೇವಮಯೇಽಮಲೇ॥ 75**

**ಅಜನ್ಮನ್ಯಮರೇ ವಿಷ್ಣಾವಪ್ರಮೇಯೇಽಖಿಲಾತ್ಮನಿ।**
**ತತ್ಯಾಜ ಮಾನುಷಂ ದೇಹಮತೀತ್ಯ ತ್ರಿವಿಧಾಂ ಗತಿಮ್॥ 76**

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಸಪ್ತತ್ರಿಂಶೋಽಧ್ಯಾಯಃ

---

ಕ್ಷಮಿಸಬೇಕು. ಪಾಪದಿಂದ ದಗ್ಧನಾದ ನನ್ನನ್ನು ಕಾಪಾಡಬೇಕು" ಎಂದು ಪ್ರಾರ್ಥಿಸಿದನು (71-72). ಆಗ ಭಗವಂತನು "ವ್ಯಾಧ, ಸ್ವಲ್ಪವೂ ಹೆದರಬೇಡ. ನನ್ನ ಕೃಪೆಯಿಂದ ದೇವತೆಗಳಿರುವ ಸ್ವರ್ಗಕ್ಕೆ ಹೋಗುವೆ" ಎಂದನು. ಶ್ರೀಕೃಷ್ಣನು ಹೀಗೆ ನುಡಿದೊಡನೆ ದೇವವಿಮಾನವೊಂದು ಆಗಮಿಸಿತು. ಭಗವಂತನ ಅನುಗ್ರಹದಿಂದ ಆ ವ್ಯಾಧನು ವಿಮಾನವನ್ನೇರಿ ಸ್ವರ್ಗಕ್ಕೆ ಹೋದನು (73-74). ಆಮೇಲೆ ಶ್ರೀಕೃಷ್ಣನು ತನ್ನ ಆತ್ಮವನ್ನು ಅವ್ಯಯವೂ, ಅಚಿಂತ್ಯವೂ, ವಾಸುದೇವ ಮಯವೂ, ನಿರ್ಮಲವೂ, ಅಜನ್ಮವೂ, ಅಮರವೂ, ವಿಷ್ಣುಶಬ್ದಬೋಧ್ಯವೂ, ಅಪ್ರಮೇಯವೂ, ಅಖಿಲಾತ್ಮಸ್ವರೂಪವೂ ಆದ ಪರಬ್ರಹ್ಮದಲ್ಲಿ ಲಯಗೊಳಿಸಿ, ಗುಣತ್ರಯಾತ್ಮಕವಾದ ಗತಿಯನ್ನು ದಾಟಿ ಮನುಷ್ಯ ದೇಹವನ್ನು ಪರಿತ್ಯಜಿಸಿದನು (75-76).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಮೂವತ್ತೇಳನೆಯ ಅಧ್ಯಾಯ ಮುಗಿಯಿತು.

## ಅಷ್ಟಾತ್ರಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಅರ್ಜುನೋಽಪಿ ತದಾನ್ವಿಷ್ಯ ರಾಮಕೃಷ್ಣಕಲೇವರೇ।**
**ಸಂಸ್ಕಾರಂ ಲಂಭಯಾಮಾಸ ತಥಾನ್ಯೇಷಾಮನುಕ್ರಮಾತ್॥** 1

**ಅಷ್ಟಾ ಮಹಿಷ್ಯಃ ಕಥಿತಾ ರುಕ್ಮಿಣೀಪ್ರಮುಖಾಸ್ತು ಯಾಃ।**
**ಉಪಗುಹ್ಯ ಹರೇರ್ದೇಹಂ ವಿವಿಶುಸ್ತಾ ಹುತಾಶನಮ್॥** 2

**ರೇವತೀ ಚಾಪಿ ರಾಮಸ್ಯ ದೇಹಮಾಶ್ಲಿಷ್ಯ ಸತ್ತಮಾ।**
**ವಿವೇಶ ಜ್ವಲಿತಂ ವಹ್ನಿಂ ತತ್ಸಂಗಾಹ್ಲಾದಶೀತಲಮ್॥** 3

**ಉಗ್ರಸೇನಸ್ತು ತತ್‌ಶ್ರುತ್ವಾ ತಥೈವಾನಕದುಂದುಭಿಃ।**
**ದೇವಕೀ ರೋಹಿಣೀ ಚೈವ ವಿವಿಶುರ್ಜಾತವೇದಸಮ್॥** 4

---

### ಅಧ್ಯಾಯ 38

ಅರ್ಜುನನಿಂದ ಯಾದವರ ಅಂತ್ಯೇಷ್ಟಿಸಂಸ್ಕಾರ. ದಸ್ಯುಗಳಿಂದ ಆತನ ಪರಾಭವ. ವ್ಯಾಸರು ಅರ್ಜುನನ್ನು ಸಂತೈಸುವುದು. ಪರೀಕ್ಷಿತನಿಗೆ ರಾಜ್ಯಾಭಿಷೇಕ. ಪಾಂಡವರ ಸ್ವರ್ಗಾರೋಹಣ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಇತ್ತ ಅರ್ಜುನನು ಬಲರಾಮ ಮತ್ತು ಶ್ರೀಕೃಷ್ಣ—ಇವರ ದೇಹಗಳನ್ನು ಹುಡುಕಿ ತೆಗೆದು, ಅವರಿಗೂ ಇತರ ಮುಖ್ಯ ಯಾದವರಿಗೂ ಅನುಕ್ರಮವಾಗಿ ಅಂತ್ಯೇಷ್ಟಿಸಂಸ್ಕಾರಗಳನ್ನು ನಡೆಸಿದನು (1). ಶ್ರೀಕೃಷ್ಣನಿಗೆ ರುಕ್ಮಿಣೀ ಮೊದಲಾದ ಅಷ್ಟಮಹಿಷಿಯರಿದ್ದರೆಂದು ಹೇಳಿದ್ದೇನಷ್ಟೆ. ಅವರೆಲ್ಲರೂ ಶ್ರೀಕೃಷ್ಣನ ದೇಹವನ್ನಪ್ಪಿಕೊಂಡು ಅಗ್ನಿಪ್ರವೇಶಮಾಡಿದರು. ಸತೀಮಣಿಯಾದ ರೇವತಿಯೂ ಸಹ ಬಲರಾಮನ ದೇಹವನ್ನಾಲಂಗಿಸಿಕೊಂಡು ಉರಿಯುವ ಬೆಂಕಿಯಲ್ಲಿ ಬಿದ್ದಳು. ಪತಿಯ ಅಂಗ ಸಂಗದಿಂದ ಬೆಂಕಿಯು ಅವಳಿಗೆ ಶೀತಳವೆಂದು ಪ್ರತೀತವಾಯಿತು (2-3). ಉಗ್ರಸೇನ, ವಾಸುದೇವ, ದೇವಕಿ, ರೋಹಿಣಿ—ಇವರು ಆ ದುರಂತವಾರ್ತೆ

**ತತೋಽರ್ಜುನಃ ಪ್ರೇತಕಾರ್ಯಂ ಕೃತ್ವಾ ತೇಷಾಂ ಯಥಾವಿಧಿ।**
**ನಿಶ್ಚಕ್ರಾಮ ಜನಂ ಸರ್ವಂ ಗೃಹೀತ್ವಾ ವಜ್ರಮೇವ ಚ॥ 5**

**ದ್ವಾರವತ್ಯಾ ವಿನಿಷ್ಕ್ರಾಂತಾಃ ಕೃಷ್ಣಪತ್ನ್ಯಃ ಸಹಸ್ರಶಃ।**
**ವಜ್ರಂ ಜನಂ ಚ ಕೌಂತೇಯಃ ಪಾಲಯನ್ ಶನಕೈರ್ಯಯೌ॥ 6**

**ಸಭಾ ಸುಧರ್ಮಾ ಕೃಷ್ಣೇನ ಮರ್ತ್ಯಲೋಕೇ ಸಮುಜ್ಝಿತೇ।**
**ಸ್ವರ್ಗಂ ಜಗಾಮ ಮೈತ್ರೇಯ ಪಾರಿಜಾತಶ್ಚ ಪಾದಪಃ॥ 7**

**ಯಸ್ಮಿಂದಿನೇ ಹರಿರ್ಯಾತೋ ದಿವಂ ಸಂತ್ಯಜ್ಯ ಮೇದಿನೀಮ್।**
**ತಸ್ಮಿನ್ನೇವಾವತೀರ್ಣೋಽಯಂ ಕಾಲಕಾಯೋ ಬಲೀ ಕಲಿಃ॥ 8**

**ಪ್ಲಾವಯಾಮಾಸ ತಾಂ ಶೂನ್ಯಾಂ ದ್ವಾರಕಾಂ ಚ ಮಹೋದಧಿಃ।**
**ವಾಸುದೇವಗೃಹಂ ತ್ವೇಕಂ ನ ಪ್ಲಾವಯತಿ ಸಾಗರಃ॥ 9**

---

ಯನ್ನು ಕೇಳಿ ಅಗ್ನಿಪ್ರವೇಶ ಮಾಡಿದರು. ಅನಂತರ ಅರ್ಜುನನು ಅವರೆಲ್ಲರಿಗೂ ಯಥಾವಿಧಿಯಾಗಿ ಪ್ರೇತಕಾರ್ಯವನ್ನು ನಡೆಸಿ ಉಳಿದ ಜನರನ್ನೂ ವಜ್ರ ಕುಮಾರನನ್ನೂ ಕರೆದುಕೊಂಡು ದ್ವಾರಕೆಯಿಂದ ಹೊರಟನು (4-5). ಶ್ರೀಕೃಷ್ಣನ ಇತರ ಸಾವಿರಾರು ಪತ್ನಿಯರೂ ದ್ವಾರಕೆಯಿಂದ ಹೊರಟರು. ಅವರನ್ನೂ ವಜ್ರನನ್ನೂ ಪೌರಜನರನ್ನೂ ಕಾವಲಾಗಿ ರಕ್ಷಿಸುತ್ತ ಕೌಂತೇಯನು ಮೆಲ್ಲಮೆಲ್ಲನೆ ಪ್ರಯಾಣ ಮಾಡಿದನು (6). ಮೈತ್ರೇಯ, ಶ್ರೀಕೃಷ್ಣನು ಮರ್ತ್ಯಲೋಕವನ್ನು ತ್ಯಜಿಸಿದೊಡನೆ ಸುಧರ್ಮಾ ಎಂಬ ಇಂದ್ರ ಸಭಾಮಂದಿರವೂ ಪಾರಿಜಾತ ವೃಕ್ಷವೂ ಸ್ವರ್ಗಕ್ಕೆ ಹೊರಟುಹೋದವು. ಯಾವದಿನ ಶ್ರೀ ಹರಿಯು ಭೂಮಿಯನ್ನು ಬಿಟ್ಟು ಸ್ವರ್ಗಕ್ಕೆ ಹೊರಟು ಹೋದನೋ, ಆ ದಿನವೇ ಮಲಿನ ಕಾಯನೂ ಬಲಾಢ್ಯನೂ ಆದ ಕಲಿಯು ಭೂಲೋಕವನ್ನು ಪ್ರವೇಶಿಸಿದನು! (7-8). ಶೂನ್ಯವಾಗಿದ್ದ ದ್ವಾರಕೆಯನ್ನು ಮಹಾಸಾಗರವು ತೇಲಿಸಿ ಮುಳುಗಿಸಿ ಬಿಟ್ಟಿತು. ಆದರೆ ಶ್ರೀಕೃಷ್ಣನ ಮಂದಿರವೊಂದನ್ನು ಮಾತ್ರ ಮುಳುಗಿಸಲಿಲ್ಲ. ಮೈತ್ರೇಯ, ಈಗಲೂ ಸಹ ಆ ಮಂದಿರವನ್ನಾಕ್ರಮಿಸಲು ಸಮುದ್ರಕ್ಕೆ ಸಾಮರ್ಥ್ಯ

**ನಾತಿಕ್ರಾಂತುಮಲಂ ಬ್ರಹ್ಮಂಸ್ತದದ್ಯಾಪಿ ಮಹೋದಧಿಃ।**
**ನಿತ್ಯಂ ಸನ್ನಿಹಿತಸ್ತತ್ರ ಭಗವಾನ್ ಕೇಶವೋ ಯತಃ॥** 10

**ತದತೀವ ಮಹಾಪುಣ್ಯಂ ಸರ್ವಪಾತಕನಾಶನಮ್।**
**ವಿಷ್ಣುಕ್ರಿಯಾನ್ವಿತಂ ಸ್ಥಾನಂ ದೃಷ್ಟ್ವಾ ಪಾಪಾದ್ವಿಮುಚ್ಯತೇ॥** 11

**ಪಾರ್ಥಃ ಪಂಚನದೇ ದೇಶೇ ಬಹುಧಾನ್ಯಧನಾನ್ವಿತೇ।**
**ಚಕಾರ ವಾಸಂ ಸರ್ವಸ್ಯ ಜನಸ್ಯ ಮುನಿಸತ್ತಮ॥** 12

**ತತೋ ಲೋಭಸ್ಸಮಭವತ್ಪಾರ್ಥೇನೈಕೇನ ಧನ್ವಿನಾ।**
**ದೃಷ್ಟ್ವಾ ಸ್ತ್ರಿಯೋ ನೀಯಮಾನಾ ದಸ್ಯೂನಾಂ ನಿಹತೇಶ್ವರಾಃ॥** 13

**ತತಸ್ತೇ ಪಾಪಕರ್ಮಾಣೋ ಲೋಭೋಪಹೃತಚೇತಸಃ।**
**ಆಭೀರಾ ಮಂತ್ರಯಾಮಾಸುಸ್ಸಮೇತ್ಯಾತ್ಯಂತದುರ್ಮದಾಃ॥** 14

---

ವಿಲ್ಲ. ಏಕೆಂದರೆ, ಭಗವಾನ್ ಕೇಶವನು ಅದರಲ್ಲಿ ಸದಾ ಸಂನಿಹಿತನಾಗಿರುತ್ತಾನೆ (9-10). ಅದು ಭಗವಾನ್ ವಿಷ್ಣುವಿನ ಮಹಿಮಾನ್ವಿತವಾದ ಸ್ಥಾನ. ಅತ್ಯಂತ ಪುಣ್ಯಜನಕವೂ ಮಹಾಪಾತಕನಾಶಕವೂ ಆದದ್ದು. ಅದನ್ನು ನೋಡಿದರೆ ಸಾಕು, ಮಾನವನು ಪಾಪದಿಂದ ಬಿಡುಗಡೆ ಹೊಂದುತ್ತಾನೆ* (11). ಮೈತ್ರೇಯ, ಪಾರ್ಥನು ಅವರೆಲ್ಲರನ್ನೂ ಕರೆದುಕೊಂಡು ಹೋಗುತ್ತ ನಡುವೆ ಧನಧಾನ್ಯ ಸಮೃದ್ಧವಾದ ಪಂಚನದ (ಪಂಜಾಬ್) ದೇಶದಲ್ಲಿ ತಂಗಿದನು. ಆಗ ಅಲ್ಲಿದ್ದ ದಸ್ಯುಗಳಿಗೆ ಒಬ್ಬನೇ ಪಾರ್ಥನು ಧನುರ್ಧಾರಿಯಾಗಿ ಅನಾಥರಾದ ಅಷ್ಟು ಸ್ತ್ರೀಯರನ್ನು ಕರೆದೊಯ್ಯುತ್ತಿರುವುದನ್ನು ಕಂಡು ದುರಾಸೆ ಹುಟ್ಟಿತು (12-13). ಆಸೆಯಿಂದ ಆ ಪಾಪಿಗಳಿಗೆ ಬುದ್ಧಿ ಕೆಟ್ಟಿತು. ಅತ್ಯಂತಮದಾಂಧರಾದ ಆಭೀರ§ ದಸ್ಯುಗಳು ಗುಂಪಾಗಿ ಸೇರಿ ಆಲೋಚಿಸಿದರು: "ಅರ್ಜುನನೆಂಬ ಈ ಒಬ್ಬಂಟಿಗನು ಧನುರ್ಧಾರಿಯಾಗಿ ಅನಾಥರಾದ ಈ ಸ್ತ್ರೀಜನರನ್ನು ಕರೆದೊಯ್ಯು

---

* ಮಹಾಭಾರತದಲ್ಲಿ ದ್ವಾರಕೆಯೆಲ್ಲವೂ ಸಮುದ್ರದಲ್ಲಿ ಮುಳುಗಿತೆಂದು ಹೇಳಿದೆ. ಶ್ರೀಕೃಷ್ಣಮಂದಿರದ ವಿಷಯವಿಲ್ಲ.

§ ಆಭೀರ = ಕವಾಡಿಗ.

**ಅಯಮೇಕೋಽರ್ಜುನೋ ಧನ್ವೀ ಸ್ತ್ರೀಜನಂ ನಿಹತೇಶ್ವರಮ್।**
**ನಯತ್ಯಸ್ಮಾನತಿಕ್ರಮ್ಯ ಧಿಗೇತದ್ಭವತಾಂ ಬಲಮ್॥** 15

**ಹತ್ವಾ ಗರ್ವಸಮಾರೂಢೋ ಭೀಷ್ಮದ್ರೋಣಜಯದ್ರಥಾನ್।**
**ಕರ್ಣಾದೀಂಶ್ಚ ನ ಜಾನಾತಿ ಬಲಂ ಗ್ರಾಮನಿವಾಸಿನಾಮ್॥** 16

**ಯಷ್ಟಿಹಸ್ತಾನವೇಕ್ಷ್ಯಾಸ್ಮಾನ್ ಧನುಷ್ಪಾಣಿಸ್ಸ ದುರ್ಮತಿಃ।**
**ಸರ್ವಾನೇವಾವಜಾನಾತಿ ಕಿಂ ವೋ ಬಾಹುಭಿರುನ್ನತೈಃ॥** 17

**ತತೋ ಯಷ್ಟಿಪ್ರಹರಣಾ ದಸ್ಯವೋ ಲೋಷ್ಟಧಾರಿಣಃ।**
**ಸಹಸ್ರಶೋಽಭ್ಯಧಾವಂತ ತಂ ಜನಂ ನಿಹತೇಶ್ವರಮ್॥** 18

**ತತೋ ನಿರ್ಭರ್ತ್ಸ್ಯ ಕೌಂತೇಯಃ ಪ್ರಾಹಾಭೀರಾನ್ ಹಸನ್ನಿವ।**
**ನಿವರ್ತಧ್ವಮಧರ್ಮಜ್ಞಾ ಯದಿ ನ ಸ್ಥ ಮುಮೂರ್ಷವಃ॥** 19

**ಅವಜ್ಞಾಯ ವಚಸ್ತಸ್ಯ ಜಗೃಹುಸ್ತೇ ತದಾ ಧನಮ್।**
**ಸ್ತ್ರೀಧನಂ ಚೈವ ಮೈತ್ರೇಯ ವಿಷ್ವಕ್ಸೇನಪರಿಗ್ರಹಮ್॥** 20

---

ತ್ತಿದ್ದಾನೆ. ನಮ್ಮನ್ನು ಅಸಡ್ಡೆಯಿಂದ ಉಲ್ಲಂಘಿಸಿ ಹೋಗುತ್ತಿದ್ದಾನಲ್ಲ , ಥೂ! ನಿಮ್ಮ ಬಲಕ್ಕೆ ಧಿಕ್ಕಾರ! (14-15). ಭೀಷ್ಮ, ದ್ರೋಣ, ಜಯದ್ರಥ, ಕರ್ಣ ಮುಂತಾದವರನ್ನು ತಾನು ಸಂಹರಿಸಿದ್ದೇನೆಂದು ಇವನಿಗೆ ಗರ್ವ ಬಂದಿದೆ! ಹಳ್ಳಿಗರ ಬಲವೇನೆಂಬುದು ಇವನಿಗೆ ಗೊತ್ತಿಲ್ಲ! ನಮ್ಮ ಕೈಗಳಲ್ಲಿ ದೊಣ್ಣೆಗಳಿದ್ದರೆ ತನ್ನ ಕೈಯಲ್ಲಿ ಧನುಸ್ಸಿದೆಯೆಂದು ಈ ದುಷ್ಟನು ನಮ್ಮನ್ನು ಲೆಕ್ಕಿಸುತ್ತಿಲ್ಲ! ನಿಮಗೆ ಪುಷ್ಟವಾದ ರಟ್ಟೆಗಳಿದ್ದುದಕ್ಕೆ ಪ್ರಯೋಜನವೇನಾಯಿತು?" (16-17). ಹೀಗೆ ಮಾತಾಡಿಕೊಂಡು ಸಾವಿರಾರು ಮಂದಿ ಆ ದಸ್ಯುಗಳು ಕಲ್ಲು ದೊಣ್ಣೆಗಳನ್ನು ಹಿಡಿದು, ಅನಾಥರಾಗಿದ್ದ ದ್ವಾರಕಾವಾಸಿ ಜನರನ್ನು ಆಕ್ರಮಿಸಿದರು. ಆಗ ಅರ್ಜುನನು ದಸ್ಯುಗಳನ್ನು ಗದರಿಸಿ ನಗುವನೋ ಎಂಬಂತೆ ಲೀಲಾಮಾತ್ರದಿಂದ "ಎಲೈ ಪಾಪಿಗಳೆ, ನಿಮಗೆ ಸಾಯುವ ಇಚ್ಛೆ ಇಲ್ಲವಾದರೆ ಹಿಂದಕ್ಕೆ ಸರಿಯಿರಿ!" ಎಂದು ಎಚ್ಚರಿಸಿದನು (18-19). ಆತನ ಮಾತನ್ನು ಲೆಕ್ಕಿಸದೆ ಆ ದುರುಳರು ಧನವನ್ನು ಲೂಟಿಮಾಡಿದರಲ್ಲದೆ ಶ್ರೀಕೃಷ್ಣನ ಪರಿಗ್ರಹವಾದ ಸ್ತ್ರೀಧನವನ್ನೂ

**ತತೋಽರ್ಜುನೋ ಧನುರ್ದಿವ್ಯಂ ಗಾಂಡೀವಮಜರಂ ಯುಧಿ।**
**ಆರೋಪಯಿತುಮಾರೇಭೇ ನ ಶಶಾಕ ಚ ವೀರ್ಯವಾನ್॥ 21**

**ಚಕಾರ ಸಜ್ಯಂ ಕೃಚ್ಛ್ರಾಚ್ಚ ತಚ್ಚಾಭೂಚ್ಛಿಥಿಲಂ ಪುನಃ।**
**ನ ಸಸ್ಮಾರ ತತೋಽಸ್ತ್ರಾಣಿ ಚಿಂತಯನ್ನಪಿ ಪಾಂಡವಃ॥ 22**

**ಶರಾನ್ಮುಮೋಚ ಚೈತೇಷು ಪಾರ್ಥೋ ವೈರಿಷ್ವಮರ್ಷಿತಃ।**
**ತ್ವಗ್ಭೇದಂ ತೇ ಪರಂ ಚಕ್ರುರಸ್ತಾ ಗಾಂಡೀವಧನ್ವಿನಾ॥ 23**

**ವಹ್ನಿನಾ ಯೇಽಕ್ಷಯಾ ದತ್ತಾಶ್ಶರಾಸ್ತೇಽಪಿ ಕ್ಷಯಂ ಯಯುಃ।**
**ಯುದ್ಧ್ಯತಸ್ಸಹ ಗೋಪಾಲೈರರ್ಜುನಸ್ಯ ಭವಕ್ಷಯೇ॥ 24**

**ಅಚಿಂತಯಚ್ಚ ಕೌಂತೇಯಃ ಕೃಷ್ಣಸ್ಯೈವ ಹಿ ತದ್ಬಲಮ್।**
**ಯನ್ಮಯಾ ಶರಸಂಘಾತೈಸ್ಸಕಲಾ ಭೂಭೃತೋ ಹತಾಃ॥ 25**

---

ವಶಪಡಿಸಿಕೊಂಡರು. ಆಗ ವೀರನಾದ ಅರ್ಜುನನು ಯುದ್ಧದಲ್ಲಿ ಅಕ್ಷೋಭ್ಯರು ದಿವ್ಯವೂ ಆದ ಗಾಂಡೀವ ಧನುಸ್ಸನ್ನು ಎತ್ತಿ ಹೆದೆಯೇರಿಸಲು ಪ್ರಯತ್ನಿಸಿದನು. ಹೆದೆಯೇರಿಸಲಾಗಲಿಲ್ಲ! (20-21). ಕಷ್ಟದಿಂದ ಜಗ್ಗಿ ಹೇಗೋ ಜೋಡಿಸಿದರೂ ಮತ್ತೆ ಸಡಿಲವಾಯಿತು! ತನ್ನ ಮಂತ್ರಾಸ್ತ್ರಗಳನ್ನು ಚಿಂತಿಸಿದನು; ಒಂದೂ ಸ್ಮರಣೆಗೆ ಬರಲಿಲ್ಲ! ಕಡೆಗೆ ಪಾರ್ಥನು ಕ್ರುದ್ಧನಾಗಿ ಕೆಲವು ಬಾಣಗಳನ್ನು ವೈರಿಗಳ ಮೇಲೆ ಪ್ರಯೋಗಿಸಿದನು. ಗಾಂಡೀವಿಯು ಬಿಟ್ಟ ಆ ಬಾಣಗಳು ದಸ್ಯುಗಳ ಚರ್ಮದಲ್ಲಿ ಮಾತ್ರ ಗಾಯಗೊಳಿಸಿದವು! (22-23). ಅಗ್ನಿದೇವನು ಅರ್ಜುನನಿಗೆ ಅನುಗ್ರಹಿಸಿದ ಯಾವ ಅಕ್ಷಯ ಬಾಣಗಳಿದ್ದವೋ ಅವೂ ಸಹ ಆ ಗೊಲ್ಲರೊಡನೆ ಹೋರಾಡುವಾಗ ಉತ್ಪತ್ತಿ*ನಾಶವಾದ್ದರಿಂದ ಕ್ಷಯಿಸಿ ಹೋದವು! (24). ಆಗ ಕೌಂತೇಯನು "ಆಹಾ! ಹಿಂದೆ ನನ್ನ ಶರಜಾಲಗಳಿಂದ ಎದುರಾದ ಸಕಲ ಭೂಪಾಲರನ್ನೂ ವಿಧ್ವಂಸಗೊಳಿಸಿದ್ದೆನು. ಅವೆಲ್ಲವೂ ಶ್ರೀಕೃಷ್ಣನ ಮಹಿಮೆಯೇ ಸರಿ!" ಎಂದು ತಿಳಿದನು (25). ಆ ಪಾಂಡುಪುತ್ರನ

---

* ಮೂಲದಲ್ಲಿರುವ 'ಭವಕ್ಷಯ' ಶಬ್ದಕ್ಕೆ 'ಉತ್ಪತ್ತಿನಾಶ' ಎಂದು ಶ್ರೀಧರಸ್ವಾಮಿಗಳು ಅರ್ಥಬರೆದಿದ್ದಾರೆ. ಬಹುಶಃ 'ಅರ್ಜುನನ ಅಥವಾ ಅಕ್ಷಯಾಸ್ತ್ರಗಳ ಉತ್ಪತ್ತಿ ಕಾರಣವು ಮುಗಿದಿದ್ದರಿಂದ' ಎಂದು ಅಭಿಪ್ರಾಯವಿರಬಹುದು.

**ಮಿಷತಃ ಪಾಂಡುಪುತ್ರಸ್ಯ ತತಸ್ತಾಃ ಪ್ರಮದೋತ್ತಮಾಃ।**
**ಆಭೀರೈರಪಕೃಷ್ಯಂತ ಕಾಮಂ ಚಾನ್ಯಾಃ ಪ್ರದುದ್ರುವುಃ॥** 26

**ತತಶ್ಶರೇಷು ಕ್ಷೀಣೇಷು ಧನುಷ್ಕೋಟ್ಯಾ ಧನಂಜಯಃ।**
**ಜಘಾನ ದಸ್ಯೂಂಸ್ತೇ ಚಾಸ್ಯ ಪ್ರಹಾರಾನ್ ಜಹಸುರ್ಮುನೇ॥** 27

**ಪ್ರೇಕ್ಷತಸ್ತಸ್ಯ ಪಾರ್ಥಸ್ಯ ವೃಷ್ಣ್ಯಂಧಕವರಸ್ತ್ರಿಯಃ।**
**ಜಗ್ಮುರಾದಾಯ ತೇ ಮ್ಲೇಚ್ಛಾಃ ಸಮಸ್ತಾ ಮುನಿಸತ್ತಮ॥** 28

**ತತಸ್ಸುದುಃಖಿತೋ ಜಿಷ್ಣುಃ ಕಷ್ಟಂ ಕಷ್ಟಮಿತಿ ಬ್ರುವನ್।**
**ಅಹೋ ಭಗವತಾಽನೇನ ವಂಚಿತೋಽಸ್ಮಿ ರುರೋದ ಹ॥** 29

**ತದ್ಧನುಸ್ತಾನಿ ಶಸ್ತ್ರಾಣಿ ಸ ರಥಸ್ತೇ ಚ ವಾಜಿನಃ।**
**ಸರ್ವಮೇಕಪದೇ ನಷ್ಟಂ ದಾನಮಶ್ರೋತ್ರಿಯೇ ಯಥಾ॥** 30

**ಅಹೋಽತಿಬಲವದ್ದೈವಂ ವಿನಾ ತೇನ ಮಹಾತ್ಮನಾ।**
**ಯದಸಾಮರ್ಥ್ಯಯುಕ್ತೇಽಪಿ ನೀಚವರ್ಗೇ ಜಯಪ್ರದಮ್॥** 31

---

ಕಣ್ಣೆದುರಿಗೇ ಗೊಲ್ಲರು ಉತ್ತಮಸ್ತ್ರೀಯರನ್ನು ಹಿಡಿದೆಳೆದುಕೊಂಡು ಹೋದರು. ಉಳಿದ ಸ್ತ್ರೀಯರು ಎತ್ತೆತ್ತಲೋ ಓಡಿಹೋದರು! ಶರಗಳೆಲ್ಲವೂ ಕ್ಷಯಿಸಲಾಗಿ ಅರ್ಜುನನು ಧನುಸ್ಸಿನ ತುದಿಯಿಂದಲೇ ದಸ್ಯುಗಳನ್ನು ತಿವಿಯಲಾರಂಭಿಸಿದನು. ಆ ತಿವಿತಗಳನ್ನು ಲೆಕ್ಕಿಸದೆ, ಮೈತ್ರೇಯ, ದಸ್ಯುಗಳು ನಗುತ್ತಿದ್ದರು! (26-27). ಅರ್ಜುನನು ಕಣ್ಣಿಂದ ನೋಡುತ್ತಿರುವಾಗಲೇ ಆ ಮ್ಲೇಚ್ಛರು ಸಮಸ್ತ ಯಾದವರ ವರಸ್ತ್ರೀಯರನ್ನು ಅಪಹರಿಸಿಕೊಂಡು ಹೊರಟುಹೋದರು. ಅರ್ಜುನನು ಅತ್ಯಂತ ದುಃಖಿತನಾಗಿ "ಅಯ್ಯೋ, ಕಷ್ಟ ಕಷ್ಟ! ಭಗವಂತನು ನನ್ನ ಕೈ ಬಿಟ್ಟನು" ಎಂದು ಅಳತೊಡಗಿದನು (28-29). "ಅದೇ ಧನುಸ್ಸು ಅವೇ ಅಸ್ತ್ರಗಳು, ಅದೇ ರಥ ಅವೇ ಅಶ್ವಗಳು! ಅಶ್ರೋತ್ರಿಯನಿಗೆ ಕೊಟ್ಟ ದಾನದಂತೆ ಎಲ್ಲವೂ ಒಟ್ಟಿಗೆ ನಾಶವಾದವು! ಅಬ್ಬಾ! ದೈವ ಅತ್ಯಂತ ಬಲಶಾಲಿ! ಯಾವ ಸಾಮರ್ಥ್ಯವೂ ಇಲ್ಲದ ಈ ತುಚ್ಛಜನರಿಗೆ ಜಯವನ್ನು ಗಳಿಸಿಕೊಟ್ಟಿತಲ್ಲ! ಇದೆಲ್ಲವೂ ಆ ಮಹಾತ್ಮನೊಬ್ಬನು (ಶ್ರೀಕೃಷ್ಣನು) ಇಲ್ಲದ್ದರಿಂದ (30-31). ಅವೇ ಈ

**ತೌ ಬಾಹೂ ಸ ಚ ಮೇ ಮುಷ್ಟಿಃ ಸ್ಥಾನಂ ತತ್ಸೋಽಸ್ಮಿ ಚಾರ್ಜುನಃ।**
**ಪುಣ್ಯೈರ್ನೈವ ವಿನಾ ತೇನ ಗತಂ ಸರ್ವಮಸಾರತಾಮ್॥ 32**

**ಮಮಾರ್ಜುನತ್ವಂ ಭೀಮಸ್ಯ ಭೀಮತ್ವಂ ತತ್ಕೃತೇ ಧ್ರುವಮ್।**
**ವಿನಾ ತೇನ ಯದಾಭೀರೈರ್ಜಿತೋಽಹಂ ರಥಿನಾಂ ವರಃ॥ 33**

*ಶ್ರೀಪರಾಶರ ಉವಾಚ:*

**ಇತ್ಥಂ ವದನ್ ಯಯೌ ಜಿಷ್ಣುರಿಂದ್ರಪ್ರಸ್ಥಂ ಪುರೋತ್ತಮಮ್।**
**ಚಕಾರ ತತ್ರ ರಾಜಾನಂ ವಜ್ರಂ ಯಾದವನಂದನಮ್॥ 34**

**ಸ ದದರ್ಶ ತತೋ ವ್ಯಾಸಂ ಫಾಲ್ಗುನಃ ಕಾನನಾಶ್ರಯಮ್।**
**ತಮುಪೇತ್ಯ ಮಹಾಭಾಗಂ ವಿನಯೇನಾಭ್ಯವಾದಯತ್॥ 35**

**ತಂ ವಂದಮಾನಂ ಚರಣಾವವಲೋಕ್ಯ ಮುನಿಶ್ಚಿರಮ್।**
**ಉವಾಚ ವಾಕ್ಯಂ ವಿಚ್ಛಾಯಃ ಕಥಮದ್ಯ ತ್ವಮೀದೃಶಃ॥ 36**

---

ಬಾಹುಗಳು, ಅದೇ ನನ್ನ ಈ ಮುಷ್ಟಿ, ಅದೇ ಸ್ಥಳ, ಆ ಅರ್ಜುನನೇ ನಾನು! ಪುಣ್ಯದರ್ಶನನಾದ ಆತನಿಲ್ಲದ್ದರಿಂದಲೇ ಇದೆಲ್ಲವೂ ನಿಃಸಾರವಾಯಿತು! ನನ್ನ ಅರ್ಜುನತ್ವ, ಭೀಮನ ಭೀಮತ್ವ—ಇದೆಲ್ಲವೂ ಅವನ ಕೃಪೆಯಿಂದಲೇ ಬಂದದ್ದು ನಿಶ್ಚಿತ. ಮಹಾರಥನಾದ ನಾನು ಅವನಿಲ್ಲದರಿಂದಲೇ ಗೊಲ್ಲರಿಗೆ ಸೋತು ಹೋದೆನು" ಎಂದುಕೊಳ್ಳುತ್ತ ರೋದಿಸಿದನು (32-33). ಹೀಗೆ ಹೇಳಿಕೊಳ್ಳುತ್ತ ಪಾರ್ಥನು ಇಂದ್ರಪ್ರಸ್ಥನಗರಕ್ಕೆ ಹೋಗಿ ಯಾದವನಂದನನಾದ ವಜ್ರನನ್ನು ಅಲ್ಲಿ ರಾಜನೆಂದು ಗೊತ್ತುಮಾಡಿದನು (34). ಅನಂತರ (ಇಂದ್ರಪ್ರಸ್ಥದಿಂದ ಹಸ್ತಿನಾವತಿಗೆ ಹೋಗುತ್ತಿರುವಾಗ) ಅರಣ್ಯದಲ್ಲಿ ವ್ಯಾಸಮಹರ್ಷಿಗಳ ಭೇಟಿಯಾಗಲು, ಅರ್ಜುನನು ವಿನಯದಿಂದ ಆ ಮಹಾತ್ಮರಿಗೆ ಅಭಿವಾದನೆ ಮಾಡಿದನು. ತಮ್ಮ ಪಾದಗಳಿಗೆ ವಂದಿಸುತ್ತಲಿದ್ದ ಅರ್ಜುನನನ್ನು ವ್ಯಾಸಮುನಿಗಳು ಬಹಳಹೊತ್ತು ಗಮನಿಸಿ ನೋಡಿ ಈ ರೀತಿ ಕೇಳಿದರು: "ಅರ್ಜುನ ಇದೇಕೆ

**ಅವೀರಜೋಽನುಗಮನಂ ಬ್ರಹ್ಮಹತ್ಯಾ ಕೃತಾಽಥ ವಾ।**
**ದೃಢಾಶಾಭಂಗದುಃಖೀವ ಭ್ರಷ್ಟಚ್ಛಾಯೋಽಸಿ ಸಾಂಪ್ರತಮ್॥ 37**

**ಸಾಂತಾನಿಕಾದಯೋ ವಾ ತೇ ಯಾಚಮಾನಾ ನಿರಾಕೃತಾಃ।**
**ಅಗಮ್ಯಸ್ತ್ರೀರತಿರ್ವಾ ತ್ವಂ ಯೇನಾಸಿ ವಿಗತಪ್ರಭಃ॥ 38**

**ಭುಂಕ್ತೇಽಪ್ರದಾಯ ವಿಪ್ರೇಭ್ಯೋ ಮಿಷ್ಟಮೇಕೋಽಥ ವಾ ಭವಾನ್।**
**ಕಿಂ ವಾ ಕೃಪಣವಿತ್ತಾನಿ ಹೃತಾನಿ ಭವತಾರ್ಜುನ॥ 39**

**ಕಚ್ಚಿನ್ನು ಶೂರ್ಪವಾತಸ್ಯ ಗೋಚರತ್ವಂ ಗತೋಽರ್ಜುನ।**
**ದುಷ್ಟಚಕ್ಷುರ್ಹತೋ ವಾಽಸಿ ನಿಶ್ರ್ಶೀಕಃ ಕಥಮನ್ಯಥಾ॥ 40**

---

ಇಷ್ಟು ಕಾಂತಿಹೀನನಾಗಿದ್ದೀಯೆ? ಏನು ರಜಸ್ವಲೆಯ* ಸಹವಾಸ ಮಾಡಿದೆಯೊ ಅಥವಾ ಬ್ರಹ್ಮಹತ್ಯೆಮಾಡಿದೆಯೊ! ದೃಢವಾಗಿ ಇಟ್ಟುಕೊಂಡಿದ್ದ ಆಸೆಗೆ ಭಂಗ ವಾಗಿ ಶೋಕಿಸತಕ್ಕವನಂತೆ ಈಗ ಕಾಂತಿಹೀನನಾಗಿ ಬಿಟ್ಟಿರುವೆಯಲ್ಲ! (35-37). ಸಂತಾನಾರ್ಥವಾಗಿ ವಿವಾಹವನ್ನು ಬಯಸತಕ್ಕವರ ಯಾಚನೆಯನ್ನೇನಾದರೂ ನಿರಾಕರಿಸಿದೆಯೋ? ಅಥವಾ ಅಗಮ್ಯಸ್ತ್ರೀಯಲ್ಲಿ ಗಮನಮಾಡಿದೆಯೋ? (38). ಅಥವಾ ಮೃಷ್ಟಾನ್ನವನ್ನು ಬ್ರಾಹ್ಮಣರಿಗೆ ನೀಡದೆ ನೀನೊಬ್ಬನೇ ತಿನ್ನುತ್ತಿದ್ದೀಯಾ? ಜಿಪುಣರು ಕೂಡಿಟ್ಟ ಹಣವನ್ನೇನಾದದರೂ ಅಪಹರಿಸಿದೆಯಾ? ಕೇರುವ ಮೊರದ ಗಾಳಿ ನಿನ್ನ ಮೇಲೆ ಬೀಸಿತೆ? ಅಥವಾ ಕೆಟ್ಟ ಕಣ್ಣಿನವರ ದೃಷ್ಟಿತಾಗಿತೆ? ಅರ್ಜುನ, ಏಕೆ ಈ ಪರಿಯಲ್ಲಿ ಶೋಭಾಹೀನನಾಗಿದ್ದೀಯೆ? (39-40). ಕಾಲುಗುರಿನ ಮೇಲೆ ಬಿದ್ದ ನೀರಾಗಲಿ ಗಡಿಗೆಯಿಂದ ಚಿಮ್ಮಿದ

---

* ಮೂಲದಲ್ಲಿ 'ಅವೀರಜೋಽನುಗಮನಂ' ಎಂಬ ಶಬ್ದವಿದೆ. ಅವೀ = ರಜಸ್ವಲೆಯಾದ ಸ್ತ್ರೀ, ವ್ಯಾಖ್ಯಾನಕಾರರು ಅವಿಗಳ = ಕುರಿಗಳ, ರಜಃ = ಧೂಳಿನ, ಅನುಗಮನಂ = ಹಿಂದೆ ಹೋಗುವುದು—ಎಂದು ಅರ್ಥಮಾಡಿದ್ದಾರೆ. ಕುರಿ, ಕತ್ತೆ ಮೊದಲಾದವು ಎಬ್ಬಿಸಿದ ಧೂಳಿಯಲ್ಲಿ ಹೋಗುವುದು ನಿಷಿದ್ಧವೆಂದು ಹೇಳಿದ್ದಾರೆ. ಅವಿ ಶಬ್ದಕ್ಕೆ ರಜಸ್ವಲೆ ಎಂಬ ಅರ್ಥವೂ ಉಂಟು (ಅವಿರ್ಭೂಪುಷ್ಪವತ್ಯೋಃ ಸ್ತ್ರೀ—ವೈಜಯಂತೀ ಕೋಶ, ವಿ..ಎಸ್. ಆಪ್ಟೆಯವರ ಶಬ್ದಾರ್ಥಕೋಶ).

**ಸ್ಪೃಷ್ಟೋ ನಖಾಂಭಸಾ ವಾಥ ಘಟವಾರ್ಯುಕ್ಷಿತೋಽಪಿವಾ।**
**ಕೇನ ತ್ವಂ ವಾಸಿ ವಿಚ್ಛಾಯೋ ನ್ಯೂನೈರ್ವಾ ಯುಧಿ ನಿರ್ಜಿತಃ॥ 41**

*ಶ್ರೀಪರಾಶರ ಉವಾಚ:*

**ತತಃ ಪಾರ್ಥೋ ವಿನಿಃಶ್ವಸ್ಯ ಶ್ರೂಯತಾಂ ಭಗವನ್ನಿತಿ।**
**ಉಕ್ತ್ವಾ ಯಥಾವದಾಚಷ್ಟೇ ವ್ಯಾಸಾಯಾತ್ಮಪರಾಭವಮ್॥ 42**

*ಅರ್ಜುನ ಉವಾಚ:*

**ಯದ್ಬಲಂ ಯಚ್ಚ ಮತ್ತೇಜೋ ಯದ್ವೀರ್ಯಂ ಯಃ ಪರಾಕ್ರಮಃ।**
**ಯಾ ಶ್ರೀಶ್ಛಾಯಾ ಚ ನಃ ಸೋಽಸ್ಮಾನ್ ಪರಿತ್ಯಜ್ಯ ಹರಿರ್ಗತಃ॥ 43**

**ಈಶ್ವರೇಣಾಪಿ ಮಹತಾ ಸ್ಮಿತಪೂರ್ವಾಭಿಭಾಷಿಣಾ।**
**ಹೀನಾ ವಯಂ ಮುನೇ ತೇನ ಜಾತಾಸ್ತೃಣಮಯಾ ಇವ॥ 44**

**ಅಸ್ತ್ರಾಣಾಂ ಸಾಯಕಾನಾಂ ಚ ಗಾಂಡೀವಸ್ಯ ತಥಾ ಮಮ।**
**ಸಾರತಾ ಯಾಽಭವನ್ಮೂರ್ತಿಸ್ಸ ಗತಃ ಪುರುಷೋತ್ತಮಃ॥ 45**

---

ನೀರಾಗಲಿ ನಿನಗೆ ಸೋಕಿತೆ? ಅಥವಾ ಕ್ಷುದ್ರಜನರಿಂದ ಯುದ್ಧದಲ್ಲಿ ಸೋತು ಹೋದೆಯೊ? ಯಾವ ಕಾರಣದಿಂದ ನಿನ್ನ ಮುಖದ ಕಳೆ ಈ ಪ್ರಕಾರ ಕಂದಿಹೋಗಿದೆ?" ಎಂದರು (41). ಆಗ ಪಾರ್ಥನು ನಿಟ್ಟುಸಿರುಬಿಟ್ಟು "ಭಗವನ್, ಕೇಳೋಣವಾಗಲಿ" ಎಂದು ನುಡಿದು, ತನಗಾದ ಸೋಲನ್ನು ವ್ಯಾಸಮುನಿಗಳಿಗೆ ಯಥಾವತ್ತಾಗಿ ತಿಳಿಸಿದನು: "ಮಹರ್ಷಿಗಳೆ, ನನ್ನ ಬಲ ನನ್ನ ತೇಜಸ್ಸು ನನ್ನ ಶೌರ್ಯ ನನ್ನ ಪರಾಕ್ರಮ ನನ್ನ ಸಂಪತ್ತು ನನ್ನ ಕಾಂತಿ—ಎಲ್ಲವೂ ಆಗಿದ್ದ ಶ್ರೀಹರಿಯು ನಮ್ಮನ್ನು ಪರಿತ್ಯಜಿಸಿ ಹೊರಟು ಹೋದನು! (42-43). ಸ್ವಯಂ ಪರಮೇಶ್ವರನಾಗಿದ್ದರೂ ನಮ್ಮೊಡನೆ ನಗು ನಗುತ್ತ ಮಾತಾಡುತ್ತಿದ್ದ ಆತನಿಂದ ವಿರಹಿತರಾದೆವು. ಈಗ ನಾವು ಹುಲ್ಲುತುಂಬಿದ ಬೊಂಬೆ ಗಳಂತಾದೆವು. ನನ್ನ ಮಂತ್ರಾಸ್ತ್ರಗಳಿಗೂ ಶರಗಳಿಗೂ ಗಾಂಡೀವಧನುಸ್ಸಿಗೂ ಮೂರ್ತಿಮತ್ತಾದ ಸಾರವಾಗಿದ್ದ ಪುರುಷೋತ್ತಮನು ಹೋಗಿಬಿಟ್ಟನು (44-45).

**ಯಸ್ಯಾವಲೋಕನಾದಸ್ಮಾನ್ ಶ್ರೀರ್ಜಯಃ ಸಂಪದುನ್ನತಿಃ।**
**ನ ತತ್ಯಾಜ ಸ ಗೋವಿಂದಸ್ತ್ಯಕ್ತ್ವಾಽಸ್ಮಾನ್ ಭಗವಾನ್ ಗತಃ॥** 46

**ಭೀಷ್ಮದ್ರೋಣಾಂಗರಾಜಾದ್ಯಾಸ್ತಥಾ ದುರ್ಯೋಧನಾದಯಃ।**
**ಯತ್ಪ್ರಭಾವೇಣ ನಿರ್ದಗ್ಧಾಸ್ಸ ಕೃಷ್ಣಸ್ತ್ಯಕ್ತವಾನ್ ಭುವಮ್॥** 47

**ನಿರ್ಯೌವನಾ ಗತಶ್ರೀಕಾ ನಷ್ಟಚ್ಛಾಯೇವ ಮೇದಿನೀ।**
**ವಿಭಾತಿ ತಾತ ನೈಕೋಽಹಂ ವಿರಹೇ ತಸ್ಯ ಚಕ್ರಿಣಃ॥** 48

**ಯಸ್ಯ ಪ್ರಭಾವಾದ್ಭೀಷ್ಮಾದ್ಯೈರ್ಮಯ್ಯಗ್ನೌ ಶಲಭಾಯಿತಮ್।**
**ವಿನಾ ತೇನಾದ್ಯ ಕೃಷ್ಣೇನ ಗೋಪಾಲೈರಸ್ಮಿ ನಿರ್ಜಿತಃ॥** 49

**ಗಾಂಡೀವಸ್ತ್ರಿಷು ಲೋಕೇಷು ಖ್ಯಾತಿಂ ಯದನುಭಾವತಃ।**
**ಗತಸ್ತೇನ ವಿನಾಭೀರಲಗುಡೈಸ್ಸ ತಿರಸ್ಕೃತಃ॥** 50

---

ಯಾವಾತನ ಕೃಪಾವಲೋಕನದಿಂದ ಶ್ರೀ, ಜಯ, ಸಂಪತ್ತು , ಉನ್ನತಿಗಳು ನಮ್ಮನ್ನು ಪರಿತ್ಯಜಿಸಲಿಲ್ಲವೋ ಆ ಭಗವಾನ್ ಗೋವಿಂದನು ನಮ್ಮನ್ನು ಬಿಟ್ಟು ಹೋದನು. ಭೀಷ್ಮ, ದ್ರೋಣ, ಕರ್ಣರೂ ದುರ್ಯೋಧನಾದಿಗಳೂ ಯಾವಾತನ ಪ್ರಭಾವದಿಂದ ದಗ್ಧರಾಗಿಹೋದರೋ ಆ ಶ್ರೀಕೃಷ್ಣನು ಭೂಮಿಯನ್ನು ತ್ಯಜಿಸಿದನು (46-47). ಮುನಿಗಳೇ, ಆ ಚಕ್ರಧಾರಿಯ ವಿಯೋಗದಿಂದ ನಾನೊಬ್ಬನೇ ಅಲ್ಲ , ಸಮಸ್ತ ಪೃಥ್ವಿಯೇ ಯೌವನ, ಶೋಭೆ, ಕಾಂತಿಗಳನ್ನು ಕಳೆದುಕೊಂಡಿತು. ಯಾವಾತನ ತೇಜಸ್ಸಿನಿಂದ ನಾನು ಅಗ್ನಿಯಾದೆನೋ ಭೀಷ್ಮಾದಿಗಳು ನನ್ನಲ್ಲಿ ಪತಂಗದ ಹುಳುಗಳಂತೆ ಬೆಂದು ಹೋದರೋ ಆ ಶ್ರೀಕೃಷ್ಣನಿಂದ ರಹಿತನಾದ ನಾನು—ಅದೇ ನಾನು ದನಕಾಯುವವರಿಂದ ಸೋತುಹೋದೆನು! (48-49). ಯಾರ ಮಹಿಮೆಯ ಬಲದಿಂದ ಗಾಂಡೀವಧನುಸ್ಸು ಮೂರುಲೋಕಗಳಲ್ಲಿಯೂ ವಿಖ್ಯಾತಿಯನ್ನು ಗಳಿಸಿತ್ತೋ ಅದೇ ಧನುಸ್ಸು, ಅವನಿಲ್ಲದ್ದರಿಂದ ಗೊಲ್ಲರ ದೊಣ್ಣೆಗಳಿಗೆ ತಲೆಬಾಗಿತು? ಮಹರ್ಷಿಗಳೆ, ನನ್ನ ರಕ್ಷಣೆಯಲ್ಲಿದ್ದ ಸಾವಿರಾರು ಸ್ತ್ರೀಯರನ್ನು

**ಸ್ತ್ರೀಸಹಸ್ರಾಣ್ಯನೇಕಾನಿ ಮನ್ನಾಥಾನಿ ಮಹಾಮುನೇ।**
**ಯತತೋ ಮಮ ನೀತಾನಿ ದಸ್ಯುಭಿರ್ಲಗುಡಾಯುಧೈಃ॥** 51

**ಆನೀಯಮಾನಮಾಭೀರೈಃ ಕೃಷ್ಣ ಕೃಷ್ಣಾವರೋಧನಮ್।**
**ಹೃತಂ ಯಷ್ಟಿಪ್ರಹರಣೈಃ ಪರಿಭೂಯ ಬಲಂ ಮಮ॥** 52

**ನಿಶ್ರೀಕತಾ ನ ಮೇ ಚಿತ್ರಂ ಯಜ್ಜೀವಾಮಿ ತದದ್ಭುತಮ್।**
**ನೀಚಾವಮಾನಪಂಕಾಂಕೀ ನಿರ್ಲಜ್ಜೋಽಸ್ಮಿ ಪಿತಾಮಹ॥** 53

*ಶ್ರೀವ್ಯಾಸ ಉವಾಚ:*

**ಅಲಂ ತೇ ವ್ರೀಡಯಾ ಪಾರ್ಥ ನ ತ್ವಂ ಶೋಚಿತುಮರ್ಹಸಿ।**
**ಅವೇಹಿ ಸರ್ವಭೂತೇಷು ಕಾಲಸ್ಯ ಗತಿರೀದೃಶೀ॥** 54

**ಕಾಲೋ ಭವಾಯ ಭೂತಾನಾಮಭವಾಯ ಚ ಪಾಂಡವ।**
**ಕಾಲಮೂಲಮಿದಂ ಜ್ಞಾತ್ವಾ ಭವ ಸ್ಥೈರ್ಯಪರೋಽರ್ಜುನ॥** 55

---

ದೊಣ್ಣೆಹಿಡಿದ ದಸ್ಯುಗಳು ಅಪಹರಿಸಿಕೊಂಡು ಹೋದರು. ನಾನು ಎಷ್ಟು ಯತ್ನಿಸಿದರೂ ಫಲಿಸಲಿಲ್ಲ (50-51). ಕೃಷ್ಣದ್ವೈಪಾಯನರೆ, ಶ್ರೀಕೃಷ್ಣನ ಅಂತಃಪುರಸ್ತ್ರೀಯರನ್ನು ನಾನು ಕರೆದುಕೊಂಡು ಬರುತ್ತಿದ್ದೆನು. ಲಾಠಿಗಳನ್ನು ಹಿಡಿದು ಬಂದ ಆ ಜನರು ನನ್ನ ಬಲವನ್ನು ಧಿಕ್ಕರಿಸಿ ಸ್ತ್ರೀಯರನ್ನೆಳೆದುಕೊಂಡು ಹೋದರು (52). ಹೇ ಪಿತಾಮಹ, ನಾನು ಕಾಂತಿಹೀನನಾಗಿರುವುದು ಅಚ್ಚರಿಯಲ್ಲ ; ಇನ್ನೂ ಬದುಕಿದ್ದೇನೆಂಬುದೇ ಅಚ್ಚರಿ! ಅಲ್ಪಜನರಿಂದಾದ ಅವಮಾನದ ಕೆಸರು ನನಗೆ ಮೆತ್ತಿಕೊಂಡಿದೆ. ನಾನು ನಿರ್ಲಜ್ಜ" ಎಂದನು (53). ಆಗ ವ್ಯಾಸಮುನಿಗಳು ಅವನನ್ನು ಸಂತೈಸುತ್ತ ಇಂತೆಂದರು: "ಪಾರ್ಥ, ಇದಕ್ಕಾಗಿ ನಾಚಿಕೆ ಪಡಬೇಡ. ನೀನು ಶೋಕಿಸುವುದು ತರವಲ್ಲ. ಸರ್ವಭೂತಗಳಲ್ಲಿಯೂ ಕಾಲಗತಿಯು ಈ ಪರಿಯಾಗಿರುತ್ತದೆಯೆಂದು ತಿಳಿ (54). ಸಮಸ್ತ ಪ್ರಾಣಿಗಳ ಜನ್ಮಕ್ಕೆ-ನಾಶಕ್ಕೆ ಕಾಲವೇ ಕಾರಣ. ಅರ್ಜುನ, ಎಲ್ಲವೂ ಕಾಲಾಧೀನವೆಂಬುದನ್ನು ತಿಳಿದು ಧೈರ್ಯವನ್ನು ತಂದುಕೊ. ನದಿಗಳು, ಸಮುದ್ರಗಳು, ಗಿರಿಗಳು, ಸಮಸ್ತ

**ನದ್ಯಃ ಸಮುದ್ರಾ ಗಿರಯಸ್ಸಕಲಾ ಚ ವಸುಂಧರಾ।**
**ದೇವಾ ಮನುಷ್ಯಾಃ ಪಶವಸ್ತರವಶ್ಚ ಸರೀಸೃಪಾಃ॥** 56

**ಸೃಷ್ಟಾಃ ಕಾಲೇನ ಕಾಲೇನ ಪುನರ್ಯಾಸ್ಯಂತಿ ಸಂಕ್ಷಯಮ್।**
**ಕಾಲಾತ್ಮಕಮಿದಂ ಸರ್ವಂ ಜ್ಞಾತ್ವಾ ಶಮಮವಾಪ್ನುಹಿ॥** 57

**ಕಾಲಸ್ವರೂಪೀ ಭಗವಾನ್ ಕೃಷ್ಣಃ ಕಮಲಲೋಚನಃ।**
**ಯಚ್ಚಾತ್ಥ ಕೃಷ್ಣಮಾಹಾತ್ಮ್ಯಂ ತತ್ತಥೈವ ಧನಂಜಯ॥** 58

**ಭಾರಾವತಾರಕಾರ್ಯಾರ್ಥಮವತೀರ್ಣಸ್ಸ ಮೇದಿನೀಮ್।**
**ಭಾರಾಕ್ರಾಂತಾ ಧರಾ ಯಾತಾ ದೇವಾನಾಂ ಸಮಿತಿಂ ಪುರಾ॥** 59

**ತದರ್ಥಮವತೀರ್ಣೋಽಸೌ ಕಾಲರೂಪೀ ಜನಾರ್ದನಃ।**
**ತಚ್ಚ ನಿಷ್ಪಾದಿತಂ ಕಾರ್ಯಮಶೇಷಾ ಭೂಭುಜೋ ಹತಾಃ॥** 60

**ವೃಷ್ಣ್ಯಂಧಕಕುಲಂ ಸರ್ವಂ ತಥಾ ಪಾರ್ಥೋಪಸಂಹೃತಮ್।**
**ನ ಕಿಂಚಿದನ್ಯತ್ ಕರ್ತವ್ಯಂ ತಸ್ಯ ಭೂಮಿತಲೇ ಪ್ರಭೋಃ॥** 61

---

ಪೃಥಿವೀ, ದೇವತೆಗಳು, ಮನುಷ್ಯರು, ಪಶುಗಳು, ವೃಕ್ಷಗಳು, ಹಾವು ಹಪ್ಪಟೆಗಳು—ಎಲ್ಲವನ್ನೂ ಕಾಲವು ಸೃಜಿಸಿದೆ. ಮತ್ತೆ ಕಾಲವೇ ನಾಶಪಡಿಸುತ್ತದೆ. ಸರ್ವವೂ ಕಾಲಾತ್ಮಕವೆಂದು ತಿಳಿದು ಶಾಂತನಾಗು (55-57). ಕಮಲಲೋಚನನಾದ ಭಗವಾನ್ ಕೃಷ್ಣನು ಕಾಲಸ್ವರೂಪಿ. ನೀನು ಹೇಳುತ್ತಿರುವ ಕೃಷ್ಣಮಾಹಾತ್ಮ್ಯವೆಲ್ಲವೂ ಸತ್ಯವಾದದ್ದು. ಭೂಭಾರವನ್ನಿಳಿಸುವ ಕಾರ್ಯಕ್ಕಾಗಿ ಅವನು ಭೂಮಿಯಲ್ಲಿ ಅವತರಿಸಿದ್ದನು. ಭಾರಾಕ್ರಾಂತಳಾದ ಭೂದೇವಿಯು ಹಿಂದೊಮ್ಮೆ ದೇವತೆಗಳ ಸಭೆಗೆ ಈ ನಿಮಿತ್ತವಾಗಿ ಹೋಗಿದ್ದಳು (58-59). ಅದಕ್ಕೋಸ್ಕರ ಕಾಲರೂಪಿಯಾದ ಜನಾರ್ದನನು ಶ್ರೀಕೃಷ್ಣನಾಗಿ ಅವತರಿಸಿದ್ದನು. ಉದ್ದಿಷ್ಟಕಾರ್ಯವು ನೆರವೇರಿತು. ಸಕಲ ಭೂಭುಜರನ್ನೂ ಸಂಹರಿಸಿದ್ದಾಯಿತು. ಪಾರ್ಥ, ಅಂಧಕವೃಷ್ಣಿಗಳ ಕುಲವೆಲ್ಲವನ್ನೂ ಮುಗಿಸಿದ್ದಾಯಿತು. ಈ ಭೂತಳದಲ್ಲಿ ಆ ಸ್ವಾಮಿಗೆ ಕರ್ತವ್ಯಶೇಷವಾವುದೂ ಉಳಿದಿರಲಿಲ್ಲ (60-61).

ಅತೋ ಗತಸ್ಸ ಭಗವಾನ್ ಕೃತಕೃತ್ಯೋ ಯಥೇಚ್ಛಯಾ।
ಸೃಷ್ಟಿಂ ಸರ್ಗೇ ಕರೋತ್ಯೇಷ ದೇವದೇವಃ ಸ್ಥಿತೌ ಸ್ಥಿತಿಮ್।
ಅಂತೇಽಂತಾಯ ಸಮರ್ಥೋಽಯಂ ಸಾಂಪ್ರತಂ ವೈ ಯಥಾ ಗತಃ॥ 62

ತಸ್ಮಾತ್ಪಾರ್ಥ ನ ಸಂತಾಪಸ್ತ್ವಯಾ ಕಾರ್ಯಃ ಪರಾಭವೇ।
ಭವಂತಿ ಭಾವಾಃ ಕಾಲೇಷು ಪುರುಷಾಣಾಂ ಯತಃ ಸ್ತುತಿಃ॥ 63

ತ್ವಯ್ಯೈಕೇನ ಹತಾ ಭೀಷ್ಮದ್ರೋಣಕರ್ಣಾದಯೋ ರಣೇ।
ತೇಷಾಮರ್ಜುನ ಕಾಲೋತ್ಥಃ ಕಿಂ ನ್ಯೂನಾಭಿಭವೋ ನ ಸಃ॥ 64

ವಿಷ್ಣೋಸ್ತಸ್ಯ ಪ್ರಭಾವೇಣ ಯಥಾ ತೇಷಾಂ ಪರಾಭವಃ।
ಕೃತಸ್ತಥೈವ ಭವತೋ ದಸ್ಯುಭ್ಯಸ್ಸ ಪರಾಭವಃ॥ 65

ಸ ದೇವೇಶಶ್ಶರೀರಾಣಿ ಸಮಾವಿಶ್ಯ ಜಗತ್ಸ್ಥಿತಿಮ್।
ಕರೋತಿ ಸರ್ವಭೂತಾನಾಂ ನಾಶಮಂತೇ ಜಗತ್ಪತಿಃ॥ 66

---

ಆದ್ದರಿಂದ ಕೃತಕೃತ್ಯನಾದ ಭಗವಂತನು ಸ್ವೇಚ್ಛಾನುಸಾರವಾಗಿ ಹೊರಟು ಹೋದನು. ಆ ದೇವದೇವನು ಸೃಷ್ಟಿಕಾಲದಲ್ಲಿ ಸೃಷ್ಟಿಯನ್ನೂ ಸ್ಥಿತಿಕಾಲದಲ್ಲಿ ರಕ್ಷಣೆಯನ್ನೂ ಮಾಡುತ್ತಾನೆ, ಅಂತಕಾಲ ಬಂದಾಗ ನಾಶಮಾಡಲೂ ಅವನು ಸಮರ್ಥ. ಅದರಂತೆಯೇ ಈಗ (ದುಷ್ಟರನ್ನು) ನಾಶಮಾಡಿ ಹೊರಟು ಹೋಗಿದ್ದಾನೆ (62). ಆದ್ದರಿಂದ, ಅರ್ಜುನ, ನಿನಗೆ ಸೋಲಾಯಿತೆಂದು ಖಿನ್ನ ನಾಗಬೇಡ. ಕಾಲ ಬಂದಾಗ ಅದಕ್ಕನುಸಾರವಾಗಿ ಕೆಲವು ಘಟನೆಗಳು ನಡೆಯುತ್ತವೆ. ಅವುಗಳಿಂದ ಮನುಷ್ಯರು ಸ್ತುತಿಗೆ ಪಾತ್ರರಾಗುತ್ತಾರೆ (63). ನೀನೊಬ್ಬನೇ ಭೀಷ್ಮ ದ್ರೋಣ ಕರ್ಣಾದಿಗಳನ್ನು ರಣದಲ್ಲಿ ಪರಾಜಯ ಗೊಳಿಸಿದೆಯಲ್ಲ, ಅರ್ಜುನ, ಅದು ಕಾಲಮಹಿಮೆಯಿಂದ ಅಲ್ಪರಿಂದಾದ ಪರಾಭವವಲ್ಲವೆ? ಶ್ರೀಕೃಷ್ಣನ ತೇಜಸ್ಸಿನಿಂದ ಅವರಿಗೆ ಹೇಗೆ ಸೋಲಾಯಿತೋ ಹಾಗೆಯೇ ದಸ್ಯುಗಳಿಂದ ನಿನಗೆ ಸೋಲಾಯಿತು! (64-65). ಜಗತ್ಪತಿಯಾದ ಆ ದೇವೇಶ್ವರನು ಜನರ ದೇಹಗಳಲ್ಲಿ ಆವಿಷ್ಟನಾಗಿ ಜಗತ್ತಿನ ರಕ್ಷಣೆಯನ್ನೂ ಮಾಡುತ್ತಾನೆ, ಹಾಗೆಯೇ ಸಮಸ್ತ ಪ್ರಾಣಿಗಳನ್ನೂ ಧ್ವಂಸಮಾಡುತ್ತಾನೆ (66).

**ಭಗೋದಯೇ ತೇ ಕೌಂತೇಯ ಸಹಾಯೋಽಭೂಜ್ಜನಾರ್ದನಃ।**
**ತಥಾಂತೇ ತದ್ವಿಪಕ್ಷಾಸ್ತೇ ಕೇಶವೇನ ವಿಲೋಕಿತಾಃ॥ 67**

**ಕಶ್ಶ್ರದ್ದಧ್ಯಾತ್ ಸಗಾಂಗೇಯಾನ್ ಹನ್ಯಾಸ್ತ್ವಂ ಕೌರವಾನಿತಿ।**
**ಆಭೀರೇಭ್ಯಶ್ಚ ಭವತಃ ಕಃ ಶ್ರದ್ದಧ್ಯಾತ್ಪರಾಭವಮ್॥ 68**

**ಪಾರ್ಥೈತತ್ಸರ್ವಭೂತಸ್ಯ ಹರೇರ್ಲೀಲಾವಿಚೇಷ್ಟಿತಮ್।**
**ತ್ವಯಾ ಯತ್ಕೌರವಾ ಧ್ವಸ್ತಾ ಯದಾಭೀರೈರ್ಭವಾನ್ ಜಿತಃ॥ 69**

**ಗೃಹೀತಾ ದಸ್ಯುಭಿರ್ಯಾಶ್ಚ ಭವಾನ್ ಶೋಚತಿ ತಾಃ ಸ್ತ್ರಿಯಃ।**
**ಏತಸ್ಯಾಹಂ ಯಥಾವೃತ್ತಂ ಕಥಯಾಮಿ ತವಾರ್ಜುನ॥ 70**

**ಅಷ್ಟಾವಕ್ರಃ ಪುರಾ ವಿಪ್ರೋ ಜಲವಾಸರತೋಽಭವತ್।**
**ಬಹೂನ್ ವರ್ಷಗಣಾನ್ಪಾರ್ಥ ಗೃಣನ್ ಬ್ರಹ್ಮ ಸನಾತನಮ್॥ 71**

**ಜಿತೇಷ್ವಸುರಸಂಘೇಷು ಮೇರುಪೃಷ್ಠೇ ಮಹೋತ್ಸವಃ।**
**ಬಭೂವ ತತ್ರ ಗಚ್ಛಂತ್ಯೋ ದದೃಶುಸ್ತಂ ಸುರಸ್ತ್ರಿಯಃ॥ 72**

---

ಕೌಂತೇಯ, ನಿನಗೆ ಭಾಗ್ಯೋದಯವಾದಾಗ ಜನಾರ್ದನನು ನಿನಗೆ ಸಹಾಯ ಮಾಡಿದನು. ನಿನ್ನ ಭಾಗ್ಯವು ಕುಸಿದಾಗ ಆತನ ಕೃಪಾದೃಷ್ಟಿಯು ನಿನ್ನ ವೈರಿಗಳ ಕಡೆಗೆ ತಿರುಗಿತು! (67). ಭೀಷ್ಮಾದಿಕೌರವರನ್ನು ನೀನು ಸಂಹರಿಸಬಲ್ಲೆಯೆಂದು ಯಾವನು ನಂಬಿಯಾನು? ನಿನಗೆ ಗೊಲ್ಲರಿಂದ ಸೋಲಾಗುವುದೆಂದು ಸಹ ಯಾವನು ನಂಬಿಯಾನು? ನೀನು ಕೌರವರನ್ನು ಧ್ವಂಸಗೊಳಿಸಿದ್ದು, ದಸ್ಯುಗಳಿಂದ ನೀನು ಸೋತದ್ದು—ಇದೆಲ್ಲವೂ, ಪಾರ್ಥ, ಸರ್ವಾತ್ಮನಾದ ಶ್ರೀಹರಿಯ ಒಂದು ಲೀಲಾವಿಶೇಷ (68-69). ಇನ್ನು ಆ ಸ್ತ್ರೀಯರನ್ನು ದಸ್ಯುಗಳು ಅಪಹರಿಸಿಬಿಟ್ಟ ರೆಂದು ನೀನು ಪರಿತಪಿಸುವೆಯಷ್ಟೆ; ಅದರ ಯಥಾರ್ಥಸಂಗತಿಯೇನೆಂಬುದನ್ನು ಹೇಳುತ್ತೇನೆ, ಕೇಳು. ಅರ್ಜುನ, ಹಿಂದೆ ಅಷ್ಟಾವಕ್ರನೆಂಬ ವಿಪ್ರನು ಸನಾತನ ವಾದ ಬ್ರಹ್ಮವನ್ನು ಕುರಿತು ಜಪಿಸುತ್ತ ಬಹುವರ್ಷಗಳವರೆಗೆ ಜಲವಾಸದಲ್ಲಿದ್ದನು (70-71). ಆ ಸಮಯದಲ್ಲಿ ಅಸುರರನ್ನು ಜಯಿಸಿದ್ದಕ್ಕಾಗಿ ಮೇರುಗಿರಿಯ ಮೇಲೆ ಒಂದು ಮಹೋತ್ಸವದ ಏರ್ಪಾಡು ನಡೆದಿತ್ತು. ಅಲ್ಲಿಗೆ ಹೋಗುತ್ತಿದ್ದ

**ರಂಭಾತಿಲೋತ್ತಮಾದ್ಯಾಸ್ತು ಶತಶೋಽಥ ಸಹಸ್ರಶಃ।**
**ತುಷ್ಟುವುಸ್ತಂ ಮಹಾತ್ಮಾನಂ ಪ್ರಶಶಂಸುಶ್ಚ ಪಾಂಡವ॥ 73**

**ಆಕಂಠಮಗ್ನಂ ಸಲಿಲೇ ಜಟಾಭಾರವಹಂ ಮುನಿಮ್।**
**ವಿನಯಾವನತಾಶ್ಚೈನಂ ಪ್ರಣೇಮುಃ ಸ್ತೋತ್ರತತ್ಪರಾಃ॥ 74**

**ಯಥಾ ಯಥಾ ಪ್ರಸನ್ನೋಽಸೌ ತುಷ್ಟುವುಸ್ತಂ ತಥಾ ತಥಾ।**
**ಸರ್ವಾಸ್ತಾಃ ಕೌರವಶ್ರೇಷ್ಠ ತಂ ವರಿಷ್ಠಂ ದ್ವಿಜನ್ಮನಾಮ್॥ 75**

*ಅಷ್ಟಾವಕ್ರ ಉವಾಚ:*

**ಪ್ರಸನ್ನೋಽಹಂ ಮಹಾಭಾಗಾ ಭವತೀನಾಂ ಯದಿಷ್ಯತೇ।**
**ಮತ್ತಸ್ತದ್ವ್ರಿಯತಾಂ ಸರ್ವಂ ಪ್ರದಾಸ್ಯಾಮ್ಯತಿದುರ್ಲಭಮ್॥ 76**

**ರಂಭಾತಿಲೋತ್ತಮಾದ್ಯಾಸ್ತಂ ವೈದಿಕ್ಯೋಽಪ್ಸರಸೋಽಬ್ರುವನ್।**
**ಪ್ರಸನ್ನೇ ತ್ವಯ್ಯಪರ್ಯಾಪ್ತಂ ಕಿಮಸ್ಮಾಕಮಿತಿ ದ್ವಿಜ॥ 77**

---

ಅಪ್ಸರೆಯರು ಅಷ್ಟಾವಕ್ರ ಮುನಿಯನ್ನು ನೋಡಿದರು. ರಂಭೆ, ತಿಲೋತ್ತಮೆ —ಮೊದಲಾದ ಸಾವಿರಾರು ಅಪ್ಸರಸ್ತ್ರೀಯರು ಆ ಮಹಾತ್ಮನನ್ನು ಸ್ತುತಿಸಿದರು, ಹೊಗಳಿದರು (72-73). ಜಟಾಭಾರವನ್ನು ಧರಿಸಿ ಕತ್ತಿನವರೆಗೆ ನೀರಲ್ಲಿ ಮುಳುಗಿನಿಂತಿದ್ದ ಆ ಮುನಿಯನ್ನು ಅಪ್ಸರೆಯರು ಸ್ತೋತ್ರಮಾಡುತ್ತ ವಿನಯ ದಿಂದ ತಲೆಬಾಗಿ ನಮಸ್ಕರಿಸಿದರು. ಅರ್ಜುನ, ದ್ವಿಜಶ್ರೇಷ್ಠನಾದ ಅಷ್ಟಾವಕ್ರನು ಯಾವ ಪ್ರಕಾರದಲ್ಲಿ ಪ್ರಸನ್ನನಾದಾನೋ ಆ ಪ್ರಕಾರದಲ್ಲಿ ಅವರೆಲ್ಲರೂ ಸ್ತುತಿಸುತ್ತಿದ್ದರು (74-75). ಅನಂತರ ಮುನಿಯು ಪ್ರಸನ್ನನಾಗಿ "ಎಲೌ ಭಾಗ್ಯಶಾಲಿನಿಯರೆ, ನಿಮಗೆ ಯಾವುದು ಬೇಕೋ ಆ ವರವನ್ನು ನನ್ನಿಂದ ಪಡೆದುಕೊಳ್ಳಿರಿ. ಅತ್ಯಂತ ದುರ್ಲಭವಾದರೂ ಅದೆಲ್ಲವನ್ನು ಈಡೇರಿಸುವೆನು" ಎಂದನು (76). ಆಗ ವೇದಪ್ರಸಿದ್ಧರಾದ ರಂಭೆ, ತಿಲೋತ್ತಮೆ–ಮೊದಲಾದ ಅಪ್ಸರೆಯರು "ದ್ವಿಜೋತ್ತಮ, ನೀನು ಪ್ರಸನ್ನನಾದ ಮೇಲೆ ನಮಗೆ ಅಲಭ್ಯ ವಾದದ್ದು ಯಾವುದಿದೆ?" ಎಂದರು. ಇತರ ಅಪ್ಸರೆಯರು "ವಿಪ್ರೋತ್ತಮ,

**ಇತರಾಸ್ತ್ವಬ್ರುವನ್ ವಿಪ್ರ ಪ್ರಸನ್ನೋ ಭಗವಾನ್ಯದಿ।**
**ತದಿಚ್ಛಾಮಃ ಪತಿಂ ಪ್ರಾಪ್ತುಂ ವಿಪ್ರೇಂದ್ರ ಪುರುಷೋತ್ತಮಮ್॥ 78**

*ಶ್ರೀವ್ಯಾಸ ಉವಾಚ:*

**ಏವಂ ಭವಿಷ್ಯತೀತ್ಯುಕ್ತ್ವಾ ಹ್ಯುತ್ತತಾರ ಜಲಾನ್ಮುನಿಃ।**
**ತಮುತ್ತೀರ್ಣಂ ಚ ದದೃಶುರ್ವಿರೂಪಂ ವಕ್ರಮಷ್ಟಧಾ॥ 79**

**ತಂ ದೃಷ್ಟ್ವಾ ಗೂಹಮಾನಾನಾಂ ಯಾಸಾಂ ಹಾಸಃ ಸ್ಫುಟೋಽಭವತ್।**
**ತಾಶ್ಶಶಾಪ ಮುನಿಃ ಕೋಪಮವಾಪ್ಯ ಕುರುನಂದನ॥ 80**

**ಯಸ್ಮಾದ್ವಿಕೃತರೂಪಂ ಮಾಂ ಮತ್ವಾ ಹಾಸಾವಮಾನನಾ।**
**ಭವತೀಭಿಃ ಕೃತಾ ತಸ್ಮಾದೇತಂ ಶಾಪಂ ದದಾಮಿ ವಃ॥ 81**

**ಮತ್ಪ್ರಸಾದೇನ ಭರ್ತಾರಂ ಲಬ್ಧ್ವಾ ತು ಪುರುಷೋತ್ತಮಮ್।**
**ಮಚ್ಛಾಪೋಪಹತಾಸ್ಸರ್ವಾ ದಸ್ಯುಹಸ್ತಂ ಗಮಿಷ್ಯಥ॥ 82**

*ಶ್ರೀವ್ಯಾಸ ಉವಾಚ:*

**ಇತ್ಯುದೀರಿತಮಾಕರ್ಣ್ಯ ಮುನಿಸ್ತಾಭಿಃ ಪ್ರಸಾದಿತಃ।**
**ಪುನಸ್ಸುರೇಂದ್ರಲೋಕಂ ವೈ ಪ್ರಾಹ ಭೂಯೋ ಗಮಿಷ್ಯಥ॥ 83**

---

ನೀನು ಪ್ರಸನ್ನನಾದರೆ ಪುರುಷೋತ್ತಮನಾದ ಭಗವಂತನು ನಮಗೆ ಪತಿಯಾಗ ಬೇಕೆಂದು ಬಯಸುತ್ತೇವೆ" ಎಂದರು (77-78). ಆಗ ಮುನಿಯು "ಹಾಗೆ ಆಗುವುದು" ಎಂದು ನುಡಿದು ನೀರಿಂದ ಎದ್ದು ಬಂದನು. ಅವನು ಶರೀರದಲ್ಲಿ ಎಂಟುಕಡೆ ಸೊಟ್ಟಸೊಟ್ಟಾಗಿ ಕುರೂಪಿಯಾಗಿರುವುದನ್ನು ಅಪ್ಸರೆಯರು ಕಂಡರು. ಅವರಿಗೆ ನಗು ಬಂದಿತು. ಎಷ್ಟು ಮುಚ್ಚಿಕೊಂಡರೂ ಕೆಲವರ ನಗು ಪ್ರಕಟವಾಗಿ ಗೋಚರಿಸಿತು. ಅಷ್ಟಾವಕ್ರನು ಕೋಪದಿಂದ ಅಂಥವರನ್ನು ಶಪಿಸಿದನು (79-80): "ನಾನು ಕುರೂಪಿಯೆಂದು ತಿಳಿದು ನಕ್ಕು ಅವಮಾನ ಗೊಳಿಸಿದ್ದೀರಿ. ಆದ್ದರಿಂದ ನಿಮಗೆ ಈ ಶಾಪವನ್ನೀಯುತ್ತೇನೆ. ನನ್ನ ಅನುಗ್ರಹ ದಿಂದ ಪುರುಷೋತ್ತಮನನ್ನು ಪತಿಯನ್ನಾಗಿ ಪಡೆಯುವಿರಿ. ನಕ್ಕವರೆಲ್ಲರೂ ಅನಂತರ ಶಾಪಗ್ರಸ್ತರಾಗಿ ದಸ್ಯುಗಳ ಕೈಗೆ ಸಿಕ್ಕಿಕೊಳ್ಳಿರಿ!" ಎಂದನು (81-82). ಹೀಗೆ ಹೇಳಿದ್ದನ್ನು ಕೇಳಿ ಅಪ್ಸರೆಯರು ಆ ಮುನಿಯನ್ನು ಪ್ರಸನ್ನಗೊಳಿಸಿದರು.

ಏವಂ ತಸ್ಯ ಮುನೇಶ್ಶಾಪಾದಷ್ಟಾವಕ್ರಸ್ಯ ಚಕ್ರಿಣಮ್।
ಭರ್ತಾರಂ ಪ್ರಾಪ್ಯ ತಾ ಯಾತಾ ದಸ್ಯುಹಸ್ತಂ ಸುರಾಂಗನಾಃ॥ 84

ತತ್ತ್ವಯಾ ನಾತ್ರ ಕರ್ತ್ತವ್ಯಶ್ಶೋಕೋಽಲ್ಪೋಽಪಿ ಹಿ ಪಾಂಡವ।
ತೇನೈವಾಖಿಲನಾಥೇನ ಸರ್ವಂ ತದುಪಸಂಹೃತಮ್॥ 85

ಭವತಾಂ ಚೋಪಸಂಹಾರ ಆಸನ್ನಸ್ತೇನ ಪಾಂಡವ।
ಬಲಂ ತೇಜಸ್ತಥಾ ವೀರ್ಯಂ ಮಾಹಾತ್ಮ್ಯಂ ಚೋಪಸಂಹೃತಮ್॥ 86

ಜಾತಸ್ಯ ನಿಯತೋ ಮೃತ್ಯುಃ ಪತನಂ ಚ ತಥೋನ್ನತೇಃ।
ವಿಪ್ರಯೋಗಾವಸಾನಸ್ತು ಸಂಯೋಗಃ ಸಂಚಯೇ ಕ್ಷಯಃ॥ 87

ವಿಜ್ಞಾಯ ನ ಬುಧಾಶ್ಶೋಕಂ ನ ಹರ್ಷಮುಪಯಾಂತಿ ಯೇ।
ತೇಷಾಮೇವೇತರೇ ಚೇಷ್ಟಾಂ ಶಿಕ್ಷಂತಸ್ಸಂತಿ ತಾದೃಶಾಃ॥ 88

---

ಆಗ ಮುನಿಯು ಪುನಃ "ತರುವಾಯ ನೀವು ಮತ್ತೆ ಸ್ವರ್ಗಲೋಕವನ್ನು ಸೇರಿಕೊಳ್ಳುವಿರಿ" ಎಂದು ಹೇಳಿದನು. ಈ ಪ್ರಕಾರ ಅಷ್ಟಾವಕ್ರಮುನಿಯ ಶಾಪವಶದಿಂದ ದೇವಾಂಗನೆಯರು ಶ್ರೀಕೃಷ್ಣನನ್ನು ಪತಿಯನ್ನಾಗಿ ಪಡೆದು ಈಗ ದಸ್ಯುಗಳ ಕೈಗೆ ಸಿಕ್ಕಿಕೊಂಡಿದ್ದಾರೆ (83-84). ಪಾಂಡವ, ಈ ವಿಷಯದಲ್ಲಿ ನೀನು ಸ್ವಲ್ಪವೂ ಶೋಕಿಸಬಾರದು. ಆ ಜಗದೀಶ್ವರನೇ ಸರ್ವವನ್ನೂ ಈ ರೀತಿಯಲ್ಲಿ ಉಪಸಂಹರಿಸಿದ್ದಾನೆ. ನಿಮ್ಮ ಉಪಸಂಹಾರವೂ ಸಮೀಪಿಸಿದೆ. ಆದ್ದರಿಂದ ನಿಮ್ಮ ಬಲ, ತೇಜಸ್ಸು, ವೀರ್ಯ, ಪರಾಕ್ರಮಗಳು ಮುಗಿದವು (85-86). ಹುಟ್ಟಿದವನಿಗೆ ಸಾವು ನಿಶ್ಚಿತ. ಉನ್ನತಿಗೆ ಪತನವೂ ನಿಶ್ಚಿತ. ಸಂಯೋಗವು ವಿಯೋಗದಲ್ಲಿ ಕೊನೆಗೊಳ್ಳುತ್ತದೆ. ಸಂಚಯವು ವ್ಯಯದಲ್ಲಿ ಪರ್ಯವಸಾನವಾಗುತ್ತದೆ. ಇದೆಲ್ಲವನ್ನೂ ಅರಿತುಕೊಂಡು ಯಾವ ಪಂಡಿತರು ಶೋಕವನ್ನಾಗಲಿ ಹರ್ಷವನ್ನಾಗಲಿ ಪಡದೆ ಸಮಚಿತ್ತರಾಗಿರುತ್ತಾರೋ ಅವರ ನಡತೆಯನ್ನು ವಿವೇಕಿಗಳಾದ ಇತರರೂ ಅನುಸರಿಸುತ್ತಾರೆ (87-88).

**ತಸ್ಮಾತ್ತ್ವಯಾ ನರಶ್ರೇಷ್ಠ ಜ್ಞಾತ್ವೈತದ್ ಭ್ರಾತೃಭಿಸ್ಸಹ।**
**ಪರಿತ್ಯಜ್ಯಾಖಿಲಂ ತಂತ್ರಂ ಗಂತವ್ಯಂ ತಪಸೇ ವನಮ್॥ 89**

**ತದ್ಗಚ್ಛ ಧರ್ಮರಾಜಾಯ ನಿವೇದ್ಯೈತದ್ವಚೋ ಮಮ।**
**ಪರಶ್ವೋ ಭ್ರಾತೃಭಿಸ್ಸಾರ್ಧಂ ಯಥಾ ಯಾಸಿ ತಥಾ ಕುರು॥ 90**

**ಇತ್ಯುಕ್ತೋಽಭ್ಯೇತ್ಯ ಪಾರ್ಥಾಭ್ಯಾಂ ಯಮಾಭ್ಯಾಂ ಚ ಸಹಾರ್ಜುನಃ।**
**ದೃಷ್ಟಂ ಚೈವಾನುಭೂತಂ ಚ ಸರ್ವಮಾಖ್ಯಾತವಾಂಸ್ತಥಾ॥ 91**

**ವ್ಯಾಸವಾಕ್ಯಂ ಚ ತೇ ಸರ್ವೇ ಶ್ರುತ್ವಾಽರ್ಜುನಮುಖೇರಿತಮ್।**
**ರಾಜ್ಯೇ ಪರೀಕ್ಷಿತಂ ಕೃತ್ವಾ ಯಯುಃ ಪಾಂಡುಸುತಾ ವನಮ್॥ 92**

**ಇತ್ಯೇತತ್ತವ ಮೈತ್ರೇಯ ವಿಸ್ತರೇಣ ಮಯೋದಿತಮ್।**
**ಜಾತಸ್ಯ ಯದ್ಯದೋರ್ವಂಶೇ ವಾಸುದೇವಸ್ಯ ಚೇಷ್ಟಿತಮ್॥ 93**

---

ಆದ್ದರಿಂದ, ನರಶ್ರೇಷ್ಠ, ಇದನ್ನು ನೀನು ಚೆನ್ನಾಗಿ ಮನಸ್ಸಿಗೆ ತಂದುಕೊಂಡು, ಸಕಲ ರಾಜ್ಯ ವ್ಯವಹಾರವನ್ನೂ ತೊರೆದು, ಸೋದರರೊಡನೆ ತಪಸ್ಸಿಗಾಗಿ ಅರಣ್ಯಕ್ಕೆ ಹೊರಟುಹೋಗು. ನೀನು ಹೋಗಿ ಧರ್ಮರಾಜನಿಗೆ ನಾನು ಹೇಳಿದುದೆಲ್ಲವನ್ನೂ ತಿಳಿಸು. ನಾಡಿದ್ದು ನಿನ್ನ ಸೋದರರೊಡನೆ ಹೊರಟು ಹೋಗುವುದಕ್ಕೆ ತಕ್ಕ ಯತ್ನವನ್ನು ಮಾಡು" ಎಂದು ನುಡಿದರು (89-90). ಹೀಗೆ ವ್ಯಾಸಮುನಿಗಳು ನುಡಿಯಲಾಗಿ ಅರ್ಜುನನು ಹಸ್ತಿನಾವತಿಗೆ ಹೋಗಿ ಕುಂತೀ ಪುತ್ರರಾದ ಧರ್ಮರಾಜ-ಭೀಮಸೇನರಿಗೂ ನಕುಲ-ಸಹದೇವರಿಗೂ ತಾನು ಕಂಡದ್ದು ಅನುಭವಿಸಿದ್ದು—ಎಲ್ಲವನ್ನೂ ವಿವರವಾಗಿ ತಿಳಿಸಿದನು (91). ಅನಂತರ ಅರ್ಜುನನು ಹೇಳಿದ ವ್ಯಾಸವಾಕ್ಯವನ್ನು ಕೇಳಿದಮೇಲೆ, ಪಾಂಡವರು ರಾಜ್ಯಭಾರವನ್ನು ಪರೀಕ್ಷಿತನಿಗೆ ವಹಿಸಿಕೊಟ್ಟು ಅರಣ್ಯಾಭಿಮುಖವಾಗಿ ಪ್ರಯಾಣಮಾಡಿದರು (92). ಮೈತ್ರೇಯ, ಈ ಪ್ರಕಾರವಾಗಿ ಯದುವಂಶ ದಲ್ಲವತರಿಸಿದ ವಾಸುದೇವನ ಕಾರ್ಯವನ್ನು ವಿಸ್ತಾರವಾಗಿ ನಿನಗೆ ಹೇಳಿದ್ದೇನೆ.

**ಯಶ್ಚೈತಚ್ಚರಿತಂ ತಸ್ಯ ಕೃಷ್ಣಸ್ಯ ಶೃಣುಯಾತ್ಸದಾ।**
**ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ॥** 94

ಇತಿ ಶ್ರೀವಿಷ್ಣುಪುರಾಣೇ ಪಂಚಮಾಂಶೇ ಅಷ್ಟಾತ್ರಿಂಶೋಽಧ್ಯಾಯಃ

**ಪಂಚಮಾಂಶಃ ಸಮಾಪ್ತಃ**

---

ಈ ಕೃಷ್ಣಚರಿತೆಯನ್ನು ಯಾವಾತನು ಸದಾ ಕೇಳುತ್ತಿರುವನೋ ಆತನು ಸರ್ವ ಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಸೇರುವನು (93-94).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪಂಚಮಾಂಶದಲ್ಲಿ
ಮೂವತ್ತೆಂಟನೆಯ ಅಧ್ಯಾಯವು ಮುಗಿಯಿತು.

**ಪಂಚಮಾಂಶಃ ಸಮಾಪ್ತಃ**



# ಷಷ್ಠಾಂಶಃ

## ಪ್ರಥಮೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ವ್ಯಾಖ್ಯಾತಾ ಭವತಾ ಸರ್ಗವಂಶಮನ್ವಂತರಸ್ಥಿತಿಃ।**
**ವಂಶಾನುಚರಿತಂ ಚೈವ ವಿಸ್ತರೇಣ ಮಹಾಮುನೇ॥** 1

**ಶ್ರೋತುಮಿಚ್ಛಾಮ್ಯಹಂ ತ್ವತ್ತೋ ಯಥಾವದುಪಸಂಹೃತಿಮ್।**
**ಮಹಾಪ್ರಲಯಸಂಜ್ಞಾಂ ಚ ಕಲ್ಪಾಂತೇ ಚ ಮಹಾಮುನೇ॥** 2

*ಶ್ರೀಪರಾಶರ ಉವಾಚ:*

**ಮೈತ್ರೇಯ ಶ್ರೂಯತಾಂ ಮತ್ತೋ ಯಥಾವದುಪಸಂಹೃತಿಃ।**
**ಕಲ್ಪಾಂತೇ ಪ್ರಾಕೃತೇ ಚೈವ ಪ್ರಲಯೇ ಜಾಯತೇ ಯಥಾ॥** 3

---

# ಷಷ್ಠಾಂಶ

## ಅಧ್ಯಾಯ 1

ಪ್ರಳಯದ ಪ್ರಶ್ನೆ; ಕಲಿಧರ್ಮನಿರೂಪಣ.

ಮೈತ್ರೇಯರು ಪರಾಶರಮುನಿಗಳನ್ನು ಕುರಿತು "ಮಹರ್ಷಿಗಳೆ, ನೀವು ಈ ಹಿಂದೆ ಸೃಷ್ಟಿರಚನೆ, ವಂಶಪರಂಪರೆ, ಮನ್ವಂತರಸ್ಥಿತಿ, ವಂಶಾನುಚರಿತೆ —ಇವನ್ನು ವಿಸ್ತಾರವಾಗಿ ನಿರೂಪಿಸಿದ್ದೀರಿ. ಈಗ ಕಲ್ಪಾಂತದಲ್ಲಾಗುವ ಉಪಸಂಹೃತಿಯನ್ನೂ ಮಹಾಪ್ರಳಯವನ್ನೂ ಕೇಳಿ ತಿಳಿದುಕೊಳ್ಳಬೇಕೆಂದು ಬಯಸುತ್ತೇನೆ" ಎಂದರು (1-2). ಆಗ ಪರಾಶರಮುನಿಗಳು ಇಂತೆಂದರು: ಮೈತ್ರೇಯ, ಕಲ್ಪಾಂತದಲ್ಲಿಯೂ ಪ್ರಾಕೃತ ಪ್ರಳಯದಲ್ಲಿಯೂ ಜಗತ್ತಿನ

**ಅಹೋರಾತ್ರಂ ಪಿತೃಣಾಂ ತು ಮಾಸೋಽಬ್ದಸ್ತ್ರಿದಿವೌಕಸಾಮ್।**
**ಚತುರ್ಯುಗಸಹಸ್ರೇ ತು ಬ್ರಹ್ಮಣೋ ವೈ ದ್ವಿಜೋತ್ತಮ॥** 4
**ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುರ್ಯುಗಮ್।**
**ದಿವ್ಯೈರ್ವರ್ಷಸಹಸ್ರೈಸ್ತು ತದ್ದ್ವಾದಶಭಿರುಚ್ಯತೇ॥** 5
**ಚತುರ್ಯುಗಾಣ್ಯಶೇಷಾಣಿ ಸದೃಶಾನಿ ಸ್ವರೂಪತಃ।**
**ಆದ್ಯಂ ಕೃತಯುಗಂ ಮುಕ್ತ್ವಾ ಮೈತ್ರೇಯಾಂತ್ಯಂ ತಥಾ ಕಲಿಮ್॥** 6
**ಆದ್ಯೇ ಕೃತಯುಗೇ ಸರ್ಗೋ ಬ್ರಹ್ಮಣಾ ಕ್ರಿಯತೇ ಯಥಾ।**
**ಕ್ರಿಯತೇ ಚೋಪಸಂಹಾರಸ್ತಥಾಂತೇ ಚ ಕಲೌ ಯುಗೇ॥** 7

---

ಉಪಸಂಹೃತಿಯಾಗುತ್ತದೆ.* ಅದು ಹೇಗೆಂಬುದನ್ನು ಯಥಾವತ್ತಾಗಿ ಕೇಳು (3): ಮನುಷ್ಯರ ಗಣನೆಯಲ್ಲಿ ಒಂದು ತಿಂಗಳು ಪಿತೃಗಣಗಳಿಗೆ ಒಂದು ಅಹೋರಾತ್ರ(ದಿವಸ)ವಾಗುತ್ತದೆ. ನಮ್ಮ ಒಂದು ವರ್ಷವು ದೇವತೆಗಳಿಗೆ ಒಂದು ದಿವಸವಾಗುತ್ತದೆ. ನಮ್ಮ ಗಣನೆಯಲ್ಲಿ ಎರಡು ಸಾವಿರ ಚತುರ್ಯುಗಗಳು ಬ್ರಹ್ಮನಿಗೆ ಒಂದು ದಿವಸವಾಗುತ್ತವೆ (4). ಕೃತ, ತ್ರೇತಾ, ದ್ವಾಪರ, ಕಲಿ—ಎಂದು ನಾಲ್ಕು ಯುಗಗಳಿವೆ. ಈ ಚತುರ್ಯುಗಗಳ ಒಟ್ಟು ಕಾಲಮಾನವು ಹನ್ನೆರಡು ಸಾವಿರ ದಿವ್ಯವರ್ಷಗಳಾಗುತ್ತವೆ.§ ಮೈತ್ರೇಯ, (ಪ್ರತ್ಯೇಕ ಮನ್ವಂತರದ) ಮೊದಲನೆಯ ಕೃತಯುಗವನ್ನೂ ಕಡೆಯ ಕಲಿಯುಗವನ್ನೂ ಬಿಟ್ಟು ನಡುವೆ ಸಂಭವಿಸುವ ಎಲ್ಲ ಚತುರ್ಯುಗಗಳೂ ಸ್ವರೂಪತಃ ಒಂದೇ ವಿಧವಾಗಿರುತ್ತವೆ (5-6). ಏಕೆಂದರೆ, ಮೊದಲನೆಯ ಕೃತಯುಗದಲ್ಲಿ ಬ್ರಹ್ಮನು ಸೃಷ್ಟಿಯನ್ನಾರಂಭಿಸುತ್ತಾನೆ. ಕಡೆಯ ಕಲಿಯುಗದಲ್ಲಿ ಪ್ರಳಯವಾಗುತ್ತದೆ (ಮಧ್ಯದ ಯುಗಗಳಲ್ಲಿ ಸೃಷ್ಟಿಯಾಗಲಿ ನಾಶವಾಗಲಿ ಇಲ್ಲ. ಆದ್ದರಿಂದ ಇವುಗಳಲ್ಲಿ ಸ್ವಲ್ಪ ವಿಶೇಷ ಉಂಟು)—ಎಂದರು (7). ಆಗ ಮೈತ್ರೇಯರು

---

* ಉಪಸಂಹೃತಿ—ನಾಶ, ಪ್ರಳಯ. ಇದು ಸಾಮಾನ್ಯಪ್ರಳಯ, ಮಹಾಪ್ರಳಯ—ಎಂದು ಎರಡು ವಿಧ. ಬ್ರಹ್ಮನ ಹಗಲು ಕಳೆದಮೇಲೆ ಆಗತಕ್ಕದ್ದು ಸಾಮಾನ್ಯಪ್ರಳಯ. ಇದನ್ನು ಕಲ್ಪಾಂತವೆಂದೂ ಹೇಳುತ್ತಾರೆ. ಬ್ರಹ್ಮನ ಆಯುಸ್ಸು ಮುಗಿದಮೇಲೆ ಆಗತಕ್ಕದ್ದು ಮಹಾಪ್ರಳಯ. ಇದಕ್ಕೆ ಪ್ರಾಕೃತಪ್ರಳಯ ಎಂದೂ ಹೆಸರಿದೆ.

§ ಪ್ರಥಮಾಂಶದ ಮೂರನೇ ಅಧ್ಯಾಯದಲ್ಲಿ ಕಾಲಗಣನೆ ವಿಸ್ತಾರವಾಗಿ ಬಂದಿದೆ.

*ಶ್ರೀಮೈತ್ರೇಯ ಉವಾಚ:*

**ಕಲೇಸ್ಸ್ವರೂಪಂ ಭಗವನ್ ವಿಸ್ತರಾದ್ವಕ್ತುಮರ್ಹಸಿ।**
**ಧರ್ಮಶ್ಚತುಷ್ಪಾದ್‌ಭಗವಾನ್ ಯಸ್ಮಿನ್ವಿಪ್ಲವಮೃಚ್ಛತಿ॥** 8

*ಶ್ರೀಪರಾಶರ ಉವಾಚ:*

**ಕಲೇಃ ಸ್ವರೂಪಂ ಮೈತ್ರೇಯ ಯದ್ಭವಾನ್ ಶ್ರೋತುಮಿಚ್ಛತಿ।**
**ತನ್ನಿಬೋಧ ಸಮಾಸೇನ ವರ್ತತೇ ಯನ್ಮಹಾಮುನೇ॥** 9

**ವರ್ಣಾಶ್ರಮಾಚಾರವತೀ ಪ್ರವೃತ್ತಿರ್ನ ಕಲೌ ನೃಣಾಮ್।**
**ನ ಸಾಮಋಗ್ಯಜುರ್ಧರ್ಮವಿನಿಷ್ಪಾದನಹೈತುಕೀ॥** 10

**ವಿವಾಹಾ ನ ಕಲೌ ಧರ್ಮ್ಯಾ ನ ಶಿಷ್ಯಗುರುಸಂಸ್ಥಿತಿಃ।**
**ನ ದಾಂಪತ್ಯಕ್ರಮೋ ನೈವ ವಹ್ನಿದೇವಾತ್ಮಕಃ ಕ್ರಮಃ॥** 11

---

"ಭಗವನ್, ನಾಲ್ಕು ಪಾದಗಳಿರುವ ಭಗವಾನ್ ಧರ್ಮಪುರುಷನು ಕಲಿಯುಗದಲ್ಲಿ ವೈಕಲ್ಯವನ್ನು ಹೊಂದುತ್ತಾನಷ್ಟೆ. ಆ ಕಲಿಯ ಸ್ವರೂಪವನ್ನು ವಿಸ್ತಾರವಾಗಿ ನನಗೆ ಹೇಳಬೇಕು ಎಂದು ಕೇಳಿದರು (8). ಅದಕ್ಕೆ ಪರಾಶರಮುನಿಗಳು ಹೇಳಿದರು: ಮೈತ್ರೇಯ, ಕಲಿಯ ಸ್ವರೂಪವನ್ನು ಕೇಳುತ್ತೀಯಲ್ಲ, ಅದನ್ನು ಸಂಕ್ಷೇಪವಾಗಿ ಮಾತ್ರ ಹೇಳುತ್ತೇನೆ, ಕೇಳು (9). ಕಲಿಯುಗದಲ್ಲಿ ಮನುಷ್ಯರ ಪ್ರವೃತ್ತಿಯು ವರ್ಣಾಶ್ರಮಧರ್ಮಗಳ ಆಚಾರಕ್ಕೆ ಅನುಗುಣವಾಗಿರುವುದಿಲ್ಲ. ಋಗ್ಯಜುಃಸಾಮವೇದಗಳಲ್ಲಿ ಉಕ್ತವಾದ ಧರ್ಮವನ್ನು ನಡೆಸಬೇಕೆಂಬ ಪ್ರವೃತ್ತಿ ಜನರಿಗಿರುವುದಿಲ್ಲ (10). ಕಲಿಯುಗದಲ್ಲಿ (ಬ್ರಾಹ್ಮ, ಪ್ರಾಜಾಪತ್ಯ—ಮುಂತಾದ) ಧರ್ಮವ್ಯವಸ್ಥೆಯಿಂದ ವಿವಾಹಗಳು ನಡೆಯುವುದಿಲ್ಲ. ಗುರುಶಿಷ್ಯರಲ್ಲಿ (ಶುಶ್ರೂಷೆ, ಅನುಗ್ರಹ ಮುಂತಾದ) ಗುರುಕುಲ ಪದ್ಧತಿಯೂ ಇರುವುದಿಲ್ಲ. ದಾಂಪತ್ಯದಲ್ಲಿ ಪರಸ್ಪರ ಹೊಂದಿಕೊಳ್ಳತಕ್ಕ ಕ್ರಮವೂ ಇರುವುದಿಲ್ಲ, ಅಗ್ನಿಪೂಜೆ, ದೇವತಾಪೂಜೆ—ಮುಂತಾದ ವಿಧಾನವೂ ಇರುವುದಿಲ್ಲ (11).

**ಯತ್ರ ಕುತ್ರ ಕುಲೇ ಜಾತೋ ಬಲೀ ಸರ್ವೇಶ್ವರಃ ಕಲೌ।**
**ಸರ್ವೇಭ್ಯ ಏವ ವರ್ಣೇಭ್ಯೋ ಯೋಗ್ಯಃ ಕನ್ಯಾವರೋ ಧನೀ॥ 12**

**ಯೇನ ಕೇನ ಚ ಯೋಗೇನ ದ್ವಿಜಾತಿರ್ದೀಕ್ಷಿತಃ ಕಲೌ।**
**ಯೈವ ಸೈವ ಚ ಮೈತ್ರೇಯ ಪ್ರಾಯಶ್ಚಿತ್ತಂ ಕಲೌ ಕ್ರಿಯಾ॥ 13**

**ಸರ್ವಮೇವ ಕಲೌ ಶಾಸ್ತ್ರಂ ಯಸ್ಯ ಯದ್ವಚನಂ ದ್ವಿಜ।**
**ದೇವತಾ ಚ ಕಲೌ ಸರ್ವಾ ಸರ್ವಸ್ಸರ್ವಸ್ಯ ಚಾಶ್ರಮಃ॥ 14**

**ಉಪವಾಸಸ್ತಥಾಯಾಸೋ ವಿತ್ತೋತ್ಸರ್ಗಸ್ತಪಃ ಕಲೌ।**
**ಧರ್ಮೋ ಯಥಾಭಿರುಚಿತೈರನುಷ್ಠಾನೈರನುಷ್ಠಿತಃ॥ 15**

**ವಿತ್ತೇನ ಭವಿತಾ ಪುಂಸಾಂ ಸ್ವಲ್ಪೇನಾಢ್ಯಮದಃ ಕಲೌ।**
**ಸ್ತ್ರೀಣಾಂ ರೂಪಮದಶ್ಚೈವಂ ಕೇಶೈರೇವ ಭವಿಷ್ಯತಿ॥ 16**

**ಸುವರ್ಣಮಣಿರತ್ನಾದೌ ವಸ್ತ್ರೇ ಚೋಪಕ್ಷಯಂ ಗತೇ।**
**ಕಲೌ ಸ್ತ್ರಿಯೋ ಭವಿಷ್ಯಂತಿ ತದಾ ಕೇಶೈರಲಂಕೃತಾಃ॥ 17**

---

ಯಾವ ಕುಲದಲ್ಲಾದರೂ ಹುಟ್ಟಿರಲಿ, ಬಲಿಷ್ಠನಾದವರು ಕಲಿಯುಗದಲ್ಲಿ ಸರ್ವ ನಿಯಾಮಕನಾಗುತ್ತಾನೆ. ಯಾವ ವರ್ಣದಲ್ಲಿಯೇ ಹುಟ್ಟಿರಲಿ, ಧನಿಕನು ಕನ್ಯೆಗೆ ವರನಾಗಲು ಯೋಗ್ಯನೆನಿಸುತ್ತಾನೆ (12). ಬ್ರಾಹ್ಮಣನು ಯಾವುದೋ ಒಂದು ಕುತ್ಸಿತ ಮಾರ್ಗದಿಂದ 'ದೀಕ್ಷಿತ' ಎನ್ನಿಸಿಕೊಂಡುಬಿಡುತ್ತಾನೆ! ಕಲಿಯುಗದಲ್ಲಿ ಯಾವುದೋ ಒಂದು ಅಲ್ಪಕ್ರಿಯೆಯೇ 'ಪ್ರಾಯಶ್ಚಿತ್ತ'ವಾಗಿಬಿಡುತ್ತದೆ! ಯಾರ ಬಾಯಿಂದ ಯಾವ ವಾಕ್ಯವೇ ಹೊರಡಲಿ ಅದೆಲ್ಲವೂ ಶಾಸ್ತ್ರವಾಗಿಬಿಡುತ್ತದೆ. ಯಾರನ್ನು ಪೂಜಿಸುತ್ತಾರೋ ಅವರೇ ದೇವರು. ಕಲಿಯುಗದಲ್ಲಿ ಎಲ್ಲರೂ ಎಲ್ಲ ಆಶ್ರಮಗಳನ್ನೂ ವಹಿಸಿಕೊಳ್ಳಬಹುದಾಗುತ್ತದೆ (13-14). ತಮಗೆ ತೋರಿದಂತೆ ಮಾಡುವ ಉಪವಾಸ, ಶ್ರಮ, ಹಣವನ್ನು ತೆರುವುದು—ಇದೆಲ್ಲ ತಪಸ್ಸಾಗುತ್ತದೆ. ಮನಸ್ಸಿಗೆ ಕಂಡಂತೆ ಮಾಡುವ ಕ್ರಿಯೆಯೂ ಧರ್ಮವೆನಿಸುತ್ತದೆ. ಕಲಿಯುಗದಲ್ಲಿ ಸ್ವಲ್ಪ ಹಣವಿದ್ದರೂ ಸಾಕು, ಜನರಿಗೆ ಧನಮದ ಹುಟ್ಟುತ್ತದೆ. ಕೇಶಗಳಿಂದಲೇ ಸ್ತ್ರೀಯರಿಗೆ ರೂಪಮದ ಬರುತ್ತದೆ (15-16). ಸುವರ್ಣಮಣಿ ರತ್ನ ವಸ್ತ್ರಗಳನ್ನು ದೂರಮಾಡಿ ಸ್ತ್ರೀಯರು ಕಲಿಯುಗದಲ್ಲಿ ಕೇಶಗಳಿಂದ ತಮ್ಮನ್ನು

**ಪರಿತ್ಯಕ್ಷ್ಯಂತಿ ಭರ್ತಾರಂ ವಿತ್ತಹೀನಂ ತಥಾ ಸ್ತ್ರಿಯಃ।**
**ಭರ್ತಾ ಭವಿಷ್ಯತಿ ಕಲೌ ವಿತ್ತವಾನೇವ ಯೋಷಿತಾಮ್॥ 18**

**ಯೋ ವೈ ದದಾತಿ ಬಹುಲಂ ಸ್ವಂ ಸ ಸ್ವಾಮೀ ಸದಾ ನೃಣಾಮ್।**
**ಸ್ವಾಮಿತ್ವಹೇತುಸ್ಸಂಬಂಧೋ ನ ಚಾಭಿಜನತಾ ತಥಾ॥ 19**

**ಗೃಹಾಂತಾ ದ್ರವ್ಯಸಂಘಾತಾ ದ್ರವ್ಯಾಂತಾ ಚ ತಥಾ ಮತಿಃ।**
**ಅರ್ಥಾಶ್ಚಾತ್ಮೋಪಭೋಗಾಂತಾ ಭವಿಷ್ಯಂತಿ ಕಲೌ ಯುಗೇ॥ 20**

**ಸ್ತ್ರಿಯಃ ಕಲೌ ಭವಿಷ್ಯಂತಿ ಸ್ವೈರಿಣ್ಯೋ ಲಲಿತಸ್ಪೃಹಾಃ।**
**ಅನ್ಯಾಯಾವಾಪ್ತವಿತ್ತೇಷು ಪುರುಷಾಃ ಸ್ಪೃಹಯಾಲವಃ॥ 21**

**ಅಭ್ಯರ್ಥಿತಾಪಿ* ಸುಹೃದಾ ಸ್ವಾರ್ಥಹಾನಿಂ ನ ಮಾನವಾಃ।**
**ಪಣಾರ್ಧಾರ್ಧಾರ್ಧಮಾತ್ರೇಽಪಿ ಕರಿಷ್ಯಂತಿ ಕಲೌ ದ್ವಿಜ॥ 22**

---

ಸಿಂಗರಿಸಿಕೊಳ್ಳುತ್ತಾರೆ. ಗಂಡನು ಧನಹೀನನಾದರೆ ಅವನನ್ನು ಬಿಟ್ಟುಬಿಡುತ್ತಾರೆ. ಧನವಂತನೊಬ್ಬನೇ ಕಲಿಯುಗದಲ್ಲಿ ಸ್ತ್ರೀಯರಿಗೆ ಗಂಡನಾಗಲು ಯೋಗ್ಯನೆನಿಸುತ್ತಾನೆ (17-18). ಯಾವಾತನು ಹೆಚ್ಚಾಗಿ ಹಣವನ್ನು ತ್ಯಾಗಮಾಡುತ್ತಾನೋ ಆತನು (ಎಷ್ಟೇ ನಿಂದ್ಯನಾಗಿದ್ದರೂ) ಜನರಿಗೆ ಸ್ವಾಮಿಯಾಗುವನು. ಸ್ವಾಮಿಯಾಗಲು ಬೇಕಾದ ಅನ್ಯಕಾರಣದ ಗಣನೆ ಇಲ್ಲವಾಗುವುದು. ಉತ್ತಮ ವಂಶದ ಗಣನೆಯೂ ಇರುವುದಿಲ್ಲ (19). ಕಲಿಯುಗದಲ್ಲಿ ದ್ರವ್ಯಸಂಗ್ರಹವೆಲ್ಲವೂ ಗೃಹನಿರ್ಮಾಣದಲ್ಲಿ ಸಮಾಪ್ತ. ಬುದ್ಧಿಯು ದ್ರವ್ಯಸಂಗ್ರಹದಲ್ಲಿ ಸಮಾಪ್ತ. ಧನವೆಲ್ಲವೂ ಆತ್ಮಭೋಗದಲ್ಲಿ ಸಮಾಪ್ತ! ಕಲಿಯುಗದಲ್ಲಿ ಸ್ತ್ರೀಯರು ಸ್ವೇಚ್ಛಾಚಾರಿಣಿಯರೂ ಸುಖಲಾಲಸೆಯರೂ ಆಗುವರು. ಪುರುಷರಿಗೆ ಅನ್ಯಾಯದ ಧನಸಂಪಾದನೆಯಲ್ಲಿ ಆಸೆ ಬೆಳೆಯುವುದು (20-21). ಮೈತ್ರೇಯ, ಮಿತ್ರನು ಬೇಡಿಕೊಂಡರೂ ಸಹ ಕಲಿಯುಗದಲ್ಲಿ ಜನರು ಅವನಿಗಾಗಿ ಒಂದು ಬಿಡಿಗಾಸನ್ನೂ ಕೂಡ ಕಳೆದುಕೊಳ್ಳುವುದಿಲ್ಲ. ಅವನಿಗಾಗಿ ಸ್ವಾರ್ಥಕ್ಕೆ ಭಂಗವನ್ನು ತಂದುಕೊಳ್ಳುವುದಿಲ್ಲ! (22). ವಿಪ್ರರ ವಿಷಯದಲ್ಲಿ ಅನ್ಯರಿಗೆ 'ಮನುಷ್ಯ

---

* ಅಭ್ಯರ್ಥಿತಾಃ ಅಪಿ–ಎಂದು ಪದವಿಭಾಗ, ಸಂಧಿ ಆರ್ಷ.

**ಸಮಾನಪೌರುಷಂ ಚೇತೋ ಭಾವಿ ವಿಪ್ರೇಷು ವೈ ಕಲೌ।**
**ಕ್ಷೀರಪ್ರದಾನಸಂಬಂಧಿ ಭಾವಿ ಗೋಷು ಚ ಗೌರವಮ್॥** 23

**ಅನಾವೃಷ್ಟಿಭಯಪ್ರಾಯಾಃ ಪ್ರಜಾಃ ಕ್ಷುದ್ಭಯಕಾತರಾಃ।**
**ಭವಿಷ್ಯಂತಿ ತದಾ ಸರ್ವೇ ಗಗನಾಸಕ್ತದೃಷ್ಟಯಃ॥** 24

**ಕಂದಮೂಲಫಲಾಹಾರಾಸ್ತಾಪಸಾ ಇವ ಮಾನವಾಃ।**
**ಆತ್ಮಾನಂ ಘಾತಯಿಷ್ಯಂತಿ ಹ್ಯನಾವೃಷ್ಟ್ಯಾದಿದುಃಖಿತಾಃ॥** 25

**ದುರ್ಭಿಕ್ಷಮೇವ ಸತತಂ ತಥಾ ಕ್ಲೇಶಮನೀಶ್ವರಾಃ।**
**ಪ್ರಾಪ್ಸ್ಯಂತಿ ವ್ಯಾಹತಸುಖಪ್ರಮೋದಾ ಮಾನವಾಃ ಕಲೌ॥** 26

**ಅಸ್ನಾನಭೋಜಿನೋ ನಾಗ್ನಿದೇವತಾತಿಥಿಪೂಜನಮ್।**
**ಕರಿಷ್ಯಂತಿ ಕಲೌ ಪ್ರಾಪ್ತೇ ನ ಚ ಪಿಂಡೋದಕಕ್ರಿಯಾಮ್॥** 27

**ಲೋಲುಪಾ ಹ್ರಸ್ವದೇಹಾಶ್ಚ ಬಹ್ವನ್ನಾದನತತ್ಪರಾಃ।**
**ಬಹುಪ್ರಜಾಲ್ಪಭಾಗ್ಯಾಶ್ಚ ಭವಿಷ್ಯಂತಿ ಕಲೌ ಸ್ತ್ರಿಯಃ॥** 28

---

ರಾದ್ದರಿಂದ ನಾವು ಸಮಾನರು' ಎಂಬ ಬುದ್ಧಿ ಹುಟ್ಟುವುದು. ಹಾಲುಕೊಡುವ ನಿಮಿತ್ತದಿಂದ ಮಾತ್ರ ಗೋವುಗಳಲ್ಲಿ ಆದರ ಬುದ್ಧಿ ಇರುವುದು. ಕಲಿಯುಗದಲ್ಲಿ ವಿಶೇಷವಾಗಿ ಅನಾವೃಷ್ಟಿಯ ಭಯವಿರುತ್ತದೆ. ಹಸಿವಿನ ಹೆದರಿಕೆಯಿಂದ ವ್ಯಾಕುಲರಾದ ಪ್ರಜೆಗಳು ಸದಾ ಆಕಾಶವನ್ನು ನೋಡುತ್ತ ಇರುತ್ತಾರೆ! (23-24). ತಪಸ್ವಿಗಳೋ ಎಂಬಂತೆ ಕಂದ ಮೂಲ ಫಲಾಹಾರಿಗಳಾಗಿ ಅನಾವೃಷ್ಟ್ಯಾದಿ ಬಾಧೆಗಳಿಗೆ ಸಿಕ್ಕಿ ನರಳುತ್ತಾರಲ್ಲದೆ ಆತ್ಮಹತ್ಯೆಯನ್ನೂ ಮಾಡಿಕೊಳ್ಳುತ್ತಾರೆ. ಕಲಿಯುಗದಲ್ಲಿ ಯಾವಾಗಲೂ ದುರ್ಭಿಕ್ಷವೇ. ಜನರು ಅನಾಥರಾಗಿ ಕ್ಲೇಶದಲ್ಲಿ ತೊಳಲುತ್ತಾರೆ. ನಿಜವಾದ ಸೌಖ್ಯವೂ ಪ್ರಮೋದವೂ ಇರುವುದಿಲ್ಲ (25-26). ಕಲಿಯುಗ ಬಂದಾಗ ಜನರು ಸ್ನಾನಮಾಡದೆ ಊಟಮಾಡುತ್ತಾರೆ. ಅಗ್ನಿ-ದೇವತೆ-ಅತಿಥಿಗಳ ಪೂಜೆಯನ್ನು ಮಾಡುವುದಿಲ್ಲ. ಪಿತೃಗಳಿಗೆ ಪಿಂಡೋದಕ ಕ್ರಿಯೆಯನ್ನು ನಡೆಸುವುದಿಲ್ಲ (27). ಸ್ತ್ರೀಯರು ವಿಷಯಲೋಲುಪರೂ ಗಿಡ್ಡ ದೇಹದವರೂ ಆಗಿರುತ್ತಾರಲ್ಲದೆ ವಿಪುಲವಾಗಿ ಆಹಾರವನ್ನು ಸೇವಿಸುತ್ತಾರೆ.

**ಉಭಾಭ್ಯಾಮಪಿ ಪಾಣಿಭ್ಯಾಂ ಶಿರಃ ಕಂಡೂಯನಂ ಸ್ತ್ರಿಯಃ।**
**ಕುರ್ವತ್ಯೋ ಗುರುಭರ್ತೃಣಾಮಾಜ್ಞಾಂ ಭೇತ್ಸ್ಯಂತ್ಯನಾದರಾಃ॥** 29

**ಸ್ವಪೋಷಣಪರಾಃ ಕ್ಷುದ್ರಾ ದೇಹಸಂಸ್ಕಾರವರ್ಜಿತಾಃ।**
**ಪರುಷಾನೃತಭಾಷಿಣ್ಯೋ ಭವಿಷ್ಯಂತಿ ಕಲೌ ಸ್ತ್ರಿಯಃ॥** 30

**ದುಃಶೀಲಾ ದುಷ್ಟಶೀಲೇಷು ಕುರ್ವತ್ಯಸ್ಸತತಂ ಸ್ಪೃಹಾಮ್।**
**ಅಸದ್‌ವೃತ್ತಾ ಭವಿಷ್ಯಂತಿ ಪುರುಷೇಷು ಕುಲಾಂಗನಾಃ॥** 31

**ವೇದಾದಾನಂ ಕರಿಷ್ಯಂತಿ ವಟವಶ್ಚಾಕೃತವ್ರತಾಃ।**
**ಗೃಹಸ್ಥಾಶ್ಚ ನ ಹೋಷ್ಯಂತಿ ನ ದಾಸ್ಯಂತ್ಯುಚಿತಾನ್ಯಪಿ॥** 32

**ವಾನಪ್ರಸ್ಥಾ ಭವಿಷ್ಯಂತಿ ಗ್ರಾಮ್ಯಾಹಾರಪರಿಗ್ರಹಾಃ।**
**ಭಿಕ್ಷವಶ್ಚಾಪಿ ಮಿತ್ರಾದಿಸ್ನೇಹಸಂಬಂಧಯಂತ್ರಣಾಃ॥** 33

---

ಬಹಳ ಮಕ್ಕಳುಳ್ಳವರೂ ಅಲ್ಪಭಾಗ್ಯರೂ ಆಗುತ್ತಾರೆ. ಎರಡು ಕೈಗಳಿಂದಲೂ ತಲೆಯನ್ನು ಕೆರೆದುಕೊಳ್ಳುತ್ತ ಗುರುಹಿರಿಯರ ಮತ್ತು ಗಂಡಂದಿರ ಆಜ್ಞೆಯನ್ನು ಅನಾದರದಿಂದ ಉಲ್ಲಂಘಿಸುತ್ತಾರೆ (28-29). ತಮ್ಮ ಪೋಷಣೆಯಲ್ಲಿ ಮಾತ್ರ ನಿರತರೂ ಕ್ಷುದ್ರಸ್ವಭಾವದವರೂ ಶಾರೀರಿಕವಾದ ಶೌಚದಿಂದ ವರ್ಜಿತರೂ ಆಗುತ್ತಾರೆ. ಕಲಿಯುಗದಲ್ಲಿ ಸ್ತ್ರೀಯರು ನಿಷ್ಠುರವಾಗಿ ಮಾತಾಡತಕ್ಕವರೂ ಸುಳ್ಳುಹೇಳತಕ್ಕವರೂ ಆಗುವರು. ಅವರು ದುಶ್ಶೀಲರೂ ದುರ್ಜನರನ್ನು ಬಯಸತಕ್ಕವರೂ ಗಂಡಸರ ವಿಷಯದಲ್ಲಿ ಕೆಟ್ಟದಾಗಿ ನಡೆದುಕೊಳ್ಳತಕ್ಕವರೂ ಆಗುವರು (30-31). ವಟುಗಳು (ಸಂಧ್ಯಾವಂದನಾದಿ) ವೈದಿಕವ್ರತಗಳನ್ನಾಚರಿಸದೆಯೇ ವೇದಾಧ್ಯಯನದಲ್ಲಿ ತೊಡಗುವರು. ಗೃಹಸ್ಥರು ವೈಶ್ವದೇವಾದಿ ಹವನಗಳನ್ನು ಮಾಡುವುದಿಲ್ಲ. ಸತ್ಪಾತ್ರಗಳಿಗೆ ಯೋಗ್ಯವಾದ ದಾನವನ್ನು ಕೊಡುವುದಿಲ್ಲ. ವಾನಪ್ರಸ್ಥರು ಗ್ರಾಮ್ಯಾಹಾರಗಳನ್ನು ಸೇವಿಸುವರು (ಕಂದಮೂಲಫಲಾದಿಗಳನ್ನಲ್ಲ). ಸಂನ್ಯಾಸಿಗಳು ತಮ್ಮ ಮಿತ್ರರು, ಬಂಧುಗಳು—ಇತ್ಯಾದಿ ಸ್ನೇಹಬಂಧಕ್ಕೆ ಕಟ್ಟುಬೀಳುವರು (32-33). ಕಲಿಯುಗದಲ್ಲಿ ರಾಜ್ಯವನ್ನಾಳ

ಅರಕ್ಷಿತಾರೋ ಹರ್ತಾರಶ್ಶುಲ್ಕವ್ಯಾಜೇನ ಪಾರ್ಥಿವಾಃ।
ಹಾರಿಣೋ ಜನವಿತ್ತಾನಾಂ ಸಂಪ್ರಾಪ್ತೇ ತು ಕಲೌ ಯುಗೇ॥ 34

ಯೋ ಯೋಽಶ್ವರಥನಾಗಾಢ್ಯಸ್ಸ ಸ ರಾಜಾ ಭವಿಷ್ಯತಿ।
ಯಶ್ಚ ಯಶ್ಚಾಬಲಸ್ಸರ್ವಸ್ಸ ಸ ಭೃತ್ಯಃ ಕಲೌ ಯುಗೇ॥ 35

ವೈಶ್ಯಾಃ ಕೃಷಿವಾಣಿಜ್ಯಾದಿ ಸಂತ್ಯಜ್ಯ ನಿಜಕರ್ಮ ಯತ್।
ಶೂದ್ರವೃತ್ತ್ಯಾ ಪ್ರವರ್ತ್ಸ್ಯಂತಿ ಕಾರುಕರ್ಮೋಪಜೀವಿನಃ॥ 36

ಭೈಕ್ಷವ್ರತಪರಾಃ ಶೂದ್ರಾಃ ಪ್ರವ್ರಜ್ಯಾಲಿಂಗಿನೋಽಧಮಾಃ।
ಪಾಷಂಡಸಂಶ್ರಯಾಂ ವೃತ್ತಿಮಾಶ್ರಯಿಷ್ಯಂತಿ ಸತ್ಕೃತಾಃ॥ 37

ದುರ್ಭಿಕ್ಷಕರಪೀಡಾಭಿರತೀವೋಪದ್ರುತಾ ಜನಾಃ।
ಗೋಧೂಮಾನ್ನಯವಾನ್ನಾಢ್ಯಾನ್ ದೇಶಾನ್ಯಾಸ್ಯಂತಿ ದುಃಖಿತಾಃ॥ 38

ವೇದಮಾರ್ಗೇ ಪ್ರಲೀನೇ ಚ ಪಾಷಂಡಾಢ್ಯೇ ತತೋ ಜನೇ।
ಅಧರ್ಮವೃದ್ಧ್ಯಾ ಲೋಕಾನಾಮಲ್ಪಮಾಯುರ್ಭವಿಷ್ಯತಿ॥ 39

---

ತಕ್ಕವರು ರಕ್ಷಕರಾಗುವುದಿಲ್ಲ, ಶುಲ್ಕವ್ಯಾಜದಿಂದ ಧನವನ್ನು ಕಿತ್ತುಕೊಳ್ಳತಕ್ಕವರಾಗುವರು. ಪ್ರಜೆಗಳ ದ್ರವ್ಯಗಳನ್ನು ಅಪಹರಿಸುವರು. ಯಾವನಿಗೆ ಕುದುರೆ, ರಥ, ಆನೆ—ಮುಂತಾದ ಸಂಪತ್ತಿರುವುದೋ ಅವನು ರಾಜನಾಗುವನು, ಯಾವನು ದುರ್ಬಲನೋ ಅವನು ಕಲಿಯುಗದಲ್ಲಿ ಭೃತ್ಯನಾಗುವನು (34-35). ವೈಶ್ಯರು ಕೃಷಿ, ವಾಣಿಜ್ಯ—ಮುಂತಾದ ಸ್ವಧರ್ಮದ ಕಾರ್ಯವನ್ನು ವರ್ಜಿಸಿ, ಶಿಲ್ಪವೇ ಮೊದಲಾದ ಶೂದ್ರವೃತ್ತಿಯಿಂದ ಜೀವಿಸುವರು. ಶೂದ್ರರು ಸಂನ್ಯಾಸಧರ್ಮವನ್ನವಲಂಬಿಸುವರು. ಅಧಮರು ಪ್ರವ್ರಾಜಕ ಚಿಹ್ನೆಯನ್ನು ಧರಿಸುವರು. ನೀಚರು ಪೂಜಿತರಾಗಿ ಪಾಷಂಡ ವೃತ್ತಿಯಲ್ಲಿ ತೊಡಗುವರು (36-37). ಬರಗಾಲ, ತೆರಿಗೆ—ಮೊದಲಾದವುಗಳಿಂದ ಪೀಡೆಗೊಳಗಾದ ಪ್ರಜೆಗಳು ಗೋಧಿ, ಅಕ್ಕಿ, ಜವೆಗೋಧಿ—ಮೊದಲಾದ ಧಾನ್ಯಗಳಿಂದ ಸಮೃದ್ಧವಾದ ಬೇರೆ ಬೇರೆ ದೇಶಗಳಿಗೆ ವಲಸೆ ಹೋಗುವರು (38). ವೇದಮಾರ್ಗವು ಲುಪ್ತವಾಗಿ ಪಾಷಂಡತನವು ಹೆಚ್ಚಿ ಅಧರ್ಮವು ವರ್ಧಿಸಲಾಗಿ ಜನರ ಆಯುಸ್ಸು ಅಲ್ಪವಾಗುವುದು. ಶಾಸ್ತ್ರವಿರುದ್ಧವೂ ಘೋರವೂ ಆದ ತಪಸ್ಸನ್ನು ಜನರು

ಅಶಾಸ್ತ್ರವಿಹಿತಂ ಘೋರಂ ತಪ್ಯಮಾನೇಷು ವೈ ತಪಃ।
ನರೇಷು ನೃಪದೋಷೇಣ ಬಾಲ್ಯೇ ಮೃತ್ಯುರ್ಭವಿಷ್ಯತಿ॥ 40

ಭವಿತಾ ಯೋಷಿತಾಂ ಸೂತಿಃ ಪಂಚ ಷಟ್ ಸಪ್ತವಾರ್ಷಿಕೀ।
ನವಾಷ್ಟದಶವರ್ಷಾಣಾಂ ಮನುಷ್ಯಾಣಾಂ ತಥಾ ಕಲೌ॥ 41

ಪಲಿತೋದ್ಭವಶ್ಚ ಭವಿತಾ ತಥಾ ದ್ವಾದಶವಾರ್ಷಿಕಃ।
ನಾತಿಜೀವತಿ ವೈ ಕಶ್ಚಿತ್ಕಲೌ ವರ್ಷಾಣಿ ವಿಂಶತಿಃ॥ 42

ಅಲ್ಪಪ್ರಜ್ಞಾ ವೃಥಾಲಿಂಗಾ ದುಷ್ಟಾಂತಃಕರಣಾಃ ಕಲೌ।
ಯತಸ್ತತೋ ವಿನಂಕ್ಷ್ಯಂತಿ ಕಾಲೇನಾಲ್ಪೇನ ಮಾನವಾಃ॥ 43

ಯದಾ ಯದಾ ಹಿ ಮೈತ್ರೇಯ ಹಾನಿರ್ಧರ್ಮಸ್ಯ ಲಕ್ಷ್ಯತೇ।
ತದಾ ತದಾ ಕಲೇರ್ವೃದ್ಧಿರನುಮೇಯಾ ವಿಚಕ್ಷಣೈಃ॥ 44

---

ಆಚರಿಸತೊಡಗಿದಾಗ, ರಾಜದೋಷದಿಂದ ಪ್ರಜೆಗಳಿಗೆ ಬಾಲ್ಯದಲ್ಲಿಯೇ ಸಾವು ಸಂಭವಿಸುವುದು (39-40). ಹೆಂಗಸರಿಗೆ ಐದಾರು ಏಳು ವರ್ಷಗಳಾದಾಗ, ಗಂಡಸರಿಗೆ ಎಂಟೊಂಬತ್ತು ಹತ್ತು ವರ್ಷಗಳಾದಾಗ ಅವರಿಗೆ ಸಂತಾನ ವಾಗುವುದು. ಹನ್ನೆರಡು ವರ್ಷಗಳಿಗೆ ಕೂದಲು ಬೆಳ್ಳಗಾಗುವುದು. ಯಾವನೂ ಇಪ್ಪತ್ತು ವರ್ಷಗಳ ಮೇಲೆ ಬದುಕುವುದಿಲ್ಲ* (41-42). ಕಲಿಯುಗದಲ್ಲಿ ಜನರ ಪ್ರಜ್ಞಾಶಕ್ತಿ ಮಂದವಾಗುವುದು. ಜನರು ಅರ್ಥವಿಲ್ಲದ ಚಿಹ್ನೆಗಳನ್ನು ಧರಿಸುವರು. ಅವರ ಅಂತಃಕರಣವು ದುಷ್ಟವಾದದ್ದು. ಆದ್ದರಿಂದ ಮಾನವರು ಅಲ್ಪಕಾಲದಲ್ಲಿಯೇ ನಾಶವಾಗುವರು (43). ಮೈತ್ರೇಯ, ಹೇಗೆ ಹೇಗೆ ಧರ್ಮವು ಹ್ರಾಸಗೊಳ್ಳುತ್ತ ಹೋಗುವುದೋ ಹಾಗೆ ಹಾಗೆ ಕಲಿ ಪ್ರಭಾವವು ವರ್ಧಿಸುತ್ತ ಹೋಗುತ್ತಿದೆಯೆಂದು ಪ್ರಾಜ್ಞರು ಊಹಿಸಿಕೊಳ್ಳಬೇಕು. ಹೇಗೆ ಹೇಗೆ

---

* ಆಯುಸ್ಸು ಅಲ್ಪವಾಗುತ್ತ ಹೋಗುವುದೆಂದು ತಾತ್ಪರ್ಯ. ಅತಿಶಯೋಕ್ತಿಯನ್ನು ಸಾಮಾನ್ಯೋಕ್ತಿಯಾಗಿ ಪರಿಗಣಿಸಬೇಕು.

**ಯದಾ ಯದಾ ಹಿ ಪಾಷಂಡವೃದ್ಧಿರ್ಮೈತ್ರೇಯ ಲಕ್ಷ್ಯತೇ।**
**ತದಾ ತದಾ ಕಲೇರ್ವೃದ್ಧಿರನುಮೇಯಾ ಮಹಾತ್ಮಭಿಃ॥ 45**

**ಯದಾ ಯದಾ ಸತಾಂ ಹಾನಿರ್ವೇದಮಾರ್ಗಾನುಸಾರಿಣಾಮ್।**
**ತದಾ ತದಾ ಕಲೇರ್ವೃದ್ಧಿರನುಮೇಯಾ ವಿಚಕ್ಷಣೈಃ॥ 46**

**ಪ್ರಾರಂಭಾಶ್ಚಾವಸೀದಂತಿ ಯದಾ ಧರ್ಮಭೃತಾಂ ನೃಣಾಮ್।**
**ತದಾನುಮೇಯಂ ಪ್ರಾಧಾನ್ಯಂ ಕಲೇರ್ಮೈತ್ರೇಯ ಪಂಡಿತೈಃ॥ 47**

**ಯದಾ ಯದಾ ನ ಯಜ್ಞಾನಾಮೀಶ್ವರಃ ಪುರುಷೋತ್ತಮಃ।**
**ಇಜ್ಯತೇ ಪುರುಷೈರ್ಯಜ್ಞೈಸ್ತದಾ ಜ್ಞೇಯಂ ಕಲೇರ್ಬಲಮ್॥ 48**

**ನ ಪ್ರೀತಿರ್ವೇದವಾದೇಷು ಪಾಷಂಡೇಷು ಯದಾ ರತಿಃ।**
**ಕಲೇರ್ವೃದ್ಧಿಸ್ತದಾ ಪ್ರಾಜ್ಞೈರನುಮೇಯಾ ವಿಚಕ್ಷಣೈಃ॥ 49**

**ಕಲೌ ಜಗತ್ಪತಿಂ ವಿಷ್ಣುಂ ಸರ್ವಸ್ರಷ್ಟಾರಮೀಶ್ವರಮ್।**
**ನಾರ್ಚಯಿಷ್ಯಂತಿ ಮೈತ್ರೇಯ ಪಾಷಂಡೋಪಹತಾ ಜನಾಃ॥ 50**

---

ನಾಸ್ತಿಕರ ಸಂಖ್ಯೆ ಹೆಚ್ಚುತ್ತಿರುವುದು ಕಂಡುಬರುತ್ತದೆಯೋ ಹಾಗೆಹಾಗೆ ಕಲಿಯು ವರ್ಧಿಸುತ್ತಿದೆಯೆಂದು ಮಹಾತ್ಮರು ಅನುಮಾನಿಸಬೇಕು (44-45). ವೇದ ಮಾರ್ಗಾನುಸಾರಿಗಳಾದ ಸಜ್ಜನರು ಕ್ಷೀಣಿಸುತ್ತ ಹೋದಂತೆ ಕಲಿಯು ವೃದ್ಧಿ ಗೊಳ್ಳುತ್ತಿದೆಯೆಂದು ವಿಚಕ್ಷಣರಾದವರು ತಿಳಿಯಬೇಕು. ಧರ್ಮಾತ್ಮರಾದ ಜನರು ಆರಂಭಿಸಿದ ಕಾರ್ಯಗಳು ಯಾವಾಗ ನಿಷ್ಫಲವಾಗುತ್ತವೆಯೋ ಆಗ ಕಲಿಯು ಪ್ರಾಧಾನ್ಯವನ್ನು ಗಳಿಸುತ್ತಿದೆಯೆಂದು ಪಂಡಿತರು ಭಾವಿಸಬೇಕು (46-47). ಯಜ್ಞಗಳಿಗೆ ಅಧೀಶ್ವರನಾದ ಪುರುಷೋತ್ತಮನಾದ ವಿಷ್ಣುವನ್ನು ಜನರು ಯಜ್ಞಗಳಿಂದ ಯಾವಾಗ ಆರಾಧಿಸುವುದಿಲ್ಲವೋ ಆಗ ಕಲಿಯು ಬಲಿಷ್ಠನಾಗುತ್ತಿದ್ದಾನೆಂದು ಗ್ರಹಿಸಬೇಕು (48). ವೇದವಾದಗಳಲ್ಲಿ ಯಾವಾಗ ಪ್ರೀತಿ ತಪ್ಪುವುದೋ (ವೇದ ವಿರುದ್ಧವಾದ) ಪಾಷಂಡವಾದಗಳಲ್ಲಿ ಪ್ರೀತಿ ಬೆಳೆಯುವುದೋ ಆಗ ಕಲಿಯುಗವು ಬೆಳೆಯುತ್ತಿದೆಯೆಂದು ಪ್ರಾಜ್ಞರಾದ ವಿವೇಕಿಗಳು ಅರಿತುಕೊಳ್ಳಬೇಕು (49). ಮೈತ್ರೇಯ, ಪಾಷಂಡವಾದಕ್ಕೆ ವಶರಾದ ಜನರು ಕಲಿಯುಗದಲ್ಲಿ ಜಗದೀಶ್ವರನೂ ವಿಶ್ವಸೃಷ್ಟಿಕರ್ತನೂ

**ಕಿಂ ದೇವೈಃ ಕಿಂ ದ್ವಿಜೈರ್ವೇದೈಃ ಕಿಂ ಶೌಚೇನಾಂಬುಜನ್ಮನಾ।**
**ಇತ್ಯೇವಂ ವಿಪ್ರ ವಕ್ಷ್ಯಂತಿ ಪಾಷಂಡೋಪಹತಾ ಜನಾಃ॥ 51**

**ಸ್ವಲ್ಪಾಂಬುವೃಷ್ಟಿಃ ಪರ್ಜನ್ಯಃ ಸಸ್ಯಂ ಸ್ವಲ್ಪಫಲಂ ತಥಾ।**
**ಫಲಂ ತಥಾಽಲ್ಪಸಾರಂ ಚ ವಿಪ್ರ ಪ್ರಾಪ್ತೇ ಕಲೌ ಯುಗೇ॥ 52**

**ಶಾಣೀಪ್ರಾಯಾಣಿ ವಸ್ತ್ರಾಣಿ ಶಮೀಪ್ರಾಯಾ ಮಹೀರುಹಾಃ।**
**ಶೂದ್ರಪ್ರಾಯಾಸ್ತಥಾ ವರ್ಣಾ ಭವಿಷ್ಯಂತಿ ಕಲೌ ಯುಗೇ॥ 53**

**ಅಣುಪ್ರಾಯಾಣಿ ಧಾನ್ಯಾನಿ ಅಜಾಪ್ರಾಯಂ ತಥಾ ಪಯಃ।**
**ಭವಿಷ್ಯತಿ ಕಲೌ ಪ್ರಾಪ್ತೇ ಹ್ಯೌಶೀರಂ ಚಾನುಲೇಪನಮ್॥ 54**

**ಶ್ವಶ್ರೂಶ್ವಶುರಭೂಯಿಷ್ಠಾ ಗುರವಶ್ಚ ನೃಣಾಂ ಕಲೌ।**
**ಶ್ಯಾಲಾದ್ಯಾ ಹಾರಿಭಾರ್ಯಾಶ್ಚ ಸುಹೃದೋ ಮುನಿಸತ್ತಮ॥ 55**

---

ನಿಯಾಮಕನೂ ಆದ ವಿಷ್ಣುವನ್ನು ಪೂಜಿಸುವುದಿಲ್ಲ. ದೇವರಿಂದ, ಬ್ರಾಹ್ಮಣರಿಂದ, ವೇದಗಳಿಂದ, ಆಗಬೇಕಾದ್ದೇನು? ನೀರಿನಿಂದಾಗುವ ಸ್ವಚ್ಛತೆಯಲ್ಲಿ ವಿಶೇಷವೇನು?—ಈ ಪ್ರಕಾರವಾಗಿ ಪಾಷಂಡವಾದಿಗಳು ಹೇಳತೊಡಗುವರು (50-51). ಕಲಿಯುಗವು ವರ್ಧಿಸಿದಾಗ ಮೋಡವು ಅತ್ಯಲ್ಪವಾಗಿ ಮಳೆಯನ್ನು ಸುರಿಸುವುದು. ಸಸ್ಯಗಳಿಂದ ದೊರೆಯುವ ಫಸಲು ಅಲ್ಪವಾಗುವುದು. ಫಸಲಿನಲ್ಲಿ ಸಾರವೂ ಅಲ್ಪವಾಗಿರುವುದು. ಕಲಿಯುಗದಲ್ಲಿ (ಜನರು ಬಳಸುವುದು) ಬಹುಶಃ ನಾರಿನ ಬಟ್ಟೆಗಳು (ಹತ್ತಿಯದಲ್ಲ). ಇಂತಹ ನಾರಿಗಾಗಿ ಬೆಳೆಸುವ ಮರಗಳೇ ಅಧಿಕ. ವರ್ಣಗಳೆಲ್ಲ ವಿಶೇಷವಾಗಿ ಶೂದ್ರಮಯವಾಗಿರುವುದು (52-53). ಕಲಿಯುಗದಲ್ಲಿ ಅಣು ಎಂಬ ಧಾನ್ಯವೇ (Millet) ಹೆಚ್ಚಾಗಿ ಬಳಕೆಯಲ್ಲಿರುವುದು. ಮೇಕೆಯ ಹಾಲಿನ ಉಪಯೋಗ ಅಧಿಕವಾಗುವುದು. ಅನುಲೇಪನವೆಂದರೆ ಲಾವಂಚ. (ಕಸ್ತೂರಿ, ಶ್ರೀಗಂಧ—ಮೊದಲಾದದ್ದಲ್ಲ) (54). ಮೈತ್ರೇಯ, ಕಲಿಯುಗದಲ್ಲಿ ಅತ್ತೆಮಾವಂದಿರೇ ಪುರುಷರಿಗೆ ಗುರುಗಳು. ಭಾವನೇ ಮೊದಲಾದವರೂ ಚೆಲುವೆಯರಾದ ಮಡದಿಯರೂ ಸ್ನೇಹಿತರು. ಪುರುಷರು ಶ್ವಶುರನಿಗೆ ವಶವಾಗಿ "ಯಾರಿಗೆ

**ಕಸ್ಯ ಮಾತಾ ಪಿತಾ ಕಸ್ಯ ಯಥಾ ಕರ್ಮಾನುಗಃ ಪುಮಾನ್।**
**ಇತಿ ಚೋದಾಹರಿಷ್ಯಂತಿ ಶ್ವಶುರಾನುಗತಾ ನರಾಃ॥** 56

**ವಾಙ್ಮನಃಕಾಯಜೈರ್ದೋಷೈರಭಿಭೂತಾಃ ಪುನಃ ಪುನಃ।**
**ನರಾಃ ಪಾಪಾನ್ಯನುದಿನಂ ಕರಿಷ್ಯಂತ್ಯಲ್ಪಮೇಧಸಃ॥** 57

**ನಿಸ್ಸತ್ತ್ವಾನಾಮಶೌಚಾನಾಂ ನಿರ್ಹ್ರೀಕಾಣಾಂ ತಥಾ ನೃಣಾಮ್।**
**ಯದ್ಯದ್ದುಃಖಾಯ ತತ್ಸರ್ವಂ ಕಲಿಕಾಲೇ ಭವಿಷ್ಯತಿ॥** 58

**ನಿಸ್ಸ್ವಾಧ್ಯಾಯವಷಟ್ಕಾರೇ ಸ್ವಧಾಸ್ವಾಹಾವಿವರ್ಜಿತೇ।**
**ತದಾ ಪ್ರವಿರಲೋ ಧರ್ಮಃ ಕ್ವಚಿಲ್ಲೋಕೇ ನಿವತ್ಸ್ಯತಿ॥** 59

**ತತ್ರಾಲ್ಪೇನೈವ ಯತ್ನೇನ ಪುಣ್ಯಸ್ಕಂಧಮನುತ್ತಮಮ್।**
**ಕರೋತಿ ಯಂ ಕೃತಯುಗೇ ಕ್ರಿಯತೇ ತಪಸಾ ಹಿ ಸಃ॥** 60

ಇತಿ ಶ್ರೀವಿಷ್ಣುಪುರಾಣೇ ಷಷ್ಠಾಂಶೇ ಪ್ರಥಮೋಽಧ್ಯಾಯಃ

---

ಯಾರು ತಾಯಿ? ಯಾರು ತಂದೆ? ಅವರವರ ಕರ್ಮಾನುಸಾರ ಹುಟ್ಟುತ್ತಾರೆ–ಸಾಯುತ್ತಾರೆ" ಎಂದು ಹೇಳಿಬಿಡುವರು (55-56). ಬುದ್ಧಿಹೀನರಾದ ಜನರು ವಾಚಿಕ-ಮಾನಸಿಕ-ಶಾರೀರಿಕ ದೋಷಗಳಿಗೆ ವಶರಾಗಿ ಅನುದಿನವೂ ಪಾಪ ಕರ್ಮಗಳನ್ನು ಮಾಡುತ್ತಲೇ ಇರುವರು. ನಿಃಸತ್ತ್ವರೂ ಶೌಚಹೀನರೂ ನಿರ್ಲಜ್ಜರೂ ಆದ ಕಲಿಯುಗದ ಜನರಿಗೆ ಯಾವ ಯಾವ ದುಃಖ ಬರಲು ಸಾಧ್ಯವೋ ಅದೆಲ್ಲವೂ ಬಂದೊದಗುತ್ತದೆ (57-58). ಲೋಕವು ವೇದಾಧ್ಯಯನ ವಷಟ್ಕಾರರಹಿತವೂ ಸ್ವಧಾಸ್ವಾಹಾಕಾರವರ್ಜಿತವೂ ಆದಮೇಲೆ, ಧರ್ಮವು ಪ್ರಕ್ಷೀಣವಾಗಿ ಎಲ್ಲಿಯೋ ಒಂದು ಕಡೆ ಹೇಗೋ ಉಳಿದುಕೊಂಡಿರುತ್ತದೆ. ಕೃತಯುಗದಲ್ಲಿ ಮಹತ್ತರವಾದ ಪ್ರಯತ್ನದಿಂದ ಲಭಿಸುತ್ತಿದ್ದ ಪುಣ್ಯವು ಕಲಿಯುಗ ದಲ್ಲಿ ಅಲ್ಪಯತ್ನದಿಂದಲೇ ಲಭಿಸುವುದು (ಇದೊಂದು ಕಲಿಯುಗದಲ್ಲಿರುವ ಗುಣ) (59-60).

ಇಲ್ಲಿಗೆ ಶ್ರೀವಿಷ್ಣುಪುರಾಣದ ಷಷ್ಠಾಂಶದಲ್ಲಿ
ಒಂದನೆಯ ಅಧ್ಯಾಯವು ಮುಗಿಯಿತು.

## ದ್ವಿತೀಯೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ವ್ಯಾಸಶ್ಚಾಹ ಮಹಾಬುದ್ಧಿರ್ಯದತ್ರೈವ ಹಿ ವಸ್ತುನಿ।**
**ತತ್ಶ್ರೂಯತಾಂ ಮಹಾಭಾಗ ಗದತೋ ಮಮ ತತ್ತ್ವತಃ॥ 1**

**ಕಸ್ಮಿನ್ ಕಾಲೇಽಲ್ಪಕೋ ಧರ್ಮೋ ದದಾತಿ ಸುಮಹತ್ ಫಲಮ್।**
**ಮುನೀನಾಂ ಪುಣ್ಯವಾದೋಽಭೂತ್ ಕೈಶ್ಚಾಸೌ ಕ್ರಿಯತೇ ಸುಖಮ್॥ 2**

**ಸಂದೇಹನಿರ್ಣಯಾರ್ಥಾಯ ವೇದವ್ಯಾಸಂ ಮಹಾಮುನಿಮ್।**
**ಯಯುಸ್ತೇ ಸಂಶಯಂ ಪ್ರಷ್ಟುಂ ಮೈತ್ರೇಯ ಮುನಿಪುಂಗವಾಃ॥ 3**

**ದದೃಶುಸ್ತೇ ಮುನಿಂ ತತ್ರ ಜಾಹ್ನವೀಸಲಿಲೇ ದ್ವಿಜ।**
**ವೇದವ್ಯಾಸಂ ಮಹಾಭಾಗಮರ್ಧಸ್ನಾತಂ ಸುತಂ ಮಮ॥ 4**

---

## ಅಧ್ಯಾಯ 2

ವ್ಯಾಸಮುನಿಗಳನ್ನು ಕುರಿತು ಮುನಿಗಳ ಪ್ರಶ್ನೆ. ಕಲಿಯುಗ, ಶೂದ್ರ, ಸ್ತ್ರೀ—
ಇವರ ವಿಷಯವಾಗಿ ಒಂದು ಮಹತ್ತ್ವದ ವಿಶೇಷವನ್ನು ವ್ಯಾಸರು ಹೇಳುವುದು.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಈ ಕಲಿಯುಗದ ವಿಷಯದಲ್ಲಿಯೇ ಮಹಾಪ್ರಾಜ್ಞರಾದ ವ್ಯಾಸರು ಹೇಳಿದ ನುಡಿಯನ್ನು ಯಥಾವತ್ತಾಗಿ ತಿಳಿಸುವೆನು, ಕೇಳು. ಒಂದು ಸಲ ಮುನಿಗಳ ನಡುವೆ "ಯಾವಕಾಲದಲ್ಲಿ ಅಲ್ಪವಾದ ಧರ್ಮಾನುಷ್ಠಾನವೂ ಮಹತ್ತರವಾದ ಫಲವನ್ನು ಕೊಡುವುದು? ಯಾರು ಸುಖವಾಗಿ ಪುಣ್ಯಕಾರ್ಯವನ್ನಾಚರಿಸಬಲ್ಲರು?" ಎಂಬುದಾಗಿ ಪುಣ್ಯ ವಿಷಯದ ಜಿಜ್ಞಾಸೆ ಹುಟ್ಟಿತು (1-2). ಆಮೇಲೆ ಆ ಮುನಿಶ್ರೇಷ್ಠರು ತಮ್ಮ ಸಂದೇಹವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ವೇದವ್ಯಾಸ ಮುನಿಗಳ ಬಳಿಗೆ ಹೋದರು. ಅವರು ಹೋಗಿ ಗಂಗಾಜಲದಲ್ಲಿ ಅರ್ಧಸ್ನಾನಮಾಡಿದ್ದ ನನ್ನ ಪುತ್ರರಾದ ವೇದವ್ಯಾಸರನ್ನು ಕಂಡರು (3-4). ವ್ಯಾಸರ ಸ್ನಾನವು ಮುಗಿಯ

**ಸ್ನಾನಾವಸಾನಂ ತೇ ತಸ್ಯ ಪ್ರತೀಕ್ಷಂತೋ ಮಹರ್ಷಯಃ।**
**ತಸ್ಥುಸ್ತೀರೇ ಮಹಾನದ್ಯಾಸ್ತರುಷಂಡಮುಪಾಶ್ರಿತಾಃ॥ 5**

**ಮಗ್ನೋಽಥ ಜಾಹ್ನವೀತೋಯಾದುತ್ಥಾಯಾಹ ಸುತೋ ಮಮ।**
**ಶೂದ್ರಸ್ಸಾಧುಃ ಕಲಿಸ್ಸಾಧುರಿತ್ಯೇವಂ ಶೃಣ್ವತಾಂ ವಚಃ॥ 6**

**ತೇಷಾಂ ಮುನೀನಾಂ ಭೂಯಶ್ಚ ಮಮಜ್ಜ ಸ ನದೀಜಲೇ।**
**ಸಾಧು ಸಾಧ್ವಿತಿ ಚೋತ್ಥಾಯ ಶೂದ್ರ ಧನ್ಯೋಽಸಿ ಚಾಬ್ರವೀತ್॥ 7**

**ನಿಮಗ್ನಶ್ಚ ಸಮುತ್ಥಾಯ ಪುನಃ ಪ್ರಾಹ ಮಹಾಮುನಿಃ।**
**ಯೋಷಿತಃ ಸಾಧು ಧನ್ಯಾಸ್ತಾಸ್ತಾಭ್ಯೋ ಧನ್ಯತರೋಽಸ್ತಿ ಕಃ॥ 8**

**ತತಃ ಸ್ನಾತ್ವಾ ಯಥಾನ್ಯಾಯಮಾಯಾಂತಂ ಚ ಕೃತಕ್ರಿಯಮ್।**
**ಉಪತಸ್ಥುರ್ಮಹಾಭಾಗಂ ಮುನಯಸ್ತೇ ಸುತಂ ಮಮ॥ 9**

**ಕೃತಸಂವಂದನಾಂಶ್ಚಾಹ ಕೃತಾಸನಪರಿಗ್ರಹಾನ್।**
**ಕಿಮರ್ಥಮಾಗತಾ ಯೂಯಮಿತಿ ಸತ್ಯವತೀಸುತಃ॥ 10**

---

ಲೆಂದು ಪ್ರತೀಕ್ಷಿಸುತ್ತ ಆ ಮುನಿಗಳು ಗಂಗಾನದಿಯ ತೀರದಲ್ಲಿದ್ದ ಮರಗಳ ಕೆಳಗೆ ಕಾದಿದ್ದರು. ಅನಂತರ ಗಂಗಾಜಲದಲ್ಲಿ ಮುಳುಗಿದ್ದ ನನ್ನ ಪುತ್ರರಾದ ವ್ಯಾಸರು ಮೇಲಕ್ಕೇಳುತ್ತ ಆ ಮುನಿಗಳಿಗೆ ಕೇಳಿಸುವಂತೆ 'ಶೂದ್ರನೇ ಧನ್ಯ! ಕಲಿಯುಗವೇ ಧನ್ಯ!' ಎಂದು ಉದ್ಗರಿಸಿದರು (5-6). ಆ ಮುನಿಗಳು ನೋಡುತ್ತಿರುವಾಗಲೇ ಮತ್ತೆ ನದೀಜಲದಲ್ಲಿ ಮುಳುಗಿ ಎದ್ದು ವ್ಯಾಸರು 'ಭಲೆ, ಭಲೆ, ಶೂದ್ರ! ಧನ್ಯ ನೀನು!' ಎಂದು ಉದ್ಗರಿಸಿದರು. ಪುನಃ ಜಲದಲ್ಲಿ ಮುಳುಗಿ ಎದ್ದು ಆ ಮಹಾಮುನಿಗಳು 'ಭಲಾ, ಸ್ತ್ರೀಯರೇ ಧನ್ಯರು! ಅವರಿಗಿಂತ ಅಧಿಕ ಧನ್ಯರು ಯಾರಿದ್ದಾರೆ?' ಎಂದರು! (7-8). ಅನಂತರ ಸ್ನಾನವನ್ನು ಮುಗಿಸಿ ವಿಧಿವತ್ತಾಗಿ ನಿತ್ಯಕರ್ಮವನ್ನು ನೆರವೇರಿಸಿದ ಮೇಲೆ, ತನ್ನ ಸುತರಾದ ಆ ಮಹಾತ್ಮರ ಬಳಿಗೆ ಮುನಿಗಳು ಹೋದರು. ತಮಗೆ ನಮಸ್ಕರಿಸಿ ಕುಳಿತುಕೊಂಡ ಆ ಮುನಿಗಳನ್ನು ಕುರಿತು ಸತ್ಯವತೀ ಪುತ್ರರು "ನೀವು ಏಕೆ ಬಂದಿದ್ದೀರಿ?" ಎಂದು ಕೇಳಿದರು (9-10). ಅದಕ್ಕೆ ಮುನಿಗಳು "ಒಂದು ಸಂದೇಹವನ್ನು ಕೇಳುವುದಕ್ಕಾಗಿ ನಿಮ್ಮ

**ತಮೂಚುಃ ಸಂಶಯಂ ಪ್ರಷ್ಟುಂ ಭವಂತಂ ವಯಮಾಗತಾಃ।**
**ಅಲಂ ತೇನಾಸ್ತು ತಾವನ್ನಃ ಕಥ್ಯತಾಮಪರಂ ತ್ವಯಾ॥ 11**

**ಕಲಿಸ್ಸಾಧ್ವಿತಿ ಯತ್ಪ್ರೋಕ್ತಂ ಶೂದ್ರಃ ಸಾಧ್ವಿತಿ ಯೋಷಿತಃ।**
**ಯದಾಹ ಭಗವಾನ್ ಸಾಧು ಧನ್ಯಾಶ್ಚೇತಿ ಪುನಃ ಪುನಃ॥ 12**

**ತತ್ಸರ್ವಂ ಶ್ರೋತುಮಿಚ್ಛಾಮೋ ನ ಚೇದ್‌ಗುಹ್ಯಂ ಮಹಾಮುನೇ।**
**ತತ್ಕಥ್ಯತಾಂ ತತೋ ಹೃತ್ಸ್ಥಂ ಪೃಚ್ಛಾಮಸ್ತ್ವಾಂ ಪ್ರಯೋಜನಮ್॥ 13**

*ಶ್ರೀಪರಾಶರ ಉವಾಚ:*

**ಇತ್ಯುಕ್ತೋ ಮುನಿಭಿರ್ವ್ಯಾಸಃ ಪ್ರಹಸ್ಯೇದಮಥಾಬ್ರವೀತ್।**
**ಶ್ರೂಯತಾಂ ಭೋ ಮುನಿಶ್ರೇಷ್ಠಾ ಯದುಕ್ತಂ ಸಾಧು ಸಾಧ್ವಿತಿ॥ 14**

*ಶ್ರೀವ್ಯಾಸ ಉವಾಚ:*

**ಯತ್ಕೃತೇ ದಶಭಿರ್ವರ್ಷೈ ಸ್ತ್ರೇತಾಯಾಂ ಹಾಯನೇನ ತತ್।**
**ದ್ವಾಪರೇ ತಚ್ಚ ಮಾಸೇನ ಹ್ಯಹೋರಾತ್ರೇಣ ತತ್ಕಲೌ॥ 15**

---

ಬಳಿಗೆ ಬಂದೆವು. ಅದು ಒತ್ತಟ್ಟಿಗಿರಲಿ. 'ಕಲಿಯು ಧನ್ಯ, ಶೂದ್ರನು ಧನ್ಯ, ಸ್ತ್ರೀಯರು ಧನ್ಯರು! ಭಲಾ! ಧನ್ಯರು!' ಎಂದು ನೀವು ಮತ್ತೆ ಮತ್ತೆ ಹೇಳಿದಿರಲ್ಲ. ಅದೇಕೆಂದು ಕೇಳಲು ಇಚ್ಛಿಸುತ್ತೇವೆ. ಮಹರ್ಷಿಗಳೆ, ಅದು ರಹಸ್ಯವಲ್ಲದಿದ್ದರೆ, ಹಾಗೆ ಹೇಳಿದ್ದೇಕೆಂದು ಅಪೇಕ್ಷಿಸುತ್ತೇವೆ. ಅನಂತರ ನಮ್ಮ ಮನಸ್ಸಿನಲ್ಲಿದ್ದ ಸಂದೇಹವನ್ನು ಕೇಳುವೆವು" ಎಂದರು (11-13). ಆಗ ವ್ಯಾಸರು ನಕ್ಕು "ಮುನಿಶ್ರೇಷ್ಠರೆ, ಧನ್ಯ ಧನ್ಯ–ಎಂದು ಹೇಳಿದ್ದೇಕೆಂಬುದನ್ನು ಕೇಳಿರಿ" ಎಂದು ನುಡಿದು ಇಂತೆಂದರು (14): ಎಲೈ ದ್ವಿಜರೆ, ಕೃತಯುಗದಲ್ಲಿ ತಪಸ್ಸು ಬ್ರಹ್ಮಚರ್ಯ, ಜಪ—ಮುಂತಾದುವನ್ನು ಹತ್ತು ವರ್ಷಗಳವರೆಗೆ ಆಚರಿಸಿದರೆ ಯಾವ ಫಲವು ಪ್ರಾಪ್ತವಾಗುವುದೋ ಅದು ತ್ರೇತಾಯುಗದಲ್ಲಿ ಒಂದು ವರ್ಷ ಆಚರಿಸಿದರೆ ದೊರೆಯುತ್ತದೆ. ಆ ಫಲವು ದ್ವಾಪರಯುಗದಲ್ಲಿ ಒಂದು ತಿಂಗಳು ಆಚರಿಸಿದರೆ ಲಭಿಸುತ್ತದೆ. ಕಲಿಯುಗದಲ್ಲಿ ಒಂದು ಅಹೋರಾತ್ರ ಆಚರಿಸಿದರೆ

**ತಪಸೋ ಬ್ರಹ್ಮಚರ್ಯಸ್ಯ ಜಪಾದೇಶ್ಚ ಫಲಂ ದ್ವಿಜಾಃ।**
**ಪ್ರಾಪ್ನೋತಿ ಪುರುಷಸ್ತೇನ ಕಲಿಸ್ಸಾಧ್ವಿತಿ ಭಾಷಿತಮ್॥** 16

**ಧ್ಯಾಯನ್ ಕೃತೇ ಯಜನ್ಯಜ್ಞೈಸ್ತ್ರೇತಾಯಾಂ ದ್ವಾಪರೇಽರ್ಚಯನ್।**
**ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್॥** 17

**ಧರ್ಮೋತ್ಕರ್ಷಮತೀವಾತ್ರ ಪ್ರಾಪ್ನೋತಿ ಪುರುಷಃ ಕಲೌ।**
**ಅಲ್ಪಾಯಾಸೇನ ಧರ್ಮಜ್ಞಾಸ್ತೇನ ತುಷ್ಟೋಽಸ್ಮ್ಯಹಂ ಕಲೇಃ॥** 18

**ವ್ರತಚರ್ಯಾಪರೈರ್ಗ್ರಾಹ್ಯಾ ವೇದಾಃ ಪೂರ್ವಂ ದ್ವಿಜಾತಿಭಿಃ।**
**ತತಸ್ಸ್ವಧರ್ಮಸಂಪ್ರಾಪ್ತೈರ್ಯಷ್ಟವ್ಯಂ ವಿಧಿವದ್ಧನೈಃ॥** 19

**ವೃಥಾ ಕಥಾ ವೃಥಾ ಭೋಜ್ಯಂ ವೃಥೇಜ್ಯಾ ಚ ದ್ವಿಜನ್ಮನಾಮ್।**
**ಪತನಾಯ ತತೋ ಭಾವ್ಯಂ ತೈಸ್ತು ಸಂಯಮಿಭಿಸ್ಸದಾ॥** 20

---

ಅದೇ ಫಲವನ್ನು ಮನುಷ್ಯನು ಪಡೆಯುತ್ತಾನೆ. ಆದ್ದರಿಂದ 'ಕಲಿಯುಗವು ಧನ್ಯ!' ಎಂದು ಹೇಳಿದೆನು (15-16). ಕೃತಯುಗದಲ್ಲಿ ಕೇಶವನನ್ನು ಧ್ಯಾನಿಸುವುದರಿಂದ, ತ್ರೇತಾಯುಗದಲ್ಲಿ ಯಜ್ಞಗಳಿಂದ, ದ್ವಾಪರಯುಗದಲ್ಲಿ ಅರ್ಚನೆಯಿಂದ ಲಭಿಸುವ ಪುಣ್ಯಫಲವನ್ನು, ಕಲಿಯುಗದಲ್ಲಿ ನಾಮಕೀರ್ತನ ಮಾತ್ರದಿಂದ ಮಾನವನು ಪಡೆಯುವನು (17). ಹೇ ಧರ್ಮಜ್ಞರೆ, ಕಲಿಯುಗದಲ್ಲಿ ಅಲ್ಪಾಯಾಸದಿಂದ ವಿಪುಲವಾದ ಧರ್ಮಫಲವು ಲಭಿಸುವುದು. ಆದ್ದರಿಂದ ಕಲಿಯುಗಕ್ಕಾಗಿ ನಾನು ಸಂತೋಷಪಡುತ್ತಿದ್ದೇನೆ. (ಶೂದ್ರರು ಏಕೆ ಧನ್ಯರೆಂಬುದನ್ನು ಮುಂದೆ ಹೇಳುತ್ತಾರೆ). ದ್ವಿಜರು ಬ್ರಹ್ಮಚರ್ಯವನ್ನು ಪಾಲಿಸುತ್ತ ಮೊದಲು ವೇದಗಳನ್ನು ಅಧ್ಯಯನಮಾಡಬೇಕಾಗುತ್ತದೆ. ಅನಂತರ ಸ್ವಧರ್ಮದಿಂದ ಗಳಿಸಿದ ಹಣವನ್ನು ವಿನಿಯೋಗಿಸಿ ವಿಧಿವತ್ತಾಗಿ ಯಜ್ಞಗಳನ್ನಾಚರಿಸಬೇಕು (18-19). ವ್ಯರ್ಥವಾಗಿ (ದೇವತಾಕೀರ್ತನವಿಲ್ಲದ) ಮಾತನ್ನಾಡುವುದು, ವ್ಯರ್ಥವಾಗಿ (ದೇವರಿಗೆ ಅರ್ಪಿಸದೆ) ಭೋಜನವನ್ನು ಮಾಡುವುದು, ವ್ಯರ್ಥವಾಗಿ (ದಂಭಾಚಾರಕ್ಕಾಗಿ) ಯಜ್ಞಮಾಡುವುದು—ಇವುಗಳಿಂದ ದ್ವಿಜನು ಪತಿತನಾಗುತ್ತಾನೆ. ಆದ್ದರಿಂದ ಸದಾ ಬ್ರಾಹ್ಮಣರು ಬಹಳ ಸಂಯಮಪೂರ್ವಕವಾಗಿ ನಡೆದುಕೊಳ್ಳಬೇಕಾಗುತ್ತದೆ (20). ಸಮಸ್ತ ಕಾರ್ಯಗಳನ್ನು ಸಹ ಅವರು

**ಅಸಮ್ಯಕ್ಕರಣೇ ದೋಷಸ್ತೇಷಾಂ ಸರ್ವೇಷು ವಸ್ತುಷು।**
**ಭೋಜ್ಯಪೇಯಾದಿಕಂ ಚೈಷಾಂ ನೇಚ್ಛಾಪ್ರಾಪ್ತಿಕರಂ ದ್ವಿಜಾಃ॥ 21**

**ಪಾರತಂತ್ರ್ಯಂ ಸಮಸ್ತೇಷು ತೇಷಾಂ ಕಾರ್ಯೇಷು ವೈ ಯತಃ।**
**ಜಯಂತಿ ತೇ ನಿಜಾನ್ ಲೋಕಾನ್ ಕ್ಲೇಶೇನ ಮಹತಾ ದ್ವಿಜಾಃ॥ 22**

**ದ್ವಿಜಶುಶ್ರೂಷಯೈವೈಷ ಪಾಕಯಜ್ಞಾಧಿಕಾರವಾನ್।**
**ನಿಜಾಞ್ಜಯತಿ ವೈ ಲೋಕಾನ್ ಶೂದ್ರೋ ಧನ್ಯತರಸ್ತತಃ॥ 23**

**ಭಕ್ಷ್ಯಾಭಕ್ಷ್ಯೇಷು ನಾಸ್ಯಾಸ್ತಿ ಪೇಯಾಪೇಯೇಷು ವೈ ಯತಃ।**
**ನಿಯಮೋ ಮುನಿಶಾರ್ದೂಲಾಸ್ತೇನಾಸೌ ಸಾಧ್ವಿತೀರಿತಃ॥ 24**

**ಸ್ವಧರ್ಮಸ್ಯಾವಿರೋಧೇನ ನರೈರ್ಲಬ್ಧಂ ಧನಂ ಸದಾ।**
**ಪ್ರತಿಪಾದನೀಯಂ ಪಾತ್ರೇಷು ಯಷ್ಟವ್ಯಂ ಚ ಯಥಾವಿಧಿ॥ 25**

---

ಶಾಸ್ತ್ರೋಕ್ತ ಕ್ರಮದಲ್ಲಿಯೇ ನಡೆಸಬೇಕಾಗುತ್ತದೆ. ಇಲ್ಲದಿದ್ದರೆ ದೋಷವು ಪ್ರಾಪ್ತವಾಗುತ್ತದೆ. ಅವರು ಇಚ್ಛಾನುಸಾರವಾಗಿ ತಿನ್ನುವಂತಿಲ್ಲ. ಕುಡಿಯುವಂತಿಲ್ಲ (21). ಸರ್ವಕಾರ್ಯಗಳಲ್ಲಿಯೂ ದ್ವಿಜರು ಪರತಂತ್ರರು. ಬಹಳ ಕಷ್ಟದಿಂದಲೇ ಅವರು ಸದ್ಗತಿಯನ್ನು ಪಡೆಯುತ್ತಾರೆ. ಆದರೆ (ಈ ಬಗೆಯ ಯಾವ ಕ್ಲೇಶವೂ ಇಲ್ಲದೆ) ಮಂತ್ರಹೀನವಾಗಿ ಪಾಕಯಜ್ಞದಲ್ಲಿ ಅಧಿಕಾರವನ್ನು ಪಡೆದಿರುವ ಶೂದ್ರನಾದರೋ ದ್ವಿಜಸೇವೆಯಿಂದಲೇ ಸದ್ಗತಿಯನ್ನು ಪಡೆಯುತ್ತಾನೆ. ಆದ್ದರಿಂದ ಶೂದ್ರನು ಇವರಿಗಿಂತ ಧನ್ಯತರ (22-23). ಎಲೈ ಮುನಿಗಳೆ, ಭಕ್ಷ್ಯ-ಅಭಕ್ಷ್ಯಗಳಲ್ಲಿ ಪೇಯ-ಅಪೇಯಗಳಲ್ಲಿ ಶೂದ್ರನಿಗೆ ಯಾವ ನಿಯಮವೂ ಇಲ್ಲ. ಆದ್ದರಿಂದ 'ಶೂದ್ರನು ಧನ್ಯ' ಎಂದು ಹೇಳಿದೆನು. (ಸ್ತ್ರೀಯರು ಏಕೆ ಧನ್ಯರೆಂಬುದನ್ನು ಈಗ ಹೇಳುತ್ತಾರೆ). ಸ್ವಧರ್ಮಕ್ಕೆ ವಿರೋಧವಿಲ್ಲದಂತೆ ಸಂಪಾದಿಸಿದ ಧನವನ್ನು ಪುರುಷರು ಸತ್ಪಾತ್ರಗಳಲ್ಲಿ ವಿನಿಯೋಗಿಸಬೇಕು. ವಿಧಿವತ್ತಾಗಿ ಯಜ್ಞಗಳನ್ನಾಚರಿಸಬೇಕು (24-25). ಹಣವನ್ನು ಸಂಪಾದಿಸುವುದಕ್ಕೂ ರಕ್ಷಿಸುವುದಕ್ಕೂ ಬಹಳ ಕಷ್ಟಪಡಬೇಕಾಗುತ್ತದೆ. ಹಾಗೆ

**ತಸ್ಯಾರ್ಜನೇ ಮಹಾಕ್ಲೇಶಃ ಪಾಲನೇ ಚ ದ್ವಿಜೋತ್ತಮಾಃ।**
**ತಥಾ ಸದ್ವಿನಿಯೋಗೇನ ವಿಜ್ಞಾತಂ ಗಹನಂ ನೃಣಾಮ್॥** 26

**ಏವಮನ್ಯೈ ಸ್ತಥಾ ಕ್ಲೇಶೈಃ ಪುರುಷಾ ದ್ವಿಜಸತ್ತಮಾಃ।**
**ನಿಜಾಞ್ಜಯಂತಿ ವೈ ಲೋಕಾನ್ ಪ್ರಾಜಾಪತ್ಯಾದಿಕಾನ್ ಕ್ರಮಾತ್॥** 27

**ಯೋಷಿತ್ ಶುಶ್ರೂಷಣಾದ್ಭರ್ತುಃ ಕರ್ಮಣಾ ಮನಸಾ ಗಿರಾ।**
**ತದ್ಧಿತಾ ಶುಭಮಾಪ್ನೋತಿ ತತ್ಸಾಲೋಕ್ಯಂ ಯತೋ ದ್ವಿಜಾಃ॥** 28

**ನಾತಿಕ್ಲೇಶೇನ ಮಹತಾ ತಾನೇವ ಪುರುಷೋ ಯಥಾ।**
**ತೃತೀಯಂ ವ್ಯಾಹೃತಂ ತೇನ ಮಯಾ ಸಾಧ್ವಿತಿ ಯೋಷಿತಃ॥** 29

**ಏತದ್ವಃ ಕಥಿತಂ ವಿಪ್ರಾ ಯನ್ನಿಮಿತ್ತಮಿಹಾಗತಾಃ।**
**ತತ್ ಪೃಚ್ಛತ ಯಥಾಕಾಮಂ ಸರ್ವಂ ವಕ್ಷ್ಯಾಮಿ ವಃ ಸ್ಫುಟಮ್॥** 30

**ಋಷಯಸ್ತೇ ತತಃ ಪ್ರೋಚುರ್ಯತ್ ಪ್ರಷ್ಟವ್ಯಂ ಮಹಾಮುನೇ।**
**ಅಸ್ಮಿನ್ನೇವ ಚ ತತ್ ಪ್ರಶ್ನೇ ಯಥಾವತ್ಕಥಿತಂ ತ್ವಯಾ॥** 31

---

ಅನುಚಿತಮಾರ್ಗದಲ್ಲಿ ಹಣವನ್ನು ಬಳಸುವುದರಿಂದ ಯಾವ ಅನರ್ಥ ಪ್ರಾಪ್ತವಾಗುತ್ತದೆಯೆಂಬುದೂ ಜನರಿಗೆ ಗೊತ್ತೇ ಇದೆ (26). ಇದೇ ಬಗೆಯ ಹಲವಾರು ಕ್ಲೇಶಗಳಿಂದ ದ್ವಿಜೋತ್ತಮರು ಪ್ರಾಜಾಪತ್ಯವೇ ಮೊದಲಾದ ಲೋಕಗಳನ್ನು ಕ್ರಮವಾಗಿ ಪಡೆಯುವರು. ಸ್ತ್ರೀಯಾದರೋ ಕ್ರಿಯೆ, ಮನಸ್ಸು, ವಾಕ್—ಇವುಗಳಿಂದ ಪತಿಯ ಸೇವೆಯನ್ನು ಮಾಡಿದರೆ ಸಾಕು, ಅವನಿಗೆ ಸಮಾನವಾದ ಶುಭಲೋಕವನ್ನು ಪಡೆಯುವಳು. ಗಂಡಸಿನಂತೆ ಹೆಚ್ಚು ಕಷ್ಟಪಡದೆಯೇ ಅವನು ಪಡೆಯುವ ಲೋಕವನ್ನಿವಳು ಪಡೆಯುತ್ತಾಳಾದ್ದರಿಂದ ಮೂರನೆಯದಾಗಿ 'ಸ್ತ್ರೀಯರು ಧನ್ಯರು!' ಎಂದು ಹೇಳಿದೆನು (27-29). ಎಲೈ ವಿಪ್ರರೆ, ಇಷ್ಟು ವಿವರವನ್ನು ನಿಮಗೆ ಹೇಳಿದ್ದಾಯಿತು. ನೀವು ಯಾವುದಕ್ಕಾಗಿ ಬಂದಿದ್ದೀರೋ ಅದನ್ನು ಇಚ್ಛಾನುಸಾರ ಕೇಳಿರಿ. ಸ್ಪಷ್ಟವಾಗಿ ಉತ್ತರಿಸುವೆನು." ವ್ಯಾಸರ ಈ ಮಾತನ್ನು ಕೇಳಿ ಆ ಋಷಿಗಳು "ಮಹರ್ಷಿಗಳೆ, ನಾವು ಯಾವುದನ್ನು ಕೇಳಬೇಕಾಗಿತ್ತೋ ಆ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳಿಬಿಟ್ಟಿದ್ದೀರಿ!" ಎಂದರು (30-31). ವಿಸ್ಮಯದಿಂದ ವಿಕಸಿತನೇತ್ರರಾಗಿದ್ದ ಆ

*ಶ್ರೀಪರಾಶರ ಉವಾಚ:*

**ತತಃ ಪ್ರಹಸ್ಯ ತಾನಾಹ ಕೃಷ್ಣದ್ವೈಪಾಯನೋ ಮುನಿಃ।**
**ವಿಸ್ಮಯೋತ್ಫುಲ್ಲನಯನಾಂಸ್ತಾಪಸಾಂಸ್ತಾನುಪಾಗತಾನ್॥** 32

**ಮಯ್ಯೈಷ ಭವತಾಂ ಪ್ರಶ್ನೋ ಜ್ಞಾತೋ ದಿವ್ಯೇನ ಚಕ್ಷುಷಾ।**
**ತತೋ ಹಿ ವಃ ಪ್ರಸಂಗೇನ ಸಾಧು ಸಾಧ್ವಿತಿ ಭಾಷಿತಮ್॥** 33

**ಸ್ವಲ್ಪೇನ ಹಿ ಪ್ರಯತ್ನೇನ ಧರ್ಮಸ್ಸಿದ್ಧ್ಯತಿ ವೈ ಕಲೌ।**
**ನರೈರಾತ್ಮಗುಣಾಂಭೋಭಿಃ ಕ್ಷಾಲಿತಾಖಿಲಕಿಲ್ಬಿಷೈಃ॥** 34

**ಶೂದ್ರೈಶ್ಚ ದ್ವಿಜಶುಶ್ರೂಷಾ ತತ್ಪರೈರ್ದ್ವಿಜಸತ್ತಮಾಃ।**
**ತಥಾ ಸ್ತ್ರೀಭಿರನಾಯಾಸಾತ್ಪತಿಶುಶ್ರೂಷಯೈವ ಹಿ॥** 35

**ತತಸ್ತ್ರಿತಯಮಪ್ಯೇತನ್ಮಮ ಧನ್ಯತರಂ ಮತಮ್।**
**ಧರ್ಮಸಂಪಾದನೇ ಕ್ಲೇಶೋ ದ್ವಿಜಾತೀನಾಂ ಕೃತಾದಿಷು॥** 36

**ಭವದ್ಭಿರ್ಯದಭಿಪ್ರೇತಂ ತದೇತತ್ಕಥಿತಂ ಮಯಾ।**
**ಅಪೃಷ್ಟೇನಾಪಿ ಧರ್ಮಜ್ಞಾಃ ಕಿಮನ್ಯತ್ ಕ್ರಿಯತಾಂ ದ್ವಿಜಾಃ॥** 37

---

ಮುನಿಗಳನ್ನು ನೋಡಿ ವ್ಯಾಸರು ಗಟ್ಟಿಯಾಗಿ ನಕ್ಕು ಇಂತೆಂದರು: "ಎಲೈ ಮುನಿಗಳೆ, ನೀವು ಕೇಳಬೇಕೆಂದಿದ್ದ ಪ್ರಶ್ನೆ ನನ್ನ ದಿವ್ಯದೃಷ್ಟಿಗೆ ಗೋಚರಿಸಿತು. ಆದ್ದರಿಂದ ನಿಮಗೆ ಉತ್ತರ ಹೇಳುವ ಪ್ರಸಂಗದಿಂದ 'ಭಲಾ, ಧನ್ಯರು' ಎಂದು ಉದ್ಗರಿಸಿದೆನು (32-33). ಕಲಿಯುಗದಲ್ಲಿ ಪರಮಾತ್ಮನ ಗುಣಸ್ಮರಣೆಯೆಂಬ ಜಲದಿಂದ ಮಾನವರು ಸಕಲಪಾಪಗಳನ್ನೂ ತೊಳೆದುಕೊಂಡು ಶುದ್ಧರಾಗಿ ಅತ್ಯಲ್ಪವಾದ ಪ್ರಯತ್ನದಿಂದಲೇ ಧರ್ಮವನ್ನು ಗಳಿಸುತ್ತಾರೆ. ಹಾಗೆಯೇ ಶೂದ್ರರು ದ್ವಿಜಸೇವೆಯಿಂದಲೂ ಸ್ತ್ರೀಯರು ಪತಿಶುಶ್ರೂಷೆಯಿಂದಲೂ ಅನಾಯಾಸವಾಗಿ ಪುಣ್ಯವನ್ನು ಸಂಪಾದಿಸುತ್ತಾರೆ (34-35). ಆದ್ದರಿಂದ, ಋಷಿಗಳೆ, (ಕಲಿ, ಶೂದ್ರ, ಸ್ತ್ರೀ) ಎಂಬ ತ್ರಿತಯವು ಧನ್ಯತರವೆಂದು ನನ್ನ ಅಭಿಪ್ರಾಯವಿದೆ. ಕೃತಯುಗಾದಿಗಳಲ್ಲಿ ಧರ್ಮಸಂಪಾದನೆ ಮಾಡುವುದು ದ್ವಿಜರಿಗೆ ಬಹಳ ಕಷ್ಟಕರವಾದುದು. ಧರ್ಮಜ್ಞರೆ, ನೀವು ಪ್ರಶ್ನಿಸದಿದ್ದರೂ ನಿಮ್ಮ ಅಭಿಪ್ರಾಯಕ್ಕೆ ಅನುಗುಣವಾದ ಉತ್ತರವನ್ನು ಹೇಳಿದ್ದೇನೆ. ಇನ್ನು ನನ್ನಿಂದೇನಾಗ

*ಶ್ರೀಪರಾಶರ ಉವಾಚ:*

**ತತಸ್ಸಂಪೂಜ್ಯ ತೇ ವ್ಯಾಸಂ ಪ್ರಶಶಂಸುಃ ಪುನಃ ಪುನಃ।**
**ಯಥಾಗತಂ ದ್ವಿಜಾ ಜಗ್ಮುರ್ವ್ಯಾಸೋಕ್ತಿಕೃತನಿಶ್ಚಯಾಃ॥** 38

**ಭವತೋಽಪಿ ಮಹಾಭಾಗ ರಹಸ್ಯಂ ಕಥಿತಂ ಮಯಾ॥** 39

**ಅತ್ಯಂತದುಷ್ಟಸ್ಯ ಕಲೇರಯಮೇಕೋ ಮಹಾನ್ ಗುಣಃ।**
**ಕೀರ್ತನಾದೇವ ಕೃಷ್ಣಸ್ಯ ಮುಕ್ತಬಂಧಃ ಪರಂ ವ್ರಜೇತ್॥** 40

**ಯಚ್ಚಾಹಂ ಭವತಾ ಪೃಷ್ಟೋ ಜಗತಾಮುಪಸಂಹೃತಿಮ್।**
**ಪ್ರಾಕೃತಾಮಂತರಾಲಾಂ ಚ ತಾಮಪ್ಯೇಷ ವದಾಮಿ ತೇ॥** 41

ಇತಿ ಶ್ರೀವಿಷ್ಣುಪುರಾಣೇ ಷಷ್ಠಾಂಶೇ ದ್ವಿತೀಯೋಽಧ್ಯಾಯಃ

---

ಬೇಕು?" ಎಂದರು (36-37). ಆಮೇಲೆ ಮುನಿಗಳು ವ್ಯಾಸರನ್ನು ಮತ್ತೆ ಮತ್ತೆ ಹೊಗಳಿ ಪೂಜಿಸಿ, ಅವರ ವಚನದಿಂದ ಸಂದೇಹವನ್ನು ಪರಿಹರಿಸಿಕೊಂಡು ಹೊರಟುಹೋದರು. ಮೈತ್ರೇಯ, ನಿನಗೂ ಈ ರಹಸ್ಯವನ್ನು ಹೇಳಿದ್ದೇನೆ. ಕಲಿಯುಗವು ಅತ್ಯಂತ ದುಷ್ಟವಾದರೂ ಅದರಲ್ಲಿ ಇದೊಂದು ಮಹತ್ತರವಾದ ಗುಣವಿದೆ. ಏನೆಂದರೆ, ಶ್ರೀಕೃಷ್ಣನ ನಾಮಕೀರ್ತನೆಯಿಂದಲೇ ಮನುಷ್ಯನು ಬಂಧಮುಕ್ತನಾಗಿ ಪರಮಪದವನ್ನು ಪಡೆಯುವನು (38-40). ಮೈತ್ರೇಯ, ಜಗತ್ತಿಗೆ ಸಂಭವಿಸುವ ಪ್ರಾಕೃತಪ್ರಳಯ ಮತ್ತು ನಡುವೆ ಸಂಭವಿಸುವ ಸಾಮಾನ್ಯ ಪ್ರಳಯಗಳೆಂಬ ಉಪಸಂಹೃತಿಯ ವಿಷಯವಾಗಿ ನೀನು ಕೇಳಿದೆಯಷ್ಟೆ. ಅದನ್ನೂ ಈಗ ನಿನಗೆ ಹೇಳುವೆನು (41).

ಇಲ್ಲಿಗೆ ಶ್ರೀವಿಷ್ಣುಪುರಾಣದ ಷಷ್ಠಾಂಶದಲ್ಲಿ
ಎರಡನೆಯ ಅಧ್ಯಾಯವು ಮುಗಿಯಿತು.



## ತೃತೀಯೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಸರ್ವೇಷಾಮೇವ ಭೂತಾನಾಂ ತ್ರಿವಿಧಃ ಪ್ರತಿಸಂಚರಃ।**
**ನೈಮಿತ್ತಿಕಃ ಪ್ರಾಕೃತಿಕಸ್ತಥೈವಾತ್ಯಂತಿಕೋ ಲಯಃ॥** 1

**ಬ್ರಾಹ್ಮೋ ನೈಮಿತ್ತಿಕಸ್ತೇಷಾಂ ಕಲ್ಪಾಂತೇ ಪ್ರತಿಸಂಚರಃ।**
**ಆತ್ಯಂತಿಕಸ್ತು ಮೋಕ್ಷಾಖ್ಯಃ ಪ್ರಾಕೃತೋ ದ್ವಿಪರಾರ್ಧಕಃ॥** 2

*ಶ್ರೀಮೈತ್ರೇಯ ಉವಾಚ:*

**ಪರಾರ್ಧಸಂಖ್ಯಾ ಭಗವನ್ ಮಮಾಚಕ್ಷ್ವ ಯಯಾ ತು ಸಃ।**
**ದ್ವಿಗುಣೀಕೃತಯಾ ಜ್ಞೇಯಃ ಪ್ರಾಕೃತಃ ಪ್ರತಿಸಂಚರಃ॥** 3

---

### ಅಧ್ಯಾಯ 3

ಮಾತ್ರಾ-ನಿಮೇಷ ಮುಂತಾದ ಕಾಲಮಾನ. ನೈಮಿತ್ತಿಕ ಪ್ರಳಯ.

ಪರಾಶರಮುನಿಗಳು "ಸಮಸ್ತ ಪ್ರಾಣಿಗಳಿಗೂ ನೈಮಿತ್ತಿಕ, ಪ್ರಾಕೃತಿಕ, ಆತ್ಯಂತಿಕಗಳೆಂಬ ಮೂರುಬಗೆಯ ಪ್ರತಿಸಂಚರ (ಪ್ರಳಯ) ಉಂಟು. ಅವುಗಳಲ್ಲಿ ಕಲ್ಪಾಂತದಲ್ಲಾಗತಕ್ಕದ್ದು ಬ್ರಾಹ್ಮವೆಂಬ ನೈಮಿತ್ತಿಕ ಪ್ರಳಯ. ಎರಡು ಪರಾರ್ಧಗಳ ಕಡೆಯಲ್ಲಾಗತಕ್ಕದ್ದು ಪ್ರಾಕೃತಿಕ ಪ್ರಳಯ. ಆತ್ಯಂತಿಕವೆನ್ನುವುದೇ ಮೋಕ್ಷ"* ಎಂದರು (1-2). ಆಗ ಮೈತ್ರೇಯರು "ಭಗವನ್, ಎರಡು ಪರಾರ್ಧಗಳಿಂದ ಪ್ರಾಕೃತ ಪ್ರಳಯವಾಗುವುದೆಂದು ಹೇಳಿದಿರಲ್ಲ , ಪರಾರ್ಧ ವೆಂದರೆ ಎಷ್ಟು ಸಂಖ್ಯೆ? ಅದನ್ನು ಹೇಳಿರಿ" ಎಂದು ಕೇಳಿದರು (3). ಅದಕ್ಕೆ

---

* ಬ್ರಹ್ಮನ ರಾತ್ರಿಯ ನಿಮಿತ್ತದಿಂದ ಆಗತಕ್ಕದ್ದು ಬ್ರಾಹ್ಮವೆಂಬ ನೈಮಿತ್ತಿಕ ಪ್ರಳಯ. ಎರಡು ಪರಾರ್ಧಗಳಲ್ಲಿ ಬ್ರಹ್ಮನ ಆಯುಸ್ಸು ಮುಗಿಯುತ್ತದೆ. ಆಗ ಪ್ರಕೃತಿಯಲ್ಲಿ ಬ್ರಹ್ಮ ಸೃಷ್ಟಿಯು ಲಯ ಹೊಂದುತ್ತದೆ. ಅದು ಪ್ರಾಕೃತ ಅಥವಾ ಪ್ರಾಕೃತಿಕ ಪ್ರಳಯ. ಮೋಕ್ಷವೇ ಆತ್ಯಂತಿಕ ಪ್ರಳಯ; ಮುಕ್ತನಿಗೆ ಪುನರ್ಜನ್ಮವಿಲ್ಲವಾದ್ದರಿಂದ ಅದೇ ಅಂತ್ಯದ ಲಯ.

*ಶ್ರೀಪರಾಶರ ಉವಾಚ:*

**ಸ್ಥಾನಾತ್ ಸ್ಥಾನಂ ದಶಗುಣಮೇಕಸ್ಮಾದ್ಗಣ್ಯತೇ ದ್ವಿಜ।**
**ತತೋಽಷ್ಟಾದಶಮೇ ಭಾಗೇ ಪರಾರ್ಧಮಭಿಧೀಯತೇ॥** 4

**ಪರಾರ್ಧದ್ವಿಗುಣಂ ಯತ್ತು ಪ್ರಾಕೃತಸ್ಸ ಲಯೋ ದ್ವಿಜ।**
**ತದಾವ್ಯಕ್ತೇಽಖಿಲಂ ವ್ಯಕ್ತಂ ಸ್ವಹೇತೌ ಲಯಮೇತಿ ವೈ॥** 5

**ನಿಮೇಷೋ ಮಾನುಷೋ ಯೋಽಸೌ ಮಾತ್ರಾ ಮಾತ್ರಾಪ್ರಮಾಣತಃ।**
**ತೈಃ ಪಂಚದಶಭಿಃ ಕಾಷ್ಠಾ ತ್ರಿಂಶತ್ಕಾಷ್ಠಾ ಕಲಾ ಸ್ಮೃತಾ॥** 6

**ನಾಡಿಕಾ ತು ಪ್ರಮಾಣೇನ ಸಾ ಕಲಾ ದಶ ಪಂಚ ಚ।**
**ಉನ್ಮಾನೇನಾಂಭಸಸ್ಸಾ ತು ಪಲಾನ್ಯರ್ಧತ್ರಯೋದಶ॥** 7

---

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಒಂದು—ಎಂಬ ಸಂಖ್ಯೆಯನ್ನು ಅದರ ಸ್ಥಾನದಿಂದ ದಶಗುಣವಾಗಿ ಗುಣಿಸುತ್ತ ಹೋದರೆ ಹದಿನೆಂಟನೆಯ ಸ್ಥಾನದಲ್ಲಿ ಯಾವ ಸಂಖ್ಯೆ ಲಭಿಸುತ್ತದೆಯೋ ಅದಕ್ಕೆ ಪರಾರ್ಧವೆಂದು* ಹೆಸರು (4). ಇಂತಹ ಎರಡು ಪರಾರ್ಧಗಳಾದರೆ ಪ್ರಾಕೃತಪ್ರಳಯವಾಗುತ್ತದೆ. ಆಗ ವ್ಯಕ್ತವಾದ ಸಮಸ್ತವಸ್ತುವೂ ತನಗೆ ಕಾರಣವಾದ ಪ್ರಕೃತಿಯಲ್ಲಿ ಲಯವಾಗುತ್ತದೆ (5). ಮನುಷ್ಯರು ರೆಪ್ಪೆ ಹೊಡೆಯುವ ಕಾಲ ನಿಮೇಷ. ಒಂದು ಲಘು ವರ್ಣವನ್ನು (ಅ, ಇ—ಎಂಬ ಹ್ರಸ್ವವನ್ನು) ಉಚ್ಚರಿಸುವ ಕಾಲವು ಮಾತ್ರಾ ಎನ್ನಿಸುವುದರಿಂದ ಅಷ್ಟೇ ಪ್ರಮಾಣವಿರುವ ನಿಮೇಷಕ್ಕೂ ಮಾತ್ರಾ ಎಂದು ಹೆಸರು. ಹದಿನೈದು ನಿಮೇಷಗಳಿಗೆ ಒಂದು ಕಾಷ್ಠಾ ಮೂವತ್ತು ಕಾಷ್ಠಗಳಿಗೆ ಒಂದು ಕಲೆ (6). ಹದಿನೈದು ಕಲೆಗಳಿಗೆ ಒಂದು ನಾಡಿಕಾ. ಈ ನಾಡಿಕಾ ಕಾಲವನ್ನು ತಿಳಿಯುವುದು ಹೇಗೆಂದರೆ, ಹನ್ನೆರಡೂವರೆ ಪಲಗಳಷ್ಟು ನೀರು ಹಿಡಿಯುವ ಉನ್ಮಾನವೆಂಬ (ತಾಮ್ರದ) ಪಾತ್ರೆಯನ್ನು ಮಾಡಿಕೊಳ್ಳಬೇಕು (7).

---

* ಒಂದರ ಮುಂದೆ ಹದಿನೇಳು ಸೊನ್ನೆಗಳನ್ನಿಟ್ಟರೆ ಆ ಸಂಖ್ಯೆ ಪರಾರ್ಧ. ಈ ವಿಚಾರವು ಪ್ರಥಮಾಂಶದ ಮೂರನೆಯ ಅಧ್ಯಾಯದಲ್ಲಿ ಬಂದಿದೆ.

**ಮಾಗಧೇನ ತು ಮಾನೇನ ಜಲಪ್ರಸ್ಥಸ್ತು ಸ ಸ್ಮೃತಃ।**
**ಹೇಮಮಾಷೈಃ ಕೃತಚ್ಛಿದ್ರಶ್ಚತುರ್ಭಿಶ್ಚತುರಂಗುಲೈಃ॥ 8**

**ನಾಡಿಕಾಭ್ಯಾಮಥ ದ್ವಾಭ್ಯಾಂ ಮುಹೂರ್ತೋ ದ್ವಿಜಸತ್ತಮ।**
**ಅಹೋರಾತ್ರಂ ಮುಹೂರ್ತಾಸ್ತು ತ್ರಿಂಶನ್ಮಾಸೋ ದಿನೈಸ್ತಥಾ॥ 9**

**ಮಾಸೈರ್ದ್ವಾದಶಭಿರ್ವರ್ಷಮಹೋರಾತ್ರಂ ತು ತದ್ದಿವಿ।**
**ತ್ರಿಭಿರ್ವರ್ಷಶತೈರ್ವರ್ಷಂ ಷಷ್ಟ್ಯಾ ಚೈವಾಸುರದ್ವಿಷಾಮ್॥ 10**

**ತೈಸ್ತು ದ್ವಾದಶಸಾಹಸ್ರೈಶ್ಚತುರ್ಯುಗಮುದಾಹೃತಮ್।**
**ಚತುರ್ಯುಗಸಹಸ್ರಂ ತು ಕಥ್ಯತೇ ಬ್ರಹ್ಮಣೋ ದಿನಮ್॥ 11**

**ಸ ಕಲ್ಪಸ್ತತ್ರ ಮನವಶ್ಚತುರ್ದಶ ಮಹಾಮುನೇ।**
**ತದಂತೇ ಚೈವ ಮೈತ್ರೇಯ ಬ್ರಾಹ್ಮೋ ನೈಮಿತ್ತಿಕೋ ಲಯಃ॥ 12**

---

ಮಗಧದೇಶದಲ್ಲಿ ಪ್ರಸಿದ್ಧವಾದ ಅಳತೆಯ ಪ್ರಕಾರ ಅಷ್ಟು ನೀರು ಹಿಡಿಯುವ ಪಾತ್ರೆಯನ್ನು ಜಲಪ್ರಸ್ಥವೆಂದು ಕರೆಯುತ್ತಾರೆ. (1 ಪ್ರಸ್ಥ = 12 1/2 ಪಲ). ಆ ಪಾತ್ರೆಗೆ ರಂಧ್ರವನ್ನು ಮಾಡಿ ನಾಲ್ಕು ಮಾಷ ತೂಕವುಳ್ಳ ನಾಲ್ಕು ಅಂಗುಲ ಉದ್ದವಾದ ಚಿನ್ನದ ಕೊಳವೆಯನ್ನು ಅದಕ್ಕೆ ಜೋಡಿಸಬೇಕು. (ಈ ಉನ್ಮಾನ ದಿಂದ ನಾಡಿಕೆಯನ್ನು ಗೊತ್ತುಪಡಿಸಬೇಕು)* (8). ಎರಡು ನಾಡಿಕೆಗಳಿಗೆ ಒಂದು ಮುಹೂರ್ತ. ಮೂವತ್ತು ಮುಹೂರ್ತಗಳಿಗೆ ಅಹೋರಾತ್ರಾತ್ಮಕವಾದ ಒಂದು ದಿನವಾಗುತ್ತದೆ. ಇಂತಹ ಮೂವತ್ತು ದಿನಗಳಿಗೆ ಒಂದು ತಿಂಗಳು. ಹನ್ನೆರಡು ತಿಂಗಳುಗಳಿಗೆ ಒಂದು ವರ್ಷ. ಈ ಮಾನುಷ ವರ್ಷವು ದೇವಲೋಕದಲ್ಲಿ ಒಂದು ದಿನವೆನಿಸಿಕೊಳ್ಳುತ್ತದೆ. ಇಂತಹ ಮುನ್ನೂರು ಅರವತ್ತು ದಿವ್ಯದಿನಗಳಿಂದ ದೇವತೆಗಳಿಗೆ ಒಂದು ವರ್ಷವಾಗುತ್ತದೆ (9-10). ಇಂತಹ ಹನ್ನೆರಡು ಸಾವಿರ ದಿವ್ಯ ವರ್ಷಗಳಿಂದ ಒಂದು ಚತುರ್ಯುಗವಾಗುವುದು. ಒಂದು ಸಾವಿರ ಚತುರ್ಯುಗಗಳಿಗೆ ಬ್ರಹ್ಮನ ಒಂದು ದಿನವೆಂದು ಉಕ್ತವಾಗಿದೆ. ಬ್ರಹ್ಮನ ಒಂದು ದಿನವೇ ಕಲ್ಪ. ಒಂದು ಕಲ್ಪದಲ್ಲಿ ಹದಿನಾಲ್ಕು ಮನುಗಳು ಕಳೆದು ಹೋಗುತ್ತಾರೆ. ಮೈತ್ರೇಯ, ಈ ಕಲ್ಪಾಂತದಲ್ಲಿ ಬ್ರಾಹ್ಮವೆಂಬ ನೈಮಿತ್ತಿಕ ಪ್ರಳಯವಾಗುವುದು

* ಅನುಬಂಧವನ್ನು ನೋಡಿ.

ತಸ್ಯ ಸ್ವರೂಪಮತ್ಯುಗ್ರಂ ಮೈತ್ರೇಯ ಗದತೋ ಮಮ।
ಶೃಣುಷ್ವ ಪ್ರಾಕೃತಂ ಭೂಯಸ್ತವ ವಕ್ಷ್ಯಾಮ್ಯಹಂ ಲಯಮ್॥ 13

ಚತುರ್ಯುಗಸಹಸ್ರಾಂತೇ ಕ್ಷೀಣಪ್ರಾಯೇ ಮಹೀತಲೇ।
ಅನಾವೃಷ್ಟಿರತೀವೋಗ್ರಾ ಜಾಯತೇ ಶತವಾರ್ಷಿಕೀ॥ 14

ತತೋ ಯಾನ್ಯಲ್ಪಸಾರಾಣಿ ತಾನಿ ಸತ್ತ್ವಾನ್ಯಶೇಷತಃ।
ಕ್ಷಯಂ ಯಾಂತಿ ಮುನಿಶ್ರೇಷ್ಠ ಪಾರ್ಥಿವಾನ್ಯನುಪೀಡನಾತ್॥ 15

ತತಃ ಸ ಭಗವಾನ್ ವಿಷ್ಣೂ ರುದ್ರರೂಪಧರೋಽವ್ಯಯಃ।
ಕ್ಷಯಾಯ ಯತತೇ ಕರ್ತುಮಾತ್ಮಸ್ಥಾಸ್ಸಕಲಾಃ ಪ್ರಜಾಃ॥ 16

ತತಸ್ಸ ಭಗವಾನ್ ವಿಷ್ಣುರ್ಭಾನೋಸ್ಸಪ್ತಸು ರಶ್ಮಿಷು।
ಸ್ಥಿತಃ ಪಿಬತ್ಯಶೇಷಾಣಿ ಜಲಾನಿ ಮುನಿಸತ್ತಮ॥ 17

ಪೀತ್ವಾಂಭಾಂಸಿ ಸಮಸ್ತಾನಿ ಪ್ರಾಣಿಭೂಮಿಗತಾನ್ಯಪಿ।
ಶೋಷಂ ನಯತಿ ಮೈತ್ರೇಯ ಸಮಸ್ತಂ ಪೃಥಿವೀತಲಮ್॥ 18

---

(11-12). ನೈಮಿತ್ತಿಕ ಪ್ರಳಯದ ಅತ್ಯುಗ್ರಸ್ವರೂಪವನ್ನು ಹೇಳುತ್ತೇನೆ, ಕೇಳು. ಅನಂತರ ಪ್ರಾಕೃತ ಪ್ರಳಯದ ವಿಷಯವನ್ನು ಹೇಳುವೆನು. ಒಂದು ಸಾವಿರ ಚತುರ್ಯುಗಗಳು ಕಳೆದಾಗ ಪೃಥ್ವಿಯು ಕ್ಷೀಣಪ್ರಾಯವಾಗುವುದು. ಒಂದು ನೂರು ವರ್ಷಗಳವರೆಗೆ ಭೀಕರವಾದ ಅನಾವೃಷ್ಟಿ ತಲೆದೋರುವುದು (13-14). ಬರಗಾಲದ ಪೀಡೆಗೊಳಗಾಗಿ ಪೃಥ್ವಿಯಲ್ಲಿರುವ ಸಕಲ ಜೀವಿಗಳೂ ನಿಃಸತ್ತ್ವರಾಗಿ ನಾಶಹೊಂದುವರು. ಆಗ ಅವ್ಯಯನಾದ ಭಗವಾನ್ ವಿಷ್ಣುವು ರುದ್ರರೂಪವನ್ನು ಧರಿಸಿ ಸಮಸ್ತ ಪ್ರಜೆಗಳನ್ನೂ ತನ್ನಲ್ಲಿ ಲಯಗೊಳಿಸಲು ಪ್ರಯತ್ನಿಸುವನು (15-16). ಆ ಸಮಯದಲ್ಲಿ ಭಗವಾನ್ ವಿಷ್ಣುವು ಸೂರ್ಯನ ಸಪ್ತಕಿರಣಗಳಲ್ಲಿಯೂ ಸ್ಥಿತನಾಗಿ ನಿಖಿಲಜಲರಾಶಿಯನ್ನು ಹೀರಿಬಿಡುವನು. ಈ ಪ್ರಕಾರವಾಗಿ ಪ್ರಾಣಿಗಳಲ್ಲಿಯೂ ಭೂಮಿಯಲ್ಲಿಯೂ ಇರುವ ಸಮಸ್ತ ಜಲಾಂಶವನ್ನೂ ಹೀರಿ ಭೂತಳವನ್ನು ಒಣಗಿಸಿಬಿಡುವನು (17-18). ಸಮುದ್ರ

**ಸಮುದ್ರಾನ್ಸರಿತಃ ಶೈಲನದೀಪ್ರಸ್ರವಣಾನಿ ಚ।**
**ಪಾತಾಲೇಷು ಚ ಯತ್ತೋಯಂ ತತ್ಸರ್ವಂ ನಯತಿ ಕ್ಷಯಮ್॥ 19**

**ತತಸ್ತಸ್ಯಾನುಭಾವೇನ ತೋಯಾಹಾರೋಪಬೃಂಹಿತಾಃ।**
**ತ ಏವ ರಶ್ಮಯಸ್ಸಪ್ತ ಜಾಯಂತೇ ಸಪ್ತ ಭಾಸ್ಕರಾಃ॥ 20**

**ಅಧಶ್ಚೋರ್ಧ್ವಂ ಚ ತೇ ದೀಪ್ತಾಸ್ತತಸ್ಸಪ್ತ ದಿವಾಕರಾಃ।**
**ದಹಂತ್ಯಶೇಷಂ ತ್ರೈಲೋಕ್ಯಂ ಸಪಾತಾಲತಲಂ ದ್ವಿಜ॥ 21**

**ದಹ್ಯಮಾನಂ ತು ತೈರ್ದೀಪ್ತೈಸ್ತ್ರೈಲೋಕ್ಯಂ ದ್ವಿಜ ಭಾಸ್ಕರೈಃ।**
**ಸಾದ್ರಿನದ್ಯರ್ಣವಾಭೋಗಂ ನಿಸ್ನೇಹಮಭಿಜಾಯತೇ॥ 22**

**ತತೋ ನಿರ್ದಗ್ಧವೃಕ್ಷಾಂಬು ತ್ರೈಲೋಕ್ಯಮಖಿಲಂ ದ್ವಿಜ।**
**ಭವತ್ಯೇಷಾ ಚ ವಸುಧಾ ಕೂರ್ಮಪೃಷ್ಠೋಪಮಾಕೃತಿಃ॥ 23**

---

ಗಳು, ನದಿಗಳು, ಬೆಟ್ಟಗಳು, ಚಿಕ್ಕಹೊಳೆಗಳು, ಚಿಲುಮೆಗಳು—ಇವೆಲ್ಲವನ್ನೂ ಒಣಗಿಸುವನು. ಪಾತಾಳಗಳಲ್ಲಿರುವ ನೀರೂ ಕ್ಷಯಿಸಿಹೋಗುವುದು. ಭಗವಂತನ ಪ್ರಭಾವದಿಂದ ಸೂರ್ಯನ ಸಪ್ತಕಿರಣಗಳು ಸಪ್ತಸೂರ್ಯಗಳಾಗಿ* ಬಿಡುತ್ತವೆ! (19-20). ಈ ಸೂರ್ಯರು ತೇಜೋದೀಪ್ತರಾಗಿ ಮೇಲೆ ಕೆಳಗೆ—ಎಲ್ಲೆಡೆಯೂ ಪಾತಾಳ ಪರ್ಯಂತವಾಗಿ ತ್ರಿಲೋಕಗಳನ್ನೂ ದಹಿಸುತ್ತಾರೆ. ದೇದೀಪ್ಯಮಾನರಾದ ಈ ಸೂರ್ಯರಿಂದ ದಗ್ಧವಾಗುವ ತ್ರಿಲೋಕದ ಬೆಟ್ಟ, ನದಿ, ಸಮುದ್ರಗಳೆಲ್ಲವೂ ನಿರ್ಜಲವಾಗುತ್ತವೆ (21-22). ಮರ, ನೀರು–ಸಹಿತ ಲೋಕತ್ರಯವೂ ಸುಟ್ಟುಹೋಗಲಾಗಿ, ಈ ಪೃಥ್ವಿಯು ಆಮೆಯ ಬೆನ್ನಿನ ಚಿಪ್ಪಿನಂತೆ ಕಪ್ಪಗೆ (ಸೀದು) ಬರಡಾಗುತ್ತದೆ. ಅನಂತರ ಶ್ರೀಹರಿಯು ಆದಿಶೇಷನ ನಿಃಶ್ವಾಸದಿಂದ ಸರ್ವವಿಧ್ವಂಸಕನಾದ ಕಾಲಾಗ್ನಿ

---

* ಸಪ್ತಕಿರಣಗಳು—ಸುಷುಮ್ನ, ಹರಿಕೇಶ, ವಿಶ್ವಕರ್ಮ, ವಿಶ್ವವ್ಯಚಾ, ಸ್ವಧಾ, ಸಂಯದ್ವಸು ಮತ್ತು ಅರ್ವಾಗ್ವಸುಗಳೆಂದು ವಿಷ್ಣುಚಿತ್ತೀಯ; ಸಪ್ತಸೂರ್ಯರು—ಆರೋಗ, ಭ್ರಾಜ, ಪಟರ, ಪತಂಗ, ಸ್ವರ್ಣರ, ಜ್ಯೋತಿಷೀಮಾನ್ ಮತ್ತು ವಿಭಾಸ—ಈ ಸೂರ್ಯರು ಶ್ರುತ್ಯುಕ್ತರೆಂದು ಶ್ರೀಧರೀಯ ವ್ಯಾಖ್ಯಾನ.

**ತತಃ ಕಾಲಾಗ್ನಿರುದ್ರೋಽಸೌ ಭೂತ್ವಾ ಸರ್ವಹರೋ ಹರಿಃ।**
**ಶೇಷಾಹಿಶ್ವಾಸಸಂಭೂತಃ ಪಾತಾಲಾನಿ ದಹತ್ಯಧಃ॥ 24**

**ಪಾತಾಲಾನಿ ಸಮಸ್ತಾನಿ ಸ ದಗ್ಧ್ವಾ ಜ್ವಲನೋ ಮಹಾನ್।**
**ಭೂಮಿಮಭ್ಯೇತ್ಯ ಸಕಲಂ ಬಭಸ್ತಿ ವಸುಧಾತಲಮ್॥ 25**

**ಭುವರ್ಲೋಕಂ ತತಸ್ಸರ್ವಂ ಸ್ವರ್ಲೋಕಂ ಚ ಸುದಾರುಣಃ।**
**ಜ್ವಾಲಾಮಾಲಾಮಹಾವರ್ತಸ್ತತ್ರೈವ ಪರಿವರ್ತತೇ॥ 26**

**ಅಂಬರೀಷಮಿವಾಭಾತಿ ತ್ರೈಲೋಕ್ಯಮಖಿಲಂ ತದಾ।**
**ಜ್ವಾಲಾವರ್ತಪರೀವಾರಮುಪಕ್ಷೀಣಚರಾಚರಮ್॥ 27**

**ತತಸ್ತಾಪಪರೀತಾಸ್ತು ಲೋಕದ್ವಯನಿವಾಸಿನಃ।**
**ಕೃತಾಧಿಕಾರಾ ಗಚ್ಛಂತಿ ಮಹರ್ಲೋಕಂ ಮಹಾಮುನೇ॥ 28**

**ತಸ್ಮಾದಪಿ ಮಹಾತಾಪತಪ್ತಾ ಲೋಕಾತ್ತತಃ ಪರಮ್।**
**ಗಚ್ಛಂತಿ ಜನಲೋಕಂ ತೇ ದಶಾವೃತ್ತ್ಯಾ ಪರೈಷಿಣಃ॥ 29**

---

ರುದ್ರನಾಗಿ ಉದಿಸಿ ಕೆಳಭಾಗದಿಂದ ಪಾತಾಳಗಳನ್ನು ಸುಡಲು ಆರಂಭಿಸುತ್ತಾನೆ (23-24). ಅವನು ಕರಾಳ ಜ್ವಾಲಾಮಾಲಿಯಾಗಿ ಸಮಸ್ತ ಪಾತಾಳಗಳನ್ನೂ ಧ್ವಂಸಮಾಡಿ ಭೂಮಿಗೆ ಬಂದು ನಿಖಿಲ ಭೂತಳವನ್ನೂ ಸುಟ್ಟು ಬೂದಿ ಮಾಡುವನು. ಅತಿ ದಾರುಣವಾದ ಜ್ವಾಲಾಮಾಲೆಯ ಭೀಕರವಾದ ಆವರ್ತವು ಅನಂತರ ಭುವರ್ಲೋಕಸುವರ್ಲೋಕಗಳನ್ನು ಸುಟ್ಟುಹಾಕಿ ಭುಗಿಲೆಂದು ಸುಳಿಯುತ್ತಲೇ ಇರುವುದು (25-26). ಸಕಲ ಚರಾಚರಗಳೂ ವಿಧ್ವಸ್ತವಾದ ಮೇಲೆ ಜ್ವಾಲಾವರ್ತಗಳಿಂದ ವ್ಯಾಪ್ತವಾದ ತ್ರಿಲೋಕವು ಕೆಂಪಾಗಿ ಉರಿಯುವ ಕಬ್ಬಿಣದ ಬಾಣಲೆಯಂತೆ ಕಾಣುವುದು! (27). ಆ ಸಮಯದಲ್ಲಿ (ಭುವರ್ಲೋಕಸುವರ್ಲೋಕಗಳೆಂಬ) ಲೋಕದ್ವಯ ನಿವಾಸಿಗಳೂ ಆಧಿಕಾರಿಕ ಪುರುಷರೂ ಆದ ಮನ್ವಾದಿಗಳು ಅಗ್ನಿಜ್ವಾಲೆಯಿಂದ ತಪ್ತರಾಗಿ ಮಹರ್ಲೋಕಕ್ಕೆ ಹೋಗುವರು. ಅವರ ಫಲಭೋಗ ದಶೆಯು ಪರಿವರ್ತಿಸಿರುವುದರಿಂದ ಅಲ್ಲಿಯೂ ಮಹಾತಾಪದಿಂದ ಸಂತಪ್ತರಾಗಿ ಅದಕ್ಕೂ ಪರವಾದ*

---

* 'ದಶಾವೃತ್ತ್ಯಾ ಪರೈಷಿಣಃ' ಎಂದು ಮೂಲದಲ್ಲಿರುವ ಪದಗಳಿಗೆ ಬೇರೆಬೇರೆ ಅರ್ಥಗಳನ್ನು ವ್ಯಾಖ್ಯಾನಕಾರರು ಹೇಳಿದ್ದಾರೆ.

**ತತೋ ದಗ್ಧ್ವಾ ಜಗತ್ಸರ್ವಂ ರುದ್ರರೂಪೀ ಜನಾರ್ದನಃ।**
**ಮುಖನಿಃಶ್ವಾಸಜಾನ್ಮೇಘಾನ್ ಕರೋತಿ ಮುನಿಸತ್ತಮ॥ 30**

**ತತೋ ಗಜಕುಲಪ್ರಖ್ಯಾಸ್ತಡಿತ್ವಂತೋऽತಿನಾದಿನಃ।**
**ಉತ್ತಿಷ್ಠಂತಿ ತಥಾ ವ್ಯೋಮ್ನಿ ಘೋರಾಸ್ಸಂವರ್ತಕಾ ಘನಾಃ॥ 31**

**ಕೇಚಿನ್ನೀಲೋತ್ಪಲಶ್ಯಾಮಾಃ ಕೇಚಿತ್ಕುಮುದಸನ್ನಿಭಾಃ।**
**ಧೂಮ್ರವರ್ಣಾ ಘನಾಃ ಕೇಚಿತ್ ಕೇಚಿತ್ಪೀತಾಃ ಪಯೋಧರಾಃ॥ 32**

**ಕೇಚಿದ್ರಾಸಭವರ್ಣಾಭಾ ಲಾಕ್ಷಾರಸನಿಭಾಸ್ತಥಾ।**
**ಕೇಚಿದ್ವೈಡೂರ್ಯಸಂಕಾಶಾ ಇಂದ್ರನೀಲನಿಭಾಃ ಕ್ವಚಿತ್॥ 33**

**ಶಂಖಕುಂದನಿಭಾಶ್ಚಾನ್ಯೇ ಜಾತ್ಯಂಜನನಿಭಾಃ ಪರೇ।**
**ಇಂದ್ರಗೋಪನಿಭಾಃ ಕೇಚಿತ್ತತಶ್ಶಿಖಿನಿಭಾಸ್ತಥಾ॥ 34**

---

ಊರ್ಧ್ವಲೋಕವನ್ನು ಬಯಸಿ ಜನಲೋಕಕ್ಕೆ ಹೋಗುವರು (28-29). ರುದ್ರರೂಪಿಯಾದ ಜನಾರ್ದನನು ಸರ್ವಜಗತ್ತನ್ನೂ ದಹಿಸಿದ ಮೇಲೆ ತನ್ನ ಮುಖನಿಃಶ್ವಾಸದಿಂದ ಮೋಡಗಳನ್ನು ಸೃಷ್ಟಿಸುವನು. ಆಗ ಗಜಯೂಥಗಳಂತೆ ಕಾಣಿಸುತ್ತ ಮಿಂಚುಗಳೊಡನೆ ಭೀಕರವಾಗಿ ಗುಡುಗುವ ಸಂವರ್ತಕಗಳೆಂಬ ಘೋರಾಕಾರದ ಮೇಘಗಳು ಗಗನದಲ್ಲಿ ಉದ್ಭವಿಸುತ್ತವೆ (30-31). ಆ ಮೇಘಗಳಲ್ಲಿ ಕೆಲವು ನೀಲೋತ್ಪಲದಂತೆ ಕಪ್ಪಾಗಿಯೂ ಕೆಲವು ಕುಮುದ ದಂತೆ ಬೆಳ್ಳಗೂ ಕೆಲವು ಧೂಮ್ರವರ್ಣವಾಗಿಯೂ ಕೆಲವು ಪೀತವರ್ಣ ವಾಗಿಯೂ ಇರುವುವು. ಇನ್ನು ಕೆಲವು ಮೇಘಗಳು ಕತ್ತೆಯ ಬಣ್ಣದವೂ ಕೆಲವು ಲಾಕ್ಷರಸಕ್ಕೆ ಸಮನಾದವೂ ಆಗಿರುವುವು. ಕೆಲವು ಮೇಘಗಳು ವೈಡೂರ್ಯ ದಂತೆಯೂ ಇಂದ್ರನೀಲ ಮಣಿಯಂತೆಯೂ ಹೊಳೆಯುವುವು (32-33). ಕೆಲವು ಮೇಘಗಳು ಶಂಖದಂತೆಯೂ ಮಲ್ಲಿಗೆಯಂತೆಯೂ ಶ್ವೇತವರ್ಣದವು. ಕೆಲವು ಜಾಜಿಹೂವಿನ ಬಣ್ಣದವೂ ಕಾಡಿಗೆಯ ಬಣ್ಣದವೂ ಆಗಿರುತ್ತವೆ. ಕೆಲವು ಮೇಘಗಳು ಇಂದ್ರಗೋಪ ಹುಳುಗಳಂತೆ ಕೆಂಪಾಗಿಯೂ ಕೆಲವು ನವಿಲುಗಳಂತೆ ಚಿತ್ರವರ್ಣದವೂ ಆಗಿರುತ್ತವೆ (34). ಕೆಲವು ಮಹಾಮೇಘಗಳು ಮಣಿಶಿಲೆಯ

**ಮನಶ್ಶಿಲಾಭಾಃ ಕೇಚಿದ್ವೈ ಹರಿತಾಲನಿಭಾಃ ಪರೇ।**
**ಚಾಷಪತ್ರನಿಭಾಃ ಕೇಚಿದುತ್ತಿಷ್ಠಂತೇ ಮಹಾಘನಾಃ॥ 35**

**ಕೇಚಿತ್ಪುರವರಾಕಾರಾಃ ಕೇಚಿತ್ಪರ್ವತಸನ್ನಿಭಾಃ।**
**ಕೂಟಾಗಾರನಿಭಾಶ್ಚಾನ್ಯೇ ಕೇಚಿತ್ ಸ್ಥಲನಿಭಾ ಘನಾಃ॥ 36**

**ಮಹಾರಾವಾ ಮಹಾಕಾಯಾಃ ಪೂರಯಂತಿ ನಭಃಸ್ಥಲಮ್।**
**ವರ್ಷಂತಸ್ತೇ ಮಹಾಸಾರಾಂಸ್ತಮಗ್ನಿಮತಿಭೈರವಮ್।**
**ಶಮಯಂತ್ಯಖಿಲಂ ವಿಪ್ರ ತ್ರೈಲೋಕ್ಯಾಂತರಧಿಷ್ಠಿತಮ್॥ 37**

**ನಷ್ಟೇ ಚಾಗ್ನೌ ಚ ಸತತಂ ವರ್ಷಮಾಣಾ ಹ್ಯಹರ್ನಿಶಮ್।**
**ಪ್ಲಾವಯಂತಿ ಜಗತ್ಸರ್ವಮಂಭೋಭಿರ್ಮುನಿಸತ್ತಮ॥ 38**

**ಧಾರಾಭಿರತಿಮಾತ್ರಾಭಿಃ ಪ್ಲಾವಯಿತ್ವಾಽಖಿಲಂ ಭುವಮ್।**
**ಭುವರ್ಲೋಕಂ ತಥೈವೋರ್ಧ್ವಂ ಪ್ಲಾವಯಂತಿ ಹಿ ತೇ ದ್ವಿಜ॥ 39**

---

ವರ್ಣವನ್ನೂ ಕೆಲವು ಹರಿತಾಳದ ವರ್ಣವನ್ನೂ ಧರಿಸುತ್ತವೆ. ಚಾಷಪಕ್ಷಿಯ ರೆಕ್ಕೆಯಂತೆ ನೀಲವರ್ಣದ ಮಹಾಮೇಘಗಳೂ ಉದ್ಭವಿಸುತ್ತವೆ. ಆ ಮೇಘಗಳಲ್ಲಿ ಕೆಲವು ಮಹಾನಗರದಂತೆಯೂ ಕೆಲವು ಪರ್ವತದಂತೆಯೂ ಕೆಲವು ಪ್ರಾಸಾದದ ಮೇಲಿರುವ ಕೂಟಾಗಾರದಂತೆಯೂ ಕೆಲವು ಪೃಥಿವೀತಳ ದಂತೆಯೂ ಬೃಹದಾಕಾರವನ್ನು ಧರಿಸಿರುತ್ತವೆ (35-36). ಮಹಾಕಾಯಗಳಾದ ಆ ಮೋಡಗಳು ಘನಘೋರವಾಗಿ ಗುಡುಗಿ ಗಗನತಳವನ್ನು ಮೊಳಗಿಸುತ್ತ , ಜಡಿಮಳೆಯನ್ನು ಸುರಿಸುತ್ತ , ಮೂರು ಲೋಕಗಳನ್ನೂ ವ್ಯಾಪಿಸಿ ಅತಿ ಭೀಷಣವಾಗಿ ಉರಿಯುತ್ತಿರುವ ಅಗ್ನಿಯನ್ನು ಪೂರ್ಣವಾಗಿ ಆರಿಸುತ್ತವೆ (37). ಮೈತ್ರೇಯ, ಅಗ್ನಿಯು ಶಾಂತವಾದಮೇಲೆಯೂ ಆ ಮೇಘಗಳು ಸತತವಾಗಿ ಅಹೋರಾತ್ರವೂ ಮಳೆಸುರಿಸುತ್ತ ಜಗತ್ತನ್ನು ಜಲರಾಶಿಯಿಂದ ತುಂಬಿ ಬಿಡುತ್ತವೆ. ಬೃಹದಾಕಾರದ ವೃಷ್ಟಿಧಾರೆಗಳಿಂದ ಭೂಲೋಕವನ್ನು ಮುಳುಗಿಸಿ, ಅನಂತರ ಭುವರ್ಲೋಕವನ್ನೂ ಅದರ ಮೇಲಿನ ಸುವರ್ಲೋಕವನ್ನೂ ಜಲಮಯವಾಗಿ ಮಾಡುತ್ತವೆ (38-39). ಸಂಪೂರ್ಣ ಜಗತ್ತು ಅಂಧಕಾರ

**ಅಂಧಕಾರೀಕೃತೇ ಲೋಕೇ ನಷ್ಟೇ ಸ್ಥಾವರಜಂಗಮೇ।**
**ವರ್ಷಂತಿ ತೇ ಮಹಾಮೇಘಾ ವರ್ಷಾಣಾಮಧಿಕಂ ಶತಮ್॥ 40**

**ಏವಂ ಭವತಿ ಕಲ್ಪಾಂತೇ ಸಮಸ್ತಂ ಮುನಿಸತ್ತಮ।**
**ವಾಸುದೇವಸ್ಯ ಮಾಹಾತ್ಮ್ಯಾನ್ನಿತ್ಯಸ್ಯ ಪರಮಾತ್ಮನಃ॥ 41**

ಇತಿ ಶ್ರೀವಿಷ್ಣುಪುರಾಣೇ ಷಷ್ಠಾಂಶೇ ತೃತೀಯೋಽಧ್ಯಾಯಃ

---

ಮಯವಾಗುವುದು. ಸ್ಥಾವರಜಂಗಮಗಳು ನಿಃಶೇಷವಾಗುವುವು. ಆದರೂ ಆ ಮಹಾಮೇಘಗಳು ನೂರಾರು ವರ್ಷಗಳವರೆಗೆ ಮಳೆಯನ್ನು ಸುರಿಸುತ್ತಲೇ ಇರುವುವು. ಮೈತ್ರೇಯ, ಸನಾತನನಾದ ವಾಸುದೇವಪರಮಾತ್ಮನ ಮಹಿಮೆ ಯಿಂದ ಕಲ್ಪಾಂತದಲ್ಲಿ ಈ ಪ್ರಕಾರವಾದ ಸಮಸ್ತವಿಪ್ಲವವು ನಡೆಯುವುದು (40-41).

ಇಲ್ಲಿಗೆ ಶ್ರೀವಿಷ್ಣುಪುರಾಣದ ಷಷ್ಠಾಂಶದಲ್ಲಿ
ಮೂರನೆಯ ಅಧ್ಯಾಯವು ಮುಗಿಯಿತು.



## ಚತುರ್ಥೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಸಪ್ತರ್ಷಿಸ್ಥಾನಮಾಕ್ರಮ್ಯ ಸ್ಥಿತೇಽಂಭಸಿ ಮಹಾಮುನೇ ।**
**ಏಕಾರ್ಣವಂ ಭವತ್ಯೇತತ್ ತ್ರೈಲೋಕ್ಯಮಖಿಲಂ ತತಃ ॥** 1

**ಮುಖನಿಃಶ್ವಾಸಜೋ ವಿಷ್ಣೋರ್ವಾಯುಸ್ತಾಂಜಲದಾಂಸ್ತತಃ ।**
**ನಾಶಯನ್ ವಾತಿ ಮೈತ್ರೇಯ ವರ್ಷಾಣಾಮಪರಂ ಶತಮ್ ॥** 2

**ಸರ್ವಭೂತಮಯೋಽಚಿಂತ್ಯೋ ಭಗವಾನ್ ಭೂತಭಾವನಃ ।**
**ಅನಾದಿರಾದಿರ್ವಿಶ್ವಸ್ಯ ಪೀತ್ವಾ ವಾಯುಮಶೇಷತಃ ॥** 3

**ಏಕಾರ್ಣವೇ ತತಸ್ತಸ್ಮಿನ್ ಶೇಷಶಯ್ಯಾಗತಃ ಪ್ರಭುಃ ।**
**ಬ್ರಹ್ಮರೂಪಧರಶ್ಶೇತೇ ಭಗವಾನಾದಿಕೃದ್ಧರಿಃ ॥** 4

---

## ಅಧ್ಯಾಯ 4

ಪ್ರಾಕೃತಪ್ರಳಯದ ವರ್ಣನೆ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, (ಹಿಂದೆ ಹೇಳಿದ ರೀತಿಯಲ್ಲಿ) ಸಪ್ತರ್ಷಿಮಂಡಲದವರೆಗೂ ಯಾವಾಗ ಜಲರಾಶಿಯು ವ್ಯಾಪಿಸಿ ತುಂಬಿಕೊಳ್ಳುವುದೋ ಆಗ ನಿಖಿಲಲೋಕತ್ರಯವೂ ಏಕಾರ್ಣವ(ಒಂದೇ ಮಹಾಸಾಗರ)ವಾಗುವುದು (1). ಅನಂತರ ವಿಷ್ಣುವಿನ ಮುಖನಿಃಶ್ವಾಸದಿಂದ ಹೊರಟ ವಾಯುವು ಆ ಮೇಘಗಳನ್ನು ನಾಶಪಡಿಸುತ್ತ ಒಂದುನೂರು ವರ್ಷದವರೆಗೆ ಬೀಸುತ್ತಿರುವುದು. ಆಮೇಲೆ ಸರ್ವಭೂತಮಯನೂ ಅಚಿಂತ್ಯನೂ ಭೂತಭಾವನನೂ ಅನಾದಿಯೂ ವಿಶ್ವಕ್ಕೆ ಆದಿಯೂ ಆದ ಭಗವಂತನು ಆ ವಾಯುವನ್ನು ನಿಃಶೇಷವಾಗಿ ಹೀರುವನು (2-3). ಪ್ರಭುವೂ ಬ್ರಹ್ಮರೂಪಧರನೂ* ಆದಿಕರ್ತನೂ ಆದ ಭಗವಾನ್ ಶ್ರೀಹರಿಯು ಆಮೇಲೆ ಶೇಷಶಯ್ಯೆ

* ಅನುಬಂಧವನ್ನು ನೋಡಿ.

**ಜನಲೋಕಗತೈಸ್ಸಿದ್ಧೈಸ್ಸನಕಾದ್ಯೈರಭಿಷ್ಟುತಃ।**
**ಬ್ರಹ್ಮಲೋಕಗತೈಶ್ಚೈವ ಚಿಂತ್ಯಮಾನೋ ಮುಮುಕ್ಷುಭಿಃ॥ 5**

**ಆತ್ಮಮಾಯಾಮಯೀಂ ದಿವ್ಯಾಂ ಯೋಗನಿದ್ರಾಂ ಸಮಾಸ್ಥಿತಃ।**
**ಆತ್ಮಾನಂ ವಾಸುದೇವಾಖ್ಯಂ ಚಿಂತಯನ್ ಮಧುಸೂದನಃ॥ 6**

**ಏಷ ನೈಮಿತ್ತಿಕೋ ನಾಮ ಮೈತ್ರೇಯ ಪ್ರತಿಸಂಚರಃ।**
**ನಿಮಿತ್ತಂ ತತ್ರ ಯಚ್ಛೇತೇ ಬ್ರಹ್ಮರೂಪಧರೋ ಹರಿಃ॥ 7**

**ಯದಾ ಜಾಗರ್ತಿ ಸರ್ವಾತ್ಮಾ ಸ ತದಾ ಚೇಷ್ಟತೇ ಜಗತ್।**
**ನಿಮೀಲತ್ಯೇತದಖಿಲಂ ಮಾಯಾಶಯ್ಯಾಂ ಗತೇಽಚ್ಯುತೇ॥ 8**

**ಪದ್ಮಯೋನೇರ್ದಿನಂ ಯತ್ತು ಚತುರ್ಯುಗಸಹಸ್ರವತ್।**
**ಏಕಾರ್ಣವೀಕೃತೇ ಲೋಕೇ ತಾವತೀ ರಾತ್ರಿರಿಷ್ಯತೇ॥ 9**

**ತತಃ ಪ್ರಬುದ್ಧೋ ರಾತ್ರ್ಯಂತೇ ಪುನಸ್ಸೃಷ್ಟಿಂ ಕರೋತ್ಯಜಃ।**
**ಬ್ರಹ್ಮಸ್ವರೂಪಧೃಗ್ವಿಷ್ಣುರ್ಯಥಾ ತೇ ಕಥಿತಂ ಪುರಾ॥ 10**

---

ಯಲ್ಲಿ ಪವಡಿಸುವನು. ಆಗ ಜನಲೋಕದಲ್ಲಿರುವ ಸನಕಾದಿ ಸಿದ್ಧಪುರುಷರೂ ಬ್ರಹ್ಮಲೋಕದಲ್ಲಿರುವ ಮುಮುಕ್ಷುಗಳೂ ಆತನನ್ನು ಧ್ಯಾನಿಸುತ್ತಿರುವರು (4-5). ಆ ಸಮಯದಲ್ಲಿ ಮಧುಸೂದನನು ಆತ್ಮಮಾಯಾಮಯವೂ ದಿವ್ಯವೂ ಆದ ಯೋಗನಿದ್ರೆಯನ್ನವಲಂಬಿಸಿ 'ವಾಸುದೇವ' ಎಂಬ ಹೆಸರಿನ ಆತ್ಮಸ್ವರೂಪವನ್ನು ಧ್ಯಾನಿಸುತ್ತ ಇರುತ್ತಾನೆ. ಮೈತ್ರೇಯ, ಇದು ನೈಮಿತ್ತಿಕವೆಂಬ ಪ್ರಳಯ. ಬ್ರಹ್ಮರೂಪವನ್ನು ಧರಿಸಿದ ಶ್ರೀಹರಿಯು ನಿದ್ರಿಸುತ್ತಿರುವುದೇ ಇದಕ್ಕೆ ನಿಮಿತ್ತವಾದ್ದರಿಂದ ಈ ಹೆಸರು (6-7). ಆ ಸರ್ವಾತ್ಮನು ಯಾವಾಗ ಜಾಗ್ರದವಸ್ಥೆಯನ್ನವಲಂಬಿಸಿರುತ್ತಾನೋ ಆಗ ಜಗತ್ತು ಕಾರ್ಯನಿರತವಾಗಿರುತ್ತದೆ. ಅಚ್ಯುತನು ಮಾಯಾಶಯ್ಯೆಯನ್ನು ಸೇರಿ ಯೋಗನಿದ್ರೆಯಲ್ಲಿರುವಾಗ ಅಖಿಲ ಜಗತ್ತೂ ಲಯವನ್ನೈದುತ್ತದೆ (8). ಒಂದುಸಾವಿರ ಚತುರ್ಯುಗ ಪ್ರಮಾಣವುಳ್ಳದ್ದು ಬ್ರಹ್ಮನ ಹಗಲು. ಲೋಕವು ಏಕಾರ್ಣವವಾದಾಗ ಅಷ್ಟೇ ಪ್ರಮಾಣವುಳ್ಳದ್ದು ಆತನ ರಾತ್ರಿ. ಅನಂತರ ರಾತ್ರಿಯು ಕಳೆಯಲಾಗಿ ಅಜನಾದ ವಿಷ್ಣುವು ಬ್ರಹ್ಮರೂಪವನ್ನು ಧರಿಸಿ ಪುನಃ ಸೃಷ್ಟಿಯನ್ನು ಹೇಗೆ ಮಾಡುತ್ತಾನೆ ಎಂಬ

ಇತ್ಯೇಷ ಕಲ್ಪಸಂಹಾರೋಽವಾಂತರಪ್ರಲಯೋ ದ್ವಿಜ।
ನೈಮಿತ್ತಿಕಸ್ತೇ ಕಥಿತಃ ಪ್ರಾಕೃತಂ ಶೃಣ್ವತಃ ಪರಮ್॥ 11

ಅನಾವೃಷ್ಟ್ಯಾದಿಸಂಪರ್ಕಾತ್ ಕೃತೇ ಸಂಕ್ಷಾಲನೇ ಮುನೇ।
ಸಮಸ್ತೇಷ್ವೇವ ಲೋಕೇಷು ಪಾತಾಲೇಷ್ವಖಿಲೇಷು ಚ॥ 12

ಮಹದಾದೇರ್ವಿಕಾರಸ್ಯ ವಿಶೇಷಾಂತಸ್ಯ ಸಂಕ್ಷಯೇ।
ಕೃಷ್ಣೇಚ್ಛಾಕಾರಿತೇ ತಸ್ಮಿನ್ ಪ್ರವೃತ್ತೇ ಪ್ರತಿಸಂಚರೇ॥ 13

ಆಪೋ ಗ್ರಸಂತಿ ವೈ ಪೂರ್ವಂ ಭೂಮೇರ್ಗಂಧಾತ್ಮಕಂ ಗುಣಮ್।
ಆತ್ತಗಂಧಾ ತತೋ ಭೂಮಿಃ ಪ್ರಲಯತ್ವಾಯ ಕಲ್ಪತೇ॥ 14

ಪ್ರಣಷ್ಟೇ ಗಂಧತನ್ಮಾತ್ರೇ ಭವತ್ಯುರ್ವೀ ಜಲಾತ್ಮಿಕಾ।
ಆಪಸ್ತದಾ ಪ್ರವೃದ್ಧಾಸ್ತು ವೇಗವತ್ಯೋ ಮಹಾಸ್ವನಾಃ॥ 15

---

ವಿಷಯವನ್ನು ನಿನಗೆ ಹಿಂದೆ* ಹೇಳಿದ್ದೇನೆ (9-10). ಈ ರೀತಿ ಕಲ್ಪದಲ್ಲಾಗುವ ನೈಮಿತ್ತಿಕವೆಂಬ ಅವಾಂತರ ಪ್ರಳಯವನ್ನು ಹೇಳಿದ್ದಾಯಿತು. ಇನ್ನು ಮುಂದೆ ಪ್ರಾಕೃತಪ್ರಳಯವನ್ನು ಕೇಳು (11). ಅನಾವೃಷ್ಟಿ–ಮುಂತಾದವುಗಳ ಸಂಪರ್ಕದಿಂದ ಭೂಮಿಭುವರ್ಲೋಕಾದಿಗಳೂ ಪಾತಾಳಾದಿ ನಿಖಿಲಲೋಕಗಳೂ ಸಂಪೂರ್ಣವಾಗಿ ನಷ್ಟವಾದಮೇಲೆ, ಮಹತ್ತಿನಿಂದ ಹಿಡಿದು ವಿಶೇಷಾಂತವಾದ§ ಸಕಲವಿಕಾರಗಳೂ ಲಯವಾಗುತ್ತವೆ. ಭಗವಂತನ ಇಚ್ಛೆಯಿಂದ ಪ್ರಾಕೃತಪ್ರಳಯವು ಪ್ರವೃತ್ತವಾಗುವುದು (12-13). ಆ ಸಮಯದಲ್ಲಿ ಮೊದಲು ಭೂಮಿಯ ಗಂಧಗುಣವನ್ನು ಅಪ್ಪು (ಜಲ) ತನ್ನಲ್ಲಿ ಲಯಗೊಳಿಸುತ್ತದೆ. ಗಂಧತನ್ಮಾತ್ರೆಯು ಹೋದೊಡನೆ ಭೂಮಿಯು ಲಯವಾಗಿ ಜಲಮಯವಾಗುತ್ತದೆ. ಜಲವು ವೃದ್ಧಿಗೊಂಡು ವೇಗದಿಂದ ಎಲ್ಲೆಲ್ಲಿಯೂ ಹರಿದು ಸರ್ವವೂ ಜಲದಿಂದ ವ್ಯಾಪ್ತವಾಗುವುದು. ಅಲೆ ಅಲೆಗಳಾಗಿ ಹರಿಯುವ ಜಲದಿಂದ ಸಕಲ

* ಪ್ರಥಮಾಂಶದ ಎರಡನೆಯ ಅಧ್ಯಾಯವನ್ನು ನೋಡಿ.

§ ವಿಶೇಷ = ಪಂಚಭೂತಗಳು.

ಸರ್ವಮಾಪೂರಯಂತೀದಂ ತಿಷ್ಠಂತಿ ವಿಚರಂತಿ ಚ।
ಸಲಿಲೇನೋರ್ಮಿಮಾಲೇನ ಲೋಕಾ ವ್ಯಾಪ್ತಾಃ ಸಮಂತತಃ॥ 16

ಅಪಾಮಪಿ ಗುಣೋ ಯಸ್ತು ಜ್ಯೋತಿಷಾ ಪೀಯತೇ ತು ಸಃ।
ನಶ್ಯಂತ್ಯಾಪಸ್ತತಸ್ತಾಶ್ಚ ರಸತನ್ಮಾತ್ರಸಂಕ್ಷಯಾತ್॥ 17

ತತಶ್ಚಾಪೋ ಹೃತರಸಾ ಜ್ಯೋತಿಷಂ ಪ್ರಾಪ್ನುವಂತಿ ವೈ।
ಅಗ್ನ್ಯವಸ್ಥೇ ತು ಸಲಿಲೇ ತೇಜಸಾ ಸರ್ವತೋ ವೃತೇ॥ 18

ಸ ಚಾಗ್ನಿಃ ಸರ್ವತೋ ವ್ಯಾಪ್ಯ ಚಾದತ್ತೇ ತಜ್ಜಲಂ ತಥಾ।
ಸರ್ವಮಾಪೂರ್ಯತೇಽರ್ಚಿರ್ಭಿಸ್ತದಾ ಜಗದಿದಂ ಶನೈಃ॥ 19

ಅರ್ಚಿರ್ಭಿಸ್ಸಂವೃತೇ ತಸ್ಮಿಂಸ್ತಿರ್ಯಗೂರ್ಧ್ವಮಧಸ್ತದಾ।
ಜ್ಯೋತಿಷೋಽಪಿ ಪರಂ ರೂಪಂ ವಾಯುರತ್ತಿ ಪ್ರಭಾಕರಮ್॥ 20

ಪ್ರಲೀನೇ ಚ ತತಸ್ತಸ್ಮಿನ್ ವಾಯುಭೂತೇಽಖಿಲಾತ್ಮನಿ।
ಪ್ರಣಷ್ಟೇ ರೂಪತನ್ಮಾತ್ರೇ ಹೃತರೂಪೋ ವಿಭಾವಸುಃ॥ 21

---

ಲೋಕಗಳೂ ತುಂಬಿಹೋಗುವುವು (14-16). ಅನಂತರ ಅಪ್ಪಿನ ಗುಣವಾದ ರಸತನ್ಮಾತ್ರೆಯನ್ನು ಅಗ್ನಿಯು ಹೀರಿಕೊಳ್ಳಲಾಗಿ ಸಮಸ್ತ ಜಲರಾಶಿಯೂ ನಾಶವಾಗುವುದು. ರಸವನ್ನು ಕಳೆದುಕೊಂಡ ಜಲವು ಅಗ್ನಿಯಲ್ಲಡಗಿ ಅಗ್ನಿಯ ರೂಪವನ್ನು ಪಡೆಯಲಾಗಿ ಸರ್ವವೂ ಅಗ್ನಿಜ್ವಾಲೆಯಿಂದ ಆವೃತವಾಗುವುದು (17-18). ಈ ಪ್ರಕಾರ ಅಗ್ನಿಯು ಜಲವನ್ನು ಹೀರಿ ಕ್ರಮವಾಗಿ ವಿಶ್ವವನ್ನು ವ್ಯಾಪಿಸಿಕೊಳ್ಳುವುದು. ಮೇಲೆ, ಕೆಳಗೆ, ಅಡ್ಡಲಾಗಿ ಎಲ್ಲೆಲ್ಲಿಯೂ ಅಗ್ನಿಯು ವ್ಯಾಪಿಸಿದಾಗ ಆ ಜ್ಯೋತಿಗೆ ಪ್ರಕಾಶಸ್ವರೂಪವನ್ನೀಯುವ ಶ್ರೇಷ್ಠವಾದ ರೂಪತನ್ಮಾತ್ರೆಯನ್ನು ವಾಯುವು ನುಂಗುವುದು (19-20). ಸರ್ವರಿಗೂ ಪ್ರಾಣಸ್ವರೂಪನಾದ ವಾಯುವಿನಲ್ಲಿ ಅಗ್ನಿಯು ಲಯಿಸುವುದು. ರೂಪತನ್ಮಾತ್ರೆ ಹೋದ್ದರಿಂದ ಅಗ್ನಿಯು ರೂಪವನ್ನು ಕಳೆದುಕೊಂಡು ನಷ್ಟವಾಗುವುದು. ಅನಂತರ ಮಹತ್ತರವಾದ ವಾಯು ಬೀಸಲಾರಂಭಿಸುವುದು. ತೇಜಸ್ಸು ವಾಯು

**ಪ್ರಶಾಮ್ಯತಿ ತದಾ ಜ್ಯೋತಿರ್ವಾಯುರ್ದೋಧೂಯತೇ ಮಹಾನ್।**
**ನಿರಾಲೋಕೇ ತಥಾ ಲೋಕೇ ವಾಯ್ವವಸ್ಥೇ ಚ ತೇಜಸಿ॥ 22**

**ತತಸ್ತು ಮೂಲಮಾಸಾದ್ಯ ವಾಯುಸ್ಸಂಭವಮಾತ್ಮನಃ।**
**ಊರ್ಧ್ವಂ ಚಾಧಶ್ಚ ತಿರ್ಯಕ್ಚ ದೋಧವೀತಿ ದಿಶೋ ದಶ॥ 23**

**ವಾಯೋರಪಿ ಗುಣಂ ಸ್ಪರ್ಶಮಾಕಾಶೋ ಗ್ರಸತೇ ತತಃ।**
**ಪ್ರಶಾಮ್ಯತಿ ತತೋ ವಾಯುಃ ಖಂ ತು ತಿಷ್ಠತ್ಯನಾವೃತಮ್॥ 24**

**ಅರೂಪರಸಮಸ್ಪರ್ಶಮಗಂಧಂ ನ ಚ ಮೂರ್ತಿಮತ್।**
**ಸರ್ವಮಾಪೂರಯಚ್ಚೈವ ಸುಮಹತ್ತತ್ ಪ್ರಕಾಶತೇ॥ 25**

**ಪರಿಮಂಡಲಂ ಚ ಸುಷಿರಮಾಕಾಶಂ ಶಬ್ದಲಕ್ಷಣಮ್।**
**ಶಬ್ದಮಾತ್ರಂ ತದಾಕಾಶಂ ಸರ್ವಮಾವೃತ್ಯ ತಿಷ್ಠತಿ॥ 26**

**ತತಶ್ಶಬ್ದಗುಣಂ ತಸ್ಯ ಭೂತಾದಿರ್ಗ್ರಸತೇ ಪುನಃ।**
**ಭೂತೇಂದ್ರಿಯೇಷು ಯುಗಪದ್ಭೂತಾದೌ ಸಂಸ್ಥಿತೇಷು ವೈ॥ 27**

---

ಸ್ವರೂಪವನ್ನು ಪಡೆದಾಗ ಲೋಕದಲ್ಲಿ ಎಲ್ಲಿಯೂ ಬೆಳಕಿರುವುದಿಲ್ಲ (21-22). ಆಗ ವಾಯುವು ತನಗೆ ಮೂಲಕಾರಣವಾದ ಆಕಾಶದಲ್ಲಿ ಮೇಲೆ ಕೆಳಗೆ ಅಡ್ಡಲಾಗಿ ದಶದಿಕ್ಕುಗಳಲ್ಲಿಯೂ ರಭಸದಿಂದ ಬೀಸುತ್ತಿರುವುದು. ಅನಂತರ ವಾಯುವಿನ ಗುಣವಾದ ಸ್ಪರ್ಶತನ್ಮಾತ್ರೆಯನ್ನೂ ಆಕಾಶವು ತನ್ನಲ್ಲಿ ಲೀನ ಗೊಳಿಸುವುದು. ಆಮೇಲೆ ವಾಯುವು ನಷ್ಟವಾಗಲು ಆಕಾಶ ಒಂದೇ ಆವರಣ ರಹಿತವಾಗಿ ಉಳಿಯುವುದು (23-24). ರೂಪ, ರಸ, ಸ್ಪರ್ಶ, ಗಂಧರಹಿತವೂ ಅವಯವಶೂನ್ಯವೂ ಆದ ಮಹಾಕಾಶ ಒಂದೇ ಸರ್ವವ್ಯಾಪಿಯಾಗಿ ವಿರಾಜಿಸುವುದು. ಗೋಳಸ್ವರೂಪವೂ ಛಿದ್ರರೂಪವೂ ಆಗಿ ಶಬ್ದತನ್ಮಾತ್ರೆಯುಳ್ಳ ಆಕಾಶವು ಸರ್ವವನ್ನೂ ಆವರಿಸಿಕೊಂಡಿರುವುದು (25-26). ಅನಂತರ ಆಕಾಶದ ಶಬ್ದ ತನ್ಮಾತ್ರೆಯನ್ನು ಭೂತಾದಿಯಾದ ಅಹಂಕಾರ ತತ್ತ್ವವು ತನ್ನಲ್ಲಿ ಲಯಗೊಳಿಸುವುದು. ಹೀಗೆ ಪಂಚಭೂತಗಳೂ ಇಂದ್ರಿಯಗಳೂ (ದೇವಾದಿ ಗಳೂ ಸಹ) ಒಟ್ಟಿಗೆ ಅಹಂಕಾರ ತತ್ತ್ವದಲ್ಲಿ ಲೀನವಾಗಿರುತ್ತವೆ (27). ಈ

**ಅಭಿಮಾನಾತ್ಮಕೋ ಹ್ಯೇಷ ಭೂತಾದಿಸ್ತಾಮಸಸ್ಸ್ಮೃತಃ।**
**ಭೂತಾದಿಂ ಗ್ರಸತೇ ಚಾಪಿ ಮಹಾನ್ ವೈ ಬುದ್ಧಿಲಕ್ಷಣಃ॥ 28**

**ಉರ್ವೀ ಮಹಾಂಶ್ಚ ಜಗತಃ ಪ್ರಾಂತೇಽಂತರ್ಬಾಹ್ಯತಸ್ತಥಾ॥ 29**

**ಏವಂ ಸಪ್ತ ಮಹಾಬುದ್ಧೇ ಕ್ರಮಾತ್ ಪ್ರಕೃತಯಸ್ಸ್ಮೃತಾಃ।**
**ಪ್ರತ್ಯಾಹಾರೇ ತು ತಾಸ್ಸರ್ವಾಃ ಪ್ರವಿಶಂತಿ ಪರಸ್ಪರಮ್॥ 30**

**ಯೇನೇದಮಾವೃತಂ ಸರ್ವಮಂಡಮಪ್ಸು ಪ್ರಲೀಯತೇ।**
**ಸಪ್ತದ್ವೀಪಸಮುದ್ರಾಂತಂ ಸಪ್ತಲೋಕಂ ಸಪರ್ವತಮ್॥ 31**

**ಉದಕಾವರಣಂ ಯತ್ತು ಜ್ಯೋತಿಷಾ ಪೀಯತೇ ತು ತತ್।**
**ಜ್ಯೋತಿರ್ವಾಯೌ ಲಯಂ ಯಾತಿ ಯಾತ್ಯಾಕಾಶೇ ಸಮೀರಣಃ॥ 32**

---

ಭೂತಾದಿಯು ಅಭಿಮಾನಾತ್ಮಕವೂ ತಮಃಪ್ರಧಾನವೂ ಆದ ಅಹಂಕಾರ. ಅನಂತರ ಈ ಭೂತಾದಿಯನ್ನು ಬುದ್ಧಿಯೆಂಬ (ಸತ್ತ್ವಪ್ರಧಾನವಾದ) ಮಹತ್ತತ್ತ್ವವು ತನ್ನಲ್ಲಿ ಅಡಗಿಸಿಕೊಳ್ಳುವುದು. ಮೈತ್ರೇಯ, ಈ ಬ್ರಹ್ಮಾಂಡದ ಒಳಗಾಗಲಿ ಹೊರಗಾಗಲಿ ಮಹತ್ತತ್ತ್ವವು ಆದಿಯ ಅವಧಿ. ಪೃಥ್ವಿಯು ಅಂತ್ಯಾವಧಿ (28-29). ಅನುಲೋಮಕ್ರಮದಿಂದ (ಸೃಷ್ಟಿಕಾಲದಲ್ಲಿ ಒಂದಕ್ಕೊಂದು ಕಾರಣವಾದ) ಮಹದಾದಿ ಸಪ್ತಪ್ರಕೃತಿಗಳೆಲ್ಲವೂ* ಪ್ರಳಯಕಾಲದಲ್ಲಿ ತಮಗೆ ಕಾರಣವಾಗಿದ್ದ ಒಂದರಲ್ಲೊಂದು ಪ್ರತಿಲೋಮಕ್ರಮದಿಂದ ಲೀನವಾಗುತ್ತವೆ (30). ಸಪ್ತದ್ವೀಪ, ಸಮುದ್ರ, ಸಪ್ತಲೋಕ, ಪರ್ವತಗಳನ್ನು ಆವರಿಸಿಕೊಂಡು ಅಂಡಾಕೃತಿಯಾಗಿರುವ ಪೃಥ್ವಿಯು ಜಲದಲ್ಲಿ ಅಡಗುತ್ತದೆ. ಜಲರೂಪವಾದ ಆವರಣವನ್ನು ಅಗ್ನಿಯು ಹೀರುತ್ತದೆ. ಅಗ್ನಿಯನ್ನು ವಾಯುವೂ ವಾಯುವನ್ನು ಆಕಾಶವೂ ತಮ್ಮಲ್ಲಿ ಲಯಗೊಳಿಸುತ್ತವೆ (31-32). ಆಕಾಶವನ್ನು

---

* ಮಹತ್ತು , ಅಹಂಕಾರ ಮತ್ತು ಪಂಚಭೂತಗಳು ಸಪ್ತಪ್ರಕೃತಿಗಳು. ಮಹತ್ತಿನಿಂದ ಅಹಂಕಾರ, ಅಹಂಕಾರದಿಂದ ಆಕಾಶ—ಈ ಕ್ರಮದಲ್ಲಿ ಹುಟ್ಟುವುದು ಅನುಲೋಮ. ಪೃಥ್ವಿಯು ಜಲದಲ್ಲಿ, ಜಲವು ಅಗ್ನಿಯಲ್ಲಿ—ಈ ಕ್ರಮದಿಂದ ಲೀನವಾಗುವುದು ಪ್ರತಿಲೋಮ. ಇಲ್ಲಿ ಪೃಥ್ವಿಯಿಂದ ವೃಕ್ಷಾದಿಗಳು ಹುಟ್ಟುವುದರಿಂದ ಪೃಥ್ವಿಯನ್ನೂ ಪ್ರಕೃತಿಯೆಂದು ಕರೆಯಲಾಗಿದೆ.

**ಆಕಾಶಂ ಚೈವ ಭೂತಾದಿರ್ಗ್ರಸತೇ ತಂ ತಥಾ ಮಹಾನ್।**
**ಮಹಾಂತಮೇಭಿಸ್ಸಹಿತಂ ಪ್ರಕೃತಿರ್ಗ್ರಸತೇ ದ್ವಿಜ॥ 33**

**ಗುಣಸಾಮ್ಯಮನುದ್ರಿಕ್ತಮನ್ಯೂನಂ ಚ ಮಹಾಮುನೇ।**
**ಪ್ರೋಚ್ಯತೇ ಪ್ರಕೃತಿರ್ಹೇತುಃ ಪ್ರಧಾನಂ ಕಾರಣಂ ಪರಮ್॥ 34**

**ಇತ್ಯೇಷಾ ಪ್ರಕೃತಿಸ್ಸರ್ವಾ ವ್ಯಕ್ತಾವ್ಯಕ್ತಸ್ವರೂಪಿಣೀ।**
**ವ್ಯಕ್ತಸ್ವರೂಪಮವ್ಯಕ್ತೇ ತಸ್ಮಾನ್ಮೈತ್ರೇಯ ಲೀಯತೇ॥ 35**

**ಏಕಶ್ಶುದ್ಧೋಽಕ್ಷರೋ ನಿತ್ಯಸ್ಸರ್ವವ್ಯಾಪೀ ತಥಾ ಪುಮಾನ್।**
**ಸೋಽಪ್ಯಂಶಸ್ಸರ್ವಭೂತಸ್ಯ ಮೈತ್ರೇಯ ಪರಮಾತ್ಮನಃ॥ 36**

**ನ ಸಂತಿ ಯತ್ರ ಸರ್ವೇಶೇ ನಾಮಜಾತ್ಯಾದಿಕಲ್ಪನಾಃ।**
**ಸತ್ತಾಮಾತ್ರಾತ್ಮಕೇ ಜ್ಞೇಯೇ ಜ್ಞಾನಾತ್ಮನ್ಯಾತ್ಮನಃ ಪರೇ॥ 37**

---

ಭೂತಾದಿಯಾದ ಅಹಂಕಾರವೂ ಅಹಂಕಾರವನ್ನು ಮಹತ್ತತ್ತ್ವವೂ ತಮ್ಮಲ್ಲಿ ಅಡಗಿಸಿಕೊಳ್ಳುತ್ತವೆ. ಇವೆಲ್ಲವುಗಳಿಂದ ಸಹಿತವಾದ ಮಹತ್ತನ್ನು ಪ್ರಕೃತಿಯು ನುಂಗಿಬಿಡುತ್ತದೆ! (33). ಆಧಿಕ್ಯವಾಗಲಿ ನ್ಯೂನತೆಯಾಗಲಿ ಇಲ್ಲದ, ಸತ್ತ್ವಾದಿಗುಣತ್ರಯದ ಸಾಮ್ಯಾವಸ್ಥೆಯೇ ಪ್ರಕೃತಿ. ಇದಕ್ಕೆ ಪ್ರಧಾನವೆಂದೂ ಹೆಸರು. ಇದು ಸಮಸ್ತಸೃಷ್ಟಿಗೆ ಮೂಲಕಾರಣ. ಈ ರೀತಿಯಲ್ಲಿ ಪ್ರಕೃತಿಯು ವ್ಯಕ್ತಾವ್ಯಕ್ತ* ಸ್ವರೂಪವುಳ್ಳದ್ದಾಗಿ ಸರ್ವಮಯಿಯಾಗಿರುತ್ತದೆ. ಆದ್ದರಿಂದ ಮೈತ್ರೇಯ, ವ್ಯಕ್ತವು ಅವ್ಯಕ್ತದಲ್ಲಿ ಅಡಗುತ್ತದೆ (34-35). ಇನ್ನು ಏಕನೂ ಶುದ್ಧನೂ ಕ್ಷಯರಹಿತನೂ ನಿತ್ಯನೂ ಸರ್ವಪ್ರಕೃತಿಕಾರ್ಯಗಳಲ್ಲಿ ಅಧಿಷ್ಠಾತೃವೂ ಆದ ಯಾವ ಪುರುಷ(ಜೀವಾತ್ಮ)ನಿದ್ದಾನೋ ಅವನೂ ಸಹ ಸರ್ವ ಸ್ವರೂಪನಾದ ಪರಮಾತ್ಮನ ಅಂಶವೇ. ಪರಮಾತ್ಮನಾದರೋ ಪುರುಷನಿಗಿಂತ ಶ್ರೇಷ್ಠಸ್ವರೂಪನೂ ಸರ್ವೇಶ್ವರನೂ ಆಗಿದ್ದಾನೆ. ಆತನಲ್ಲಿ ನಾಮ, ಜಾತಿ— ಮುಂತಾದ ಯಾವ ಕಲ್ಪನೆಗಳೂ ಇಲ್ಲ. ಆ ವಸ್ತು ಸತ್ತಾ ಸ್ವರೂಪವಾದುದು. (ಮುಮುಕ್ಷುಗಳಿಗೆ) ಜ್ಞೇಯವಾದುದು. ಸ್ವತಃ ಜ್ಞಾನಸ್ವರೂಪವಾದುದು

* ಕಾರ್ಯ ಕಾರಣರೂಪವೆಂದರ್ಥ. ಅವ್ಯಕ್ತ = ಕಾರಣ. ವ್ಯಕ್ತ = ಕಾರ್ಯ.

**ತದ್ಬ್ರಹ್ಮ ಪರಮಂ ಧಾಮ ಪರಮಾತ್ಮಾ ಸ ಚೇಶ್ವರಃ।**
**ಸ ವಿಷ್ಣುಸ್ಸರ್ವಮೇವೇದಂ ಯತೋ ನಾವರ್ತತೇ ಯತಿಃ॥ 38**

**ಪ್ರಕೃತಿರ್ಯಾ ಮಯಾಖ್ಯಾತಾ ವ್ಯಕ್ತಾವ್ಯಕ್ತಸ್ವರೂಪಿಣೀ।**
**ಪುರುಷಶ್ಚಾಪ್ಯುಭಾವೇತೌ ಲೀಯೇತೇ ಪರಮಾತ್ಮನಿ॥ 39**

**ಪರಮಾತ್ಮಾ ಚ ಸರ್ವೇಷಾಮಾಧಾರಃ ಪರಮೇಶ್ವರಃ।**
**ವಿಷ್ಣುನಾಮಾ ಸ ವೇದೇಷು ವೇದಾಂತೇಷು ಚ ಗೀಯತೇ॥ 40**

**ಪ್ರವೃತ್ತಂ ಚ ನಿವೃತ್ತಂ ಚ ದ್ವಿವಿಧಂ ಕರ್ಮ ವೈದಿಕಮ್।**
**ತಾಭ್ಯಾಮುಭಾಭ್ಯಾಂ ಪುರುಷೈಸ್ಸರ್ವಮೂರ್ತಿಸ್ಸ ಇಜ್ಯತೇ॥ 41**

**ಋಗ್ಯಜುಸ್ಸಾಮಭಿರ್ಮಾರ್ಗೈಃ ಪ್ರವೃತ್ತೈರಿಜ್ಯತೇ ಹ್ಯಸೌ।**
**ಯಜ್ಞೇಶ್ವರೋ ಯಜ್ಞಪುಮಾನ್ ಪುರುಷೈಃ ಪುರುಷೋತ್ತಮಃ॥ 42**

**ಜ್ಞಾನಾತ್ಮಾ ಜ್ಞಾನಯೋಗೇನ ಜ್ಞಾನಮೂರ್ತಿಃ ಸ ಚೇಜ್ಯತೇ।**
**ನಿವೃತ್ತೇ ಯೋಗಿಭಿರ್ಮಾರ್ಗೇ ವಿಷ್ಣುರ್ಮುಕ್ತಿಫಲಪ್ರದಃ॥ 43**

---

(36-37). ಅದೇ ಬ್ರಹ್ಮವಸ್ತು; ಸಕಲವಿಶ್ವಕ್ಕೂ ಪರಮಾಶ್ರಯ. ಅದೇ ಪರಮಾತ್ಮ. ಅವನೇ ಈಶ್ವರ. ಅವನೇ ವಿಷ್ಣು. ಅವನೇ ನಿಖಿಲವಿಶ್ವವೂ. ಆತನನ್ನು ಸೇರಿದಮೇಲೆ ಯೋಗಿ ಜನರು ಮತ್ತೆ ಸಂಸಾರಕ್ಕೆ ಮರಳುವುದಿಲ್ಲ. (38). ವ್ಯಕ್ತಾವ್ಯಕ್ತಸ್ವರೂಪಿಣಿಯಾದ ಪ್ರಕೃತಿಯ ವಿಷಯವನ್ನು ಹೇಳಿದೆನಲ್ಲ, ಆ ಪ್ರಕೃತಿ, ಜೀವಾತ್ಮ—ಈರ್ವರೂ (ಪ್ರಳಯಕಾಲದಲ್ಲಿ) ಪರಮಾತ್ಮನಲ್ಲಿ ಲೀನರಾಗಿರುತ್ತಾರೆ. ಸರ್ವಾಧಾರನೂ ಪರಮೇಶ್ವರನೂ ಆದ ಪರಮಾತ್ಮನನ್ನು ವೇದಗಳಲ್ಲಿಯೂ ವೇದಾಂತಗಳಲ್ಲಿಯೂ ವಿಷ್ಣುವೆಂದು ಕೀರ್ತಿಸಲಾಗಿದೆ (39-40). ವೈದಿಕಕರ್ಮವು ಪ್ರವೃತ್ತಿ, ನಿವೃತ್ತಿ—ಎಂದು ಎರಡು ವಿಧವಾಗಿದೆ. ಈ ಎರಡು ಬಗೆಯ ಕರ್ಮಗಳಿಂದಲೂ ವಿಷ್ಣುವಿನ ಅರ್ಚನೆಯು ನಡೆಯುತ್ತದೆ. ಋಗ್ಯಜುಃಸಾಮವೇದೋಕ್ತಗಳಾದ ಪ್ರವೃತ್ತಿರೂಪ ಕರ್ಮಮಾರ್ಗಗಳಿಂದ ಯಜ್ಞೇಶ್ವರನೂ ಯಜ್ಞಪುರುಷನೂ ಆದ ಪುರುಷೋತ್ತಮನನ್ನು ಜನರು ಆರಾಧಿಸುತ್ತಾರೆ (41-42). ನಿವೃತ್ತಿಮಾರ್ಗದಲ್ಲಿಯೂ ಸಹ ಯೋಗಿಗಳು

**ಹ್ರಸ್ವದೀರ್ಘಪ್ಲುತ್ಯೈರ್ಯತ್ತು ಕಿಂಚಿದ್ವಸ್ತ್ವಭಿಧೀಯತೇ।**
**ಯಚ್ಚ ವಾಚಾಮವಿಷಯಂ ತತ್ಸರ್ವಂ ವಿಷ್ಣುರವ್ಯಯಃ॥ 44**

**ವ್ಯಕ್ತಸ್ಸ ಏವ ಚಾವ್ಯಕ್ತಸ್ಸ ಏವ ಪುರುಷೋಽವ್ಯಯಃ।**
**ಪರಮಾತ್ಮಾ ಚ ವಿಶ್ವಾತ್ಮಾ ವಿಶ್ವರೂಪಧರೋ ಹರಿಃ॥ 45**

**ವ್ಯಕ್ತಾವ್ಯಕ್ತಾತ್ಮಿಕಾ ತಸ್ಮಿನ್ ಪ್ರಕೃತಿಸ್ಸಂಪ್ರಲೀಯತೇ।**
**ಪುರುಷಶ್ಚಾಪಿ ಮೈತ್ರೇಯ ವ್ಯಾಪಿನ್ಯವ್ಯಾಹತಾತ್ಮನಿ॥ 46**

**ದ್ವಿಪರಾರ್ಧಾತ್ಮಕಃ ಕಾಲಃ ಕಥಿತೋ ಯೋ ಮಯಾ ತವ।**
**ತದಹಸ್ತಸ್ಯ ಮೈತ್ರೇಯ ವಿಷ್ಣೋರೀಶಸ್ಯ ಕಥ್ಯತೇ॥ 47**

**ವ್ಯಕ್ತೇ ಚ ಪ್ರಕೃತೌ ಲೀನೇ ಪ್ರಕೃತ್ಯಾಂ ಪುರುಷೇ ತಥಾ।**
**ತತ್ರ ಸ್ಥಿತೇ ನಿಶಾ ಚಾಸ್ಯ ತತ್ಪ್ರಮಾಣಾ ಮಹಾಮುನೇ॥ 48**

---

ಜ್ಞಾನಾತ್ಮನೂ ಜ್ಞಾನಮೂರ್ತಿಯೂ ಮುಕ್ತಿಫಲದಾಯಕನೂ ಆದ ವಿಷ್ಣುವನ್ನು ಜ್ಞಾನಯೋಗದಿಂದ ಆರಾಧಿಸುತ್ತಾರೆ. ಹ್ರಸ್ವ, ದೀರ್ಘ, ಪ್ಲುತ ಈ ಅಕ್ಷರಗಳುಳ್ಳ ಶಬ್ದಗಳಿಂದ ಯಾವ ಯಾವ ವಸ್ತು ಹೇಳಲ್ಪಡುತ್ತದೆಯೋ, ಆ ಶಬ್ದಗಳಿಗೂ ಅಗೋಚರವಾದದ್ದು ಯಾವುದಿದೆಯೋ ಅದೆಲ್ಲವೂ ಅವ್ಯಯನಾದ ವಿಷ್ಣುವೇ (43-44). ವ್ಯಕ್ತವಾದ ಪದಾರ್ಥವೂ ಅವ್ಯಯನಾದ ಆ ಪುರುಷನೇ. ಅವ್ಯಕ್ತ ವಾದದ್ದೂ ಅವನೇ. ಪರಮಾತ್ಮನಾದ ಶ್ರೀಹರಿಯೂ ವಿಶ್ವಾತ್ಮನೂ ವಿಶ್ವರೂಪ ಧರನೂ ಆಗಿದ್ದಾನೆ. (ಕಾರ್ಯಕಾರಣಭಾವದಿಂದ) ವ್ಯಕ್ತಾವ್ಯಕ್ತಸ್ವರೂಪಿಣಿಯಾದ ಪ್ರಕೃತಿಯೂ ಮತ್ತು ಪುರುಷನೂ (ಜೀವಾತ್ಮನೂ) ಸಹ ಸರ್ವವ್ಯಾಪಿಯೂ ಅವಿಕೃತಸ್ವರೂಪನೂ ಆದ ಪರಮಾತ್ಮನಲ್ಲಿ ಲೀನವಾಗುತ್ತಾರೆ (45-46). ಮೈತ್ರೇಯ, ಪರಾರ್ಧದ್ವಯಾತ್ಮಕವಾದ ಕಾಲವನ್ನು ನಿನಗೆ ಹೇಳಿದೆನಷ್ಟೆ, ಅದು ಈಶ್ವರನಾದ ವಿಷ್ಣುವಿಗೆ ಒಂದು ಹಗಲಾಗುತ್ತದೆ. ವ್ಯಕ್ತವು ಪ್ರಕೃತಿಯಲ್ಲಿ ಲೀನವಾದ ಮೇಲೆ, ಆ ಪ್ರಕೃತಿಯೂ ಮತ್ತು ಪುರುಷನೂ (ಜೀವಾತ್ಮನೂ) ವಿಷ್ಣುವಿನಲ್ಲಿ ಅವಸ್ಥಿತರಾದಾಗ, ವಿಷ್ಣುವಿಗೆ ರಾತ್ರಿಯಾಗುತ್ತದೆ. ಅದರ

**ನೈವಾಹಸ್ತಸ್ಯ ನ ನಿಶಾ ನಿತ್ಯಸ್ಯ ಪರಮಾತ್ಮನಃ।**
**ಉಪಚಾರಸ್ತಥಾಪ್ಯೇಷ ತಸ್ಯೇಶಸ್ಯ ದ್ವಿಜೋಚ್ಯತೇ॥** 49

**ಇತ್ಯೇಷ ತವ ಮೈತ್ರೇಯ ಕಥಿತಃ ಪ್ರಾಕೃತೋ ಲಯಃ।**
**ಆತ್ಯಂತಿಕಮಥೋ ಬ್ರಹ್ಮನ್ ನಿಬೋಧ ಪ್ರತಿಸಂಚರಮ್॥** 50

ಇತಿ ಶ್ರೀವಿಷ್ಣುಪುರಾಣೇ ಷಷ್ಠಾಂಶೇ ಚತುರ್ಥೋಽಧ್ಯಾಯಃ

---

ಪ್ರಮಾಣವೂ ಪರಾರ್ಧದ್ವಯಾತ್ಮಕವಾದ ಕಾಲ* (47-48). ಮೈತ್ರೇಯ, ನಿತ್ಯನಾದ ಪರಮಾತ್ಮನಿಗೆ ಹಗಲೂ ಇಲ್ಲ , ರಾತ್ರಿಯೂ ಇಲ್ಲ. ಔಪಚಾರಿಕವಾಗಿ ಹಗಲು ರಾತ್ರಿಗಳನ್ನು ಈಶ್ವರನಿಗೆ ಕಲ್ಪಿಸಿ ಹೇಳಿದ್ದಾಗಿದೆ. ಈ ಪ್ರಕಾರವಾಗಿ ಪ್ರಾಕೃತ ಪ್ರಳಯದ ವಿಷಯವನ್ನು ನಿನಗೆ ಹೇಳಿದ್ದಾಯಿತು.. ಇನ್ನು ಆತ್ಯಂತಿಕ ಪ್ರಳಯದ ಸ್ವರೂಪವನ್ನು ಹೇಳುವೆನು, ಕೇಳು (49-50).

ಇಲ್ಲಿಗೆ ಶ್ರೀವಿಷ್ಣುಪುರಾಣದ ಷಷ್ಠಾಂಶದಲ್ಲಿ
ನಾಲ್ಕನೆಯ ಅಧ್ಯಾಯ ಮುಗಿಯಿತು.



---

* ಪರಾರ್ಧದ್ವಯಾತ್ಮಕವಾದ ಕಾಲವೆಂದರೆ ಬ್ರಹ್ಮನ ಆಯುಃಪ್ರಮಾಣ. ಅದು ವಿಷ್ಣುವಿಗೆ ಒಂದು ಹಗಲು. ಅಷ್ಟೇ ಪ್ರಮಾಣದ ಕಾಲ ವಿಷ್ಣುವಿಗೆ ರಾತ್ರಿ. ಪ್ರಾಕೃತ ಪ್ರಳಯ ಕಾಲವನ್ನು ರಾತ್ರಿಯೆನ್ನಲಾಗಿದೆ. ವಿಷ್ಣುವಿನ ಸರ್ವೋತ್ಕರ್ಷವನ್ನು ತಿಳಿಸುವುದಕ್ಕಾಗಿ ಈ ಕಲ್ಪನೆ. ಅವನಿಗೆ ಹಗಲೂ ಇಲ್ಲ , ರಾತ್ರಿಯೂ ಇಲ್ಲ. ಅದನ್ನೇ ಮುಂದಿನ ಶ್ಲೋಕದಲ್ಲಿ ಹೇಳಿದ್ದಾರೆ.

## ಪಂಚಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಆಧ್ಯಾತ್ಮಿಕಾದಿ ಮೈತ್ರೇಯ ಜ್ಞಾತ್ವಾ ತಾಪತ್ರಯಂ ಬುಧಃ।**
**ಉತ್ಪನ್ನಜ್ಞಾನವೈರಾಗ್ಯಃ ಪ್ರಾಪ್ನೋತ್ಯಾತ್ಯಂತಿಕಂ ಲಯಮ್॥** 1

**ಆಧ್ಯಾತ್ಮಿಕೋಽಪಿ ದ್ವಿವಿಧಶ್ಶಾರೀರೋ ಮಾನಸಸ್ತಥಾ।**
**ಶಾರೀರೋ ಬಹುಭಿರ್ಭೇದೈರ್ಭಿದ್ಯತೇ ಶ್ರೂಯತಾಂ ಚ ಸಃ॥** 2

**ಶಿರೋರೋಗಪ್ರತಿಶ್ಯಾಯಜ್ವರಶೂಲಭಗಂದರೈಃ।**
**ಗುಲ್ಮಾರ್ಶಃ ಶ್ವಯಥುಶ್ವಾಸಚ್ಛರ್ದ್ಯಾದಿಭಿರನೇಕಧಾ॥** 3

**ತಥಾಕ್ಷಿರೋಗಾತಿಸಾರಕುಷ್ಠಾಂಗಾಮಯಸಂಜ್ಞಿತೈಃ।**
**ಭಿದ್ಯತೇ ದೇಹಜಸ್ತಾಪೋ ಮಾನಸಂ ಶ್ರೋತುಮರ್ಹಸಿ॥** 4

---

### ಅಧ್ಯಾಯ 5

ತಾಪತ್ರಯಗಳ ವಿವರಣೆ. ಭಗವಾನ್ ಮತ್ತು ವಾಸುದೇವ—
ಎಂಬ ಶಬ್ದಗಳ ಅರ್ಥ. ಭಗವಂತನ ಪರಮಾರ್ಥಸ್ವರೂಪ.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಪ್ರಾಜ್ಞನಾದವನು ಆಧ್ಯಾತ್ಮಿಕವೇ ಮೊದಲಾದ ತಾಪತ್ರಯವನ್ನರಿತ ಮೇಲೆ ವೈರಾಗ್ಯವೂ ಆತ್ಮಜ್ಞಾನವೂ ಉತ್ಪನ್ನವಾಗಲು, ಆತ್ಯಂತಿಕಲಯವನ್ನೈದುವನು (1). ಆಧ್ಯಾತ್ಮಿಕ ತಾಪವು ಶಾರೀರ, ಮಾನಸ—ಎಂದು ಎರಡು ವಿಧ. ಅವುಗಳಲ್ಲಿ ಶಾರೀರವೂ ಬಹುಭೇದವನ್ನೊಳಗೊಂಡಿದೆ. ಅದನ್ನು ಕೇಳು. ಶಿರೋರೋಗ, ನೆಗಡಿ, ಜ್ವರ, ಶೂಲೆ, ಭಂಗದರ, ಪ್ಲೀಹವ್ಯಾಧಿ, ಮೂಲವ್ಯಾಧಿ, ಊತ, ಉಬ್ಬಸ, ವಾಂತಿ —ಮೊದಲಾದ ಭೇದಗಳು ಶಾರೀರದಲ್ಲಿವೆ. ಅಲ್ಲದೆ ನೇತ್ರರೋಗ, ಅತಿಸಾರ, ಚರ್ಮವ್ಯಾಧಿ, ವಾತರೋಗ—ಮೊದಲಾದವುಗಳಿಂದಲೂ ಶಾರೀರವಾದ ತಾಪವು ಹಲವು ಪ್ರಕಾರಗಳನ್ನೊಳಗೊಂಡಿರುತ್ತದೆ. ಇನ್ನು ಮಾನಸತಾಪವನ್ನು ಕೇಳು (2-4). ಕಾಮ, ಕ್ರೋಧ, ಭಯ, ದ್ವೇಷ, ಲೋಭ, ಮೋಹ, ವಿಷಾದ,

**ಕಾಮಕ್ರೋಧಭಯದ್ವೇಷಲೋಭಮೋಹವಿಷಾದಜಃ ।**
**ಶೋಕಾಸೂಯಾವಮಾನೇರ್ಷ್ಯಾಮಾತ್ಸರ್ಯಾದಿಮಯಸ್ತಥಾ ॥ 5**

**ಮಾನಸೋಽಪಿ ದ್ವಿಜಶ್ರೇಷ್ಠ ತಾಪೋ ಭವತಿ ನೈಕಧಾ ।**
**ಇತ್ಯೇವಮಾದಿಭಿರ್ಭೇದೈಸ್ತಾಪೋ ಹ್ಯಾಧ್ಯಾತ್ಮಿಕಃ ಸ್ಮೃತಃ ॥ 6**

**ಮೃಗಪಕ್ಷಿಮನುಷ್ಯಾದ್ಯೈಃ ಪಿಶಾಚೋರಗರಾಕ್ಷಸೈಃ ।**
**ಸರೀಸೃಪಾದ್ಯೈಶ್ಚ ನೃಣಾಂ ಜಾಯತೇ ಚಾಧಿಭೌತಿಕಃ ॥ 7**

**ಶೀತವಾತೋಷ್ಣವರ್ಷಾಂಬುವೈದ್ಯುತಾದಿಸಮುದ್ಭವಃ ।**
**ತಾಪೋ ದ್ವಿಜವರ ಶ್ರೇಷ್ಠೈಃ ಕಥ್ಯತೇ ಚಾಧಿದೈವಿಕಃ ॥ 8**

**ಗರ್ಭಜನ್ಮಜರಾಜ್ಞಾನಮೃತ್ಯುನಾರಕಜಂ ತಥಾ ।**
**ದುಃಖಂ ಸಹಸ್ರಶೋ ಭೇದೈರ್ಭಿದ್ಯತೇ ಮುನಿಸತ್ತಮ ॥ 9**

---

ಶೋಕ, ಅಸೂಯೆ, ಅವಮಾನ, ಈರ್ಷ್ಯೆ, ಮಾತ್ಸರ್ಯ*—ಮುಂತಾದವುಗಳಿಂದ ಮಾನಸತಾಪವು ಬಹುವಿಧವಾಗಿದೆ. ಹೀಗೆ ಹಲವಾರು ಭೇದಗಳಿಂದ ಕೂಡಿದ ಶಾರೀರತಾಪ ಮತ್ತು ಮಾನಸತಾಪಗಳಿಗೆ ಆಧ್ಯಾತ್ಮಿಕ§ ಎಂದು ಹೆಸರು (5-6). ಮೃಗ, ಪಕ್ಷಿ, ಮನುಷ್ಯ, ಪಿಶಾಚ, ನಾಗ, ರಾಕ್ಷಸ, ಹರಿದಾಡುವ ಚೇಳು ಮುಂತಾದ ಸರೀಸೃಪ—ಇತ್ಯಾದಿಗಳಿಂದ ಜನರಿಗಾಗುವ ಬಾಧೆಗೆ ಆಧಿಭೌತಿಕ ಎಂದು ಹೆಸರು. ಚಳಿ, ಗಾಳಿ, ಸೆಕೆ, ಮಳೆ, ನೀರು, ವಿದ್ಯುತ್—ಮುಂತಾದವುಗಳಿಂದ ಒದಗುವ ದುಃಖವನ್ನು ವಿದ್ವಾಂಸರು ಆಧಿದೈವಿಕ ಎನ್ನುತ್ತಾರೆ (7-8). ಮೈತ್ರೇಯ, ಈ ತಾಪತ್ರಯಗಳಿಂದಾಗುವ ದುಃಖಗಳಲ್ಲಿ ಇನ್ನೂ ಸಾವಿರಾರು ಕವಲುಗಳುಂಟು. ಗರ್ಭವಾಸ, ಹುಟ್ಟು, ಮುಪ್ಪು, ಅಜ್ಞಾನ, ಸಾವು, ನರಕ—ಇವುಗಳಿಂದಾಗುವ ದುಃಖಗಳಿವೆ (9). ಗರ್ಭವಾಸ

---

* ವಿಷಾದ = ದುಃಖ. ಶೋಕ = ಪರರ ಕಷ್ಟವನ್ನು ನೋಡಿ ದುಃಖ. ಅಸೂಯೆ = ಗುಣಗಳಲ್ಲಿ ದೋಷಾರೋಪ. ಈರ್ಷ್ಯೆ = ಅಸಹನೆ. ಮಾತ್ಸರ್ಯ = ಹೊಟ್ಟೆಕಿಚ್ಚು.

§ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ—ಎಂಬವು ತಾಪತ್ರಯಗಳು. ಆಧ್ಯಾತ್ಮಿಕ—ಶರೀರಸಂಘಾತಕ್ಕೆ ಸಂಬಂಧಿಸಿದ್ದು. ಇಲ್ಲಿ ಆತ್ಮವೆಂದರೆ ದೇಹ. ಆಧಿಭೌತಿಕ—ಪ್ರಾಣಗಳಿಂದ ಉಂಟಾಗತಕ್ಕದ್ದು. ಆಧಿದೈವಿಕ—ಕೇವಲ ದೈವದಿಂದ ಸಂಭವಿಸತಕ್ಕದ್ದು.

ಸುಕುಮಾರತನುರ್ಗರ್ಭೇ ಜಂತುರ್ಬಹುಮಲಾವೃತೇ।
ಉಲ್ಬಸಂವೇಷ್ಟಿತೋ ಭುಗ್ನಪೃಷ್ಠಗ್ರೀವಾಸ್ಥಿಸಂಹತಿಃ॥ 10

ಅತ್ಯಮ್ಲಕಟುತೀಕ್ಷ್ಣೋಷ್ಣಲವಣೈರ್ಮಾತೃಭೋಜನೈಃ।
ಅತ್ಯಂತತಾಪೈರತ್ಯರ್ಥಂ ವರ್ಧಮಾನಾತಿವೇದನಃ॥ 11

ಪ್ರಸಾರಣಾಕುಂಚನಾದೌ ನಾಂಗಾನಾಂ ಪ್ರಭುರಾತ್ಮನಃ।
ಶಕೃನ್ಮೂತ್ರಮಹಾಪಂಕಶಾಯೀ ಸರ್ವತ್ರ ಪೀಡಿತಃ॥ 12

ನಿರುಚ್ಛ್ವಾಸಃ ಸಚೈತನ್ಯಸ್ಸ್ಮರಂಜನ್ಮಶತಾನ್ಯಥ।
ಆಸ್ತೇ ಗರ್ಭೇಽತಿದುಃಖೇನ ನಿಜಕರ್ಮನಿಬಂಧನಃ॥ 13

ಜಾಯಮಾನಃ ಪುರೀಷಾಸೃಙ್ಮೂತ್ರಶುಕ್ರಾವಿಲಾನನಃ।
ಪ್ರಾಜಾಪತ್ಯೇನ ವಾತೇನ ಪೀಡ್ಯಮಾನಾಸ್ಥಿಬಂಧನಃ॥ 14

---

ದಲ್ಲಿರುವಾಗ ದೇಹವು ಬಹಳ ಕೋಮಲವಾಗಿರುತ್ತದೆ. ಕಶ್ಮಲಪೂರ್ಣವಾದ ಬಸಿರಿನಲ್ಲಿ ಈ ಮಾನವ ಪ್ರಾಣಿಯು ಗರ್ಭದ ಪೊರೆಯಿಂದ ಮುಚ್ಚಲ್ಪಟ್ಟು ಬೆನ್ನು ಕುತ್ತಿಗೆ ಮೂಳೆಗಳನ್ನೆಲ್ಲ ಮುದುಡಿಸಿಕೊಂಡಿರಬೇಕಾಗುತ್ತದೆ. ತಾಯಿಯು ತಿನ್ನುವ ಅತ್ಯಂತ ತಾಪದಾಯಕವಾದ ಹುಳಿ, ಖಾರ, ತೀಕ್ಷ್ಣವಾದ ಸಂಬಾರ ಪದಾರ್ಥ, ಬಿಸಿ, ಉಪ್ಪು—ಮೊದಲಾದವುಗಳಿಂದ ಮಗುವಿನ ವೇದನೆ ಹೆಚ್ಚುತ್ತಲೇ ಇರುವುದು (10-11). ಕೈಕಾಲುಗಳನ್ನು ನೀಡುವುದಕ್ಕೂ ಮಡಿಸುವುದಕ್ಕೂ ಅಸಮರ್ಥವಾಗಿ ಯಾತನೆಪಡುತ್ತ ಮಲಮೂತ್ರಗಳ ಮಹಾಪಂಕದಲ್ಲಿ ಮಲಗಿರುತ್ತಾನೆ. ಗರ್ಭದಲ್ಲಿರುವ ಈ ಪ್ರಾಣಿಗೆ ಚೈತನ್ಯವಿರುತ್ತದೆ, ಉಸಿರಾಟವಿರುವುದಿಲ್ಲ. ತಾನು ಮಾಡಿದ ಕರ್ಮಬಂಧನಕ್ಕೆ ಒಳಗಾಗಿ, ಪೂರ್ವಜನ್ಮದ ನೂರಾರು ವೃತ್ತಾಂತಗಳನ್ನು ಸ್ಮರಿಸಿಕೊಳ್ಳುತ್ತ ಅತ್ಯಂತ ದುಃಖದಿಂದ ಗರ್ಭದಲ್ಲಿ ನೆಲೆಸಿರುತ್ತಾನೆ (12-13). ಅನಂತರ ಹುಟ್ಟುವ ಕಾಲ ಬರುತ್ತದೆ. (ಗರ್ಭವನ್ನು ಸಂಕೋಚಗೊಳಿಸುವ) ಪ್ರಜಾಪತ್ಯವಾಯುವು ಈ ಪ್ರಾಣಿಯ ದೇಹಬಂಧನವನ್ನು ಅಮುಕುವುದು. ಪ್ರಸೂತಿ ವಾತಗಳು ಈತನನ್ನು ಗರ್ಭಕೋಶದಿಂದ

**ಅಧೋಮುಖೋ ವೈ ಕ್ರಿಯತೇ ಪ್ರಬಲೈಸ್ಸೂತಿಮಾರುತೈಃ।**
**ಕ್ಲೇಶಾನ್ನಿಷ್ಕ್ರಾಂತಿಮಾಪ್ನೋತಿ ಜಠರಾನ್ಮಾತುರಾತುರಃ॥ 15**

**ಮೂರ್ಛಾಮವಾಪ್ಯ ಮಹತೀಂ ಸಂಸ್ಪೃಷ್ಟೋ ಬಾಹ್ಯವಾಯುನಾ।**
**ವಿಜ್ಞಾನಭ್ರಂಶಮಾಪ್ನೋತಿ ಜಾತಶ್ಚ ಮುನಿಸತ್ತಮ॥ 16**

**ಕಣ್ಟಕೈರಿವ ತುನ್ನಾಂಗಃ ಕ್ರಕಚೈರಿವ ದಾರಿತಃ।**
**ಪೂತಿವ್ರಣಾನ್ನಿಪತಿತೋ ಧರಣ್ಯಾಂ ಕ್ರಿಮಿಕೋ ಯಥಾ॥ 17**

**ಕಂಡೂಯನೇಽಪಿ ಚಾಶಕ್ತಃ ಪರಿವರ್ತೇಽಪ್ಯನೀಶ್ವರಃ।**
**ಸ್ನಾನಪಾನಾದಿಕಾಹಾರಮಪ್ಯಾಪ್ನೋತಿ ಪರೇಚ್ಛಯಾ॥ 18**

**ಅಶುಚಿಪ್ರಸ್ತರೇ ಸುಪ್ತಃ ಕೀಟದಂಶಾದಿಭಿಸ್ತಥಾ।**
**ಭಕ್ಷ್ಯಮಾಣೋಽಪಿ ನೈವೈಷಾಂ ಸಮರ್ಥೋ ವಿನಿವಾರಣೇ॥ 19**

---

ಹೊರಗೆ ನೂಕುವುವು. ಮಲ, ಮೂತ್ರ, ರಕ್ತ, ರಜಸ್ಸುಗಳು ಮುಖಕ್ಕೆ ಮೆತ್ತಿಕೊಂಡಿರಲಾಗಿ ಪೀಡೆಯನ್ನನುಭವಿಸುತ್ತ, ಅಧೋಮುಖನಾಗಿ ಕ್ಲೇಶ ಪಡುತ್ತ ತಾಯಿಯ ಜಠರದಿಂದ ಹೊರಗೆ ಬರುತ್ತಾನೆ (14-15). ಮೈತ್ರೇಯ, ಹುಟ್ಟಿದೊಡನೆ ಬಾಹ್ಯವಾಯುವಿನ ಸ್ಪರ್ಶವಾಗುತ್ತದೆ. ಒಡನೆಯೇ ಹಿಂದಿನ ಎಲ್ಲ ನೆನಪುಗಳೂ ಅಳಿಸಿಹೋಗಿ ಮಹತ್ತರವಾದ ಮೋಹಾವಸ್ಥೆಯನ್ನು ಪಡೆಯುತ್ತಾನೆ. ಆ ಸಮಯದಲ್ಲಿ ಮುಳ್ಳುಗಳಿಂದ ಚುಚ್ಚಲ್ಪಟ್ಟಂತೆಯೂ ಗರಗಸ ಗಳಿಂದ ಸೀಳಲ್ಪಟ್ಟಂತೆಯೂ ನೋವನ್ನನುಭವಿಸುತ್ತ, ದುರ್ಗಂಧಮಯ ವ್ರಣಕ್ಕೆ ಸಮಾನವಾದ ಯೋನಿಯಿಂದ ಹುಳುವಿನಂತೆ ನೆಲಕ್ಕೆ ಬೀಳುತ್ತಾನೆ! (16-17). ಮೈ ತುರಿಸಿ ಕೊಳ್ಳಲು ಅಶಕ್ತ; ಪಕ್ಕಕ್ಕೆ ಹೊರಳಲು ಅಸಮರ್ಥ. ಸ್ನಾನ-ಪಾನ-ಆಹಾರಾದಿಗಳಲ್ಲಿಯೂ ಅಸ್ವತಂತ್ರನಾಗಿ ಪರೇಚ್ಛೆಯಿಂದ ಅವನ್ನು ಪಡೆಯ ಬೇಕಾಗುತ್ತದೆ. (ಮಲಮೂತ್ರಗಳಿಂದ) ಕೊಳೆಯಾದ ಹಾಸಿಗೆಯಲ್ಲಿ ಮಲಗಿರ ಬೇಕು. ಹುಳುವೋ ಸೊಳ್ಳೆಯೋ ಕಚ್ಚಿ ತಿನ್ನುತ್ತಿದ್ದರೂ ಅವನ್ನು ಓಡಿಸಲು ಇವನಿಗೆ ಸಾಮರ್ಥ್ಯವಿರುವುದಿಲ್ಲ (18-19). ಹುಟ್ಟುವಾಗಲೂ ಹುಟ್ಟಿದಮೇಲೆ

**ಜನ್ಮದುಃಖಾನ್ಯನೇಕಾನಿ ಜನ್ಮನೋಽನಂತರಾಣಿ ಚ।**
**ಬಾಲಭಾವೇ ಯದಾಪ್ನೋತಿ ಹ್ಯಾದಿಭೌತಾದಿಕಾನಿ ಚ॥** 20

**ಅಜ್ಞಾನತಮಸಾಽಽಚ್ಛನ್ನೋ ಮೂಢಾಂತಃಕರಣೋ ನರಃ।**
**ನ ಜಾನಾತಿ ಕುತಃ ಕೋಽಹಂ ಕ್ವಾಹಂ ಗಂತಾ ಕಿಮಾತ್ಮಕಃ॥** 21

**ಕೇನ ಬಂಧೇನ ಬದ್ಧೋಽಹಂ ಕಾರಣಂ ಕಿಮಕಾರಣಮ್।**
**ಕಿಂ ಕಾರ್ಯಂ ಕಿಮಕಾರ್ಯಂ ವಾ ಕಿಂ ವಾಚ್ಯಂ ಕಿಂ ಚ ನೋಚ್ಯತೇ॥** 22

**ಕೋ ಧರ್ಮಃ ಕಶ್ಚ ವಾಽಧರ್ಮಃ ಕಸ್ಮಿನ್ವರ್ತೇಽಥ ವಾ ಕಥಮ್।**
**ಕಿಂ ಕರ್ತವ್ಯಮಕರ್ತವ್ಯಂ ಕಿಂ ವಾ ಕಿಂ ಗುಣದೋಷವತ್॥** 23

**ಏವಂ ಪಶುಸಮೈರ್ಮೂಢೈರಜ್ಞಾನಪ್ರಭವಂ ಮಹತ್।**
**ಅವಾಪ್ಯತೇ ನರೈರ್ದುಃಖಂ ಶಿಶ್ನೋದರಪರಾಯಣೈಃ॥** 24

---

ಬಾಲ್ಯದಲ್ಲಿಯೂ ಮಾನವಪ್ರಾಣಿಗೆ ಈ ಪ್ರಕಾರವಾಗಿ ಒದಗುವ ಆಧಿಭೌತಿಕಾದಿ ದುಃಖಗಳು ಬಹಳ ಇರುತ್ತವೆ. (ಆಮೇಲೆ ಯೌವನ ಬರುತ್ತದೆ). ಅಜ್ಞಾನವೆಂಬ ಕತ್ತಲೆ ಮುಚ್ಚಿಕೊಳ್ಳುತ್ತದೆ. ಬುದ್ಧಿಯು ಮೂಢವಾಗುತ್ತದೆ. ಏಕೆಂದರೆ, ಆಗ ಮನುಷ್ಯನು "ನಾನು ಯಾರು? ಎಲ್ಲಿಂದ ಬಂದೆನು? ಎಲ್ಲಿಗೆ ಹೋಗತಕ್ಕವನು? ನನ್ನ ಸ್ವರೂಪ ಯಾವುದು? (20-21). ಯಾವ ಬಂಧನಕ್ಕೆ ಒಳಗಾಗಿದ್ದೇನೆ? ಈ ಬಂಧನಕ್ಕೆ ಕಾರಣವೇನು? ಅಥವಾ ಕಾರಣವಿಲ್ಲದೆಯೇ ಬಂಧನ ಒದಗಿತೆ? ನಾನು ಮಾಡಬೇಕಾದ ಕಾರ್ಯ ಯಾವುದು? ಮಾಡಬಾರದ ಅಕಾರ್ಯ ಯಾವುದು? ಏನನ್ನು ನುಡಿಯಬೇಕು? ಏನನ್ನು ನುಡಿಯಬಾರದು? (22). ಯಾವುದು ಧರ್ಮ? ಯಾವುದು ಅಧರ್ಮ? ನಾನು ಯಾವ ಸ್ಥಿತಿಯಲ್ಲಿ ಹೇಗೆ ಇದ್ದೇನೆ? ಈ ಪರಿಸ್ಥಿತಿಯಲ್ಲಿ ಕರ್ತವ್ಯ ಯಾವುದು? ಅಕರ್ತವ್ಯ ಯಾವುದು? ಯಾವುದು ಒಳ್ಳೆಯದು? ಯಾವುದು ಕೆಟ್ಟದ್ದು?" ಎಂಬ ವಿಚಾರವನ್ನೇ ಮಾಡುವುದಿಲ್ಲ. ಜನರು ಯೌವನದಲ್ಲಿ ಮೂಢರಾಗಿ ಪಶುಗಳಂತೆ ವರ್ತಿಸುತ್ತಾರೆ. ಶಿಶ್ನೋದರ ಪರಾಯಣರಾಗುತ್ತಾರೆ. ಈ ಪ್ರಕಾರವಾದ ಅಜ್ಞಾನದಿಂದ ಅವರು ಘೋರವಾದ ದುಃಖಕ್ಕೆ ಈಡಾಗುತ್ತಾರೆ (23-24).

**ಅಜ್ಞಾನಂ ತಾಮಸೋ ಭಾವಃ ಕಾರ್ಯಾರಂಭಪ್ರವೃತ್ತಯಃ।**
**ಅಜ್ಞಾನಿನಾಂ ಪ್ರವರ್ತಂತೇ ಕರ್ಮಲೋಪಾಸ್ತತೋ ದ್ವಿಜಃ॥** 25

**ನರಕಂ ಕರ್ಮಣಾಂ ಲೋಪಾತ್ ಫಲಮಾಹುರ್ಮನೀಷಿಣಃ।**
**ತಸ್ಮಾದಜ್ಞಾನಿನಾಂ ದುಃಖಮಿಹ ಚಾಮುತ್ರ ಚೋತ್ತಮಮ್॥** 26

**ಜರಾಜರ್ಜರದೇಹಶ್ಚ ಶಿಥಿಲಾವಯವಃ ಪುಮಾನ್।**
**ವಿಗಲಚ್ಛೀರ್ಣದಶನೋ ವಲಿಸ್ನಾಯುಶಿರಾವೃತಃ॥** 27

**ದೂರಪ್ರಣಷ್ಟನಯನೋ ವ್ಯೋಮಾಂತರ್ಗತತಾರಕಃ।**
**ನಾಸಾವಿವರನಿರ್ಯಾತಲೋಮಪುಂಜಶ್ಚಲದ್ವಪುಃ॥** 28

**ಪ್ರಕಟೀಭೂತಸರ್ವಾಸ್ಥಿರ್ನತಪೃಷ್ಠಾಸ್ಥಿಸಂಹತಿಃ।**
**ಉತ್ಸನ್ನಜಠರಾಗ್ನಿತ್ವಾದಲ್ಪಾಹಾರೋಽಲ್ಪಚೇಷ್ಟಿತಃ॥** 29

---

ಅಜ್ಞಾನವು ತಮೋಗುಣದ ವಿಕಾರ. ಆದ್ದರಿಂದ ಅಜ್ಞಾನಿಗಳಿಗೆ ಈ ಬಗೆಯ ಅವಿಹಿತ (ನಿಷಿದ್ಧ) ಕಾರ್ಯಾರಂಭಗಳಲ್ಲಿ ಪ್ರವೃತ್ತಿಗಳುಂಟಾಗುತ್ತವೆ. ಅದರಿಂದ ಕರ್ತವ್ಯ ಕರ್ಮಗಳಿಗೆ ಲೋಪವಾಗುತ್ತದೆ. ಕರ್ಮಲೋಪಕ್ಕೆ ನರಕವೇ ಫಲವೆಂದು ವಿದ್ವಾಂಸರು ಹೇಳಿದ್ದಾರೆ. ಆದುದರಿಂದ ಅಜ್ಞಾನಿಗಳಿಗೆ ಇಹದಲ್ಲಿಯೂ ಪರದಲ್ಲಿಯೂ ತೀವ್ರವಾದ ದುಃಖಭೋಗ ಪ್ರಾಪ್ತವಾಗುವುದು (25-26). ಅನಂತರ ಮನುಷ್ಯನಿಗೆ ಮುಪ್ಪಿನಿಂದ ದೇಹವು ಜರ್ಜರವಾಗುವುದು. ಅವಯವಗಳು ಶಿಥಿಲವಾಗುವುವು. ಹಲ್ಲುಗಳು ಕೆಟ್ಟು ಬಿದ್ದುಹೋಗುತ್ತವೆ. ಚರ್ಮವು ಸುಕ್ಕುಗಟ್ಟುವುದು. ರಕ್ತನಾಳಗಳೂ ನರಗಳೂ ಎದ್ದು ಕಾಣಿಸುತ್ತವೆ (27). ದೂರದೃಷ್ಟಿ ಹೋಗಿಬಿಡುತ್ತದೆ. ಕಣ್ಣುಗುಡ್ಡೆಗಳು ಒಳಗೆ ಆಕಾಶದಲ್ಲಿ ಅಡಗುತ್ತವೆ! ಮೂಗಿನ ರಂಧ್ರಗಳಿಂದ ರೋಮಗಳು ಹೊರಗೆ ಚಾಚಿಕೊಳ್ಳುತ್ತವೆ! ದೇಹವು ಒಲೆದಾಡುತ್ತದೆ. ಮೈಯಲ್ಲಿರುವ ಸಕಲ ಮೂಳೆಗಳೂ ಕಾಣಿಸಿಕೊಳ್ಳುತ್ತವೆ. ಬೆನ್ನೆಲುಬು ಬಗ್ಗುತ್ತದೆ. ಜಠರಾಗ್ನಿಯು ನಷ್ಟವಾಗುವುದರಿಂದ ಆಹಾರವು ಅಲ್ಪವಾಗಿ, ಕೆಲಸಮಾಡುವುದು ಕಡಿಮೆಯಾಗುವುದು (28-29). ತಿರುಗಾಡುವುದು, ಏಳುವುದು, ಮಲಗುವುದು, ಕುಳಿತುಕೊಳ್ಳು

ಕೃಚ್ಛ್ರಾಚ್ಚಙ್ಕ್ರಮಣೋತ್ಥಾನಶಯನಾಸನಚೇಷ್ಟಿತಃ।
ಮಂದೀಭವಚ್ಛ್ರೋತ್ರನೇತ್ರಸ್ರವಲ್ಲಾಲಾವಿಲಾನನಃ॥ 30

ಅನಾಯತ್ತೈಸ್ಸಮಸ್ತೈಶ್ಚ ಕರಣೈರ್ಮರಣೋನ್ಮುಖಃ।
ತತ್ ಕ್ಷಣೇಽಪ್ಯನುಭೂತಾನಾಮಸ್ಮರ್ತಾಖಿಲವಸ್ತುನಾಮ್॥ 31

ಸಕೃದುಚ್ಚಾರಿತೇ ವಾಕ್ಯೇ ಸಮುದ್ಭೂತಮಹಾಶ್ರಮಃ।
ಶ್ವಾಸಕಾಶಸಮುದ್ಭೂತಮಹಾಯಾಸಪ್ರಜಾಗರಃ॥ 32

ಅನ್ಯೇನೋತ್ಥಾಪ್ಯತೇಽನ್ಯೇನ ತಥಾ ಸಂವೇಶ್ಯತೇ ಜರೀ।
ಭೃತ್ಯಾತ್ಮಪುತ್ರದಾರಾಣಾಮವಮಾನಾಸ್ಪದೀಕೃತಃ॥ 33

ಪ್ರಕ್ಷೀಣಾಖಿಲಶೌಚಶ್ಚ ವಿಹಾರಾಹಾರಸಸ್ಪೃಹಃ।
ಹಾಸ್ಯಃ ಪರಿಜನಸ್ಯಾಪಿ ನಿರ್ವಿಣ್ಣಾಶೇಷಬಾಂಧವಃ॥ 34

ಅನುಭೂತಮಿವಾನ್ಯಸ್ಮಿನ್ ಜನ್ಮನ್ಯಾತ್ಮವಿಚೇಷ್ಟಿತಮ್।
ಸಂಸ್ಮರನ್ ಯೌವನೇ ದೀರ್ಘಂ ನಿಃಶ್ವಸತ್ಯಭಿತಾಪಿತಃ॥ 35

---

ವುದೂ ಸಹ ಕಷ್ಟವಾಗುತ್ತ ಹೋಗುವುದು, ಕಿವಿ ಮತ್ತು ಕಣ್ಣುಗಳ ಪಾಟವ ಕುಂದುವುದು. ಬಾಯಲ್ಲಿ ಜೊಲ್ಲು ಸುರಿಯುತ್ತಿರುವುದು (30). ಸಕಲೇಂದ್ರಿಯಗಳ ಸ್ವಾಧೀನತೆಯೂ ತಪ್ಪುತ್ತ ಹೋಗಿ ಮುದುಕನು ಮರಣೋನ್ಮುಖನಾಗುವನು. ಆ ಕ್ಷಣದಲ್ಲಿ ಕಂಡುಕೇಳಿದ ವಸ್ತುಗಳನ್ನೂ ಆ ಕ್ಷಣದಲ್ಲಿಯೇ ಮರೆತು ಬಿಡುವನು. ಒಂದು ಮಾತನ್ನಾಡುವುದಕ್ಕೂ ಬಹಳ ಶ್ರಮಪಡುವನು. ಉಬ್ಬಸ, ಕೆಮ್ಮುಗಳ ಕಾಟದಿಂದ ಆಯಾಸಪಡುತ್ತ ನಿದ್ರೆಯಿಲ್ಲದೆ ಜಾಗರಣೆ ಮಾಡುವನು (31-32). ಈ ವೃದ್ಧನನ್ನು ಇನ್ನೊಬ್ಬನು ಎಬ್ಬಿಸಬೇಕಾಗುವುದು, ಇನ್ನೊಬ್ಬನು ಮಲಗಿಸಬೇಕಾಗುವುದು. ತನ್ನ ಸೇವಕರೂ ತನ್ನ ಹೆಂಡತಿ ಮಕ್ಕಳೂ ಸಹ ಈತನನ್ನು ಅನಾದರದಿಂದ ಕಾಣುವರು. ಎಲ್ಲ ಬಗೆಯ ಶೌಚಕ್ರಿಯೆಯೂ ನಿಂತು ಹೋಗುವುದು. ವಿಹಾರ ಮತ್ತು ಆಹಾರಗಳಲ್ಲಿ ಮಾತ್ರ ಚಾಪಲ್ಯವಿರುವುದು. ಪರಿಜನರಿಗೂ ಹಾಸ್ಯಾಸ್ಪದನಾಗುವನು. ಸಕಲ ಬಾಂಧವರೂ ಬೇಸರಗೊಳ್ಳುವರು (33-34). ತನ್ನ ಯೌವನದಲ್ಲಿ ಮಾಡಿದ ಕಾರ್ಯವನ್ನು, ಜನ್ಮಾಂತರದಲ್ಲಿ ತಾನು ಅನುಭವಿಸಿದ್ದನ್ನು ಈ ಜನ್ಮದಲ್ಲಿ ಸ್ಮರಿಸಿಕೊಳ್ಳುತ್ತಿರು

**ಏವಮಾದೀನಿ ದುಃಖಾನಿ ಜರಾಯಾಮನುಭೂಯ ವೈ।**
**ಮರಣೇ ಯಾನಿ ದುಃಖಾನಿ ಪ್ರಾಪ್ನೋತಿ ಶೃಣು ತಾನ್ಯಪಿ॥ 36**

**ಶ್ಲಥದ್ಗ್ರೀವಾಙ್ಘ್ರಿಹಸ್ತೋಽಥವ್ಯಾಪ್ತೋ ವೇಪಥುನಾ ಭೃಶಮ್।**
**ಮುಹುರ್ಗ್ಲಾನಿಪರವಶೋ ಮುಹುರ್ಜ್ಞಾನಲವಾನ್ವಿತಃ॥ 37**

**ಹಿರಣ್ಯಧಾನ್ಯತನಯಭಾರ್ಯಾಭೃತ್ಯಗೃಹಾದಿಷು।**
**ಏತೇ ಕಥಂ ಭವಿಷ್ಯಂತೀತ್ಯತೀವ ಮಮತಾಕುಲಃ॥ 38**

**ಮರ್ಮಭಿದ್ಭಿರ್ಮಹಾರೋಗೈಃ ಕ್ರಕಚೈರಿವ ದಾರುಣೈಃ।**
**ಶರೈರಿವಾಂತಕಸ್ಯೋಗ್ರೈಶ್ಛಿದ್ಯಮಾನಾಸುಬಂಧನಃ॥ 39**

**ಪರಿವರ್ತಿತತಾರಾಕ್ಷೋ ಹಸ್ತಪಾದಂ ಮುಹುಃ ಕ್ಷಿಪನ್।**
**ಸಂಶುಷ್ಯಮಾಣತಾಲ್ವೋಷ್ಠಪುಟೋ ಘುರಘುರಾಯತೇ॥ 40**

---

ವನೋ ಎಂಬಂತೆ, ಸ್ಮರಿಸಿಕೊಂಡು ಸಂತಾಪವಶನಾಗಿ ನಿಟ್ಟುಸಿರುಬಿಡುವನು. ಮುಪ್ಪಿನಲ್ಲಿ ಈ ರೀತಿಯ ದುಃಖಗಳನ್ನನುಭವಿಸಿದಮೇಲೆ ಮರಣಕಾಲದಲ್ಲಿ ಇನ್ನು ಯಾವ ದುಃಖಗಳನ್ನು ಅನುಭವಿಸಬೇಕಾಗುತ್ತದೆ ಎಂಬುದನ್ನು ಹೇಳುತ್ತೇನೆ, ಕೇಳು (35-36). ವೃದ್ಧನ ಕತ್ತು , ಕಾಲು, ಕೈಗಳು ಬಲಹೀನವಾಗಿ ಬಳುಕುತ್ತವೆ. ದೇಹವೆಲ್ಲ ನಡುಗುತ್ತದೆ. ಆಯಾಸದಿಂದ ಆಗಾಗ ಎಚ್ಚರದಪ್ಪುತ್ತಾ, ಆಗಾಗ ಎಚ್ಚರಿಕೆಯನ್ನು ಪಡೆಯುತ್ತ ಇರುತ್ತಾನೆ. ಧನ, ಧಾನ್ಯ, ಪುತ್ರ, ಭಾರ್ಯೆ, ಭೃತ್ಯ, ಗೃಹ—ಮುಂತಾದವುಗಳ ವಿಷಯದಲ್ಲಿ 'ಇವರ ಗತಿ ಮುಂದೆ ಏನಾಗುವುದೊ?' ಎಂಬ ಮಮತ್ವದ ಚಿಂತೆಯಿಂದ ವ್ಯಾಕುಲನಾಗಿರುವನು (37-38). ಗರಗಸಗಳಂತೆ ಮರ್ಮಭೇದಕಗಳೂ ದಾರುಣಗಳೂ ಆದ ಮತ್ತು ಯಮಶರಗಳಂತೆ ಉಗ್ರಗಳಾದ ಮಹಾರೋಗಗಳೂ ಈ ವೃದ್ಧನ ಪ್ರಾಣಬಂಧನವನ್ನು ಕತ್ತರಿಸುತ್ತ ಹೋಗುತ್ತವೆ. ಕಣ್ಣುಗುಡ್ಡೆಗಳು ಮೇಲೆ ಸಿಕ್ಕಿಕೊಳ್ಳುತ್ತವೆ. ಕೈ ಕಾಲುಗಳನ್ನು ಮತ್ತೆ ಮತ್ತೆ ಬಡಿಯುವನು, ತುಟಿ ದವಡೆಗಳು ಒಣಗುವುವು. ಈತನು 'ಘುರ್, ಘುರ್' ಎಂದು ಶಬ್ದಮಾಡುತ್ತಿರುವನು (39-40). ಏಕೆಂದರೆ ಶ್ಲೇಷ್ಮಾದಿದೋಷಗಳಿಂದ ಕಂಠದೇಶವು ಕಟ್ಟಿಕೊಳ್ಳು

**ನಿರುದ್ಧಕಣ್ಠೋ ದೋಷೌಘೈರುದಾನಶ್ವಾಸಪೀಡಿತಃ।**
**ತಾಪೇನ ಮಹತಾ ವ್ಯಾಪ್ತಸ್ತೃಷಾ ಚಾರ್ತಸ್ತಥಾ ಕ್ಷುಧಾ॥ 41**

**ಕ್ಲೇಶಾದುತ್ಕ್ರಾಂತಿಮಾಪ್ನೋತಿ ಯಮಕಿಂಕರಪೀಡಿತಃ।**
**ತತಶ್ಚ ಯಾತನಾದೇಹಂ ಕ್ಲೇಶೇನ ಪ್ರತಿಪದ್ಯತೇ॥ 42**

**ಏತಾನ್ಯನ್ಯಾನಿ ಚೋಗ್ರಾಣಿ ದುಃಖಾನಿ ಮರಣೇ ನೃಣಾಮ್।**
**ಶೃಣುಷ್ವ ನರಕೇ ಯಾನಿ ಪ್ರಾಪ್ಯಂತೇ ಪುರುಷೈರ್ಮೃತೈಃ॥ 43**

**ಯಾಮ್ಯಕಿಂಕರಪಾಶಾದಿಗ್ರಹಣಂ ದಂಡತಾಡನಮ್।**
**ಯಮಸ್ಯ ದರ್ಶನಂ ಚೋಗ್ರಮುಗ್ರಮಾರ್ಗವಿಲೋಕನಮ್॥ 44**

---

ವುದು. ಉದಾನವಾಯುವಿನಿಂದ ಮೇಲುಸಿರಿನ ಬಾಧೆಗೆ ಒಳಗಾಗುವನು. ದೇಹದಲ್ಲಿ ಮಹಾತಾಪ ಉಂಟಾಗುವುದು. ಹಸಿವು ಬಾಯಾರಿಕೆಗಳು ಪೀಡಿಸುವುವು (41). ಅನಂತರ ಯಮದೂತರ ಪೀಡೆಗೆ ಸಿಕ್ಕಿ ಕಷ್ಟದಿಂದ ದೇಹವನ್ನು ಬಿಡುವನು. ಆಮೇಲೆ (ಕರ್ಮಫಲವನ್ನು ಭೋಗಿಸುವುದಕ್ಕಾಗಿ) ಕ್ಲೇಶದಿಂದ ಯಾತನಾಶರೀರವನ್ನು ಪಡೆಯುವನು. ಮರಣಕಾಲದಲ್ಲಿ ಜನರಿಗೆ ಇವುಗಳಲ್ಲದೆ ಇನ್ನೂ ಹಲವು ಬಗೆಯ ಉಗ್ರವಾದ ದುಃಖಸಂದರ್ಭಗಳು ಬರುತ್ತವೆ. ಮೈತ್ರೇಯ, ಮನುಷ್ಯರು ಸತ್ತಮೇಲೆ ಅವರಿಗೆ ನರಕದಲ್ಲಿ ಯಾವ ತರದ ದುಃಖಗಳು ಒದಗುತ್ತವೆಯೆಂಬುದನ್ನು ಆಲಿಸು (42-43). ಮೊದಲು ಯಮದೂತರ ಪಾಶಕ್ಕೆ ಸಿಕ್ಕಿಕೊಳ್ಳುವುದು; ತರುವಾಯ ದಂಡಪ್ರಹಾರ, ಆಮೇಲೆ ಉಗ್ರವಾದ ಯಮಲೋಕಮಾರ್ಗದ ದರ್ಶನ, ಅನಂತರ ಯಮ ರಾಜನ ಭೀಕರ ಸಂದರ್ಶನ. ಬಿಸಿ ಮರಳು* ಅಗ್ನಿಯಂತ್ರ ಶಸ್ತ್ರಾದಿಗಳಿಂದ

---

* ಮೂಲ ಶ್ಲೋಕದಲ್ಲಿ 'ಕರಂಭವಾಲುಕಾ' ಎಂಬ ಶಬ್ದವಿದೆ ಇದಕ್ಕೆ 'ತಪ್ತವಾಲುಕಾ' ಎಂದು ವ್ಯಾಖ್ಯಾನಕಾರರು ಅರ್ಥ ಮಾಡಿದ್ದಾರೆ. ಮನುಸ್ಮೃತಿಯಲ್ಲಿಯೂ 'ಕರಂಭ ವಾಲುಕಾತಾಪಾನ್ ಕುಂಭೀಪಾಕಾಂಶ್ಚ ದಾರುಣಾನ್' (12-76) ಎಂದು ವರ್ಣಿಸಲಾಗಿದೆ. ಕರಂಭ = ಮೊಸರಿನಿಂದ ಕಲಸಿದ ಹಿಟ್ಟು. 'ಕರಂಭಾ ದಧಿಸಕ್ತವಃ'—ಅಮರಕೋಶ. ಕರಂಭ ಶಬ್ದಕ್ಕೆ 'ತಪ್ತ' ಎಂಬ ಅರ್ಥ ಹೇಗೆ ಬರುತ್ತದೆಯೆನ್ನುವುದು ಸ್ಪಷ್ಟವಾಗುವುದಿಲ್ಲ.

**ಕರಂಭವಾಲುಕಾವಹ್ನಿಯಂತ್ರಶಸ್ತ್ರಾದಿಭೀಷಣೇ।**
**ಪ್ರತ್ಯೇಕಂ ನರಕೇ ಯಾಶ್ಚ ಯಾತನಾ ದ್ವಿಜ ದುಸ್ಸಹಾಃ॥** 45

**ಕ್ರಕಚೈಃ ಪಾಟ್ಯಮಾನಾನಾಂ ಮೂಷಾಯಾಂ ಚಾಪಿ ದಹ್ಯತಾಮ್।**
**ಕುಠಾರೈಃ ಕೃತ್ಯಮಾನಾನಾಂ ಭೂಮೌ ಚಾಪಿ ನಿಖನ್ಯತಾಮ್॥** 46

**ಶೂಲೇಷ್ವಾರೋಪ್ಯಮಾಣಾನಾಂ ವ್ಯಾಘ್ರವಕ್ತ್ರೇ ಪ್ರವೇಶ್ಯತಾಮ್।**
**ಗೃಧ್ರೈಸ್ಸಂಭಕ್ಷ್ಯಮಾಣಾನಾಂ ದ್ವೀಪಿಭಿಶ್ಚೋಪಭುಜ್ಯತಾಮ್॥** 47

**ಕ್ವಾಥ್ಯತಾಂ ತೈಲಮಧ್ಯೇ ಚ ಕ್ಲಿದ್ಯತಾಂ ಕ್ಷಾರಕರ್ದಮೇ।**
**ಉಚ್ಚಾನ್ನಿಪಾತ್ಯಮಾನಾನಾಂ ಕ್ಷಿಪ್ಯತಾಂ ಕ್ಷೇಪಯಂತ್ರಕೈಃ॥** 48

**ನರಕೇ ಯಾನಿ ದುಃಖಾನಿ ಪಾಪಹೇತೂದ್ಭವಾನಿ ವೈ।**
**ಪ್ರಾಪ್ಯಂತೇ ನಾರಕೈರ್ವಿಪ್ರ ತೇಷಾಂ ಸಂಖ್ಯಾ ನ ವಿದ್ಯತೇ॥** 49

**ನ ಕೇವಲಂ ದ್ವಿಜಶ್ರೇಷ್ಠ ನರಕೇ ದುಃಖಪದ್ಧತಿಃ।**
**ಸ್ವರ್ಗೇಽಪಿ ಪಾತಭೀತಸ್ಯ ಕ್ಷಯಿಷ್ಣೋರ್ನಾಸ್ತಿ ನಿರ್ವೃತಿಃ॥** 50

---

ಮಹಾಭಯಂಕರವಾದ ಒಂದೊಂದು ನರಕದಲ್ಲಿಯೂ ಪ್ರಾಪ್ತವಾಗುವ ಯಾತನೆಗಳು ದುಃಸಹವಾದವು (44-45). ಗರಗಸಗಳಿಂದ ಕೊಯ್ಯುವುದು, ಮೂಸೆಯಲ್ಲಿ ಸುಡುವುದು, ಕೊಡಲಿಗಳಿಂದ ಸೀಳುವುದು, ನೆಲದಲ್ಲಿ ಹುಗಿಯುವುದು, ಶೂಲಗಳಿಗೆ ಏರಿಸುವುದು, ಹುಲಿಯ ಬಾಯಿಗೆ ನುಗ್ಗಿಸುವುದು, ಹದ್ದುಗಳಿಂದಲೂ ಚಿರತೆಗಳಿಂದಲೂ ತಿನ್ನಿಸುವುದು (46-47). ಬಿಸಿಎಣ್ಣೆಯಲ್ಲಿ ಕುದಿಸುವುದು, ಕ್ಷಾರದ ಕೊಚ್ಚೆಯಲ್ಲಿ ನೆನೆಸುವುದು, ಎತ್ತರದಿಂದ ಉರುಳಿಸುವುದು, ಕವಣೆಗಳಲ್ಲಿಟ್ಟು ಎಸೆಯುವುದು—ಈ ಬಗೆಯ ದುಃಖಗಳು ನರಕದಲ್ಲಿರುತ್ತವೆ. ಪಾಪಕರ್ಮದ ನಿಮಿತ್ತದಿಂದ ನರಕವಾಸಿಗಳು ಇವನ್ನು ಅನುಭವಿಸುತ್ತಾರೆ. ಈ ದುಃಖವಿಧಾನಗಳನ್ನು ಎಣಿಸುವುದಕ್ಕೆ ಶಕ್ಯವಿಲ್ಲ (48-49). ಮೈತ್ರೇಯ, ದುಃಖವಿರುವುದು ನರಕದಲ್ಲಿ ಮಾತ್ರವಲ್ಲ, ಸ್ವರ್ಗದಲ್ಲಿಯೂ ದುಃಖ ಉಂಟು! ಪುಣ್ಯವು ಕ್ಷಯಿಸುತ್ತ ಹೋದಂತೆ ಯಾವಾಗ ಸ್ವರ್ಗದಿಂದ ಪತನವಾಗುವುದೋ ಎಂದು ತಲ್ಲಣಗೊಳ್ಳುತ್ತಿರುವ ಸ್ವರ್ಗವಾಸಿಗೂ ಸುಖವಿಲ್ಲ! (50). (ಹೀಗೆ ಸ್ವರ್ಗನರಕಗಳು ಕಳೆದಮೇಲೆ ಕರ್ಮಾನು

**ಪುನಶ್ಚ ಗರ್ಭೇ ಭವತಿ ಜಾಯತೇ ಚ ಪುನಃ ಪುನಃ ।**
**ಗರ್ಭೇ ವಿಲೀಯತೇ ಭೂಯೋ ಜಾಯಮಾನೋऽಸ್ತಮೇತಿ ವೈ ॥ 51**

**ಜಾತಮಾತ್ರಶ್ಚ ಮ್ರಿಯತೇ ಬಾಲಭಾವೇऽಥ ಯೌವನೇ ।**
**ಮಧ್ಯಮಂ ವಾ ವಯಃ ಪ್ರಾಪ್ಯ ವಾರ್ಧಕೇ ವಾऽಥ ವಾ ಮೃತಿಃ ॥ 52**

**ಯಾವಜ್ಜೀವತಿ ತಾವಚ್ಚ ದುಃಖೈರ್ನಾನಾವಿಧೈಃ ಪ್ಲುತಃ ।**
**ತಂತುಕಾರಣಪಕ್ಷ್ಮೌಘೈರಾಸ್ತೇ ಕಾರ್ಪಾಸಬೀಜವತ್ ॥ 53**

**ದ್ರವ್ಯನಾಶೇ ತಥೋತ್ಪತ್ತೌ ಪಾಲನೇ ಚ ಸದಾ ನೃಣಾಮ್ ।**
**ಭವಂತ್ಯನೇಕದುಃಖಾನಿ ತಥೈವೇಷ್ಟವಿಪತ್ತಿಷು ॥ 54**

**ಯದ್ಯತ್ ಪ್ರೀತಿಕರಂ ಪುಂಸಾಂ ವಸ್ತು ಮೈತ್ರೇಯ ಜಾಯತೇ ।**
**ತದೇವ ದುಃಖವೃಕ್ಷಸ್ಯ ಬೀಜತ್ವಮುಪಗಚ್ಛತಿ ॥ 55**

---

ಸಾರವಾಗಿ) ಮತ್ತೆ ಸ್ತ್ರೀಯ ಗರ್ಭದಲ್ಲಿ ಬಂದು ಸಿಕ್ಕಿಕೊಳ್ಳುವನು. ಮತ್ತೆ ಮತ್ತೆ ಹುಟ್ಟುತ್ತಿರುವನು. ಕೆಲವು ವೇಳೆ ಗರ್ಭದಲ್ಲಿಯೇ ಸಾಯುವನು. ಕೆಲವು ವೇಳೆ ಹುಟ್ಟುವ ಸಮಯದಲ್ಲಿ ಸಾಯುವನು (51). ಹುಟ್ಟಿದ ಕೂಡಲೆ ಸಾಯುವುದೂ ಉಂಟು. ಅಥವಾ ಬಾಲ್ಯದಲ್ಲಿಯೋ ಯೌವನದಲ್ಲಿಯೋ ಮಧ್ಯವಯಸ್ಸಿನಲ್ಲಿಯೋ ಸಾಯುತ್ತಾನೆ. ಇಲ್ಲದಿದ್ದರೆ ಮುಪ್ಪಿನಲ್ಲಿ ಮರಣ ಇದ್ದೇ ಇದೆ. ಬದುಕಿರುವವರೆಗೂ ನಾನಾವಿಧದ ದುಃಖಗಳು ಮನುಷ್ಯ ಪ್ರಾಣಿಯನ್ನು ಆವರಿಸಿಕೊಂಡೇ ಇರುತ್ತವೆ, ನೂಲಿಗೆ ಕಾರಣವಾದ ಸೂಕ್ಷ್ಮ ಎಳೆಗಳು ಹತ್ತಿಯ ಬೀಜವನ್ನು ಸುತ್ತಿಕೊಂಡಿರುವಂತೆ! (52-53). ದ್ರವ್ಯವು ನಾಶವಾದಾಗಲೂ ಅದನ್ನು ಸಂಪಾದಿಸುವಾಗಲೂ ದ್ರವ್ಯವನ್ನು ರಕ್ಷಿಸುವಾಗಲೂ ಮಾನವರಿಗೆ ಅನೇಕ ರೀತಿಯ ಕಷ್ಟಗಳು ಬರುತ್ತವೆ. ಇಷ್ಟಜನರ ವಿಯೋಗವಾದಾಗಲೂ ದುಃಖ ಸಂಭವಿಸುತ್ತದೆ (54). ಮೈತ್ರೇಯ, ಮನುಷ್ಯರಿಗೆ ಪ್ರಿಯವಾದ ಯಾವ ಯಾವ ವಸ್ತುವಿದೆಯೋ ಅದೇ ದುಃಖವೆಂಬ ವೃಕ್ಷಕ್ಕೆ ಬೀಜವಾಗುವುದು! ಮಡದಿ, ಮಕ್ಕಳು, ಮಿತ್ರರು, ಸಂಪತ್ತು, ಮನೆ, ಹೊಲ, ಹಣ—

**ಕಲತ್ರಪುತ್ರಮಿತ್ರಾರ್ಥಗೃಹಕ್ಷೇತ್ರಧನಾದಿಕೈಃ।**
**ಕ್ರಿಯತೇ ನ ತಥಾ ಭೂರಿ ಸುಖಂ ಪುಂಸಾಂ ಯಥಾಽಸುಖಮ್॥ 56**

**ಇತಿ ಸಂಸಾರದುಃಖಾರ್ಕತಾಪತಾಪಿತಚೇತಸಾಮ್।**
**ವಿಮುಕ್ತಿಪಾದಪಚ್ಛಾಯಾಮೃತೇ ಕುತ್ರ ಸುಖಂ ನೃಣಾಮ್॥ 57**

**ತದಸ್ಯ ತ್ರಿವಿಧಸ್ಯಾಪಿ ದುಃಖಜಾತಸ್ಯ ವೈ ಮಮ।**
**ಗರ್ಭಜನ್ಮಜರಾದ್ಯೇಷು ಸ್ಥಾನೇಷು ಪ್ರಭವಿಷ್ಯತಃ॥ 58**

**ನಿರಸ್ತಾತಿಶಯಾಹ್ಲಾದಸುಖಭಾವೈಕಲಕ್ಷಣಾ।**
**ಭೇಷಜಂ ಭಗವತ್ಪ್ರಾಪ್ತಿರೇಕಾಂತಾತ್ಯಂತಿಕೀ ಮತಾ॥ 59**

**ತಸ್ಮಾತ್ತತ್ಪ್ರಾಪ್ತಯೇ ಯತ್ನಃ ಕರ್ತವ್ಯಃ ಪಂಡಿತೈರ್ನರೈಃ।**
**ತತ್ಪ್ರಾಪ್ತಿಹೇತುರ್ಜ್ಞಾನಂ ಚ ಕರ್ಮ ಚೋಕ್ತೇ ಮಹಾಮುನೇ॥ 60**

---

ಮುಂತಾದವುಗಳಿಂದ ಜನರಿಗೆ ಎಷ್ಟು ದುಃಖವು ಘಟಿಸುವುದೋ ಅಷ್ಟು ಸುಖವು ಇವುಗಳಿಂದ ಲಭಿಸುವುದಿಲ್ಲ! (55-56). ಈ ಪ್ರಕಾರವಾದ ಸಂಸಾರ ದುಃಖವೆಂಬ ಸೂರ್ಯತಾಪದಿಂದ ಯಾರ ಚಿತ್ತವು ಸಂತಪ್ತವಾಗಿದೆಯೋ ಅಂತಹ ಮಾನವರಿಗೆ, ಮುಕ್ತಿಯೆಂಬ ವೃಕ್ಷದ ನೆರಳನ್ನು ಬಿಟ್ಟು ಬೇರೆ ಎಲ್ಲಿ ಸುಖವು ದೊರಕೀತು? (57). ಆದ್ದರಿಂದ ಗರ್ಭ, ಜನ್ಮ, ಜರಾ—ಮುಂತಾದ ಸ್ಥಾನಗಳಲ್ಲಿ ಸಂಭವಿಸತಕ್ಕ ಆಧ್ಯಾತ್ಮಿಕವೇ ಮೊದಲಾದ ಮೂರು ಬಗೆಯ ದುಃಖರಾಶಿಗೆ ನನ್ನ ಅಭಿಪ್ರಾಯದಲ್ಲಿ ಒಂದೇ ಔಷಧವಿದೆ. ಏನೆಂದರೆ, ಆನಂದೈಕಸ್ವರೂಪವೂ ನಿಶ್ಚಿತವೂ ಶಾಶ್ವತವೂ ಆದ ಭಗವತ್ ಪ್ರಾಪ್ತಿಯೇ ಇದಕ್ಕೆ ಔಷಧ. ಇದಕ್ಕಿಂತ ಅತಿಶಯವಾದ ಆನಂದವಿಲ್ಲ (58-59). ಆದ್ದರಿಂದ ಭಗವತ್ ಪ್ರಾಪ್ತಿಗಾಗಿ ಪಂಡಿತರಾದವರು ಪ್ರಯತ್ನ ಮಾಡಬೇಕು. ಮೈತ್ರೇಯ, ಅದನ್ನು ಪಡೆಯುವುದಕ್ಕೆ ಜ್ಞಾನ, ಕರ್ಮ—ಇವೆರಡು* ಸಾಧನವೆಂದು ಉಕ್ತವಾಗಿದೆ. ಅವುಗಳಲ್ಲಿ ಜ್ಞಾನವು ಶಾಸ್ತ್ರಜನ್ಯ, ವಿವೇಕಜನ್ಯ—ಎಂದು ಎರಡು

* ಜ್ಞಾನವು ಮೋಕ್ಷಕ್ಕೆ ಸಾಕ್ಷಾತ್ ಸಾಧನ. ಕರ್ಮವು ಜ್ಞಾನಾಂಗವಾಗಿ ಸಾಧನ. ಕರ್ಮವು ಚಿತ್ತಶುದ್ಧಿದ್ವಾರಾ ಜ್ಞಾನಕ್ಕೆ ಕಾರಣ.

**ಆಗಮೋತ್ಥಂ ವಿವೇಕಾಚ್ಚ ದ್ವಿಧಾ ಜ್ಞಾನಂ ತದುಚ್ಯತೇ।**
**ಶಬ್ದಬ್ರಹ್ಮಾಗಮಮಯಂ ಪರಂ ಬ್ರಹ್ಮ ವಿವೇಕಜಮ್॥** 61

**ಅಂಧಂ ತಮ ಇವಾಜ್ಞಾನಂ ದೀಪವಚ್ಚೇಂದ್ರಿಯೋದ್ಭವಮ್।**
**ಯಥಾ ಸೂರ್ಯಸ್ತಥಾ ಜ್ಞಾನಂ ಯದ್ವಿಪ್ರರ್ಷೇ ವಿವೇಕಜಮ್॥** 62

**ಮನುರಪ್ಯಾಹ ವೇದಾರ್ಥಂ ಸ್ಮೃತ್ವಾ ಯನ್ಮುನಿಸತ್ತಮ।**
**ತದೇತತ್‌ಶ್ರೂಯತಾಮತ್ರ ಸಂಬಂಧೇ ಗದತೋ ಮಮ॥** 63

**ದ್ವೇ ಬ್ರಹ್ಮಣೀ ವೇದಿತವ್ಯೇ ಶಬ್ದಬ್ರಹ್ಮ ಪರಂ ಚ ಯತ್।**
**ಶಬ್ದಬ್ರಹ್ಮಣಿ ನಿಷ್ಣಾತಃ ಪರಂ ಬ್ರಹ್ಮಾಧಿಗಚ್ಛತಿ॥** 64

---

ವಿಧ. (ಸತ್ಯಂ ಜ್ಞಾನಮನಂತಂ ಬ್ರಹ್ಮ ಇತ್ಯಾದಿ) ಶಬ್ದಶ್ರವಣದಿಂದಾಗುವ ಬ್ರಹ್ಮ ಜ್ಞಾನವು ಶಾಸ್ತ್ರಜನ್ಯವೆನಿಸುತ್ತದೆ. ಆತ್ಮಾನಾತ್ಮ ವಿವೇಕದಿಂದ (ನಿದಿಧ್ಯಾಸನದಲ್ಲಿ ಅಭಿವ್ಯಕ್ತವಾಗುವ ಪರಬ್ರಹ್ಮಜ್ಞಾನವು* ವಿವೇಕಜನ್ಯವೆನಿಸುತ್ತದೆ (60-61). ಅಜ್ಞಾನವು ದಟ್ಟವಾದ ಕತ್ತಲೆ ಇದ್ದಂತೆ. ಇಂದ್ರಿಯದ್ವಾರಾ—ಶ್ರವಣಾದಿಗಳಿಂದ—ಆಗುವ ಶಾಸ್ತ್ರಜನ್ಯಜ್ಞಾನವು ಆ ಕತ್ತಲೆಯನ್ನು ನಿವಾರಿಸುವ ದೀಪವಿದ್ದಂತೆ. ವಿವೇಕಜನ್ಯಜ್ಞಾನವಾದರೋ ಸೂರ್ಯನಿದ್ದ** ಹಾಗೆ. ಈ ಸಂಬಂಧದಲ್ಲಿ ಮನುವೂ ಸಹ ವೇದಾರ್ಥವನ್ನು ಸ್ಮರಿಸಿಕೊಂಡು ಏನು ಹೇಳಿದ್ದಾನೆಂಬುದನ್ನು ಹೇಳುತ್ತೇನೆ ಕೇಳು (62-63). "ತಿಳಿಯಬೇಕಾದ ಬ್ರಹ್ಮ ಎರಡು ವಿಧ—ಶಬ್ದ ಬ್ರಹ್ಮ ಮತ್ತು ಪರಬ್ರಹ್ಮ. ಶಬ್ದಬ್ರಹ್ಮದಲ್ಲಿ (ಶಾಸ್ತ್ರಜನ್ಯಜ್ಞಾನದಲ್ಲಿ) ನಿಷ್ಣಾತನಾಗಿ (ವಿವೇಕಜನ್ಯಜ್ಞಾನದಿಂದ) ಪರಬ್ರಹ್ಮವನ್ನು ಪಡೆಯುವನು"§ (64). ಅಥರ್ವಣ

---

* 'ಪ್ರಜ್ಞಾನಂ ಬ್ರಹ್ಮ, ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ಶ್ರುತಿವಾಕ್ಯಗಳ ಪ್ರಕಾರ ಬ್ರಹ್ಮವೇ ಜ್ಞಾನಸ್ವರೂಪವಾದ್ದರಿಂದ ಶ್ಲೋಕದಲ್ಲಿ ಬ್ರಹ್ಮವನ್ನು ಜ್ಞಾನವೆಂದು ಹೇಳಿದೆ.

** ದೀಪದಿಂದ ಕತ್ತಲೆಯ ನಿವೃತ್ತಿ ಸ್ವಲ್ಪ ; ಸೂರ್ಯನಿಂದ ಕತ್ತಲೆಯ ಸಂಪೂರ್ಣ ನಿವೃತ್ತಿ.

§ ಈ ಅರ್ಥದ ಮೂಲ ಶ್ಲೋಕವು ಮನುಸ್ಮೃತಿಯಲ್ಲಿ ಕಂಡುಬರುವುದಿಲ್ಲ ; ತ್ರಿಪುರಾತಾಪಿನ್ಯುಪನಿಷತ್ತಿನಲ್ಲಿ ಕಂಡುಬರುತ್ತದೆ. ಅಲ್ಲಿ 'ದ್ವೇ ಬ್ರಹ್ಮಣೀ ಹಿ ಮಂತವ್ಯೇ....' ಎಂದು ಸ್ವಲ್ಪ ಪಾಠಭೇದವಿದೆ (5-17).

ದ್ವೇ ವೈ ವಿದ್ಯೇ ವೇದಿತವ್ಯೇ ಇತಿ ಚಾಥರ್ವಣೀ ಶ್ರುತಿಃ।
ಪರಯಾ ತ್ವಕ್ಷರಪ್ರಾಪ್ತಿರ್ಋಗ್ವೇದಾದಿಮಯಾಽಪರಾ॥ 65

ಯತ್ತದವ್ಯಕ್ತಮಜರಮಚಿಂತ್ಯಮಜಮವ್ಯಯಮ್।
ಅನಿರ್ದೇಶ್ಯಮರೂಪಂ ಚ ಪಾಣಿಪಾದಾದ್ಯಸಂಯುತಮ್॥ 66

ವಿಭುಂ ಸರ್ವಗತಂ ನಿತ್ಯಂ ಭೂತಯೋನಿರಕಾರಣಮ್।
ವ್ಯಾಪ್ಯವ್ಯಾಪ್ತಂ ಯತಃ ಸರ್ವಂ ಯದ್ವೈ ಪಶ್ಯಂತಿ ಸೂರಯಃ॥ 67

ತದ್ಬ್ರಹ್ಮ ತತ್ಪರಂ ಧಾಮ ತದ್ಧ್ಯೇಯಂ ಮೋಕ್ಷಕಾಂಕ್ಷಿಭಿಃ।
ಶ್ರುತಿವಾಕ್ಯೋದಿತಂ ಸೂಕ್ಷ್ಮಂ ತದ್ವಿಷ್ಣೋಃ ಪರಮಂ ಪದಮ್॥ 68

ತದೇವ ಭಗವದ್ವಾಚ್ಯಂ ಸ್ವರೂಪಂ ಪರಮಾತ್ಮನಃ।
ವಾಚಕೋ ಭಗವಚ್ಛಬ್ದಸ್ತಸ್ಯಾದ್ಯಸ್ಯಾಕ್ಷಯಾತ್ಮನಃ॥ 69

---

ಶ್ರುತಿಯಾದ ಮುಂಡಕೋಪನಿಷತ್ತು "ಕಲಿಯಬೇಕಾದವು (ಪರಾ ಮತ್ತು ಅಪರಾ ಎಂಬ) ಎರಡು ವಿದ್ಯೆಗಳು. ಪರಾವಿದ್ಯೆಯಿಂದ ಅಕ್ಷರವಾದ ಬ್ರಹ್ಮದ ಪ್ರಾಪ್ತಿಯಾಗುವುದು. ಋಗ್ವೇದಾದಿಗಳು ಅಪರಾವಿದ್ಯೆ" ಎನ್ನುತ್ತದೆ (65). ಅವ್ಯಕ್ತವೂ ಅಜರವೂ ಅಚಿಂತ್ಯವೂ ಅಜವೂ ಅವ್ಯಯವೂ ಅನಿರ್ದೇಶ್ಯವೂ ರೂಪರಹಿತವೂ ಪಾಣಿಪಾದಾದಿ ಶೂನ್ಯವೂ ಭೂತಗಳ ಆದಿಕಾರಣವೂ ಸ್ವತಃ ಕಾರಣರಹಿತವೂ ಸರ್ವಕಾರ್ಯವ್ಯಾಪಿಯೂ ಸ್ವಯಂವ್ಯಾಪ್ತವೂ ಸಕಲ ಪದಾರ್ಥಗಳ ಉತ್ಪತ್ತಿಗೆ ಕಾರಣವೂ ಆದ ಯಾವ ವಸ್ತುವನ್ನು ಜ್ಞಾನಿಗಳು ಸಾಕ್ಷಾತ್ಕರಿಸಿಕೊಳ್ಳುವರೋ (66-67), ಅದು ಪರಬ್ರಹ್ಮ. ಅದೇ ಪರಮಧಾಮ. ಮೋಕ್ಷಾರ್ಥಿಗಳಿಗೆ ಧ್ಯೇಯವಾದದ್ದು ಅದು. ಶ್ರುತಿವಾಕ್ಯಗಳು ಪ್ರತಿಪಾದಿಸುವ ಆ ವಸ್ತುವೇ ವಿಷ್ಣುವಿನ ಪರಮಪದ (68). (ಸ್ವೇಚ್ಛೆಯಿಂದ ಷಾಡ್ಗುಣ್ಯ ಯುಕ್ತವಾಗಿ ದೃಶ್ಯವಾಗುವ) ಆ ಪರಮಾತ್ಮ ಸ್ವರೂಪವೇ ಭಗವಚ್ಛಬ್ದಕ್ಕೆ ವಾಚ್ಯ ವಾಗುತ್ತದೆ. ಆದ್ಯನೂ ಅಕ್ಷರನೂ ಆದ ಆ ಪರಮೇಶ್ವರನಿಗೆ ಭಗವಚ್ಛಬ್ದವು ವಾಚಕ (69). ಈ ರೀತಿಯಲ್ಲಿ ಉಕ್ತನಾದ ಪರಮೇಶ್ವರನ ಯಥಾರ್ಥ

**ಏವಂ ನಿಗದಿತಾರ್ಥಸ್ಯ ತತ್ತತ್ತ್ವಂ ತಸ್ಯ ತತ್ತ್ವತಃ।**
**ಜ್ಞಾಯತೇ ಯೇನ ತಜ್ಜ್ಞಾನಂ ಪರಮನ್ಯತ್ತ್ರಯೀಮಯಮ್॥ 70**

**ಅಶಬ್ದಗೋಚರಸ್ಯಾಪಿ ತಸ್ಯ ವೈ ಬ್ರಹ್ಮಣೋ ದ್ವಿಜ।**
**ಪೂಜಾಯಾಂ ಭಗವಚ್ಛಬ್ದಃ ಕ್ರಿಯತೇ ಹ್ಯುಪಚಾರತಃ॥ 71**

**ಶುದ್ಧೇ ಮಹಾವಿಭೂತ್ಯಾಖ್ಯೇ ಪರೇ ಬ್ರಹ್ಮಣಿ ಶಬ್ದ್ಯತೇ।**
**ಮೈತ್ರೇಯ ಭಗವಚ್ಛಬ್ದಸ್ಸರ್ವಕಾರಣಕಾರಣೇ॥ 72**

**ಸಂಭರ್ತೇತಿ ತಥಾ ಭರ್ತಾ ಭಕಾರೋಽರ್ಥದ್ವಯಾನ್ವಿತಃ।**
**ನೇತಾ ಗಮಯಿತಾ ಸ್ರಷ್ಟಾ ಗಕಾರಾರ್ಥಸ್ತಥಾ ಮುನೇ॥ 73**

**ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ ಯಶಸಶ್ಶ್ರಿಯಃ।**
**ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ॥ 74**

**ವಸಂತಿ ತತ್ರ ಭೂತಾನಿ ಭೂತಾತ್ಮನ್ಯಖಿಲಾತ್ಮನಿ।**
**ಸ ಚ ಭೂತೇಷ್ವಶೇಷೇಷು ವಕಾರಾರ್ಥಸ್ತತೋಽವ್ಯಯಃ॥ 75**

---

ಸ್ವರೂಪವು ಯಾವುದರಿಂದ ಅನುಭವಕ್ಕೆ ಬರುವುದೋ ಅದು ಪರಾವಿದ್ಯೆಯೆಂಬ ಜ್ಞಾನ. ವೇದತ್ರಯೀ (ಕರ್ಮಕಾಂಡ) ಮಯವಾದ ಇನ್ನೊಂದು ಜ್ಞಾನ ಅಪರಾವಿದ್ಯೆ (70). ಮೈತ್ರೇಯ, ಪರಬ್ರಹ್ಮವು ಶಬ್ದಗೋಚರವಲ್ಲದಿದ್ದರೂ ಸಹ ಉಪಾಸನಾರ್ಥವಾಗಿ (ಷಾಡ್ಗುಣ್ಯಯುಕ್ತನಾದ ಪರಮೇಶ್ವರನೊಡನೆ ಅಭೇದ ವಿವಕ್ಷೆಯಿಂದ) ಪರಬ್ರಹ್ಮದಲ್ಲಿ ಔಪಚಾರಿಕವಾಗಿ ಭಗವಚ್ಛಬ್ದವನ್ನು ಪ್ರಯೋಗಿಸಲಾಗುತ್ತದೆ (71). ಅಸಂಗವಾದ ಪರಬ್ರಹ್ಮವು ಅಚಿಂತ್ಯ ಮಹೈಶ್ವರ್ಯಯುಕ್ತವಾದಾಗ (ಭೇದವಿವಕ್ಷೆಯಿಂದ) ಪರಮೇಶ್ವರನೆಂಬ ಅರ್ಥದಲ್ಲಿ ಭಗವಚ್ಛಬ್ದವು ಮುಖ್ಯಾರ್ಥದಲ್ಲಿಯೇ ಪ್ರಯುಕ್ತವಾಗುತ್ತದೆ (72). ಭಗವಚ್ಛಬ್ದದ ಭಕಾರಕ್ಕೆ ಸಂಭರ್ತಾ (ಪೋಷಕ), ಭರ್ತಾ (ನಿತ್ಯಾಧಾರ)—ಎಂದು ಎರಡು ಅರ್ಥ. ಗಕಾರಕ್ಕೆ ಕರ್ಮಫಲಪ್ರಾಪಕ, ಲಯಕರ್ತ, ಸೃಷ್ಟಿಕರ್ತ—ಎಂದು (ಮೂರು) ಅರ್ಥ. ಸಮಗ್ರವಾದ ಐಶ್ವರ್ಯ, ಧರ್ಮ, ಯಶಸ್ಸು, ಶ್ರೀ, ಜ್ಞಾನ ಮತ್ತು ವೈರಾಗ್ಯ—ಈ ಆರು ಗುಣಗಳಿಗೆ ಭಗವೆಂದು ಹೆಸರು (73-74). ಸರ್ವಾತ್ಮನೂ ಸಮಸ್ತಭೂತಗಳಿಗೆ ಆತ್ಮನೂ ಆದ ಪರಮೇಶ್ವರನಲ್ಲಿ ಸಕಲಭೂತಗಳೂ ವಾಸ

**ಏವಮೇಷ ಮಹಾನ್ ಶಬ್ದೋ ಮೈತ್ರೇಯ ಭಗವಾನಿತಿ।**
**ಪರಮಬ್ರಹ್ಮಭೂತಸ್ಯ ವಾಸುದೇವಸ್ಯ ನಾನ್ಯಗಃ॥** 76

**ತತ್ರ ಪೂಜ್ಯಪದಾರ್ಥೋಕ್ತಪರಿಭಾಷಾಸಮನ್ವಿತಃ।**
**ಶಬ್ದೋಽಯಂ ನೋಪಚಾರೇಣ ತ್ವನ್ಯತ್ರ ಹ್ಯುಪಚಾರತಃ॥** 77

**ಉತ್ಪತ್ತಿಂ ಪ್ರಲಯಂ ಚೈವ ಭೂತಾನಾಮಾಗತಿಂ ಗತಿಮ್।**
**ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ॥** 78

**ಜ್ಞಾನಶಕ್ತಿಬಲೈಶ್ವರ್ಯವೀರ್ಯತೇಜಾಂಸ್ಯಶೇಷತಃ।**
**ಭಗವಚ್ಛಬ್ದವಾಚ್ಯಾನಿ ವಿನಾ ಹೇಯೈರ್ಗುಣಾದಿಭಿಃ॥** 79

---

ಮಾಡುತ್ತವೆ, ಆತನು ಅಶೇಷಭೂತಗಳಲ್ಲಿ ವಾಸಮಾಡುತ್ತಾನೆ—ಆದ್ದರಿಂದ ವಕಾರದ ಅರ್ಥ, ಅವ್ಯಯನಾದ ಪರಮೇಶ್ವರ* (75). ಆದ್ದರಿಂದ, ಮೈತ್ರೇಯ, ಮಹಾರ್ಥವನ್ನೊಳಗೊಂಡಿರುವ ಈ 'ಭಗವಾನ್' ಎಂಬ ಶಬ್ದವು ಪರಬ್ರಹ್ಮ ಸ್ವರೂಪವಾದ ಶ್ರೀವಾಸುದೇವನಿಗೆ ಅನ್ವಯಿಸುತ್ತದೆಯೇ ಹೊರತು ಇನ್ನೊಬ್ಬನಿಗಲ್ಲ (76). ಹೀಗೆ ಪರಮಪೂಜ್ಯ ಪದಾರ್ಥಗಳ ಸಂಬಂಧದಿಂದ ಸಂಕೇತಿತವಾದ ಈ ಶಬ್ದವು ಪರಮಾತ್ಮನ ವಿಷಯವಾಗಿ ಮುಖ್ಯಾರ್ಥದಲ್ಲಿ ಪ್ರಯುಕ್ತವಾಗುತ್ತದೆ, ಉಪಚಾರದಿಂದಲ್ಲ. ಇತರ ದೇವತೆಗಳು, ಋಷಿಗಳು—ಮೊದಲಾದವರ ವಿಷಯದಲ್ಲಿ ಈ ಶಬ್ದದ ಪ್ರಯೋಗ ಔಪಚಾರಿಕ (77). ಏಕೆಂದರೆ, ಸಕಲ ಭೂತಗಳ ಉತ್ಪತ್ತಿ , ನಾಶ, ಆಗಮನ, ಗಮನ, ವಿದ್ಯೆ, ಅವಿದ್ಯೆ—ಇವುಗಳನ್ನು ಯಾವನು ಬಲ್ಲನೋ ಅವನನ್ನು 'ಭಗವಾನ್'§ ಎಂದು ಕರೆಯಬೇಕು (ಅವನ್ನು ಬಲ್ಲವನು ಪರಮೇಶ್ವರನೊಬ್ಬನೇ) (78). ಹೇಯಗಳಾದ ಪ್ರಕೃತಿಗುಣಗಳನ್ನು ಬಿಟ್ಟು ಜ್ಞಾನ, ಶಕ್ತಿ , ಬಲ, ಐಶ್ವರ್ಯ, ವೀರ್ಯ, ತೇಜಸ್ಸು—ಇವೆಲ್ಲವೂ 'ಭಗವತ್' ಶಬ್ದದಿಂದ ವಾಚ್ಯವಾಗತಕ್ಕ ಗುಣಗಳು.**

---

* ಭ, ಗ, ವ—ಎಂಬ ಅಕ್ಷರಗಳ ಸಾಮ್ಯದಿಂದ 'ಭಗವತ್' ಶಬ್ದದ ಮಹಿಮೆಯನ್ನು ಹೀಗೆ ವರ್ಣಿಸಲಾಗಿದೆ.

§ ಹಿಂದೆ ಹೇಳಿದ ಐಶ್ವರ್ಯಾದಿಗಳಲ್ಲದೆ, ಉತ್ಪತ್ತಿ ಜ್ಞಾನಾದಿಗಳೂ ಷಡ್ಗುಣಗಳೇ.

** ಜ್ಞಾನಾದಿಗಳೂ ಷಡ್ಗುಣಗಳೂ 'ಪ್ರಕೃತಿಗುಣ' ಎಂಬುದರಿಂದ ಗುಣಕಾರ್ಯಗಳಾದ ಕರ್ಮಗಳನ್ನೂ ಫಲಗಳನ್ನೂ ಸಹ ಗ್ರಹಿಸಬೇಕು.

**ಸರ್ವಾಣಿ ತತ್ರ ಭೂತಾನಿ ವಸಂತಿ ಪರಮಾತ್ಮನಿ।**
**ಭೂತೇಷು ಚ ಸ ಸರ್ವಾತ್ಮಾ ವಾಸುದೇವಸ್ತತಃ ಸ್ಮೃತಃ॥** 80

**ಖಾಂಡಿಕ್ಯಜನಕಾಯಾಹ ಪೃಷ್ಟಃಕೇಶಿಧ್ವಜಃ ಪುರಾ।**
**ನಾಮವ್ಯಾಖ್ಯಾಮನಂತಸ್ಯ ವಾಸುದೇವಸ್ಯ ತತ್ತ್ವತಃ॥** 81

**ಭೂತೇಷು ವಸತೇ ಸೋಽಂತರ್ವಸಂತ್ಯತ್ರ ಚ ತಾನಿ ಯತ್।**
**ಧಾತಾ ವಿಧಾತಾ ಜಗತಾಂ ವಾಸುದೇವಸ್ತತಃ ಪ್ರಭುಃ॥** 82

**ಸ ಸರ್ವಭೂತಪ್ರಕೃತಿಂ ವಿಕಾರಾನ್**
**ಗುಣಾದಿದೋಷಾಂಶ್ಚ ಮುನೇ ವ್ಯತೀತಃ।**
**ಅತೀತಸರ್ವಾವರಣೋಽಖಿಲಾತ್ಮಾ**
**ತೇನಾಸ್ತೃತಂ ಯದ್ಭುವನಾಂತರಾಲೇ॥** 83

---

ಸರ್ವಭೂತಗಳೂ ಆ ಪರಮಾತ್ಮನಲ್ಲಿ ವಾಸಮಾಡುತ್ತವೆ. ಆತನು ಸರ್ವಭೂತಗಳಲ್ಲಿ ವಾಸಮಾಡುತ್ತಾನೆ. ಆದ್ದರಿಂದ ಪರಮಾತ್ಮನನ್ನು ವಾಸುದೇವ ಎನ್ನುತ್ತಾರೆ (79-80). ಹಿಂದೊಮ್ಮೆ ಖಾಂಡಿಕ್ಯಜನಕನು ಪ್ರಶ್ನೆಮಾಡಿದಾಗ ಕೇಶಿಧ್ವಜನು ಭಗವಾನ್ ಅನಂತನ 'ವಾಸುದೇವ' ಶಬ್ದದ ಅರ್ಥವನ್ನು ಚೆನ್ನಾಗಿ ನಿರ್ವಚನ ಮಾಡಿ ಹೇಳಿದ್ದಾನೆ. ಏನೆಂದರೆ, "ಜಗತ್ತುಗಳ ಸೃಷ್ಟಿಕರ್ತನೂ ಪೋಷಕನೂ ಆದ ಆ ಪ್ರಭುವು ಸಮಸ್ತ ಭೂತಗಳ ಒಳಗೆ ವಾಸಿಸುತ್ತಾನೆ. ಹಾಗೆಯೇ ಸಮಸ್ತ ಭೂತಗಳೂ ಆತನಲ್ಲಿ ವಾಸಮಾಡುತ್ತವೆ. ಆದ್ದರಿಂದ ಪರಮಾತ್ಮನು ವಾಸುದೇವನೆನಿಸಿದ್ದಾನೆ" (81-82). ಆ ಪರಮೇಶ್ವರನು ಸರ್ವಭೂತಗಳಿಗೆ ಪ್ರಕೃತಿಯಾದ ಅವ್ಯಕ್ತವನ್ನೂ ಮಹದಾದಿ ವಿಕಾರಗಳನ್ನೂ ಸತ್ತ್ವಾದಿಗುಣ ಮತ್ತು ಅವುಗಳ ಕಾರ್ಯಗಳಾದ ಅಜ್ಞಾನಾದಿ ದೋಷಗಳನ್ನೂ ದಾಟಿದ್ದಾನೆ—ಅವುಗಳ ಸಂಬಂಧವಿಲ್ಲದವನು. ಅವಿದ್ಯೆ—ಮುಂತಾದ ಸಮಸ್ತ ಆವರಣಗಳೂ ಆತನಿಗೆ ಇಲ್ಲ. ಆ ಸರ್ವಾತ್ಮನು ವಿಶ್ವದೊಳಗಿರುವ ಸಮಸ್ತವನ್ನೂ ವ್ಯಾಪಿಸಿಕೊಂಡಿದ್ದಾನೆ (83). ಆತನು ಸಮಸ್ತ ಕಲ್ಯಾಣ ಗುಣನಿಲಯನಾಗಿ ತನ್ನ ಮಾಯಾಶಕ್ತಿ

**ಸಮಸ್ತಕಲ್ಯಾಣಗುಣಾತ್ಮಕೋಽಸೌ**
**ಸ್ವಶಕ್ತಿಲೇಶಾವೃತಭೂತವರ್ಗಃ।**
**ಇಚ್ಛಾಗೃಹೀತಾಭಿಮತೋರುದೇಹ-**
**ಸ್ಸಂಸಾಧಿತಾಶೇಷಜಗದ್ಧಿತೋ ಯಃ॥** 84

**ತೇಜೋಬಲೈಶ್ವರ್ಯಮಹಾವಬೋಧ-**
**ಸುವೀರ್ಯಶಕ್ತ್ಯಾದಿಗುಣೈಕರಾಶಿಃ।**
**ಪರಃ ಪರಾಣಾಂ ಸಕಲಾ ನ ಯತ್ರ**
**ಕ್ಲೇಶಾದಯಸ್ಸಂತಿ ಪರಾವರೇಶೇ॥** 85

**ಸ ಈಶ್ವರೋ ವ್ಯಷ್ಟಿಸಮಷ್ಟಿರೂಪೋ**
**ವ್ಯಕ್ತಸ್ವರೂಪೋಽಪ್ರಕಟಸ್ವರೂಪಃ।**
**ಸರ್ವೇಶ್ವರಸ್ಸರ್ವದೃಕ್ ಸರ್ವವಿಚ್ಚ**
**ಸಮಸ್ತಶಕ್ತಿಃ ಪರಮೇಶ್ವರಾಖ್ಯಃ॥** 86

---

ಲೇಶದಿಂದ ಸಕಲಪ್ರಾಣಿ ವರ್ಗಗಳನ್ನು ಆವರಿಸಿದ್ದಾನೆ. ತನ್ನ ಇಚ್ಛಾನುಸಾರವಾಗಿ ತನಗೆ ಬೇಕಾದ ವಿವಿಧ ದೇಹಗಳನ್ನು ಧರಿಸಿ ಅಶೇಷ ಜಗತ್ತಿನ ಹಿತವನ್ನು ಸಾಧಿಸುತ್ತಾನೆ (84). ತೇಜಸ್ಸು, ಬಲ, ಐಶ್ವರ್ಯ, ಅಪ್ರತಿಹತಜ್ಞಾನ, ವೀರ್ಯ, ಶಕ್ತಿ—ಮುಂತಾದ ಕಲ್ಯಾಣಗುಣಗಳ ರಾಶಿಯಾಗಿದ್ದಾನೆ. ಪರವಾದ ಪ್ರಕೃತಿ, ಅಪರಗಳಾದ ಮಹದಾದಿಗಳು—ಇವುಗಳಿಗೆ ಈಶ್ವರನಾದ ಆತನಲ್ಲಿ ಅವಿದ್ಯಾ, ಅಸ್ಮಿತಾ—ಮೊದಲಾದ ಕ್ಲೇಶಗಳಿಲ್ಲ. ಆತನು ಪರವಸ್ತುಗಳಿಗೆ ಪರನಾಗಿದ್ದಾನೆ (85). ಆತನು ವ್ಯಷ್ಟಿ* ಸಮಷ್ಟಿ ರೂಪನಾದ ಈಶ್ವರ. ವ್ಯಕ್ತನೂ ಅವ್ಯಕ್ತನೂ ಆಗಿದ್ದಾನೆ. ಆ ಪರಮೇಶ್ವರನು ಸರ್ವೇಶ್ವರನೂ ಸರ್ವಸಾಕ್ಷಿಯೂ ಸರ್ವಜ್ಞನೂ ಸರ್ವಶಕ್ತಿಯೂ ಆಗಿದ್ದಾನೆ (86). ಮೈತ್ರೇಯ, ದೋಷರಹಿತವೂ ವಿಶುದ್ಧವೂ

---

* ವ್ಯಷ್ಟಿ = ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ. ಸಮಷ್ಟಿ = ವಾಸುದೇವ.

ಸಂಜ್ಞಾಯತೇ ಯೇನ ತದಸ್ತದೋಷಂ
ಶುದ್ಧಂ ಪರಂ ನಿರ್ಮಲಮೇಕರೂಪಮ್ ।
ಸಂದೃಶ್ಯತೇ ವಾಪ್ಯವಗಮ್ಯತೇ ವಾ
ತಜ್ಜ್ಞಾನಮಜ್ಞಾನಮತೋಽನ್ಯದುಕ್ತಮ್ ॥ 87

ಇತಿ ಶ್ರೀವಿಷ್ಣುಪುರಾಣೇ ಷಷ್ಠಾಂಶೇ ಪಂಚಮೋಽಧ್ಯಾಯಃ

---

ಶ್ರೇಷ್ಠವೂ ನಿರ್ಮಲವೂ (ವಿಕಾರರಹಿತವಾಗಿ) ಏಕರೂಪವೂ ಆದ ಪರವಸ್ತುವಿನ ಸಾಕ್ಷಾತ್ಕಾರವು ಯಾವುದರಿಂದ ಆಗುತ್ತದೆಯೋ ಮತ್ತು (ಅವಿದ್ಯಾನಿವೃತ್ತಿಯಿಂದ) ಪ್ರಾಪ್ತಿಯಾಗುತ್ತದೆಯೋ ಅದು ಜ್ಞಾನ* ಉಳಿದುದೆಲ್ಲ ಅಜ್ಞಾನ (87).

ಇಲ್ಲಿಗೆ ಶ್ರೀವಿಷ್ಣುಪುರಾಣದ ಷಷ್ಠಾಂಶದಲ್ಲಿ
ಐದನೆಯ ಅಧ್ಯಾಯ ಮುಗಿಯಿತು.



---

* ಜ್ಞಾನ—ಪರಾವಿದ್ಯೆ, ಅಜ್ಞಾನ—ಅಪರಾವಿದ್ಯೆ.

## ಷಷ್ಠೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಸ್ವಾಧ್ಯಾಯಸಂಯಮಾಭ್ಯಾಂ ಸ ದೃಶ್ಯತೇ ಪುರುಷೋತ್ತಮಃ।**
**ತತ್ಪ್ರಾಪ್ತಿಕಾರಣಂ ಬ್ರಹ್ಮ ತದೇತದಿತಿ ಪಠ್ಯತೇ॥** 1

**ಸ್ವಾಧ್ಯಾಯಾದ್ಯೋಗಮಾಸೀತ ಯೋಗಾತ್ ಸ್ವಾಧ್ಯಾಯಮಾವಸೇತ್।**
**ಸ್ವಾಧ್ಯಾಯಯೋಗಸಂಪತ್ತ್ಯಾ ಪರಮಾತ್ಮಾ ಪ್ರಕಾಶತೇ॥** 2

**ತದೀಕ್ಷಣಾಯ ಸ್ವಾಧ್ಯಾಯಶ್ಚಕ್ಷುರ್ಯೋಗಸ್ತಥಾ ಪರಮ್।**
**ನ ಮಾಂಸಚಕ್ಷುಷಾ ದ್ರಷ್ಟುಂ ಬ್ರಹ್ಮಭೂತಸ್ಸ ಶಕ್ಯತೇ॥** 3

---

## ಅಧ್ಯಾಯ 6

ಖಾಂಡಿಕ್ಯಜನಕ ಮತ್ತು ಕೇಶಿಧ್ವಜರ ಕಥೆ.

ಪರಾಶರಮುನಿಗಳು: ಮೈತ್ರೇಯ, ಸ್ವಾಧ್ಯಾಯ (ಪ್ರಣವಾದಿ ಜಪ) ಮತ್ತು ಸಂಯಮ (ಯೋಗ)—ಇವುಗಳಿಂದ ಆ ಪುರುಷೋತ್ತಮನು ಗೋಚರಿಸುತ್ತಾನೆ. ಆತನ ದರ್ಶನಕ್ಕೆ ಕಾರಣವಾದ್ದರಿಂದ ಈ ಎರಡು ಸಾಧನಗಳನ್ನು 'ಬ್ರಹ್ಮ' ಎನ್ನುತ್ತಾರೆ (1). ಜಪವಾದ ಮೇಲೆ ಯೋಗ, ಯೋಗವಾದ ಮೇಲೆ ಜಪ—ಈ ರೀತಿಯಲ್ಲಿ ಆಚರಿಸುತ್ತ ಹೋಗಬೇಕು. ಜಪ ಯೋಗಗಳ ಸಂಪತ್ತಿನಿಂದ ಪರಮಾತ್ಮನು ಗೋಚರಿಸುವನು* (ವಿಷಯ ಸಂಬಂಧವಿಲ್ಲದೆ). ಬ್ರಹ್ಮಸ್ವರೂಪನಾಗಿರುವ ಪರಮಾತ್ಮನನ್ನು ನೋಡಲು ಮಾಂಸಮಯವಾದ ನೇತ್ರದಿಂದ ಶಕ್ಯವಿಲ್ಲ. ಆದ್ದರಿಂದ ಆತನನ್ನು ನೋಡುವುದಕ್ಕೆ ಜಪಯೋಗಗಳು ಶ್ರೇಷ್ಠವಾದ ನೇತ್ರವೆನಿಸಿವೆ" ಎಂದರು (2-3). ಆಗ ಮೈತ್ರೇಯರು "ಭಗವನ್,

---

* ಜಪಾತ್ಶ್ರಾಂತಃ ಪುನರ್ಧ್ಯಾಯೇತ್ ಧ್ಯಾನಾತ್ ಶ್ರಾಂತಃ ಪುನರ್ಜಪೇತ್।
ಜಪಧ್ಯಾನಾಭಿಯೋಗೇನ ಪಶ್ಯೇದಾತ್ಮಾನಮಾತ್ಮನಿ॥

ಯೋಗಶಾಸ್ತ್ರದ ಈ ವಚನವು ಶ್ರೀಧರೀಯ ವ್ಯಾಖ್ಯಾನದಲ್ಲಿ ಉದಾಹೃತವಾಗಿದೆ.

*ಶ್ರೀಮೈತ್ರೇಯ ಉವಾಚ:*

**ಭಗವಂಸ್ತಮಹಂ ಯೋಗಂ ಜ್ಞಾತುಮಿಚ್ಛಾಮಿ ತಂ ವದ।**
**ಜ್ಞಾತೇ ಯತ್ರಾಖಿಲಾಧಾರಂ ಪಶ್ಯೇಯಂ ಪರಮೇಶ್ವರಮ್॥** 4

*ಶ್ರೀಪರಾಶರ ಉವಾಚ:*

**ಯಥಾ ಕೇಶಿಧ್ವಜಃ ಪ್ರಾಹ ಖಾಂಡಿಕ್ಯಾಯ ಮಹಾತ್ಮನೇ।**
**ಜನಕಾಯ ಪುರಾ ಯೋಗಂ ತಮಹಂ ಕಥಯಾಮಿ ತೇ॥** 5

*ಶ್ರೀಮೈತ್ರೇಯ ಉವಾಚ:*

**ಖಾಂಡಿಕ್ಯಃ ಕೋಽಭವದ್‌ಬ್ರಹ್ಮನ್ ಕೋ ವಾ ಕೇಶಿಧ್ವಜಃ ಕೃತೀ।**
**ಕಥಂ ತಯೋಶ್ಚ ಸಂವಾದೋ ಯೋಗಸಂಬಂಧವಾನಭೂತ್॥** 6

*ಶ್ರೀಪರಾಶರ ಉವಾಚ:*

**ಧರ್ಮಧ್ವಜೋ ವೈ ಜನಕಸ್ತಸ್ಯ ಪುತ್ರೋಽಮಿತಧ್ವಜಃ।**
**ಕೃತಧ್ವಜಶ್ಚ ನಾಮ್ನಾಸೀತ್ ಸದಾಧ್ಯಾತ್ಮರತಿರ್ನೃಪಃ॥** 7

---

ಯಾವ ಯೋಗವನ್ನು ತಿಳಿದು ಅನುಷ್ಠಾನ ಮಾಡಿದರೆ ಅಖಿಲಾಧಾರನಾದ ಪರಮೇಶ್ವರನನ್ನು ನಾನು ನೋಡಬಲ್ಲೆನೋ ಆ ಯೋಗದ ಸ್ವರೂಪವನ್ನರಿಯಲು ಇಚ್ಛಿಸುತ್ತೇನೆ. ಅದನ್ನು ನನಗೆ ಹೇಳೋಣವಾಗಲಿ" ಎಂದು ಕೇಳಿದರು (4). ಅದಕ್ಕೆ ಪರಾಶರರು "ಹಿಂದೆ ಮಹಾತ್ಮನಾದ ಖಾಂಡಿಕ್ಯನೆಂಬ ಜನಕರಾಜನಿಗೆ ಕೇಶಿಧ್ವಜನು ಉಪದೇಶಿಸಿದ ಯೋಗವಿಧಾನವನ್ನು ನಿನಗೆ ಹೇಳುವೆನು" ಎಂದರು. ಆಗ ಮೈತ್ರೇಯರು "ಮಹರ್ಷಿಗಳೆ, ಖಾಂಡಿಕ್ಯನೆಂಬುವನು ಯಾರು? ಧನ್ಯನಾದ ಆ ಕೇಶಿಧ್ವಜನು ಯಾರು? ಯೋಗಸಂಬಂಧವಾಗಿ ಅವರಿಬ್ಬರ ಸಂವಾದ ಹೇಗೆ ನಡೆಯಿತು?" ಎಂದು ಕೇಳಿದರು (5-6). ಆಗ ಪರಾಶರಮುನಿಗಳು ಇಂತೆಂದರು: ಪೂರ್ವಕಾಲದಲ್ಲಿ ಧರ್ಮಧ್ವಜನೆಂಬ ಜನಕವಂಶದ ರಾಜನಿದ್ದನು. ಅವನಿಗೆ ಅಮಿತಧ್ವಜ, ಕೃತಧ್ವಜ—ಎಂಬ ಇಬ್ಬರು ಮಕ್ಕಳಿದ್ದರು. ಅವರಲ್ಲಿ ಕೃತಧ್ವಜನು ಸರ್ವದಾ ಅಧ್ಯಾತ್ಮದಲ್ಲಿ ಆಸಕ್ತನಾಗಿದ್ದನು (7). ಕೃತಧ್ವಜನ ಪುತ್ರನಾದ ಕೇಶಿಧ್ವಜನು ವಿಖ್ಯಾತನಾದ ರಾಜನೆನಿ

**ಕೃತಧ್ವಜಶ್ಚ ಪುತ್ರೋಽಭೂತ್ ಖ್ಯಾತಃ ಕೇಶಿಧ್ವಜೋ ನೃಪಃ।**
**ಪುತ್ರೋಽಮಿತಧ್ವಜಸ್ಯಾಪಿ ಖಾಂಡಿಕ್ಯಜನಕೋಽಭವತ್॥ 8**

**ಕರ್ಮಮಾರ್ಗೇಣ ಖಾಂಡಿಕ್ಯಃ ಪೃಥಿವ್ಯಾಮಭವತ್ ಕೃತೀ।**
**ಕೇಶಿಧ್ವಜೋಽಪ್ಯತೀವಾಸೀದಾತ್ಮವಿದ್ಯಾವಿಶಾರದಃ॥ 9**

**ತಾವುಭಾವಪಿ ಚೈವಾಸ್ತಾಂ ವಿಜಿಗೀಷೂ ಪರಸ್ಪರಮ್।**
**ಕೇಶಿಧ್ವಜೇನ ಖಾಂಡಿಕ್ಯಸ್ಸ್ವರಾಜ್ಯಾದವರೋಪಿತಃ॥ 10**

**ಪುರೋಧಸಾ ಮಂತ್ರಿಭಿಶ್ಚ ಸಮವೇತೋಽಲ್ಪಸಾಧನಃ।**
**ರಾಜ್ಯಾನ್ನಿರಾಕೃತಸ್ಸೋಽಥ ದುರ್ಗಾರಣ್ಯಚರೋಽಭವತ್॥ 11**

**ಇಯಾಜ ಸೋಽಪಿ ಸುಬಹೂನ್ಯಜ್ಞಾನ್ ಜ್ಞಾನವ್ಯಪಾಶ್ರಯಃ।**
**ಬ್ರಹ್ಮವಿದ್ಯಾಮಧಿಷ್ಠಾಯ ತರ್ತುಂ ಮೃತ್ಯುಮವಿದ್ಯಯಾ॥ 12**

**ಏಕದಾ ವರ್ತಮಾನಸ್ಯ ಯಾಗೇ ಯೋಗವಿದಾಂ ವರ।**
**ಧರ್ಮಧೇನುಂ ಜಘಾನೋಗ್ರಶ್ಶಾರ್ದೂಲೋ ವಿಜನೇ ವನೇ॥ 13**

---

ಸಿದನು. ಅಮಿತಧ್ವಜನಿಗೂ ಸಹ ಖಾಂಡಿಕ್ಯಜನಕನೆಂಬ ಮಗನಿದ್ದನು (8). ಖಾಂಡಿಕ್ಯನು ಕರ್ಮಮಾರ್ಗದಿಂದ ಜಗತ್ತಿನಲ್ಲಿ ಕೃತಕೃತ್ಯನೆನಿಸಿದ್ದನು. ಕೇಶಿಧ್ವಜನಾದರೋ ಅಧ್ಯಾತ್ಮವಿದ್ಯೆಯಲ್ಲಿ ಅತ್ಯಂತ ವಿಶಾರದನಾಗಿದ್ದನು. ಅವರಿಬ್ಬರೂ (ಕಲಹನಿಮಿತ್ತದಿಂದ) ಒಬ್ಬರನ್ನೊಬ್ಬರು ಜಯಿಸಬೇಕೆಂದು ಪ್ರಯತ್ನಿಸಿದರು. ಆಗ ಕೇಶಿಧ್ವಜನು ಖಾಂಡಿಕ್ಯನನ್ನು ಸೋಲಿಸಿ ರಾಜ್ಯಚ್ಯುತನನ್ನಾಗಿ ಮಾಡಿದನು (9-10). ಅಲ್ಪಸೇನೆಯಿಂದ ಕೂಡಿದ ಖಾಂಡಿಕ್ಯನು ರಾಜ್ಯಭ್ರಷ್ಟನಾಗಿ ಪುರೋಹಿತ ಮತ್ತು ಮಂತ್ರಿಗಳೊಡನೆ ದುರ್ಗಮವಾದ ಅರಣ್ಯವನ್ನು ಸೇರಿಕೊಂಡನು. ಇತ್ತಲಾಗಿ ಕೇಶಿಧ್ವಜನು ಜ್ಞಾನನಿಷ್ಠನಾಗಿದ್ದರೂ ಅವಿದ್ಯೆಯಿಂದ* (ಕರ್ಮಯೋಗದಿಂದ) ಮೃತ್ಯುವನ್ನು ದಾಟಬೇಕೆಂದು ಉದ್ದೇಶಿಸಿ ಬ್ರಹ್ಮಾರ್ಪಣ ಬುದ್ಧಿಯಿಂದ ಬಹುವಿಧ ಯಜ್ಞಗಳನ್ನು ಆಚರಿಸುತ್ತಿದ್ದನು (11-12). ಯೋಗಿಶ್ರೇಷ್ಠನಾದ ಮೈತ್ರೇಯ, ಹೀಗಿರುವಾಗ ಒಂದುಸಲ ಆತನು ಯಾಗವನ್ನಾಚರಿಸು

* ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ (ಈಶ. 11)

ತತೋ ರಾಜಾ ಹತಾಂ ಶ್ರುತ್ವಾ ಧೇನುಂ ವ್ಯಾಘ್ರೇಣ ಚರ್ತ್ವಿಜಃ।
ಪ್ರಾಯಶ್ಚಿತ್ತಂ ಸ ಪಪ್ರಚ್ಛ ಕಿಮತ್ರೇತಿ ವಿಧೀಯತಾಮ್॥ 14

ತೇಽಪ್ಯೂಚುರ್ನ ವಯಂ ವಿದ್ಮಃ ಕಶೇರುಃ ಪೃಚ್ಛ್ಯತಾಮಿತಿ।
ಕಶೇರುರಪಿ ತೇನೋಕ್ತಸ್ತಥೈವ ಪ್ರಾಹ ಭಾರ್ಗವಮ್॥ 15

ಶುನಕಂ ಪೃಚ್ಛ ರಾಜೇಂದ್ರ ನಾಹಂ ವೇದ್ಮಿ ಸ ವೇತ್ಸ್ಯತಿ।
ಸ ಗತ್ವಾ ತಮಪೃಚ್ಛಚ್ಚ ಸೋಽಪ್ಯಾಹ ಶೃಣು ಯನ್ಮುನೇ॥ 16

ನ ಕಶೇರುರ್ನ ಚೈವಾಹಂ ನ ಚಾನ್ಯಃ ಸಾಂಪ್ರತಂ ಭುವಿ।
ವೇತ್ತ್ಯೇಕ ಏವ ತ್ವಚ್ಛತ್ರುಃ ಖಾಂಡಿಕ್ಯೋ ಯೋ ಜಿತಸ್ತ್ವಯಾ॥ 17

ಸ ಚಾಹ ತಂ ವ್ರಜಾಮ್ಯೇಷ ಪ್ರಷ್ಟುಮಾತ್ಮರಿಪುಂ ಮುನೇ।
ಪ್ರಾಪ್ತ ಏವ ಮಹಾಯಜ್ಞೋ ಯದಿ ಮಾಂ ಸ ಹನಿಷ್ಯತಿ॥ 18

---

ತ್ತಿರುವಾಗ ಘರ್ಮಾರ್ಥವಾದ§ ಗೋವನ್ನು ನಿರ್ಜನವಾದ ವನದಲ್ಲಿ ಘೋರ ವ್ಯಾಘ್ರವು ಕೊಂದುಹಾಕಿತು. ಗೋವನ್ನು ಹುಲಿಯು ಕೊಂದಿತೆಂಬ ಸುದ್ದಿಯನ್ನು ಕೇಳಿದ ಕೇಶಿಧ್ವಜನು 'ಇದಕ್ಕಾಗಿ ಯಾವ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು?' ಎಂದು ಋತ್ವಿಜರನ್ನು ಕೇಳಿದನು (13-14). ಋತ್ವಿಜರು "ನಮಗೆ ಗೊತ್ತಿಲ್ಲ, ಕಶೇರುವನ್ನು ಕೇಳಬೇಕು" ಎಂದರು. ಆಗ ರಾಜನು ಕಶೇರುವನ್ನು ಕೇಳಲಾಗಿ ಆತನು "ರಾಜೇಂದ್ರ, ಭೃಗುಪುತ್ರನಾದ ಶುನಕನನ್ನು ಕೇಳು. ಯಾವ ಪ್ರಾಯಶ್ಚಿತ್ತ ವೆಂಬುದು ನನಗೆ ಗೊತ್ತಿಲ್ಲ. ಆತನಿಗೆ ತಿಳಿದಿರುತ್ತದೆ" ಎಂದನು. ಕೇಶಿಧ್ವಜನು ಶುನಕನನ್ನು ವಿಚಾರಿಸಲಾಗಿ, ಮೈತ್ರೇಯ, ಆತನು ಏನು ಹೇಳಿದನೆಂಬುದನ್ನು ಕೇಳು (15-16). "ರಾಜ, ಇದಕ್ಕೆ ಪ್ರಾಯಶ್ಚಿತ್ತವೇನೆಂಬುದು ಕಶೇರುವಿಗೂ ತಿಳಿಯದು; ನನಗೂ ತಿಳಿಯದು. ಸದ್ಯದಲ್ಲಿ ಇನ್ನು ಯಾರಿಗೂ ಭೂಮಂಡಲ ದಲ್ಲಿ ಗೊತ್ತಿಲ್ಲ! ಒಬ್ಬನು ಮಾತ್ರ ಅದನ್ನು ತಿಳಿದವನಿದ್ದಾನೆ. ಅವನೇ ನಿನ್ನಿಂದ ಪರಾಜಿತನಾದ ನಿನ್ನ ಶತ್ರು ಖಾಂಡಿಕ್ಯ!" ಎಂದನು (17). ಆಗ ಕೇಶಿಧ್ವಜನು ಶುನಕಮುನಿಯನ್ನು ಕುರಿತು "ಮುನಿಶ್ರೇಷ್ಠ, ನನ್ನ ವೈರಿಯನ್ನು ಕೇಳುವುದಕ್ಕೆ,

---

§ ಘರ್ಮ =ಪ್ರವರ್ಗ್ಯದಲ್ಲಿ ಬಳಸುವ ಹವಿಸ್ಸು. ಅದಕ್ಕಾಗಿ ಹಾಲುಕೊಡುವ ಹಸು ಘರ್ಮಧೇನು.

**ಪ್ರಾಯಶ್ಚಿತ್ತಮಶೇಷೇಣ ಸ ಚೇತ್ ಪೃಷ್ಟೋ ವದಿಷ್ಯತಿ।**
**ತತಶ್ಚಾವಿಕಲೋ ಯಾಗೋ ಮುನಿಶ್ರೇಷ್ಠ ಭವಿಷ್ಯತಿ॥** 19

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾ ರಥಮಾರುಹ್ಯ ಕೃಷ್ಣಾಜಿನಧರೋ ನೃಪಃ।**
**ವನಂ ಜಗಾಮ ಯತ್ರಾಸ್ತೇ ಸ ಖಾಂಡಿಕ್ಯೋ ಮಹಾಮತಿಃ॥** 20

**ತಮಾಪತಂತಮಾಲೋಕ್ಯ ಖಾಂಡಿಕ್ಯೋ ರಿಪುಮಾತ್ಮನಃ।**
**ಪ್ರೋವಾಚ ಕ್ರೋಧತಾಮ್ರಾಕ್ಷಸ್ಸಮಾರೋಪಿತಕಾರ್ಮುಕಃ॥** 21

*ಖಾಂಡಿಕ್ಯ ಉವಾಚ:*

**ಕೃಷ್ಣಾಜಿನಂ ತ್ವಂ ಕವಚಮಾಬಧ್ಯಾಸ್ಮಾನ್ ಹನಿಷ್ಯಸಿ।**
**ಕೃಷ್ಣಾಜಿನಧರೇ ವೇತ್ಸಿ ನ ಮಯಿ ಪ್ರಹರಿಷ್ಯತಿ॥** 22

---

ಇದೋ, ನಾನು ಹೋಗುವೆನು. ಒಂದುವೇಳೆ ಅವನು ನನ್ನನ್ನು ಕೊಂದರೆ ಈ ಮಹಾಯಜ್ಞದ ಫಲವು ದೊರಕಿದಂತೆಯೇ ಆಗುವುದು.* ಹಾಗಲ್ಲದೆ ನನ್ನ ಪ್ರಶ್ನೆಗೆ ಅನುಗುಣವಾಗಿ ಪ್ರಾಯಶ್ಚಿತ್ತ ವಿಧಾನವೆಲ್ಲವನ್ನೂ ಅವನು ತಿಳಿಸಿಕೊಟ್ಟರೆ, ಯಾಗವು ಸಾಂಗವಾಗಿ ನೆರವೇರುವುದು" ಎಂದನು (18-19). ಹೀಗೆ ಹೇಳಿ ಆ ರಾಜನು ಕೃಷ್ಣಾಜಿನಧರನಾಗಿಯೇ ರಥವನ್ನೇರಿ, ಮಹಾಪ್ರಾಜ್ಞನಾದ ಖಾಂಡಿಕ್ಯ ನಿದ್ದ ಅರಣ್ಯಕ್ಕೆ ಹೋದನು. ಖಾಂಡಿಕ್ಯನು ತನ್ನ ವೈರಿಯಾದ ಕೇಶಿಧ್ವಜನು ಆಗಮಿಸುತ್ತಿರುವುದನ್ನು ಕಂಡು ಕ್ರೋಧದಿಂದ ಕೆಂಪಡರಿದ ನೇತ್ರವುಳ್ಳವನಾಗಿ ಧನುಸ್ಸಿಗೆ ಹೆದೆಯನ್ನೇರಿಸಿ ಇಂತೆಂದನು (20-21): "ಎಲೈ, ಕೃಷ್ಣಾಜಿನವೆಂಬ ಕವಚವನ್ನು ಧರಿಸಿ ನಮ್ಮನ್ನು ಕೊಲ್ಲುವುದಕ್ಕೆ ಬಂದಿರುವೆಯಾ? 'ನಾನು ಕೃಷ್ಣಾಜಿನಧರನಾದ್ದರಿಂದ ನನ್ನನ್ನು ಈತನು ಪ್ರಹರಿಸುವುದಿಲ್ಲ' ಎಂದು ತಿಳಿದಿದ್ದೀಯಲ್ಲವೆ! ಎಲೈ ಮೂಢ, ಜಿಂಕೆಗಳ ಬೆನ್ನಿನಲ್ಲಿ ಕೃಷ್ಣಾಜಿನವೇ ಇರುತ್ತದೆ!

---

* ಧರ್ಮಕಾರ್ಯವನ್ನಾಚರಿಸುವಾಗ ನಡುವೆ ಮರಣವಾದರೆ ಧರ್ಮಕಾರ್ಯದ ಫಲ ಬರುತ್ತದೆ—ಎಂದು ಶಾಸ್ತ್ರವಚನವಿದೆ.

**ಮೃಗಾಣಾಂ ವದ ಪೃಷ್ಠೇಷು ಮೂಢ ಕೃಷ್ಣಾಜಿನಂ ನ ಕಿಮ್ ।**
**ಯೇಷಾಂ ಮಯಾ ತ್ವಯಾ ಚೋಗ್ರಾಃ ಪ್ರಹಿತಾಶ್ಶಿತಸಾಯಕಾಃ ॥ 23**

**ಸ ತ್ವಾಮಹಂ ಹನಿಷ್ಯಾಮಿ ನ ಮೇ ಜೀವನ್ ವಿಮೋಕ್ಷ್ಯಸೇ ।**
**ಆತತಾಯ್ಯಸಿ ದುರ್ಬುದ್ಧೇ ಮಮ ರಾಜ್ಯಹರೋ ರಿಪುಃ ॥ 24**

*ಕೇಶಿಧ್ವಜ ಉವಾಚ:*

**ಖಾಂಡಿಕ್ಯ ಸಂಶಯಂ ಪ್ರಷ್ಟುಂ ಭವಂತಮಹಮಾಗತಃ ।**
**ನ ತ್ವಾಂ ಹಂತುಂ ವಿಚಾರ್ಯೈತತ್ ಕೋಪಂ ಬಾಣಂ ವಿಮುಂಚ ವಾ ॥25**

*ಶ್ರೀಪರಾಶರ ಉವಾಚ:*

**ತತಸ್ಸ ಮಂತ್ರಿಭಿಸ್ಸಾರ್ಧಮೇಕಾಂತೇ ಸಪುರೋಹಿತಃ ।**
**ಮಂತ್ರಯಾಮಾಸ ಖಾಂಡಿಕ್ಯಸ್ಸರ್ವೈರೇವ ಮಹಾಮತಿಃ ॥ 26**

---

ಅವುಗಳ ಮೇಲೆ ನಾನೂ ನೀನು ಸಹ ಉಗ್ರವಾದ ನಿಶಿತಶರಗಳನ್ನು ಪ್ರಯೋಗಿಸಿಲ್ಲವೇ? ನೀನೇ ಹೇಳು! (22-23). ನಿನ್ನನ್ನೀಗ ವಧಿಸುವೆನು. ನೀನಿನ್ನು ಬದುಕಿ ಉಳಿಯಲಾರೆ. ಎಲೈ ದುರ್ಬುದ್ಧಿ, ನನ್ನ ರಾಜ್ಯವನ್ನಪಹರಿಸಿದ ವೈರಿ ನೀನು. ಆತತಾಯಿ* ನೀನು" ಎಂದನು (24). ಆಗ ಕೇಶಿಧ್ವಜನು "ಖಾಂಡಿಕ್ಯ, ಧರ್ಮಶಾಸ್ತ್ರದ ಒಂದು ಸಂದೇಹವನ್ನು ಬಗೆಹರಿಸಿಕೊಳ್ಳಲು ನಿನ್ನ ಬಳಿಗೆ ಬಂದಿದ್ದೇನೆ. ನಿನ್ನನ್ನು ಕೊಲ್ಲುವುದಕ್ಕೆ ನಾನು ಬಂದಿಲ್ಲ. ಇದನ್ನು ಪರ್ಯಾಲೋಚಿಸಿ ಕೋಪವನ್ನು ಬಿಡು ಅಥವಾ ಬಾಣವನ್ನಾದರೂ ಬಿಡು!" ಎಂದನು (25). ಆಗ ಪ್ರಾಜ್ಞನಾದ ಖಾಂಡಿಕ್ಯನು ತನ್ನ ಮಂತ್ರಿ ಪುರೋಹಿತರೆಲ್ಲರೊಡನೆ ಏಕಾಂತದಲ್ಲಿ ಮಂತ್ರಾಲೋಚನೆಯನ್ನು ನಡೆಸಿದನು. ಆ ಸಮಯದಲ್ಲಿ ಮಂತ್ರಿಗಳು "ರಾಜ, ಕೈಗೆ ಸಿಕ್ಕಿರುವ ಈ ವೈರಿಯನ್ನು ವಧಿಸುವುದೇ ಲೇಸು.

---

* ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ ।
ಕ್ಷೇತ್ರದಾರಹರಶ್ಚೈವ ಷಡೇತೇ ಹ್ಯಾತತಾಯಿನಃ ॥
ನಾತತಾಯಿವಧೇ ದೋಷೋ ಹಂತುರ್ಭವತಿ ಕಶ್ಚನ ॥

**ತಮೂಚುರ್ಮಂತ್ರಿಣೋ ವಧ್ಯೋ ರಿಪುರೇಷ ವಶಂ ಗತಃ।**
**ಹತೇಽಸ್ಮಿನ್ ಪೃಥಿವೀ ಸರ್ವಾ ತವ ವಶ್ಯಾ ಭವಿಷ್ಯತಿ॥ 27**

**ಖಾಂಡಿಕ್ಯಶ್ಚಾಹ ತಾನ್ ಸರ್ವಾನೇವಮೇತನ್ನ ಸಂಶಯಃ।**
**ಹತೇಽಸ್ಮಿನ್ ಪೃಥಿವೀ ಸರ್ವಾ ಮಮ ವಶ್ಯಾ ಭವಿಷ್ಯತಿ॥ 28**

**ಪರಲೋಕಜಯಸ್ತಸ್ಯ ಪೃಥಿವೀ ಸಕಲಾ ಮಮ।**
**ನ ಹನ್ಮಿ ಚೇಲ್ಲೋಕಜಯೋ ಮಮ ತಸ್ಯ ವಸುಂಧರಾ॥ 29**

**ನಾಹಂ ಮನ್ಯೇ ಲೋಕಜಯಾದಧಿಕಾ ಸ್ಯಾದ್ವಸುಂಧರಾ।**
**ಪರಲೋಕಜಯೋಽನಂತಸ್ಸ್ವಲ್ಪಕಾಲೋ ಮಹೀಜಯಃ॥ 30**

**ತಸ್ಮಾನ್ನೈನಂ ಹನಿಷ್ಯಾಮಿ ಯತ್ ಪೃಚ್ಛತಿ ವದಾಮಿ ತತ್॥ 31**

*ಶ್ರೀಪರಾಶರ ಉವಾಚ:*

**ತತಸ್ತಮಭ್ಯುಪೇತ್ಯಾಹ ಖಾಂಡಿಕ್ಯಜನಕೋ ರಿಪುಮ್।**
**ಪೃಷ್ಟವ್ಯಂ ಯತ್ತ್ವಯಾ ಸರ್ವಂ ತತ್ ಪೃಚ್ಛಸ್ವ ವದಾಮ್ಯಹಮ್॥ 32**

---

ಇವನನ್ನು ವಧಿಸಿದರೆ ಸಕಲ ಪೃಥ್ವಿಯೂ ನಿನ್ನ ವಶಕ್ಕೆ ಬರುತ್ತದೆ" ಎಂದರು (26-27). ಆಗ ಖಾಂಡಿಕ್ಯನು ಅವರೆಲ್ಲರನ್ನು ಕುರಿತು "ಇದು ಹೌದು; ಈತನನ್ನು ಕೊಂದರೆ ಸಕಲ ಪೃಥ್ವಿಯೂ ನನ್ನ ವಶಕ್ಕೆ ಬರುವುದು, ಸಂದೇಹವಿಲ್ಲ. ಪರಂತು ಅದರಿಂದ ಆತನಿಗೆ ಪರಲೋಕ ಲಭಿಸುವುದು; ನನಗೆ ಈ ಭೂಲೋಕ ಲಭಿಸುವುದು. ಅವನನ್ನು ಕೊಲ್ಲದಿದ್ದರೆ ನನಗೆ ಪರಲೋಕ ಲಭಿಸುವುದು; ಅವನಿಗೆ ಈ ಲೋಕ ಇದ್ದುಕೊಳ್ಳುವುದು! (28-29). ಪರಲೋಕ ಜಯಕ್ಕಿಂತ ರಾಜ್ಯಪ್ರಾಪ್ತಿಯು ಅಧಿಕವೆಂದು ನಾನು ಭಾವಿಸುವುದಿಲ್ಲ. ಪರಲೋಕ ಜಯವು ಶಾಶ್ವತ. ಭೂಲೋಕ ಜಯವು ಅಲ್ಪಕಾಲದ್ದು. ಆದ್ದರಿಂದ ಈತನನ್ನು ವಧಿಸುವುದಿಲ್ಲ. ಏನು ಕೇಳುತ್ತಾನೋ ಅದಕ್ಕೆ ಉತ್ತರವನ್ನು ಹೇಳುವೆನು" ಎಂದನು (30-31). ಅನಂತರ ಖಾಂಡಿಕ್ಯಜನಕನು ವೈರಿಯಾದ ಕೇಶಿಧ್ವಜನ ಬಳಿಗೆ ಹೋಗಿ "ನೀನು ಕೇಳಬೇಕಾದ್ದೆಲ್ಲವನ್ನು ಕೇಳು. ತಕ್ಕ ಸಮಾಧಾನವನ್ನು ಹೇಳುತ್ತೇನೆ" ಎಂದನು. ಆಗ ಕೇಶಿಧ್ವಜನು ಯಾಗದ ಹವಿಸ್ಸಿಗಾಗಿ

**ತತಸ್ಸರ್ವಂ ಯಥಾವೃತ್ತಂ ಘರ್ಮಧೇನುವಧಂ ದ್ವಿಜ।**
**ಕಥಯಿತ್ವಾ ಸ ಪಪ್ರಚ್ಛ ಪ್ರಾಯಶ್ಚಿತ್ತಂ ಹಿ ತದ್ಗತಮ್॥** 33

**ಸ ಚಾಚಷ್ಟ ಯಥಾನ್ಯಾಯಂ ದ್ವಿಜ ಕೇಶಿಧ್ವಜಾಯ ತತ್।**
**ಪ್ರಾಯಶ್ಚಿತ್ತಮಶೇಷೇಣ ಯದ್ವೈ ತತ್ರ ವಿಧೀಯತೇ॥** 34

**ವಿದಿತಾರ್ಥಸ್ಸ ತೇನೈವ ಹ್ಯನುಜ್ಞಾತೋ ಮಹಾತ್ಮನಾ।**
**ಯಾಗಭೂಮಿಮುಪಾಗಮ್ಯ ಚಕ್ರೇ ಸರ್ವಾಃ ಕ್ರಿಯಾಃ ಕ್ರಮಾತ್॥** 35

**ಕ್ರಮೇಣ ವಿಧಿವದ್ಯಾಗಂ ನೀತ್ವಾ ಸೋಽವಭೃಥಾಪ್ಲುತಃ।**
**ಕೃತಕೃತ್ಯಸ್ತತೋ ಭೂತ್ವಾ ಚಿಂತಯಾಮಾಸ ಪಾರ್ಥಿವಃ॥** 36

**ಪೂಜಿತಾಶ್ಚ ದ್ವಿಜಾಸ್ಸರ್ವೇ ಸದಸ್ಯಾ ಮಾನಿತಾ ಮಯಾ।**
**ತಥೈವಾರ್ಥಿಜನೋಽಪ್ಯರ್ಥೈರ್ಯೋಜಿತೋಽಭಿಮತೈರ್ಮಯಾ॥** 37

**ಯಥಾರ್ಹಮಸ್ಯ ಲೋಕಸ್ಯ ಮಯಾ ಸರ್ವಂ ವಿಚೇಷ್ಟಿತಮ್।**
**ಅನಿಷ್ಪನ್ನಕ್ರಿಯಂ ಚೇತಸ್ತಥಾಪಿ ಮಮ ಕಿಂ ಯಥಾ॥** 38

---

ಉಪಯೋಗಿಸುತ್ತಿದ್ದ ಗೋವನ್ನು ಹುಲಿಯು ಕೊಂದಿತೆಂಬ ವೃತ್ತಾಂತವೆಲ್ಲವನ್ನು ತಿಳಿಸಿ, ಆ ಸಂಬಂಧವಾಗಿ ಮಾಡಿಕೊಳ್ಳಬೇಕಾದ ಪ್ರಾಯಶ್ಚಿತ್ತವೇನೆಂದು ಪ್ರಶ್ನೆ ಮಾಡಿದನು (32-33). ಮೈತ್ರೇಯ, ಅದಕ್ಕೆ ಶಾಸ್ತ್ರೀಯವಾಗಿ ಮಾಡಿಕೊಳ್ಳ ಬೇಕಾದ ಪ್ರಾಯಶ್ಚಿತ್ತವಿಧಿಯೆಲ್ಲವನ್ನೂ ಖಾಂಡಿಕ್ಯನು ಕೇಶಿಧ್ವಜನಿಗೆ ವಿವರಿಸಿ ಹೇಳಿದನು. ಅನಂತರ ಆ ಮಹಾತ್ಮನಿಂದ ಅನುಜ್ಞೆಯನ್ನು ಪಡೆದು ರಾಜನು ಯಾಗಭೂಮಿಗೆ ಹಿಂದಿರುಗಿ ಬಂದು ಕ್ರಮವರಿತು ಸಕಲಕ್ರಿಯಾಕಲಾಪಗಳನ್ನು ನಡೆಸಿದನು (34-35). ಅನಂತರ ವಿಧಿಪೂರ್ವಕವಾಗಿ ಯಾಗವನ್ನು ಪೂರ್ಣ ಗೊಳಿಸಿ ಅವಭೃತಸ್ನಾನವನ್ನು ಮಾಡಿ ಕೃತಕೃತ್ಯನಾದ ನರೇಂದ್ರನು ತನ್ನಲ್ಲಿಯೇ ಈ ರೀತಿ ಆಲೋಚಿಸಿದನು (36): "ಋತ್ವಿಜರಾಗಿದ್ದ ಸಮಸ್ತ ಬ್ರಾಹ್ಮಣರನ್ನು ಪೂಜಿಸಿದ್ದಾಯಿತು. ಸದಸ್ಯರಿಗೆ ಸಂಭಾವನೆಗಳನ್ನಿತ್ತು ಸಂಮಾನಿಸಿದ್ದಾಯಿತು. ಯಾಚಕರಿಗೆ ಅವರು ಕೇಳಿ ಕೇಳಿದ್ದನ್ನು ಸಮರ್ಪಿಸಿದ್ದಾಯಿತು. ಲೋಕಾಚಾರ ವನ್ನು ಮನ್ನಿಸಿ ಎಲ್ಲವನ್ನೂ ಬಿಡದೇ ನಡೆಸಿದ್ದೇನೆ. ಆದರೂ ಯಾವುದೋ ಒಂದು ಕಾರ್ಯವು ಬಿಟ್ಟು ಹೋಯಿತೆನ್ನುವಂತೆ ಮನಸ್ಸು ತಳಮಳಿಸುತ್ತಿದೆಯಲ್ಲ,

**ಇತ್ಥಂ ಸಂಚಿಂತಯನ್ನೇವ ಸಸ್ಮಾರ ಸ ಮಹೀಪತಿಃ।**
**ಖಾಂಡಿಕ್ಯಾಯ ನ ದತ್ತೇತಿ ಮಯಾ ವೈ ಗುರುದಕ್ಷಿಣಾ॥** 39

**ಸ ಜಗಾಮ ತದಾ ಭೂಯೋ ರಥಮಾರುಹ್ಯ ಪಾರ್ಥಿವಃ।**
**ಮೈತ್ರೇಯ ದುರ್ಗಗಹನಂ ಖಾಂಡಿಕ್ಯೋ ಯತ್ರ ಸಂಸ್ಥಿತಃ॥** 40

**ಖಾಂಡಿಕ್ಯೋಽಪಿ ಪುನರ್ದೃಷ್ಟ್ವಾ ತಮಾಯಾಂತಂ ಧೃತಾಯುಧಮ್।**
**ತಸ್ಥೌ ಹಂತುಂ ಕೃತಮತಿಸ್ತಮಾಹ ಸ ಪುನರ್ನೃಪಃ॥** 41

**ಭೋ ನಾಹಂ ತೇಽಪರಾಧಾಯ ಪ್ರಾಪ್ತಃ ಖಾಂಡಿಕ್ಯ ಮಾಕ್ರುಧಃ।**
**ಗುರೋರ್ನಿಷ್ಕ್ರಯದಾನಾಯ ಮಾಮವೇಹಿ ತ್ವಮಾಗತಮ್॥** 42

**ನಿಷ್ಪಾದಿತೋ ಮಯಾ ಯಾಗಃ ಸಮ್ಯಕ್ ತ್ವದುಪದೇಶತಃ।**
**ಸೋಽಹಂ ತೇ ದಾತುಮಿಚ್ಛಾಮಿ ವೃಣೀಷ್ವ ಗುರುದಕ್ಷಿಣಾಮ್॥** 43

*ಶ್ರೀಪರಾಶರ ಉವಾಚ:*

**ಭೂಯಸ್ಸ ಮಂತ್ರಿಭಿಸ್ಸಾರ್ಧಂ ಮಂತ್ರಯಾಮಾಸ ಪಾರ್ಥಿವಃ।**
**ಗುರುನಿಷ್ಕ್ರಯಕಾಮೋಽಯಂ ಕಿಂ ಮಯಾ ಪ್ರಾರ್ಥ್ಯತಾಮಿತಿ॥** 44

---

ಏನಿರಬಹುದು?" ಹೀಗೆ ಚಿಂತಿಸುತ್ತಿರುವಾಗ 'ಓಹೋ, ಖಾಂಡಿಕ್ಯನಿಗೆ ನಾನು ಗುರುದಕ್ಷಿಣೆಯನ್ನು ಸಮರ್ಪಿಸಿಲ್ಲ!' ಎಂಬುದು ರಾಜನ ಸ್ಮರಣೆಗೆ ಬಂದಿತು! (37-39). ಒಡನೆಯೇ ಆತನು ರಥವನ್ನೇರಿ ಖಾಂಡಿಕ್ಯನಿದ್ದ ದುರ್ಗಮವಾದ ಅರಣ್ಯಕ್ಕೆ ಮತ್ತೆ ಹೋದನು. ಆಯುಧಧಾರಿಯಾಗಿದ್ದ ಕೇಶಿಧ್ವಜನನ್ನು ನೋಡಿ, ಅವನನ್ನು ಕೊಲ್ಲಬೇಕೆಂದು ನಿಶ್ಚಯಿಸಿ ಖಾಂಡಿಕ್ಯನು ಸಜ್ಜಾದನು! (40-41). ಆಗ ಕೇಶಿಧ್ವಜರಾಜನು "ಅಯ್ಯೋ–ಖಾಂಡಿಕ್ಯ ನಿನಗೆ ಯಾವ ಕೆಡುಕನ್ನೂ ಮಾಡಲು ಬಂದಿಲ್ಲ, ಕೋಪಿಸಿಕೊಳ್ಳಬೇಡ. ಗುರುವಿಗೆ ದಕ್ಷಿಣೆಯನ್ನು ಕೊಡಬೇಕೆಂಬ ಉದ್ದೇಶದಿಂದ ನಾನು ಬಂದಿದ್ದೇನೆಂದು ತಿಳಿ (42). ನಿನ್ನ ಉಪದೇಶ ವನ್ನನುಸರಿಸಿ ಯಾಗವನ್ನು ನಾನು ಸಮೀಚೀನವಾಗಿ ಪೂರೈಸಿದ್ದೇನೆ. ಆದ್ದರಿಂದ ನಿನಗೆ ಗುರುದಕ್ಷಿಣೆಯನ್ನೀಯಲು ಉದ್ದೇಶಿಸಿದ್ದೇನೆ. ಏನು ಬೇಕೆಂಬುದನ್ನು ಕೇಳಿಕೊ" ಎಂದನು (43). ಖಾಂಡಿಕ್ಯನು ಮತ್ತೆ ಮಂತ್ರಿಗಳೊಡನೆ "ಈತನು ಗುರುದಕ್ಷಿಣೆಯನ್ನೀಯಲು ಉದ್ದೇಶಿಸಿದ್ದಾನೆ. ಇವನಲ್ಲಿ ಏನನ್ನು ಕೇಳಿಕೊಳ್ಳಲಿ?"

**ತಮೂಚುರ್ಮಂತ್ರಿಣೋ ರಾಜ್ಯಮಶೇಷಂ ಪ್ರಾರ್ಥ್ಯತಾಮಯಮ್।**
**ಶತ್ರುಭಿಃ ಪ್ರಾರ್ಥ್ಯತೇ ರಾಜ್ಯಮನಾಯಾಸಿತಸೈನಿಕೈಃ॥ 45**

**ಪ್ರಹಸ್ಯ ತಾನಾಹ ನೃಪಸ್ಸ ಖಾಂಡಿಕ್ಯೋ ಮಹಾಮತಿಃ।**
**ಸ್ವಲ್ಪಕಾಲಂ ಮಹೀಪಾಲ್ಯಂ ಮಾದೃಶೈಃ ಪ್ರಾರ್ಥ್ಯತೇ ಕಥಮ್॥ 46**

**ಏವಮೇತದ್ಭವಂತೋಽತ್ರ ಹ್ಯರ್ಥಸಾಧನಮಂತ್ರಿಣಃ।**
**ಪರಮಾರ್ಥಃ ಕಥಂ ಕೋಽತ್ರ ಯೂಯಂ ನಾತ್ರ ವಿಚಕ್ಷಣಾಃ॥ 47**

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾ ಸಮುಪೇತ್ಯೈನಂ ಸ ತು ಕೇಶಿಧ್ವಜಂ ನೃಪಃ।**
**ಉವಾಚ ಕಿಮವಶ್ಯಂ ತ್ವಂ ದದಾಸಿ ಗುರುದಕ್ಷಿಣಾಮ್॥ 48**

**ಬಾಢಮಿತ್ಯೇವ ತೇನೋಕ್ತಃ ಖಾಂಡಿಕ್ಯಸ್ತಮಥಾಬ್ರವೀತ್।**
**ಭವಾನಧ್ಯಾತ್ಮವಿಜ್ಞಾನಪರಮಾರ್ಥವಿಚಕ್ಷಣಃ॥ 49**

---

ಎಂದು ಸಮಾಲೋಚಿಸಿದನು. ಆಗ ಮಂತ್ರಿಗಳು "ಅಶೇಷ ರಾಜ್ಯವನ್ನು ಗುರುದಕ್ಷಿಣೆಯಾಗಿ ಕೊಡಬೇಕೆಂದು ಕೇಳಬೇಕು. ತಮ್ಮ ಸೈನಿಕರಿಗೆ ಕಷ್ಟವಾಗದಂತೆ ರಾಜ್ಯವು ಬರಬೇಕೆಂದು ವೈರಿಗಳು ಬಯಸತಕ್ಕದ್ದು" ಎಂದರು (44-45). ಮಹಾಪ್ರಾಜ್ಞನಾದ ಖಾಂಡಿಕ್ಯರಾಜನು ಗಟ್ಟಿಯಾಗಿ ನಕ್ಕು ಅವರನ್ನು ಕುರಿತು "ಅಲ್ಪಕಾಲವಿರುವ ರಾಜ್ಯಪದವಿಯನ್ನು ನನ್ನಂತಹವರು ಹೇಗೆ ಕೇಳಿಕೊಂಡಾರು? ಲೌಕಿಕವಾದ ಅರ್ಥಸಾಧನೆಯ ವಿಷಯದಲ್ಲಿ ನೀವು ಹೀಗೆ ಹೇಳತಕ್ಕದು ಸಹಜ. ಆದರೆ ಪರಮಾರ್ಥ ಯಾವುದು? ಅದನ್ನು ಪಡೆಯುವುದು ಹೇಗೆ?—ಎಂಬ ವಿಚಾರದಲ್ಲಿ ನೀವು ವಿಚಕ್ಷಣರಲ್ಲ" ಎಂದನು (46-47). ಹೀಗೆ ನುಡಿದು ಆ ರಾಜನು ಕೇಶಿಧ್ವಜನ ಸಮೀಪಕ್ಕೆ ಹೋಗಿ "ಸತ್ಯವಾಗಿಯೂ ನೀನು ಗುರುದಕ್ಷಿಣೆಯನ್ನು ಒಪ್ಪಿಸುವೆಯಾ?" ಎಂದು ಕೇಳಿದನು. "ಸತ್ಯವಾಗಿಯೂ ಒಪ್ಪಿಸುವೆನು" ಎಂದು ಆತನು ತಿಳಿಸಲಾಗಿ ಖಾಂಡಿಕ್ಯನು ಕೇಶಿಧ್ವಜನನ್ನು ಕುರಿತು "ನೀನು ಪರಮಾರ್ಥವಾದ ಅಧ್ಯಾತ್ಮ ವಿದ್ಯೆಯಲ್ಲಿ ವಿಚಕ್ಷಣನಾಗಿದ್ದೀಯೆ, ನನಗೆ ನೀನು ಗುರುದಕ್ಷಿಣೆಯನ್ನು

**ಯದಿ ಚೇದ್ದೀಯತೇ ಮಹ್ಯಂ ಭವತಾ ಗುರುನಿಷ್ಕ್ರಯಃ।**
**ತತ್ ಕ್ಲೇಶಪ್ರಶಮಾಯಾಲಂ ಯತ್ಕರ್ಮ ತದುದೀರಯ॥** 50

ಇತಿ ಶ್ರೀವಿಷ್ಣುಪುರಾಣೇ ಷಷ್ಠಾಂಶೇ ಷಷ್ಠೋಽಧ್ಯಾಯಃ

---

ಕೊಡುವುದಾದರೆ, ಸಮಸ್ತ ಸಂಸಾರಕ್ಲೇಶಗಳನ್ನೂ ಪ್ರಶಮನಗೊಳಿಸಬಲ್ಲ ಕರ್ಮ* ಯಾವುದು? ಅದನ್ನು ಉಪದೇಶಿಸು" ಎಂದನು (48-50).

ಇಲ್ಲಿಗೆ ಶ್ರೀವಿಷ್ಣುಪುರಾಣದ ಷಷ್ಠಾಂಶದಲ್ಲಿ
ಆರನೆಯ ಅಧ್ಯಾಯ ಮುಗಿಯಿತು.



---

* ಖಾಂಡಿಕ್ಯನು ಕರ್ಮನಿಷ್ಠನಾದ್ದರಿಂದ ಕರ್ಮಶಬ್ದವನ್ನೇ ಸಂಸ್ಕಾರಬಲದಿಂದ ಬಳಸಿದ್ದಾನೆ.

## ಸಪ್ತಮೋಽಧ್ಯಾಯಃ

*ಕೇಶಿಧ್ವಜ ಉವಾಚ:*

**ನ ಪ್ರಾರ್ಥಿತಂ ತ್ವಯಾ ಕಸ್ಮಾದಸ್ಮದ್ರಾಜ್ಯಮಕಂಟಕಮ್।**
**ರಾಜ್ಯಲಾಭಾದ್ವಿನಾ ನಾನ್ಯತ್ ಕ್ಷತ್ರಿಯಾಣಾಮತಿಪ್ರಿಯಮ್॥** 1

*ಖಾಂಡಿಕ್ಯ ಉವಾಚ:*

**ಕೇಶಿಧ್ವಜ ನಿಬೋಧ ತ್ವಂ ಮಯಾ ನ ಪ್ರಾರ್ಥಿತಂ ಯತಃ।**
**ರಾಜ್ಯಮೇತದಶೇಷಂ ತೇ ಯತ್ರ ಗೃಧ್ನಂತ್ಯಪಂಡಿತಾಃ॥** 2

**ಕ್ಷತ್ರಿಯಾಣಾಮಯಂ ಧರ್ಮೋ ಯತ್ಪ್ರಜಾಪರಿಪಾಲನಮ್।**
**ವಧಶ್ಚ ಧರ್ಮಯುದ್ಧೇನ ಸ್ವರಾಜ್ಯಪರಿಪಂಥಿನಾಮ್॥** 3

---

## ಅಧ್ಯಾಯ 7

ಕೇಶಿಧ್ವಜನು ಖಾಂಡಿಕ್ಯನಿಗೆ ಬ್ರಹ್ಮಯೋಗವನ್ನು ಉಪದೇಶಿಸುವುದು.

ಪರಾಶರಮುನಿಗಳು ಹೇಳಿದರು: ಮೈತ್ರೇಯ, ಆಗ ಕೇಶಿಧ್ವಜನು ಖಾಂಡಿಕ್ಯನನ್ನು ಕುರಿತು "ಖಾಂಡಿಕ್ಯ, ನಿಷ್ಕಂಟವಾಗಿ ನಮ್ಮ ರಾಜ್ಯವು ನಿನಗೆ ದೊರೆಯಬೇಕೆಂದು ಏಕೆ ನೀನು ಕೇಳಿಕೊಳ್ಳಲಿಲ್ಲ? ಕ್ಷತ್ರಿಯರಿಗೆ ರಾಜ್ಯ ಲಾಭಕ್ಕಿಂತ ಅತ್ಯಂತಪ್ರಿಯವಾದದ್ದು ಇನ್ನೊಂದಿಲ್ಲವಷ್ಟೆ?" ಎಂದು ಪ್ರಶ್ನಿಸಿದನು* (1). ಅದಕ್ಕೆ ಖಾಂಡಿಕ್ಯನು ಇಂತೆಂದನು: "ಕೇಶಿಧ್ವಜ, ನಿನ್ನ ಸಮಸ್ತರಾಜ್ಯವನ್ನೂ ನನಗೆ ಕೊಡಬೇಕೆಂದು ಏಕೆ ನಾನು ಕೇಳಲಿಲ್ಲವೆಂಬುದನ್ನು ಹೇಳುತ್ತೇನೆ, ಕೇಳು. ಅವಿವೇಕಿಗಳು ರಾಜ್ಯಕ್ಕಾಗಿ ಆಸೆ ಪಡುತ್ತಾರೆ (2). ಪ್ರಜಾಪರಿಪಾಲನೆಯೂ ಸ್ವರಾಜ್ಯಕ್ಕೆ ವಿರೋಧಿಗಳಾದವರನ್ನು ಧರ್ಮಯುದ್ಧದಿಂದ ವಧಿಸುವುದು ಕ್ಷತ್ರಿಯರ ಧರ್ಮವೆಂಬದೇನೋ ನಿಜ. ಆದರೆ ನನ್ನ ರಾಜ್ಯವನ್ನು ನೀನು

---

* ತತ್ತ್ವಜ್ಞಾನವನ್ನು ಪಡೆಯಲು ಆವಶ್ಯಕಗಳಾದ ವಿವೇಕವೈರಾಗ್ಯಗಳು ಖಾಂಡಿಕ್ಯನಲ್ಲಿವೆಯೆ?—ಎಂದು ತಿಳಿಯಲು ಈ ಪ್ರಶ್ನೆ.

**ತತ್ರಾಸಕ್ತಸ್ಯ ಮೇ ದೋಷೋ ನೈವಾಸ್ತ್ಯಪಹೃತೇ ತ್ವಯಾ।**
**ಬಂಧಾಯೈವ ಭವತ್ಯೇಷಾ ಹ್ಯವಿದ್ಯಾಪ್ಯಕ್ರಮೋಜ್ಝಿತಾ॥ 4**

**ಜನ್ಮೋಪಭೋಗಲಿಪ್ಸಾರ್ಥಮಿಯಂ ರಾಜ್ಯಸ್ಪೃಹಾ ಮಮ।**
**ಅನ್ಯೇಷಾಂ ದೋಷಜಾ ಸೈವ ಧರ್ಮಂ ವೈ ನಾನುರುಧ್ಯತೇ॥ 5**

**ನ ಯಾಚ್ಞಾ ಕ್ಷತ್ರಬಂಧೂನಾಂ ಧರ್ಮಾಯೈತತ್ಸತಾಂ ಮತಮ್।**
**ಅತೋ ನ ಯಾಚಿತಂ ರಾಜ್ಯಮವಿದ್ಯಾಂತರ್ಗತಂ ತವ॥ 6**

**ರಾಜ್ಯೇ ಗೃಧ್ನಂತ್ಯವಿದ್ವಾಂಸೋ ಮಮತ್ವಾಹೃತಚೇತಸಃ।**
**ಅಹಂಮಾನಮಹಾಪಾನಮದಮತ್ತಾ ನ ಮಾದೃಶಾಃ॥ 7**

---

ಅಪಹರಿಸಿದ ಮೇಲೆ ರಾಜಧರ್ಮದಲ್ಲಿ ಆಸಕ್ತಿರಹಿತನಾದ* ನನಗೆ ಅದರಿಂದ ದೋಷವೇನೂ ಇಲ್ಲ. ಈ ರಾಜಕರ್ಮವು ಅವಿದ್ಯಾಮಯವಾಗಿದ್ದರೂ ಸಹ ಅಕ್ರಮವಾಗಿ (ರಾಜ್ಯಾಧಿಕಾರವಿದ್ದಾಗಲೂ) ತ್ಯಜಿಸಿದರೆ ಮಾತ್ರ ಬಂಧಕ್ಕೆ ಕಾರಣವಾಗಿಯೇ ಆಗುತ್ತದೆ** (3-4). ನನಗಿದ್ದ ರಾಜ್ಯದ ಆಸೆಯು ಜನ್ಮಾಂತರದ ಫಲವಾಗಿ ಬಂದಿದ್ದ ರಾಜಭೋಗದ ಪ್ರಾಪ್ತಿಗಾಗಿ ಮಾತ್ರ ಆಗಿತ್ತು. ಅನ್ಯರಿಗಾದರೋ ರಾಗಲೋಭಾದಿದೋಷದಿಂದ ರಾಜಭೋಗದ ಬಯಕೆ ಹುಟ್ಟಿರುತ್ತದೆ. ಆ ಬಯಕೆ ಧರ್ಮಾನುರೋಧಿಯಾದ್ದಲ್ಲ. ಅಲ್ಲದೆ ಯಾಚನೆ ಯೆನ್ನುವುದು ಕ್ಷತ್ರಿಯರಿಗೆ ಯೋಗ್ಯವಾದ ಧರ್ಮವಲ್ಲ. ಅದು ಸಜ್ಜನರು ಒಪ್ಪಿದ ಸಂಗತಿ. ಆದ್ದರಿಂದ ಅವಿದ್ಯೆಗೆ ಸಂಬಂಧಿಸಿದ ಈ ರಾಜ್ಯವು ಬೇಕೆಂದು ನಿನ್ನಲ್ಲಿ ನಾನು ಯಾಚಿಸಲಿಲ್ಲ (5-6). 'ನನ್ನದು, ನನ್ನದು' ಎಂಬ ಮಮತ್ವವು ಯಾರ ಮನಸ್ಸನ್ನು ಸೆಳೆಯುತ್ತದೆಯೋ ಅಂತಹ ಅವಿವೇಕಿಗಳು ರಾಜ್ಯಕ್ಕಾಗಿ ಆಸೆ ಪಡುತ್ತಾರೆ. ಅವರು ಅಹಂಕಾರವೆಂಬ ಮಹಾಮದ್ಯವನ್ನು ಕುಡಿದು ಮದಿಸಿ ದವರು. ನನ್ನಂಥವರು ಆಸೆಪಡುವುದಿಲ್ಲ" ಎಂದನು (7). ಆಗ ಕೇಶಿಧ್ವಜ

* 'ತತ್ರಾಶಕ್ತಸ್ಯ' ಎಂದು ಪಾಠಾಂತರ ಉಂಟು. ಆಗ 'ರಾಜಧರ್ಮ ಪಾಲನೆಯಲ್ಲಿ ಅಶಕ್ತನಾದ ನನಗೆ' ಎಂದರ್ಥ.

** ರಾಜ್ಯಪಾಲನೆಯು ಬಂಧಕವಾದರೂ ರಾಜಧರ್ಮವೇ. ರಾಜ್ಯಾಧಿಕಾರ ವಿಲ್ಲದಾಗ ರಾಜಧರ್ಮವನ್ನು ತ್ಯಜಿಸಿದರೂ ಅಧರ್ಮವಲ್ಲ.

*ಶ್ರೀಪರಾಶರ ಉವಾಚ:*

**ಪೃಷ್ಟಸ್ಸಾಧ್ವಿತಿ ಪ್ರಾಹ ತತಃ ಕೇಶಿಧ್ವಜೋ ನೃಪಃ।**
**ಖಾಂಡಿಕ್ಯಜನಕಂ ಪ್ರೀತ್ಯಾ ಶ್ರೂಯತಾಂ ವಚನಂ ಮಮ॥** 8

**ಅಹಂ ಹ್ಯವಿದ್ಯಯಾ ಮೃತ್ಯುಂ ತರ್ತುಕಾಮಃ ಕರೋಮಿ ವೈ।**
**ರಾಜ್ಯಂ ಯಾಗಾಂಶ್ಚ ವಿವಿಧಾನ್ ಭೋಗೈಃ ಪುಣ್ಯಕ್ಷಯಂ ತಥಾ॥** 9

**ತದಿದಂ ತೇ ಮನೋ ದಿಷ್ಟ್ಯಾ ವಿವೇಕೈಶ್ವರ್ಯತಾಂ ಗತಮ್।**
**ತತ್ ಶ್ರೂಯತಾಮವಿದ್ಯಾಯಾಸ್ಸ್ವರೂಪಂ ಕುಲನಂದನ॥** 10

**ಅನಾತ್ಮನ್ಯಾತ್ಮಬುದ್ಧಿರ್ಯಾ ಚಾಸ್ವೇ ಸ್ವಮಿತಿ ಯಾ ಮತಿಃ।**
**ಸಂಸಾರತರುಸಂಭೂತಿಬೀಜಮೇತದ್ ದ್ವಿಧಾ ಸ್ಥಿತಮ್॥** 11

---

ರಾಜನು ಪರಮ ಸಂತೋಷದಿಂದ 'ಸರಿ' ಎಂದು ನುಡಿದು, ಖಾಂಡಿಕ್ಯ ಜನಕನಿಗೆ ಪ್ರೀತಿಪೂರ್ವಕವಾಗಿ ಹೀಗೆ ಹೇಳಿದನು: "ನಾನೂ ಸಹ ಅವಿದ್ಯಾ ಮಯವಾದ ಕರ್ಮದಿಂದ (ಸತ್ತ್ವಶುದ್ಧಿದ್ವಾರಾ) ಸಂಸಾರಮೃತ್ಯುವನ್ನು * ದಾಟಬೇಕೆಂದು ರಾಜ್ಯಪಾಲನೆಯನ್ನು ವಿವಿಧ ಯಾಗಗಳನ್ನು ನಡೆಸುತ್ತಿದ್ದೇನೆ. ಸುಖಭೋಗಗಳಿಂದ ಪುಣ್ಯಕ್ಷಯವನ್ನು ಮಾಡಿಕೊಳ್ಳುತ್ತಿದ್ದೇನೆ (8-9). ನಿನ್ನ ಅಂತಃಕರಣವಾದರೋ ಭಾಗ್ಯವಶದಿಂದ ವಿವೇಕದ ಪರಮಾವಧಿಯನ್ನು ತಲುಪಿದೆ. ಹೇ ಕುಲನಂದನ, ಆದ್ದರಿಂದ ಅವಿದ್ಯೆಯ ಸ್ವರೂಪವನ್ನು ಹೇಳುವೆನು, ಕೇಳು. ಅನಾತ್ಮವಾದ ದೇಹಾದಿಗಳಲ್ಲಿ ಆತ್ಮಬುದ್ಧಿ, ತನ್ನದಲ್ಲದ ಗೃಹಾದಿಗಳಲ್ಲಿ ಮಮತ್ವಾಬುದ್ಧಿ—ಹೀಗೆ ಅವಿದ್ಯೆಯು ಎರಡು ಬಗೆಯಾಗಿದೆ. ಈ ಅವಿದ್ಯೆಯೇ ಸಂಸಾರ ವೃಕ್ಷವು ಹುಟ್ಟುವುದಕ್ಕೆ ಬೀಜವಾಗಿದೆ § (10-11).

* ಹೋಲಿಸಿ: 'ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ'
—(ಈಶ. 11)

§ ಅನಿತ್ಯಾಶುಚಿದುಃಖಾನಾತ್ಮಸು ನಿತ್ಯಶುಚಿ ಸುಖಾತ್ಮಖ್ಯಾತಿರವಿದ್ಯಾ
—ಯೋಗಸೂತ್ರ

**ಪಂಚಭೂತಾತ್ಮಕೇ ದೇಹೇ ದೇಹೀ ಮೋಹತಮೋವೃತಃ।**
**ಅಹಂ ಮಮೈತದಿತ್ಯುಚ್ಚೈಃ ಕುರುತೇ ಕುಮತಿರ್ಮತಿಮ್॥ 12**

**ಆಕಾಶವಾಯ್ವಗ್ನಿಜಲಪೃಥಿವೀಭ್ಯಃ ಪೃಥಕ್ ಸ್ಥಿತೇ।**
**ಆತ್ಮನ್ಯಾತ್ಮಮಯಂ ಭಾವಂ ಕಃ ಕರೋತಿ ಕಲೇವರೇ॥ 13**

**ಕಲೇವರೋಪಭೋಗ್ಯಂ ಹಿ ಗೃಹಕ್ಷೇತ್ರಾದಿಕಂ ಚ ಕಃ।**
**ಅದೇಹೇ ಹ್ಯಾತ್ಮನಿ ಪ್ರಾಜ್ಞೋ ಮಮೇದಮಿತಿ ಮನ್ಯತೇ॥ 14**

**ಇತ್ಥಂ ಚ ಪುತ್ರಪೌತ್ರೇಷು ತದ್ದೇಹೋತ್ಪಾದಿತೇಷು ಕಃ।**
**ಕರೋತಿ ಪಂಡಿತಸ್ಸ್ವಾಮ್ಯಮನಾತ್ಮನಿ ಕಲೇವರೇ॥ 15**

**ಸರ್ವಂ ದೇಹೋಪಭೋಗಾಯ ಕುರುತೇ ಕರ್ಮ ಮಾನವಃ।**
**ದೇಹಶ್ಚಾನ್ಯೋ ಯದಾ ಪುಂಸಸ್ತದಾ ಬಂಧಾಯ ತತ್ಪರಮ್॥ 16**

---

ಅಜ್ಞಾನವೆಂಬ ಕತ್ತಲಿನಿಂದ ಆವೃತನಾದ ಜೀವನು ತಪ್ಪು ತಿಳಿವಳಿಕೆಯನ್ನು ತಳೆದು, ಪಂಚಭೂತಾತ್ಮಕವಾದ ದೇಹದಲ್ಲಿ 'ನಾನು-ನನ್ನದು' ಎಂಬ ಬುದ್ಧಿಯನ್ನು ಗಟ್ಟಿಯಾಗಿ ಇಟ್ಟುಕೊಂಡಿರುತ್ತಾನೆ (12). ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಈ ಪಂಚಭೂತಗಳಿಂದ ಆತ್ಮನು ಅತಿರಿಕ್ತನಾಗಿರಲಾಗಿ, ಯಾವ ಬುದ್ಧಿಶಾಲಿಯು ಈ ಕಳೇಬರದಲ್ಲಿ ಆತ್ಮಬುದ್ಧಿಯನ್ನಿಟ್ಟಾನು? ಆತ್ಮನು ದೇಹಾತಿರಿಕ್ತನೆಂದು ಸಿದ್ಧವಾಗಿರುವಾಗ ಕೇವಲ ದೇಹಭೋಗ್ಯವಾದ ಮನೆ, ಹೊಲ—ಮೊದಲಾದ್ದನ್ನು ಯಾವ ಪ್ರಾಜ್ಞನು ನನ್ನದೆಂದು ತಿಳಿದಾನು? (13-14). ಹೀಗೆ ಆತ್ಮನು ದೇಹಾತಿರಿಕ್ತನಾದ ಮೇಲೆ, ಆ ದೇಹದಿಂದ ಉತ್ಪಾದಿತರಾದ ಪುತ್ರಪೌತ್ರಾದಿಗಳಲ್ಲಿ—ಅನಾತ್ಮವಾದ ಅವರ ದೇಹದಲ್ಲಿ ಯಾವ ಪಂಡಿತನು ನನ್ನದೆಂಬ ಬುದ್ಧಿಯನ್ನು ತಳೆದಾನು? (15). ಮಾನವನು ಸಕಲ ಕರ್ಮಗಳನ್ನು ದೇಹದ ಭೋಗಕ್ಕಾಗಿ ಮಾಡುತ್ತಾನೆ. ಆತ್ಮನಿಗಿಂತ ದೇಹವು ಭಿನ್ನವಾಗಿರುವಾಗ, ಆ ಕರ್ಮವೆಲ್ಲವೂ (ದೇಹೋತ್ಪತ್ತಿರೂಪವಾದ) ಬಂಧಕ್ಕೆ ನಿಮಿತ್ತವಾಗುತ್ತದೆ (16). ಮಣ್ಣಿನ ಮನೆಯು ಮಣ್ಣುನೀರುಗಳ ಲೇಪನದಿಂದ

**ಮೃಣ್ಮಯಂ ಹಿ ಯಥಾ ಗೇಹಂ ಲಿಪ್ಯತೇ ವೈ ಮೃದಂಭಸಾ।**
**ಪಾರ್ಥಿವೋಽಯಂ ತಥಾ ದೇಹೋ ಮೃದಂಬ್ವಾಲೇಪನಸ್ಥಿತಃ॥ 17**

**ಪಂಚಭೂತಾತ್ಮಕೈರ್ಭೋಗೈಃ ಪಂಚಭೂತಾತ್ಮಕಂ ವಪುಃ।**
**ಆಪ್ಯಾಯತೇ ಯದಿ ತತಃ ಪುಂಸೋ ಭೋಗೋಽತ್ರ ಕಿಂ ಕೃತಃ॥ 18**

**ಅನೇಕಜನ್ಮಸಾಹಸ್ರೀಂ ಸಂಸಾರಪದವೀಂ ವ್ರಜನ್।**
**ಮೋಹಶ್ರಮಂ ಪ್ರಯಾತೋಽಸೌ ವಾಸನಾರೇಣುಗುಂಠಿತಃ॥ 19**

**ಪ್ರಕ್ಷಾಲ್ಯತೇ ಯದಾ ಸೋಽಸ್ಯ ರೇಣುರ್ಜ್ಞಾನೋಷ್ಣವಾರಿಣಾ।**
**ತದಾ ಸಂಸಾರಪಾಂಥಸ್ಯ ಯಾತಿ ಮೋಹಶ್ರಮಶ್ಶಮಮ್॥ 20**

**ಮೋಹಶ್ರಮೇ ಶಮಂ ಯಾತೇ ಸ್ವಸ್ಥಾಂತಃಕರಣಃ ಪುಮಾನ್।**
**ಅನನ್ಯಾತಿಶಯಾಬಾಧಂ ಪರಂ ನಿರ್ವಾಣಮೃಚ್ಛತಿ॥ 21**

---

ಹೇಗೆ ನಿಂತಿರುತ್ತದೆಯೋ, ಹಾಗೆ ಈ ಮಣ್ಣಿನ ದೇಹವು ಅನ್ನಪಾನಗಳೆಂಬ ಮಣ್ಣುನೀರುಗಳ ಲೇಪನದಿಂದ ಉಳಿದುಕೊಂಡಿರುತ್ತದೆ (17). ಪಂಚ ಭೂತಾತ್ಮಕವಾದ ಶರೀರವು ಪಂಚಭೂತಾತ್ಮಕಗಳಾದ ಶಬ್ದಸ್ಪರ್ಶಾದಿಭೋಗ ಗಳಿಂದ* ಆನಂದಿಸಿ ಪುಷ್ಟವಾಗುತ್ತಿರುವಾಗ ಆತ್ಮನಿಗೆ ಯಾವುದರಿಂದ ಭೋಗ ಲಭಿಸಿತು? (ಯಾವುದರಿಂದಲೂ ಅಲ್ಲ). (ನಾನು, ನನ್ನದು—ಎಂಬ) ಮಿಥ್ಯಾಜ್ಞಾನಸಂಸ್ಕಾರದ ಧೂಳಿಗಳಿಂದ ಆಚ್ಛಾದಿತನಾದ ಜೀವನು ಅನೇಕ ಸಾವಿರ ಜನ್ಮಗಳಿಂದ ಸಂಸಾರಮಾರ್ಗದಲ್ಲಿ ನಡೆಯುತ್ತ ನಡೆಯುತ್ತ ಮೋಹಕ್ಕೆ ಒಳಗಾಗಿ ಆಯಾಸಪಡುತ್ತಿದ್ದಾನೆ (18-19). ಈ ಧೂಳಿಯನ್ನು ತತ್ತ್ವಜ್ಞಾನ ವೆಂಬ ಬಿಸಿನೀರಿನಿಂದ ಚೆನ್ನಾಗಿ ತೊಳೆದಾಗ, ಈ ಸಂಸಾರಪಥಿಕನ ಮೋಹಜನ್ಯವಾದ ಆಯಾಸವು ಶಾಂತವಾಗುತ್ತದೆ. ಈ ಮೋಹಶ್ರಮವು ಶಾಂತವಾದ ಮೇಲೆ ಮನುಷ್ಯನ ಅಂತಃಕರಣವು ಸ್ವಸ್ವರೂಪದಲ್ಲಿ ನಿಂತು ಅವನು ಸ್ವಸ್ಥಚಿತ್ತನಾಗುತ್ತಾನೆ. ಆಗ ಈ ಮನುಷ್ಯನು ನಿರತಿಶಯವಾದ ಉಪದ್ರವರಹಿತ ವಾದ ಮೋಕ್ಷವೆಂಬ ಪರಮಸುಖವನ್ನು ಪಡೆಯುತ್ತಾನೆ (20-21). ಜ್ಞಾನ

* ಶರೀರ, ಇಂದ್ರಿಯ, ಮನಸ್ಸು, ಶಬ್ದಸ್ಪರ್ಶಾದಿ ವಿಷಯಗಳು—ಇವೆಲ್ಲ ಪಂಚ ಭೂತಾತ್ಮಕವಾದವು. ವಿಷಯಸುಖವನ್ನು ಅನುಭವಿಸತಕ್ಕದ್ದು ಬುದ್ಧಿ, ಆತ್ಮನಲ್ಲ.

**ನಿರ್ವಾಣಮಯ ಏವಾಯಮಾತ್ಮಾ ಜ್ಞಾನಮಯೋಽಮಲಃ।**
**ದುಃಖಾಜ್ಞಾನಮಯಾ ಧರ್ಮಾಃ ಪ್ರಕೃತೇಸ್ತೇ ತು ನಾತ್ಮನಃ॥ 22**

**ಜಲಸ್ಯ ನಾಗ್ನಿಸಂಸರ್ಗಃ ಸ್ಥಾಲೀಸಂಗಾತ್ತಥಾಽಪಿ ಹಿ।**
**ಶಬ್ದೋದ್ರೇಕಾದಿಕಾನ್ ಧರ್ಮಾಂಸ್ತತ್ಕರೋತಿ ಯಥಾ ನೃಪ॥ 23**

**ತಥಾತ್ಮಾ ಪ್ರಕೃತೇಸ್ಸಂಗಾದಹಮ್ಮಾನಾದಿದೂಷಿತಃ।**
**ಭಜತೇ ಪ್ರಾಕೃತಾನ್ ಧರ್ಮಾನನ್ಯಸ್ತೇಭ್ಯೋ ಹಿ ಸೋಽವ್ಯಯಃ॥ 24**

**ತದೇತತ್ಕಥಿತಂ ಬೀಜಮವಿದ್ಯಾಯಾ ಮಯಾ ತವ।**
**ಕ್ಲೇಶಾನಾಂ ಚ ಕ್ಷಯಕರಂ ಯೋಗಾದನ್ಯನ್ನ ವಿದ್ಯತೇ॥ 25**

---

ಸ್ವರೂಪನೂ ನಿರ್ಮಲನೂ ಆದ ಈ ಆತ್ಮನು ನಿತ್ಯಮುಕ್ತಸುಖಸ್ವರೂಪನೇ ಆಗಿದ್ದಾನೆ. ದುಃಖ, ಅಜ್ಞಾನ ಮುಂತಾದ ಧರ್ಮಗಳು ಪ್ರಕೃತಿಗೆ ಸಂಬಂಧಿಸಿದವು; ಆತ್ಮಸಂಬಂಧಿಗಳಲ್ಲ (22). ಪಾತ್ರೆಯಲ್ಲಿರುವ ನೀರಿಗೆ ನೇರವಾಗಿ ಅಗ್ನಿಸಂಪರ್ಕವಾಗುವುದಿಲ್ಲ. ಆದರೂ ಪಾತ್ರೆಗಾದ ಅಗ್ನಿಸಂಪರ್ಕದಿಂದ ಪಾತ್ರೆಯಲ್ಲಿರುವ ನೀರು ಶಬ್ದ ಮಾಡುತ್ತದೆ, ಉಕ್ಕುತ್ತದೆ; ಉಷ್ಣತೆ ಮುಂತಾದ ಧರ್ಮಗಳನ್ನು ಪಡೆದುಕೊಳ್ಳುತ್ತದೆ (23). ಅದರಂತೆಯೇ, ಕೇಶಿಧ್ವಜ, ಆತ್ಮನೂ ಸಹ ಪ್ರಕೃತಿಯ ಸಂಪರ್ಕದಿಂದ ಅಹಂಕಾರಾದಿ ದೂಷಿತನಾಗಿ ಪ್ರಕೃತಿ ಧರ್ಮಗಳನ್ನು ಪಡೆಯುತ್ತಾನೆ. ಅವ್ಯಯನಾದ ಆತ್ಮನು ವಾಸ್ತವದಲ್ಲಿ ಆ ಧರ್ಮಗಳಿಂದ ಅನ್ಯನೇ ಸರಿ* (24). ಖಾಂಡಿಕ್ಯ, ಈ ಪ್ರಕಾರವಾಗಿ ಅವಿದ್ಯೆಗೆ ಬೀಜವಾದ ಮೋಹ ತಮಸ್ಸನ್ನು ನಿನಗೆ ಹೇಳಿದ್ದೇನೆ. (ಈ ಅವಿದ್ಯೆಯಿಂದ ಪ್ರಾಪ್ತವಾಗುವ) ಪಂಚಕ್ಲೇಶಗಳನ್ನು ಹೋಗಲಾಡಿಸತಕ್ಕದ್ದು ಯೋಗಕ್ಕಿಂತ ಇನ್ನೊಂದಿಲ್ಲ" ಎಂದನು (25). ಆಗ ಖಾಂಡಿಕ್ಯನು "ಮಹಾಭಾಗ—ಕೇಶಿಧ್ವಜ, ನೀನು

---

* ಅಗ್ನಿಯ ಉಷ್ಣತೆ ನೀರಿನಲ್ಲಿ ಕಾಣುತ್ತದೆ. ಅದು ನೀರಿನ ಸ್ವಧರ್ಮವಲ್ಲ. ಸ್ವಧರ್ಮವಾಗಿದ್ದರೆ ಅದು ಉಷ್ಣತೆಯನ್ನು ಕಳೆದುಕೊಂಡು ತಣ್ಣಗಾಗುತ್ತಿರಲಿಲ್ಲ. ಹಾಗೆಯೇ ಬುದ್ಧಿ ಧರ್ಮಗಳಾದ ದುಃಖ ಅಜ್ಞಾನಗಳು ಆತ್ಮನಲ್ಲಿರುವಂತೆ ತೋರುತ್ತವೆ. ಈ ತೋರಿಕೆ ಭ್ರಮೆಯೇ ಸರಿ.

*ಖಾಂಡಿಕ್ಯ ಉವಾಚ:*

**ತಂ ತು ಬ್ರೂಹಿ ಮಹಾಭಾಗ ಯೋಗಂ ಯೋಗವಿದುತ್ತಮ।**
**ವಿಜ್ಞಾತಯೋಗಶಾಸ್ತ್ರಾರ್ಥಸ್ತ್ವಮಸ್ಯಾಂ ನಿಮಿಸಂತತೌ॥** 26

*ಕೇಶಿಧ್ವಜ ಉವಾಚ:*

**ಯೋಗಸ್ವರೂಪಂ ಖಾಂಡಿಕ್ಯ ಶ್ರೂಯತಾಂ ಗದತೋ ಮಮ।**
**ಯತ್ರ ಸ್ಥಿತೋ ನ ಚ್ಯವತೇ ಪ್ರಾಪ್ಯ ಬ್ರಹ್ಮಲಯಂ ಮುನಿಃ॥** 27

**ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ।**
**ಬಂಧಾಯವಿಷಯಾಸಂಗಿ ಮುಕ್ತ್ಯೈ ನಿರ್ವಿಷಯಂ ಮನಃ॥** 28

**ವಿಷಯೇಭ್ಯಸ್ಸಮಾಹೃತ್ಯ ವಿಜ್ಞಾನಾತ್ಮಾ ಮನೋ ಮುನಿಃ।**
**ಚಿಂತಯೇನ್ಮುಕ್ತಯೇ ತೇನ ಬ್ರಹ್ಮಭೂತಂ ಪರೇಶ್ವರಮ್॥** 29

**ಆತ್ಮಭಾವಂ ನಯತ್ಯೇನಂ ತದ್‌ಬ್ರಹ್ಮ ಧ್ಯಾಯಿನಂ ಮುನಿಮ್।**
**ವಿಕಾರ್ಯಮಾತ್ಮನಶ್ಶಕ್ತ್ಯಾ ಲೋಹಮಾಕರ್ಷಕೋ ಯಥಾ॥** 30

---

ಯೋಗವಿದರಲ್ಲಿ ಶ್ರೇಷ್ಠನಾಗಿದ್ದೀಯೆ. ಈ ನಿಮಿವಂಶದಲ್ಲಿ ಯೋಗಶಾಸ್ತ್ರದ ರಹಸ್ಯಾರ್ಥವನ್ನು ಚೆನ್ನಾಗಿ ಬಲ್ಲವನು ನೀನೇ. ಆ ಯೋಗವನ್ನು ನನಗೆ ಉಪದೇಶಿಸು" ಎಂದು ಹೇಳಿದನು (26). ಆಗ ಕೇಶಿಧ್ವಜನು ಇಂತೆಂದನು "ಖಾಂಡಿಕ್ಯ, ಯೋಗಸ್ವರೂಪವನ್ನು ಹೇಳುತ್ತೇನೆ, ಕೇಳು. ಈ ಯೋಗಾರೂಢನಾದ ಮುನಿಯು ಬ್ರಹ್ಮದಲ್ಲಿ ಲೀನವಾಗುತ್ತಾನೆ. ಮತ್ತೆ ಅದರಿಂದ ಚ್ಯುತನಾಗುವುದಿಲ್ಲ (ಮರಳಿ ಸಂಸಾರಕ್ಕೆ ಬರುವುದಿಲ್ಲ) (27). ಮನುಷ್ಯರ ಬಂಧಕ್ಕೂ ಮೋಕ್ಷಕ್ಕೂ ಕಾರಣವಾದದ್ದು ಮನಸ್ಸೇ! ವಿಷಯಾಸಕ್ತ ವಾದ ಮನಸ್ಸು ಬಂಧಕ್ಕೂ ವಿಷಯದಲ್ಲಿ ಅನಾಸಕ್ತವಾದದ್ದು ಮೋಕ್ಷಕ್ಕೂ ಕಾರಣವಾಗುತ್ತದೆ (28). ಆದ್ದರಿಂದ ಮುಮುಕ್ಷುವಾದವನು ವಿವೇಕ ಜ್ಞಾನ ಸಂಪನ್ನನೂ ಮನನಶೀಲನೂ ಆಗಿ ತನ್ನ ಮನಸ್ಸನ್ನು ಶಬ್ದಾದಿ ವಿಷಯಗಳಿಂದ ಹಿಂದಕ್ಕೆ ಸೆಳೆದು, ಅದೇ ಮನಸ್ಸಿನಿಂದ ಬ್ರಹ್ಮಸ್ವರೂಪನಾದ ಪರಮೇಶ್ವರನನ್ನು ಧ್ಯಾನಿಸುತ್ತಿರಬೇಕು (29). ಅಯಸ್ಕಾಂತವು ತನ್ನ ಶಕ್ತಿಯಿಂದ ವಿಕಾರಾರ್ಹವಾದ —ಎಂದರೆ—ಸ್ಥಾನಾಂತರಗೊಳಿಸಲು ಅರ್ಹವಾದ ಕಬ್ಬಿಣವನ್ನು ಸೆಳೆದು ಹೇಗೆ

**ಆತ್ಮಪ್ರಯತ್ನಸಾಪೇಕ್ಷಾ ವಿಶಿಷ್ಟಾ ಯಾ ಮನೋಗತಿಃ।**
**ತಸ್ಯಾ ಬ್ರಹ್ಮಣಿ ಸಂಯೋಗೋ ಯೋಗ ಇತ್ಯಭಿಧೀಯತೇ॥ 31**

**ಏವಮತ್ಯಂತವೈಶಿಷ್ಟ್ಯಯುಕ್ತಧರ್ಮೋಪಲಕ್ಷಣಃ।**
**ಯಸ್ಯ ಯೋಗಃ ಸ ವೈ ಯೋಗೀ ಮುಮುಕ್ಷುರಭಿಧೀಯತೇ॥ 32**

**ಯೋಗಯುಕ್ ಪ್ರಥಮಂ ಯೋಗೋ ಯುಂಜಾನೋ ಹ್ಯಭಿಧೀಯತೇ।**
**ವಿನಿಷ್ಪನ್ನಸಮಾಧಿಸ್ತು ಪರಂ ಬ್ರಹ್ಮೋಪಲಬ್ಧಿಮಾನ್॥ 33**

**ಯದ್ಯಂತರಾಯದೋಷೇಣ ದೂಷ್ಯತೇ ಚಾಸ್ಯ ಮಾನಸಮ್।**
**ಜನ್ಮಾಂತರೈರಭ್ಯಸತೋ ಮುಕ್ತಿಃ ಪೂರ್ವಸ್ಯ ಜಾಯತೇ॥ 34**

---

ತನ್ನೊಡನೆ ಸೇರಿಸಿಕೊಳ್ಳುವುದೋ, ಹಾಗೆ ಆ ಬ್ರಹ್ಮವು ಧ್ಯಾನಶೀಲನಾದ ಆ ಮುನಿಯನ್ನು ತನ್ನಲ್ಲಿ ಲಯಗೊಳಿಸುವುದು* (30). ಆತ್ಮಜ್ಞಾನೋಪಯುಕ್ತವಾದ ಯಮನಿಯಮಾದಿ ಪ್ರಯತ್ನಗಳಿಗೆ ಒಳಪಟ್ಟು ಸತ್ತ್ವಗುಣವಿಶಿಷ್ಟವಾದ ಯಾವ ಮಾನಸವೃತ್ತಿಯುಂಟೋ ಅದನ್ನು ಬ್ರಹ್ಮದಲ್ಲಿ ಸಂಯೋಗಗೊಳಿಸುವುದಕ್ಕೆ ಯೋಗವೆಂದು ಹೆಸರು (31). ಈ ಪ್ರಕಾರದಲ್ಲಿ ಯಾವಾತನ ಬ್ರಹ್ಮಯೋಗವು ಸತ್ತ್ವಗುಣವಿಶೇಷದಿಂದ ವಿಶಿಷ್ಟವಾಗಿರುತ್ತದೆಯೋ ಆ ಮುಮುಕ್ಷುವು ಯೋಗಿಯೆನ್ನಲ್ಪಡುತ್ತಾನೆ. ಈ ಯೋಗನಿಷ್ಪತ್ತಿಗೆ ಮೊದಲು ಯೋಗಾಭ್ಯಾಸವನ್ನು ಮಾಡತಕ್ಕವನಿಗೆ ಯೋಗಯುಕ್ ಎಂದು§ ಹೆಸರು. ಅನಂತರ ಬ್ರಹ್ಮಯೋಗವನ್ನು ಪಡೆದವನಿಗೆ ವಿನಿಷ್ಪನ್ನ ಸಮಾಧಿಯೆಂದು ಹೆಸರು (32-33). ಇವರಲ್ಲಿ ಮೊದಲನೆಯ ಯೋಗಯುಕ್ ಆದವನಿಗೆ ಯಾವುದಾದರೊಂದು ವಿಘ್ನದೋಷ ಉಂಟಾಗಿ ಚಿತ್ತವು ದೂಷಿತವಾದರೆ, ಮುಂದಿನ ಜನ್ಮಾಂತರಗಳಲ್ಲಿ ಯೋಗಾಭ್ಯಾಸವನ್ನು ಮಾಡುತ್ತಿರಲು ಆತನಿಗೆ ಮೋಕ್ಷ ದೊರೆಯುವುದು (34).

---

* ಕಬ್ಬಿಣವು ಅಯಸ್ಕಾಂತದೊಡನೆ ಸಂಯೋಗವನ್ನು ಹೊಂದುತ್ತದೆ. ಇದು ಏಕಾಂಶದಲ್ಲಿ ದೃಷ್ಟಾಂತ. ಮುನಿಯು ಬ್ರಹ್ಮದಲ್ಲಿ ಲಯಹೊಂದುತ್ತಾನೆ.

§ ಈತನಿಗೆ 'ಯುಂಜಾನ' ಎಂಬ ಹೆಸರೆಂದೂ ಅರ್ಥಹೇಳಲು ಸಾಧ್ಯವಿದೆ.

ವಿನಿಷ್ಪನ್ನ ಸಮಾಧಿಸ್ತು ಮುಕ್ತಿಂ ತತ್ರೈವ ಜನ್ಮನಿ।
ಪ್ರಾಪ್ನೋತಿ ಯೋಗೀ ಯೋಗಾಗ್ನಿದಗ್ಧಕರ್ಮಚಯೋಽಚಿರಾತ್॥ 35

ಬ್ರಹ್ಮಚರ್ಯಮಹಿಂಸಾಂ ಚ ಸತ್ಯಾಸ್ತೇಯಾಪರಿಗ್ರಹಾನ್।
ಸೇವೇತ ಯೋಗೀ ನಿಷ್ಕಾಮೋ ಯೋಗ್ಯತಾಂ ಸ್ವಮನೋ ನಯನ್॥ 36

ಸ್ವಾಧ್ಯಾಯಶೌಚಸಂತೋಷತಪಾಂಸಿ ನಿಯತಾತ್ಮವಾನ್।
ಕುರ್ವೀತ ಬ್ರಹ್ಮಣಿ ತಥಾ ಪರಸ್ಮಿನ್ ಪ್ರವಣಂ ಮನಃ॥ 37

ಏತೇ ಯಮಾಸ್ಸನಿಯಮಾಃ ಪಂಚ ಪಂಚ ಚ ಕೀರ್ತಿತಾಃ।
ವಿಶಿಷ್ಟಫಲದಾಃ ಕಾಮ್ಯಾ ನಿಷ್ಕಾಮಾಣಾಂ ವಿಮುಕ್ತಿದಾಃ॥ 38

ಏಕಂ ಭದ್ರಾಸನಾದೀನಾಂ ಸಮಾಸ್ಥಾಯ ಗುಣೈರ್ಯುತಃ।
ಯಮಾಖ್ಯೈರ್ನಿಯಮಾಖ್ಯೈಶ್ಚ ಯುಂಜೀತ ನಿಯತೋ ಯತಿಃ॥ 39

---

ವಿನಿಷ್ಪನ್ನಸಮಾಧಿಯಾದ ಯೋಗಿಯಾದರೋ ತನ್ನ ಯೋಗಾಗ್ನಿಯಿಂದ ಕರ್ಮರಾಶಿಗಳನ್ನು ಸುಟ್ಟುಹಾಕಿ ಆ ಜನ್ಮದಲ್ಲಿಯೇ ಶೀಘ್ರವಾಗಿ ಮುಕ್ತಿಯನ್ನೈದುವನು (35). ಯೋಗಿಯಾದವನು ಬ್ರಹ್ಮದಲ್ಲಿ ಪ್ರವೇಶಿಸಲು ತನ್ನ ಮನಸ್ಸಿಗೆ ಯೋಗ್ಯತೆಯನ್ನು ಸಂಪಾದಿಸುವುದಕ್ಕೋಸ್ಕರ ನಿಷ್ಕಾಮನಾಗಿ ಬ್ರಹ್ಮಚರ್ಯ, ಅಹಿಂಸೆ, ಸತ್ಯ, ಅಸ್ತೇಯ, ಅಪರಿಗ್ರಹಗಳನ್ನು* ಪಾಲಿಸಬೇಕು. ಇವು ಯಮಗಳೆನಿಸುತ್ತವೆ (36). ಮನಸ್ಸನ್ನು ನಿಗ್ರಹಿಸಿ ಸ್ವಾಧ್ಯಾಯ, ಶೌಚ, ಸಂತೋಷ, ತಪಸ್ಸು ಮತ್ತು ಪರಬ್ರಹ್ಮದಲ್ಲಿ ಮನಃಪ್ರವಣತೆಯೆಂಬ ಈಶ್ವರ ಪ್ರಣಿಧಾನಗಳನ್ನು ಆಚರಿಸಬೇಕು. ಇವು ನಿಯಮಗಳೆನಿಸುತ್ತವೆ (37). ಕ್ರಮವಾಗಿ ಐದು ಐದು ಆಗಿರುವ ಈ ಯಮನಿಯಮಗಳನ್ನು ಹೇಳಿದ್ದಾಯಿತು. ಕಾಮನೆಯಿಂದ ಇವುಗಳನ್ನಾಚರಿಸಿದರೆ ಬಯಸುವ ಫಲವಿಶೇಷಗಳನ್ನು ಇವು ಕೊಡುತ್ತವೆ. ಕಾಮನೆಯಿಲ್ಲದೆ ಆಚರಿಸಿದರೆ ಮೋಕ್ಷವನ್ನೀಯುತ್ತವೆ (38). ಯಮನಿಯಮಗಳೆಂಬ ಈ ಗುಣಗಳಿಂದ ಯುಕ್ತನಾದ ಯೋಗಿಯು ಭದ್ರಾಸನಾದಿಗಳಲ್ಲೊಂದು ಆಸನವನ್ನಾಶ್ರಯಿಸಿ ನಿಯತವಾಗಿ ಯೋಗಾಭ್ಯಾಸ ಮಾಡಬೇಕು. ಅಭ್ಯಾಸಬಲದಿಂದ

---

* ಯೋಗಾಂಗಗಳಾದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿಗಳನ್ನು ತಿಳಿಸಲಾಗುತ್ತಿದೆ.

**ಪ್ರಾಣಾಖ್ಯಮನಿಲಂ ವಶ್ಯಮಭ್ಯಾಸಾತ್ ಕುರುತೇ ತು ಯತ್।**
**ಪ್ರಾಣಾಯಾಮಸ್ಸ ವಿಜ್ಞೇಯಸ್ಸಬೀಜೋಽಬೀಜ ಏವ ಚ॥ 40**

**ಪರಸ್ಪರೇಣಾಭಿಭವಂ ಪ್ರಾಣಾಪಾನೌ ಯಥಾಽನಿಲೌ।**
**ಕುರುತಸ್ಸದ್ವಿಧಾನೇನ ತೃತೀಯಸ್ಸಂಯಮಾತ್ತಯೋಃ॥ 41**

**ತಸ್ಯ ಚಾಲಂಬನವತಃ ಸ್ಥೂಲರೂಪಂ ದ್ವಿಜೋತ್ತಮ।**
**ಆಲಂಬನಮನಂತಸ್ಯ ಯೋಗಿನೋಽಭ್ಯಸತಃ ಸ್ಮೃತಮ್॥ 42**

**ಶಬ್ದಾದಿಷ್ವನುರಕ್ತಾನಿ ನಿಗೃಹ್ಯಾಕ್ಷಾಣಿ ಯೋಗವಿತ್।**
**ಕುರ್ಯಾಚ್ಚಿತ್ತಾನುಕಾರೀಣಿ ಪ್ರತ್ಯಾಹಾರಪರಾಯಣಃ॥ 43**

---

ಪ್ರಾಣವೆಂಬ ವಾಯುವನ್ನು ವಶಪಡಿಸಿಕೊಳ್ಳುವುದೇನುಂಟೋ ಅದು ಪ್ರಾಣಾಯಾಮವೆಂದು ತಿಳಿಯಬೇಕು. ಸಬೀಜಪ್ರಾಣಾಯಾಮ*, ಅಬೀಜ ಪ್ರಾಣಾಯಮ ಎಂದು ಅದು ಎರಡು ವಿಧ (39-40). ಪ್ರಾಣವಾಯುವಿನಿಂದ ಅಪಾನವಾಯುವನ್ನೂ ಅಪಾನವಾಯುವಿನಿಂದ ಪ್ರಾಣವಾಯುವನ್ನೂ ಗುರೂಪದೇಶದಂತೆ ಪರಸ್ಪರವಾಗಿ ನಿರೋಧಿಸಿದರೆ ಕ್ರಮವಾಗಿ ಪೂರಕ, ರೇಚಕ ಎಂಬ ಪ್ರಾಣಾಯಾಮಗಳಾಗುತ್ತವೆ. ಈ ಎರಡು ವಾಯುಗಳನ್ನು ನಿರೋಧಿಸುವುದು ಕುಂಭಕವೆಂಬ ಮೂರನೆಯ ಪ್ರಾಣಾಯಾಮವಾಗುತ್ತದೆ§ (41). ಹೇ ಕ್ಷತ್ರಿಯೋತ್ತಮ—ಖಾಂಡಿಕ್ಯ, ಸಬೀಜಪ್ರಾಣಾಯಾಮವನ್ನು ಅಭ್ಯಾಸ ಮಾಡತಕ್ಕ ಯೋಗಿಗೆ ಅನಂತವಾದ ಭಗವಂತನ (ಇಂದ್ರಿಯಗ್ರಾಹ್ಯವಾದ) ಸ್ಥೂಲರೂಪವು ಆಲಂಬನವೆಂದು ಸ್ಮೃತವಾಗಿದೆ (42). ಅನಂತರ ಯೋಗಿಯು ಪ್ರತ್ಯಾಹಾರದಲ್ಲಿ ನಿರತನಾಗಿ ಶಬ್ದಾದಿ ವಿಷಯಗಳಲ್ಲಿ ವ್ಯಾಸಕ್ತವಾದ ಇಂದ್ರಿಯಗಳನ್ನು ಸೆಳೆದು ಚಿತ್ತಾನುಗಾಮಿಗಳನ್ನಾಗಿ ಮಾಡಬೇಕು. ಎಂದರೆ ಇಂದ್ರಿಯಗಳು ಚಿತ್ತದಲ್ಲಿ ಲಯಿಸಿ ಶೂನ್ಯವಾಗುವಂತೆ ಮಾಡಬೇಕು

---

* ಸಬೀಜ—ಆಲಂಬನ ಸಹಿತ; ಭಗವನ್ಮೂರ್ತಿ, ಧ್ಯಾನ ಮಂತ್ರ ಜಪ—ಇವುಗಳಿಂದ ಸಹಿತವಾದದ್ದು.

§ ಸಬೀಜ, ನಿರ್ಬೀಜಗಳೆರಡರಲ್ಲೂ ಈ ಮೂರು ವಿಧ ಉಂಟು. ಪ್ರಾಣ = ಉಚ್ಛ್ವಾಸ. ಅಪಾನ = ನಿಃಶ್ವಾಸ. ಪೂರಕ, ರೇಚಕ, ಕುಂಭಕ—ಇವು ಮೂರು ಸೇರಿ ಒಂದು ಪ್ರಾಣಾಯಾಮವೆಂದು ಹೇಳುತ್ತಾರೆ.

**ವಶ್ಯತಾ ಪರಮಾ ತೇನ ಜಾಯತೇಽತಿಚಲಾತ್ಮನಾಮ್।**
**ಇಂದ್ರಿಯಾಣಾಮವಶ್ಯೈಸ್ತೈರ್ನ ಯೋಗೀ ಯೋಗಸಾಧಕಃ॥ 44**

**ಪ್ರಾಣಾಯಾಮೇನ ಪವನೇ ಪ್ರತ್ಯಾಹಾರೇಣ ಚೇಂದ್ರಿಯೇ।**
**ವಶೀಕೃತೇ ತತಃ ಕುರ್ಯಾತ್ ಸ್ಥಿತಂ ಚೇತಶ್ಶುಭಾಶ್ರಯೇ॥ 45**

*ಖಾಂಡಿಕ್ಯ ಉವಾಚ:*

**ಕಥ್ಯತಾಂ ಮೇ ಮಹಾಭಾಗ ಚೇತಸೋ ಯಶ್ಶುಭಾಶ್ರಯಃ।**
**ಯದಾಧಾರಮಶೇಷಂ ತದ್ಧಂತಿ ದೋಷಮಲೋದ್ಭವಮ್॥ 46**

*ಕೇಶಿಧ್ವಜ ಉವಾಚ:*

**ಆಶ್ರಯಶ್ಚೇತಸೋ ಬ್ರಹ್ಮ ದ್ವಿಧಾ ತಚ್ಚ ಸ್ವಭಾವತಃ।**
**ಭೂಪ ಮೂರ್ತಮಮೂರ್ತಂ ಚ ಪರಂ ಚಾಪರಮೇವ ಚ॥ 47**

---

(43). ಹೀಗೆ ಮಾಡುವುದರಿಂದ ಅತ್ಯಂತ ಚಂಚಲಗಳಾದ ಇಂದ್ರಿಯಗಳು ಸಂಪೂರ್ಣವಾಗಿ ಆತನ ವಶಕ್ಕೆ ಬರುತ್ತವೆ. ಇಂದ್ರಿಯಗಳು ವಶಕ್ಕೆ ಬಂದ ಹೊರತು ಯಾವ ಯೋಗಿಯೂ ಯೋಗವನ್ನು ಸಾಧಿಸಲಾರ (44). ಈ ಪ್ರಕಾರವಾಗಿ ಪ್ರಾಣಾಯಾಮದಿಂದ ವಾಯುವನ್ನೂ ಪ್ರತ್ಯಾಹಾರದಿಂದ ಇಂದ್ರಿಯವನ್ನೂ ಹತೋಟಿಗೆ ತಂದುಕೊಂಡು, ಶುಭಾಶ್ರಯವಾದ ವಸ್ತುವಿನಲ್ಲಿ ಮನಸ್ಸನ್ನು ನೆಲೆಗೊಳಿಸಬೇಕು" ಎಂದನು (45). ಆಗ ಖಾಂಡಿಕ್ಯನು— "ಮಹಾಭಾಗ–ಕೇಶಿಧ್ವಜ, ಚಿತ್ತವು ಯಾವ ವಸ್ತುವಿನಲ್ಲಿ ನೆಲೆಸಿ ವಿಘ್ನಾದಿ ದೋಷ ಮತ್ತು ರಾಗಮೋಹಾದಿ ಕಶ್ಮಲಗಳ ಉತ್ಪತ್ತಿಯನ್ನೇ ನಾಶಮಾಡ ಬಲ್ಲುದೋ ಅಂತಹ ಶುಭಾಶ್ರಯವಸ್ತು ಯಾವುದು? ಹೇಳು" ಎಂದು ಕೇಳಿದನು (46). ಆಗ ಕೇಶಿಧ್ವಜನು ಇಂತೆಂದನು; "ಖಾಂಡಿಕ್ಯ, ಚಿತ್ತಕ್ಕೆ ಆಶ್ರಯವಾದ ಆ ವಸ್ತು ಬ್ರಹ್ಮ. ಆ ಬ್ರಹ್ಮವಸ್ತು (ಅಧಿಕಾರಿಭೇದದಿಂದ) ಮೂರ್ತ, ಅಮೂರ್ತ ಅಥವಾ ಪರ, ಅಪರ—ಎಂದು ಸ್ವೇಚ್ಛೆಯಿಂದ ಎರಡು

ತ್ರಿವಿಧಾ ಭಾವನಾ ಭೂಪ ವಿಶ್ವಮೇತನ್ನಿಬೋಧ ತಾಮ್।
ಬ್ರಹ್ಮಾಖ್ಯಾ ಕರ್ಮಸಂಜ್ಞಾ ಚ ತಥಾ ಚೈವೋಭಯಾತ್ಮಿಕಾ॥ 48

ಕರ್ಮಭಾವಾತ್ಮಿಕಾ ಹ್ಯೇಕಾ ಬ್ರಹ್ಮಭಾವಾತ್ಮಿಕಾ ಪರಾ।
ಉಭಯಾತ್ಮಿಕಾ ತಥೈವಾನ್ಯಾ ತ್ರಿವಿಧಾ ಭಾವಭಾವನಾ॥ 49

ಸನಂದನಾದಯೋ ಯೇ ತು ಬ್ರಹ್ಮಭಾವನಯಾ ಯುತಾಃ।
ಕರ್ಮಭಾವನಯಾ ಚಾನ್ಯೇ ದೇವಾದ್ಯಾಃ ಸ್ಥಾವರಾಶ್ಚರಾಃ॥ 50

---

ವಿಧವಾಗಿದೆ* (47). ರಾಜ, ಈ ವಿಶ್ವವು ಭಾವನಾತ್ಮಕವಾದದ್ದು §. ಅದರ ವಿವರವನ್ನು ಆಲಿಸು. ಬ್ರಹ್ಮಭಾವನಾ, ಕರ್ಮಭಾವನಾ, ಬ್ರಹ್ಮಕರ್ಮೋಭಯಾತ್ಮಕಭಾವನಾ—ಎಂದು ಈ ಭಾವನೆ ಮೂರು ತೆರ. ಭಾವನಾ ವಿಷಯವಾದ ಯಾವ ಭಾವವಸ್ತು ಉಂಟೋ ಅಂತಹ ಭಾವದ ಭಾವನೆಯು ವಿಷಯಭೇದದಿಂದ ಕರ್ಮಭಾವಾತ್ಮಕ, ಬ್ರಹ್ಮಭಾವಾತ್ಮಕ, ಉಭಯಾತ್ಮಕ—ಎಂದು ಮೂರು ವಿಧವಾಗಿರುತ್ತದೆ** (48-49). ಸನಂದನಾದಿ ಜ್ಞಾನಿಗಳು ಬ್ರಹ್ಮಭಾವನೆಯಿಂದ ಕೂಡಿದವರು. ದೇವತೆಗಳಿಂದ ಹಿಡಿದು ಸ್ಥಾವರ ಜಂಗಮ ಪರ್ಯಂತರಾದ ಸಮಸ್ತಜೀವರೂ ಕರ್ಮಭಾವನೆಯಿಂದ ಕೂಡಿದವರು. ಹಿರಣ್ಯಗರ್ಭನೇ ಮೊದಲಾದ ಅಧಿಕಾರಿಕ ಪುರುಷರು ಬ್ರಹ್ಮ, ಕರ್ಮ—ಎಂಬ

---

* ಪರದಲ್ಲಿ ಮೂರ್ತ, ಅಮೂರ್ತ—ಎಂದು ಎರಡು ವಿಧ. ಅಪರದಲ್ಲಿಯೂ ಮೂರ್ತ, ಅಮೂರ್ತ—ಎಂದು ಎರಡು ವಿಧ. ಹೀಗೆ ಒಟ್ಟು ನಾಲ್ಕು ವಿಧಗಳೆಂದು ತಿಳಿಯಬೇಕು. ಯೋಗಿಯ ಅಧಿಕಾರಯೋಗ್ಯತೆಯನ್ನನುಸರಿಸಿ ಇವು ಧ್ಯಾನ ವಿಷಯಗಳಾಗುತ್ತವೆ. ಪರ ಅಮೂರ್ತ =ನಿರ್ಗುಣಬ್ರಹ್ಮ. ಅಪರ ಅಮೂರ್ತ =ಷಡ್ಗುಣೈಶ್ವರ್ಯಯುಕ್ತವಾದ ಈಶ್ವರ. ಪರಮೂರ್ತ =ಪದ್ಮನಾಭಾದಿಲೀಲಾವಿಗ್ರಹ. ಅಪರ ಮೂರ್ತ = ಹಿರಣ್ಯಗರ್ಭಾದಿ ವಿಶ್ವರೂಪ. ಇವುಗಳಲ್ಲಿ ನಿರ್ಗುಣಬ್ರಹ್ಮೋಪಾಸನೆ ಪರಮಶ್ರೇಷ್ಠವಾದುದು. ಉಳಿದವು ಕ್ರಮೇಣ ಇಳಿಮುಖವಾದವು.

§ ಭಾವನೆಯೆಂದರೆ ಜ್ಞಾನವಿಶೇಷಜನ್ಯವಾದ ವಾಸನೆ-ಸಂಸ್ಕಾರ. ಭಾವನಾ ಗೋಚರವಾದ್ದರಿಂದ ವಿಶ್ವವನ್ನೇ ಭಾವನಾ ಎಂದು ಔಪಚಾರಿಕವಾಗಿ ಹೇಳಿದೆ. ವಿಶ್ವವು ಶ್ರೀಹರಿಯ ಸ್ಥೂಲರೂಪ.

** ಹಿಂದಿನ ಶ್ಲೋಕದಲ್ಲಿ ಹೇಳಿದ್ದನ್ನೇ ಇಲ್ಲಿ ವಿವರಿಸಲಾಗಿದೆ.

**ಹಿರಣ್ಯಗರ್ಭಾದಿಷು ಚ ಬ್ರಹ್ಮಕರ್ಮಾತ್ಮಿಕಾ ದ್ವಿಧಾ।**
**ಬೋಧಾಧಿಕಾರಯುಕ್ತೇಷು ವಿದ್ಯತೇ ಭಾವಭಾವನಾ॥** 51

**ಅಕ್ಷೀಣೇಷು ಸಮಸ್ತೇಷು ವಿಶೇಷಜ್ಞಾನಕರ್ಮಸು।**
**ವಿಶ್ವಮೇತತ್ಪರಂ ಚಾನ್ಯದ್ಭೇದಭಿನ್ನದೃಶಾಂ ನೃಣಾಮ್॥** 52

**ಪ್ರತ್ಯಸ್ತಮಿತಭೇದಂ ಯತ್ಸತ್ತಾಮಾತ್ರಮಗೋಚರಮ್।**
**ವಚಸಾಮಾತ್ಮಸಂವೇದ್ಯಂ ತಜ್ಞಾನಂ ಬ್ರಹ್ಮಸಂಜ್ಞಿತಮ್॥** 53

**ತಚ್ಚ ವಿಷ್ಣೋಃ ಪರಂ ರೂಪಮರೂಪಾಖ್ಯಮನುತ್ತಮಮ್।**
**ವಿಶ್ವಸ್ವರೂಪವೈರೂಪ್ಯಲಕ್ಷಣಂ ಪರಮಾತ್ಮನಃ॥** 54

**ನ ತದ್ಯೋಗಯುಜಾ ಶಕ್ಯಂ ನೃಪ ಚಿಂತಯಿತುಂ ಯತಃ।**
**ತತಃ ಸ್ಥೂಲಂ ಹರೇ ರೂಪಂ ಚಿಂತಯೇದ್ವಿಶ್ವಗೋಚರಮ್॥** 55

---

ಉಭಯಭಾವನೆಯಿಂದ ಕೂಡಿದವರು. ಇವರು ಆತ್ಮಬೋಧಯುಕ್ತರೂ ಕರ್ಮಾಧಿಕಾರವುಳ್ಳವರೂ ಆಗಿರುವುದರಿಂದ ಉಭಯಭಾವಾತ್ಮಕರು (50-51). ವಿಶೇಷವಾದ ಬ್ರಹ್ಮಜ್ಞಾನಕ್ಕೆ ಸಾಧನಗಳಾದ ಕರ್ಮಗಳು ಸಂಪೂರ್ಣವಾಗಿ ಕ್ಷೀಣವಾಗದೆ ಇರುವುದರಿಂದ, ಭೇದಹೇತುವಾದ ಅಹಂಕಾರ ದಿಂದ ಭಿನ್ನದರ್ಶಿಗಳಾದ (ಸನಂದನಾದಿ) ಪುರುಷರಿಗೆ ಸಹ 'ಇದು ವಿಶ್ವ—ಇದಕ್ಕಿಂತ ಪರಬ್ರಹ್ಮ ಬೇರೆ' ಎಂಬ ಭೇದಜ್ಞಾನವಿರುತ್ತದೆ. (ಸನಂದನಾದಿ ಗಳಿಗೂ ಧ್ಯಾತೃಧ್ಯೇಯಗಳೆಂಬ ಭೇದಜ್ಞಾನವಿರುತ್ತದೆಯಾದ್ದರಿಂದ ಅವರೂ ಜೀವವರ್ಗಕ್ಕೆ ಸೇರಿದವರೆಂದು ಅಭಿಪ್ರಾಯ) (52). (ಶುದ್ಧಬ್ರಹ್ಮಸ್ವರೂಪ ವೇನೆಂದರೆ), ಯಾವುದರಲ್ಲಿ ಸಮಸ್ತಭೇದಗಳೂ ಲಯಿಸಿಹೋಗಿವೆಯೋ ಯಾವುದು ಸತ್ತಾಮಾತ್ರಸ್ವರೂಪವಾಗಿದ್ದು ಮಾತುಗಳಿಗೆ ಅಗೋಚರ ವಾಗಿದೆಯೋ ಸ್ವಾನುಭವಮಾತ್ರಗಮ್ಯವಾಗಿದೆಯೋ ಆ ಜ್ಞಾನಕ್ಕೆ ಬ್ರಹ್ಮ ಎಂದು ಹೆಸರು. ಅದು ರೂಪರಹಿತವೂ ಪರಮಶ್ರೇಷ್ಠವೂ ಆದ ವಿಷ್ಣುವಿನ ಪರವೆಂಬ ಸ್ವರೂಪವಾಗಿದೆ. ವಿಶ್ವರೂಪಕ್ಕಿಂತ ವಿಲಕ್ಷಣವಾಗಿರುವುದೇ ಪರಮಾತ್ಮನ ಆ ಪರಸ್ವರೂಪದ ಲಕ್ಷಣ (53-54). ರಾಜ-ಖಾಂಡಿಕ್ಯ, ಯೋಗಯುಕ್ ಆಗಿರುವ ಪ್ರಥಮಾಭ್ಯಾಸಿಗೆ ಆ ಪರರೂಪವನ್ನು ಧ್ಯಾನಿಸುವುದು ಶಕ್ಯವಾದ್ದಲ್ಲ.

**ಹಿರಣ್ಯಗರ್ಭೋ ಭಗವಾನ್ ವಾಸುದೇವಃ ಪ್ರಜಾಪತಿಃ।**
**ಮರುತೋ ವಸವೋ ರುದ್ರಾ ಭಾಸ್ಕರಾಸ್ತಾರಕಾ ಗ್ರಹಾಃ॥** 56

**ಗಂಧರ್ವಯಕ್ಷದೈತ್ಯಾದ್ಯಾಸ್ಸಕಲಾ ದೇವಯೋನಯಃ।**
**ಮನುಷ್ಯಾ ಪಶವಶ್ಶೈಲಾಸ್ಸಮುದ್ರಾಸ್ಸರಿತೋ ದ್ರುಮಾಃ॥** 57

**ಭೂಪ ಭೂತಾನ್ಯಶೇಷಾಣಿ ಭೂತಾನಾಂ ಯೇ ಚ ಹೇತವಃ।**
**ಪ್ರಧಾನಾದಿವಿಶೇಷಾಂತಂ ಚೇತನಾಚೇತನಾತ್ಮಕಮ್॥** 58

**ಏಕಪಾದಂ ದ್ವಿಪಾದಂ ಚ ಬಹುಪಾದಮಪಾದಕಮ್।**
**ಮೂರ್ತಮೇತದ್ಧರೇ ರೂಪಂ ಭಾವನಾತ್ರಿತಯಾತ್ಮಕಮ್॥** 59

**ಏತತ್ಸರ್ವಮಿದಂ ವಿಶ್ವಂ ಜಗದೇತಚ್ಚರಾಚರಮ್।**
**ಪರಬ್ರಹ್ಮಸ್ವರೂಪಸ್ಯ ವಿಷ್ಣೋಃಶ್ಶಕ್ತಿಸಮನ್ವಿತಮ್॥** 60

---

ಆದ್ದರಿಂದ ಆತನು ಶ್ರೀಹರಿಯ ವಿಶ್ವಗೋಚರವಾದ ಸ್ಥೂಲರೂಪವನ್ನು ಧ್ಯಾನಿಸುತ್ತಿರಬೇಕು (55). ಹಿರಣ್ಯಗರ್ಭ, ಭಗವಾನ್ ವಾಸುದೇವ, ಪ್ರಜಾಪತಿ, ಮರುತ್ತುಗಳು, ವಸುಗಳು, ರುದ್ರರು, ಆದಿತ್ಯರು, ತಾರಕೆಗಳು, ಗ್ರಹಗಳು, ಗಂಧರ್ವಯಕ್ಷದೈತ್ಯಾದಿ ಸಮಸ್ತದೇವಯೋನಿಗಳು, ಮನುಷ್ಯರು, ಪಶುಗಳು, ಬೆಟ್ಟಗಳು, ಸಮುದ್ರಗಳು, ನದಿಗಳು, ಮರಗಳು—ಇವೆಲ್ಲವೂ ಶ್ರೀಹರಿಯ ಮೂರ್ತಿಮತ್ತಾದ ರೂಪಗಳು (56-57). ರಾಜ, ಇವುಗಳಲ್ಲದೆ ಪಂಚ ಭೂತಗಳು, ಅವುಗಳಿಗೆ ಕಾರಣಗಳಾದ ಪಂಚತನ್ಮಾತ್ರೆಗಳು, ಪ್ರಧಾನದಿಂದ ಹಿಡಿದು ಪೃಥವೀಪರ್ಯಂತವಾದ ಎಲ್ಲ ವಸ್ತು , ಚೇತನಾಚೇತನಾತ್ಮಕವಾದ ಪದಾರ್ಥ, ಏಕಪಾದ, ದ್ವಿಪಾದ, ಬಹುಪಾದ ಮತ್ತು ಪಾದಹೀನವಾದ ಜಂತು—ಇದೆಲ್ಲವೂ ಸಹ ಶ್ರೀಹರಿಯ ಮೂರ್ತಿಮತ್ತಾದ ರೂಪವಾಗಿವೆ. ಇದು ಭಾವನಾತ್ರಿತಯಾತ್ಮಕವಾದದ್ದು (58-59). ಈ ಎಲ್ಲವನ್ನು ಒಳಗೊಂಡ ಚರಚರಾತ್ಮಕವಾದ ಈ ಜಗತ್ತು ಪರಬ್ರಹ್ಮಸ್ವರೂಪನಾದ ವಿಷ್ಣುವಿನ ವಿಶ್ವವೆಂಬ ಮೂರ್ತರೂಪವಾಗಿದೆ. ಇದು ಆತನ ಶಕ್ತಿಯಿಂದ* ಸಮನ್ವಿತವಾಗಿದೆ (60).

---

* ಇದು ವಿಷ್ಣುವಿನ ಪರಮಾರ್ಥಸ್ವರೂಪವಲ್ಲ. ಆತನ ಶಕ್ತಿಯಿಂದ ವ್ಯಾಪ್ತವಾದದ್ದು. ಮಾಯಾಶಕ್ತಿಕಲ್ಪಿತವೆಂದು ಅಭಿಪ್ರಾಯ.

**ವಿಷ್ಣುಶಕ್ತಿಃ ಪರಾ ಪ್ರೋಕ್ತಾ ಕ್ಷೇತ್ರಜ್ಞಾಖ್ಯಾ ತಥಾಽಪರಾ।**
**ಅವಿದ್ಯಾ ಕರ್ಮಸಂಜ್ಞಾನ್ಯಾ ತೃತೀಯಾ ಶಕ್ತಿರಿಷ್ಯತೇ॥** 61

**ಯಯಾ ಕ್ಷೇತ್ರಜ್ಞಶಕ್ತಿಸ್ಸಾ ವೇಷ್ಟಿತಾ ನೃಪ ಸರ್ವಗಾ।**
**ಸಂಸಾರತಾಪಾನಖಿಲಾನವಾಪ್ನೋತ್ಯತಿಸಂತತಾನ್॥** 62

**ತಯಾ ತಿರೋಹಿತತ್ವಾಚ್ಚ ಶಕ್ತಿಃ ಕ್ಷೇತ್ರಜ್ಞಸಂಜ್ಞಿತಾ।**
**ಸರ್ವಭೂತೇಷು ಭೂಪಾಲ ತಾರತಮ್ಯೇನ ಲಕ್ಷ್ಯತೇ॥** 63

**ಅಪ್ರಾಣವತ್ಸು ಸ್ವಲ್ಪಾ ಸಾ ಸ್ಥಾವರೇಷು ತತೋಽಧಿಕಾ।**
**ಸರೀಸೃಪೇಷು ತೇಭ್ಯೋಽಪಿ ಹ್ಯತಿಶಕ್ತ್ಯಾ ಪತತ್ರಿಷು॥** 64

---

(ವಿಷ್ಣುವಿನ ಶಕ್ತಿ ಮೂರು ಬಗೆ.) ಒಂದು ಪರಾಶಕ್ತಿ (ಪ್ರತ್ಯಸ್ತಮಿತ ಭೇದಂ–ಶ್ಲೋ. 53 ಎಂಬಲ್ಲಿ ಹೇಳಿದ್ದು. ಇದೇ ಚಿಚ್ಛಕ್ತಿ , ಕಾರ್ಯೋನ್ಮುಖವಾದ ಪರಬ್ರಹ್ಮವೇ ಶಕ್ತಿ ಎನಿಸುತ್ತದೆ). ಕ್ಷೇತ್ರಜ್ಞ (ಜೀವ) ಎಂಬುದು ಅಪರಾ ಎಂಬ ಇನ್ನೊಂದು* ಶಕ್ತಿ. ಅವಿದ್ಯಾ ಮತ್ತು ಕರ್ಮ ಎಂಬ ಹೆಸರಿನದು ವಿಷ್ಣುವಿನ ಮೂರನೆಯ ಶಕ್ತಿ (ಇದೇ ಮಾಯಾಶಕ್ತಿ) (61). ರಾಜ–ಖಾಂಡಿಕ್ಯ, ವಸ್ತುತಃ ಸರ್ವವ್ಯಾಪಿಯಾಗಿರುವ ಕ್ಷೇತ್ರಜ್ಞಶಕ್ತಿಯು ಈ ಅವಿದ್ಯಾಶಕ್ತಿಯಿಂದ ಆವೇಷ್ಟಿತವಾಗಿ ಭೇದವನ್ನು ಪಡೆದು (ಬೇರೆ ಬೇರೆ ಜೀವರಾಗಿ ತೋರಿ) ಸಂತತವಾಗಿ ಸಮಸ್ತಸಂಸಾರತಾಪಗಳನ್ನೂ ಅನುಭವಿಸುತ್ತಿದೆ (62). ಈ ಕ್ಷೇತ್ರಜ್ಞಶಕ್ತಿಯು ಅವಿದ್ಯಾಶಕ್ತಿಯಿಂದ ತಿರೋಹಿತವಾಗಿರುವ ಕಾರಣ ಸರ್ವಭೂತಗಳಲ್ಲಿಯೂ ಇದು ತಾರತಮ್ಯದಿಂದ ಗೋಚರವಾಗುತ್ತದೆ. ಹೇಗೆಂದರೆ, ಯಾವುದರಲ್ಲಿ ಪ್ರಾಣವು ಅಭಿವ್ಯಕ್ತವಾಗಿಲ್ಲವೋ ಅಂತಹ ಜಡವಸ್ತುಗಳಲ್ಲಿ ಅತ್ಯಲ್ಪವಾಗಿರುತ್ತದೆ. ಸ್ಥಾವರವಾದ ವೃಕ್ಷಾದಿಗಳಲ್ಲಿ ಅದಕ್ಕಿಂತ ಅಧಿಕವಾಗಿ ಕ್ಷೇತ್ರಜ್ಞಶಕ್ತಿ ಕಂಡು ಬರುತ್ತದೆ. ಅದಕ್ಕಿಂತ ಸರೀಸೃಪಗಳಲ್ಲಿಯೂ ಅದಕ್ಕಿಂತ ಪಕ್ಷಿಗಳಲ್ಲಿಯೂ ಆ ಶಕ್ತಿ ಅಧಿಕವಾಗಿ ಇರುತ್ತದೆ (63-64). ಹೀಗೆ ಶಕ್ತ್ಯಪೇಕ್ಷೆಯಿಂದ ಪಕ್ಷಿಗಳಿಗಿಂತ

* ಹಿಂದೆ ಹೇಳಿದ ಭಾವನಾತ್ರಿತಯಾತ್ಮಕವಾದದ್ದು ಕ್ಷೇತ್ರಜ್ಞ.

**ಪತತ್ರಿಭ್ಯೋ ಮೃಗಾಸ್ತೇಭ್ಯಸ್ತಚ್ಛಕ್ತ್ಯಾ ಪಶವೋಽಧಿಕಾಃ।**
**ಪಶುಭ್ಯೋ ಮನುಜಾಶ್ಚಾತಿಶಕ್ತ್ಯಾ ಪುಂಸಃ ಪ್ರಭಾವಿತಾಃ॥ 65**

**ತೇಭ್ಯೋಽಪಿ ನಾಗಗಂಧರ್ವಯಕ್ಷಾದ್ಯಾ ದೇವತಾ ನೃಪ॥ 66**

**ಶಕ್ರಸ್ಸಮಸ್ತದೇವೇಭ್ಯಸ್ತತಶ್ಚಾತಿಪ್ರಜಾಪತಿಃ।**
**ಹಿರಣ್ಯಗರ್ಭೋಽಪಿ ತತಃ ಪುಂಸಃ ಶಕ್ತ್ಯುಪಲಕ್ಷಿತಃ॥ 67**

**ಏತಾನ್ಯಶೇಷರೂಪಾಣಿ ತಸ್ಯ ರೂಪಾಣಿ ಪಾರ್ಥಿವ।**
**ಯತಸ್ತಚ್ಛಕ್ತಿಯೋಗೇನ ಯುಕ್ತಾನಿ ನಭಸಾ ಯಥಾ॥ 68**

**ದ್ವಿತೀಯಂ ವಿಷ್ಣುಸಂಜ್ಞಸ್ಯ ಯೋಗಿಧ್ಯೇಯಂ ಮಹಾಮತೇ।**
**ಅಮೂರ್ತಂ ಬ್ರಹ್ಮಣೋ ರೂಪಂ ಯತ್ಸದಿತ್ಯುಚ್ಯತೇ ಬುಧೈಃ॥ 69**

---

ಮೃಗಗಳೂ ಮೃಗಗಳಿಗಿಂತ ಪಶುಗಳೂ* ಹೆಚ್ಚಿನವು. ಪಶುಗಳಿಗಿಂತ ಮನುಷ್ಯರು ಈ ಕ್ಷೇತ್ರಜ್ಞಶಕ್ತಿಯಿಂದ ವಿಶೇಷವಾಗಿ ಪ್ರಭಾವಿತರಾಗಿರುತ್ತಾರೆ. ಮನುಷ್ಯರಿಗಿಂತ ನಾಗ, ಗಂಧರ್ವ, ಯಕ್ಷಾದಿದೇವತೆಗಳು ಅಧಿಕ ಶಕ್ತಿಯುಳ್ಳವರಾಗಿರುತ್ತಾರೆ (65-66). ಎಲ್ಲ ದೇವತೆಗಳಿಗಿಂತ ಇಂದ್ರನೂ ಅವನಿಗಿಂತ ಪ್ರಜಾಪತಿಯೂ ಆತನಿಗಿಂತ ಹಿರಣ್ಯಗರ್ಭನೂ ಅಧಿಕವಾಗಿ ಈ ಶಕ್ತಿಯಿಂದ ಕೂಡಿರುತ್ತಾರೆ. ರಾಜ-ಖಾಂಡಿಕ್ಯ, ಈ ಸಮಸ್ತರೂ ಆ ಪರಮೇಶ್ವರನ ವಿಭಿನ್ನ ರೂಪಗಳು. ಏಕೆಂದರೆ, ಆಕಾಶವೂ ಸರ್ವವನ್ನು ವ್ಯಾಪಿಸಿಕೊಂಡಿರುವಂತೆ ಈಶ್ವರಶಕ್ತಿಯೂ ಎಲ್ಲರನ್ನೂ ವ್ಯಾಪಿಸಿಕೊಂಡಿದೆ (67-68). ಹೇ ಬುದ್ಧಿಶಾಲಿ, ವಿಷ್ಣುನಾಮಕವಾದ ಆ ಬ್ರಹ್ಮವಸ್ತುವಿನ ಅಮೂರ್ತವಾದ ದ್ವಿತೀಯರೂಪವನ್ನು (ಆರೂಢರಾದ) ಯೋಗಿಗಳು ಧ್ಯಾನಿಸುತ್ತಾರೆ. ಅದನ್ನು ವಿದ್ವಾಂಸರು 'ಸತ್'§ ಎಂದು ಕರೆಯುತ್ತಾರೆ (69). (ಕಾರ್ಯಗತವಾದ) ಸಮಸ್ತಶಕ್ತಿಗಳೂ 'ಸತ್' ಎಂಬ ಈ ಈಶ್ವರ

* ಮೃಗ = ವನ್ಯಜಂತು. ಪಶು = ಹಸು ಮೊದಲಾದ ಸಾಕುಪ್ರಾಣಿ.

§ ಈ ರೂಪವೇ ಈಶ್ವರ ಎನಿಸುತ್ತದೆ. ಇದು ಷಡ್ಗುಣೈಶ್ವರ್ಯಯುಕ್ತವಾದದ್ದು. ಪರಬ್ರಹ್ಮದ ಅಪರ ಅಮೂರ್ತರೂಪವೇ ಇದು. 'ಪ್ರತ್ಯಸ್ತಮಿತಭೇದಂ' (ಶ್ಲೋ. 53) ಎಂದು ವರ್ಣಿಸಿದ್ದು ಬ್ರಹ್ಮದ ಪರ ಅಮೂರ್ತ ರೂಪ. ಅದೇ ನಿರ್ವಿಶೇಷ ಬ್ರಹ್ಮ.

**ಸಮಸ್ತಾಃ ಶಕ್ತಯಶ್ಚೈತಾ ನೃಪ ಯತ್ರ ಪ್ರತಿಷ್ಠಿತಾಃ।**
**ತದ್ವಿಶ್ವರೂಪವೈರೂಪ್ಯಂ ರೂಪಮನ್ಯದ್ಧರೇರ್ಮಹತ್॥** 70

**ಸಮಸ್ತಶಕ್ತಿರೂಪಾಣಿ ತತ್ಕರೋತಿ ಜನೇಶ್ವರ।**
**ದೇವತಿರ್ಯಙ್ಮನುಷ್ಯಾದಿಚೇಷ್ಟಾವಂತಿ ಸ್ವಲೀಲಯಾ॥** 71

**ಜಗತಾಮುಪಕಾರಾಯ ನ ಸಾ ಕರ್ಮನಿಮಿತ್ತಜಾ।**
**ಚೇಷ್ಟಾ ತಸ್ಯಾಪ್ರಮೇಯಸ್ಯ ವ್ಯಾಪಿನ್ಯವ್ಯಾಹತಾತ್ಮಿಕಾ॥** 72

**ತದ್ರೂಪಂ ವಿಶ್ವರೂಪಸ್ಯ ತಸ್ಯ ಯೋಗಯುಜಾ ನೃಪ।**
**ಚಿಂತ್ಯಮಾತ್ಮವಿಶುದ್ಧ್ಯರ್ಥಂ ಸರ್ವಕಿಲ್ಬಿಷನಾಶನಮ್॥** 73

**ಯಥಾಗ್ನಿರುದ್ಧತಶಿಖಃ ಕಕ್ಷಂ ದಹತಿ ಸಾನಿಲಃ।**
**ತಥಾ ಚಿತ್ತಸ್ಥಿತೋ ವಿಷ್ಣುರ್ಯೋಗಿನಾಂ ಸರ್ವಕಿಲ್ಬಿಷಮ್॥** 74

---

ನಲ್ಲಿ ಪ್ರತಿಷಿತವಾಗಿವೆ. ಆದ್ದರಿಂದ ಇದು ಹಿಂದೆ ಹೇಳಿದ ವಿಶ್ವವೆಂಬ ರೂಪಕ್ಕಿಂತ ವಿಲಕ್ಷಣವಾದ ಶ್ರೀಹರಿಯ ಇನ್ನೊಂದು ರೂಪವೆಂದೂ ಸರ್ವೋತ್ಕೃಷ್ಟವೆಂದೂ ತಿಳಿಯಲ್ಪಟ್ಟಿದೆ. ರಾಜ, ಈ (ಸದ್ರೂಪನಾದ) ಈಶ್ವರನು ಸಮಸ್ತಶಕ್ತಿವಿಶಿಷ್ಟ ಗಳಾದ ದೇವ, ತಿರ್ಯಕ್, ಮನುಷ್ಯ ಮುಂತಾದ ಅವತಾರಗಳನ್ನು* ಧರಿಸಿ ತನ್ನ ಲೀಲೆಯಿಂದ ಕಾರ್ಯಗಳನ್ನು ನಡೆಸುತ್ತಾನೆ (70-71). ಅಪ್ರಮೇಯನಾದ ಭಗವಂತನ ಈ ಲೀಲಾವತಾರ ಚೇಷ್ಟೆಯು ಅಪರಿಚ್ಛಿನ್ನವೂ ಅವ್ಯಾಹತವೂ ಆಗಿದ್ದು ಜಗತ್ತಿನ ಉಪಕಾರಕ್ಕಾಗಿ ನಡೆಯುತ್ತದೆ. ಈ (ಜನ್ಮಗ್ರಹಣಾದಿ) ಕಾರ್ಯವು ಕರ್ಮಫಲವಾಗಿ ಆದದ್ದಲ್ಲ (72). (ಹೀಗೆ ನಾಲ್ಕು ವಿಧದಲ್ಲಿ) ವಿಶ್ವರೂಪನಾಗಿರುವ ಭಗವಂತನ ಮೂರನೆಯದಾದ ಯಾವ (ಶ್ರೀರಾಮಾದಿ) ಲೀಲಾವಿಗ್ರಹರೂಪ ಉಂಟೋ ಅದನ್ನು ಸಹ ಯೋಗಾಭ್ಯಾಸಿಯು ಆತ್ಮಶುದ್ಧಿ ಗಾಗಿ ಧ್ಯಾನಿಸಬಹುದಾಗಿದೆ. ಅದು ಸಮಸ್ತಪಾಪಗಳನ್ನೂ ನಾಶಮಾಡುತ್ತದೆ (73). ಜ್ವಾಲೆಗಳಿಂದ ಧಗಧಗಿಸುತ್ತ ವಾಯುಸಹಿತವಾದ ಅಗ್ನಿಯು ಯಾವ ರೀತಿಯಲ್ಲಿ ಒಣ ಹುಲ್ಲಿನ ಮೆದೆಯನ್ನು ಸುಟ್ಟುಹಾಕುವುದೋ ಹಾಗೆ ಯೋಗಿಗಳ ಚಿತ್ತದಲ್ಲಿ ನೆಲೆಸಿದ ವಿಷ್ಣುವು ಸಕಲಕಿಲ್ಬಿಷಗಳನ್ನೂ ಸುಟ್ಟು ಬಿಡುವನು (74).

* ದೇವ-ಉಪೇಂದ್ರ; ತಿರ್ಯಕ್-ಮತ್ಸ್ಯ, ವರಾಹ; ಮನುಷ್ಯ-ಶ್ರೀರಾಮ, ಶ್ರೀಕೃಷ್ಣ ; ಆದಿಪದದಿಂದ ನರಸಿಂಹಾದ್ಯವತಾರಗಳನ್ನು ತೆಗೆದುಕೊಳ್ಳಬೇಕು.

**ತಸ್ಮಾತ್ಸಮಸ್ತಶಕ್ತೀನಾಮಾಧಾರೇ ತತ್ರ ಚೇತಸಃ।**
**ಕುರ್ವೀತ ಸಂಸ್ಥಿತಿಂ ಸಾ ತು ವಿಜ್ಞೇಯಾ ಶುದ್ಧಧಾರಣಾ॥ 75**

**ಶುಭಾಶ್ರಯಃ ಸ ಚಿತ್ತಸ್ಯ ಸರ್ವಗಸ್ಯಾಚಲಾತ್ಮನಃ।**
**ತ್ರಿಭಾವಭಾವನಾತೀತೋ ಮುಕ್ತಯೇ ಯೋಗಿನೋ ನೃಪ॥ 76**

**ಅನ್ಯೇ ತು ಪುರುಷವ್ಯಾಘ್ರ ಚೇತಸೋ ಯೇ ವ್ಯಪಾಶ್ರಯಾಃ।**
**ಅಶುದ್ಧಾಸ್ತೇ ಸಮಸ್ತಾಸ್ತು ದೇವಾದ್ಯಾಃ ಕರ್ಮಯೋನಯಃ॥ 77**

**ಮೂರ್ತಂ ಭಗವತೋ ರೂಪಂ ಸರ್ವಾಪಾಶ್ರಯನಿಃಸ್ಪೃಹಮ್।**
**ಏಷಾ ವೈ ಧಾರಣಾ ಪ್ರೋಕ್ತಾ ಯಚ್ಚಿತ್ತಂ ತತ್ರ ಧಾರ್ಯತೇ॥ 78**

**ಯಚ್ಚ ಮೂರ್ತಂ ಹರೇ ರೂಪಂ ಯಾದೃಕ್‌ಚಿಂತ್ಯಂ ನರಾಧಿಪ।**
**ತತ್ ಶ್ರೂಯತಾಮನಾಧಾರಾ ಧಾರಣಾ ನೋಪಪದ್ಯತೇ॥ 79**

---

ಆದ್ದರಿಂದ ಸಮಸ್ತ ಶಕ್ತಿಗಳಿಗೂ ಆಧಾರನಾದ ಭಗವಂತನ ಅವತಾರಸ್ವರೂಪದಲ್ಲಿ ಚಿತ್ತವನ್ನು ಸ್ಥಿರಗೊಳಿಸಿ ನಿಲ್ಲಿಸಬೇಕು. ಹೀಗೆ ಸ್ಥಿರಗೊಳಿಸುವುದಕ್ಕೆ ಶುದ್ಧ ಧಾರಣೆ ಎಂದು ಹೆಸರು (75). ಸರ್ವಗತನೂ ಅಚಲನೂ ಆದ ಆತ್ಮನಿಗೆ (ಪರಬ್ರಹ್ಮಕ್ಕೆ ) ಈ ಅವತಾರಸ್ವರೂಪವು ಆಶ್ರಯ–ಪ್ರತಿಷ್ಠೆಯಾಗಿದ್ದು* ಚಿತ್ತಕ್ಕೆ ಶುಭಾಶ್ರಯವೆನಿಸುತ್ತದೆ. ಈ ರೂಪವು ತ್ರಿಭಾವಭಾವನಾತೀತವಾದದ್ದು–ಅಸಂಸಾರಿಯಾದದ್ದು. ಇದು ಯೋಗಿಗಳಿಗೆ ಮೋಕ್ಷವನ್ನೀಯುತ್ತದೆ (76). ಖಾಂಡಿಕ್ಯ, ಇನ್ನು ಇತರ ಇಂದ್ರಾದಿದೇವತೆಗಳು ಚಿತ್ತಕ್ಕೆ ಅವಲಂಬನವಾಗುತ್ತಾರಾದರೂ ಅವರೆಲ್ಲರೂ ಅಶುದ್ಧಾಶ್ರಯಗಳೆಂದು ತಿಳಿಯಬೇಕು. ಏಕೆಂದರೆ, ಅವರು ಕರ್ಮಾಧೀನರಾಗಿ ಜನಿಸಿದವರು (ಸಂಸಾರಿಗಳು) (77). ಭಗವಂತನ ಮೂರ್ತಿಮತ್ತಾದ ರೂಪವು ಇತರ ಎಲ್ಲ ಆಲಂಬನಗಳನ್ನು ಬೇಡವೆನಿಸುತ್ತದೆ. ಆ ಭಗವದ್ರೂಪದಲ್ಲಿ ಮನಸ್ಸನ್ನು ನಿಲ್ಲಿಸುವುದಕ್ಕೆ ಧಾರಣೆಯೆಂದು ಹೆಸರು (78). ಶ್ರೀಹರಿಯ ಮೂರ್ತರೂಪ ಯಾವುದು, ಯಾವ ಬಗೆಯ ರೂಪವನ್ನು ಧ್ಯಾನಿಸಬೇಕು—ಎಂಬುದನ್ನು ಹೇಳುತ್ತೇನೆ, ಕೇಳು. ಚಿತ್ತವೃತ್ತಿಗೆ ಆಲಂಬನವಿಲ್ಲದೆ ಧಾರಣೆಯೆಂಬುದು ಕೂಡುವುದಿಲ್ಲ (79). ಭಗವಂತನ ಧ್ಯೇಯವಾದ

---

* 'ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ' (ಭ. ಗೀ. 14-27)

**ಪ್ರಸನ್ನವದನಂ ಚಾರುಪದ್ಮಪತ್ರೋಪಮೇಕ್ಷಣಮ್ ।**
**ಸುಕಪೋಲಂ ಸುವಿಸ್ತೀರ್ಣಲಲಾಟಫಲಕೋಜ್ಜ್ವಲಮ್ ॥ 80**

**ಸಮಕರ್ಣಾಂತವಿನ್ಯಸ್ತಚಾರುಕುಂಡಲಭೂಷಣಮ್ ।**
**ಕಂಬುಗ್ರೀವಂ ಸುವಿಸ್ತೀರ್ಣ ಶ್ರೀವತ್ಸಾಂಕಿತವಕ್ಷಸಮ್ ॥ 81**

**ವಲಿತ್ರಿಭಂಗಿನಾ ಮಗ್ನನಾಭಿನಾ ಹ್ಯುದರೇಣ ಚ ।**
**ಪ್ರಲಂಬಾಷ್ಟಭುಜಂ ವಿಷ್ಣುಮಥವಾಽಪಿ ಚತುರ್ಭುಜಮ್ ॥ 82**

**ಸಮಸ್ಥಿತೋರುಜಂಘಂ ಚ ಸುಸ್ಥಿತಾಂಘ್ರಿವರಾಂಬುಜಮ್ ।**
**ಚಿಂತಯೇದ್ ಬ್ರಹ್ಮಭೂತಂ ತಂ ಪೀತನಿರ್ಮಲವಾಸಸಮ್ ॥ 83**

**ಕಿರೀಟಹಾರಕೇಯೂರಕಟಕಾದಿವಿಭೂಷಿತಮ್ ॥ 84**

**ಶಾರ್ಙ್ಗಶಂಖಗದಾಖಡ್ಗಚಕ್ರಾಕ್ಷವಲಯಾನ್ವಿತಮ್ ।**
**ವರದಾಭಯಹಸ್ತಂ ಚ ಮುದ್ರಿಕಾರತ್ನಭೂಷಿತಮ್ ॥ 85**

---

ರೂಪ ಹೇಗಿರಬೇಕೆಂದರೆ—ಪ್ರಸನ್ನವಾದ ಮುಖ; ಪದ್ಮದಳದಂತೆ ಮನೋಹರವಾದ ನೇತ್ರ; ಸುಂದರವಾದ ಕಪೋಲ; ವಿಶಾಲವಾಗಿ ವಿರಾಜಮಾನವಾದ ಹಣೆ; ಮನೋಜ್ಞವಾದ ಕುಂಡಲಗಳಿಂದ ಭೂಷಿತವಾದ ಸಮಾಕೃತಿಯ ಕಿವಿಗಳು; ಶಂಖದಂತೆ ರೇಖಾತ್ರಯಾಂಕಿತವಾದ ಕತ್ತು ; ಶ್ರೀವತ್ಸಾಂಕಿತವಾದ ವಿಸ್ತೀರ್ಣ ವಕ್ಷಸ್ಥಲ (80-81) ಅಲೆಗಳಂತೆ ತ್ರಿಭಂಗಿಗಳಿಂದ ಶೋಭಿಸುವ ನಾಭಿ ಮತ್ತು ಉದರ. ಈ ವಿಷ್ಣುಮೂರ್ತಿಯು ನೀಳವಾದ ಅಷ್ಟಭುಜಗಳಿಂದ ಕೂಡಿದ್ದೋ ಅಥವಾ ಚತುರ್ಭುಜಗಳಿಂದ ಕೂಡಿದ್ದೋ ಆಗಬಹುದು (82). ಸಮಪ್ರಮಾಣದ ತೊಡೆ ಮತ್ತು ಮೊಣಕಾಲುಗಳುಳ್ಳದ್ದೂ ಸುಸ್ಥಿತವಾದ ಪಾದಕಮಲಗಳುಳ್ಳದ್ದೂ ಆದ ಮೂರ್ತಿ. ಶುಭ, ಪೀತಾಂಬರ ಧಾರಿಯೂ ಕಿರೀಟ ಹಾರಕೇಯೂರ ಕಟಕಾದಿ ಭೂಷಣಗಳಿಂದ ಭೂಷಿತನೂ ಬ್ರಹ್ಮಸ್ವರೂಪನೂ ಆದ ಶ್ರೀಹರಿಯ ಮೂರ್ತಿಯನ್ನು ಈ ಪ್ರಕಾರವಾಗಿ ಧ್ಯಾನಿಸಬೇಕು (83-84). ಅಲ್ಲದೆ ಧ್ಯೇಯವಾದ ಮೂರ್ತಿಯು ಶಾರ್ಙ್ಗಧನುಸ್ಸು, ಶಂಖ, ಗದಾ, ಖಡ್ಗ, ಚಕ್ರ, ಅಕ್ಷಮಾಲೆಗಳಿಂದ ಶೋಭಿತವೂ ವರದಹಸ್ತ ,

**ಚಿಂತಯೇತ್ತನ್ಮಯೋ ಯೋಗೀ ಸಮಾಧಾಯಾತ್ಮಮಾನಸಮ್।**
**ತಾವದ್ಯಾವದ್ ದೃಢೀಭೂತಾ ತತ್ರೈವ ನೃಪ ಧಾರಣಾ॥** 86
**ವ್ರಜತಸ್ತಿಷ್ಠತೋಽನ್ಯದ್ವಾ ಸ್ವೇಚ್ಛಯಾ ಕರ್ಮ ಕುರ್ವತಃ।**
**ನಾಪಯಾತಿ ಯದಾ ಚಿತ್ತಾತ್ ಸಿದ್ಧಾಂ ಮನ್ಯೇತ ತಾಂ ತದಾ॥** 87
**ತತಃ ಶಂಖಗದಾಚಕ್ರಶಾರ್ಙ್ಗಾದಿರಹಿತಂ ಬುಧಃ।**
**ಚಿಂತಯೇದ್ಭಗವದ್ರೂಪಂ ಪ್ರಶಾಂತಂ ಸಾಕ್ಷಸೂತ್ರಕಮ್॥** 88
**ಸಾ ಯದಾ ಧಾರಣಾ ತದ್ವದವಸ್ಥಾನವತೀ ತತಃ।**
**ಕಿರೀಟಕೇಯೂರಮುಖೈರ್ಭೂಷಣೈ ರಹಿತಂ ಸ್ಮರೇತ್॥** 89

---

ಅಭಯಹಸ್ತಗಳಿಂದ* ಸಮೇತವೂ (ಬೆರಳುಗಳಲ್ಲಿ) ರತ್ನಖಚಿತವಾದ ಉಂಗುರದಿಂದ ಅಲಂಕೃತವೂ ಆಗಿರಬೇಕು (85). ಖಾಂಡಿಕ್ಯ, ಯೋಗಿಯು ಈ ಭಗವನ್ಮೂರ್ತಿಯಲ್ಲಿ ತನ್ನ ಮನಸ್ಸನ್ನು ನೆಲೆಗೊಳಿಸಿ ತನ್ಮಯನಾಗಿ ಧ್ಯಾನಿಸುತ್ತಿರಬೇಕು. ಧಾರಣೆಯು ದೃಢವಾಗಿ ಆ ಮೂರ್ತಿಯಲ್ಲಿಯೇ ನಿಂತು ಹೋಗುವ ಪರ್ಯಂತ ಧ್ಯಾನವು ನಡೆಯಬೇಕು (86). ನಿಂತಾಗ ಹೋಗುವಾಗ ಅಥವಾ ಸ್ವೇಚ್ಛೆಯಿಂದ ಇನ್ನಾವುದಾದರೂ ಕೆಲಸವನ್ನು ಮಾಡುವಾಗ ಸರ್ವದಾ ಈ ಧ್ಯೇಯಮೂರ್ತಿಯು ಮನಸ್ಸಿನಿಂದ ಸ್ವಲ್ಪವೂ ವಿಚಲಿತವಾಗದೆ ಹೋದರೆ, ಆಗ ಧಾರಣೆಯು ಸಿದ್ಧಿಸಿತೆಂದು ತಿಳಿಯತಕ್ಕದ್ದು (87). ಅನಂತರ ಶಂಖ, ಗದಾ, ಚಕ್ರ, ಶಾರ್ಙ್ಗ—ಮುಂತಾದ ಆಯುಧಗಳಿಂದ ರಹಿತವೂ ಅಕ್ಷಮಾಲಾ ಧಾರಿಯೂ ಆದ ಭಗವಂತನ ಪ್ರಶಾಂತರೂಪವನ್ನು ಚಿಂತಿಸುತ್ತಿರಬೇಕು. ಹಿಂದೆ ಹೇಳಿದಂತೆ ಈ ಪ್ರಶಾಂತಮೂರ್ತಿಯಲ್ಲಿ ಧಾರಣೆಯು ದೃಢವಾದಮೇಲೆ, ಕಿರೀಟಕೇಯೂರ ಮುಂತಾದ ಭೂಷಣಗಳಿಂದ ರಹಿತವಾದ ಮೂರ್ತಿಯನ್ನು

---

* ಮೂರ್ತಿಯು ಅಷ್ಟಭುಜವಾದಾಗ ಶಾರ್ಙ್ಗಧಾರಿಹಸ್ತ–ಮುಂತಾದ ಅಷ್ಟಹಸ್ತ ಗಳೆಂಬುದು ಸರಿಹೋಗುತ್ತದೆ. ಚತುರ್ಭುಜವೆಂಬ ಪಕ್ಷದಲ್ಲಿ ಕ್ರಮವಾಗಿ ಶಂಖ, ಗದಾ, ಖಡ್ಗ, ಚಕ್ರ—ಇವುಗಳನ್ನು ಹಿಡಿದಿರುವ ಮೂರ್ತಿಯೆಂದು ತೋರುತ್ತದೆ. ವ್ಯಾಖ್ಯಾನ ಕಾರರು "ಅಷ್ಟಭುಜತ್ವೇ ಶಾರ್ಙ್ಗಾದೀನಿಷಟ್ ಶಿಷ್ಟಭುಜಯೋಃ ಪದ್ಮಬಾಣೌ, ವರಾಭಯೇವಾ, ಚತುರ್ಭುಜತ್ವೇ ಶಂಖಚಕ್ರಗದಾಬ್ಜಾನಿ" ಎಂದು ಬರೆದಿದ್ದಾರೆ. ಪದ್ಮ, ಬಾಣ—ಇವೆರಡನ್ನು ಮೂಲದಲ್ಲಿ ಹೇಳಿಯೇ ಇಲ್ಲ. ಹೀಗೆ ವ್ಯಾಖ್ಯಾನಿಸಲು ಬೇರೆ ಪ್ರಮಾಣವಿರಬಹುದು.

**ತದೇಕಾವಯವಂ ದೇವಂ ಚೇತಸಾ ಹಿ ಪುನರ್ಬುಧಃ।**
**ಕುರ್ಯಾತ್ತತೋಽವಯವಿನಿ ಪ್ರಣಿಧಾನಪರೋ ಭವೇತ್॥** 90

**ತದ್ರೂಪಪ್ರತ್ಯಯಾ ಚೈಕಾ ಸಂತತಿಶ್ಚಾನ್ಯನಿಃಸ್ಪೃಹಾ।**
**ತದ್ಧ್ಯಾನಂ ಪ್ರಥಮೈರಂಗೈಃ ಷಡ್‌ಭಿರ್ನಿಷ್ಪಾದ್ಯತೇ ನೃಪ॥** 91

**ತಸ್ಯೈವ ಕಲ್ಪನಾಹೀನಂ ಸ್ವರೂಪಗ್ರಹಣಂ ಹಿ ಯತ್।**
**ಮನಸಾ ಧ್ಯಾನನಿಷ್ಪಾದ್ಯಂ ಸಮಾಧಿಃ ಸೋಽಭಿಧೀಯತೇ॥** 92

**ವಿಜ್ಞಾನಂ ಪ್ರಾಪಕಂ ಪ್ರಾಪ್ಯೇ ಪರೇ ಬ್ರಹ್ಮಣಿ ಪಾರ್ಥಿವ।**
**ಪ್ರಾಪಣೀಯಸ್ತಥೈವಾತ್ಮಾ ಪ್ರಕ್ಷೀಣಾಶೇಷಭಾವನಃ॥** 93

---

ಧ್ಯಾನಿಸಬೇಕು (88-89). ಆ ಮೂರ್ತಿಯಲ್ಲಿ ಧಾರಣೆಯು ಸ್ಥಿರವಾದಮೇಲೆ, ಪ್ರಸನ್ನವದನ—ಇತ್ಯಾದಿ ಲೀಲಾವಯವಗಳನ್ನು ಧರಿಸಿದ ಮೂರ್ತಿಯಲ್ಲಿ ಪ್ರಧಾನವಾದ (ಮುಖವೆಂಬ) ಒಂದೇ ಅವಯವದಲ್ಲಿ ಪ್ರಾಜ್ಞನಾದವನು ಮನಸ್ಸನ್ನು ನಿಲ್ಲಿಸಿ ಚಿತ್ತಸ್ಥೈರ್ಯವನ್ನು ಸಂಪಾದಿಸಬೇಕು (90). ಹೀಗೆ ಧಾರಣಾ ಸಿದ್ಧವಾದ ವಸ್ತುವನ್ನು, ನಡುವೆ ವಿಜಾತೀಯ ಪ್ರತ್ಯಯವು ಬಾರದಂತೆ, ಸಂತತ ವಾಗಿ ಚಿಂತಿಸುವುದು ಧ್ಯಾನವೆನಿಸುತ್ತದೆ. ಖಾಂಡಿಕ್ಯ, ಈ ಧ್ಯಾನವು ಮೊದಲು ಹೇಳಿದ ಯಮಾದಿಧಾರಣಾಂತವಾದ ಷಡಂಗಗಳಿಂದ ನಿಷ್ಪನ್ನವಾಗುತ್ತದೆ (91). ಅನಂತರ (ಧ್ಯಾತೃ, ಧ್ಯಾನ, ಧ್ಯೇಯಗಳೆಂಬ) ಭೇದಕಲ್ಪನಾಶೂನ್ಯವೂ ಧ್ಯಾನ ಸಾಧ್ಯವೂ ಆಗಿ ಸಂಭವಿಸುವ, ಮನಸ್ಸಿನಿಂದ ಧ್ಯೇಯವಸ್ತುವಿನ ಯಾವ ಸ್ವರೂಪ ಗ್ರಹಣ ಉಂಟೋ ಅದು ಸಮಾಧಿ* ಎನಿಸುತ್ತದೆ (92). ರಾಜ, (ಸಮಾಧಿಜನ್ಯ ಸ್ವರೂಪಸಾಕ್ಷಾತ್ಕಾರವೇ ವಿಜ್ಞಾನ) ಈ ವಿಜ್ಞಾನವು ಪ್ರಾಪ್ಯವಾದ ಪರಬ್ರಹ್ಮದ ಪ್ರಾಪ್ತಿಗೆ ಸಾಧನವಾಗಿದೆ. ಸಮಸ್ತ ಭಾವನಾತ್ರಿತಯರಹಿತನಾದ ಆತ್ಮನೇ ಪ್ರಾಪ್ಯ ನಾದವನು (93). ಮುಕ್ತಿಲಾಭದಲ್ಲಿ ಕ್ಷೇತ್ರಜ್ಞನೇ (ಜೀವನೇ) ಕರಣವನ್ನು

---

* ದೇಶಬಂಧಶ್ಚಿತ್ತಸ್ಯ ಧಾರಣಾ।
ತತ್‌ಪ್ರತ್ಯಯೈಕತಾನತಾ ಧ್ಯಾನಮ್।
ತದೇಕಾಕಾರತಯಾಽವಸ್ಥಿತಿರ್ಧ್ಯಾನಮ್॥
—ಯೋಗಸೂತ್ರ

**ಕ್ಷೇತ್ರಜ್ಞಃ ಕರಣೀ ಜ್ಞಾನಂ ಕರಣಂ ತಸ್ಯ ತೇನ ತತ್।**
**ನಿಷ್ಪಾದ್ಯ ಮುಕ್ತಿಕಾರ್ಯಂ ವೈ ಕೃತಕೃತ್ಯೋ ನಿವರ್ತತೇ॥ 94**

**ತದ್ಭಾವಭಾವಮಾಪನ್ನಸ್ತತೋಽಸೌ ಪರಮಾತ್ಮನಾ।**
**ಭವತ್ಯಭೇದೀ ಭೇದಸ್ಯ ತಸ್ಯಾಜ್ಞಾನಕೃತೋ ಭವೇತ್॥ 95**

**ವಿಭೇದಜನಕೇಽಜ್ಞಾನೇ ನಾಶಮಾತ್ಯಂತಿಕಂ ಗತೇ।**
**ಆತ್ಮನೋ ಬ್ರಹ್ಮಣೋ ಭೇದಮಸಂತಂ ಕಃ ಕರಿಷ್ಯತಿ॥ 96**

**ಇತ್ಯುಕ್ತಸ್ತೇ ಮಯಾ ಯೋಗಃ ಖಾಂಡಿಕ್ಯ ಪರಿಪೃಚ್ಛತಃ।**
**ಸಂಕ್ಷೇಪವಿಸ್ತರಾಭ್ಯಾಂ ತು ಕಿಮನ್ಯತ್ ಕ್ರಿಯತಾಂ ತವ॥ 97**

*ಖಾಂಡಿಕ್ಯ ಉವಾಚ:*

**ಕಥಿತೇ ಯೋಗಸದ್ಭಾವೇ ಸರ್ವಮೇವ ಕೃತಂ ಮಮ।**
**ತವೋಪದೇಶೇನಾಶೇಷೋ ನಷ್ಟಶ್ಚಿತ್ತಮಲೋ ಯತಃ॥ 98**

---

ಹಿಡಿದಿರುವ ಕರ್ತೃ. ಪೂರ್ವೋಕ್ತ ವಿಜ್ಞಾನವೇ ಕರಣ (ಸಾಧನ). ಈ ಕರಣವು ಮೋಕ್ಷಪ್ರಾಪ್ತಿಯೆಂಬ ಕಾರ್ಯವನ್ನು ನಿರ್ವಹಿಸಿ ಕೃತಕೃತ್ಯವಾಗಿ ನಿವೃತ್ತವಾಗುತ್ತದೆ (94). ಯೋಗಿಯು (ಬ್ರಹ್ಮಸ್ವರೂಪವೇ ತಾನೆಂಬ) ತದ್ಭಾವದ ಭಾವನೆಯನ್ನು ತಳೆದು ಪರಮಾತ್ಮನೊಡನೆ ಅಭಿನ್ನನಾಗಿಬಿಡುತ್ತಾನೆ. ಅದುವರೆಗೆ ಆತನಿಗಿದ್ದ ಭೇದಜ್ಞಾನವು ಅಜ್ಞಾನನಿಮಿತ್ತಕವಾದುದು (95). ಭೇದಜ್ಞಾನವನ್ನುಂಟು ಮಾಡುವ ಅಜ್ಞಾನವು ಸಂಪೂರ್ಣವಾಗಿ ನಷ್ಟವಾದಮೇಲೆ, ತನಗೂ ಪರಬ್ರಹ್ಮಕ್ಕೂ ಇಲ್ಲದೇ ಇದ್ದ ಭೇದವನ್ನು ಮತ್ತೆ ಹುಟ್ಟಿ ಹಾಕತಕ್ಕದ್ದಾದರೂ ಯಾವುದು? (96). ಖಾಂಡಿಕ್ಯ, ನೀನು ಶುಶ್ರೂಷುವಾಗಿ ಕೇಳಿದ್ದರಿಂದ ಈ ಬ್ರಹ್ಮಯೋಗವನ್ನು ಸಂಕ್ಷೇಪ* ವಿಸ್ತರಗಳಿಂದ ನಿನಗೆ ತಿಳಿಸಿದ್ದೇನೆ. ನಿನಗೆ ಇನ್ನೇನಾಗಬೇಕು, ಹೇಳು" ಎಂದನು (97). ಆಗ ಖಾಂಡಿಕ್ಯನು "ಕೇಶಿಧ್ವಜ, ಯೋಗದ ರಹಸ್ಯವನ್ನು ನೀನು ತಿಳಿಸಿಕೊಟ್ಟ ಮೇಲೆ, ನನಗೆ ಆಗಬೇಕಾದ್ದೆಲ್ಲ ವನ್ನೂ ನೀನು ಮಾಡಿಕೊಟ್ಟಂತೆಯೇ ಆಯಿತು. ನಿನ್ನ ಉಪದೇಶದಿಂದ ನನ್ನ ಚಿತ್ತದ ಕಶ್ಮಲವೆಲ್ಲವೂ ತೊಡೆದುಹೋಯಿತು (98). ನರೇಂದ್ರ, ವಾಸ್ತವವಾಗಿ

---

* ಕೆಲವು ಅಂಶದಲ್ಲಿ ಸಂಕ್ಷೇಪ, ಕೆಲವು ಅಂಶದಲ್ಲಿ ವಿಸ್ತರ.

**ಮಮೇತಿ ಯನ್ಮಯಾ ಚೋಕ್ತಮಸದೇತನ್ನ ಚಾನ್ಯಥಾ।**
**ನರೇಂದ್ರ ಗದಿತುಂ ಶಕ್ಯಮಪಿ ವಿಜ್ಞೇಯವೇದಿಭಿಃ॥** 99

**ಅಹಂ ಮಮೇತ್ಯವಿದ್ಯೇಯಂ ವ್ಯವಹಾರಸ್ತಥಾನಯೋಃ।**
**ಪರಮಾರ್ಥಸ್ತ್ವಸಂಲಾಪ್ಯೋ ಗೋಚರೇ ವಚಸಾಂ ನಯಃ॥** 100

**ತದ್ಗಚ್ಛ ಶ್ರೇಯಸೇ ಸರ್ವಂ ಮಮೈತದ್ಭವತಾ ಕೃತಮ್।**
**ಯದ್ವಿಮುಕ್ತಿಪ್ರದೋ ಯೋಗಃ ಪ್ರೋಕ್ತಃ ಕೇಶಿಧ್ವಜಾವ್ಯಯಃ॥** 101

*ಶ್ರೀಪರಾಶರ ಉವಾಚ:*

**ಯಥಾರ್ಹಂ ಪೂಜಯಾ ತೇನ ಖಾಂಡಿಕ್ಯೇನ ಸ ಪೂಜಿತಃ।**
**ಆಜಗಾಮ ಪುರಂ ಬ್ರಹ್ಮಂಸ್ತತಃ ಕೇಶಿಧ್ವಜೋ ನೃಪಃ॥** 102

**ಖಾಂಡಿಕ್ಯೋಽಪಿ ಸುತಂ ಕೃತ್ವಾ ರಾಜಾನಂ ಯೋಗಸಿದ್ಧಯೇ।**
**ವನಂ ಜಗಾಮ ಗೋವಿಂದೇ ವಿನಿವೇಶಿತಮಾನಸಃ॥** 103

---

'ನನ್ನ' ಎಂದು ನಾನು ಹೇಳಿದ್ದು ಸಹ ಅಯುಕ್ತವೇ ಹೊರತು ಯುಕ್ತವಲ್ಲ. ಪರಮಾರ್ಥವನ್ನರಿತವರಿಗೆ 'ನನ್ನ' ಎಂದು ಹೇಳಲು ಕೂಡ ಶಕ್ಯವಿಲ್ಲ (99). 'ನಾನು' 'ನನ್ನದು' ಎಂಬುದು ಅವಿದ್ಯೆಯೇ ಸರಿ. ಆದರಿಂದಲೇ ಈ ರೀತಿಯಾಗಿ ಅವುಗಳ ವ್ಯವಹಾರ ನಡೆಯುತ್ತದೆ. ಪರಮಾತ್ಮವಸ್ತು ಬಾಯಿಂದ ಹೇಳಲು ಬರತಕ್ಕದ್ದಲ್ಲ. ಅದು ವಾಕ್ಕುಗಳಿಗೆ ಅಗೋಚರ (100). ಕೇಶಿಧ್ವಜ, ಮುಕ್ತಿಪ್ರದವಾದ ಈ ಯೋಗರಹಸ್ಯವನ್ನು ತಿಳಿಸಿದ ನನ್ನ ಶ್ರೇಯಸ್ಸಿಗಾಗಿ ಸರ್ವವನ್ನೂ ನೀನು ಮಾಡಿದ್ದೀಯೆ. ಶಾಶ್ವತವಾದ ಯೋಗವಿದು. ನೀನು ಹೋಗಿಬಾ, ಶುಭಮಸ್ತು" ಎಂದನು (101). ಮೈತ್ರೇಯ, ಅನಂತರ ಖಾಂಡಿಕ್ಯನು (ಗುರುಭಾವನೆಯಿಂದ) ಕೇಶಿಧ್ವಜನನ್ನು ಯಥೋಚಿತಸತ್ಕಾರಗಳಿಂದ ಪೂಜಿಸಲಾಗಿ ಆತನು ತನ್ನ ರಾಜಧಾನಿಗೆ ಹಿಂದಿರುಗಿದನು (102). ಇತ್ತ ಖಾಂಡಿಕ್ಯನು ತನ್ನ ಮಗನನ್ನು ರಾಜನನ್ನಾಗಿ* ನೇಮಿಸಿ, ಶ್ರೀಹರಿಯಲ್ಲಿ ಮನಸ್ಸನ್ನು ನೆಲೆಗೊಳಿಸಿ ಯೋಗಸಿದ್ಧಿಗೋಸ್ಕರ ವನಕ್ಕೆ ಹೊರಟುಹೋದನು. ಅಲ್ಲಿ ಖಾಂಡಿಕ್ಯರಾಜನು ಯಮಾದಿ

* ಆ ಸಮಯದಲ್ಲಿ ಖಾಂಡಿಕ್ಯನಿಗೆ ರಾಜ್ಯವಿರದಿದ್ದರೂ ಮಂತ್ರಿ, ಭೃತ್ಯ–ಮೊದಲಾದ ಪರಿವಾರದ ಒಡೆತನವನ್ನು ಮಗನಿಗೆ ವಹಿಸಿಕೊಟ್ಟನೆಂದು ಅಭಿಪ್ರಾಯ.

**ತತ್ರೈಕಾಂತಮತಿರ್ಭೂತ್ವಾ ಯಮಾದಿಗುಣಸಂಯುತಃ।**
**ವಿಷ್ಣ್ವಾಖ್ಯೇ ನಿರ್ಮಲೇ ಬ್ರಹ್ಮಣ್ಯವಾಪ ನೃಪತಿರ್ಲಯಮ್॥** 104

**ಕೇಶಿಧ್ವಜೋ ವಿಮುಕ್ತ್ಯರ್ಥಂ ಸ್ವಕರ್ಮಕ್ಷಪಣೋನ್ಮುಖಃ।**
**ಬುಭುಜೇ ವಿಷಯಾನ್ ಕರ್ಮ ಚಕ್ರೇ ಚಾನಭಿಸಂಹಿತಮ್॥** 105

**ಅಕಲ್ಯಾಣೋಪಭೋಗೈಶ್ಚ ಕ್ಷೀಣಪಾಪೋಽಮಲಸ್ತಥಾ।**
**ಅವಾಪ ಸಿದ್ಧಿಮತ್ಯಂತಾಂ ತಾಪಕ್ಷಯಫಲಾಂ ದ್ವಿಜ॥** 106

ಇತಿ ಶ್ರೀವಿಷ್ಣುಪುರಾಣೇ ಷಷ್ಠಾಂಶೇ ಸಪ್ತಮೋಽಧ್ಯಾಯಃ

---

ಗುಣಗಳನ್ನು ಅಭ್ಯಾಸ ಮಾಡಿ, ವಿಷ್ಣು ಎಂಬ ಹೆಸರಿನ ಶುದ್ಧಬ್ರಹ್ಮದಲ್ಲಿ ಚಿತ್ತವನ್ನು ಏಕಾಗ್ರತೆಯಿಂದ ನಿಲ್ಲಿಸಿ, ಬ್ರಹ್ಮದಲ್ಲಿ ಐಕ್ಯವನ್ನು ಪಡೆದನು (103-104). ಕೇಶಿಧ್ವಜನಾದರೋ (ವಿದೇಹ) ಮುಕ್ತಿಯ ಉದ್ದೇಶದಿಂದ ತನ್ನ ಪ್ರಾರಬ್ಧ ಕರ್ಮಗಳ ಕ್ಷಯಕ್ಕಾಗಿ ವಿಷಯಭೋಗಗಳನ್ನು ಅನುಭವಿಸುತ್ತ ಫಲಾಭಿಸಂಧಿಯಿಲ್ಲದೆಯೇ ಕರ್ಮಗಳನ್ನು ಮಾಡುತ್ತಿದ್ದನು (105). ಮೈತ್ರೇಯ ಕೇಶಿಧ್ವಜನು (ವಿಷಯಸುಖಭೋಗಗಳಿಂದಲ್ಲದೆ) ಕಲ್ಯಾಣಕರವಲ್ಲದ ದುಃಖಾನುಭವಗಳಿಂದಲೂ ತನ್ನ ಪ್ರಾರಬ್ಧ ಕರ್ಮಗಳನ್ನು ಕ್ಷಯಿಸಿಕೊಂಡು (ಪುಣ್ಯಪಾಪಗಳ ಲೇಪವಿಲ್ಲದೆ) ನಿರ್ಮಲನಾಗಿ ತಾಪತ್ರಯರಹಿತವಾದ ಆತ್ಯಂತಿಕಸಿದ್ಧಿಯನ್ನು ಪಡೆದನು (106).

ಇಲ್ಲಿಗೆ ಶ್ರೀವಿಷ್ಣುಪುರಾಣದ ಷಷ್ಠಾಂಶದಲ್ಲಿ
ಏಳನೆಯ ಅಧ್ಯಾಯ ಮುಗಿಯಿತು.



## ಅಷ್ಟಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಇತ್ಯೇಷ ಕಥಿತಃ ಸಮ್ಯಕ್ ತೃತೀಯಃ ಪ್ರತಿಸಂಚರಃ।**
**ಆತ್ಯಂತಿಕೋ ವಿಮುಕ್ತಿರ್ಯಾ ಲಯೋ ಬ್ರಹ್ಮಣಿ ಶಾಶ್ವತೇ॥** 1

**ಸರ್ಗಶ್ಚ ಪ್ರತಿಸರ್ಗಶ್ಚ ವಂಶಮನ್ವಂತರಾಣಿ ಚ।**
**ವಂಶಾನುಚರಿತಂ ಚೈವ ಭವತೋ ಗದಿತಂ ಮಯಾ॥** 2

**ಪುರಾಣಂ ವೈಷ್ಣವಂ ಚೈತತ್ ಸರ್ವಕಿಲ್ಬಿಷನಾಶನಮ್।**
**ವಿಶಿಷ್ಟಂ ಸರ್ವಶಾಸ್ತ್ರೇಭ್ಯಃ ಪುರುಷಾರ್ಥೋಪಪಾದಕಮ್॥** 3

**ತುಭ್ಯಂ ಯಥಾವನ್ಮೈತ್ರೇಯ ಪ್ರೋಕ್ತಂ ಶುಶ್ರೂಷವೇಽವ್ಯಯಮ್।**
**ಯದನ್ಯದಪಿ ವಕ್ತವ್ಯಂ ತತ್ ಪೃಚ್ಛಾದ್ಯ ವದಾಮಿ ತೇ॥** 4

---

## ಅಧ್ಯಾಯ 8

ಗುರುಶಿಷ್ಯಪರಂಪರೆ, ವಿಷ್ಣುಪುರಾಣದ ಮಾಹಾತ್ಮ್ಯ, ಭಗವಂತನ ಮಹಿಮೆ, ಉಪಸಂಹಾರ.

ಪರಾಶರಮಹರ್ಷಿಗಳು "ಮೈತ್ರೇಯ, ಈ ಪ್ರಕಾರವಾಗಿ ನಿನಗೆ ಮೂರನೆಯ ಪ್ರತಿಸಂಚರ ಯಾವುದೆಂಬುದನ್ನು ಸ್ಪಷ್ಟವಾಗಿ ಹೇಳಿದ್ದೇನೆ. ಶಾಶ್ವತವಾದ ಬ್ರಹ್ಮದಲ್ಲಿ ಲಯವಾಗುವುದೆಂಬ ಯಾವ ಆತ್ಯಂತಿಕಮುಕ್ತಿ ಉಂಟೋ ಅದೇ ಈ ಪ್ರತಿಸಂಚರ (1). ಸರ್ಗ, ಪ್ರತಿಸರ್ಗ, ವಂಶ, ಮನ್ವಂತರಗಳು, ವಂಶಾನುಚರಿತ—ಇವುಗಳನ್ನೂ ನಾನು ಹೇಳಿದ್ದೇನೆ. ಸರ್ವಪಾಪಹರವಾದ ವೈಷ್ಣವಪುರಾಣ ಇದು. ಪುರುಷಾರ್ಥೋಪಪಾದಕವಾದ ಈ ಪುರಾಣವು ಇತರ ಸಕಲಶಾಸ್ತ್ರಗಳಿಗಿಂತಲೂ ವಿಶಿಷ್ಟವಾದುದು (2-3). ಶುಶ್ರೂಷುವಾದ ನಿನಗೆ ಇದೆಲ್ಲವನ್ನೂ ಯಥಾವತ್ತಾಗಿ ತಿಳಿಸಿದ್ದೇನೆ. ಇನ್ನೇನಾದರೂ ಕೇಳಬೇಕಾದಿದ್ದರೆ ಕೇಳು. ನಿನಗೆ ಹೇಳುವೆನು" ಎಂದು ನುಡಿದರು (4). ಆಗ ಮೈತ್ರೇಯನು

ಶ್ರೀಮೈತ್ರೇಯ ಉವಾಚ:

**ಭಗವನ್ ಕಥಿತಂ ಸರ್ವಂ ಯತ್ ಪೃಷ್ಟೋಽಸಿ ಮಯಾ ಮುನೇ।**
**ಶ್ರುತಂ ಚೈತನ್ಮಯಾ ಭಕ್ತ್ಯಾ ನಾನ್ಯತ್ ಪ್ರಷ್ಟವ್ಯಮಸ್ತಿ ಮೇ॥** 5

**ವಿಚ್ಛಿನ್ನಾಃ ಸರ್ವಸಂದೇಹಾ ವೈಮಲ್ಯಂ ಮನಸಃ ಕೃತಮ್।**
**ತ್ವತ್ ಪ್ರಸಾದಾನ್ಮಯಾ ಜ್ಞಾತಾ ಉತ್ಪತ್ತಿಸ್ಥಿತಿಸಂಕ್ಷಯಾಃ॥** 6

**ಜ್ಞಾತಶ್ಚತುರ್ವಿಧೋ ರಾಶಿಃ ಶಕ್ತಿಶ್ಚ ತ್ರಿವಿಧಾ ಗುರೋ।**
**ವಿಜ್ಞಾತಾ ಸಾ ಚ ಕಾರ್ತ್ಸ್ನ್ಯೇನ ತ್ರಿವಿಧಾ ಭಾವಭಾವನಾ॥** 7

**ತ್ವತ್ಪ್ರಸಾದಾನ್ಮಯಾ ಜ್ಞಾತಂ ಜ್ಞೇಯಮನ್ಯೈರಲಂ ದ್ವಿಜ।**
**ಯದೇತದಖಿಲಂ ವಿಷ್ಣೋರ್ಜಗನ್ನ ವ್ಯತಿರಿಚ್ಯತೇ॥** 8

**ಕೃತಾರ್ಥೋಽಹಮಸಂದೇಹಃ ತ್ವತ್ಪ್ರಸಾದಾನ್ಮಹಾಮುನೇ।**
**ವರ್ಣಧರ್ಮಾದಯೋ ಧರ್ಮಾ ವಿದಿತಾ ಯದಶೇಷತಃ॥** 9

---

ಇಂತೆಂದನು: "ಭಗವನ್, ನಾನು ಕೇಳಿದ್ದೆಲ್ಲವನ್ನೂ ಹೇಳಿದ್ದೀರಿ. ಸಕಲವನ್ನೂ ಭಕ್ತಿಯಿಂದ ಆಲಿಸಿದ್ದೇನೆ. ಇನ್ನು ನಾನು ಕೇಳಬೇಕಾದ್ದೇನೂ ಇಲ್ಲ. ಮಹರ್ಷಿಗಳೆ, ನನ್ನ ಸರ್ವಸಂದೇಹಗಳೂ ಹೊರಟು ಹೋದುವು. ಮನಸ್ಸು ನಿರ್ಮಲವಾಯಿತು. ನಿಮ್ಮ ಅನುಗ್ರಹದಿಂದ ಉತ್ಪತ್ತಿಸ್ಥಿತಿಲಯಗಳೆಂದರೇನೆಂಬುದು ತಿಳಿಯಿತು (5-6). ಗುರುಗಳೆ, ನಾಲ್ಕು ಬಗೆಯ ರಾಶಿ,* ಮೂರು ಬಗೆಯ ಶಕ್ತಿ ,§ ಮೂರು ಬಗೆಯ ಭಾವಭಾವನೆಗಳ** ವಿಚಾರವೂ ಪೂರ್ಣವಾಗಿ ತಿಳಿಯಿತು. ಅನ್ಯರಿಗೂ ಜ್ಞೇಯವಾದ ಇನ್ನೊಂದು ವಿಷಯವು ನಿಮ್ಮ ಅನುಗ್ರಹದಿಂದ ವಿದಿತವಾಯಿತು. ಏನೆಂದರೆ, ಈ ನಿಖಿಲಜಗತ್ತು ವಿಷ್ಣುವಿಗಿಂತ ಭಿನ್ನವಾದದ್ದಲ್ಲ (7-8). ಮಹಾಮುನಿಗಳೇ, ನಿಮ್ಮ ಕೃಪೆಯಿಂದ ನಾನು ಕೃತಾರ್ಥನಾದೆನು, ಸಂದೇಹವಿಲ್ಲ. ವರ್ಣಧರ್ಮಾದಿ ಸಕಲಧರ್ಮಗಳೂ ವಿದಿತ

---

* ನೋಡಿ: ಅಂಶ 1–ಅಧ್ಯಾಯ 22–ಶ್ಲೋಕ 23 ರಿಂದ 33.

§ ನೋಡಿ: ಅಂಶ 6–ಅಧ್ಯಾಯ 7–ಶ್ಲೋಕ 61 ರಿಂದ 63.

** ನೋಡಿ: ಅಂಶ 6– ಅಧ್ಯಾಯ 7–ಶ್ಲೋಕ 48 ರಿಂದ 51.

**ಪ್ರವೃತ್ತಂ ಚ ನಿವೃತ್ತಂ ಚ ಜ್ಞಾತಂ ಕರ್ಮ ಮಯಾಽಖಿಲಮ್।**
**ಪ್ರಸೀದ ವಿಪ್ರಪ್ರವರ ನಾನ್ಯತ್ ಪ್ರಷ್ಟವ್ಯಮಸ್ತಿ ಮೇ॥** 10

**ಯದಸ್ಯ ಕಥನಾಯಾಸ್ಯೈರ್ಯೋಜಿತೋಽಸಿ ಮಯಾ ಗುರೋ।**
**ತತ್ ಕ್ಷಮ್ಯತಾಂ ವಿಶೇಷೋಽಸ್ತಿ ನ ಸತಾಂ ಪುತ್ರಶಿಷ್ಯಯೋಃ॥** 11

*ಶ್ರೀಪರಾಶರ ಉವಾಚ:*

**ಏತತ್ತೇ ಯನ್ಮಯಾಽಽಖ್ಯಾತಂ ಪುರಾಣಂ ವೇದಸಮ್ಮಿತಮ್।**
**ಶ್ರುತೇಽಸ್ಮಿನ್ ಸರ್ವದೋಷೋತ್ಥಃ ಪಾಪರಾಶಿಃ ಪ್ರಣಶ್ಯತಿ॥** 12

**ಸರ್ಗಶ್ಚ ಪ್ರತಿಸರ್ಗಶ್ಚ ವಂಶಮನ್ವಂತರಾಣಿ ಚ।**
**ವಂಶಾನುಚರಿತಂ ಕೃತ್ಸ್ನಂ ಮಯಾಽತ್ರ ತವ ಕೀರ್ತಿತಮ್॥** 13

**ಅತ್ರ ದೇವಸ್ತಥಾ ದೈತ್ಯಾ ಗಂಧರ್ವೋರಗರಾಕ್ಷಸಾಃ।**
**ಯಕ್ಷವಿದ್ಯಾಧರಾಸ್ಸಿದ್ಧಾಃ ಕಥ್ಯಂತೇಽಪ್ಸರಸಸ್ತಥಾ॥** 14

---

ವಾದವು. ಪ್ರವೃತ್ತಿಕರ್ಮ, ನಿವೃತ್ತಿಕರ್ಮಗಳ ವಿಚಾರವೂ ತಿಳಿಯಿತು. ಹೇ ವಿಪ್ರೋತ್ತಮರೆ, ಪ್ರಸನ್ನರಾಗಿರಿ. ಇನ್ನು ನಾನು ಕೇಳಬೇಕಾದ್ದೇನೂ ಇಲ್ಲ (9-10). ಗುರುಗಳೇ, ಇವೆಲ್ಲವನ್ನೂ ಹೇಳಬೇಕಾದ ಕಷ್ಟವನ್ನು ನಿಮಗೆ ನಾನು ಒಡ್ಡಿದೆನು. ನನ್ನನ್ನು ಕ್ಷಮಿಸಿರಿ. ಸಾಧು ಜನರಿಗೆ ಪುತ್ರ ಮತ್ತು ಶಿಷ್ಯರಲ್ಲಿ ಯಾವ ಭೇದವೂ ಇರುವುದಿಲ್ಲ" ಎಂದನು (11). ಆಗ ಪರಾಶರಮುನಿಗಳು ನುಡಿದರು: ಮೈತ್ರೇಯ, ವೇದಸಮಾನವಾದ ಈ ವಿಷ್ಣುಪುರಾಣವನ್ನು ನಿನಗೆ ಹೇಳಿದೆನಷ್ಟೆ; ಇದನ್ನು ಶ್ರವಣಮಾಡಿದರೆ ಸಕಲನಿಷಿದ್ಧಕ್ರಿಯಾಜನ್ಯವಾದ ಪಾಪರಾಶಿಯು ವಿಧ್ವಸ್ತವಾಗುವುದು (12). ಸರ್ಗ, ಪ್ರತಿಸರ್ಗ, ವಂಶ, ಮನ್ವಂತರಗಳು, ವಂಶಾನುಚರಿತ—ಇದೆಲ್ಲವನ್ನೂ ಈ ಪುರಾಣದಲ್ಲಿ ನಿನಗೆ ಹೇಳಿದ್ದೇನೆ. ಈ ಗ್ರಂಥದಲ್ಲಿ ದೇವ, ದೈತ್ಯ, ಗಂಧರ್ವ, ಉರಗ, ರಾಕ್ಷಸ, ಯಕ್ಷ , ವಿದ್ಯಾಧರ, ಸಿದ್ಧ ಮತ್ತು ಅಪ್ಸರೆಯರ ವರ್ಣನೆ ಬಂದಿರುತ್ತದೆ (13-14). ಆತ್ಮಧ್ಯಾನದಲ್ಲಿ

ಮುನಯೋ ಭಾವಿತಾತ್ಮಾನಃ ಕಥ್ಯಂತೇ ತಪಸಾನ್ವಿತಾಃ।
ಚಾತುರ್ವರ್ಣ್ಯಂ ತಥಾ ಪುಂಸಾಂ ವಿಶಿಷ್ಟಚರಿತಾನಿ ಚ॥ 15

ಪುಣ್ಯಾಃ ಪ್ರದೇಶಾ ಮೇದಿನ್ಯಾಃ ಪುಣ್ಯಾ ನದ್ಯೋಽಥ ಸಾಗರಾಃ।
ಪರ್ವತಾಶ್ಚ ಮಹಾಪುಣ್ಯಾಶ್ಚರಿತಾನಿ ಚ ಧೀಮತಾಮ್॥ 16

ವರ್ಣಧರ್ಮಾದಯೋ ಧರ್ಮಾ ವೇದಶಾಸ್ತ್ರಾಣಿ ಕೃತ್ಸ್ನಶಃ।
ಯೇಷಾಂ ಸಂಸ್ಮರಣಾತ್ಸದ್ಯಃ ಸರ್ವಪಾಪೈಃ ಪ್ರಮುಚ್ಯತೇ॥ 17

ಉತ್ಪತ್ತಿಸ್ಥಿತಿನಾಶಾನಾಂ ಹೇತುರ್ಯೋ ಜಗತೋಽವ್ಯಯಃ।
ಸ ಸರ್ವಭೂತಸ್ಸರ್ವಾತ್ಮಾ ಕಥ್ಯತೇ ಭಗವಾನ್ ಹರಿಃ॥ 18

ಅವಶೇನಾಪಿ ಯನ್ನಾಮ್ನಿ ಕೀರ್ತಿತೇ ಸರ್ವಪಾತಕೈಃ।
ಪುಮಾನ್ ವಿಮುಚ್ಯತೇ ಸದ್ಯಃ ಸಿಂಹತ್ರಸ್ತೈರ್ವೃಕೈರಿವ॥ 19

ಯನ್ನಾಮಕೀರ್ತನಂ ಭಕ್ತ್ಯಾ ವಿಲಾಯನಮನುತ್ತಮಮ್।
ಮೈತ್ರೇಯಾಶೇಷಪಾಪಾನಾಂ ಧಾತೂನಾಮಿವ ಪಾವಕಃ॥ 20

---

ಮುಳುಗಿದ ತಪೋನಿಷ್ಠರಾದ ಮುನಿಗಳ ವಿಷಯ ಬಂದಿದೆ. ಚಾತುರ್ವರ್ಣ್ಯ ವಿಭಾಗವೂ ಮಹಾಪುರುಷರ ವಿಶಿಷ್ಟಚರಿತೆಗಳೂ ಬಂದಿವೆ. ಪೃಥ್ವಿಯಲ್ಲಿರುವ ಪುಣ್ಯಪ್ರದೇಶಗಳು, ಪುಣ್ಯನದಿಗಳು, ಸಮುದ್ರಗಳು, ಪುಣ್ಯಪರ್ವತಗಳು ಮತ್ತು ಜ್ಞಾನಿಗಳ ಚರಿತೆಗಳು—ಇಲ್ಲಿ ವರ್ಣಿತವಾಗಿವೆ (15-16). ಹಾಗೆಯೇ ವರ್ಣ ಧರ್ಮಾದಿ ಧರ್ಮಪ್ರಕಾರಗಳು ಮತ್ತು ವೇದಶಾಸ್ತ್ರಗಳು ಸಾಕಲ್ಯದಿಂದ ನಿರೂಪಿತವಾಗಿವೆ. ಇವುಗಳ ಸ್ಮರಣಮಾತ್ರದಿಂದ ಮಾನವನ ಸಕಲ ಪಾಪಗಳೂ ನಿವೃತ್ತವಾಗುವುವು (17). ಅಲ್ಲದೆ, ಮೈತ್ರೇಯ, ಈ ಜಗತ್ತಿನ ಉತ್ಪತ್ತಿಸ್ಥಿತಿನಾಶಗಳಿಗೆ ಕಾರಣನೂ ಅವ್ಯಯನೂ ಸರ್ವಭೂತನೂ ಸರ್ವಾತ್ಮನೂ ಆದ ಭಗವಾನ್ ಶ್ರೀಹರಿಯು ಈ ಪುರಾಣದಲ್ಲಿ ವರ್ಣಿತ ನಾಗಿದ್ದಾನೆ (18). ಆತನ ನಾಮವನ್ನು ಆಕಸ್ಮಿಕವಾಗಿ ಉಚ್ಚರಿಸಿದರೂ ಸಾಕು, ಉಚ್ಚರಿಸುವವನ ಸಕಲ ಪಾಪಗಳೂ, ಸಿಂಹಕ್ಕೆ ಹೆದರಿದ ತೋಳಗಳಂತೆ ಬಿಟ್ಟು ಓಡಿಹೋಗುತ್ತವೆ! ಮೈತ್ರೇಯ, ಲೋಹಗಳನ್ನು ಅಗ್ನಿಯು ಹೇಗೆ ಕರಗಿಸು ತ್ತದೆಯೋ ಹಾಗೆ, ಭಕ್ತಿಯಿಂದ ಮಾಡಿದ ಭಗವಂತನ ನಾಮಕೀರ್ತನವು ಸಮಸ್ತಪಾಪಗಳನ್ನೂ ಕರಗಿಸಿಬಿಡತಕ್ಕ (ನಾಶಗೊಳಿಸುವ) ಶ್ರೇಷ್ಠವಾದ ಸಾಧನ

ಕಲಿಕಲ್ಮಷಮತ್ಯುಗ್ರಂ ನರಕಾರ್ತಿಪ್ರದಂ ನೃಣಾಮ್ ।
ಪ್ರಯಾತಿ ವಿಲಯಂ ಸದ್ಯಃ ಸಕೃದ್ಯತ್ರ ಚ ಸಂಸ್ಮೃತೇ ॥ 21

ಹಿರಣ್ಯಗರ್ಭದೇವೇಂದ್ರರುದ್ರಾದಿತ್ಯಾಶ್ವಿವಾಯುಭಿಃ ।
ಪಾವಕೈರ್ವಸುಭಿಃ ಸಾಧ್ಯೈರ್ವಿಶ್ವೇದೇವಾದಿಭಿಃ ಸುರೈಃ ॥ 22

ಯಕ್ಷರಕ್ಷೋರಗೈಃ ಸಿದ್ಧೈರ್ದೈತ್ಯಗಂಧರ್ವದಾನವೈಃ ।
ಅಪ್ಸರೋಭಿಸ್ತಥಾ ತಾರಾನಕ್ಷತ್ರೈಃ ಸಕಲೈರ್ಗ್ರಹೈಃ ॥ 23

ಸಪ್ತರ್ಷಿಭಿಸ್ತಥಾ ಧಿಷ್ಣ್ಯೈರ್ಧಿಷ್ಣ್ಯಾಧಿಪತಿಭಿಸ್ತಥಾ ।
ಬ್ರಾಹ್ಮಣಾದ್ಯೈರ್ಮನುಷ್ಯೈಶ್ಚ ತಥೈವ ಪಶುಭಿರ್ಮೃಗೈಃ ॥ 24

ಸರೀಸೃಪೈರ್ವಿಹಂಗೈಶ್ಚ ಪಲಾಶಾದ್ಯೈರ್ಮಹೀರುಹೈಃ ।
ವನಾಗ್ನಿಸಾಗರಸರಿತ್ಪಾತಲೈಃ ಸಧರಾದಿಭಿಃ ॥ 25

ಶಬ್ದಾದಿಭಿಶ್ಚ ಸಹಿತಂ ಬ್ರಹ್ಮಾಂಡಮಖಿಲಂ ದ್ವಿಜ ।
ಮೇರೋರಿವಾಣುರ್ಯಸ್ಯೈತದ್ಯನ್ಮಯಂ ಚ ದ್ವಿಜೋತ್ತಮ ॥ 26

---

ವಾಗಿದೆ (19-20). ಜನರಿಗೆ ನರಕಪೀಡೆಯನ್ನು ಕೊಡತಕ್ಕ ಅತ್ಯುಗ್ರವಾದ ಕಲಿಕಲ್ಮಷವು ಆ ಭಗವಂತನನ್ನು ಒಮ್ಮೆ ಸ್ಮರಿಸಿಕೊಂಡರೆ ವಿಲಯವಾಗುತ್ತದೆ (21). ಹಿರಣ್ಯಗರ್ಭ, ದೇವೇಂದ್ರ, ರುದ್ರ, ಆದಿತ್ಯ, ಅಶ್ವಿನಿದೇವತೆ, ವಾಯು, ಅಗ್ನಿ, ವಸು, ಸಾಧ್ಯ, ವಿಶ್ವೇದೇವ—ಮೊದಲಾದ ದೇವತೆಗಳಿಂದಲೂ (22), ಯಕ್ಷರಕ್ಷೋಗಣಗಳು, ಉರಗರು, ಸಿದ್ಧರು, ದೈತ್ಯಗಂಧರ್ವದಾನವರು, ಅಪ್ಸರೆಯರು, ಸಕಲ ತಾರಾನಕ್ಷತ್ರ ಗ್ರಹಗಳು—ಇವುಗಳಿಂದಲೂ (23), ಸಪ್ತರ್ಷಿಗಳು, ನಾನಾಲೋಕಗಳು, ಲೋಕಪಾಲರು, ಬ್ರಾಹ್ಮಣಾದಿ ಮನುಷ್ಯ ವರ್ಗಗಳು ಮತ್ತು ಪಶುಮೃಗಗಳಿಂದಲೂ (24), ಹರಿದಾಡುವ ಹಾವು ಮೊದಲಾದ ಜಂತು, ಹಕ್ಕಿ, ಮುತ್ತುಗವೇ ಮೊದಲಾದ ವೃಕ್ಷರಾಶಿ, ವನಾಗ್ನಿ ಸಾಗರ ನದೀಪಾತಾಳಗಳು, ಪೃಥ್ವಿ—ಇವುಗಳಿಂದಲೂ (25), ಶಬ್ದಾದಿ ವಿಷಯಗಳಿಂದಲೂ ಸಹಿತವಾದ ಈ ನಿಖಿಲಬ್ರಹ್ಮಾಂಡವು, ಹೇ ಮೈತ್ರೇಯ, ಮೇರು ಪರ್ವತದೆದುರಿಗೆ ಒಂದು ಪರಮಾಣುವಿದ್ದಂತೆ ಯಾವ ಭಗವಂತ ನೆದುರಿಗೆ ಅತ್ಯಲ್ಪವೆನಿಸುತ್ತದೆಯೋ, ಈ ಬ್ರಹ್ಮಾಂಡವು ಯಾವಾತನ ಸ್ವರೂಪವೇ

**ಸ ಸರ್ವಃ ಸರ್ವವಿತ್ಸರ್ವಸ್ವರೂಪೋ ರೂಪವರ್ಜಿತಃ।**
**ಭಗವಾನ್ ಕೀರ್ತಿತೋ ವಿಷ್ಣುರತ್ರ ಪಾಪಪ್ರಣಾಶನಃ॥ 27**

**ಯದಶ್ವಮೇಧಾವಭೃಥೇ ಸ್ನಾತಃ ಪ್ರಾಪ್ನೋತಿ ವೈ ಫಲಮ್।**
**ಮಾನವಸ್ತದವಾಪ್ನೋತಿ ಶ್ರುತ್ವೈತನ್ಮುನಿಸತ್ತಮ॥ 28**

**ಪ್ರಯಾಗೇ ಪುಷ್ಕರೇ ಚೈವ ಕುರುಕ್ಷೇತ್ರೇ ತಥಾರ್ಣವೇ।**
**ಕೃತೋಪವಾಸಃ ಪ್ರಾಪ್ನೋತಿ ತದಸ್ಯ ಶ್ರವಣಾನ್ನರಃ॥ 29**

**ಯದಗ್ನಿಹೋತ್ರೇ ಸುಹುತೇ ವರ್ಷೇಣಾಪ್ನೋತಿ ಮಾನವಃ।**
**ಮಹಾಪುಣ್ಯಫಲಂ ವಿಪ್ರ ತದಸ್ಯ ಶ್ರವಣಾತ್ ಸಕೃತ್॥ 30**

**ಯಜ್ಜ್ಯೇಷ್ಠಶುಕ್ಲದ್ವಾದಶ್ಯಾಂ ಸ್ನಾತ್ವಾ ವೈ ಯಮುನಾಜಲೇ।**
**ಮಥುರಾಯಾಂ ಹರಿಂ ದೃಷ್ಟ್ವಾ ಪ್ರಾಪ್ನೋತಿ ಪುರುಷಃ ಫಲಮ್॥ 31**

---

ಆಗಿದೆಯೋ (26), ಅಂತಹ ಸರ್ವನೂ ಸರ್ವಜ್ಞನೂ ಸರ್ವಸ್ವರೂಪನೂ (ಪರಮಾರ್ಥದಲ್ಲಿ) ರೂಪವರ್ಜಿತನೂ, ಪಾಪಹಾರಿಯೂ ಆದ ಭಗವಾನ್ ಶ್ರೀವಿಷ್ಣುವು ಈ ಪುರಾಣದಲ್ಲಿ ಕೀರ್ತಿತನಾಗಿದ್ದಾನೆ (27). ಅಶ್ವಮೇಧ ಯಾಗವನ್ನು ಮಾಡಿ ಅವಭೃತಸ್ನಾನಮಾಡಿದ ಮಾನವನಿಗೆ ಯಾವ ಫಲ ಉಂಟೋ ಆ ಫಲವು ಈ ಪುರಾಣವನ್ನು ಶ್ರವಣಮಾಡಿದವನಿಗೆ ಲಭಿಸುತ್ತದೆ. ಪ್ರಯಾಗ, ಪುಷ್ಕರಕ್ಷೇತ್ರ, ಕುರುಕ್ಷೇತ್ರ, ಸಮುದ್ರತಟಗಳಲ್ಲಿ ಉಪವಾಸವ್ರತ ವನ್ನಾಚರಿಸಿದವರಿಗೆ ಬರುವಷ್ಟು ಪುಣ್ಯಫಲವು ಈ ಪುರಾಣವನ್ನು ಶ್ರವಣ ಮಾಡಿದವನಿಗೆ ಲಭಿಸುತ್ತದೆ (28-29). ಒಂದು ವರ್ಷದವರೆಗೆ ನಿಯಮಾನು ಸಾರವಾಗಿ ಅಗ್ನಿಹೋತ್ರವನ್ನಾಚರಿಸಿದವರಿಗೆ ದೊರಕುವ ಮಹಾಪುಣ್ಯಫಲವು ಈ ಪುರಾಣವನ್ನು ಒಂದು ಸಲ ಕೇಳಿದರೆ ದೊರೆಯುತ್ತದೆ (30). ಜ್ಯೇಷ್ಠಶುದ್ಧ ದ್ವಾದಶಿಯ ದಿನ ಯಮುನಾ ನದಿಯಲ್ಲಿ ಸ್ನಾನಮಾಡಿ ಮಧುರೆಯಲ್ಲಿ ಶ್ರೀಕೃಷ್ಣ ದರ್ಶನವನ್ನು ಮಾಡತಕ್ಕ ಮನುಷ್ಯನಿಗೆ ಯಾವ ಫಲ ದೊರಕುತ್ತದೆಯೋ ಆ

**ತದಾಪ್ನೋತ್ಯಖಿಲಂ ಸಮ್ಯಗಧ್ಯಾಯಂ ಯಃ ಶೃಣೋತಿ ವೈ।**
**ಪುರಾಣಸ್ಯಾಸ್ಯ ವಿಪ್ರರ್ಷೇ ಕೇಶವಾರ್ಪಿತಮಾನಸಃ॥ 32**

**ಯಮುನಾಸಲಿಲಸ್ನಾತಃ ಪುರುಷೋ ಮುನಿಸತ್ತಮ।**
**ಜ್ಯೇಷ್ಠಾಮೂಲೇ ಸಿತೇ ಪಕ್ಷೇ ದ್ವಾದಶ್ಯಾಂ ಸಮುಪೋಷಿತಃ॥ 33**

**ಸಮಭ್ಯರ್ಚ್ಯಾಚ್ಯುತಂ ಸಮ್ಯಙ್ ಮಥುರಾಯಾಂ ಸಮಾಹಿತಃ।**
**ಅಶ್ವಮೇಧಸ್ಯ ಯಜ್ಞಸ್ಯ ಪ್ರಾಪ್ನೋತ್ಯವಿಕಲಂ ಫಲಮ್॥ 34**

**ಆಲೋಕ್ಯರ್ದ್ಧಿಮಥಾನ್ಯೇಷಾಮುನ್ನೀತಾನಾಂ ಸ್ವವಂಶಜೈಃ।**
**ಏತತ್ಕಿಲೋಚುರನ್ಯೇಷಾಂ ಪಿತರಃ ಸಪಿತಾಮಹಾಃ॥ 35**

**ಕಚ್ಚಿದಸ್ಮತ್ಕುಲೇ ಜಾತಃ ಕಾಲಿಂದೀಸಲಿಲಾಪ್ಲುತಃ।**
**ಅರ್ಚಯಿಷ್ಯತಿ ಗೋವಿಂದಂ ಮಥುರಾಯಾಮುಪೋಷಿತಃ॥ 36**

**ಜ್ಯೇಷ್ಠಾಮೂಲೇ ಸಿತೇ ಪಕ್ಷೇ ಯೇನೈವಂ ವಯಮಪ್ಯುತ।**
**ಪರಾಮೃದ್ಧಿಮವಾಪ್ಸ್ಯಾಮಸ್ತಾರಿತಾಃ ಸ್ವಕುಲೋದ್ಭವೈಃ॥ 37**

---

ಫಲವು, ಮೈತ್ರೇಯ, ಈ ಪುರಾಣದ ಒಂದು ಅಧ್ಯಾಯವನ್ನು ಕೇಶವಾರ್ಪಿತ ಮಾನಸನಾಗಿ ಯಾವಾತನು ಪೂರ್ತಿ ಕೇಳುವನೋ ಆತನಿಗೆ ಪ್ರಾಪ್ತವಾಗುತ್ತದೆ (31-32). ಜ್ಯೇಷ್ಠಾನಕ್ಷತ್ರದಮೂಲಕವಾದ ಜ್ಯೇಷ್ಠಮಾಸದ ಶುಕ್ಲಪಕ್ಷ ದ್ವಾದಶಿಯದಿನ ಉಪವಾಸವಿದ್ದು ಯಮುನಾನದಿಯಲ್ಲಿ ಸ್ನಾನಮಾಡಿ ಸಮಾಹಿತಚಿತ್ತನಾಗಿ ಅಚ್ಯುತನನ್ನು ಅರ್ಚಿಸಿದರೆ ಅಶ್ವಮೇಧಯಾಗದ ಸಂಪೂರ್ಣಫಲ ದೊರೆಯುತ್ತದೆ (33-34). ತಮ್ಮ ತಮ್ಮ ವಂಶದಲ್ಲಿ ಜನಿಸಿದ ಪುತ್ರಾದಿಗಳಿಂದ ಉನ್ನತಿಯನ್ನು ಪಡೆದ ಅನ್ಯಪಿತೃಗಳ ಸಂಮೃದ್ಧಿಯನ್ನು ನೋಡಿ ಅನ್ಯರ ಪಿತೃಪಿತಾಮಹರು ಹೀಗೆ ಹೇಳಿಕೊಳ್ಳುತ್ತಾರಂತೆ (35): "ಹೀಗೆಯೇ ನಮ್ಮ ವಂಶದಲ್ಲಿ ಜನಿಸಿದ ಯಾವನಾದರೊಬ್ಬನು ಜ್ಯೇಷ್ಠಮಾಸದ ಶುಕ್ಲಪಕ್ಷದಲ್ಲಿ (ದ್ವಾದಶಿಯಂದು) ಉಪವಾಸವಿದ್ದು ಯಮುನಾಜಲದಲ್ಲಿ ಸ್ನಾನಮಾಡಿ ಗೋವಿಂದನನ್ನು ಅರ್ಚಿಸುವನೆ? ಆಗ ನಮ್ಮ ವಂಶಜರಿಂದ ನಾವು ಉದ್ಧಾರವಾಗಿ (ಆ ಪಿತೃಗಳಂತೆ) ಸುಖ ಸಂಮೃದ್ಧಿಗಳನ್ನು ಪಡೆಯಬಹುದಲ್ಲವೆ? (36-37). ಪುಣ್ಯಾತ್ಮರಾದವರ ವಂಶಜಾತನು ಜ್ಯೇಷ್ಠಮಾಸದ ಶುಕ್ಲಪಕ್ಷದಲ್ಲಿ

ಜ್ಯೇಷ್ಠಾಮೂಲೇ ಸಿತೇ ಪಕ್ಷೇ ಸಮಭ್ಯರ್ಚ್ಯ ಜನಾರ್ದನಮ್ ।
ಧನ್ಯಾನಾಂ ಕುಲಜಃ ಪಿಂಡಾನ್ ಯಮುನಾಯಾಂ ಪ್ರದಾಸ್ಯತಿ ॥ 38

ತಸ್ಮಿನ್ಕಾಲೇ ಸಮಭ್ಯರ್ಚ್ಯ ತತ್ರ ಕೃಷ್ಣಂ ಸಮಾಹಿತಃ ।
ದತ್ತ್ವಾ ಪಿಂಡಂ ಪಿತೃಭ್ಯಶ್ಚ ಯಮುನಾಸಲಿಲಾಪ್ಲುತಃ ॥ 39

ಯದಾಪ್ನೋತಿ ನರಃ ಪುಣ್ಯಂ ತಾರಯನ್ ಸ್ವಪಿತಾಮಹಾನ್ ।
ಶ್ರುತ್ವಾಽಧ್ಯಾಯಂ ತದಾಪ್ನೋತಿ ಪುರಾಣಸ್ಯಾಸ್ಯ ಭಕ್ತಿತಃ ॥ 40

ಏತತ್ ಸಂಸಾರಭೀರೂಣಾಂ ಪರಿತ್ರಾಣಮನುತ್ತಮಮ್ ।
ಶ್ರಾವ್ಯಾಣಾಂ ಪರಮಂ ಶ್ರಾವ್ಯಂ ಪವಿತ್ರಾಣಾಮನುತ್ತಮಮ್ ॥ 41

ದುಃಸ್ವಪ್ನನಾಶನಂ ನೃಣಾಂ ಸರ್ವದುಷ್ಟನಿಬರ್ಹಣಮ್ ।
ಮಂಗಲಂ ಮಂಗಲಾನಾಂ ಚ ಪುತ್ರಸಂಪತ್ ಪ್ರದಾಯಕಮ್ ॥ 42

ಇದಮಾರ್ಷಂ ಪುರಾ ಪ್ರಾಹ ಋಭವೇ ಕಮಲೋದ್ಭವಃ ।
ಋಭುಃ ಪ್ರಿಯವ್ರತಾಯಾಹ ಸ ಚ ಭಾಗುರಯೇಽಬ್ರವೀತ್ ॥ 43

---

ಜನಾರ್ದನನನ್ನು ಪೂಜಿಸಿ ಯಮುನಾಜಲದಲ್ಲಿ ಆ ಪಿತೃಗಳಿಗೋಸ್ಕರ ಪಿಂಡವನ್ನು ಅರ್ಪಿಸುವನು" ಎಂದು (38). ಅದೇ ಕಾಲದಲ್ಲಿ ಯಮುನಾ ಜಲಸ್ನಾನವನ್ನು ಮಾಡಿ ಸಮಾಹಿತನಾಗಿ ಶ್ರೀಕೃಷ್ಣನನ್ನು ಪೂಜಿಸಿ ಪಿತೃಗಳಿಗೆ ಪಿಂಡವನ್ನರ್ಪಿಸಿ ತನ್ನ ಪಿತೃಪಿತಾಮಹರನ್ನು ಉದ್ಧರಿಸಿದವನಿಗೆ ಯಾವ ಪುಣ್ಯ ಉಂಟೋ, ಆ ಪುಣ್ಯವನ್ನು ಈ ಪುರಾಣದ ಒಂದು ಅಧ್ಯಾಯವನ್ನು ಭಕ್ತಿಯಿಂದ ಶ್ರವಣಮಾಡಿದವನು ಪಡೆಯುತ್ತಾನೆ (39-40). ಈ ವಿಷ್ಣುಪುರಾಣವು ಸಂಸಾರಭೀತರಿಗೆ ಪ್ರಬಲವಾದ ರಕ್ಷಾಕವಚವಾಗಿದೆ. ಶ್ರಾವ್ಯಗ್ರಂಥಗಳಲ್ಲಿ ಶ್ರೇಷ್ಠವಾದುದು. ಪವಿತ್ರವಸ್ತುಗಳಲ್ಲಿ ಅತ್ಯಂತ ಪವಿತ್ರವಾದುದು (41). ದುಃಸ್ವಪ್ನ ನಾಶಕವಾದದ್ದು. ಮಾನವರ ಕೆಟ್ಟುದೆಲ್ಲವನ್ನೂ ವಿಧ್ವಂಸಗೊಳಿಸತಕ್ಕದ್ದು. ಇದು ಮಂಗಳದ್ರವ್ಯಗಳಲ್ಲಿ ಉತ್ತಮವಾದ ಮಂಗಳದ್ರವ್ಯ, ಪುತ್ರಸಂಪತ್ತನ್ನು ಅನುಗ್ರಹಿಸತಕ್ಕದ್ದಾಗಿದೆ (42). ಮೈತ್ರೇಯ, ಪೂರ್ವಕಾಲದಲ್ಲಿ (ನಾರಾಯಣ ಋಷಿಯಿಂದ ಪ್ರೋಕ್ತವಾದ) ಈ ಆರ್ಷಪುರಾಣವನ್ನು ಬ್ರಹ್ಮನು ಋಭುವಿಗೆ ಉಪದೇಶಿಸಿದನು. ಋಭುವು ಪ್ರಿಯವ್ರತನಿಗೂ ಆತನು ಭಾಗುರಿಗೂ ಹೇಳಿದರು (43). ಭಾಗುರಿಯು ಸ್ತಂಭಮಿತ್ರನಿಗೂ ಸ್ತಂಭಮಿತ್ರನು ದಧೀಚನಿಗೂ

ಭಾಗುರಿಃ ಸ್ತಂಭಮಿತ್ರಾಯ ದಧೀಚಾಯ ಸ ಚೋಕ್ತವಾನ್।
ಸಾರಸ್ವತಾಯ ತೇನೋಕ್ತಂ ಭೃಗುಸ್ಸಾರಸ್ವತೇನ ಚ॥ 44
ಭೃಗುಣಾ ಪುರುಕುತ್ಸಾಯ ನರ್ಮದಾಯೈ ಸ ಚೋಕ್ತವಾನ್।
ನರ್ಮದಾ ಧೃತರಾಷ್ಟ್ರಾಯ ನಾಗಾಯಾಪೂರಣಾಯ ಚ॥ 45
ತಾಭ್ಯಾಂ ಚ ನಾಗರಾಜಾಯ ಪ್ರೋಕ್ತಂ ವಾಸುಕಯೇ ದ್ವಿಜ।
ವಾಸುಕಿಃ ಪ್ರಾಹ ವತ್ಸಾಯ ವತ್ಸಶ್ಚಾಶ್ವತರಾಯ ವೈ॥ 46
ಕಂಬಲಾಯ ಚ ತೇನೋಕ್ತಮೇಲಾಪುತ್ರಾಯ ತೇನ ವೈ।
ಪಾತಾಲಂ ಸಮನುಪ್ರಾಪ್ತಸ್ತತೋ ವೇದಶಿರಾ ಮುನಿಃ॥ 47
ಪ್ರಾಪ್ತವಾನೇತದಖಿಲಂ ಸ ಚ ಪ್ರಮತಯೇ ದದೌ।
ದತ್ತಂ ಪ್ರಮತಿನಾ ಚೈತಜ್ಜಾತುಕರ್ಣಾಯ ಧೀಮತೇ॥ 48
ಜಾತುಕರ್ಣೇನ ಚೈವೋಕ್ತಮನ್ಯೇಷಾಂ ಪುಣ್ಯಕರ್ಮಣಾಮ್।
ಪುಲಸ್ತ್ಯವರದಾನೇನ ಮಮಾಪ್ಯೇತತ್ ಸ್ಮೃತಿಂ ಗತಮ್॥ 49

---

ಅವನು ಸಾರಸ್ವತನಿಗೂ ಬೋಧಿಸಿದರು. ಸಾರಸ್ವತನಿಂದ ಭೃಗು ಈ ಪುರಾಣವನ್ನು ಪಡೆದನು. ಭೃಗು ಇದನ್ನು ಪುರುಕುತ್ಸನಿಗೂ ಆತನು ನರ್ಮದೆಗೂ ನರ್ಮದೆಯು ಧೃತರಾಷ್ಟ್ರನೆಂಬ ನಾಗನಿಗೂ ಅಪೂರಣನೆಂಬ ನಾಗನಿಗೂ ಉಪದೇಶಿಸಿದರು (44-45). ಮೈತ್ರೇಯ, ಆ ಇಬ್ಬರು ನಾಗರು ಈ ಪುರಾಣವನ್ನು ನಾಗರಾಜನಾದ ವಾಸುಕಿಗೆ ನಿರೂಪಿಸಿದರು. ವಾಸುಕಿಯು ವತ್ಸನಿಗೂ ವತ್ಸನು ಅಶ್ವತರನಿಗೂ ತಿಳಿಸಿದರು. ಅವನು ಕಂಬಲನಿಗೂ ಆತನು ಏಲಾಪುತ್ರನಿಗೂ ಹೇಳಿದರು. ವೇದಶಿರನೆಂಬ ಮುನಿಯು ಪಾತಾಳಲೋಕಕ್ಕೆ ಹೋಗಿದ್ದಾಗ ಏಲಾಪುತ್ರನಿಂದ ಈ ಪುರಾಣವೆಲ್ಲವನ್ನೂ ತಿಳಿದುಕೊಂಡನು (46-47). ಅನಂತರ ವೇದಶಿರನು ಪ್ರಮತಿಗೂ ಪ್ರಮತಿಯು ಧೀಮಂತನಾದ ಜಾತುಕರ್ಣನಿಗೂ ಈ ಪುರಾಣವನ್ನು ಉಪದೇಶಿಸಿದರು. ಜಾತುಕರ್ಣನಾದರೋ ಈ ಪುರಾಣವನ್ನು ಪುಣ್ಯಾತ್ಮರಾದ ಬೇರೆ ಬೇರೆ ಜನರಿಗೆ ಉಪದೇಶಿಸಿದನು. (ಪೂರ್ವಜನ್ಮದಲ್ಲಿ ಸಾರಸ್ವತನ ಮುಖದಿಂದ ನಾನು ಕೇಳಿದ್ದ ಈ ಪುರಾಣವು) ಪುಲಸ್ತ್ಯಮುನಿಗಳ ವರದಾನದಿಂದ ನನಗೂ ಸ್ಮರಣೆಗೆ*

* ಅನುಬಂಧವನ್ನು ನೋಡಿ.

**ಮಯಾಽಪಿ ತುಭ್ಯಂ ಮೈತ್ರೇಯ ಯಥಾವತ್ ಕಥಿತಂ ತ್ವಿದಮ್।**
**ತ್ವಮಪ್ಯೇತತ್ ಶಿನೀಕಾಯ ಕಲೇರಂತೇ ವದಿಷ್ಯಸಿ॥ 50**

**ಇತ್ಯೇತತ್ಪರಮಂ ಗುಹ್ಯಂ ಕಲಿಕಲ್ಮಷನಾಶನಮ್।**
**ಯಃ ಶೃಣೋತಿ ನರೋ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ॥ 51**

**ಸಮಸ್ತತೀರ್ಥಸ್ನಾನಾನಿ ಸಮಸ್ತಾಮರಸಂಸ್ತುತಿಃ।**
**ಕೃತಾ ತೇನ ಭವೇದೇತದ್ಯಃ ಶೃಣೋತಿ ದಿನೇ ದಿನೇ॥ 52**

**ಕಪಿಲಾದಾನಜನಿತಂ ಪುಣ್ಯಮತ್ಯಂತದುರ್ಲಭಮ್।**
**ಶ್ರುತ್ವೈತಸ್ಯ ದಶಾಧ್ಯಾಯಾನವಾಪ್ನೋತಿ ನ ಸಂಶಯಃ॥ 53**

**ಯಸ್ತ್ವೇತತ್ಸಕಲಂ ಶೃಣೋತಿ ಪುರುಷಃ**
**ಕೃತ್ವಾ ಮನಸ್ಯಚ್ಯುತಮ್**
**ಸರ್ವಂ ಸರ್ವಮಯಂ ಸಮಸ್ತ ಜಗತಾ-**
**ಮಾಧಾರಮಾತ್ಮಾಶ್ರಯಮ್।**

---

ಬಂದಿತು (48-49). ಮೈತ್ರೇಯ, ನಾನೂ ಸಹ ಇದನ್ನು ನಿನಗೆ ಹೇಳಿದ್ದೇನೆ. ಕಲಿಯುಗದ ಕಡೆಯಲ್ಲಿ ನೀನೂ ಕೂಡ ಈ ಪುರಾಣವನ್ನು ಶಿನೀಕನೆಂಬವನಿಗೆ ಉಪದೇಶಿಸುವೆ! (50). ಈ ಪ್ರಕಾರವಾಗಿ ಪರಮರಹಸ್ಯವೂ ಕಲಿಕಲ್ಮಷ ನಾಶನವೂ ಆದ ಈ ವಿಷ್ಣುಪುರಾಣವನ್ನು ಭಕ್ತಿಯಿಂದ ಶ್ರವಣಮಾಡತಕ್ಕವನು ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ (51). ಯಾವಾತನು ಪ್ರತಿ ದಿನವೂ ಇದನ್ನು ಕೇಳುತ್ತಿರುವನೋ ಆತನು ಸಮಸ್ತ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿದ ಹಾಗೆಯೇ. ಸಮಸ್ತ ದೇವತೆಗಳನ್ನು ಸ್ತುತಿಮಾಡಿದ ಹಾಗೆಯೇ. ದುರ್ಲಭವಾದ ಯಾವ ಪುಣ್ಯವು ಗೋದಾನದಿಂದ ಪ್ರಾಪ್ತವಾಗುತ್ತದೆಯೋ ಆ ಪುಣ್ಯವು ಈ ಪುರಾಣದ ಹತ್ತು ಅಧ್ಯಾಯಗಳನ್ನು ಶ್ರವಣಮಾಡಿದರೆ ನಿಃಸಂಶಯವಾಗಿ ಪ್ರಾಪ್ತ ವಾಗುವುದು (52-53). ಸರ್ವನೂ ಸರ್ವವ್ಯಾಪಿಯೂ ಸಮಸ್ತಜಗತ್ತುಗಳಿಗೆ ಆಧಾರನೂ ಸ್ವಪ್ರತಿಷ್ಠಿತನೂ ಜ್ಞಾನಸ್ವರೂಪನೂ ಜ್ಞೇಯನೂ ಆದ್ಯಂತರಹಿತನೂ ಸಕಲದೇವತೆಗಳಿಗೆ ಹಿತಕಾರಕನೂ ಆದ ಅಚ್ಯುತನನ್ನು ಯಾವ ಪುರುಷನು ತನ್ನ ಮನಸ್ಸಿನಲ್ಲಿ ಧ್ಯಾನಿಸುತ್ತ ಈ ವಿಷ್ಣುಪುರಾಣದ ಸಕಲ ಭಾಗವನ್ನೂ ಶ್ರವಣ

ಜ್ಞಾನಜ್ಞೇಯಮನಾದಿಮಂತರಹಿತಂ
ಸರ್ವಾಮರಾಣಾಂ ಹಿತಮ್
ಸ ಪ್ರಾಪ್ನೋತಿ ನ ಸಂಶಯೋಽಸ್ತ್ಯವಿಕಲಂ
ಯದ್‌ವಾಜಿಮೇಧೇ ಫಲಮ್॥ 54

ಯತ್ರಾದೌ ಭಗವಾಂಶ್ಚರಾಚರಗುರುರ್ಮಧ್ಯೇ ತಥಾಂತೇ ಚ ಸಃ
ಬ್ರಹ್ಮಜ್ಞಾನಮಯೋಽಚ್ಯುತೋಽಖಿಲಜಗನ್ಮಧ್ಯಾಂತಸರ್ಗಪ್ರಭುಃ।
ತತ್ಸರ್ವಂ ಪುರುಷಃ ಪವಿತ್ರಮಮಲಂ ಶೃಣ್ವನ್ ಪಠನ್ ವಾಚಯನ್
ಪ್ರಾಪ್ನೋತ್ಯಸ್ತಿ ನ ತತ್ಫಲಂ ತ್ರಿಭುವನೇಷ್ವೇಕಾಂತಸಿದ್ಧಿರ್ಹರಿಃ॥ 55

ಯಸ್ಮಿನ್ನ್ಯಸ್ತಮತಿರ್ನ ಯಾತಿ ನರಕಂ
ಸ್ವರ್ಗೋಽಪಿ ಯಚ್ಚಿಂತನೇ
ವಿಘ್ನೋ ಯತ್ರ ನಿವೇಶಿತಾತ್ಮಮನಸೋ
ಬ್ರಾಹ್ಮೋಽಪಿ ಲೋಕೋಽಲ್ಪಕಃ।

ಮಾಡುತ್ತಾನೋ ಆತನು ಅಶ್ವಮೇಧಯಾಗದಲ್ಲಿ ದೊರೆಯುವ ಸಂಪೂರ್ಣ ಫಲವನ್ನು* ನಿಃಸಂದೇಹವಾಗಿ ಪಡೆಯುತ್ತಾನೆ (54). ಯಾವ ಗ್ರಂಥದ ಆದಿ-ಮಧ್ಯ-ಅಂತಗಳಲ್ಲಿ ಅಖಿಲ ಜಗತ್ತುಗಳ ಆದಿ-ಮಧ್ಯ (ಸ್ಥಿತಿ)-ಅಂತಗಳಿಗೆ ಪ್ರಭುವೂ ಚರಾಚರ ಗುರುವೂ ಬ್ರಹ್ಮಜ್ಞಾನಸ್ವರೂಪನೂ ಆದ ಅಚ್ಯುತನು ನೆಲೆಸಿರುವನೋ ಅಂತಹ ಪವಿತ್ರವೂ ನಿರ್ಮಲವೂ ಆದ ಗ್ರಂಥವನ್ನು ಪೂರ್ತಿಯಾಗಿ ಕೇಳಿದರೆ, ಓದಿದರೆ ಅಥವಾ ಓದಿಸಿದರೆ ಯಾವ ಫಲವು ದೊರೆಯುತ್ತದೆಯೋ ಅದು ಈ ತ್ರಿಭುವನದಲ್ಲಿ ಇನ್ನೆಲ್ಲಿಯೂ ದೊರೆಯಲಾರದು. ಏಕೆಂದರೆ, ಶ್ರೀಹರಿಯು ನಿಶ್ಚಿತವಾದ ಮುಕ್ತಿರೂಪ ಫಲಸಿದ್ಧಿಯನ್ನು ಕೊಡುತ್ತಾನಲ್ಲವೇ? (55). ಯಾರಲ್ಲಿ ಚಿತ್ತವನ್ನಿಟ್ಟವನು ಎಂದಿಗೂ ನರಕವನ್ನೈದುವುದಿಲ್ಲವೋ, ಯಾರನ್ನು ಧ್ಯಾನಿಸುವಾಗ ಸ್ವರ್ಗವೂ ವಿಘ್ನವಾಗಿ ಕಾಣುತ್ತದೆಯೋ, ಯಾರಲ್ಲಿ ತನ್ನನ್ನೂ ಮನಸ್ಸನ್ನೂ (ಸಮಾಧಿಯಿಂದ) ಲಯ

* ಕೆಲವು ಅಧ್ಯಾಯಗಳನ್ನು ಶ್ರವಣಮಾಡಿದರೂ ಅಶ್ವಮೇಧದ ಫಲ ದೊರೆಯುತ್ತದೆಯೆಂದು ಹಿಂದೆ ಹೇಳಿದೆ. ಆದ್ದರಿಂದ ಪೂರ್ಣಶ್ರವಣ ಮಾಡಿದರೆ ಹಲವು ಅಶ್ವಮೇಧ ಯಾಗಗಳ ಫಲ ದೊರೆಯುತ್ತದೆಂದು ಫಲಾಧಿಕ್ಯವನ್ನು ಹೇಳಬೇಕು.

ಮುಕ್ತಿಂ ಚೇತಸಿ ಯಃ ಸ್ಥಿತೋಽಮಲಧಿಯಾಂ
ಪುಂಸಾಂ ದದಾತ್ಯವ್ಯಯಃ
ಕಿಂ ಚಿತ್ರಂ ಯದಘಂ ಪ್ರಯಾತಿ ವಿಲಯಂ
ತತ್ರಾಚ್ಯುತೇ ಕೀರ್ತಿತೇ ॥ 56

ಯಜ್ಞೈರ್ಯಜ್ಞವಿದೋ ಯಜಂತಿ ಸತತಂ
ಯಜ್ಞೇಶ್ವರಂ ಕರ್ಮಿಣೋ
ಯಂ ವೈ ಬ್ರಹ್ಮಮಯಂ ಪರಾವರಮಯಂ
ಧ್ಯಾಯಂತಿ ಚ ಜ್ಞಾನಿನಃ ।
ಯಂ ಸಂಚಿಂತ್ಯ ನ ಜಾಯತೇ ನ ಮ್ರಿಯತೇ
ನೋ ವರ್ದ್ಧತೇ ಹೀಯತೇ
ನೈವಾಸನ್ನ ಚ ಸದ್ಭವತ್ಯತಿ ತತಃ
ಕಿಂ ವಾ ಹರೇಃ ಶ್ರೂಯತಾಮ್ ॥ 57

---

ಗೊಳಿಸಿದವನಿಗೆ ಬ್ರಹ್ಮಲೋಕವು ಅತ್ಯಲ್ಪವಾಗಿ ತೋರುವುದೋ ಮತ್ತು ಶುದ್ಧಚಿತ್ತರಾದ ಜನರ ಚಿತ್ತದಲ್ಲಿ ನೆಲೆಸಿದರೆ ಯಾವ ಅವ್ಯಯನು ಅವರಿಗೆ ಮುಕ್ತಿಯನ್ನೀಯುವನೋ ಅಂತಹ ಅಚ್ಯುತನ ಕೀರ್ತನೆಯನ್ನು ಮಾಡಿದರೆ ಪಾಪವು ಲಯ ಹೊಂದುವುದೆಂದರೆ ಅಚ್ಚರಿಯೇನು? (56). ಯಜ್ಞವಿದರಾದ ಕರ್ಮನಿಷ್ಠರು ಯಜ್ಞೇಶ್ವರನಾದ ಯಾವಾತನನ್ನು ಯಜ್ಞಗಳಿಂದ ಅರ್ಚಿಸುತ್ತಾರೋ, ಬ್ರಹ್ಮಸ್ವರೂಪನೂ ಪರಾಪರಪ್ರಕೃತಿಸ್ವರೂಪನೂ ಆದ ಯಾವಾತನನ್ನು ಜ್ಞಾನಿಗಳು ಧ್ಯಾನಿಸುತ್ತಿರುವರೋ, ಯಾವಾತನನ್ನು ಚಿಂತಿಸುತ್ತಿರುವ ಮಾನವನು ಮತ್ತೆ ಹುಟ್ಟುವುದಿಲ್ಲವೋ ಸಾಯುವುದಿಲ್ಲವೋ ಬೆಳೆಯುವುದಿಲ್ಲವೋ ಕ್ಷಯಿಸುವುದೂ ಇಲ್ಲವೋ* ಯಾವಾತನನ್ನು ಬಿಟ್ಟು ಅಸತ್ ಎನಿಸುವ ಕರಣವಾಗಲಿ ಸತ್ ಎನಿಸುವ ಕಾರ್ಯವಾಗಲಿ ಇಲ್ಲವೋ ಅಂತಹ ಶ್ರೀಹರಿಯನ್ನು ಅತಿಕ್ರಮಿಸಿ ಕೇಳಲರ್ಹವಾದ ಇನ್ನೊಂದು ವಸ್ತುವಾದರೂ§

---

* ಆ ಮನುಷ್ಯನು ಮುಕ್ತನಾಗುವುದರಿಂದ ಜನ್ಮಾದಿವಿಕಾರಗಳಿರುವುದಿಲ್ಲ.

§ ಸರ್ವವೂ ವಿಷ್ಣುಮಯವಾದ್ದರಿಂದ ಯಾವ ವಸ್ತುವಿನ ವಿಚಾರ ಮಾಡಿದರೂ ಅದು ವಿಷ್ಣುವಿನ ಅಂಶವೇ ಆಗಿರುತ್ತದೆ.

ಕವ್ಯಂ ಯಃ ಪಿತೃರೂಪಧೃಗ್ವಿಧಿಹುತಂ
ಹವ್ಯಂ ಚ ಭುಂಕ್ತೇ ವಿಭು-
ರ್ದೇವತ್ವೇ ಭಗವಾನನಾದಿನಿಧನಃ
ಸ್ವಾಹಾಸ್ವಧಾಸಂಜ್ಞಿತೇ।
ಯಸ್ಮಿನ್ ಬ್ರಹ್ಮಣಿ ಸರ್ವಶಕ್ತಿನಿಲಯೇ
ಮಾನಾನಿ ನೋ ಮಾನಿನಾಂ
ನಿಷ್ಠಾಯೈ ಪ್ರಭವಂತಿ ಹಂತಿ ಕಲುಷಂ
ಶ್ರೋತ್ರಂ ಸ ಯಾತೋ ಹರಿಃ॥ 58

ನಾಂತೋಽಸ್ತಿ ಯಸ್ಯ ನ ಚ ಯಸ್ಯ ಸಮುದ್ಭವೋಽಸ್ತಿ
ವೃದ್ಧಿರ್ನ ಯಸ್ಯ ಪರಿಣಾಮವಿವರ್ಜಿತಸ್ಯ।
ನಾಪಕ್ಷಯಂ ಚ ಸಮುಪೈತ್ಯವಿಕಾರಿ ವಸ್ತು
ಯಸ್ತಂ ನತೋಽಸ್ಮಿ ಪುರುಷೋತ್ತಮಮೀಶಮೀಡ್ಯಮ್॥ 59

---

ಯಾವುದಿದೆ? (57). ಅನಾದಿನಿಧನನಾದ ಯಾವ ಭಗವಂತನು ಪಿತೃ ರೂಪವನ್ನು ಧರಿಸಿ ಜನರಿಂದ ವಿಧಿಪೂರ್ವಕವಾಗಿ ಹುತವಾದ ಸ್ವಧಾಸಂಜ್ಞೆಯ ಕವ್ಯವನ್ನು ಭುಜಿಸುತ್ತಾನೋ, ದೇವತಾರೂಪವನ್ನು ಧರಿಸಿ ಸ್ವಾಹಾಸಂಜ್ಞೆಯ ಹವ್ಯವನ್ನು ಭುಜಿಸುತ್ತಾನೋ, ಸರ್ವಶಕ್ತಿಗಳಿಗೆ ಆಶ್ರಯವಾದ ಯಾವ ಬ್ರಹ್ಮ ವಸ್ತುವಿನ ವಿಷಯದಲ್ಲಿ ಪ್ರಮಾಣಕುಶಲರು ಹೇಳತಕ್ಕ ಪ್ರಮಾಣಗಳು ಆ ಬ್ರಹ್ಮವಸ್ತುವಿನ ಸ್ವರೂಪವನ್ನಳೆಯಲು ಅಸಮರ್ಥವಾಗಿವೆಯೋ ಅಂತಹವನು ಶ್ರೀಹರಿ. ಆತನನ್ನು ಶ್ರವಣಪಥಕ್ಕೆ ತಂದರೆ (ಆತನ ಲೀಲೆಯನ್ನು ಕೇಳಿದರೆ) ಶ್ರೀಹರಿಯು ಸಮಸ್ತದುರಿತವನ್ನು ನಾಶಮಾಡುತ್ತಾನೆ (58). ಪರಿಣಾಮರಹಿತ ನಾದ ಯಾವ ಪ್ರಭುವಿಗೆ ಅಂತವಿಲ್ಲವೋ ಆದಿಯಿಲ್ಲವೋ ವೃದ್ಧಿ ಇಲ್ಲವೋ ಅಪಕ್ಷಯವೂ ಇಲ್ಲವೋ–(ಹೀಗೆ ಷಡ್‌ಭಾವ) ವಿಕಾರಶೂನ್ಯನಾದ ಪರಮಾರ್ಥವಸ್ತು ಯಾರೋ ಅಂತಹ ಸ್ತವನೀಯನೂ ಪುರುಷೋತ್ತಮನೂ ಆದ ಪರಮೇಶ್ವರನಿಗೆ ನಮಸ್ಕರಿಸುತ್ತೇನೆ* (59). ಪರಮೇಶ್ವರನ ಅನಂತರ

---

* ಸೃಷ್ಟ್ಯಾದ್ಯುಪಯೋಗಕ್ಕಾಗಿ ಈ ಪುರಾಣದಲ್ಲಿ ಪ್ರತಿಪಾದಿತವಾದ ಪರಮೇಶ್ವರ, ಪುರುಷ (ಜೀವ), ಪ್ರಧಾನ, ವ್ಯಕ್ತ—ಎಂಬ ಭಗವಂತನ ರೂಪ ಚತುಷ್ಟಯವನ್ನು ಈ ಶ್ಲೋಕದಿಂದಾರಂಭಿಸಿ ನಾಲ್ಕು ಶ್ಲೋಕಗಳಲ್ಲಿ ನಮಸ್ಕರಿಸಲಾಗಿದೆ.

**ತಸ್ಯೈವ ಯೋऽನುಗುಣಭುಗ್‌ಬಹುಧೈಕ ಏವ**
**ಶುದ್ಧೋऽಪ್ಯಶುದ್ಧ ಇವ ಭಾತಿ ಹಿ ಮೂರ್ತಿಭೇದೈಃ।**
**ಜ್ಞಾನಾನ್ವಿತಃ ಸಕಲಸತ್ತ್ವವಿಭೂತಿಕರ್ತಾ**
**ತಸ್ಮೈ ನಮೋऽಸ್ತು ಪುರುಷಾಯ ಸದಾವ್ಯಯಾಯ॥** 60

**ಜ್ಞಾನಪ್ರವೃತ್ತಿನಿಯಮೈಕ್ಯಮಯಾಯ ಪುಂಸೋ**
**ಭೋಗಪ್ರದಾನಪಟವೇ ತ್ರಿಗುಣಾತ್ಮಕಾಯ।**
**ಅವ್ಯಾಕೃತಾಯ ಭವಭಾವನಕಾರಣಾಯ**
**ವಂದೇ ಸ್ವರೂಪಭವನಾಯ ಸದಾऽಜರಾಯ॥** 61

**ವ್ಯೋಮಾನಿಲಾಗ್ನಿಜಲಭೂರಚನಾಮಯಾಯ**
**ಶಬ್ದಾದಿಭೋಗ್ಯವಿಷಯೋಪನಯಕ್ಷಮಾಯ।**
**ಪುಂಸಃ ಸಮಸ್ತಕರಣೈರುಪಕಾರಕಾಯ**
**ವ್ಯಕ್ತಾಯ ಸೂಕ್ಷ್ಮಬೃಹದಾತ್ಮವತೇ ನತೋऽಸ್ಮಿ॥** 62

---

ಯಾವಾತನು ಏಕನೇ ಆಗಿದ್ದರೂ ಗುಣಭೋಗವನ್ನು ಕಳೆದು (ಬ್ರಹ್ಮಾದಿ ರೂಪಗಳಿಂದ) ಅನೇಕನಾಗಿಯೂ ಶುದ್ಧನಾಗಿದ್ದರೂ (ಸೃಷ್ಟಿಕಾರ್ಯಾದಿಗಳಲ್ಲಿ ತೊಡಗಿ) ಅಶುದ್ಧನಂತೆಯೂ (ದಕ್ಷಮನ್ವಾದಿ) ಮೂರ್ತಿಭೇದಗಳನ್ನು ತಳೆದು ವಿರಾಜಿಸುತ್ತಿರುವನೋ ಸರ್ವಜ್ಞನೂ ಸರ್ವಪದಾರ್ಥಗಳ ವಿಕಾಸಕರ್ತನೂ ಆಗಿರುವನೋ ಅಂತಹ ಅವ್ಯಯನಾದ ಪುರುಷನಿಗೆ ನಮಸ್ಕಾರವಿರಲಿ (60). ಜ್ಞಾನ, ಕರ್ಮ, ಪ್ರವೃತ್ತಿ , ಅವುಗಳ ನಿಯಮನ (ಸಂಕೋಚ)—ಇವು ಯಾರಲ್ಲಿ ಏಕತೆಯಿಂದ ಸಮಾವಿಷ್ಟವಾಗಿವೆಯೋ ಅಂತಹ ತ್ರಿಗುಣಸ್ವರೂಪಭೂತನೂ ಪುರುಷನಿಗೆ (ಜೀವನಿಗೆ) ಭೋಗಪ್ರದನೂ ಸಂಸಾರಪ್ರವರ್ತನೆಗೆ ಕಾರಣನೂ ಸ್ವತಃಸಿದ್ಧನೂ ಕ್ಷಯವಿಲ್ಲದೇ ಸರ್ವದಾ ಇರತಕ್ಕವನೂ ಆದ ಅವ್ಯಾಕೃತ ಸ್ವರೂಪನನ್ನು ವಂದಿಸುತ್ತೇನೆ (61). ಆಕಾಶ, ವಾಯು, ವಹ್ನಿ, ಜಲ, ಪೃಥ್ವೀ ಸ್ವರೂಪನಾಗಿ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಭೋಗ್ಯವಿಷಯಗಳನ್ನು ಒದಗಿಸಲು ಸಮರ್ಥನಾದ, (ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಂಬ) ಸಕಲೇಂದ್ರಿಯಗಳ ಮೂಲಕ ಪುರುಷನಿಗೆ ಉಪಕಾರಕನಾದ ಮತ್ತು ಸೂಕ್ಷ್ಮವಾದ ಮಹದಾದಿರೂಪನೂ ಸ್ಥೂಲವಾದ ಪೃಥ್ವಿವ್ಯಾದಿರೂಪನೂ ಆದ

**ಇತಿ ವಿವಿಧಮಜಸ್ಯ ಯಸ್ಯ ರೂಪಂ**
**ಪ್ರಕೃತಿಪರಾತ್ಮಮಯಂ ಸನಾತನಸ್ಯ।**
**ಪ್ರದಿಶತು ಭಗವಾನಶೇಷ ಪುಂಸಾಂ**
**ಹರಿರಪಜನ್ಮಜರಾದಿಕಾಂ ಸ ಸಿದ್ಧಿಮ್॥** 63

ಇತಿ ಶ್ರೀವಿಷ್ಣುಪುರಾಣೇ ಷಷ್ಠಾಂಶೇ ಅಷ್ಟಮೋಽಧ್ಯಾಯಃ

**ಇತಿ ಶ್ರೀಪರಾಶರಮುನಿವಿರಚಿತೇ ಶ್ರೀವಿಷ್ಣುಪರತ್ವನಿರ್ಣಾಯಕೇ**
**ಶ್ರೀಮತಿ ವಿಷ್ಣುಮಹಾಪುರಾಣೇ ಷಷ್ಠಾಂಶಃ ಸಮಾಪ್ತಃ**

**ಇತಿ ಶ್ರೀವಿಷ್ಣುಮಹಾಪುರಾಣಂ ಸಂಪೂರ್ಣಮ್**

---

ವ್ಯಕ್ತಸ್ವರೂಪಿ ಪರಮಾತ್ಮನಿಗೆ ಸದಾ ಪ್ರಣತನಾಗಿದ್ದೇನೆ (62). ಈ ಪ್ರಕಾರವಾಗಿ ಅಜನೂ ಸನಾತನನೂ ಆದ ಯಾವ ಪರಮಾತ್ಮನಿಗೆ (ವ್ಯಕ್ತಾವ್ಯಕ್ತರೂಪವಾದ) ಪ್ರಕೃತಿ,* ಪರಮೇಶ್ವರ, ಪುರುಷ—ಎಂಬ ವಿವಿಧ ರೂಪಗಳುಂಟೋ ಆ ಶ್ರೀಹರಿಯು ಸಮಸ್ತ ಜನರಿಗೂ ಜನ್ಮಜರಾದಿಗಳಿಂದ ರಹಿತವಾದ ಮೋಕ್ಷ ಸಿದ್ಧಿಯನ್ನು ಅನುಗ್ರಹಿಸಲಿ (63).

ಇಲ್ಲಿಗೆ ಶ್ರೀವಿಷ್ಣುಪುರಾಣದ ಷಷ್ಠಾಂಶದಲ್ಲಿ
ಎಂಟನೆಯ ಅಧ್ಯಾಯವು ಮುಗಿಯಿತು.

**ಷಷ್ಠಾಂಶಃ ಸಮಾಪ್ತಃ**
**ಶ್ರೀವಿಷ್ಣುಪುರಾಣವು ಸಮಾಪ್ತವಾಯಿತು.**

**ಶ್ರೀಕೃಷ್ಣಾರ್ಪಣಮಸ್ತು**



---

* 61-62 ನೆಯ ಶ್ಲೋಕಗಳಲ್ಲಿ ಹೇಳಿದ ರೂಪದ್ವಯವು ಪ್ರಕೃತಿಶಬ್ದದಿಂದ ಸಂಗೃಹೀತವಾಗಿದೆ.

# ಅನುಬಂಧಗಳು

## ಅನುಬಂಧ - 1

**ಮೂಢೇ ಭರದ್ವಾಜಮಿಮಂ ಭರದ್ವಾಜಂ ಬೃಹಸ್ಪತೇ।**

—ಪುಟ 158

ಬೃಹಸ್ಪತಿಯ ಸೋದರನಾದ ಉತಥ್ಯನ ಭಾರ್ಯೆ ಮಮತೆ ಗರ್ಭಿಣಿಯಾಗಿದ್ದಾಗ, ಬೃಹಸ್ಪತಿಯು ಕಾಮಾಭಿಭೂತನಾಗಿ ಅವಳಲ್ಲಿ ವೀರ್ಯಸೇಕ ಮಾಡಿದನು. ಮೊದಲೇ ಗರ್ಭದಲ್ಲಿದ್ದ ದೀರ್ಘತಮನು ಈ ಶಿಶುವನ್ನು ಹೊರಗೆ ತಳ್ಳಿದ್ದರಿಂದ ಕುಪಿತನಾದ ಬೃಹಸ್ಪತಿಯು ದೀರ್ಘತಮನನ್ನು ಕುರುಡನಾಗುವಂತೆ ಶಪಿಸಿದನೆಂದು ಕತೆ ಇದೆ. ದೀರ್ಘತಮ ಎಂಬವನು ಋಗ್ವೇದದಲ್ಲಿ ಮಂತ್ರ ದ್ರಷ್ಟಾರನಾದ ಋಷಿಯಾಗಿದ್ದಾನೆ. ಭರದ್ವಾಜನ ಉತ್ಪತ್ತಿಯ ವಿಷಯದಲ್ಲಿ ಎಲ್ಲ ಪುರಾಣಗಳೂ ಈ ಕಥೆಯನ್ನೇ ಹೇಳುತ್ತವೆ. ಈತನು ಬೃಹಸ್ಪತಿಗೆ ಔರಸಪುತ್ರನೂ ಭರತರಾಜನಿಗೆ ದತ್ತಪುತ್ರನೂ ಆಗುತ್ತಾನೆ. ಇವನೇ ವಿತಥನೆಂಬ ಹೆಸರನ್ನು ಪಡೆದನೆಂದು ವಾಯು, ಮತ್ಸ್ಯ, ಅಗ್ನಿಪುರಾಣಗಳೂ ಹೇಳಿವೆ. ಬ್ರಹ್ಮಪುರಾಣ ಮತ್ತು ಹರಿವಂಶಗಳಲ್ಲಿ ಭರದ್ವಾಜನು ಯಾಗ ಮಾಡಿಸಿದ್ದರಿಂದ ಭರತರಾಜನಿಗೆ ವಿತಥನು ಹುಟ್ಟಿದನೆಂದು ಹೇಳಲಾಗಿದೆ. ಯಾಗದಿಂದ ಭರತರಾಜನಿಗೆ ಹುಟ್ಟಿದ ಮಗನ ಹೆಸರು ಭೂಮನ್ಯು ಎಂದೂ ಅವನ ತಾಯಿ ಸುನಂದಾ ಎಂದೂ ಮಹಾಭಾರತದಲ್ಲಿ (ಆದಿಪರ್ವ 94, 19-22) ಹೇಳಿದೆ.

ರಾಮಾಯಣದಲ್ಲಿ ಗಂಗಾತೀರದಲ್ಲಿದ್ದ ಭರದ್ವಾಜ ಮುನಿಯ ವರ್ಣನೆ ಇದೆ. ವಾಲ್ಮೀಕಿ ಮುನಿಗಳ ಶಿಷ್ಯನ ಹೆಸರು ಭರದ್ವಾಜ. ದ್ರೋಣಾಚಾರ್ಯನ ತಂದೆಯೂ ಭರದ್ವಾಜ. ಸಪ್ತರ್ಷಿಗಳಲ್ಲಿ ಭರದ್ವಾಜನೊಬ್ಬನೆಂಬುದು ಸುಪ್ರಸಿದ್ಧ. ಇವರೆಲ್ಲರೂ ಒಂದೇ ಹೆಸರಿನ ಬೇರೆ ಬೇರೆ ವ್ಯಕ್ತಿಗಳಾಗಿರಬಹುದು. ಭರದ್ವಾಜ ಗೋತ್ರದವರಾದ್ದರಿಂದ ಭರದ್ವಾಜ-ಭಾರದ್ವಾಜ ಎಂಬ ಹೆಸರು ರೂಢಿಗೆ ಬಂದಿರಬಹುದು. ಇದರ ನಿಷ್ಕರ್ಷೆ ಅಶಕ್ಯವಾದದ್ದು.

## ಅನುಬಂಧ – 2

**ತದಾ ಪ್ರವೃತ್ತಶ್ಚ ಕಲಿರ್ದ್ವಾದಶಾಬ್ದಶತಾತ್ಮಕಃ।**
**ತದಾ ನಂದಾತ್ ಪ್ರಭೃತ್ಯೇಷ ಗತಿವೃದ್ಧಿಂ ಗಮಿಷ್ಯತಿ॥**

—ಪುಟ 192-193

ಕಲಿಯುಗವು ಭಾರತಯುದ್ಧದ ಸಮಾಪ್ತಿ ಕಾಲದಲ್ಲಿಯೇ ಸಂಧ್ಯಾಂಶದಿಂದ ಪ್ರಾಪ್ತವಾಗಿತ್ತು. ನಂದರಾಜನ ತರುವಾಯ ಅದು ಸ್ವಸ್ವರೂಪದಿಂದ ಪ್ರಕರ್ಷವನ್ನು ಹೊಂದಿತು. ಪರೀಕ್ಷಿತನ ಜನ್ಮಕಾಲದಿಂದ ನಂದರಾಜನವರೆಗೆ ಶುದ್ಧ ಕ್ಷತ್ರಿಯ ವಂಶದ ರಾಜರು ರಾಜ್ಯವಾಳಿದರು. 'ನಂದಾಂತಂ ಕ್ಷತ್ರಿಯ ಕುಲಂ' ಎಂದು ಅನ್ಯತ್ರ ವಚನವಿದೆ. ನಂದನೆಂದರೆ ಮಹಾಪದ್ಮನಂದ. ಇವನ ಎಂಟುಮಕ್ಕಳೂ ಸೇರಿ ನವನಂದರೆಂದು ಪ್ರಸಿದ್ಧಿ. ಈ ನವನಂದರ ಆಳ್ವಿಕೆಯ ಒಟ್ಟು ಕಾಲ 100 ವರ್ಷಗಳೆಂದು ಹಿಂದೆ ಹೇಳಿದೆ. (ಪು. 181). 'ಪರೀಕ್ಷಿತನ ಜನ್ಮದಿನದಿಂದ ನಂದನ ಪಟ್ಟಾಭಿಷೇಕದವರೆಗೆ 1500 ವರ್ಷಗಳು ಕಳೆದಿವೆ'ಯೆಂದು ವಿಷ್ಣುಪುರಾಣದಲ್ಲಿಯೇ ಹೇಳಿದೆ. (ಪು. 191) ನಂದರ ತರುವಾಯ ಚಂದ್ರಗುಪ್ತಮೌರ್ಯನು ರಾಜನಾದನು. ಈತನ ಕಾಲ ಇತಿಹಾಸ ಪ್ರಸಿದ್ಧವಾಗಿದೆ. ಕ್ರಿ. ಪೂ. 310 ರಿಂದ ಈತನ ರಾಜ್ಯಭಾರ ನಡೆಯಿತೆಂದು ಇತಿಹಾಸಕಾರರು ಹೇಳಿದ್ದಾರೆ. ಇದಕ್ಕೆ ನಂದರ ಕಾಲವಾದ 100 ವರ್ಷಗಳನ್ನು ಸೇರಿಸಿದರೆ ಕ್ರಿ. ಪೂ. 410 ಆಗುತ್ತದೆ. ಇದೇ ಬಹುಶಃ ಮಹಾಪದ್ಮನಂದನಿಗೆ ಪಟ್ಟಾಭಿಷೇಕವಾದ ಸಮಯ. ಅದಕ್ಕೆ 1500 ವರ್ಷಗಳನ್ನು ಸೇರಿಸಿದರೆ ಪರೀಕ್ಷಿತನ ಜನ್ಮಕಾಲವು ದೊರೆಯುತ್ತದೆ. ಕ್ರಿ. ಪೂ. 410 + 1500 = ಕ್ರಿ. ಪೂ. 1910 ಪರೀಕ್ಷಿತನ ಜನ್ಮಸಮಯವಾಯಿತು.

ಭಾರತಯುದ್ಧ ಸಮಾಪ್ತವಾದೊಡನೆಯೇ ಪರೀಕ್ಷಿತನ ಜನ್ಮವಾಗಿದೆ. ಪ್ರಕೃತ ನಡೆಯುತ್ತಿರುವ ಕ್ರಿ. ಶ. 2000 ಕ್ಕೆ ಪೂರ್ವೋಕ್ತ 1910 ವರ್ಷಗಳನ್ನು ಸೇರಿಸಿದಾಗ 3910 ವರ್ಷಗಳಾದವು.

**ಯಾವತ್ ಪರೀಕ್ಷಿತೋ ಜನ್ಮ ಯಾವನ್ನಂದಾಭಿಷೇಚನಮ್।**
**ಏತದ್ವರ್ಷಸಹಸ್ರಂ ತು ಜ್ಞೇಯಂ ಪಂಚಶತೋತ್ತರಮ್॥**

—ವಿಷ್ಣು 4-24-104

ಎಂಬ ಪಾಠವನ್ನು ಆದರಿಸಿ ಮೇಲ್ಕಂಡಂತೆ ಗಣಿಸಲಾಗಿದೆ. ಇದು ಶ್ರೀಧರೀಯ ಮತ್ತು ವಿಷ್ಣುಚಿತ್ತೀಯ ವ್ಯಾಖ್ಯಾನಗಳಿಗೆ ಸಂಮತವಾದ ಪಾಠ. ಹೆಚ್. ಹೆಚ್. ವಿಲ್ಸನ್ ಅವರು ಈ ಶ್ಲೋಕದಲ್ಲಿ 'ಏತದ್ವರ್ಷಸಹಸ್ರಂ ತು ಜ್ಞೇಯಂ **ಪಂಚದಶೋತ್ತರಂ**' '..........ಪಂಚಾಶದುತ್ತರಂ' ಎಂಬ ಪಾಠಾಂತರಗಳನ್ನು ತೋರಿಸಿದ್ದಾರೆ. ಆ ಪಾಠಗಳ ಪ್ರಕಾರ ಪರೀಕ್ಷಿತನ ಜನ್ಮಕ್ಕೂ ನಂದನ ಪಟ್ಟಾಭಿಷೇಕಕ್ಕೂ ನಡುವಣ ಕಾಲ 1050 ವರ್ಷಗಳಾಗುತ್ತವೆ.

ಅಲ್ಲದೆ ಚಂದ್ರಗುಪ್ತನು ರಾಜ್ಯಕ್ಕೆ ಬಂದ ಕಾಲದ ವಿಷಯದಲ್ಲಿಯೂ ಇತಿಹಾಸಕಾರರಲ್ಲಿ ಭಿನ್ನಾಭಿಪ್ರಾಯವಿದೆ. ಹೇಗಿದ್ದರೂ 'ಪಂಚಶತೋತ್ತರಂ' ಎಂಬ ವಿಷ್ಣುಪುರಾಣದ ಪಾಠವನ್ನವಲಂಬಿಸಿ ಇಂದಿಗೆ ಸುಮಾರು 4000 ವರ್ಷಗಳ ಹಿಂದೆ ಭಾರತಯುದ್ಧ ನಡೆಯಿತೆಂದು ಹೇಳಬಹುದು. ಆಗ ಕಲಿಯುಗದ ಪ್ರಾರಂಭವಾಗಿತ್ತೆಂದು ಮಹಾಭಾರತದಲ್ಲಿ ಸೂಚಿತವಾಗಿದೆ. ಶ್ರೀಕೃಷ್ಣನು ಬಲರಾಮನಿಗೆ ಹೇಳುವ ವಚನವಿದು—

**ಪ್ರಾಪ್ತಂ ಕಲಿಯುಗಂ ವಿದ್ಧಿ ಪ್ರತಿಜ್ಞಾಂ ಪಾಂಡವಸ್ಯ ಚ।**
**ಆನೃಣ್ಯಂ ಯಾತು ವೈರಸ್ಯ ಪ್ರತಿಜ್ಞಾಯಾಶ್ಚ ಪಾಂಡವಃ॥**

—ಗದಾ. 60-25

ಆದರೆ ನಮ್ಮ ಪಂಚಾಂಗಗಳು ಈಗಾಗಲೇ ಕಲಿಯುಗದಲ್ಲಿ 5088 ವರ್ಷಗಳು ಸಂದುಹೋಗಿವೆಯೆಂದು ಹೇಳುತ್ತವೆ. ಪಂಚಾಂಗಕಾರರ ಗಣನೆಗೆ ಬೇರೆ ಆಧಾರವಿದ್ದೀತು.

## ಅನುಬಂಧ - 3

**ಹಿರಣ್ಯಕಶಿಪೋಃ ಪುತ್ರಾಃ ಷಡ್ಗರ್ಭಾ ಇತಿ ವಿಶ್ರುತಾಃ।**

—ಪುಟ 217

ಹರಿವಂಶದಲ್ಲಿ ಪೂರ್ವಕಥೆ ಹೀಗಿದೆ: ಕಾಲನೇಮಿಗೆ ಷಡ್ಗರ್ಭರೆಂಬ ಆರು ಮಕ್ಕಳಿದ್ದರು. ಅವರು ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ದೇವಾದಿಗಳಿಂದ ತಮಗೆ ಮರಣವಾಗದಂತೆ ವರವನ್ನು ಪಡೆದುಕೊಂಡರು. ಇದರಿಂದ ಅವರ ಪಿತಾಮಹನಾದ ಹಿರಣ್ಯಕಶಿಪುವಿಗೆ ಕೋಪಬಂದು ಅವರನ್ನು ಶಪಿಸಿದನು: “ಎಲೈ ನನ್ನನ್ನು ಅತಿಕ್ರಮಿಸಿ ನನಗೆ ಶತ್ರುವಾದ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದ್ದೀರಿ. ಷಡ್ಗರ್ಭರೆಂದು ನಿಮಗೆ ನಾಮಕರಣ ಮಾಡಿದ ನಿಮ್ಮ ತಂದೆಯೇ ನಿಮ್ಮನ್ನು ಕೊಂದುಹಾಕಲಿ!” ಎಂದು (ಹರಿ. 2-2-12 ರಿಂದ 23). ಈ ಆರು ಜನ ದೈತ್ಯರು ಸಮುದ್ರದಲ್ಲಿ ಜಲಶಾಯಿಗಳಾಗಿದ್ದರು. ಯೋಗಮಾಯೆ ಅವರನ್ನು ದೇವಕೀಗರ್ಭಕ್ಕೆ ತಂದು ಕ್ರಮವಾಗಿ ಸೇರಿಸಿದಳು. ಕಂಸನೇ ಪೂರ್ವಜನ್ಮದಲ್ಲಿ ಕಾಲನೇಮಿಯಾಗಿದ್ದನು. ಹಿರಣ್ಯಕಶಿಪುವಿನ ಶಾಪಬಲದಿಂದ ಕಂಸನು ಗರ್ಭಸ್ಥರಾದ ಆರು ಮಂದಿಯನ್ನೂ ಕೊಂದನು.

ಹರಿವಂಶದ ನೀಲಕಂಠೀಯ ವ್ಯಾಖ್ಯಾನದಲ್ಲಿ ಷಡ್ಗರ್ಭರ ಹೆಸರನ್ನು ಈ ರೀತಿ ಹೇಳಿದೆ—

**ಹಂಸಃ ಸುವಿಕ್ರಮಃ ಕ್ರಾಥೋ ದಮನೋ ರಿಪುಮರ್ದನಃ।**
**ಕ್ರೋಧಹಂತೇತಿ ವಿಖ್ಯಾತಾಃ ಷಡ್ಗರ್ಭಾ ನಾಮ ದಾನವಾಃ॥**

ಇವರು ಹಿರಣ್ಯಕಶಿಪುವಿನ ಮೊಮ್ಮಕ್ಕಳು. ‘ಹಿರಣ್ಯಕಶಿಪುವಿನ ಪುತ್ರರು’ ಎಂದು ವಿಷ್ಣುಪುರಾಣದಲ್ಲಿ ಹೇಳಿದ್ದು ಔಪಚಾರಿಕವಾಗಿ. ಕಾಲನೇಮಿಯು ಹಿರಣ್ಯಕಶಿಪುವಿನ ಪುತ್ರನೆಂದು—

**ತೇ ತಾತತಾತಂ ಸಂತ್ಯಜ್ಯ ಹಿರಣ್ಯಕಶಿಪುಂ ಪುರಾ।**

ಎಂಬ ಹರಿವಂಶ ವಾಕ್ಯದಿಂದ ಸಿದ್ಧವಾಗುತ್ತದೆ. ತಾತತಾತನೆಂದರೆ ಪಿತಾಮಹ. ಷಡ್ಗರ್ಭರಿಗೆ ಹಿರಣ್ಯಕಶಿಪು ಪಿತಾಮಹ. ವಿಷ್ಣುಚಿತ್ತೀಯ ವ್ಯಾಖ್ಯಾನದಲ್ಲಿ ಕಾಲನೇಮಿಯು ಹಿರಣ್ಯಕಶಿಪುವಿನ ಸೋದರನೆಂದು ಬರೆದಿದೆ. ಕೀರ್ತಿವಂತ, ಸುಷೇಣ—ಮೊದಲಾದವರು ಷಡ್ಗರ್ಭರೆಂದು ಹೇಳಿದೆ.

## ಅನುಬಂಧ - 4

**ಕ್ಲೇಶೈಃ ಕುಯೋಗಿನೋಽಶೇಷೈರಂತರಾಯಹತಾ ಇವ॥**

—ಪುಟ 281

1) ಯೋಗಶಾಸ್ತ್ರೋಕ್ತವಾದ ಕ್ಲೇಶಗಳು ಐದು—

**ಅವಿದ್ಯಾಽಸ್ಮಿತಾರಾಗದ್ವೇಷಾಭಿನಿವೇಶಾಃ ಕ್ಲೇಶಾಃ।**

—ಯೋಗಸೂತ್ರ 2.3

ಅಸ್ಮಿತಾ = ಅಹಂಕಾರ, ಅಭಿನಿವೇಶ = ಮರಣಭಯ.

2) ಅಂತರಾಯಗಳು ಒಂಬತ್ತು—

**ವ್ಯಾಧಿಸ್ತ್ಯಾನಸಂಶಯಪ್ರಮಾದಾಲಸ್ಯಾವಿರತಿಭ್ರಾಂತಿದರ್ಶನಾಲಬ್ಧ-ಭೂಮಿಕತ್ವಾನವಸ್ಥಿತತ್ವಾನಿ ಚಿತ್ತವಿಕ್ಷೇಪಾಸ್ತೇಽಂತರಾಯಾಃ।**

—ಯೋಗಸೂತ್ರ 1.30

ಸ್ತ್ಯಾನ = ಸಾಧನದಲ್ಲಿ ಅಪ್ರವೃತ್ತಿ , ಅವಿರತಿ = ವೈರಾಗ್ಯಾಭಾವ, ಅಲಬ್ಧಭೂಮಿಕತ್ವ = ಧ್ಯೇಯವಸ್ತುವಿನ ಅನುಪಲಬ್ಧಿ. ಅನವಸ್ಥಿತತ್ತ್ವ = ಧ್ಯೇಯದಲ್ಲಿ ಚಿತ್ತವನ್ನು ಸ್ಥಿರಗೊಳಿಸಲು ಅಶಕ್ತಿ.

## ಅನುಬಂಧ - 5

**ಉಪೇಂದ್ರತ್ವೇ ಗವಾಮಿಂದ್ರೋ ಗೋವಿಂದಸ್ತ್ವಂ ಭವಿಷ್ಯಸಿ।**

—ಪುಟ 296

ಉಪೇಂದ್ರ, ಗೋವಿಂದ—ಎಂಬೆರಡು ಶಬ್ದಗಳ ವ್ಯುತ್ಪತ್ತಿಯನ್ನು ಇಲ್ಲಿ ಗಮನಿಸಬೇಕು. ಉಪರಿ ಇಂದ್ರಃ =ಉಪೇಂದ್ರಃ ಎಂದು ಇಲ್ಲಿ ವ್ಯುತ್ಪತ್ತಿಯನ್ನಿಟ್ಟು ಕೊಳ್ಳಲಾಗಿದೆ. ದೇವೇಂದ್ರನಿಗಿಂತಲೂ ಮೇಲೆ (ಉಪರಿ) ಇರುವ ಇಂದ್ರ ಉಪೇಂದ್ರ. ಗೋಲೋಕವು ಸತ್ಯಲೋಕಕ್ಕಿಂತ ಮೇಲೆ ಇದೆಯೆಂದು ಕೆಲವು ವೈಷ್ಣವಪಂಥದವರ ಅಭಿಪ್ರಾಯವಿದೆ. ಗೋಲೋಕದ ಒಡೆತನ ಲಭಿಸಿದ್ದರಿಂದ ಶ್ರೀಕೃಷ್ಣನು ಉಪೇಂದ್ರನೆನ್ನಿಸಿದನೆಂದು ತಾತ್ಪರ್ಯ. ಈ ಮಾತು ಹರಿವಂಶ ದಲ್ಲಿಯೂ ಬಂದಿದೆ—

**ಮಮೋಪರಿ ಯಥೇಂದ್ರಸ್ತ್ವಂ ಸ್ಥಾಪಿತೋ ಗೋಭಿರೀಶ್ವರಃ।**
**ಉಪೇಂದ್ರ ಇತಿ ಲೋಕೇ ತ್ವಾಂ ಗಾಸ್ಯಂತಿ ದಿವಿ ದೇವತಾಃ॥**
—ಹರಿವಂಶ, 2.19.46

ಇನ್ನು ಗೋವಿಂದ ಶಬ್ದದ ವ್ಯುತ್ಪತ್ತಿ ಹೇಗೆ? ಗೋ +ಇಂದ್ರ =ಗೋವಿಂದ ಎಂಬ ಅಭಿಪ್ರಾಯ ಮೇಲ್ಕಂಡ ವಿಷ್ಣುಪುರಾಣದ ಮಾತಿನಿಂದ ಸ್ವರಸವಾಗಿ ಹೊರಡುತ್ತದೆ. ಈ ಪಕ್ಷದಲ್ಲಿ ಗೋವಿಂದ ಶಬ್ದಕ್ಕೆ ವ್ಯಾಕರಣ ಶುದ್ಧಿಯನ್ನು ಹೇಳುವುದು ಕಷ್ಟ. "ಗಾಂ ವಿಂದತೀತಿ ಗೋವಿಂದಃ, ವಿದ್‍ಲೃ ಲಾಭೇ, 'ಗವಾದಿಷು ವಿಂದೇಃ ಸಂಜ್ಞಾಯಾಂ' ಎಂಬ ವಾರ್ತಿಕದಿಂದ 'ಶ' ಪ್ರತ್ಯಯ"— ಎಂದು ವ್ಯುತ್ಪತ್ತಿಯನ್ನು ಹೇಳುವುದು ಸರಿಯಾದ ಮಾರ್ಗ. ವಿಷ್ಣುಪುರಾಣದಲ್ಲಿ 'ಗವಾಮಿಂದ್ರೋ ಗೋವಿಂದಃ' ಎಂದು ಹೇಳಿರುವುದು ಗೋವಿಂದ ಶಬ್ದದ ಅರ್ಥವಿವರಣೆಯೆಂದು ತಿಳಿಯಬೇಕು.

ವಾಸ್ತವವಾಗಿ ಉಪೇಂದ್ರ ಎಂದರೆ ವಾಮನ. ದೇವೇಂದ್ರನು ಅದಿತಿಯ ಮಗ. ವಾಮನಾವತಾರದಲ್ಲಿ ವಿಷ್ಣು ಅದಿತಿಯ ಗರ್ಭದಲ್ಲಿ ಜನಿಸಿ ದೇವೇಂದ್ರನಿಗೆ ತಮ್ಮನಾದನು. 'ಉಪಗತಃ ಇಂದ್ರಂ ಉಪೇಂದ್ರಃ' ಎಂದು ವ್ಯುತ್ಪತ್ತಿ. 'ಉಪೇಂದ್ರ ಇಂದ್ರ ವರಜಃ' ಎಂದು ಅಮರಕೋಶದಲ್ಲಿದೆ. ಆದ್ದರಿಂದ ವಿಷ್ಣು ಉಪೇಂದ್ರನೆನ್ನಿಸಿದನು. ಈ ಅಭಿಪ್ರಾಯ ಹರಿವಂಶದಲ್ಲಿಯೂ ಸೂಚಿತವಾಗಿದೆ. ಇಂದ್ರನು ಶ್ರೀಕೃಷ್ಣನಿಗೆ ಹೇಳುತ್ತಾನೆ—

**ಅದಿತೇರ್ಗರ್ಭಪರ್ಯಾಯೇ ಪೂರ್ವಜಸ್ತೇ ಪುರಾಕೃತಃ।**
—ಹರಿ, 2.19.37

ವಿಷ್ಣುಪರ್ಯಾಯದ ಶಬ್ದಗಳೆಲ್ಲವೂ ಶ್ರೀಕೃಷ್ಣನಿಗೆ ಅನ್ವಿತವಾಗುತ್ತವೆ.

ಗೋವಿಂದ–ಎಂಬಲ್ಲಿ ಗೋ ಶಬ್ದಕ್ಕೆ ಗೋವು, ಭೂಮಿ, ಸ್ವರ್ಗ, ವೇದ– ಎಂದು ನಾನಾರ್ಥಗಳನ್ನೂ ಇಟ್ಟುಕೊಳ್ಳಲು ಶಕ್ಯವಿದೆ. ಈ ಬಗೆಯ ರೂಢ ಶಬ್ದಗಳ ವ್ಯುತ್ಪತ್ತಿಯಲ್ಲಿ ಮತಭೇದವಿರುವುದು ಸ್ವಾಭಾವಿಕ.

## ಅನುಬಂಧ - 6

**ಪುರಪ್ರವೇಶೇ ಪ್ರಮಥೈರ್ಯುದ್ಧಮಾಸೀನ್ಮಹಾತ್ಮನಃ।**

—ಪುಟ 455

ಬಾಣಾಸುರನು ಬಲಿಚಕ್ರವರ್ತಿಯ ಮಗ. ಇವನು ಶಿವನನ್ನು ಕುರಿತು ತಪಸ್ಸುಮಾಡಿ ತನ್ನನ್ನು ಸ್ಕಂದನಂತೆ ಪಾರ್ವತೀಪುತ್ರನೆಂದು ಭಾವಿಸಿ ಪಾಲಿಸ ಬೇಕೆಂದು ವರವನ್ನು ಪಡೆದಿದ್ದನು. ಅದರ ಪ್ರಕಾರ ಶಿವನು ಪ್ರಮಥ ಗಣಗಳೊಡನೆ ಬಾಣಾಸುರನ ರಕ್ಷಣೆಗಾಗಿ ಅವನ ರಾಜಧಾನಿಯಾದ ಶೋಣಿತಪುರದಲ್ಲಿ ನೆಲೆಸಿದ್ದನು (ನೋಡಿ: ಹರಿವಂಶ, 2.116).

ಇಲ್ಲಿ ಮಾಹೇಶ್ವರಜ್ವರವು ಯುದ್ಧಮಾಡಿತೆಂದು ಹೇಳಿದೆ. ವ್ಯಾಖ್ಯಾನ ಗಳಲ್ಲಿ ಇದಕ್ಕೆ ವಿವರಣೆಯನ್ನು ಕೊಟ್ಟಿಲ್ಲ. ಜ್ವರವೆಂದರೆ ಜ್ವರಾಭಿಮಾನಿದೇವತೆ ಯೆಂಬ ಅಭಿಪ್ರಾಯವಿರಬಹುದು. ಈ ಜ್ವರಕ್ಕೆ ಮೂರು ಕಾಲುಗಳೆಂದೂ ಮೂರು ತಲೆಗಳೆಂದೂ ಇಲ್ಲಿ ವರ್ಣಿಸಲಾಗಿದೆ. ಬಾಲ್ಯ, ಯೌವನ, ಮುಪ್ಪು— ಈ ಮೂರು ಅವಸ್ಥೆಗಳಲ್ಲಿಯೂ ಜನರಿಗೆ ಜ್ವರವು ಬರುವುದರಿಂದ ಜ್ವರದ ಪಾದಗಳು ಮೂರು ಎಂದು ಹೇಳಿರಬಹುದು, ವಾತ, ಪಿತ್ತ , ಕಫ—ಎಂಬ ತ್ರಿದೋಷಗಳಿಂದ ಉಂಟಾಗುವ ಜ್ವರವಾದ್ದರಿಂದ ಇದರ ತಲೆಗಳು ಮೂರು— ಎಂದು ಅಭಿಪ್ರಾಯವಿರಬಹುದು. ಹೀಗೆಯೇ ವೈಷ್ಣವಜ್ವರ, ಉಷ್ಣಜ್ವರ, ಶೀತಜ್ವರ—ಎಂಬ ಎರಡು ಪ್ರಭೇದಗಳನ್ನು ಮಾಹೇಶ್ವರ, ವೈಷ್ಣವ—ಎಂದು ವಿಂಗಡಿಸಿಕೊಂಡಿದ್ದಾರೆಂದು ತೋರುತ್ತದೆ. ಶೀತಜ್ವರವೇ ವೈಷ್ಣವಜ್ವರವಾಗಿರ ಬಹುದು. ಇದು ಉಷ್ಣಜ್ವರಕ್ಕಿಂತ ಪ್ರಬಲವೆಂದು ವೈದ್ಯರು ಹೇಳುತ್ತಾರೆ.

ಹೆಚ್. ಹೆಚ್. ವಿಲ್ಸನ್ನರು ಯುದ್ಧಭೀಕರತೆಯ ಮೂರು ತೀವ್ರಾವಸ್ಥೆ ಗಳಿಗೆ ಜ್ವರದ ವರ್ಣನೆ ಸಂಕೇತವೆಂದೂ ಶೈವ-ವೈಷ್ಣವರ ಹೊಡೆದಾಟ ಇಲ್ಲಿ ಸೂಚಿತವಾಗಿದೆಯೆಂದೂ ಬರೆದಿದ್ದಾರೆ.

## ಅನುಬಂಧ – 7

**ಮೃಷ್ಟಾಮೃಷ್ಟಕಥಾ ಜಜ್ಞೇ ಸಂಘರ್ಷಕಲಹೌ ತತಃ।**

—ಪುಟ 494

ಯಾದವರ ಕಲಹಕ್ಕೆ ಮೃಷ್ಟಾಮೃಷ್ಟ ಕಥೆ ನಿಮಿತ್ತವೆಂದು ಇಲ್ಲಿ ಹೇಳಿದೆ. ಮದ್ಯಪಾನಮದವು ನಿಮಿತ್ತವೆಂದು ಭಾಗವತದಲ್ಲಿದೆ. ಮಹಾಭಾರತದಲ್ಲಿ ಇನ್ನೂ ಹೆಚ್ಚಿನ ವಿವರಣೆಯುಂಟು. ಸೌಪ್ತಿಕಪರ್ವದಲ್ಲಿ ಅಶ್ವತ್ಥಾಮನು ನಡೆಸಿದ ಘೋರಕೃತ್ಯಕ್ಕೆ ನೆರವಾದನೆಂದು ಕೃತವರ್ಮನನ್ನು ಸಾತ್ಯಕಿ ಹಂಗಿಸುತ್ತಾನೆ. ಸ್ಯಮಂತಕಮಣಿಯ ಪ್ರಸಂಗದಲ್ಲಿ ಸತ್ರಾಜಿತನ ಹತ್ಯೆಯ ಸಂಚಿನಲ್ಲಿ ಆತನು ಭಾಗಿಯಾಗಿದ್ದನೆಂದೂ ಸಾತ್ಯಕಿ ಹೇಳುತ್ತಾನೆ. ಇದು ಅವರ ಸಂಘರ್ಷಕ್ಕೆ ನಿಮಿತ್ತವಾಗುತ್ತದೆ.

## ಅನುಬಂಧ – 8

**ಸಮ್ಮಾನಯನ್ ದ್ವಿಜವಚೋ ದುರ್ವಾಸಾ ಯದುವಾಚ ಹ।**

—ಪುಟ 499

ಈ ವೃತ್ತಾಂತವು ಮಹಾಭಾರತದಲ್ಲಿ ಬಂದಿದೆ. ಶ್ರೀಕೃಷ್ಣನ ತಾಳ್ಮೆಯನ್ನು ಪರೀಕ್ಷಿಸುವುದಕ್ಕಾಗಿ ದುರ್ವಾಸರು ಬರುತ್ತಾರೆ. ಪಾಯಸವನ್ನು ಕುಡಿದು ಅವಶಿಷ್ಟವನ್ನು 'ಮೈಗೆಲ್ಲ ಬಳಿದುಕೊ' ಎಂದು ಶ್ರೀಕೃಷ್ಣನಿಗೆ ಕೊಡುತ್ತಾರೆ. ಆತನು ತನ್ನ ದೇಹಕ್ಕೆಲ್ಲ ಅದನ್ನು ಬಳಿದುಕೊಳ್ಳುತ್ತಾನೆ. ತನ್ನ ಪಾದತಳಕ್ಕೆ ಹಚ್ಚಿ ಕೊಳ್ಳುವುದಿಲ್ಲ. ಋಷಿಗಳು ಕೊಟ್ಟ ಪವಿತ್ರ ವಸ್ತುವನ್ನು ಪಾದಕ್ಕೆ ಹಚ್ಚಬಾರದೆಂದು ಆತನ ಭಾವನೆ ಇದ್ದೀತು. ತಾಳ್ಮೆಯ ಪರೀಕ್ಷೆ ಪೂರ್ತಿಯಾದ ಮೇಲೆ ದೂರ್ವಾಸರು ಸಂತುಷ್ಟರಾಗಿ "ಪುತ್ರಕ, ಪಾಯಸವನ್ನು ದೇಹಕ್ಕೆ ಬಳಿದು ಕೊಂಡದ್ದರಿಂದ ಈ ಅಂಗಗಳಲ್ಲಿ ನಿನಗೆ ಮೃತ್ಯುಭಯವಿರುವುದಿಲ್ಲ. ಆದರೆ ಪಾದಕ್ಕೆ ಪಾಯಸವನ್ನೇಕೆ ಹಚ್ಚಿಕೊಳ್ಳಲಿಲ್ಲ? ಇದು ನನಗೆ ಪ್ರಿಯವಾಗಲಿಲ್ಲ" ಎಂದು ನುಡಿಯುತ್ತಾರೆ—

**ನ ತು ಪಾದತಲೇ ಲಿಪ್ತೇ ಕಸ್ಮಾತ್ ತೇ ಪುತ್ರಕಾದ್ಯ ವೈ।**
**ನೈತನ್ಮೇ ಪ್ರಿಯಮಿತ್ಯೇವಂ ಸ ಮಾಂ ಪ್ರೀತೋಽಬ್ರವೀತ್ತದಾ॥**

—ಅನು 159-44

ಇದರಿಂದ ಶ್ರೀಕೃಷ್ಣನಿಗೆ ಪಾದತಳದಲ್ಲಿ ಮೃತ್ಯುಭಯವುಂಟೆಂದು ಸೂಚಿತವಾಗುತ್ತದೆ.

## ಅನುಬಂಧ - 9

**ತತೋಽಷ್ಟಾದಶಮೇ ಭಾಗೇ ಪರಾರ್ಧಮಭಿಧೀಯತೇ।**

—ಪುಟ 541

ಪರಾರ್ಧ ಸಂಖ್ಯೆಯ ಪ್ರಮಾಣವು ಹಿಂದೆ ಪ್ರಥಮಾಂಶದ ಮೂರನೆಯ ಅಧ್ಯಾಯದಲ್ಲಿ ಬಂದಿದೆ. ಮೈತ್ರೇಯನು ವಿಸ್ಮೃತಿಯಿಂದ ಮತ್ತೆ ಕೇಳಿರಬಹುದು. ಪರಾಶರರು ಈಗ ಬೇರೊಂದು ಗಣಿತವಿಧಾನದಿಂದ ಪರಾರ್ಧವನ್ನು ತಿಳಿಸಿದ್ದಾರೆ. ಈಗ ತಿಳಿಸಿರುವ ಪ್ರಕಾರ ಒಂದರ ಮುಂದೆ ಹದಿನೇಳು ಸೊನ್ನೆಗಳನ್ನಿಟ್ಟರೆ ಪರಾರ್ಧವಾಗುತ್ತದೆ (1000,000,000,000,000,00). ಮನುಷ್ಯಮಾನದಿಂದ ಇಷ್ಟು ವರ್ಷಗಳಿಗೆ ಬ್ರಹ್ಮನ ಅರ್ಧ ಆಯಸ್ಸು ಮುಗಿಯುತ್ತದೆ. ಎರಡು ಪರಾರ್ಧಗಳಿಗೆ ಒಂದು ಪರ. ಇದು ಬ್ರಹ್ಮನ ಪೂರ್ಣ ಆಯುಸ್ಸು.

ಪ್ರಥಮಾಂಶದಲ್ಲಿ ಹೇಳಿದ ಗಣನೆಯಂತೆ 864 ಕೋಟಿ ವರ್ಷ x 360 ಬ್ರಹ್ಮನ ಆಯುಃ ಪ್ರಮಾಣವಾಗುತ್ತದೆ. ಅದೇ ಪರ. ಈ ಎರಡು ಗಣನೆಗಳು ಪರಸ್ಪರ ತಾಳೆಯಾಗದೆ ವಿರೋಧ ಕಂಡುಬರುತ್ತದೆ.

ಮನುಷ್ಯಮಾನದಂತೆ ವರ್ಷವೆಂದರೆ ಎಷ್ಟು ದಿನಗಳು? ವರ್ಷವು ಸೌರ, ಚಾಂದ್ರ, ಸಾವನ, ನಾಕ್ಷತ್ರ, ಬಾರ್ಹಸ್ಪತ್ಯ—ಎಂದು ಐದು ವಿಧ. ಈ ಗಣನೆಯಲ್ಲಿ ವರ್ಷದ ದಿನಸಂಖ್ಯೆ ಭಿನ್ನವಾಗುತ್ತದೆ.

ಸೌರ = 366 ದಿನ, ಚಾಂದ್ರ = 350 ದಿನ, ಸಾವನ = 360 ದಿನ, ನಾಕ್ಷತ್ರ = 324 ದಿನ, ಬಾರ್ಹಸ್ಪತ್ಯ = 360 ದಿನ. ಮಾನುಷವರ್ಷದ ದಿನ ಸಂಖ್ಯೆಗೆ ಬೇರೆ ಬೇರೆ ವಿಧವನ್ನು ಅನುಸರಿಸಿದಾಗ ವಿರೋಧ ಕಂಡುಬರುತ್ತದೆ ಯೆಂದೂ ವಾಸ್ತವದಲ್ಲಿ ವಿರೋಧವಿಲ್ಲವೆಂದೂ ತೋರುತ್ತದೆ. ಗಣಿತದಲ್ಲಿ ಮೂಲಘಟಕ ಮನುಷ್ಯಮಾನವೆ, ದೇವಮಾನವೆ? ಎಂಬ ಜಿಜ್ಞಾಸೆಗೂ ಅವಕಾಶವಿದೆ.

## ಅನುಬಂಧ-10

**ಮಾಗಧೇನ ತು ಮಾನೇನ ಜಲಪ್ರಸ್ಥಸ್ತು ಸ ಸ್ಮೃತಃ।**

—ಪುಟ 542

ಅಳತೆ ತೂಕಗಳ ಪ್ರಮಾಣ ಒಂದೊಂದು ದೇಶದಲ್ಲಿಯೂ ಭಿನ್ನ ವಾಗಿದ್ದುದರಿಂದ ಅದರ ನಿಶ್ಚಯಕ್ಕಾಗಿ ಮಗಧ ದೇಶದ ಅಳತೆಯನ್ನು ಇಲ್ಲಿ ಹೇಳಲಾಗಿದೆ. ಮಗಧ ದೇಶದ ಅಳತೆಯ ಪ್ರಕಾರ ಹನ್ನೆರಡೂವರೆ ಪಲಗಳಿಗೆ ಒಂದು ಪ್ರಸ್ಥವಾಗುತ್ತದೆ. ಒಂದು ಪ್ರಸ್ಥ ನೀರು ಹಿಡಿಯುವ ತಾಮ್ರದ ಪಾತ್ರೆಯನ್ನು ಮಾಡಿಕೊಳ್ಳಬೇಕು. ನಾಲ್ಕು ಮಾಷಗಳ ತೂಕದ ಚಿನ್ನದಿಂದ ನಾಲ್ಕು ಅಂಗುಲ ಉದ್ದದ ಕೊಳವೆಯನ್ನು ಮಾಡಿಸಿ ತಾಮ್ರದ ಪಾತ್ರೆಗೆ ಮೇಲ್ಗಡೆ ತೂತುಮಾಡಿ ಅದಕ್ಕೆ ಕೊಳವೆಯನ್ನು ಬೆಸೆಯಬೇಕು. ಒಂದು ಮಾಷಕ್ಕೆ ಐದು ಗುಂಜಿ. ಇಷ್ಟುತೂಕದ ಚಿನ್ನ, ಇಷ್ಟು ಉದ್ದದ ಕೊಳವೆ ಎಂದು ಹೇಳಿದ್ದು ರಂಧ್ರಪ್ರಮಾಣದ ನಿಷ್ಕರ್ಷೆಗಾಗಿ. ಅನಂತರ ಈ ಪಾತ್ರೆಯನ್ನು ನೀರಲ್ಲಿ ಮುಳುಗಿಸಿಟ್ಟರೆ, ಎಷ್ಟುಹೊತ್ತಿಗೆ ಪಾತ್ರೆ ತುಂಬುವುದೋ ಆ ಹೊತ್ತಿಗೆ ನಾಡಿಕೆಯೆಂದು ಹೆಸರು. ಅಥವಾ ಪಾತ್ರೆಯ ಕೆಳಗೆ ಕೊಳವೆ ಜೋಡಿಸಿ ಪಾತ್ರೆಯಲ್ಲಿ ನೀರನ್ನು ತುಂಬಿಡಬಹುದು. ಎಷ್ಟುಹೊತ್ತಿಗೆ ನೀರು ಸುರಿದು ಪಾತ್ರೆ ಬರಿದಾಗುವುದೋ ಅದು ನಾಡಿಕೆ. ಅರವತ್ತು ನಾಡಿಕೆಗಳಿಗೆ ಒಂದು ದಿನ. ನಾಡಿಕೆಯೆಂದರೆ ಈ ಕಾಲದ 24 ನಿಮಿಷಗಳು.

## ಅನುಬಂಧ - 11

### ಪುಲಸ್ತ್ಯವರದಾನೇನ ಮಮಾಪ್ಯೇತತ್ ಸ್ಮೃತಿಂ ಗತಮ್॥

—ಪುಟ 621-622

ವಿಷ್ಣುಪುರಾಣವು ಈ ಪ್ರಕಾರ ತಮ್ಮ ಸ್ಮರಣೆಗೆ ಬಂದಿತೆಂದು ಪರಾಶರರು ಹಿಂದೆಯೂ ಗ್ರಂಥಾರಂಭದಲ್ಲಿ ಹೇಳಿದ್ದಾರೆ (1-1-29). ಪರಾಶರರು ವಿಷ್ಣುಪುರಾಣದ ಕರ್ತೃಗಳೆಂದೂ ಅಲ್ಲಿಯೇ ತಿಳಿಸಲಾಗಿದೆ (1-1-26). ವಿಷ್ಣುಚಿತ್ತೀಯ ವ್ಯಾಖ್ಯಾನದಲ್ಲಿ ಹೇಳಿರುವ ವಿಶೇಷಾಂಶವು ಇಲ್ಲಿ ಉಲ್ಲೇಖನೀಯವಾದದ್ದು—

ಮೊದಲನೆಯ ಕೃತಯುಗದಲ್ಲಿ ಸರ್ವಪುರಾಣಗಳ ಸಂಗ್ರಹರೂಪವಾದ ಬ್ರಹ್ಮಪುರಾಣವೆಂಬ ಗ್ರಂಥವನ್ನು ಬ್ರಹ್ಮನು ರಚಿಸಿದ್ದನು. ಆ ಸಂಪ್ರದಾಯವು ದಕ್ಷನಿಂದ ಪುರುಕುತ್ಸನವರೆಗೆ ನಡೆದುಕೊಂಡು ಬಂದಿತು. ತ್ರೇತಾಯುಗದಲ್ಲಿ ಪರಾಶರಮುನಿಗಳು ಮಹಾವಿಷ್ಣುಪುರಾಣವೆಂಬ ಗ್ರಂಥವನ್ನು ತಪೋಬಲದಿಂದ ದರ್ಶಿಸಿ ರಚಿಸಿದರು. ಬಹುಕಾಲದ ಮೇಲೆ ಅದೂ ನಷ್ಟವಾಗಲು, ಬ್ರಹ್ಮನು ಪರಾಶರದೃಷ್ಟವಾದ ಪುರಾಣವನ್ನೇ ಋಭುವಿಗೆ ಉಪದೇಶಿಸಲಾಗಿ ಆ ಸಂಪ್ರದಾಯವು ಜತುಕರ್ಣನವರೆಗೆ ನಡೆದುಕೊಂಡು ಬಂದಿತು. ಇಪ್ಪತ್ತೆಂಟನೆಯ ಯುಗಪರ್ಯಾಯದಲ್ಲಿ ಮೈತ್ರೇಯರು ಪ್ರಶ್ನೆ ಮಾಡಿದಾಗ ಈ ವಿಷ್ಣುಪುರಾಣವು ಪರಾಶರರಿಗೆ ವಸಿಷ್ಠರ ಮತ್ತು ಪುಲಸ್ತ್ಯರ ವರದಾನದಿಂದ ಸ್ಮರಣೆಗೆ ಬಂದಿತು. ಹಿಂದಿನ ಜನ್ಮದಲ್ಲಿ ಸಾರಸ್ವತನು ಪರಾಶರರಿಗೆ ಈ ಪುರಾಣವನ್ನು ಉಪದೇಶಮಾಡಿದ್ದನು. ಆದ್ದರಿಂದ ಸಂಪ್ರದಾಯ ವಿಚ್ಛೇದವಿಲ್ಲ. ಇಪ್ಪತ್ತಾರನೆಯ ಯುಗಪರ್ಯಾಯದಲ್ಲಿ ಈ ಪರಾಶರರೇ ವ್ಯಾಸರಾಗಿದ್ದುದರಿಂದ ಪರಾಶರರು ವಿಷ್ಣುಪುರಾಣದ ಕರ್ತೃಗಳೆನ್ನುವುದೂ ಸರಿ, ಅವರೇ ಹಿಂದೆ ವ್ಯಾಸರಾದ್ದರಿಂದ ಇದು ವ್ಯಾಸಕರ್ತೃಕವೆನ್ನುವುದೂ ಸರಿ.

ಆದ್ಯ ಬ್ರಹ್ಮಪುರಾಣವು ಎಲ್ಲ ಪುರಾಣಗಳಿಗೂ ಆಕರ. ಈ ವಿಷ್ಣುಪುರಾಣಕ್ಕೂ ಮೊದಲು ಮಹಾವಿಷ್ಣುಪುರಾಣವೆಂಬ ಇನ್ನೊಂದು ಬೃಹದ್ ಗ್ರಂಥವಿತ್ತು—ಎಂಬುದು ವ್ಯಾಖ್ಯಾನಕಾರರ ಮಾತುಗಳಿಂದ ತಿಳಿದುಬರುತ್ತದೆ.

* * *

ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ
ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಂಗಮ್ ।
ಲಕ್ಷ್ಮೀಕಾಂತಂ ಕಮಲನಯನಂ ಯೋಗಿಭಿರ್ಧ್ಯಾನಗಮ್ಯಂ
ವಂದೇ ವಿಷ್ಣುಂ ಭವಭಯಹರಂ ಸರ್ವಲೋಕೈಕನಾಥಮ್ ॥

* * *

ಮೇಘಶ್ಯಾಮಂ ಪೀತಕೌಶೇಯವಾಸಂ
ಶ್ರೀವತ್ಸಾಂಕಂ ಕೌಸ್ತುಭೋದ್ಭಾಸಿತಾಂಗಮ್ ।
ಪುಣ್ಯೋಪೇತಂ ಪುಂಡರೀಕಾಯತಾಕ್ಷಂ
ವಿಷ್ಣುಂ ವಂದೇ ಸರ್ವಲೋಕೈಕನಾಥಮ್ ॥

* * *

ಸಶಂಖಚಕ್ರಂ ಸಕಿರೀಟಕುಂಡಲಂ
ಸಪೀತವಸ್ತ್ರಂ ಸರಸೀರುಹೇಕ್ಷಣಮ್ ।
ಸಹಾರವಕ್ಷಃಸ್ಥಲಶೋಭಿಕೌಸ್ತುಭಂ
ನಮಾಮಿ ವಿಷ್ಣುಂ ಶಿರಸಾ ಚತುರ್ಭುಜಮ್ ॥



## ನಮ್ಮ ಕೆಲವು ಪ್ರಕಟಣೆಗಳು

- ವಿಷ್ಣುಪುರಾಣಮ್ (ಸಂಪುಟ ೧)
- ಸಸ್ವರ ಕೃಷ್ಣಯಜುರ್ವೇದೀಯ ತೈತ್ತಿರೀಯಬ್ರಾಹ್ಮಣಮ್ (ಭಾಗ ೧) (ಅಷ್ಟಕ ೧ ಮತ್ತು ೨)
- ಸಸ್ವರ ಕೃಷ್ಣಯಜುರ್ವೇದೀಯ ತೈತ್ತಿರೀಯಬ್ರಾಹ್ಮಣಮ್ (ಭಾಗ ೨) (ಅಷ್ಟಕ ೩ ಮತ್ತು ಕಾಠಕ)
- ಸಸ್ವರ ಋಗ್ವೇದ ಸಂಹಿತಾ (ಸಂಪುಟ ೧, ಮಂಡಲ ೧)
- ಸಸ್ವರ ಋಗ್ವೇದ ಸಂಹಿತಾ (ಸಂಪುಟ ೨) * (ಮಂಡಲ ೨-೩-೪ ಮತ್ತು ೫)
- ಸಸ್ವರ ಋಗ್ವೇದ ಸಂಹಿತಾ (ಸಂಪುಟ ೩) * (ಮಂಡಲ ೬-೭ ಮತ್ತು ೮)
- ಸಸ್ವರ ಋಗ್ವೇದ ಸಂಹಿತಾ (ಸಂಪುಟ ೪) * ಮಂಡಲ ೯ ಮತ್ತು ೧೦)
- ಸಸ್ವರ ಕೃಷ್ಣಯಜುರ್ವೇದೀಯ ತೈತ್ತಿರೀಯಸಂಹಿತಾ (ಸಂಪುಟ ೧) (ಪ್ರಥಮಂ, ದ್ವಿತೀಯಂ, ತೃತೀಯಂ ಕಾಂಡಮ್)
- ಸಸ್ವರ ಕೃಷ್ಣಯಜುರ್ವೇದೀಯ ತೈತ್ತಿರೀಯಸಂಹಿತಾ (ಸಂಪುಟ ೨) * (ಚತುರ್ಥಂ, ಪಂಚಮಂ ಕಾಂಡಮ್)
- ಸಸ್ವರ ಕೃಷ್ಣಯಜುರ್ವೇದೀಯ ತೈತ್ತಿರೀಯಸಂಹಿತಾ (ಸಂಪುಟ ೩) (ಷಷ್ಠ, ಸಪ್ತಮ ಕಾಂಡಮ್)
- ದೇವರ್ಷಿನಾರದರ ಭಕ್ತಿಸೂತ್ರಗಳು
- ಮಹರ್ಷಿ ಪತಂಜಲಿಯ ಯೋಗಸೂತ್ರಗಳು

---

* ಅಚ್ಚಿನಲ್ಲಿ.




## ರಾಮಕೃಷ್ಣ ಮಠ ಮತ್ತು ಮಿಷನ್ನಿನ ಲಾಂಛನ

ಈ ಚಿತ್ರದಲ್ಲಿ ಕಾಣುವ ಸರೋವರದ ಅಲೆಗಳು ಕರ್ಮವನ್ನೂ, ಕಮಲವು ಭಕ್ತಿಯನ್ನೂ, ಉದಯಿಸುತ್ತಿರುವ ಸೂರ್ಯನು ಜ್ಞಾನವನ್ನೂ, ಸುತ್ತಿಕೊಂಡಿರುವ ಸರ್ಪವು ಯೋಗ ಹಾಗೂ ಜಾಗೃತ-ಕುಂಡಲಿನೀ ಶಕ್ತಿಯನ್ನೂ ಪ್ರತಿನಿಧಿಸುತ್ತವೆ. ಹಂಸವು ಪರಮಾತ್ಮನ ಪ್ರತೀಕವಾಗಿರುತ್ತದೆ. ಕರ್ಮ, ಭಕ್ತಿ, ಜ್ಞಾನ ಮತ್ತು ಯೋಗ—ಇವುಗಳ ಸಮನ್ವಯದ ಮೂಲಕ ಪರಮಾತ್ಮನ ದರ್ಶನ ಲಾಭವಾಗುತ್ತದೆ ಎಂಬುದು ಈ ಚಿತ್ರದ ಭಾವಾರ್ಥ.

—ಸ್ವಾಮಿ ವಿವೇಕಾನಂದ

6030

ಬೆಲೆ: ರೂ. 120/-